## ಸಟೀಕಾ

# ಶಾರ್ಙ್ಗಧರಸಂಹಿತಾ

(ಮೂಲ ಸಹಿತ ಕನ್ನಡ ಭಾಷಾಂತರ)




ಸಾಹಿತ್ಯವಿದ್ವಾನ್, ಕಾವ್ಯತೀರ್ಥ, ಆಯುರ್ವೇದಭೂಷಣ

ಇತ್ಯಾದಿ ಬಿರುದಾಂಕಿತ

**ಪಟ್ಟಗೆರೆ. ಸೂರ್ಯನಾರಾಯಣ ಶಾಸ್ತ್ರಿ**

ಇವರಿಂದ ಭಾಷಾಂತರಿಸಲ್ಪಟ್ಟು



ತೀರ್ಥಹಳ್ಳಿ

ಶ್ರೀ ಭುವನೇಂದ್ರ ಆಯುರ್ವೇದ ವೈದ್ಯಶಾಲಾ ಮಾಲೀಕರು

**ಜವಳಿ. ರಘುಪತಿರಾವ್ ಬ್ರದರ್ಸ್**

ಇವರಿಂದ ಪ್ರಕಾಶಿಸಲ್ಪಟ್ಟಿದೆ







೧೯೩೦

ಬೆಲೆ: ೪—೧೨

# ಪ್ರಸ್ತಾವನೆ.

ಶ್ರೀ ಧನ್ವಂತರಿಪರಮಾತ್ಮನ ಪರಮಾನುಗ್ರಹದಿಂದಲೂ ನಮಗೆ ಗ್ರಂಥ ರಚನೋದ್ಯೋಗದಲ್ಲಿ ನಾನಾ ಮುಖವಾಗಿ ಸಹಾಯಕರಾದ ಸಹೋದ್ಯೋಗಿಗಳ ಕೃಪೆಯಿಂದಲೂ ಶಾರ್ಙ್ಗಧರಸಂಹಿತೆಯ ಕನ್ನಡ ವ್ಯಾಖ್ಯಾನವನ್ನು ಸಂಪೂರ್ಣಗೊಳಿಸಿ ಇವತ್ತು ಅದಕ್ಕೊಂದು ಪ್ರಸ್ತಾವನೆಯನ್ನು ಬರೆಯಲು ಪ್ರಾರಂಭಿಸಿದೆವು.

ಮೊಗಲ ಸಾಮ್ರಾಜ್ಯವು ಉನ್ನತ ಸ್ಥಿತಿಯಲ್ಲಿದ್ದಾಗ್ಯೆ ಶಾರ್ಙ್ಗಧರಾಚಾರ್ಯರು ಈ ಸಂಹಿತೆಯನ್ನು ರಚಿಸಿದರು. ಈ ಸಂಹಿತೆಯಲ್ಲಿ ಉಕ್ತಗಳಾದ ಔಷಧಯೋಗಗಳು ಬಹಳ ಮಟ್ಟಿಗೆ ಅನುಭವಸಿದ್ಧ ವೈದ್ಯಕ್ಕೆ ಸಂಬಧಿಸಿದವುಗಳಾದುದರಿಂದಲೂ, ಅತಿ ಸುಲಭವಾದವುಗಳಾದುದರಿಂದಲೂ, ಶೀಘ್ರ ಫಲಕಾರಿಗಳಾದುದರಿಂದಲೂ, ಈ ಶಾರ್ಙ್ಗಧರ ಸಂಹಿತೆಯು ಎಲ್ಲಾ ವೈದ್ಯಬಂಧುಗಳಿಗೂ ನಿತ್ಯೋಪಯೋಗಿಯಾದ ಹಸ್ತಪುಸ್ತಕವಾಗಿ ಪರಿಣಮಿಸಿದೆ. ಇದರಲ್ಲಿ ವೈದ್ಯಶಾಸ್ತ್ರಾಭ್ಯಾಸಿಗಳಿಗೆ ಉಪಯುಕ್ತಗಳಾದ ಸಮಸ್ತ ವಿಷಯಗಳೂ ಸಂಗೃಹೀತಗಳಾಗಿವೆ ಎಂದರೆ ಅದೇನೂ ಅತಿಶಯೋಕ್ತಿಯಾಗಲಾರದು. ಈ ಪುಸ್ತಕವೊಂದಿದ್ದರೆ ವೈದ್ಯರು ತಮ್ಮ ಕರ್ತವ್ಯವನ್ನು ನಿರಾಕ್ಷೇಪವಾಗಿ ಸಾಗಿಸಬಹುದು. ಇಂತಹ ಪುಸ್ತಕವು ಮಹಾರಾಷ್ಟ್ರ, ಬಂಗಾಳಿ, ಗುಜರಾತಿ, ಆಂಧ್ರ ಭಾಷೆಗಳಲ್ಲಿ ಪರಿವರ್ತಿತವಾಗಿದ್ದರೂ ಕನ್ನಡಭಾಷೆಯಲ್ಲಿ ಮಾತ್ರ ಈವರೆಗೂ ಪರಿವರ್ತಿತವಾಗಿರಲಿಲ್ಲ. ಈ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ನಿವಾರಣೆಮಾಡಿ ಈ ಮೂಲಕ ಕನ್ನಡ ವೈದ್ಯಬಂಧುಗಳ ಸೇವೆಯನ್ನು ಮಾಡಬೇಕೆಂಬ ಉದ್ದೇಶ್ಯದಿಂದ ಕನ್ನಡದಲ್ಲಿ ಪರಿವರ್ತಿಸಿರುತ್ತೇನೆ. ವೈದ್ಯಗ್ರಂಥಗಳನ್ನು ಭಾಷಾಂತರಿಸುವವರಿಗೆ ಉಪಯುಕ್ತವಾದ ಕನ್ನಡ ನಿಘಂಟಿನ ಅಭಾವ ವೈದ್ಯಕಪಾರಿಭಾಷಿಕ ಶಬ್ದಗಳಿಗೆ ಈವರೆಗೂ ಭಾಷೆಯಲ್ಲಿ ನಿಷ್ಕೃಷ್ಟವಾದ ಅರ್ಥವು ಗೊತ್ತಾಗದಿರುವುದು, ಈ ಕಾರಣಗಳಿಂದ ಭಾಷಾಂತರಿತ ಗ್ರಂಥಗಳಲ್ಲಿ ಅಲ್ಲಲ್ಲಿ ಪ್ರಮಾದಗಳು ಸಂಭವಿಸುವುದುಂಟು. ಅಂತಹ ಪ್ರಮಾದವು ಇದರಲ್ಲಿಯೂ ಸಂಭವಿಸಬಹುದು. ಗುಣಜ್ಞರಾದ ವೈದ್ಯಸೋದರರು ಅಂತಹ ನ್ಯೂನತೆಗಳು ತಮ್ಮ ದೃಷ್ಟಿಗೆ ಬಿದ್ದಲ್ಲಿ ದಯಮಾಡಿ ತಿಳಿಸಿದಲ್ಲಿ ಸರಿಪಡಿಸಿಕೊಳ್ಳು

ತ್ತೇನೆ. ಭಾಷಾಂತರಮಾಡಲು ಪ್ರಾರಂಭಿಸಿದಾಗಲೇ ಪ್ರತಿಪದಾರ್ಥ ತಾತ್ಪರ್ಯಗಳನ್ನು ಬರೆಯುವುದು ಉತ್ತಮವೆಂಬದಾಗಿ ಕೆಲವರಿಂದ ಸಲಹೆ ಬಂದಿತು. ಅಂತಹ ಭಾಷಾಂತರವು ಕೇವಲ ಸಾಹಿತ್ಯ ಗ್ರಂಥಗಳಿಗೆ ಸರಿಹೋಗುತ್ತದೆಯೇ ವಿನಹ ಶಾಸ್ತ್ರೀಯ ಗ್ರಂಥಗಳಿಗೆ ಸರಿಹೋಗುವುದಿಲ್ಲ. ಅದರಿಂದ ಪ್ರಯೋಜನವೂ ಕಡಮೆ. ಆದ್ದರಿಂದಲೇ ಆ ವಿಚಾರ ಮಾನಸಿಕ ಮಾಡಲಾಯಿತು. ಈ ಗ್ರಂಥವನ್ನು ತೀರ್ಥಹಳ್ಳಿ ಶ್ರೀ ಭುವನೇಂದ್ರ ವೈದ್ಯಶಾಲಾ ಮಾಲೀಕರಾದ ಜವಳಿ ರಘುಪತಿರಾವ್ ಸಹೋದರರು ಆಯುರ್ವೇದ ಪತ್ರದ ಮೂಲಕ ಸಂಪೂರ್ಣವಾಗಿ ಮುದ್ರಿಸುವ ಸಾಹಸಕಾರ್ಯವನ್ನು ಕೊನೆಗಾಣಿಸಿದರು. ಈ ಗ್ರಂಥವು ಪ್ರಿಂಟಾಗುವಾಗ್ಯೆ ನಾವು ಪರಸ್ಥಳದಲ್ಲಿ ಇದ್ದದ್ದರಿಂದ ಪ್ರೂಫನ್ನು ನೋಡುವುದು ಮೊದಲಾದ ಅನೇಕ ಕೆಲಸಗಳನ್ನು ನಮಗೆ ಮಾಡಿಕೊಟ್ಟ ತೀರ್ಥಹಳ್ಳಿ ಹೈಸ್ಕೂಲ್ ಪಂಡಿತರು ಮ. ರಾ. ಕಮಕೋಡು ನರಸಿಹ್ಮಶಾಸ್ತ್ರಿಗಳ ಉಪಕಾರವನ್ನು ಈ ಸಂದರ್ಭದಲ್ಲಿ ಸ್ಮರಿಸಬೇಕಾಗಿದೆ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟದ್ದಕ್ಕಾಗಿ ತೀರ್ಥಹಳ್ಳಿಯ ಶ್ರೀ ರಾಧಾಕೃಷ್ಣ ಪ್ರಿಂಟಿಂಗ್‌ಪ್ರೆಸ್ಸಿನವರಿಗೆ ನಮ್ಮ ವಂದನೆಗಳು. ನಮ್ಮಲ್ಲಿರಬಹುದಾದ ಅನೇಕ ನ್ಯೂನಾತಿರೇಕಗಳನ್ನು ಮರೆತು ಆಯುರ್ವೇದದ ಮೇಲಣ ಅಭಿಮಾನದಿಂದ ಪ್ರೋತ್ಸಾಹಿಸಿದ ನಮ್ಮ ಗ್ರಾಹಕಬಂಧುಗಳಿಗೆ ನಮ್ಮ ಅನಂತ ಧನ್ಯವಾದಗಳನ್ನು ಸಮರ್ಪಿಸಿ ಲೇಖನೋದ್ಯೋಗವನ್ನು ನಿಲ್ಲಿಸುವೆನು.

ಪಟ್ಟಗೆರೆ, ಕಡೂರು
6—3—1930.

**ಸೂರ್ಯನಾರಾಯಣಶಾಸ್ತ್ರಿ,**
ಆಯುರ್ವೇದಭೂಷಣ.



# ವಿಜ್ಞಾಪನೆ



ನಮ್ಮ ಈ ಭಾರತದೇಶದಲ್ಲಿ ಅತ್ಯುಚ್ಛ್ರಾಯಸ್ಥಿತಿಯಲ್ಲಿದ್ದ ಎಲ್ಲಾ ವಿದ್ಯೆಗಳೊಂದಿಗೆ ಆಯುರ್ವೇದ ವಿದ್ಯೆಯೂ ಮಲಿನವಾಗುತ್ತಾ ಬಂದಿರುವುದನ್ನು ಪುನರುಜ್ಜೀವನಗೊಳಿಸಬೇಕೆಂಬ ಕುತೂಹಲವು ದೇಶಾಭಿಮಾನಿಗಳೆಲ್ಲರಿಗೂ ಹುಟ್ಟಿ ಸಮಗ್ರ ಭರತಖಂಡದಲ್ಲಿ ಎಲ್ಲಾ ಕಡೆಯೂ ನಾನಾ ವಿಧವಾದ ಪ್ರಯತ್ನಗಳು ನಡೆಯುತ್ತ ಇರುವವು ನಮ್ಮ ಕರ್ನಾಟಕವೂ ಈ ಕಾರ್ಯದಲ್ಲಿ ಹಿಂದುಳಿದಿಲ್ಲ. ಮಹನೀಯರನೇಕರು ನಾನಾ ಪ್ರಯತ್ನಗಳ ಮೂಲಕ ಆಯುರ್ವೇದ ವಿದ್ಯಾಭಿವೃದ್ಧಿಗೆ ಮಾಡಿಯುತ್ತಿದ್ದಾರೆ. ನಾವೂ ನಮ್ಮ ಕೈಲಾದಮಟ್ಟಿಗೆ ನಮ್ಮ ಭಾಗದ ಸೇವೆಯನ್ನು ಮಾಡಬೇಕೆಂದು ಯೋಚಿಸಿ. ಸಂಸ್ಕೃತ ಭಾಷಾಭಿಜ್ಞರಲ್ಲದ ಜನಸಾಮಾನ್ಯರಿಗೆ ಆಯುರ್ವೇದ ಗ್ರಂಥಗಳನ್ನು ನೋಡಲು ಅವಕಾಶವಿಲ್ಲದಂತಾಗಿರುವ ಕೊರತೆಯನ್ನು ನೀಗಿ ಕನ್ನಡಿಗರಿಗೆ ಮುಖ್ಯ ಮುಖ್ಯ ಗ್ರಂಥಗಳು ಮಾತೃಭಾಷೆಯಲ್ಲಿ ನೋಡಲು ಸಿಕ್ಕಿದರೆ ಆಯುರ್ವೇದ ವಿದ್ಯೆಯ ಜ್ಞಾನವು ಹರಡಲು ಹೆಚ್ಚು ಅನುಕೂಲವಾಗುತ್ತೆಂದೂ ಆ ಮೂಲಕ ನಮ್ಮಿಂದಾದಷ್ಟು ಸೇವೆ ಮಾಡಬಹುದೆಂದೂ ಈ ಕಾರ್ಯವನ್ನು ಪ್ರಾರಂಭಿಸುವಾಗ ದೈವಸಂಘಟನೆಯಿಂದ ವಿದ್ವಾನ್. ಪಟ್ಣಗೆರೆ. ಸೂರ್ಯನಾರಾಯಣ ಶಾಸ್ತ್ರಿಗಳು ಸಿಕ್ಕಿ, ಆಯುರ್ವೇದ ಪತ್ರದ ಸಂಪಾದಕತ್ವವನ್ನು ಸ್ವೀಕರಿಸಿ ಈ ಕಾರ್ಯವನ್ನು ಸಾಂಗಗೊಳಿಸಿದರು. ಇವರ ಶ್ರಮ, ದೇಶಾಭಿಮಾನ, ಆಯುರ್ವೇದದ ಅಭಿವೃದ್ಧಿಯಲ್ಲಿ ಇವರಿಗಿರುವ ಉತ್ಸಾಹದಿಂದ ಈ ಕಾರ್ಯವು ನೆರವೇರಿ ಇಂದಿಗೆ ಕರ್ನಾಟಕಸ್ಥರ ಕೈಗೆ ಈ ಪುಸ್ತಕವು ದೊರೆಯುವಂತಾಯಿತು. ಈ ಮಧ್ಯೆ ಅನೇಕ ಎಡರುಗಳು ಬಂದರೂ ಶ್ರೀ ಪರಮಾತ್ಮನ ಅನುಗ್ರಹದಿಂದ ಅವೆಲ್ಲವೂ ಪಾರಾಗಿ

ನಮ್ಮ ಉದ್ದೇಶ್ಯವು ನೆರವೇರಿತು. ಈ ಗ್ರಂಥದ ಪ್ರಚಾರಕ್ಕೋಸ್ಕರ ನಾವು ಹೊರಡಿಸಿದ ಆಯುರ್ವೇದಪತ್ರಿಕೆಗೆ ಪೋಷಕರಾಗಿಯೂ ಚಂದಾದಾರರಾಗಿಯೂ ಸಹಾಯಮಾಡಿದ ಮಹನೀಯರುಗಳಿಗೆ ನಮ್ಮ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ. ಕರ್ನಾಟಕಸ್ಥರ ಪ್ರೋತ್ಸಾಹ ದೊರೆತ ಹಾಗೆ ಇನ್ನೂ ಕೆಲವು ಗ್ರಂಥಗಳನ್ನು ಕನ್ನಡದಲ್ಲಿ ಪ್ರಚುರಗೊಳಿಸಬೇಕೆಂದಿದ್ದೇವೆ. ಮಹನೀಯರು ಉದಾರಾಶ್ರಯವನ್ನಿತ್ತು ನಮ್ಮ ಕಾರ್ಯಕ್ಕೆ ನೆರವಾಗುತ್ತಾರಾಗಿ ನಂಬಿದ್ದೇವೆ.

ತೀರ್ಥಹಳ್ಳಿ,
ತಾ. 13-3-1930.

J. Raghupathi Rao Brothers,
ಪ್ರಕಾಶಕರು



# ಶಾರ್ಙ್ಗಧರಸಂಹಿತಾ ಕರ್ಣಾಟಕಾನುವಾದ

## ವಿ ಷ ಯ ವಿ ಭಾ ಗ

### ಪ್ರಥಮ ಖಂಡ.



### ಮಧ್ಯಮಖಂಡ.



### ಉತ್ತರಖಂಡ.





# ವರ್ಣಾನುಗತ ವಿಷಯಸೂಚಿಕೆ.

## ಖ



## ಗ

## ದ



## ಧ



## ನ

## ಫ



## ಬ

# ಶಾರ್ಙ್ಗಧರಸಂಹಿತಾ.

## ಪ್ರಥಮ ಖಂಡ.

ಓಂ ನಮಃ ಪರಮಾತ್ಮನೇ



ಶ್ರಿಯಂಸದದ್ಯಾದ್ಭವತಾಂಪುರಾರಿ ।
ರ್ಯದಂಗತೇಜಃಪ್ರಸರೇಭವಾನೀ ॥
ವಿರಾಜತೇನಿರ್ಮಲಚಂದ್ರಿಕಾಯಾಂ ।
ಮಹೌಷಧೀವಜ್ಜ್ವಲಿತಾಹಿಮಾದ್ರೌ ॥ ೧ ॥

ದಾಮೋದರನೆಂಬ ಪ್ರಸಿದ್ಧ ವೈದ್ಯನ ಮಗನಾದ ಶಾರ್ಙ್ಗಧರಾಚಾರ್ಯನೆಂಬ ವೈದ್ಯನು ವೈದ್ಯಶಾಸ್ತ್ರಾಭ್ಯಾಸಮಾಡತಕ್ಕ ವಿದ್ಯಾರ್ಥಿಗಳಿಗೆ ಆಯುರ್ವೇದ ವೈದ್ಯಶಾಸ್ತ್ರದಲ್ಲಿ ಅಡಗಿರತಕ್ಕ ಸಮಸ್ತ ವಿಷಯಗಳನ್ನೂ ಮತ್ತು ಅನುಭವದಲ್ಲಿದ್ದು ಒಳ್ಳೆ ಫಲಕಾರಿಗಳಾದ ವೈದ್ಯಯೋಗಗಳನ್ನು ಸಹ ತಿಳಿಸಿಕೊಡಲನುಕೂಲವಾದ ಸಂಗ್ರಹರೂಪವಾದ ವೈದ್ಯ ಗ್ರಂಥವೊಂದನ್ನು ರಚನೆಮಾಡಲು ಪ್ರಾರಂಭಮಾಡಿ ಗ್ರಂಥಾರಂಭದಲ್ಲಿ ತನ್ನ ಇಷ್ಟದೇವತೆಯಾದ ಪರಮೇಶ್ವರನ ನಮಸ್ಕಾರ ರೂಪವಾದ ಮಂಗಳಶ್ಲೋಕವನ್ನು ಮಾಡಿ ಅಧ್ಯಯನಮಾಡತಕ್ಕವರು ಅದನ್ನು ಭಕ್ತಿಯುಕ್ತರಾಗಿ ಪದೇ ಪದೇ ಬಾಯಿಂದ ಉಚ್ಚರಿಸಿ ಪರಮೇಶ್ವರನ ಅನುಗ್ರಹಕ್ಕೆ ಪಾತ್ರರಾಗಲಿ ಎಂಬ ಉದ್ದೇಶದಿಂದ ಬರೆದಿರುತ್ತಾನೆ. ಶ್ಲೋಕದ ತಾತ್ಪರ್ಯವೇನೆಂದರೆ, ಸ್ವಚ್ಛವಾದ ಬೆಳದಿಂಗಳಿನ ರಾತ್ರಿಯಲ್ಲಿ ಔಷಧೀಶನಾದ ಚಂದ್ರನ ಪ್ರಕಾಶದಿಂದ ಹಿಮವತ್ಪರ್ವತದಲ್ಲಿ ಸಂಧಾನಕರಣಿ, ವಿಶಲ್ಯಕರಣಿ ಮೊದಲಾದ ಔಷಧಿಗಳು ಪ್ರಕಾಶಮಾನವಾಗಿ ಕಾಣುವಂತೆ ಭಸ್ಮಲೇಪನದಿಂದ ಶುಭ್ರವಾದ ಮಹಾದೇವನ ಶರೀರವನ್ನು ಆಲಿಂಗನಮಾಡಿಕೊಂಡು ಯಾವ ದಾಕ್ಷಾಯಣಿಯು ಪ್ರಕಾಶಿಸುತ್ತಲಿದ್ದಾಳೆಯೋ ಅಂತಹ ದಾಕ್ಷಾಯಣೀಯುಕ್ತನಾದ ತ್ರಿಪುರಾಂತಕನಾದ ಪರಮೇಶ್ವರನು ಗ್ರಂಥವನ್ನು ಓದತಕ್ಕವರಿಗೆ ಸಮಸ್ತ ಸನ್ಮಂಗಳಗಳನ್ನೂ ಅವಿಚ್ಛಿನ್ನವಾಗಿ ಉಂಟುಮಾಡಲಿ ಎಂದು ತಾತ್ಪರ್ಯ

ಮಂಗಳಶ್ಲೋಕದ ಆವಶ್ಯಕತೆ ಏನು ಎಂದರೆ ಪ್ರತಿಯೊಂದು ಕಾರ್ಯವನ್ನು ಪ್ರಾರಂಭ ಮಾಡಬೇಕಾದರೂ ಆಸ್ತಿಕರಾದ ಪೂರ್ವಜರು ಮೊದಲು ಭಗವಂತನ ಸ್ತೋತ್ರಮಾಡಿ ಚಿತ್ತಶುದ್ಧಿ, ಭಗವಂತನಲ್ಲಿ ಭಕ್ತಿ, ವಿಶ್ವಾಸಗಳನ್ನಿಟ್ಟುಕೊಂಡು ಕಾರ್ಯವನ್ನು ಪ್ರಾರಂಭಿಸುತ್ತಿದ್ದರು. ಅದರಂತೆ ಆರ್ಯರು ಈಗಲೂ ಆಚರಣೆಯನ್ನಿಟ್ಟುಕೊಂಡೇ ಇದ್ದಾರೆ ಆರ್ಯರ ಪ್ರತಿ ಒಂದು ಕೆಲಸದಲ್ಲಿಯೂ ಭಗವನ್ನಾಮೋಚ್ಚಾರಣೆ ಇಲ್ಲದ ಇರುವುದೇ ಇಲ್ಲ. ಔಷಧವನ್ನು ತೆಗೆದುಕೊಳ್ಳಬೇಕಾದರೂ ಕೂಡ ಔಷಧವು ಯಾವ

ದೇ ಇರಲಿ, ಕೊಡತಕ್ಕ ವೈದ್ಯನು ಯಾರೇ ಇರಲಿ **"ಔಷಧಂಜಾಹ್ನವಿತೋಯಂ ವೈದ್ಯೋನಾರಾಯಣೋ ಹರಿಃ"** ಎಂಬದಾಗಿ ಉಚ್ಚರಿಸಿ ವೈದ್ಯನನ್ನು ಸಾಕ್ಷಾತ್ ಪರಮಾತ್ಮನೆಂಬದಾಗಿಯೂ ಔಷಧವನ್ನು ಪರಮ ಪಾವನವಾದ ಗಂಗಾಮೃತವೆಂಬದಾಗಿಯೂ ಭಾವಿಸಿ ತೆಗೆದುಕೊಳ್ಳುವುದು ರೂಢಿಯಲ್ಲಿದೆ ಈ ರೀತಿಯಾದ ಭಗವದ್ಭಕ್ತಿ ಮತ್ತು ನಂಬಿಕೆಗಳೇ ಸಮಸ್ತ ಕಾರ್ಯಾರಂಭದಲ್ಲಿಯೂ ಇದ್ದಲ್ಲಿ ಫಲವು ಉತ್ತಮವಾಗಿಯೇ ನೆರವೇರುತ್ತದೆಂಬುವುದು ಆರ್ಯರ ಸಂಪ್ರದಾಯ ಅದರಂತೆಯೇ ಗ್ರಂಥಪ್ರಾರಂಭದಲ್ಲಿಯೂ ಗ್ರಂಥಕಾರರು ಬರೆದಿದ್ದಾರೆ

**ಪ್ರಸಿದ್ಧಯೋಗಾಮುನಿಭಿಃಪ್ರಯುಕ್ತಾ ।**
**ಶ್ಚಿಕಿತ್ಸಕೈರ್ಯೇಬಹುಶೋಸುಭೂತಾಃ ॥**
**ವಿಧೀಯತೇಶಾರ್ಙ್ಗಧರೇಣತೇಷಾಂ ।**
**ಸುಸಂಗ್ರಹಸ್ಸಜ್ಜನರಂಜನಾಯ ॥ ೨ ॥**

ಈಗಿನ ಕಾಲದಲ್ಲಿ ಗ್ರಂಥವನ್ನು ಬರೆಯತಕ್ಕವರು ಗ್ರಂಥವನ್ನು ಬರೆದು ಅದಕ್ಕೆ ಒಂದು ಪೀಠಿಕೆಯನ್ನು ಬರೆದು ಆ ಪೀಠಿಕೆಯಲ್ಲಿ ತಾವು ಯಾವ ಯಾವ ಗ್ರಂಥಗಳ ಸಹಾಯದಿಂದ ಗ್ರಂಥವನ್ನು ರಚನೆಮಾಡಿರುತ್ತಾರೆಯೋ ಅವರ ಹೆಸರುಗಳನ್ನೂ ಇತರ ವಿಧದಲ್ಲಿ ತಮಗೆ ಸಹಾಯಕರಾದವರ ಹೆಸರುಗಳನ್ನೂ ಕೃತಜ್ಞತಾ ಪ್ರವರ್ತಕವಾಗಿ ಬರೆದು ತೋರಿಸುವುದು ಸಂಪ್ರದಾಯ ಶಾರ್ಙ್ಗಧರಾಚಾರ್ಯನು ಕೂಡ ತನ್ನ ಗ್ರಂಥಕ್ಕೆ ಸೂಕ್ಷ್ಮವಾದ ಪೀಠಿಕೆಯನ್ನು ಬರದಿರುತ್ತಾನೆ ಆಯುರ್ವೇದ ಶಾಸ್ತ್ರ ಪಾರಾಂಗತರಾದ ಚರಕ, ಸುಶ್ರುತ ಮೊದಲಾದ ಮಹರ್ಷಿಗಳು ತಮ್ಮ ಗ್ರಂಥಗಳಲ್ಲಿ ಪ್ರಯೋಗಿಸಿರುವ ಔಷಧಗಳನ್ನೂ, ಆಗಿನ ಕಾಲದ ವೈದ್ಯರುಗಳು ಉತ್ತಮ ಯೋಗಗಳೆಂದು ತಮ್ಮ ಅನುಭವ ಪ್ರಚಾರದಲ್ಲಿ ಇಟ್ಟುಕೊಂಡಿದ್ದ ಯೋಗಗಳನ್ನೂ ಸಂಗ್ರಹಿಸಿ ವೈದ್ಯರ ಉಪಯೋಗಕ್ಕಾಗಿಯೂ ಮತ್ತೂ ಅವರ ಮನಸ್ಸನ್ನು ಸಂತೋಷಪಡಿಸುವುದಕ್ಕಾಗಿಯೂ ಈ ಗ್ರಂಥವನ್ನು ನಿರ್ಮಿಸಿದ್ದಾನೆ ಅಂದರೆ ಋಷಿಪ್ರೋಕ್ತಗಳಾಗಿಯೂ, ಅನುಭವಸಿದ್ಧಗಳಾಗಿಯೂ ಇರುವ ಔಷಧಗಳನ್ನೇ ಈ ಪುಸ್ತಕದಲ್ಲಿ ಸಂಗ್ರಹಿಸಿದನೆಂಬ ತಾತ್ಪರ್ಯ

**ಹೇತ್ವಾದಿರೂಪಾಕೃತಿಸಾತ್ಮ್ಯಜಾತಿ ।**
**ಭೇದೈಸ್ಸಮೀಕ್ಷ್ಯಾತುರಸರ್ವರೋಗಾನ್ ॥**
**ಚಿಕಿತ್ಸಿತಂಕರ್ಷಣಬೃಂಹಣಾಖ್ಯಂ ।**
**ಕುರ್ವೀತವೈದ್ಯೋವಿಧಿವತ್ಸುಯೋಗೈಃ ॥ ೩ ॥**

ಈಗಿನ ಕಾಲದ ಅನೇಕ ವೈದ್ಯರು ರೋಗನಿರ್ಣಯ ಕ್ರಮವನ್ನು ತಿಳಿದುಕೊಳ್ಳದೆ ರೋಗನಿಶ್ಚಯಮಾಡತಕ್ಕ ವಿಷಯದಲ್ಲಿ ಮೋಸಹೋಗಿ ಯಾವುದೊ ಒಂದು ರೋಗವನ್ನು ಮತ್ತೊಂದು ರೋಗವೆಂದು ತಿಳಿದುಕೊಂಡು ತಾವು ತಿಳಿದುಕೊಂಡಿರತಕ್ಕ ತಪ್ಪು ರೋಗಕ್ಕೆ ವೈದ್ಯಶಾಸ್ತ್ರದಲ್ಲಿ ಯಾವ ಔಷಧಿಯು ಹೇಳಲ್ಪಟ್ಟಿದೆಯೋ ಅದನ್ನು ನಿರ್ಮಾಣ ಮಾಡಿ ಪ್ರಯೋಗಿಸಿ ಅದರಿಂದ ರೋಗ ನಿವಾರಣವಾಗದಿರುವುದನ್ನು ಕಂಡು ಔಷಧವು ಸರಿಯಾದದ್ದಲ್ಲವೆಂಬ ಅಪವಾದವನ್ನು ವೈದ್ಯಶಾಸ್ತ್ರಕಾರರ ಮೇಲೆ ಹೊರಿಸುವುದು ರೂಢಿಯಲ್ಲಿದೆಯಷ್ಟೆ, ಅಂತಹ ಅಪವಾದವು ಶಾಸ್ತ್ರಕಾರರಮೇಲೆ ಬರಬಾರದೆಂಬ ಅಭಿಪ್ರಾಯದಿಂದಲೇ ಔಷಧ ಪ್ರಯೋಗ ಮಾಡುವದಕ್ಕಿಂತ ಪೂರ್ವದಲ್ಲಿ ವೈದ್ಯನು

ಮಾಡಬೇಕಾದ ಕೆಲಸವನ್ನು ನಿಷ್ಕರ್ಷಿಸುತ್ತಾನೆ. ವೈದ್ಯನು ರೋಗಿಯನ್ನು ನೋಡಿದ ಕೂಡಲೆ ಮೊದಲು ರೋಗದ ಕಾರಣ, ಪ್ರಾರಂಭದಲ್ಲಿ ರೋಗವು ಹೇಗೆ ಉತ್ಪನ್ನವಾಯಿತೆಂಬ ರೀತಿ, ಈಗ ರೋಗವು ಇರತಕ್ಕ ರೀತಿ, ಯಾವ ಯಾವ ಪದಾರ್ಥಗಳನ್ನು ಉಪಯೋಗಿಸಿದ್ದರಲ್ಲಿ ರೋಗದಲ್ಲಿ ಏನೇನು ವ್ಯತ್ಯಾಸಗಳು ಕಂಡು ಬರುತ್ತವೆಂಬ ವಿಚಾರ, ರೋಗದ ಸಂಪೂರ್ಣ ಲಕ್ಷಣಗಳು ಈ ಭೇದಗಳನ್ನೆಲ್ಲಾ ಚೆನ್ನಾಗಿ ಮುಂದಟ್ಟು ಮಾಡಿಕೊಂಡು ನಂತರ ರೋಗ ಶಮನಾರ್ಥವಾಗಿ "ಕರ್ಷಣ" ಎಂದರೆ ಶರೀರದಲ್ಲಿರುವ ಮಲಗಳನ್ನು ಹೊರಕ್ಕೆ ಹೊರಡಿಸಿ ಶರೀರವು ಕೃಶವಾಗುವಂತೆ ಮಾಡುವ ಕ್ರಮ, "ಬೃಂಹಣ" ಎಂದರೆ ಶರೀರ ಪುಷ್ಟಿ ಮಾಡತಕ್ಕ ಕ್ರಮ, ಈ ಎರಡರಲ್ಲಿ ಯಾವ ಮಾರ್ಗವನ್ನು ತಾನು ಅನುಸರಿಸಬೇಕೆನ್ನುವುದನ್ನು ತೀರ್ಮಾನ ಮಾಡಿಕೊಂಡು ನಂತರ ತದನುಕೂಲಗಳಾದ ಯೋಗಗಳನ್ನು ಅಂದರೆ ಔಷಧಗಳನ್ನು ಆರಿಸಿಕೊಳ್ಳಬೇಕು ವಿಚಾರವಿಲ್ಲದೇ ಔಷಧ ಕೊಡಬಾರದೆಂಬ ತಾತ್ಪರ್ಯ.

ದಿವ್ಯೌಷಧೀನಾಂಬಹವಃಪ್ರಭೇದಾ ।
ವೃಂದಾರಕಾಣಾಮಿವವಿಸ್ಫುರಂತಿ ॥
ಜ್ಞಾತ್ವೇತಿಸಂದೇಹಮಪಾಸ್ಯಧೀರೈ ।
ಸ್ಸಂಭಾವನೀಯಾವಿವಿಧಪ್ರಭಾವಾಃ ॥ ೪ ॥

ನಮ್ಮಗಳ ಎದುರಿನಲ್ಲಿಯೇ ನಮ್ಮ ಕಾಲ ಕಾಲದಂತೆ ಹುಟ್ಟಿ ಬೆಳೆಯುತ್ತಿರುವ ಮೂಲಿಕೆಗಳಿಗೆ ಮಹತ್ತರಗಳಾಗಿಯೂ ಪ್ರಾಣದಾಯಕರಗಳಾಗಿಯೂ ಇರುವ ರೋಗಗಳನ್ನು ನಿಗ್ರಹಿಸತಕ್ಕ ಶಕ್ತಿ ಉಂಟೆಂಬ ವಿಚಾರವನ್ನು ನಂಬಬಹುದೇ? ವಿಚಾರವಿಲ್ಲದೆ ನಂಬುವುದು ಹೇಗೆ ಎಂಬ ಅನುಮಾನವನ್ನು ನಿವಾರಣಮಾಡುತ್ತಾನೆ. ದೇವತೆಗಳು ಅನೇಕ ಭೇದಯುಕ್ತರಾಗಿಯೂ, ಅಚಿಂತ್ಯಶಕ್ತಿಯುತರಾಗಿಯೂ ಇರುವಂತೆ ದಿವ್ಯೌಷಧ ಮೂಲಿಕಾದಿಗಳು ಕೂಡಾ ಅನೇಕ ಭೇದಯುಕ್ತಗಳಾಗಿಯೂ, ಅಪರಿಮಿತ ಶಕ್ತಿಉಳ್ಳವುಗಳಾಗಿಯೂ ಇರತಕ್ಕ ವಿಷಯವನ್ನು ತ್ರಿಕಾಲಜ್ಞರಾದ ಆಯುರ್ವೇದ ಪ್ರವರ್ತಕರಾಗಿರುವ ಮಹರ್ಷಿಗಳು ಕಂಡು ಕೊಂಡು ಲೋಕೋಪಕಾರಾರ್ಥವಾಗಿ ಪ್ರಚಾರ ಮಾಡಿದ್ದಾರೆ. ಈ ವಿಷಯವನ್ನು ತಿಳಿದುಕೊಂಡು ಸಂದೇಹವನ್ನು ಬಿಟ್ಟು ಮೂಲಿಕೆಗಳು ಅಚಿಂತ್ಯ ಪ್ರಭಾವವುಳ್ಳವುಗಳೇ ಎಂದು ನಿಷ್ಕರ್ಷಿಸಿ ನಂಬಬಹುದು.

ಸ್ವಾಭಾವಿಕಾಗಂತುಕಕಾಯಕಾಂತರಾ ।
ರೋಗಾಭವೇಯುಃಕಿಲಕರ್ಮದೋಷಜಾಃ ॥
ತಚ್ಛೇದನಾರ್ಥಂದುರಿತಾಪಹಾರಿಣಃಶ್ರೇಯೋ ।
ಮಯಾನ್ಯೋಗವರಾನ್ನಿಯೋಜಯೇತ್ ॥ ೫ ॥

ವೈದ್ಯಶಾಸ್ತ್ರದಿಂದ ಪ್ರಯೋಜನವೇನು ? ಎಂಬ ವಿಷಯ ಲೋಕದಲ್ಲಿ ಪ್ರತಿಯೊಬ್ಬರಿಗೂ ಪ್ರತಿಕ್ಷಣದಲ್ಲಿಯೂ ಅನುಭವಕ್ಕೆ ಬರುತ್ತಲಿದೆ "ನಪ್ರಾಣಿರಹಿತೋದೇಶಃ ನಚಪ್ರಾಣೀನಿರಾಮಯಃ ॥ ತಸ್ಮಾತ್ಸರ್ವತ್ರವೈದ್ಯಾನಾಂ ಪ್ರಸಿದ್ಧಾಏವವೃತ್ತಯಃ ॥" ವೈದ್ಯ ವೃತ್ತಿಯನ್ನು ನಡೆಯಿಸತಕ್ಕ ಕ್ಷೇತ್ರವೆಲ್ಲಿ? ಎಂಬ ಪ್ರಶ್ನೆಯನ್ನು ಚರಕಾಚಾರ್ಯರು ಮನಸ್ಸಿನಲ್ಲಿಟ್ಟುಕೊಂಡು ಮೇಲಿನ ಶ್ಲೋಕವನ್ನು ಹೇಳಿದ್ದಾರೆ. ಪ್ರಾಣಿಗಳಿಲ್ಲದ ದೇಶವಿಲ್ಲ, ರೋಗವಿಲ್ಲದ ಪ್ರಾಣಿಯಿಲ್ಲ, ಅಂದ ಮೇಲೆ ವೈದ್ಯವೃತ್ತಿಗೆ

ಪ್ರಪಂಚವೆಲ್ಲವೂ ಕಾರ್ಯಕ್ಷೇತ್ರವೇ ಎಂದಹಾಗಾಯಿತು. ಇನ್ನು ವೈದ್ಯಶಾಸ್ತ್ರದ ಪ್ರಯೋಜನವನ್ನು ಹೇಳುವುದೇನು? ಎಂದರೆ ಗ್ರಂಥದಲ್ಲಿ ಪ್ರಯೋಜನವನ್ನು ಹೇಳತಕ್ಕದ್ದೂ ಕೂಡ ಅನುಬಂಧ ಚತುಷ್ಟಯದಲ್ಲಿ ಸೇರಿದ ಒಂದು ಮರ್ಯಾದೆ ಎಂಬ ಅಭಿಪ್ರಾಯದಿಂದ ಹೇಳುತ್ತಾನೆ ರೋಗಗಳು ಸ್ವಾಭಾವಿಕ ರೋಗಗಳೆಂಬದಾಗಿಯೂ, ಆಗಂತುಕ ರೋಗಗಳೆಂಬದಾಗಿಯೂ, ಕಾಯಿಕ ರೋಗಗಳೆಂಬದಾಗಿಯೂ, ಮಾನಸಿಕ ರೋಗಗಳೆಂಬದಾಗಿಯೂ, ತ್ರಿದೋಷಜನ್ಯ ರೋಗಗಳೆಂಬದಾಗಿಯೂ, ದುಷ್ಕರ್ಮಪರಿಪಾಕಜನ್ಯ ರೋಗಗಳೆಂಬದಾಗಿಯೂ ಅನೇಕ ವಿಧಗಳಾಗಿವೆ. ಈ ರೋಗಗಳನ್ನು ಶಮನ ಮಾಡುವುದಕ್ಕೋಸ್ಕರ ಪಾಪನಿವರ್ತಕಗಳಾದ ದೇವತಾ ಪೂಜಾದಿರೂಪಗಳಾದ ಕಾರ್ಯಗಳನ್ನೂ, ತ್ರಿದೋಷನಿವರ್ತಕಗಳಾದ ಕಲ್ಕ, ಕಷಾಯಾದಿ ರೂಪಗಳಾದ ಯೋಗಗಳನ್ನೂ ಉಪದೇಶಿಸುವುದು ವೈದ್ಯಶಾಸ್ತ್ರದ ಪ್ರಯೋಜನ.

ಪ್ರಯೋಗಾನಾಗಮಾತ್ಸಿದ್ಧಾ ।
ನ್ಪ್ರತ್ಯಕ್ಷಾದನುಮಾನತಃ ॥
ಸರ್ವಲೋಕಹಿತಾರ್ಥಾಯ ।
ವಕ್ಷ್ಯಾಮ್ಯನತಿವಿಸ್ತರಾತ್ ॥ ೧ ॥

ತನ್ನ ಗ್ರಂಥದಲ್ಲಿ ಹೇಳಿರತಕ್ಕ ವಿಷಯಗಳೆಲ್ಲವೂ ಕೇವಲ ನಂಬಿಕೆಗೆ ಅರ್ಹಗಳೆಂಬತಕ್ಕ ವಿಷಯವನ್ನು ಹೇಳುತ್ತಾನೆ ಇವರಲ್ಲಿ ಹೇಳಿರತಕ್ಕ ವಿಷಯಗಳೆಲ್ಲವೂ ಲೋಕಹಿತಕ್ಕೋಸ್ಕರ ಆಯುರ್ವೇದ ಸಂಹಿತೆಯಲ್ಲಿ ಹೇಳಲ್ಪಟ್ಟವುಗಳಾಗಿಯೂ ಪ್ರತ್ಯಕ್ಷ ಅನುಭವ ಸಿದ್ಧಗಳಾಗಿಯೂ, ಅನುಮಾನ ಪ್ರಮಾಣ ಸಿದ್ಧಗಳಾಗಿಯೂ ಇರುತ್ತವೆ ಇಂತಹವುಗಳನ್ನೇ ಸಂಗ್ರಹಿಸಿ ಲೋಕಹಿತಾರ್ಥವಾಗಿ ವಿಸ್ತಾರವಿಲ್ಲದಂತೆ ನಿರೂಪಿಸುತ್ತೇನೆ.

ಪ್ರಥಮಂಪರಿಭಾಷಾಸ್ಯಾ ಭ್ಭೈಷಜ್ಯಾಖ್ಯಾನಕಂತಥಾ ॥
ನಾಡೀಪರೀಕ್ಷಾದಿವಿಧಿ ಸ್ತತೋದೀಪನಪಾಚನಂ ॥ ೨ ॥
ತತಃಕಲಾದಿಕಾಖ್ಯಾನ ಮಾಹಾರಾದಿಗತಿಸ್ತಥಾ ॥
ರೋಗಾಣಾಂಗಣನಾಚೈವ ಪೂರ್ವಖಂಡೋಯಮೀರಿತಃ ॥ ೩ ॥

ಈ ಶಾರ್ಙ್ಗಧರಸಂಹಿತೆಯು ಮೂರು ಖಂಡಗಳಾಗಿ ವಿಭಾಗ ಮಾಡಲ್ಪಟ್ಟಿದೆ. ಮೊದಲನೆಯ ಖಂಡದಲ್ಲಿ ಏಳು ಅಧ್ಯಾಯಗಳಿವೆ ಒಂದನೆಯ ಅಧ್ಯಾಯದಲ್ಲಿ ಪರಿಭಾಷೆ ಅಂದರೆ ವೈದ್ಯಶಾಸ್ತ್ರದಲ್ಲಿ ಉಪಯೋಗವಾಗುವ ಸಂಕೇತ ಶಬ್ದಗಳು, ಪರಿಮಾಣ ಅಂದರೆ ಅಳತೆಯ ವಿಷಯ ಮೊದಲಾದವು ಹೇಳಲ್ಪಡುತ್ತವೆ ಎರಡನೆಯ ಅಧ್ಯಾಯದಲ್ಲಿ ಔಷಧ ಸೇವನಕಾಲ, ಕ್ರಮ ಮೊದಲಾದವುಗಳೂ, ಮೂರನೆಯ ಅಧ್ಯಾಯದಲ್ಲಿ ನಾಡೀ ಪರೀಕ್ಷಾಕ್ರಮವೂ, ನಾಲ್ಕನೆಯ ಅಧ್ಯಾಯದಲ್ಲಿ ದೀಪನ-ಪಾಚನಗಳೆಂಬ ವೈದ್ಯಶಾಸ್ತ್ರೋಕ್ತ ಔಷಧಗಳ ವಿಚಾರವೂ, ಐದನೆಯ ಅಧ್ಯಾಯದಲ್ಲಿ ಕಲಾದ್ಯಾಖ್ಯಾನವೆಂದರೆ ಸಂಕ್ಷೇಪವಾಗಿ ಶರೀರ ಸ್ವರೂಪವಿವರಣೆ, ಆರನೆಯ ಅಧ್ಯಾಯದಲ್ಲಿ ಆಹಾರ ಜೀರ್ಣವಾಗಿ ಶರೀರಗತವಾಗುವ ಕ್ರಮ, ಏಳನೆಯ ಅಧ್ಯಾಯದಲ್ಲಿ ಆಯುರ್ವೇದ ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧಗಳಾದ ರೋಗಗಳ ಹೆಸರು ಮೊದಲಾದವುಗಳೂ ಈ ರೀತಿಯಾದ ಏಳು ಅಧ್ಯಾಯಗಳಿಂದ ಮೊದಲನೆಯ ಖಂಡವು ಪೂರ್ಣವಾಗುತ್ತದೆ.

**ಸ್ವರಸಃಕ್ವಾಥಫಾಂಟೌಚಹಿಮಃಕಲ್ಕಶ್ಚಚೂರ್ಣಕಂ ||**
**ತಥೈವಗುಟಿಕಾಲೇಹೌ ಸ್ನೇಹಸ್ಸಂಧಾನಮೇವಚ || ೯ ||**
**ಧಾತುಶುದ್ಧಿರಸಾಶ್ಚೈವ ಖಂಡೋಯಂಮಧ್ಯಮಸ್ಮೃತಃ ||**

ಎರಡನೆಯ ಖಂಡದಲ್ಲಿ ಹನ್ನೆರಡು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ರೋಗಜಯಕ್ಕಾಗಿ ಮೂಲಿಕೆಗಳನ್ನು ಹಸಿಯಾಗಿ ತಂದು ರಸವನ್ನು ತೆಗೆದು ಉಪಯೋಗಿಸತಕ್ಕ ವಿಧಾನವೂ, ಎರಡನೆಯ ಅಧ್ಯಾಯದಲ್ಲಿ 'ಕ್ವಾಥ' ಎಂಬ ಕಷಾಯವನ್ನು ಮಾಡತಕ್ಕ ಕ್ರಮವೂ, ಮೂರನೆಯ ಅಧ್ಯಾಯದಲ್ಲಿ '**ಫಾಂಟ**' ವೆಂಬ ಚೂರ್ಣಗಳ ಕಷಾಯವನ್ನು ಮಾಡತಕ್ಕ ಕ್ರಮವೂ, ನಾಲ್ಕನೆಯ ಅಧ್ಯಾಯದಲ್ಲಿ '**ಹಿಮ**' ಅಂದರೆ ಬೆಂಕಿಯ ಸಂಪರ್ಕವಿಲ್ಲದೆ ನೀರು ಮತ್ತು ಮೂಲಿಕೆಗಳಿಂದ ಕಷಾಯವನ್ನು ಮಾಡತಕ್ಕ ಕ್ರಮವೂ, ಐದನೆಯ ಅಧ್ಯಾಯದಲ್ಲಿ '**ಕಲ್ಕ**' ಅಂದರೆ ಮೂಲಿಕೆಗೆ ನೀರನ್ನುಹಾಕಿ ಅರದು ಉಪಯೋಗಿಸುವ ಕ್ರಮವೂ, ಆರನೆಯ ಅಧ್ಯಾಯದಲ್ಲಿ ಚೂರ್ಣಗಳನ್ನು ನಿರ್ಮಿಸತಕ್ಕ ವಿಧಾನವೂ, ಏಳನೆಯ ಅಧ್ಯಾಯದಲ್ಲಿ ಮಾತ್ರೆಗಳು, ವಟಕಗಳು, ಇವುಗಳನ್ನು ನಿರ್ಮಿಸತಕ್ಕ ಕ್ರಮವೂ, ಎಂಟನೆಯ ಅಧ್ಯಾಯದಲ್ಲಿ ಲೇಹಗಳನ್ನು ಮಾಡತಕ್ಕ ವಿಧಾನವೂ, ಒಂಬತ್ತನೆಯ ಅಧ್ಯಾಯದಲ್ಲಿ ತೈಲಗಳನ್ನು ಮಾಡತಕ್ಕ ವಿಧಾನವೂ, ಘೃತಗಳನ್ನು ಮಾಡತಕ್ಕ ಪ್ರಕ್ರಿಯೆಯೂ, ಹತ್ತನೆಯ ಅಧ್ಯಾಯದಲ್ಲಿ '**ಸಂಧಾನ**' ಅಂದರೆ ಔಷಧಯುಕ್ತಗಳಾದ ಆಸವ, ಅರಿಷ್ಟಗಳೆಂಬ ಮದ್ಯಗಳನ್ನು ತಯಾರುಮಾಡುವ ಕ್ರಮವೂ, ಹನ್ನೊಂದನೆಯ ಅಧ್ಯಾಯದಲ್ಲಿ ಸುವರ್ಣ, ರಜತ ಮೊದಲಾದ ಧಾತುಗಳನ್ನು ಶುದ್ಧಿಮಾಡುವ ಕ್ರಮವೂ, ಅವುಗಳನ್ನು ಭಸ್ಮಮಾಡಿ ಔಷಧ ರೂಪವಾಗಿ ಮಾರ್ಪಡಿಸುವ ಕ್ರಮವೂ, ಹನ್ನೆರಡನೆಯ ಅಧ್ಯಾಯದಲ್ಲಿ ರಸ ಗಂಧಕಾದಿಗಳನ್ನು ಶೋಧನ, ಮಾರಣ ಮಾಡುವ ಕ್ರಮಗಳೂ, ರಸಮಿಶ್ರಿತಗಳಾದ ವಸಂತಕುಸುಮಾಕರ ಮೊದಲಾದ ಸಿದ್ಧೌಷಧಗಳನ್ನು ನಿರ್ಮಿಸತಕ್ಕ ಕ್ರಮವೂ ಹೇಳಲ್ಪಡುತ್ತದೆ.

**ಸ್ನೇಹಪಾನಂಸ್ವೇದವಿಧಿರ್ವಮನಂಚವಿರೇಚನಂ || ೧೦ ||**
**ತತಸ್ತುಸ್ನೇಹಬಸ್ತಿಸ್ಸ್ಯಾತ್ತತಶ್ಚಾಪಿನಿರೂಹಣಂ ||**
**ತತಶ್ಚಾಪ್ಯುತ್ತರೋಬಸ್ತಿಸ್ತತೋನಸ್ಯವಿಧಿರ್ಮತಃ || ೧೧ ||**
**ಧೂಮಪಾನವಿಧಿಶ್ಚೈವಗಂಡೂಷಾದಿವಿಧಿಸ್ತಥಾ ||**
**ಲೇಪಾದೀನಾಂವಿಧಿಃಖ್ಯಾತಸ್ತಥಾ ಶೋಣಿತವಿಸ್ರುತಿಃ || ೧೨ ||**
**ನೇತ್ರಕರ್ಮಪ್ರಕಾರಶ್ಚ ಖಂಡಸ್ಸ್ಯಾದುತ್ತರಸ್ತ್ವಯಂ ||**

ಉತ್ತರಖಂಡವೆಂಬ ಮೂರನೆಯ ಖಂಡದಲ್ಲಿ ಹದಿಮೂರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ '**ಸ್ನೇಹಪಾನ**' ಅಂದರೆ ರೋಗಜಯಕ್ಕಾಗಿ ಘೃತ, ತೈಲ, ವಸ, ಮಜ್ಜ ಎಂಬ ನಾಲ್ಕು ವಿಧವಾದ ಸ್ನೇಹಗಳನ್ನು ಪಾನಮಾಡಿಸತಕ್ಕ ಕ್ರಮವೂ, ಎರಡನೆಯ ಅಧ್ಯಾಯದಲ್ಲಿ '**ಸ್ವೇದನ**' ಅಂದರೆ ರೋಗ ಹರದ್ರವ್ಯಗಳಿಂದ ಮೈ ಬೆವರಿಸುವ ಕ್ರಮವೂ, ಮೂರನೆಯ ಅಧ್ಯಾಯದಲ್ಲಿ ವಮನೌಷಧಗಳನ್ನು ಪ್ರಯೋಗಮಾಡಿ ಶರೀರ ಶೋಧನಮಾಡತಕ್ಕ ಕ್ರಮವೂ, ನಾಲ್ಕನೆಯ ಅಧ್ಯಾಯದಲ್ಲಿ

ವಿರೇಚನೌಷಧ ಪ್ರಯೋಗಮಾಡಿ ಶರೀರ ಶೋಧನಮಾಡತಕ್ಕ ಕ್ರಮವೂ, ಐದನೆಯ ಅಧ್ಯಾಯದಲ್ಲಿ 'ಬಸ್ತಿವಿಧಿ' ಅಂದರೆ ರೋಗಾನುಗುಣವಾಗಿ ಎನೀಮಾ ಕೊಡುವುದರ ಮೂಲಕ ರೋಗನಿವಾರಣಮಾಡುವ ಕ್ರಮವೂ, ಆರನೆಯ ಅಧ್ಯಾಯದಲ್ಲಿ 'ನಿರೂಹ' ಅಂದರೆ ಕಷಾಯಗಳಿಂದ ರೋಗನಿವಾರಣೆಗಾಗಿ ಎನಿಮಾಕೊಡುವ ವಿಚಾರವೂ, ಏಳನೆಯ ಅಧ್ಯಾಯದಲ್ಲಿ ಮೂತ್ರದ್ವಾರದ ಮಾರ್ಗವಾಗಿ ಔಷಧಗಳನ್ನು ಪ್ರಯೋಗಿಸುವ 'ಉತ್ತರಬಸ್ತಿ' ಕ್ರಮವೂ, ಎಂಟನೆಯ ಅಧ್ಯಾಯದಲ್ಲಿ ನಾಸಿಕಾರೋಗ ಮತ್ತು ಶಿರೋರೋಗಗಳ ನಿವೃತ್ತಿಗಾಗಿ 'ನಸ್ಯ' ಅಂದರೆ ಮೂಗಿನ ಮೂಲಕ ಔಷಧಗಳನ್ನು ಪ್ರಯೋಗಿಸುವ ಕ್ರಮವೂ, ಒಂಬತ್ತನೆಯ ಅಧ್ಯಾಯದಲ್ಲಿ 'ಧೂಮಪಾನ' ಅಂದರೆ ರೋಗನಿವೃತ್ತಿಗಾಗಿ ಹೊಗೆಯನ್ನು ಸೇದಿಸುವ ಕ್ರಮವೂ, ಹತ್ತನೆಯ ಅಧ್ಯಾಯದಲ್ಲಿ ಬಾಯಿಯ ಮತ್ತು ಹಲ್ಲುಗಳ ರೋಗನಿವೃತ್ತಿಗಾಗಿ ಕಷಾಯಗಳಿಂದ ಬಾಯಿಮುಕ್ಕಳಿಸುವುದು, ತೊಳೆಯುವುದು ಮೊದಲಾದ ಗಂಡೂಷ ಕ್ರಮವೂ, ಹನ್ನೊಂದನೆಯ ಅಧ್ಯಾಯದಲ್ಲಿ ಚರ್ಮರೋಗ ನಿವಾರಣಾರ್ಥವಾಗಿ ಹೊರಭಾಗದಲ್ಲಿ ಲೇಪ ಅಂದರೆ ಪಟ್ಟುಹಾಕುವ ಕ್ರಮವೂ, ಹನ್ನೆರಡನೆಯ ಅಧ್ಯಾಯದಲ್ಲಿ ರೋಗನಿವಾರಣಾರ್ಥವಾಗಿ ಶರೀರದಿಂದ ರಕ್ತವನ್ನು ಹೊರಡಿಸುವ ಕ್ರಮವೂ ಅಂದರೆ 'ರಕ್ತಸ್ರಾವ' ವಿಧಿಯೂ, ಹದಿಮೂರನೆಯ ಅಧ್ಯಾಯದಲ್ಲಿ ನೇತ್ರ ರೋಗಗಳಿಗೆ ನಾನಾವಿಧಗಳಾದ ಚಿಕಿತ್ಸೆಗಳೂ ಹೇಳಲ್ಪಡುತ್ತವೆ

ದ್ವಾತ್ರಿಂಶತ್ಸಂಮಿತಾಧ್ಯಾಯೈರ್ಯುಕ್ತೋಯಂ ಸಂಹಿತಾಸ್ಮೃತಾ ||೧೩||
ಷಡ್ವಿಂಶತಿಶತಾನ್ಯತ್ರ ಶ್ಲೋಕಾನಾಂ ಗಣಿತಾನಿ ಚ ||

ಈ ಶಾರ್ಙ್ಗಧರಸಂಹಿತೆಯಲ್ಲಿ ಮೂವತ್ತೆರಡು ಅಧ್ಯಾಯಗಳೂ, ಇಪ್ಪತ್ತಾರು ನೂರು ಶ್ಲೋಕಗಳೂ ಇವೆ ಬೇರೆ ಯಾರೂ ಯಾವ ವಿಧವಾದ ಹೆಚ್ಚುಕಡಮೆಯೂ, ಮಾಡಬಾರದೆಂಬ ಅಭಿಪ್ರಾಯದಿಂದ ಈ ರೀತಿಯಾಗಿ ಲೆಕ್ಕ ಹೇಳಿರುತ್ತಾನೆ

ನಮಾನೇನ ವಿನಾಯುಕ್ತಿರ್ದ್ರವ್ಯಾಣಾಂ ಜಾಯತೇ ಕ್ವಚಿತ್ ||೧೪||
ಅತಃ ಪ್ರಯೋಗಕಾರ್ಯಾರ್ಥಂ ಮಾನಮುತ್ರೋಚ್ಯತೇ ಮಯಾ ||

ಪ್ರಥಮತಃ ದ್ರವ್ಯಗಳನ್ನು ಸಂಯೋಜನಮಾಡಿ ಔಷಧಗಳನ್ನು ನಿರ್ಮಾಣ ಮಾಡುವುದಕ್ಕಾಗಲಿ, ಕೊಡುವುದಕ್ಕಾಗಲಿ ಒಂದು ಪ್ರಮಾಣ ಎಂದರೆ ಅಳತೆ ಅವಶ್ಯಕ. ಆಯುರ್ವೇದ ಕಾಲದಲ್ಲಿ ನಾಣ್ಯಗಳನ್ನು ಅಳತೆಗೆ ಪರಿಮಾಣವಾಗಿ ಉಪಯೋಗಿಸುತ್ತಿರಲಿಲ್ಲ. ಚಿಕ್ಕದಾದ ಸಾಸುವೆಯನ್ನೆ ಕೈಗೆ ಸಿಕ್ಕುತ್ತಿದ್ದದ್ದರಿಂದ ಅದನ್ನೇ ಅಳತೆಯ ಮೊದಲನೆಯ ಮೆಟ್ಟಿಲಾಗಿ ನಿಲ್ಲಿಸಿಕೊಂಡು ಅಳತೆ ಮಾಡುವ ಸಂಪ್ರದಾಯವಿತ್ತು. ಪೂರ್ವದಲ್ಲಿ ಅಂದರೆ ಆಯುರ್ವೇದ ವೈದ್ಯವು ಸರ್ವಮಾನ್ಯವಾಗಿದ್ದ ಕಾಲದಲ್ಲಿ ಕಳಿಂಗದೇಶ, ಮಗಧದೇಶ ಎಂಬ ಎರಡು ರಾಜ್ಯಗಳು ಅತ್ಯುಚ್ಛ್ರಾಯ ಸ್ಥಿತಿಯಲ್ಲಿದ್ದವು. ಆ ದೇಶಗಳಲ್ಲಿ ಪ್ರಚಾರದಲ್ಲಿದ್ದ ಅಳತೆಯ ಪ್ರಮಾಣವೇ ಆಯುರ್ವೇದ ಔಷಧಗಳ ನಿರ್ಮಾಣ ಮತ್ತು ಪ್ರಯೋಗದಲ್ಲಿ ವಾಡಿಕೆಯಾಗಿದೆ. ಅವುಗಳನ್ನೇ ಇಲ್ಲಿಯೂ ಹೇಳಿದ್ದಾರೆ. ಮೇಲಿನ ಶ್ಲೋಕದಲ್ಲಿ ವೈದ್ಯಶಾಸ್ತ್ರಕ್ಕೆ ಅಳತೆಯಿಂದ ಉಪಯೋಗವೇನು? ಎಂಬ ವಿಚಾರವನ್ನು ಹೇಳಿದ್ದಾರೆ. ಔಷಧೋಪಯೋಗಗಳಾದ ದ್ರವ್ಯಗಳನ್ನು ಪರಸ್ಪರ ಸೇರಿಸುವುದಕ್ಕೂ,

ಅದನ್ನು ರೋಗನಿದಾನವರಿತು ಪ್ರಯೋಗಿಸುವುದಕ್ಕೂ, ಅಳತೆಯು ಅತ್ಯವಶ್ಯಕವಾದ್ದರಿಂದ ಆ ವಿಚಾರವನ್ನು ಹೇಳುತ್ತೇವೆ.

### ಮಾಗಧಪರಿಭಾಷೆ. (ಮಗಧದೇಶದ ಅಳತೆ.)

ತ್ರಸರೇಣುರ್ಬುಧೈಃ ಪ್ರೋಕ್ತಸ್ತ್ರಿಂಶತಾಪರಮಾಣುಭಿಃ ॥೧೫॥
ತ್ರಸರೇಣುಸ್ತು ಪರ್ಯಾಯನಾಮ್ನಾ ವಂಶೀ ನಿಗದ್ಯತೇ ॥
ಜಾಲಾಂತರಗತೇ ಭಾನೌ ಯತ್ಸೂಕ್ಷ್ಮಂ ದೃಶ್ಯತೇ ರಜಃ ॥ ೧೬ ॥
ತಸ್ಯ ತ್ರಿಂಶತಮೋ ಭಾಗಃ ಪರಮಾಣುಸ್ಸ ಕಥ್ಯತೇ॥
ಜಾಲಾಂತರಗತೈಸ್ಸೂರ್ಯಕರೈರ್ವಂಶೀ ವಿಲೋಕ್ಯತೇ ॥ ೧೭ ॥
ಷಡ್ವಂಶೀಭಿರ್ಮರೀಚಿಸ್ಸ್ಯಾತ್ತಾಭಿಷಡ್ಭಿಸ್ತು ರಾಜಿಕಾ ॥
ತಿಸೃಭಿ ರಾಜಿಕಾಭಿಶ್ಚ ಸರ್ಷಪಃ ಪ್ರೋಚ್ಯತೇ ಬುಧೈಃ ॥ ೧೮ ॥
ಯವೋಷ್ಟಸರ್ಷಪೈಃ ಪ್ರೋಕ್ತೋ ಗುಂಜಾ ಸ್ಯಾತ್ತಚ್ಚತುಷ್ಟಯಂ॥
ಷಡ್ಭಿಸ್ತು ರಕ್ತಿಕಾಭಿಸ್ಸ್ಯಾನ್ಮಾಷಕೋ ಹೇಮಧಾನ್ಯಕೌ॥ ೧೯ ॥
ಮಾಷೈಶ್ಚತುರ್ಭಿಶ್ಶಾಣಸ್ಸ್ಯಾದ್ಧರಣಸ್ಸ ನಿಗದ್ಯತೇ ॥
ಟಂಕಸ್ಸ ಏವ ಕಥಿತಸ್ತದ್ದ್ವಯಂ ಕೋಲ ಉಚ್ಯತೇ ॥ ೨೦ ॥
ಕ್ಷುದ್ರಕೋ ವಟಕಶ್ಚೈವ ದ್ರಂಕ್ಷಣಸ್ಸ ನಿಗದ್ಯತೇ॥
ಕೋಲದ್ವಯಂ ಚ ಕರ್ಷಸ್ಸ್ಯಾತ್ಸ ಪ್ರೋಕ್ತಃ ಪಾಣಿಮಾನಿಕಾ॥೨೧॥
ಅಕ್ಷಂ ಪಿಚುಃ ಪಾಣಿತಲಂ ಕಿಂಚಿತ್ಪಾಣಿಶ್ಚ ತಿಂದುಕಂ ॥
ಬಿಡಾಲಪದಕಂ ಚೈವ ತಥಾ ಷೋಡಶಿಕಾ ಮತಾ ॥ ೨೨ ॥
ಕರಮಧ್ಯೋ ಹಂಸಪದಂ ಸುವರ್ಣಂ ಕವಲಗ್ರಹಃ ॥
ಉದುಂಬರಂ ಚ ಪರ್ಯಾಯೈಃ ಕರ್ಷ ಏವ ನಿಗದ್ಯತೇ ॥೨೩॥
ಸ್ಯಾತ್ಕರ್ಷಾಭ್ಯಾಮರ್ಧಪಲಂ ಶುಕ್ತಿರಷ್ಟಮಿಕಾ ತಥಾ॥
ಶುಕ್ತಿಭ್ಯಾಂ ಚ ಪಲಂ ಜ್ಞೇಯಂ ಮುಷ್ಟಿರಾಮ್ರಂ ಚತುರ್ಥಿಕಾ॥೨೪॥
ಪ್ರಕುಂಚಷ್ಷೋಡಶೀ ಬಿಲ್ವಂ ಪಲಮೇವಾತ್ರ ಕೀರ್ತ್ಯತೇ ॥
ಪಲಾಭ್ಯಾಂ ಪ್ರಸೃತಿರ್ಜ್ಞೇಯಾ ಪ್ರಸೃತಶ್ಚ ನಿಗದ್ಯತೇ ॥ ೨೫ ॥
ಪ್ರಸೃತಿಭ್ಯಾಮಂಜಲಿಸ್ಸ್ಯಾತ್ ಕುಡವೋರ್ಧಶರಾವಕಃ ॥
ಅಷ್ಟಮಾನಂ ಚ ಸಜ್ಞೇಯಃ ಕುಡವಾಭ್ಯಾಂ ಚ ಮಾನಿಕಾ ॥೨೬॥
ಶರಾವೋಷ್ಟಪಲಂ ತದ್ವತ್ ಜ್ಞೇಯಮತ್ರ ವಿಚಕ್ಷಣೈಃ ॥
ಶರಾವಾಭ್ಯಾಂ ಭವೇತ್ ಪ್ರಸ್ಥಃ ಚತುಷ್ಪ್ರಸ್ಥೈಸ್ತಥಾಢಕಂ ॥೨೭॥
ಭಾಜನಂ ಕಾಂಸ್ಯಪಾತ್ರಂ ಚ ಚತುಷ್ಷಷ್ಟಿಪಲಂ ಚ ತತ್ ॥
ಚತುರ್ಭಿರಾಢಕೈರ್ದ್ರೋಣಃ ಕಲಶೋ ನಲ್ವಣೋರ್ಮಣಃ ॥೨೮॥
ಉನ್ಮಾನಶ್ಚ ಘಟೋ ರಾಶಿರ್ದ್ರೋಣಪರ್ಯಾಯವಾಚಕಾಃ ॥
ದ್ರೋಣಾಭ್ಯಾಂ ಶೂರ್ಪಕುಂಭೌ ಚ ಚತುಷ್ಷಷ್ಟಿಶರಾವಕಾಃ ॥೨೯॥
ಶೂರ್ಪಾಭ್ಯಾಂ ಚ ಭವೇದ್ದ್ರೋಣೀ ವಾಹೀ ಗೋಣೀ ಚ ಸಾ ಸ್ಮೃತಾ ॥
ದ್ರೋಣೀ ಚತುಷ್ಟಯಂ ಖಾರೀ ಕಥಿತಾ ಸೂಕ್ಷ್ಮಬುದ್ಧಿಭಿಃ ॥೩೦॥

**ಚತುಸ್ಸಹಸ್ರಪಲಿಕಾಷಣ್ಣವತ್ಯಧಿಕಾಚ ಸಾ ||**
**ಪಲಾಭ್ಯಾಂದ್ವಿಸಹಸ್ರಂಚಭಾರಏಕಃಪ್ರಕೀರ್ತಿತಃ ||೩೧||**
**ತುಲಾಪಲಶತಂಜ್ಞೇಯಾಸರ್ವತ್ರೈವೇಷನಿಶ್ಚಯಃ ||**

ಪರಿಮಾಣವನ್ನು ಹೇಳುವ ಮೊದಲು ಸೂಕ್ಷ್ಮಪದಾರ್ಥವನ್ನು ಹೇಳಿ ನಂತರ ಪ್ರಾರಂಭಿಸುತ್ತಾನೆ. ಕಿಟಕಿಇಂದ ಮನೆಯೊಳಕ್ಕೆ ಬಿಸಲು ಬೀಳುವುದಕ್ಕೆ ಬಿಸಲು ಕೋಲು ಎಂದು ಹೆಸರು. ಅದರಲ್ಲಿ ನೋಡಿದರೆ ಕೆಲವು ಸಣ್ಣ ಪದಾರ್ಥಗಳು ಹಾರಾಡುವಂತೆ ಕಾಣುತ್ತವೆ. ಆ ಕಾಣತಕ್ಕ ಒಂದು ಸಣ್ಣ ವಸ್ತುವನ್ನು ಮೂವತ್ತು ಭಾಗ ಮಾಡಿದ್ದಲ್ಲಿ ಕಣ್ಣಿಗೆ ಕಾಣಿಸದಷ್ಟು ಸಣ್ಣ ಆ ಒಂದು ಭಾಗಕ್ಕೆ ಪರಮಾಣು ಎಂದು ಹೆಸರು. ಕಣ್ಣಿಗೆ ಕಾಣಿಸದ ಆ ಮೂವತ್ತು ಭಾಗಗಳೂಕೂಡಿ ಬಿಸಲುಕೋಲಿನಲ್ಲಿ ಹಾರಾಡುತ್ತಿರುವ ಕಣ್ಣಿಗೆ ಕಾಣಿಸತಕ್ಕ ಒಂದು ಸಣ್ಣ ಪದಾರ್ಥವಾಗುತ್ತದೆ ಇದಕ್ಕೇನೇತ್ರಸರೇಣು ಎಂಬದಾಗಿಯೂ, ಧ್ವಂಸೀ ಎಂಬದಾಗಿಯೂ ಹೆಸರು. ಇಂತಹ ಧ್ವಂಸಿಗಳು ಆರುಕೂಡಿದರೆ ಒಂದು ಮರೀಚಿ ಎನ್ನಿಸುತ್ತದೆ ಅಂತಹ ಆರು ಮರೀಚಿಗಳು ಕೂಡಿದಲ್ಲಿ ಒಂದು ರಾಜಿಕಾ ಎನ್ನಿಸುತ್ತದೆ. ಅಂದರ ಸ್ವಲ್ಪ ಹೆಚ್ಚು ಕಡಮೆ ರಾಗಿಕಾಳೆನ್ನಬಹುದು. ಅಂತಹ ಮೂರು ರಾಜಿಕೆಗಳು ಸೇರಿದರ ಒಂದು ಸರ್ಷಪ ಅಂದರ ಸಾಸುವೆಕಾಳೆನ್ನಬಹುದು. ಅಂತಹ ಎಂಟು ಸರ್ಷಪಗಳು ಸೇರಿ ಒಂದು ಯುವ ಎನ್ನಿಸಿಕೊಳ್ಳುತ್ತದೆ. ಸ್ವಲ್ಪ ಹೆಚ್ಚುಕಡಮೆ ಗೋಧಿಕಾಳೆನ್ನಬಹುದು ಅಂತಹ ನಾಲ್ಕು ಯುವೆಗಳು ಸೇರಿ ಒಂದು ಗುಂಜಿ ಎನ್ನಿಸಿಕೊಳ್ಳುತ್ತದೆ. ಇಂತಹ ಆರು ಗುಂಜಗಳು ಸೇರಿ ಒಂದು ಮಾಷ ವೆನ್ನಿಸುತ್ತದೆ. ಈ ಮಾಷವನ್ನೇ ಹೇಮ, ಧಾನ್ಯಕ ಎಂಬ ಪರ್ಯಾಯ ನಾಮಗಳಿಂದ ವ್ಯವಹರಿಸುವದುಂಟು. ನಾಲ್ಕು ಮಾಷಗಳಿಗೆ ಒಂದು ಶಾಣ ಈ ಶಾಣವೆಂಬುವುದನ್ನೇ ಧರಣ, ಟಂಕ, ಎಂದು ಕರೆಯುವ ರೂಢಿಯುಂಟು. ಎರಡು ಶಾಣಗಳಿಗೆ ಒಂದು ಕೋಲ ಎಂಬ ಹೆಸರು ಈ ಕೋಲವೆಂಬುವುದನ್ನೇ ಕ್ಷುದ್ರಕ, ವಟಕ, ದ್ರಂಕ್ಷಣ ಎಂಬ ಪರ್ಯಾಯಪದಗಳಿಂದ ವ್ಯವಹರಿಸುವ ರೂಢಿ ಇದೆ ಎರಡು ಕೋಲಗಳು ಒಂದು ಕರ್ಷ. ಈ ಕರ್ಷ ಎಂಬುವುದನ್ನೇ ಪಾಣಿಮಾನಿಕಾ, ಅಕ್ಷಂ, ಪಿಚುಃ, ಪಾಣಿತಲಂ, ಕಿಂಚಿತ್ಪಾಣಿಃ, ತಿಂದುಕಂ, ಬಿಡಾಲಪದಕಂ, ಷೋಡಶಿಕಾ, ಕರಮಧ್ಯಃ, ಹಂಸಪದ, ಸುವರ್ಣ, ಕವಲಗ್ರಹ, ಉದುಂಬರ ಎಂಬದಾಗಿ ಹದಿಮೂರು ಹೆಸರುಗಳಿಂದ ವ್ಯವಹರಿಸುತ್ತಾರೆ ಈ ಕರ್ಷವೆಂಬ ಪರಿಮಾಣವು ಸುಮಾರು ತಾರೇಕಾಯಿನಷ್ಟು ತೂಕವಾಗಿಯೂ ಮೂರು ಬೆರಳಿನಲ್ಲಿ ಹಿಡಿಯಬಹುದಾದಷ್ಟು ಚೂರ್ಣವಾಗಿಯೂ ಆಗಬಹುದು ಎರಡು ಕರ್ಷಗಳಿಗ ಅರ್ಧಪಲ, ಇದಕ್ಕೇನೇ ಶುಕ್ತಿ, ಅಷ್ಟಮಿಕ ಎಂಬ ಪರ್ಯಾಯ ಪದಗಳಿವೆ. ಎರಡು ಶುಕ್ತಿಗಳಿಗೆ ಒಂದು ಪಲ, ಈ ಪಲಕ್ಕೇನೇ ಮುಷ್ಟಿ, ಆಮ್ರ, ಚತುರ್ಥಿಕ, ಪ್ರಕುಂಚ, ಷೋಡಶಿ, ಬಿಲ್ವ ಎಂಬದಾಗಿ ಪರ್ಯಾಯನಾಮಗಳುಂಟು, ಎರಡು ಪಲಗಳಿಗೆ ಪ್ರಸೃತಿ ಎಂಬದಾಗಿಯೂ ಪ್ರಸೃತ ಎಂಬದಾಗಿಯೂ ಹೆಸರು ಎರಡು ಪ್ರಸೃತಿಗಳಿಗೆ ಒಂದು ಅಂಜಲಿ. ಈ ಅಂಜಲಿ ಎನ್ನುವುದಕ್ಕೇನೇ ಕುಡವ, ಅರ್ಧಶರಾವ, ಅಷ್ಟಮಾನ ಎಂಬ ಹೆಸರುಗಳು. ಎರಡು ಕುಡವಗಳಿಗೆ ಒಂದು ಮಾನಿಕೆ. ಈ ಮಾನಿಕಾ ಎಂಬದಕ್ಕೇನೇ ಶರಾವ, ಅಷ್ಟಪಲ,

ಎಂಬ ಹೆಸರುಗಳುಂಟು. ಎರಡು ಶರಾವಗಳಿಗೆ ಒಂದು ಪ್ರಸ್ಥ, ನಾಲ್ಕು ಪ್ರಸ್ಥಗಳಿಗೆ ಒಂದು ಆಢಕ, ಈ ಆಢಕವೆಂಬುದನ್ನೇ ಭಾಜನ, ಕಾಂಸ್ಯಪಾತ್ರ, ಚತುಷ್ಷಷ್ಟಿಪಲ ಎಂಬ ಪರ್ಯಾಯನಾಮಗಳಿಂದ ವ್ಯವಹರಿಸುವದುಂಟು. ನಾಲ್ಕು ಆಢಕಗಳಿಗೆ ಒಂದು ದ್ರೋಣ, ಈ ದ್ರೋಣವೆಂಬುವುದನ್ನೇ ಕಲಶ, ನಲ್ವಣ, ಅರ್ಮಣ, ಉನ್ಮಾನ, ಘಟ, ರಾಶಿ ಎಂಬ ಪರ್ಯಾಯನಾಮಗಳಿಂದ ಕರೆಯುತ್ತಾರೆ. ಎರಡು ದ್ರೋಣಗಳಿಗೆ ಒಂದು ಶೂರ್ಪ; ಈ ಶೂರ್ಪ ಎಂಬುವುದಕ್ಕೇನೆ ಕುಂಭ ಎಂಬದಾಗಿಯೂ, ಚತುಷ್ಷಷ್ಟಿಶರಾವ ಎಂಬದಾಗಿಯೂ ಪರ್ಯಾಯನಾಮಗಳು ಎರಡು ಶೂರ್ಪಗಳಿಗೆ ಒಂದು ದ್ರೋಣಿ, ಈ ದ್ರೋಣಿ ಎಂಬುದನ್ನೇ ವಹಿ, ಗೋಣಿ ಎಂದು ಕರೆಯುತ್ತಾರೆ. ನಾಲ್ಕು ದ್ರೋಣಿಗಳಿಗೆ ಒಂದು ಖಾರಿ, ಈ ಖಾರಿ ಎನ್ನುವುದು ನಾಲ್ಕುಸಾವಿರದ ತೊಂಬತ್ತಾರು ಪಲಗಳಾಗುತ್ತದೆ ಎರಡು ಸಾವಿರ ಪಲಗಳಿಗೆ ಒಂದು ಭಾರವೆಂಬದಾಗಿಯೂ ನೂರು ಪಲಗಳಿಗೆ ಒಂದು ತುಲಾ ಎಂಬದಾಗಿಯೂ ಪ್ರಮಾಣಗಳು ನಿಶ್ಚಿತಗಳಾಗಿವೆ

**ಮಾಷಟಂಕಾಕ್ಷಬಿಲ್ವಾನಿಕುಡವಃ ಪ್ರಸ್ಥಮಾಢಕಂ || ೩೨ ||**
**ರಾಶಿರ್ಗೋಣೀಖಾರಿಕೇತಿಯಥೋತ್ತರಚತುರ್ಗುಣಾಃ ||**

ಹಿಂದೆ ಹೇಳಿರುವ ಮಾಷ, ಟಂಕ, ಅಕ್ಷ, ಬಿಲ್ವ, ಕುಡವ, ಪ್ರಸ್ಥ, ಆಢಕ, ರಾಶಿ, ಗೋಣಿ, ಖಾರಿ ಎಂಬವುಗಳಲ್ಲಿ ಒಂದಕ್ಕಿಂತ ಮತ್ತೊಂದು ಉತ್ತರೋತ್ತರ ನಾಲ್ಕರಷ್ಟು ಹೆಚ್ಚೆಂದು ತಿಳಿಯಬೇಕು ಅಂದರೆ ಮಾಷದ ನಾಲ್ಕರಷ್ಟು ಟಂಕ, ಟಂಕದ ನಾಲ್ಕರಷ್ಟು ಬಿಲ್ವ, ಬಿಲ್ವದ ನಾಲ್ಕರಷ್ಟು ಕುಡವ ಈ ರೀತಿ ತಿಳಿಯಬೇಕು.

**ಗುಂಜಾದಿಮಾನಮಾರಭ್ಯಯಾವತ್ ಸ್ಯಾತ್ಕುಡವಸ್ಥಿತಿಃ || ೩೩ ||**
**ದ್ರವಾರ್ದ್ರಶುಷ್ಕದ್ರವ್ಯಾಣಾಂ ತಾವನ್ಮಾನಂ ಸಮಂಮತಂ ||**

ಹಿಂದೆ ಹೇಳಿರುವ ಪ್ರಮಾಣದಲ್ಲಿ ಗುಂಜದಿಂದ ಮೊದಲು ಮಾಡಿಕೊಂಡು ಕುಡವ ಎಂಬ ಪ್ರಮಾಣದವರೆಗೂ ದ್ರವಪದಾರ್ಥ ಮತ್ತು ಶುಷ್ಕವಸ್ತುಗಳ ಪ್ರಮಾಣ ಎರಡೂ ಒಂದೇ ವಿಧವೆಂದು ತಿಳಿಯುವುದು.

**ಪ್ರಸ್ಥಾದಿಮಾನಮಾರಭ್ಯದ್ವಿಗುಣಂತದ್ದ್ರವಾರ್ದ್ರಯೋಃ || ೩೪ ||**
**ಮಾನಂ ತಥಾ ತುಲಾಯಾಸ್ತು ದ್ವಿಗುಣಂನಕ್ವಚಿತ್ಸ್ಮೃತಂ ||**

ಪ್ರಸ್ಥಪ್ರಮಾಣದಿಂದ ಮೊದಲು ಮಾಡಿಕೊಂಡು ತುಲಾ ಪ್ರಮಾಣದವರೆಗೂ ಹಸಿಯಾದ ಮೂಲಿಕಾದಿಗಳನ್ನು ಒಣಗಿದ್ದರ ಎರಡರಷ್ಟು ಉಪಯೋಗಿಸಬೇಕು ಆದರೆ ತುಲಾ ಎಂಬ ಪರಿಮಾಣ ಮಾತ್ರ ಹಸಿ ಮತ್ತು ಒಣಗಿದ ಪದಾರ್ಥಗಳ ವಿಷಯದಲ್ಲಿ ದ್ವಿಗುಣವೆಂದು ಎಲ್ಲಿಯೂ ಹೇಳಿಲ್ಲ

**ಮೃದ್ವೃಕ್ಷವೇಣುಲೋಹಾದೇರ್ಭಾಂಡಂಯಚ್ಚತುರಂಗುಲಂ || ೩೫ ||**
**ವಿಸ್ತೀರ್ಣಂಚತಥೋಚ್ಚಂಚ ತನ್ಮಾನಂಕುಡವಂ ವದೇತ್ ||**

ದ್ರವದ್ರವ್ಯಗಳನ್ನು ಅಳತೆ ಮಾಡತಕ್ಕ ಸಾಧನವನ್ನು ಹೇಳುತ್ತಾನೆ ಮಣ್ಣಿನಿಂದಲಾಗಲಿ, ಬಿದಿರಿನಿಂದಲಾಗಲಿ, ಮರದಿಂದಲಾಗಲಿ, ಲೋಹದಿಂದಲಾಗಲಿ ನಾಲ್ಕು ಅಂಗುಲ ಅಗಲ, ನಾಲ್ಕು ಅಂಗುಲ ಉನ್ನವಾದ ಒಂದು ದುಂಡಾದ ಪಾತ್ರೆಯನ್ನು ಮಾಡಿಕೊಂಡು ಅದರಲ್ಲಿ ತುಂಬಾ ಒಂದು ಸಾರಿ ಅಳತೆ ಮಾಡಿದರೆ ಅದಕ್ಕೆ ಒಂದು ಕುಡವವೆಂದು ಹೆಸರು

**ಯದೌಷಧಂತುಪ್ರಥಮಂಯಸ್ಯಯೋಗಸ್ಯಕಥ್ಯತೇ ॥ ೩೬ ॥**
**ತನ್ನಾಮ್ನೈವಸಯೋಗೋಹಿಕಥ್ಯತೇತ್ರವಿನಿಶ್ಚಯಃ ॥**

ಆಯುರ್ವೇದ ಔಷಧ ಪ್ರಪಂಚದಲ್ಲಿ ಯಾವುದಾದರೂ ಒಂದು ಔಷಧಕ್ಕೆ ಒಂದು ಹೆಸರನ್ನಿಡಬೇಕಾದರೆ ಆ ಔಷಧ ಯೋಗದಲ್ಲಿ ಮುಖ್ಯವಾಗಿಯೂ ಮತ್ತು ಮೊದಲು ಹೇಳಲ್ಪಟ್ಟಿದ್ದಾಗಿಯೂ ಇರುವ ವಸ್ತುವಿನ ಹೆಸರಿನಿಂದಲೇ ಕರೆಯಲ್ಪಡಬೇಕಾದದ್ದು. ಉದಾಹರಣೆಗಾಗಿ "**.ತಾಳೀಸಾದಿಚೂರ್ಣ**" ಇದು ಕೆಮ್ಮಿಗೋಸ್ಕರವಾಗಿ ಮಾಡುವುದು ತಾಳಿಸಪತ್ರೆಯೆ ಪ್ರಧಾನ ಮೂಲಿಕೆ, ಅದನ್ನೇ ಮೊದಲು ಹೇಳಿರುವುದು. ಆದ್ದರಿಂದಲೇ ಅದಕ್ಕೆ ತಾಳೀಸಾದಿಚೂರ್ಣವೆಂಬ ಹೆಸರು ಕೊಡಲ್ಪಟ್ಟಿದೆ. ಕೆಲವುಕಡೆ ರೋಗೋಪಯುಕ್ತವಾದ ಹೆಸರುಗಳನ್ನೂ ಕೊಡುವುದುಂಟು. "**ಪ್ರದರಾರಿ. ಜ್ವರಾಂಕುಶ**" ಇತ್ಯಾದಿಗಳು. ಆದ್ದರಿಂದ ಮೇಲಿನ ಶ್ಲೋಕದಲ್ಲಿ ಹೇಳಿರುವುದೇನೂ ನಿಯಮವಲ್ಲ.

**ಸ್ಥಿತಿರ್ನಾಸ್ತ್ಯೇವಮಾತ್ರಾಯಾಃ ಕಾಲಮಗ್ನಿಂವಯೋಬಲಂ ॥೩೭॥**
**ಪ್ರಕೃತಿಂದೋಷದೇಶೌಚದೃಷ್ಟ್ವಾಮಾತ್ರಾಂ ಪ್ರಕಲ್ಪಯೇತ್ ॥**
**ಯತೋಮಂದಾಗ್ನಯೋಹ್ರಸ್ವಾಹೀನಸತ್ವಾನರಾಃಕಲೌ ॥ ೩೮ ॥**
**ಅತಸ್ತುಮಾತ್ರಾತದ್ಯೋಗ್ಯಾಪ್ರೋಚ್ಯತೆಸುಜ್ಞಸಂಮತಾ ॥**

ಕೆಲವುಜನ ಆಯುರ್ವೇದ ವೈದ್ಯರುಗಳ ಅಭಿಪ್ರಾಯವೇನಂದರೆ- ಔಷಧವನ್ನು ಕೊಡತಕ್ಕ ಪರಿಮಾಣವನ್ನು ನಿರ್ಣಯಿಸಿ ಹೇಳುವುದು ಸಾಧ್ಯವಿಲ್ಲ ಯಾತಕ್ಕೆಂದರೆ ಆಯುರ್ವೇದವು ಋಷಿಗಳು ಪ್ರಚಾರಮಾಡಿದ ಕಾಲದಲ್ಲಿ ಮನುಷ್ಯರ ಕಾಯಶಕ್ತಿ, ಕಾಲಸ್ಥಿತಿ, ಶೀತೋಷ್ಣಗಳು, ಪದಾರ್ಥಗಳ ಗುಣಗಳು ಮೊದಲಾದವುಗಳು ಇದ್ದ ಹಾಗೆ ಈ ಕಲಿಯುಗದಲ್ಲಿ ಇಲ್ಲ. ಕಲಿಯುಗದಲ್ಲಿ ಮನುಷ್ಯರ ಅಗ್ನಿಪಾಟವ, ದೇಹಶಕ್ತಿ ಮೊದಲಾದವುಗಳೆಲ್ಲಾ ಕಡಮೆಯಾಗಿವೆ. ಆದ್ದರಿಂದ ಈಗಿನ ಕಾಲದ ಮನುಷ್ಯರ ಸ್ಥಿತಿಗತಿಗಳಿಗನುಗುಣವಾಗಿ ಔಷಧ ಪ್ರಮಾಣವನ್ನು ಸ್ವಾನುಭವದಿಂದ ವೈದ್ಯನೇ ನಿಶ್ಚಯಿಸಿಕೊಳ್ಳಬೇಕು ಮುಂದೆ ಹೇಳುವ "**ಕಳಿಂಗ ಪರಿಭಾಷೆ**" ಎಂಬ ಪ್ರಮಾಣವು ಅನುಕೂಲವಾಗಬಹುದಾದ್ದರಿಂದ ಅದನ್ನು ಹೇಳುತ್ತೇನೆ.

### — ಕಳಿಂಗಪರಿಭಾಷೆ —

**ಯವೋದ್ವಾದಶಭಿರ್ಗೌರಸರ್ಷಪೈಃಪ್ರೋಚ್ಯತೆಬುಧೈಃ ॥ ೩೯ ॥**
**ಯವದ್ವಯೇನಗುಂಜಾಸ್ಯಾತ್ತ್ರಿಗುಂಜೋವಲ್ಲಉಚ್ಯತೆ ॥**
**ಮಾಷೋಗುಂಜಾಭಿರಷ್ಟಾಭಿಸ್ಸಪ್ತಭಿರ್ವಾಭವೇತ್ಕ್ವಚಿತ್ ॥ ೪೦ ॥**
**ಸ್ಯಾಚ್ಚತುರ್ಮಾಷಕೈಶ್ಶಾಣಃಸನಿಷ್ಕಃಟಂಕಏವಚ ॥**
**ಗದ್ಯಾಣೋಮಾಷಕೈಷಡ್ಭಿಃಕರ್ಷಸ್ಯಾದ್ದಶಮಾಷಕಃ ॥ ೪೧ ॥**
**ಚತುಷ್ಕರ್ಷೈಃಪಲಂಪ್ರೋಕ್ತಂದಶಶಾಣಮಿತಂಬುಧೈಃ ॥**
**ಚತುಷ್ಪಲೈಶ್ಚಕುಡವಂಪ್ರಸ್ಥಾದ್ಯಾಃಪೂರ್ವವನ್ಮತಾಃ ॥ ೪೨ ॥**

ಹನ್ನೆರಡು ಬಿಳೀ ಸಾಸುವೆಯ ತೂಕಕ್ಕೆ ಒಂದು ಯವ ಎಂಬ ಹೆಸರು. ಎರಡು ಯವೆಗಳ ತೂಕಕ್ಕೆ ಒಂದು ಗುಂಜ ಎಂಬ ಹೆಸರು. ಮೂರು ಗುಂಜಗಳ ತೂಕಕ್ಕೆ ವಲ್ಲ ಎಂದು ಹೆಸರು. ಎಂಟು ಗುಂಜಗಳ ತೂಕಕ್ಕೆ ಒಂದು ಮಾಷವೆಂಬ ಹೆಸರು. ಏಳು

ಗುಂಜಗಳ ತೂಕಕ್ಕೂ ಕೆಲವುಕಡೆ ಮಾಷವೆಂಬ ವ್ಯವಹಾರಉಂಟು. ನಾಲ್ಕು ಮಾಷಗಳ ತೂಕಕ್ಕೆ ಒಂದು ಶಾಣವೆಂಬ ಹೆಸರು. ಈ ಶಾಣ ಎಂಬುವುದನ್ನೇ ನಿಷ್ಕ, ಟಂಕ ಎಂಬ ಹೆಸರುಗಳಿಂದ ಕರೆಯುತ್ತಾರೆ. ಆರು ಮಾಷಗಳ ತೂಕಕ್ಕೆ ಒಂದು ಗದ್ಯಾಣವೆಂಬ ಹೆಸರು ಹತ್ತು ಮಾಷಗಳ ತೂಕಕ್ಕೆ ಒಂದು ಕರ್ಷವೆಂಬ ಹೆಸರು. ನಾಲ್ಕು ಕರ್ಷ ಪ್ರಮಾಣಕ್ಕೆ ಒಂದು ಪಲವೆಂದು ಹೆಸರು. ಒಂದು ಪಲವು ಪ್ರಮಾಣದಲ್ಲಿ ಹತ್ತು ಶಾಣ ಗಳಾಗುತ್ತವೆ. ನಾಲ್ಕು ಪಲಗಳಿಗೆ ಒಂದು ಕುಡವವೆಂದು ಹೆಸರು ಅಲ್ಲಿಂದ ಮುಂದೆ ಪ್ರಸ್ಥ ಮೊದಲಾದವುಗಳೆಲ್ಲಾ ಮಗಧ ಪರಿಭಾಷೆಯಲ್ಲಿ ಹೇಳಿರುವಂತೆಯೇ ಎಂದು ತಿಳಿದುಕೊಳ್ಳಬೇಕು.

**ಕಾಳಿಂಗಂ ಮಾಗಧಂಚೇತಿದ್ವಿವಿಧಂ ಮಾನಮುಚ್ಯತೆ ||**
**ಕಲಿಂಗಾನ್ಮಾಗಧಂ ಶ್ರೇಷ್ಠಂ ಮಾನಂ ಮಾನವಿದೋವಿದುಃ || ೪೩ ||**

ಅಳತೆಯ ಪರಿಭಾಷೆಗಳು ಅಂದರೆ ಲೆಕ್ಕಪ್ರಮಾಣಗಳು ಕಳಿಂಗ, ಮಗಧ ಎಂದು ದೇಶಭೇದದಿಂದ ಎರಡು ವಿಧವಾಗಿ ಹಿಂದೆ ಹೇಳಿದೆ ಈ ಎರಡರಲ್ಲಿ ಕಳಿಂಗ ಪರಿಭಾಷೆಗಿಂತ ಮಗಧ ಪರಿಭಾಷೆಯಲ್ಲಿ ಬಹಳ ಸೂಕ್ಷ್ಮವಾದ ಅಳತೆಗಳ ವಿಷಯಗಳೆಲ್ಲಾ ಹೇಳಿಸೆಯಾಗಿ ಮಗಧ ಪರಿಭಾಷೆಯು ಉತ್ತಮೋತ್ತಮವೆಂದು ಅಭಿಪ್ರಾಯ.

**ವೈದ್ಯರ ಸೌಕರ್ಯಕ್ಕಾಗಿ ಅಳತೆಯ ತಾರತಮ್ಯವನ್ನು ತೋರಿಸಿದೆ.**

| ಸರ್ಷಪಾದಿಮಾನ ( ಕಳಿಂಗ ) | ವ್ರೀಹ್ಯಾದಿಮಾನ | ಪರಮಾಣ್ವಾದಿಮಾನ ( ಮಾಗಧ ) |
|---|---|---|
| ೧೨ ಸರ್ಷಪ — ೧ ಯವ | ೪ ವ್ರೀಹಿ — ೧ ಗುಂಜ | ೩೦ಪರಮಾಣು-೧ತ್ರಸರೇಣು |
| ೨ ಯವ — ೧ ರಕ್ತಿ | ೫ ಗುಂಜ — ೧ ಪಣ | ೬ ತ್ರಸ — ೧ ಮರೀಚಿ. |
| ೩ ರಕ್ತಿ — ೧ ವಲ್ಲ | ೮ ಪಣ — ೧ ಧರಣ | ೬ ಮರೀಚಿ — ೧ ರಾಜಿಕ |
| ೪ ವಲ್ಲ — ೧ ಮಾಷ | ೨ ಧರಣ — ೧ ಕರ್ಷ | ೬ ರಾಜಿಕ — ೧ ಸರ್ಷಪ |
| ೪ ಮಾಷ — ೧ ಶಾಣ | ೪ ಕರ್ಷ — ೧ ಪಲ | ೮ ಸರ್ಷಪ — ೧ ಯವ |
| ೨ ಶಾಣ — ೧ ಕರ್ಷ | ೧೦೦ ಪಲ — ೧ ತುಲ | ೪ ಯವ — ೧ ಗುಂಜ |
| ೨ ಕರ್ಷ — ೧ ಶುಕ್ತಿ | ೨೦ ತುಲ — ೧ ಭಾರ | ೫ ಗುಂಜ — ೧ ಪಣ |
| ೨ ಶುಕ್ತಿ — ೧ ಪಲ | | ೬ ಗುಂಜ — ೧ ಮಾಷ |
| ೨ ಪಲ — ೧ ಪ್ರಸೃತಿ | | ೪ಮಾಷ-೧ಶಾಣ ॥ತೊಲ |
| ೨ ಪ್ರಸೃತಿ — ೧ ಕುಡವ | | ೨ ಶಾಣ — ೧ ಕೋಲ |
| ೨ ಕುಡವ — ೧ ಮಾನಿಕ | | ೨ ಕೋಲ — ೧ ಕರ್ಷ |
| ೨ ಮಾನಿಕ — ೧ ಪ್ರಸ್ಥ | | ೨ಕರ್ಷ ೧ಅರ್ಧಪಲ(೨ತೊ॥) |
| ೪ ಪ್ರಸ್ಥ — ೧ ಆಢಕ | | ೨ಅರ್ಧಪಲ-೧ಪಲ ೪ತೊಲ |
| ೪ ಆಢಕ — ೧ ದ್ರೋಣ | | ೨ಪಲ—೧ಪ್ರಸೃತಿ ೮ತೊಲ |
| ೨ದ್ರೋಣ—೧ಶೂರ್ಪ | | ೨ಪ್ರಸೃತಿ-೧ಕುಡವ೧೬ತೊ. |
| ೨ಶೂರ್ಪ — ೧ಖಾರಿಕಾ | | ೨ಕುಡವ-೧ಮಾನಿಕ೩೨ತೊ. |
| ೧೦೦ ಪಲ — ೧ ತುಲ | | ೨ಮಾನಿಕೆ-೧ಪ್ರಸ್ಥ೬೪ತೊ. |

| | | |
|---|---|---|
| ೨೦ ತುಲ — ೧ ಭಾರ | | ೪ ಪ್ರಸ್ಥ ೧ ಆಢಕ ೨೫೬ ತೊ.<br>೪ ಆಢಕ — ೧ ಕಲಸ<br>( ೧೦೨೪ ತೊಲ )<br>೨ ಕಲಸ — ೧ ಶೂರ್ಪ<br>( ೨೦೪೮ ತೊಲ )<br>೨ ಶೂರ್ಪ — ೧ ದ್ರೋಣ<br>( ೪೦೯೬ ತೊಲ )<br>೪ ದ್ರೋಣ — ೧ ಖಾರಿ<br>( ೧೬೩೮೪ ತೊಲ )<br>೧೦೦ ಪಲ — ೧ ತುಲ<br>( ೪೦೦ ತೊಲ )<br>೨೦೦೦ ತುಲ ೧ ಭಾರ<br>( ೮೦೦೦ ತೊಲ ) |

**ನವಾನ್ಯೇವಹಿಯೋಜ್ಯಾನಿದ್ರವ್ಯಾಣ್ಯಖಿಲಕರ್ಮಸು ||**
**ವಿನಾವಿಡಂಗಕೃಷ್ಣಾಭ್ಯಾಂಗುಡಧಾನ್ಯಾಜ್ಯಮಾಕ್ಷಿಕೈಃ || ೪೪ ||**

ಔಷಧಕ್ಕಾಗಿ ಸೇರಿಸತಕ್ಕ ಪದಾರ್ಥಗಳೆಲ್ಲವೂ ಹೊಸದಾಗಿಯೇ ಇರಬೇಕು ಕೆಲವು ವಸ್ತುಗಳು ಅಂದರೆ ವಾಯುವಿಳಂಗ, ಹಿಪ್ಪಲಿ, ಬೆಲ್ಲ, ಧಾನ್ಯ ಅಂದರೆ ಧನಿಯ, ತುಪ್ಪ, ಜೇನುತುಪ್ಪ ಇವುಗಳು ಮಾತ್ರ ಒಂದು ವರುಷದಷ್ಟು ಕಾಲ ಹಳತಾಗಿದ್ದರೂ ಒಳ್ಳೆಯವೇ ಎಂದು ತಾತ್ಪರ್ಯ

**ಗುಡೂಚೀಕುಟಜೋವಾಸಾಕೂಷ್ಮಾಂಡಶ್ಚಶತಾವರೀ ||**
**ಅಶ್ವಗಂಧಾಸಹಚರೀಶತಪುಷ್ಪಾಪ್ರಸಾರಿಣೀ || ೪೫ ||**
**ಪ್ರಯೋಕ್ತವ್ಯಾಸದೈವಾರ್ದ್ರಾದ್ವಿಗುಣಾನ್ನೈವಕಾರಯೇತ್ ||**

ಮೂಲಿಕೆಗಳನ್ನು ಔಷಧದಲ್ಲಿ ಸೇರಿಸುವುದಕ್ಕೆ ಕೆಲವು ನಿಯಮಗಳನ್ನು ಹೇಳುತ್ತಾನೆ ಅಮೃತಬಳ್ಳಿ, ಕೊಡಸಿಗೆ, ಆಡುಸೋಗೆ, ಕುಂಬಳಕಾಯಿ, ಹಲವುಮಕ್ಕಳ ಬೇರು, ಹಿರೇಮದ್ದಿನಬೇರು, ಸಹಚರಿ ಅಂದರೆ ಗೋರಂಟೆ, ಶತಪುಷ್ಪಾ ಅಂದರೆ ಸದಾಪ, ಪ್ರಸಾರಿಣಿ ಎಂಬ ಮೂಲಿಕೆ ಇವುಗಳನ್ನು ಔಷಧಿಯೋಗಗಳಲ್ಲಿ ಸೇರಿಸಬೇಕಾದಲ್ಲಿ ಹಸಿಯಾದದ್ದನ್ನೇ ಸೇರಿಸಬೇಕು ಆದರೆ ಹಸಿಯ ಮೂಲಿಕೆಗಳನ್ನು ಒಣಗಿದ ದ್ರವ್ಯಗಳ ಎರಡರಷ್ಟು ಸೇರಿಸಬೇಕೆಂಬ ಮುಂದೆ ಹೇಳುವ ನಿಯಮವು ಈ ಮೂಲಿಕೆಗಳ ವಿಷಯದಲ್ಲಿ ಅನ್ವಯಿಸುವುದಿಲ್ಲ ಇವುಗಳನ್ನು ದ್ವಿಗುಣವಾಗಿ ಪ್ರಯೋಗಿಸಬಾರದು

**ಶುಷ್ಕಂ ನವೀನಂ ಯದ್ದ್ರವ್ಯಂ ಯೋಜ್ಯಂ ಸಕಲಕರ್ಮಸು || ೪೬ ||**
**ಆರ್ದ್ರಂಚದ್ವಿಗುಣಾಂ ಯುಂಜ್ಯಾದೇಷಸರ್ವತ್ರ ನಿಶ್ಚಯಃ ||**

ಒಣಗಿದ ವಸ್ತುವನ್ನು ಔಷಧಕ್ಕಾಗಿ ಉಪಯೋಗಿಸುವಾಗ್ಗೆ ಹೊಸದಾಗಿರುವುದನ್ನೇ ಉಪಯೋಗಿಸಬೇಕು. ಒಣಗಿದ ಪದಾರ್ಥಗಳ ಜೊತೆಯಲ್ಲಿ ಕೆಲವು ಹಸಿಯ

ಪದಾರ್ಥಗಳನ್ನೂ ಸೇರಿಸಬೇಕಾದಲ್ಲಿ ಒಣಗಿದ್ದರೆ ಎರಡರಷ್ಟನ್ನು ಅಂದರೆ ಒಣಗಿದ್ದರ ಪರಿಮಾಣದ ಎರಡರಷ್ಟನ್ನು ಉಪಯೋಗಿಸಬೇಕು.

**ಕಾಲೇನುಕ್ತೇಪ್ರಭಾತಂಸ್ಯಾದಂಗೇನುಕ್ತೇಜಟಾಭವೇತ್ ॥ ೪೭ ॥**
**ಭಾಗೇನುಕ್ತೇತುಸಾಮ್ಯಂಸ್ಯಾತ್ಪಾತ್ರೇನುಕ್ತೇತುಮೃಣ್ಮಯಂ ॥**
**ದ್ರವೇನುಕ್ತೇಜಲಂಗ್ರಾಹ್ಯಂತೈಲೇನುಕ್ತೇತಿಲೋದ್ಭವಂ ॥ ೪೮ ॥**

ಔಷಧಗಳ ವಿಷಯದಲ್ಲಿ ಇನ್ನೂ ಹೇಳತಕ್ಕ ನಿಯಮಗಳನ್ನೆಲ್ಲಾ ಹೇಳುತ್ತಾನೆ. ಔಷಧವನ್ನು ತೆಗೆದುಕೊಳ್ಳತಕ್ಕ ಕಾಲವನ್ನು ಸರಿಯಾಗಿ ನಿರ್ದೇಶಿಸಿ ಹೇಳದಿದ್ದಲ್ಲಿ ಬೆಳಗಿನ ಹೊತ್ತಿನಲ್ಲಿ ತೆಗದುಕೊಳ್ಳಬೇಕೆಂದು ಗೊತ್ತುಮಾಡಿಕೊಳ್ಳಬೇಕು. ಔಷಧೋಪಯೋಗಿಗಳಾದ ಮೂಲಿಕೆಗಳಲ್ಲಿ ಇಂತಹ ಭಾಗವನ್ನೇ ಉಪಯೋಗಿಸಬೇಕೆಂದು ಹೇಳದಿರುವ ಕಡೆಯಲ್ಲಿ ಬೇರನ್ನು ಉಪಯೋಗಿಸತಕ್ಕದ್ದೆಂದು ತಿಳಿದುಕೊಳ್ಳಬೇಕು. ಔಷಧದಲ್ಲಿ ಉಪಯೋಗಿಸತಕ್ಕ ಮೂಲಿಕೆಗಳನ್ನು ಇಷ್ಟಿಷ್ಟೇ ಸೇರಿಸಬೇಕೆಂಬ ಪ್ರಮಾಣವನ್ನು ಹೇಳದಿದ್ದರೆ ಎಲ್ಲವನ್ನೂ ಒಂದೇ ಸಮಭಾಗವಾಗಿ ಸೇರಿಸತಕ್ಕದ್ದೆಂದು ನಿಶ್ಚಯಿಸಿಕೊಳ್ಳಬೇಕು ಇಂತಹ ಪಾತ್ರೆಯಲ್ಲಿ ಔಷಧವನ್ನು ನಿರ್ಮಿಸಬೇಕೆಂದು ಹೇಳದ ಸ್ಥಳದಲ್ಲಿ ಮಣ್ಣಿನ ಪಾತ್ರೆಯನ್ನು ಉಪಯೋಗಿಸಿಕೊಳ್ಳಬೇಕು. ದ್ರವ ಪದಾರ್ಥ ಇಂತಹದನ್ನೇ ಸೇರಿಸಬೇಕೆಂದು ನಿರ್ದೇಶಿಸದ ಸ್ಥಳದಲ್ಲಿ ನೀರನ್ನೇ ಸೇರಿಸಬೇಕು. ಔಷಧಗಳಿಗೆ ಎಣ್ಣೆಯನ್ನು ಸೇರಿಸಬೇಕಾದ ಸಂದರ್ಭದಲ್ಲಿ ಇಂತಹ ಎಣ್ಣೆಯನ್ನೇ ಸೇರಿಸಬೇಕೆಂಬ ನಿಯಮವಿಲ್ಲದಿದ್ದರೆ ಎಳ್ಳಿನಿಂದ ಮಾಡಿದ ಎಣ್ಣೆಯನ್ನೇ ಉಪಯೋಗಿಸಿಕೊಳ್ಳಬೇಕು

**ಏಕಮಪ್ಯೌಷಧಂ ಯೋಗೇಯಸ್ಮಿನ್ಯತ್ಪುನರುಚ್ಯತೆ ॥**
**ಮಾನತೋದ್ವಿಗುಣಂ ಕಾರ್ಯಂ ತದ್ದ್ರವ್ಯಂ ತತ್ವದರ್ಶಿಭಿಃ ॥ ೪೯ ॥**

ಯಾವುದಾದರೂ ಔಷಧ ಯೋಗದಲ್ಲಿ ಒಂದು ವಸ್ತುವನ್ನು ಎರಡುಸಾರಿ ಹೇಳಿದ್ದಲ್ಲಿ ಅದನ್ನು ಎರಡು ಆಳತೆ ಅಂದರ ಅಲ್ಲಿ ಹೇಳಿರುವ ಪ್ರಮಾಣದಲ್ಲಿ ಎರಡರಷ್ಟನ್ನು ಸೇರಿಸಿಕೊಳ್ಳಬೇಕಂದು ತಾತ್ಪರ್ಯ ಎರಡುಸಾರಿ ಹೇಳಿರುವುದು ಸರಿಯಿಲ್ಲವೆಂದು ಮಾತ್ರ ತಿಳದುಕೊಳ್ಳಬಾರದು.

**ಚೂರ್ಣಸ್ನೇಹಾಸವಾಲೇಹಾಃಪ್ರಾಯಶಶ್ಚಂದನಾನ್ವಿತಾಃ ॥**
**ಕಷಾಯಲೇಪಯೋಃಪ್ರಾಯೋಯುಜ್ಯತೇರಕ್ತಚಂದನಂ ॥ ೫೦ ॥**

ಚೂರ್ಣಗಳು, ತೈಲಗಳು, ಆಸವ ಅರಿಷ್ಟಗಳೆಂಬ ಮದ್ಯಗಳು, ಲೇಹ್ಯಗಳು ಇವುಗಳಿಗೆಲ್ಲಾ ಚಂದನವನ್ನು ಸೇರಿಸುವುದಾದರೆ ಶ್ವೇತಚಂದನ ಅಂದರ ಶ್ರೀಗಂಧವನ್ನೂ, ಕಷಾಯಗಳು ಮತ್ತು ಲೇಪಗಳು ಅಂದರೆ ಪಟ್ಟುಹಾಕುವುದು ಇವುಗಳಿಗೆಲ್ಲಾ ರಕ್ತಚಂದನವನ್ನೂ ಉಪಯೋಗಿಸಿಕೊಳ್ಳಬೇಕು. ಆದರೆ ಇಂತಹ ಚಂದನವನ್ನೇ ಉಪಯೋಗಿಸಬೇಕೆಂದು ಹೇಳಿರುವಲ್ಲಿ ಮಾತ್ರ ಹೇಳಿರುವುದನ್ನೇ ಉಪಯೋಗಿಸಬೇಕು.

**ಗುಣಹೀನಂ ಭವೇದ್ವರ್ಷಾದೂರ್ಧ್ವಂ ತದ್ರೂಪಮೌಷಧಂ ॥**
**ಮಾಸದ್ವಯಾತ್ತಥಾಚೂರ್ಣಂ ಹೀನವೀರ್ಯತ್ವಮಾಪ್ನುಯಾತ್ ॥೫೧॥**
**ಹೀನತ್ವಂಗುಟಿಕಾಲೇಹಾಲಭೇತೇವತ್ಸರಾತ್ಪರಂ ॥**
**ಹೀನಾಸ್ಸ್ಯುರ್ಘೃತತೈಲಾದ್ಯಾಶ್ಚತುರ್ಮಾಸಾಧಿಕಾತ್ತಥಾ ॥ ೫೨ ॥**

**ಔಷಧ್ಯೋಲಘುಪಾಕಾಸ್ಯುರ್ನಿರ್ವೀರ್ಯಾವತ್ಸರಾತ್ಪರಂ ॥**
**ಪುರಾಣಾಸ್ಯುರ್ಗುಣೈರ್ಯುಕ್ತಾ ಆಸವಾಧಾತವೋರಸಾಃ ॥ ೫೩ ॥**

ಸಿದ್ಧಪಡಿಸಲ್ಪಟ್ಟ ಔಷಧಗಳು ಎಷ್ಟು ದಿವಸದವರಿಗೆ ರೋಗ ನಿವಾರಣ ಶಕ್ತಿಯನ್ನು ಹೊಂದಿರುತ್ತವೆ ಎಂಬ ವಿಷಯವನ್ನು ವಿವರಿಸುತ್ತಾನೆ. ಯಾವದಾದರೂ ಮೂಲಿಕೆಯನ್ನು ತಂದು ಅದನ್ನು ಯಾವರೀತಿಯಾದ ಬದಲಾವಣೆಯೂ ಮಾಡದೆ ಇರಿಸಿದ್ದಲ್ಲಿ ಒಂದು ವರುಷದವರೆಗೆ ಅದರಲ್ಲಿ ರೋಗನಿಗ್ರಹಶಕ್ತಿಯಿರುತ್ತದೆ. ವರುಷ ಕಳೆದ ಮೇಲೆ ಅದು ನಿರ್ವೀರ್ಯವಾಗಿ ಹೋಗುತ್ತದ. ಚೂರ್ಣರೂಪವಾಗಿ ಮಾಡಿದ ಔಷಧಗಳು ಎರಡು ತಿಂಗಳು ಕಳದ ಮೇಲೆ ಹೀನವೀರ್ಯಗಳಾಗುತ್ತವೆ. ಮಾತ್ರೆಗಳು ಮತ್ತು ಲೇಹಗಳು ಇಂತಹ ಔಷಧಗಳು ಒಂದು ವರುಷ ಮಾತ್ರ ನಿಲ್ಲುತ್ತವೆ. ಘೃತಗಳು ಮತ್ತು ತೈಲಗಳು ನಾಲ್ಕು ತಿಂಗಳು ಮಾತ್ರ ತಡೆಯುತ್ತವೆ. ಆವರ ಆಸವ, ಅರಿಷ್ಟಗಳೆಂಬ ಔಷಧಯುಕ್ತಗಳಾದ ಮದ್ಯಗಳೂ ಮತ್ತು ಪಾದರಸಯುಕ್ತಗಳಾದ ವಸಂತಕುಸುಮಾಕರಾದಿರಸೌಷಧಗಳೂ ಮಾತ್ರ ದಿವಸ ಕಳದಷ್ಟು ಅಂದರ ಹಳತಾದಷ್ಟೂ ಗುಣ ಹೆಚ್ಚುತ್ತಲೇ ಹೋಗುತ್ತವೆ.

**ವ್ಯಾಧೇರಯುಕ್ತಂ ಯದ್ದ್ರವ್ಯಂ ಗಣೋಕ್ತಮಪಿತತ್ತ್ಯಜೇತ್ ॥**
**ಅನುಕ್ತಮಪಿಯದ್ಯುಕ್ತಂಯೋಜಯೇತ್ತತ್ರತದ್ಬುಧಃ ॥ ೫೪ ॥**

ವಾತಹರಗಳು, ಪಿತ್ತಹರಗಳು ಎಂಬದಾಗಿ ವೈದ್ಯ ಸಂಹಿತೆಗಳಲ್ಲಿ ಹೇಳಿರುವ ಗಣಗಳಲ್ಲಿ ಉಕ್ತಗಳಾದ ಮೂಲಿಕೆಗಳ ಮಧ್ಯೆ ರೋಗಿಗೆ ಅನವಶ್ಯಕಗಳೆಂದು ಕಂಡು ಬಂದ ಮೂಲಿಕೆಗಳನ್ನು ಬಿಟ್ಟು ರೋಗಕ್ಕೆ ಉಪಯುಕ್ತಗಳಾದ ವಸ್ತುಗಳು ಗಣದಲ್ಲಿ ಹೇಳಲ್ಪಡದಿದ್ದರೂ ಔಷಧಗಳಲ್ಲಿ ಸೇರಿಸುವುದಕ್ಕೂ ಕೂಡ ಶಾಸ್ತ್ರಾನುಭವ ರೋಗಾನುಭವಗಳುಳ್ಳ ವೈದ್ಯರಿಗೆ ಅಧಿಕಾರವಿರತಕ್ಕದ್ದು ಅಂತವರು ಆರೀತಿ ಬದಲಾವಣೆಯನ್ನು ಮಾಡಬಹುದು

**ಆಗ್ನೇಯಾವಿಂಧ್ಯಶೈಲಾದ್ಯಾಸ್ಸೌಮ್ಯೋಹಿಮವತೋಗಿರಿಃ ॥**
**ಅತಸ್ತದೌಷಧಾನಿಸ್ಯುರನುರೂಪಾಣಿಹೇತುಭಿಃ ॥ ೫೫ ॥**
**ಅನ್ಯೇಷ್ವಪಿಪ್ರರೋಹಂತಿವನೇಷೂಪವನೇಷುಚ ॥**

ಮೂಲಿಕೆಗಳನ್ನು ಸಂಗ್ರಹಿಸತಕ್ಕ ಸಂದರ್ಭದಲ್ಲಿ ತಿಳಿಯಬೇಕಾದ ಕೆಲವು ನಿಯಮಗಳನ್ನು ಸೂಚಿಸುತ್ತಾನೆ ವಿಂಧ್ಯ ಪರ್ವತವೇ ಮೊದಲಾದ ಮೂಲಿಕೆ ಶಿಕ್ಕತಕ್ಕ ಕೆಲವು ಸ್ಥಳಗಳು ಆಗ್ನೇಯಾಃ ಅಂದರೆ ಉಷ್ಣ ಪ್ರಚುರವಾದವುಗಳಾಗಿಯೂ, ಹಿಮಾಲಯ ಪರ್ವತ ಮೊದಲಾದ ಕೆಲವು ಮೂಲಿಕೆ ಶಿಕ್ಕತಕ್ಕ ಪ್ರದೇಶಗಳು ಶೀತದೇಶಗಳಾಗಿಯೂ ಇರುತ್ತವೆ. ಆದ್ದರಿಂದ ಅಲ್ಲಿ ಹುಟ್ಟತಕ್ಕ ಮೂಲಿಕೆಗಳು ಕೂಡ ಅಲ್ಲಿನ ಜಲವಾಯುಗಳಿಗೆ ಅನುಗುಣವಾಗಿ ಶೀತವೀರ್ಯಗಳಾಗಿಯೂ ಉಷ್ಣವೀರ್ಯಗಳಾಗಿಯೂ, ಇರುತ್ತವೆ. ಏವಂಚ ಮೂಲಿಕೆಗಳು ಎಲ್ಲಿ ಹುಟ್ಟಲಿ ಅಲ್ಲಿನ ಜಲ ಮತ್ತು ವಾಯುಗಳಿಗೆ ಅನುಗುಣಗಳಾದ ಗುಣಗಳನ್ನೇ ಹೊಂದಿರುತ್ತವೆ.

**ಗೃಹ್ಣೀಯಾತ್ತಾನಿಸುಮನಾಃಶುಚಿಃಪ್ರಾತಸ್ಸುವಾಸರೇ ॥ ೫೬ ॥**
**ಆದಿತ್ಯಸಂಮುಖೋಮೌನೀನಮಸ್ಕೃತ್ಯಶಿವಂಹೃದಿ ॥**

**ಸಾಧಾರಣಧರಾದ್ರವ್ಯಂಗೃಹ್ಣೀಯಾದುತ್ತರಾಶ್ರಿತಂ ॥ ೫೭ ॥**

ಔಷಧಕ್ಕಾಗಿ ಮೂಲಿಕೆಯನ್ನು ತರಬೇಕಾದರೆ ಶುಭದಿವಸದಲ್ಲಿ ಶುಚಿರ್ಭೂತನಾಗಿ ಮನಃಕಲ್ಮಷವಿಲ್ಲದೆ ಅಂದರೆ ಬೇರೆ ಯಾವವಿಧವಾದ ಆಲೋಚನೆಯನ್ನೂ ಮಾಡದೆ ಪರಮೇಶ್ವರನ ಧ್ಯಾನಮಾಡಿ ಮೌನದಿಂದ ಸೂರ್ಯನಿಗೆ ಅಭಿಮುಖನಾಗಿ ಉತ್ತರಭಾಗದಲ್ಲಿರತಕ್ಕ ಅಂದರೆ ಮೂಲಿಕೆಯ ಉತ್ತರ ದಿಗ್ಭಾಗದಲ್ಲಿರತಕ್ಕ. ತನಗೆ ಬೇಕಾಗುವ ಬೇರನ್ನೊ, ಚಕ್ಕೆಯನ್ನೊ, ಎಲೆಯನ್ನೊ ತನಗೆ ಅವಶ್ಯಕವಾದದ್ದನ್ನು ಬೆಳಗಿನ ಹೊತ್ತು ಸಂಗ್ರಹಿಸಬೇಕು ಹಿಂದೆ ಹೇಳಿದ ಶೀತೋಷ್ಣಪ್ರಚುರವಾದ ಪ್ರದೇಶದಲ್ಲಿರುವ ಮೂಲಿಕೆಗಳನ್ನು ತರುವುದಕ್ಕಿಂತ "**ಸಾಧಾರಣಧರಾಶ್ರಿತಂ**" ಸಮಧಾತುವಿನಲ್ಲಿರುವ ದೇಶದಲ್ಲಿ ಮೂಲಿಕೆಗಳನ್ನು ಸಂಗ್ರಹಿಸುವುದೇ ಒಳ್ಳೆಯದು.

**ವಲ್ಮೀಕಕುತ್ಸಿತಾನೂಪಶ್ಮಶಾನೋಷರಮಾರ್ಗಜಾಃ ॥**
**ಜಂತುವಹ್ನಿಹಿಮವ್ಯಾಪ್ತಾನೋಷಧ್ಯಃಕಾರ್ಯಸಿದ್ಧಿದಾಃ ॥ ೫೮ ॥**

ಹುತ್ತದ ಮೇಲೆ ಹುಟ್ಟಿದ ಮೂಲಿಕೆಗಳು ಕೆಟ್ಟಜಾಗ ಅಂದರೆ ತಿಪ್ಪೆ, ವಾಯಖಾನೆಗುಂಡಿ ಇವುಗಳಲ್ಲಿ ಹುಟ್ಟಿದ ಮೂಲಿಕೆಗಳು, ಜವುಗು ನೆಲದಲ್ಲಿ ಹುಟ್ಟಿದ ಮೂಲಿಕೆಗಳು, ಸ್ಮಶಾನದಲ್ಲಿ ಹುಟ್ಟಿದ ಮೂಲಿಕೆಗಳು, ಚೌಳು ನೆಲದಲ್ಲಿ ಹುಟ್ಟಿದವುಗಳು, ದಾರಿಯಲ್ಲಿ ಹುಟ್ಟಿದವುಗಳು, ಹುಳತವುಗಳು, ಬೆಂಕಿಯಲ್ಲಿ ಸುಟ್ಟು ಹೋದವುಗಳು, ಮಂಜಿನಿಂದ ವ್ಯಾಪಿಸಲ್ಪಟ್ಟ ಮೂಲಿಕೆಗಳೂ ಔಷಧೋಪಯೋಗವಾಗಲಾರವು. ಅಂದರೆ ಅವುಗಳಲ್ಲಿ ಸತ್ವವಿಲ್ಲ

**ಶರದ್ಯಖಿಲಕಾರ್ಯಾರ್ಥಂ ಗ್ರಾಹ್ಯಂ ಸರಸಮೌಷಧಂ ॥**
**ವಿರೇಕವಮನಾರ್ಥಂಚವಸಂತಾಂತೇಸಮಾಹರೇತ್ ॥ ೫೯ ॥**

ಔಷಧಗಳಿಗೋಸ್ಕರ ಮೂಲಿಕೆಯನ್ನು ಸಂಗ್ರಹಿಸಬೇಕಾದರೆ ಯಾವಾಗ್ಯೂ ಶರದೃತುವಿನಲ್ಲಿಯೇ ಸಂಗ್ರಹಿಸಬೇಕು ಅಗ್ಗ ಮೂಲಿಕೆಗಳೆಲ್ಲಾ ಸಂಪೂರ್ಣವಾಗಿ ವೀರ್ಯಯುಕ್ತವಾಗಿರುತ್ತವೆ ಆದರ ವಿರೇಚನೌಷಧ ಮತ್ತು ವಮನೌಷಧಗಳನ್ನು ಮಾತ್ರ ವಸಂತ ಋತುವಿನ ಕಡೆಯ ಭಾಗವಲ್ಲಿ ಸಂಗ್ರಹಮಾಡಬೇಕು

**ಅತಿಸ್ಥೂಲಜಟಾಯಾಸ್ತುತಾಸಾಂಗ್ರಾಹ್ಯಾಸ್ತ್ವಚೋಬುಧೈಃ ॥**
**ಗೃಹ್ಣೀಯಾತ್ ಸೂಕ್ಷ್ಮಮೂಲಾನಿಸಕಲಾನ್ಯಪಿಬುದ್ಧಿಮಾನ್ ॥ ೬೦ ॥**
**ನ್ಯಗ್ರೋಧಾದೇಸ್ತ್ವಚೋಗ್ರಾಹ್ಯಾಸ್ಸಾರಸ್ಯಾದ್ಬೀಜಕಾದಿತಃ ॥**
**ತಾಳೀಸಾದೇಶ್ಚಪತ್ರಾಣಿಸ್ನುಹ್ಯಾದೇಃಕ್ಷೀರಮಾಹರೇತ್ ॥ ೬೧ ॥**
**ಧಾತಕ್ಯಾದೇಶ್ಚಪುಷ್ಪಾಣಿ ಫಲಂಚತ್ರಿಫಲಾದಿತಃ ॥**

ಸಂದೇಹ ನಿವೃತ್ತಿಗೋಸ್ಕರ ಇಂತಹ ಮೂಲಿಕೆಗಳ ಇಂತಹ ಭಾಗಗಳನ್ನೇ ಸಂಗ್ರಹಿಸಬೇಕೆಂದು ನಿರ್ಣಯಿಸುತ್ತಾನೆ. ಅತಿ ದಪ್ಪವಾದ ಬೇರುಳ್ಳ ಮೂಲಿಕೆಗಳ ಬೇರಿನ ತೊಪ್ಪೆಯನ್ನು ಮಾತ್ರ ಗ್ರಹಿಸಿದರೆ ಸಾಕು. ಸೂಕ್ಷ್ಮವಾದ ಬೇರುಳ್ಳ ಮೂಲಿಕೆಗಳನ್ನು ಮಾತ್ರ ಎಲ್ಲವನ್ನೂ ಸಂಗ್ರಹಿಸಬೇಕು. ನ್ಯಗ್ರೋಧಾದಿ ಎಂಬ ಗಣದಲ್ಲಿ ಹೇಳಿರುವ ಮೂಲಿಕೆಗಳ ಮರದ ತೊಪ್ಪೆಯನ್ನು ಗ್ರಹಿಸಬೇಕು. ಬೀಜಕಾದಿ ಗಣದಲ್ಲಿ ಹೇಳಿರುವ ಮೂಲಿಕೆಗಳ ಮರಗಳ ಚೇಗನ್ನೇ ತೆಗೆದುಕೊಳ್ಳಬೇಕು. ತಾಳೀಸಾದಿ ಗಣದಲ್ಲಿ

ಹೇಳಿರುವ ಮೂಲಿಕೆಗಳ ಎಲೆಗಳನ್ನೇ ಔಷಧಕ್ಕೆ ತೆಗೆದುಕೊಳ್ಳಬೇಕು. ಸ್ನುಹ್ಯಾದಿ ಗಣದಲ್ಲಿ ಹೇಳಿರುವ ಮೂಲಿಕೆಗಳ ಹಾಲನ್ನು ತೆಗೆದುಕೊಳ್ಳಬೇಕು. ಧಾತಕ್ಯಾದಿ ಗಣದಲ್ಲಿ ಹೇಳಿರುವ ಮೂಲಿಕೆಗಳ ಪುಷ್ಪಗಳನ್ನೇ ಔಷಧಾರ್ಥವಾಗಿ ಸಂಗ್ರಹಿಸಬೇಕು. ತ್ರಿಫಲಾದಿ ಗಣದಲ್ಲಿ ಹೇಳಿದ ಮೂಲಿಕೆಗಳ ಫಲಗಳನ್ನೇ ಔಷಧಕ್ಕೆ ತೆಗೆದುಕೊಳ್ಳಬೇಕು

—: ಮೊದಲನೆಯ ಅಧ್ಯಾಯ ಸಂಪೂರ್ಣ. :—

**ಭೈಷಜ್ಯಮಭ್ಯವಹರೇತ್ಪ್ರಭಾತೇಪ್ರಾಯಶೋಬುಧಃ ||**
**ಕಷಾಯಾಂಶ್ಚವಿಶೇಷೇಣತತ್ರಭೇದಸ್ತುದರ್ಶಿತಃ || ೧ ||**

ಸಾಮಾನ್ಯ ಔಷಧಗಳನ್ನು ಯಾವ ಹೊತ್ತಿನಲ್ಲಿ ತೆಗೆದುಕೊಳ್ಳಬೇಕೆನ್ನುವುದನ್ನು ಹೇಳುತ್ತಾನೆ ರೋಗಿಗೆ ವೈದ್ಯನು ಬೆಳಗಿನ ಹೊತ್ತಿನಲ್ಲಿಯೇ ಔಷಧಗಳನ್ನು ತಿನ್ನಿಸಬೇಕು. ಸ್ವರಸ, ಕ್ವಾಥಗಳೆಂಬ ಐದುವಿಧವಾದ ಕಷಾಯಗಳನ್ನು ಕುಡಿಸುವ ಸಂದರ್ಭದಲ್ಲಿಯಾದರೂ ಖಂಡಿತವಾಗಿ ಬೆಳಗಿನ ಹೊತ್ತಿನಲ್ಲಿಯೇ ಕುಡಿಯಿಸಬೇಕು ಇದು ಸಾಮಾನ್ಯ ನಿಯಮ. ಬೇರೆ ಬೇರೆ ಕಾಲಗಳಲ್ಲಿ ದೋಷಾನುಗುಣವಾಗಿ ಔಷಧಗಳನ್ನು ಕೊಡಬೇಕೆಂಬ ಮುಂದಲ ನಿಯಮಗಳಿಗೂ ಇದಕ್ಕೂ ವಿರೋಧವಿಲ್ಲ

**ಜ್ಞೇಯಃಪಂಚವಿಧಃಕಾಲೋ೭ಭೈಷಜ್ಯಗ್ರಹಣೇನೃಣಾಂ ||**
**ಕಿಂಚಿತ್ಸೂರ್ಯೋದಯೇಜಾತೇತಥಾದಿವಸಭೋಜನೇ || ೨ ||**
**ಸಾಯಂತನೇ ಭೋಜನೇಚ ಮುಹುಶ್ಚಾಪಿತಥಾನಿಶಿ ||**

ವಿಶೇಷಗಳನ್ನು ಹೇಳುತ್ತಾನೆ. ಔಷಧಗಳನ್ನು ಸೂರ್ಯೋದಯಕಾಲದಲ್ಲಿ, ಹಗಲು ಭೋಜನಕಾಲದಲ್ಲಿ, ಸಾಯಂಕಾಲ ಭೋಜನಕಾಲದಲ್ಲಿ, ರಾತ್ರಿಯಲ್ಲಿ, ಮುಹುಃ ಅಂದರೆ ದಿವಸದಲ್ಲಿ ಅನೇಕಸಾರಿ ಈರೀತಿಯಾಗಿ ವೈದ್ಯನು ರೋಗಕ್ಕೆ ಮತ್ತು ದೋಷಗಳಿಗೆ ಅನುಗುಣವಾಗಿ ಔಷಧ ಕೊಡುವ ಕಾಲವನ್ನು ಐದುವಿಧವಾಗಿ ಕಲ್ಪಿಸಿಕೊಳ್ಳಬಹುದು.

**ಪ್ರಾಯಃಪಿತ್ತಕಫೋದ್ರೇಕೇವಿರೇಕವಮನಾರ್ಥಯೋಃ || ೩ ||**
**ಲೇಖನಾರ್ಥಂಚಭೈಷಜ್ಯಂ ಪ್ರಭಾತೇತತ್ಸಮಾಹರೇತ್ ||**
**ಏವಂಸ್ಯಾತ್ಪ್ರಥಮಃಕಾಲೋಭೈಷಜ್ಯಗ್ರಹಣೇನೃಣಾಂ || ೪ ||**

ಪಿತ್ತ ಮತ್ತು ಕಫಗಳು ಪ್ರಕುಪಿತವಾಗಿರುವಾಗ್ಗೆ ವಿರೇಚನ ಮತ್ತು ವಮನೌಷಧಗಳನ್ನು ಕ್ರಮವಾಗಿ ಪ್ರಯೋಗಿಸಿ ದೋಷಪ್ರಕೋಪವನ್ನು ಕಡಿಮೆ ಮಾಡಲು ಪ್ರಾಯಶಃ ಪಿತ್ತಕ್ಕೆ ವಿರೇಚನೌಷಧವನ್ನೂ, ಕಫಕ್ಕೆ ವಮನೌಷಧವನ್ನೂ ಬೆಳಗಿನ ಹೊತ್ತು ಕೊಡಬೇಕು. ಮತ್ತು ಲೇಖನವೆಂದರೆ ದೇಹದ ಒಳಗಿರುವ ಪದಾರ್ಥವನ್ನು ಕೆರದು ತೆಗೆಯುವುದೆಂದು ಅರ್ಥ ಉದಾಹರಣೆಗಾಗಿ ಒಬ್ಬ ಮನುಷ್ಯನಿಗೆ ಮೇದಸ್ಸು ವೃದ್ಧಿಯಾಗಿ ಸ್ಥೂಲನಾಗುತ್ತಾನೆಂದು ಭಾವಿಸುವ. ಅಂತವನ ಸ್ಥೌಲ್ಯ ನಿವೃತ್ತಿಗಾಗಿ ಅವನ ಶರೀರದಲ್ಲಿರುವ ಮೇದಸ್ಸನ್ನು ಔಷಧಗಳಿಂದ ಲೇಖನಮಾಡಿಸಿ ಹೊರಕ್ಕೆ ಹೊರಡಿಸಬೇಕು. ಇದಕ್ಕಾಗಿ ಉಪಯೋಗವಾಗುವ ಔಷಧಗಳು ಲೇಖನೌಷಧಗಳೆನ್ನಿಸಿಕೊಳ್ಳುತ್ತವೆ ಇಂತಹ ಲೇಖನೌಷಧಗಳನ್ನೂ ಸಹ ಬೆಳಗಿನ ಹೊತ್ತಿನಲ್ಲಿಯೇ ಕೊಡಬೇಕು. ಇದು ಔಷಧವನ್ನು ಕೊಡಬೇಕಾದ ಮೊದಲನೆಯ ಕಾಲದ ವಿಷಯ.

ಭೈಷಜ್ಯಂವಿಗುಣೇಪಾನೇಭೋಜನಾಗ್ರೇಪ್ರಶಸ್ಯತೇ ॥
ಅರುಚೌಚಿತ್ರಭೋಜ್ಯೈಶ್ಚಮಿಶ್ರಂರುಚಿರಮಾಹರೇತ್ ॥ ೫ ॥
ಸಮಾನವಾತೇವಿಗುಣೇಮಂದೇಗ್ನಾವಗ್ನಿದೀಪನಂ ॥
ದದ್ಯಾದ್ಭೋಜನಮಧ್ಯೇಚಭೈಷಜ್ಯಂಕುಶಲೋಭಿಷಕ್ ॥ ೬ ॥
ವ್ಯಾನಕೋಪೇಚಭೈಷಜ್ಯಂಭೋಜನಾಂತೇಸಮಾಹರೇತ್ ॥
ಹಿಕ್ಕಾಕ್ಷೇಪಕಕಂಪೇಷುಪೂರ್ವಮಂತೇಚಭೋಜನಾತ್ ॥ ೭ ॥
ಏವಂದ್ವಿತೀಯಃಕಾಲಶ್ಚಪ್ರೋಕ್ತೋಭೈಷಜ್ಯಕರ್ಮಣಿ ॥

ವಾತಪ್ರಕೋಪವಿರುವ ಸಮಯದಲ್ಲಿ ಔಷಧವನ್ನು ತೆಗೆದುಕೊಳ್ಳುವ ಕ್ರಮವನ್ನು ಹೇಳುತ್ತಾನೆ ಅಪಾನವಾಯು ಅಂದರೆ ಮಲಪ್ರವೃತ್ತಿಗೆ ಅನುಕೂಲವಾದ ವಾಯುವು ಪ್ರಕುಪಿತವಾಗಿದ್ದರೆ ಭೋಜನ ಮಾಡುವುದಕ್ಕೆ ಪೂರ್ವದಲ್ಲಿ ಅಂದರೆ ಭೋಜನ ಪ್ರಾರಂಭದಲ್ಲಿ ಔಷಧವನ್ನು ಕೊಡಬೇಕು. ಅರುಚಿ ಅಂದರೆ ಅನ್ನದ್ವೇಷಹಿಡದಿರುವ ಕಾಲದಲ್ಲಿ ಔಷಧವನ್ನು ಪ್ರತ್ಯೇಕವಾಗಿ ಕೊಟ್ಟು ರೋಗಿಗೆ ಅಸಹ್ಯವನ್ನುಂಟುಮಾಡಬಾರದು ಊಟದ ಪದಾರ್ಥಗಳನ್ನೇ ರೋಗಿಗೆ ಇಂಪಾಗುವಂತೆ ನಾನಾವಿಧವಾಗಿ ಮಾಡಿ ಅದರೊಂದಿಗೆ ಔಷಧವನ್ನೂ ಸೇರಿಸಿಕೊಡಬೇಕು ನಾಭಿಸ್ಥಾನದಲ್ಲಿದ್ದುಕೊಂಡು ಆಹಾರ ಜೀರ್ಣ ವಿಷಯದಲ್ಲಿ ಸಹಕಾರಿಯಾದ ಸಮಾನ ವಾಯುವು ಪ್ರಕುಪಿತವಾಗಿ ಅಗ್ನಿಮಾಂದ್ಯ ಉಂಟಾಗಿರುವಾಗ್ಗೆ ಜಠರಾಗ್ನಿದೀಪ್ತಿಮಾಡತಕ್ಕ ಔಷಧವನ್ನು ಭೋಜನ ಮಾಡುವ ಮಧ್ಯಕಾಲದಲ್ಲಿ ಕುಶಲನಾದ ವೈದ್ಯನು ಕೊಡಬೇಕು ಸರ್ವಶರೀರಗತವಾದ ವ್ಯಾನವಾಯುವು ಪ್ರಕುಪಿತವಾಗಿರುವ ಕಾಲದಲ್ಲಿ ಭೋಜನದ ಕೊನೆಯಲ್ಲಿ ಔಷಧವನ್ನು ಕೊಡಬೇಕು ಮತ್ತು ಬಿಕ್ಕಳಿಕ, ಆಕ್ಷೇಪಕವೆಂಬ ಆಗಾಗ್ಗೆ ಮೈಯ್ಯನ್ನು ನಡುಗಿಸುವ ವಾತರೋಗ, ಮತ್ತು ಕಂಪವಾತವೆಂಬ ಯಾವಾಗ್ಯೂ ಮೈನಡುಗುತ್ತಿರುವ ವಾತರೋಗ ಇವುಗಳಲ್ಲಿ ಭೋಜನಕ್ಕೆ ಪೂರ್ವದಲ್ಲಿ ಭೋಜನದ ಕೊನೆಯಲ್ಲಿಯೂ ಸಹ ಔಷಧವನ್ನು ಕೊಡಬೇಕು ಇದು ಔಷಧ ಪ್ರಯೋಗಮಾಡತಕ್ಕ ಎರಡನೆಯ ಕಾಲದ ವಿಷಯ.

ಉದಾನೇಕುಪಿತೇವಾತೇಸ್ವರಭಂಗಾದಿಕಾರಿಣೇ ॥ ೮ ॥
ಗ್ರಾಸೇಗ್ರಾಸಾಂತರೇದೇಯಂಭೈಷಜ್ಯಂಸಾಂಧ್ಯಭೋಜನೇ ॥
ಪ್ರಾಣೇಪ್ರದುಷ್ಟೇಸಾಂಧ್ಯಸ್ಯಭುಕ್ತಸ್ಯಾಂತೇಚದೀಯತೇ ॥ ೯ ॥
ಔಷಧಂಪ್ರಾಯಶೋಧೀರೈಃಕಾಲೋಯಂಸ್ಯಾತ್ತೃತೀಯಕಃ ॥

ಕಂಠಸ್ಥಾನಗತವಾದ ಉದಾನವಾಯುವು ಪ್ರಕುಪಿತವಾಗಿ ಸ್ವರಭಂಗವನ್ನುಂಟುಮಾಡಿರುವಾಗ್ಗೆ ಸಾಯಂಕಾಲ ಭೋಜನ ಮಾಡುವ ಕಾಲದಲ್ಲಿ ಒಂದೊಂದು ತುತ್ತಿನ ಕೂಡೆಯೂ ಔಷಧವನ್ನು ಕೊಡಬೇಕು ಪ್ರಾಣವಾಯುವು ಪ್ರಕುಪಿತವಾಗಿರುವ ಕಾಲದಲ್ಲಿ ಸಾಯಂಕಾಲ ಭೋಜನವಾದ ಮೇಲೆ ಪ್ರಾಯಿಕವಾಗಿ ಔಷಧ ಪ್ರಯೋಗ ಮಾಡತಕ್ಕದ್ದು ವೈದ್ಯರ ಪದ್ಧತಿಯಾಗಿದೆ ಇದು ಔಷಧಪ್ರಯೋಗಮಾಡತಕ್ಕ ಮೂರನೆಯ ಕಾಲದ ವಿಷಯ.

ಮುಹುರ್ಮುಹುಶ್ಚತೃಟ್ಛರ್ದಿಹಿಕ್ಕಾಶ್ವಾಸಗರೇಷುಚ ॥ ೧೦ ॥
ಸಾನ್ನಂಚಭೇಷಜಂದದ್ಯಾದಿತಿಕಾಲಶ್ಚತುರ್ಥಕಃ ॥

ಬಾಯಾರಿಕೆ, ವಮನ, ಬಿಕ್ಕಳಿಕೆ, ಉಬ್ಬಸ, ವಿಷಪ್ರಯೋಗದಿಂದುಂಟಾದ ವಿಕಾರಗಳು ಇವುಗಳಲ್ಲಿ ಪದೇ ಪದೇ ಅನ್ನದ ಜೊತೆಯಲ್ಲಿ ಔಷಧವನ್ನು ಕೊಡುತ್ತಿರಬೇಕು ಒಂದೇ ಸಾರಿ ಅನ್ನವನ್ನಾಗಲಿ ಔಷಧವನ್ನಾಗಲಿ ಕೊಟ್ಟರೆ ಮೇಲೆ ಹೇಳಿದ ರೋಗಗಳು ಅತ್ಯಲ್ಪಬಲವಾಗುವುದುಂಟು. ಆದ್ದರಿಂದ ಹೀಗೆ ಮಾಡಬೇಕೆಂದು ತಾತ್ಪರ್ಯ. ಇದು ಔಷಧವನ್ನು ಪ್ರಯೋಗಿಸತಕ್ಕ ನಾಲ್ಕನೆಯ ಕಾಲದ ವಿಷಯ.

ಊರ್ಧ್ವಜತ್ರುವಿಕಾರೇಷುಲೇಖನೇಬೃಂಹಣೇತಥಾ || ೧೧ ||
ಪಾಚನಂ ಶಮನಂ ದೇಯಮನನ್ನಂ ಭೇಷಜಂ ನಿಶಿ ||
ಇತಿಪಂಚವಿಧಕಾಲಸ್ಸ್ಯಾತ್ಪ್ರೋಕ್ತೋಭೈಷಜ್ಯಕರ್ಮಣೀ || ೧೨ ||

ಊರ್ಧ್ವಜತ್ರು ವಿಕಾರಗಳು ಅಂದರೆ ಕಂಠದಿಂದ ಮೇಲ್ಭಾಗದಲ್ಲಿರುವ ಕಣ್ಣು, ಮೂಗು, ಕಿವಿ, ಬಾಯಿ, ತಲೆ ಇವುಗಳಿಗೆ ಸಂಬಂಧಿಸಿದ ರೋಗಗಳಲ್ಲಿಯೂ, ಲೇಖನೌಷಧಗಳನ್ನೂ, ಬೃಂಹಣೌಷಧಗಳನ್ನೂ ಅಂದರೆ ಶರೀರಪುಷ್ಟಿಗಾಗಿ ಕೊಡತಕ್ಕ ಲೇಹ ರಸಾಯನಗಳನ್ನೂ, ಪಾಚನೌಷಧಗಳಂದರೆ ಅಪಕ್ವನಾಗಿ ಶರೀರದಲ್ಲಿ ವೃದ್ಧಿಹೊಂದುತ್ತಿರುವ ದೋಷಗಳ ಪಚನಾರ್ಥವಾಗಿ ಕೊಡತಕ್ಕ ಔಷಧಗಳನ್ನೂ, ಶಮನ ಅಂದರೆ ರೋಗವನ್ನು ಶಮನಮಾಡತಕ್ಕ ಔಷಧಗಳನ್ನೂ ರಾತ್ರಿ ಹೊತ್ತಿನಲ್ಲಿ ಭೋಜನನಾದ ನಂತರ ಕೊಡಬೇಕು ಇದು ಔಷಧ ಕೊಡತಕ್ಕ ಐದನೆಯ ಕಾಲದ ವಿಷಯ

ದ್ರವ್ಯೇರಸೋಗುಣೋವೀರ್ಯಂವಿಪಾಕಶ್ಶಕ್ತಿರೇವಚ ||
ಸಂಬಂಧೇನಕ್ರಮಾದೇತಾಃಪಂಚಾವಸ್ಥಾಃಪ್ರಕೀರ್ತಿತಾಃ || ೧೩ ||

ಚಿಕಿತ್ಸಾಶಾಸ್ತ್ರಕ್ಕೆ ಪ್ರಧಾನಭೂತಗಳಾದ ಔಷಧೋಪಯೋಗಿ ದ್ರವ್ಯಾಶ್ರಿತಗಳಾದ ರಸವೀರ್ಯ ವಿಪಾಕಾದಿಗಳನ್ನು ವಿವರಿಸುತ್ತಾನೆ ಔಷಧ ನಿರ್ಮಾಣ ಕ್ರಿಯೆಯಲ್ಲಿ ಉಪಯೋಗಿಸತಕ್ಕ ಗುಡೂಚ್ಯಾದಿ ಮೂಲಿಕೆಗಳಲ್ಲಿಯೂ, ಇಂಗು ಮೊದಲಾದ ವಸ್ತುಗಳಲ್ಲಿಯೂ ರಸ, ಗುಣ, ವೀರ್ಯ, ವಿಪಾಕ, ಪ್ರಭಾವಗಳೆಂಬ ಇದು ವಿಧವಾದ ಅವಸ್ಥೆಗಳು ಅಂದರೆ ರೋಗನಿವಾರಣ ಮಾಡತಕ್ಕ ಶಕ್ತಿಗಳು ಒಂದಕ್ಕೊಂದು ಸಂಬಂಧಿಸಿಕೊಂಡು ಪ್ರಧಾನವಾದ ದ್ರವ್ಯವನ್ನು ಆಶ್ರಯಿಸಿಕೊಂಡಿರುತ್ತವೆ.

ಮಧುರೋಮ್ಲಃಪಟುಶ್ಚೈವಕಟುತಿಕ್ತಕಷಾಯಕಾಃ ||
ಇತ್ಯೇತೇಷಡ್ರಸಾಃಖ್ಯಾತಾನಾನಾದ್ರವ್ಯಸಮಾಶ್ರಿತಾಃ || ೧೪ ||

ರಸಗಳು ಆರು ಮಧುರ ಅಂದರೆ ಸಿಹಿ, ಹುಳಿ, ಉಪ್ಪು, ಕಾರ, ಕಹಿ, ಒಗರು ಈರೀತಿಯಾಗಿ ದ್ರವ್ಯಾಶ್ರಿತಗಳಾದ ರಸಗಳು ಆರು ಪ್ರಕಾರಗಳಾಗಿವೆ

ಧರಾಂಬುಕ್ಷ್ಮಾನಲಜಲಜ್ವಲನಾಕಾಶಮಾರುತೈಃ ||
ವಾಯ್ವಗ್ನಿಕ್ಷ್ಮಾನಿಲೈರ್ಭೂತದ್ವಯೈರಸಭವಃಕ್ರಮಾತ್ || ೧೫ ||

ದ್ರವ್ಯಾಶ್ರಿತಗಳಾದ ರಸಗಳ ಉತ್ಪತ್ತಿ ಕ್ರಮವನ್ನು ಹೇಳುತ್ತಾನೆ ಪೃಥಿವಿ, ಅಪ್ ಈ ಎರಡು ಭೂತಗಳ ಸಂಯೋಗದಿಂದ ಮಧುರರಸವೂ, ಭೂಮಿ ಮತ್ತು ವಾಯು ಎಂಬ ಎರಡು ಭೂತಗಳ ಸಂಯೋಗದಿಂದ ಆಮ್ಲರಸ ಎಂದರೆ ಹುಳಿಯೂ, ಜಲ ಮತ್ತು ಜ್ವಲನ ಅಂದರೆ ತೇಜಸ್ಸುಗಳ ಸಂಯೋಗದಿಂದ ಲವಣರಸವೂ, ಆಕಾಶ ಮತ್ತು

ವಾಯುಗಳ ಸಂಯೋಗದಿಂದ ಕಟು ಎಂದರೆ ಕಾರವೆಂಬ ರಸವೂ, ವಾಯು ಮತ್ತು ಅಗ್ನಿಗಳ ಸಂಯೋಗದಿಂದ ಕಹಿರಸವೂ, ಪೃಥಿವಿ ಮತ್ತು ವಾಯುಗಳೆಂಬ ಎರಡು ಭೂತಗಳ ಸಂಯೋಗದಿಂದ ಕಷಾಯರಸ ಅಂದರೆ ವಗರು ಎಂಬ ರಸವೂ ಹುಟ್ಟುತ್ತವೆ. ಈ ವಿಷಯವನ್ನು ಆಯುರ್ವೇದ ತಂತ್ರ ಪ್ರವರ್ತಕರಾದ ಆಚಾರ್ಯರುಗಳು ಪರಿಶೋಧಿಸಿ ನಿರ್ಣಯಿಸಿದ್ದಾರೆ.

ಗುರುಸ್ನಿಗ್ಧಶ್ಚ ತೀಕ್ಷ್ಣಶ್ಚ ರೂಕ್ಷೋ ಲಘುರಿತಿ ಕ್ರಮಾತ್ ॥
ಧರಾಂಬುವಹ್ನಿಪವನವ್ಯೋಮ್ನಾಂ ಸ್ಯಾದ್ಗುಣಾ ಮತಾಃ ॥ ೧೬ ॥
ವಿಷ್ವೇವಾಂತರ್ಭವಂತ್ಯನ್ಯೇ ಶೇಷೇಷು ಗುಣಸಂಚಯಾಃ ॥

ಗುಣವನ್ನು ಹೇಳುತ್ತಾನೆ. ಪೃಥಿವೀಭೂತದಲ್ಲಿ ಗುರುಗುಣವೂ, ಅಪ್ ಭೂತದಲ್ಲಿ ಸ್ನಿಗ್ಧಗುಣವೂ, ತೇಜೋ ಭೂತದಲ್ಲಿ ತೀಕ್ಷ್ಣಗುಣವೂ, ವಾಯು ಭೂತದಲ್ಲಿ ರೂಕ್ಷಗುಣವೂ. ಆಕಾಶವೆಂಬ ಭೂತದಲ್ಲಿ ಲಘುತ್ವವೆಂಬ ಗುಣವೂ ಇವೆ. ಗುರು, ಮಂದ, ಹಿಮ, ಸ್ನಿಗ್ಧ, ಶ್ಲಕ್ಷ್ಣ, ಸಾಂದ್ರ, ಮೃದು, ಸ್ಥಿರ, ಸೂಕ್ಷ್ಮ, ವಿಶದ, ಲಘು, ತೀಕ್ಷ್ಣ, ಉಷ್ಣ, ರೂಕ್ಷ, ಖರ ಪ್ರವ, ಕಠಿನ, ಸರ, ಸ್ಥೂಲ, ಪಿಚ್ಛಿಲ ಎಂಬದಾಗಿ ವಾಗ್ಭಟದಲ್ಲಿ ಹೇಳಿರುವ ಗುಣಗಳೂ ಇವರಲ್ಲಿಯೇ ಸೇರಿಹೋಗುತ್ತವೆ.

ವೀರ್ಯಮುಷ್ಣಂ ತಥಾಶೀತಂ ಪ್ರಾಯಶೋ ದ್ರವ್ಯಸಂಶ್ರಯಂ ॥ ೧೭.॥
ತತ್ಸರ್ವಮಗ್ನೀಷೋಮೀಯಂ ದೃಶ್ಯತೇ ಭುವನತ್ರಯೇ ॥
ಅತ್ರೈವಾಂತರ್ಭವಿಷ್ಯಂತಿ ವೀರ್ಯಾಣ್ಯನ್ಯಾನಿ ಯಾನ್ಯಪಿ ॥ ೧೮ ॥

ಉಷ್ಣವೀರ್ಯವೆಂಬದಾಗಿಯೂ, ಶೀತವೀರ್ಯವೆಂಬದಾಗಿಯೂ ದ್ರವ್ಯಾಶ್ರಿತಗಳಾದ ವೀರ್ಯಗಳು ಎರಡು ವಿಧ. ಪ್ರಪಂಚವೆಲ್ಲವೂ ಅಗ್ನೀಷೋಮಾತ್ಮಕವೇ ಅಂದರೆ ಶೀತೋಷ್ಣಸ್ವರೂಪವೇ ಆಗಿರುವುದರಿಂದ ಗ್ರಂಥಾಂತರದಲ್ಲಿ ಉಕ್ತಗಳಾದ ಸ್ನಿಗ್ಧತ್ವ, ರೂಕ್ಷತ್ವ, ವಿಶದ, ಪಿಚ್ಛಿಲ, ಮೃದು, ತೀಕ್ಷ್ಣಗಳೆಂಬ ಗುಣಗಳಲ್ಲವೂ ಈ ಉಷ್ಣಶೀತಗಳೆಂಬ ಎರಡರಲ್ಲಿಯೇ ಅಂತರ್ಗತವಾಗಿ ಹೋಗುತ್ತವೆ.

ತ್ರಿಧಾ ವಿಪಾಕೋ ದ್ರವ್ಯಸ್ಯ ಸ್ವಾದ್ವಮ್ಲಕಟುಕಾತ್ಮಕಃ ॥
ಮಿಷ್ಟಃ ಪಟುಶ್ಚ ಮಧುರಮಮ್ಲೋಽಮ್ಲಂ ಪಚ್ಯತೇ ರಸಃ ॥ ೧೯ ॥
ಕಷಾಯಕಟುತಿಕ್ತಾನಾಂ ಪಾಕಸ್ಯಾತ್ಪ್ರಾಯಶಃ ಕಟುಃ ॥
ಮಧುರಾಜ್ಜಾಯತೇ ಶ್ಲೇಷ್ಮಾ ಪಿತ್ತಮಮ್ಲಾಚ್ಚ ಜಾಯತೇ ॥ ೨೦ ॥
ಕಟುಕಾಜ್ಜಾಯತೇ ವಾಯುಃ ಕರ್ಮಾಣೀತಿ ವಿಪಾಕತಃ ॥

ವಿಪಾಕವನ್ನು ಹೇಳುತ್ತಾನೆ ಷಡ್ರಸವಿಶಿಷ್ಟಗಳಾದ ಸಮಸ್ತ ದ್ರವ್ಯಗಳೂ ಮೂರುವಿಧವಾದ ವಿಪಾಕ ಅಂದರೆ ಪರಿಣಾಮವನ್ನು ಹೊಂದುತ್ತವೆ. ಯಾವವೆಂದರೆ, ಮಧುರರಸವಿಶಿಷ್ಟವಾದ ಪದಾರ್ಥವೂ, ಲವಣರಸವಿಶಿಷ್ಟವಾದ ಪದಾರ್ಥವೂ ಮಧುರವಾಗಿಯೇ ವಿಪಾಕಾವಸ್ಥೆಯನ್ನು ಹೊಂದುತ್ತವೆ. ಹುಳಿಯಾದ ವಸ್ತುಗಳು ವಿಪಾಕಾವಸ್ಥೆಯಲ್ಲಿ ಕೂಡ ಹುಳಿಯಾದ ವಿಪಾಕವನ್ನೇ ಹೊಂದುತ್ತವೆ ಕಷಾಯರಸ, ಕಾರ, ಕಹಿ ಈ ಮೂರು ರಸಯುಕ್ತಗಳಾದ ವಸ್ತುಗಳು ಪ್ರಾಯೇಣವಿಪಾಕಾವಸ್ಥೆಯಲ್ಲಿ ಕಟು ಅಂದರೆ ಕಾರವೇ ಆಗಿ ಬಿಡುತ್ತವೆ. ಇನ್ನು ಮಧುರ ವಿಪಾಕವುಳ್ಳ ವಸ್ತುಗಳಿಂದ ಶ್ಲೇಷ್ಮವೃದ್ಧಿ

ಯಾಗುತ್ತದೆ. ಆಮ್ಲವಿಪಾಕವುಳ್ಳ ವಸ್ತುಗಳಿಂದ ಪಿತ್ತವೃದ್ಧಿಯಾಗುತ್ತದೆ. ಕಟು ಅಂದರೆ ವಿಪಾಕಾವಸ್ಥೆಯಲ್ಲಿ ಕಾರವಾಗುವ ವಸ್ತುಗಳಿಂದ ವಾಯು ವೃದ್ಧಿಯಾಗುತ್ತದೆ. ಇವುಗಳು ವಿಪಾಕಾವಸ್ಥೆಯನ್ನು ಹೊಂದಿದ ರಸಗಳ ಕಾರ್ಯಗಳು.

**ಪ್ರಭಾವಸ್ತುಯಥಾಧಾತ್ರೀಲಕುಚಸ್ಯರಸಾದಿಭಿಃ ॥ ೨೦ ॥**
**ಸಮಾಪಿಕುರುತೇದೋಷತ್ರಿತಯಸ್ಯವಿನಾಶನಂ ॥**

ಪ್ರಭಾವವನ್ನು ಹೇಳುತ್ತಾನೆ. ಪ್ರಭಾವವೆಂದು ಹೇಳಿದರೆ ಮೂಲಿಕಾಗತವಾದ ಒಂದಾನೊಂದು ಅಪೂರ್ವವಾದ ಶಕ್ತಿಗೆ ಹೆಸರು ಉದಾಹರಣೆ:- ಧಾತ್ರಿ ಅಂದರೆ ನೆಲ್ಲಿಯ ಕಾಯಿಯು ರಸದಲ್ಲಿಯೂ ವೀರ್ಯವಿಪಾಕಗಳಲ್ಲಿಯೂ ಕಿತ್ತಿಲೆ ಹಣ್ಣಿಗೆ ಸಮನಾಗಿಯೇ ಇದ್ದರೂ ನೆಲ್ಲೀಕಾಯಿಯಲ್ಲಿ ಪ್ರಭಾವವೆಂಬ ಅಪೂರ್ವಗುಣದಿಂದ ತ್ರಿದೋಷನಾಶಕತ್ವವಿದೆ ಕಿತ್ತಳೀ ಹಣ್ಣಿನಲ್ಲಿ ಅಂತಹ ಗುಣವಿಲ್ಲ ಇಂತಹ ಅಪೂರ್ವ ಗುಣವೇನೇ ಪ್ರಭಾವವೆನ್ನಿಸಿ ಕೊಳ್ಳುತ್ತದೆ.

**ಕ್ವಚಿತ್ತುಕೇವಲಂದ್ರವ್ಯಂಕರ್ಮಕುರ್ಯಾತ್ಪ್ರಭಾವತಃ ॥ ೨೨ ॥**
**ಜ್ವರಂಹಂತಿಶಿರೋಬದ್ಧಾಸಹದೇವೀಜಟಾಯಥಾ ॥**

ಪ್ರಭಾವದಲ್ಲಿರತಕ್ಕ ವೈಚಿತ್ರ್ಯವನ್ನು ಹೇಳುತ್ತಾನೆ ಸಹದೇವಿ ಎಂಬ ಮೂಲಿಕೆಯ ಬೇರನ್ನು ತಂದು ಜ್ವರವುಳ್ಳವನ ತಲೆಗೆ ಕಟ್ಟಿದರೆ ಔಷಧವನ್ನು ಕುಡಿಯಬೇಕಾದ ಅವಶ್ಯಕವಿಲ್ಲವೇನೇ ಜ್ವರವು ತಾನೇ ನಿವೃತ್ತಿಯಾಗಿ ಹೋಗುತ್ತದೆ.

**ಕ್ವಚಿದ್ರಸೋಗುಣೋವೀರ್ಯಂವಿಪಾಕಶ್ಶಕ್ತಿರೇವಚ ॥ ೨೩ ॥**
**ಕರ್ಮಸ್ವಂಸ್ವಂಪ್ರಕುರ್ವಂತಿದ್ರವ್ಯಮಾಶ್ರಿತ್ಯಯೇಸ್ಥಿತಾಃ ॥**

ಹಿಂದಲ ಶ್ಲೋಕಗಳಲ್ಲಿ ಹೇಳಲ್ಪಟ್ಟ ರಸ, ಗುಣ, ವೀರ್ಯ, ವಿಪಾಕ, ಶಕ್ತಿ ಅಂದರೆ ಪ್ರಭಾವ ಇವುಗಳೆಲ್ಲಾ ದ್ರವ್ಯಾಶ್ರಿತಗಳಾಗಿದ್ದುಕೊಂಡು ತಮ್ಮ ಕೆಲಸಗಳನ್ನು ಮಾಡುತ್ತವೆ.

**ಚಯಪ್ರಕೋಪಶಮಾಯಸ್ಮಿನ್ದೋಷಾಣಾಂಸಂಭವಂತಿಹಿ ॥ ೨೪ ॥**
**ಋತುಷಟ್ಕಂತದಾಖ್ಯಾತಂರವೇಃರಾಶಿಷುಸಂಕ್ರಮಾತ್ ॥**

ಔಷಧೋಪಯೋಗಗಳಾದ ಮೂಲಿಕಾದಿಗಳ ರಸ ವೀರ್ಯ ವಿಪಾಕ ಪ್ರಭಾವಗಳನ್ನು ಹೇಳಿ ರೋಗೋತ್ಪಾದಕಗಳಾದ ದೋಷಗಳ ಪ್ರಕೋಪಾದಿ ವಿಷಯಗಳನ್ನು ಹೇಳುತ್ತಾನೆ, ಕಾಲವು ಸಹ ಆಹಾರಗಳಂತೆ ದೋಷಪ್ರಕೋಪಕಾರಣವೆಂಬ ವಿಷಯವನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಸಂವತ್ಸರಾತ್ಮಕವಾದ ಕಾಲವನ್ನು ಸೂರ್ಯನು ರಾಶಿಗಳಿಗೆ ಅಂದರೆ ಮೇಷಾದಿ ರಾಶಿಗಳಿಗೆ ಪ್ರವೇಶ ಮಾಡತಕ್ಕ ಕ್ರಮವನ್ನನುಸರಿಸಿ ಒಂದೊಂದು ರಾಶಿಯಲ್ಲಿಯೂ ಒಂದೊಂದು ತಿಂಗಳಿರುವುದರಿಂದ ಹನ್ನೆರಡು ತಿಂಗಳಾಗಿಯೂ ಎರಡು ತಿಂಗಳಿಗೆ ಒಂದು ಋತುವಿನಂತೆ ಆರು ಋತುಗಳಾಗಿಯೂ ಭಾಗಮಾಡಿ ಕೊಳ್ಳಬೇಕು.

**ಗ್ರೀಷ್ಮೋಮೇಷವೃಷೌಪ್ರೋಕ್ತೌಪ್ರಾವೃಣ್ಮಿಥುನಕರ್ಕಯೋಃ ॥**
**ಸಿಂಹಕನ್ಯೇಸ್ಮೃತಾವರ್ಷಾಸ್ತುಲಾವೃಶ್ಚಿಕಯೋಶ್ಶರತ್ ॥**
**ಧನುರ್ಗ್ರೀಷ್ಮೌಚಹೇಮಂತೋವಸಂತಃಕುಂಭಮೀನಯೋಃ ॥ ೨೬ ॥**

ಈ ರೀತಿಯಲ್ಲಿ ವಿಭಾಗಮಾಡಿಕೊಂಡಲ್ಲಿ ಮೇಷ ಮತ್ತು ವೃಷಭ ಈ ಎರಡು ರಾಶಿಗಳಲ್ಲಿ ಸೂರ್ಯನಿರುವ ಕಾಲದಲ್ಲಿ ಆಗತಕ್ಕ ಎರಡು ತಿಂಗಳನ್ನು ಗ್ರೀಷ್ಮ ಋತುವೆಂಬ ದಾಗಿಯೂ, ಮಿಥುನ ಕಟಕ ಎರಡು ತಿಂಗಳನ್ನು ವರ್ಷಋತುವೆಂತಲೂ, ಸಿಹ್ಮ ಕನ್ಯೆ ಎರಡು ತಿಂಗಳನ್ನು ವರ್ಷಋತುವೆಂತಲೂ, ತುಲ ವೃಶ್ಚಿಕ ಈ ಎರಡು ತಿಂಗಳನ್ನು ಶರತ್ಕಾಲವೆಂದೂ, ಧನುಸ್ಸು ಮಕರ ಎರಡು ತಿಂಗಳೂ ಹಿಮಂತಋತುವೆಂತಲೂ, ಕುಂಭ ಮೀನ ಮಾಸಗಳು ವಸಂತಋತುವೆಂತಲೂ ಕರೆದುಕೊಳ್ಳಬೇಕು. ಚಾಂದ್ರ ಮಾನ ಕ್ರಮದಲ್ಲಿ ಹೇಳತಕ್ಕ ಶಿಶಿರಋತುವೆಂಬುವುದು ವೈದ್ಯರಿಗೆ ಉಪಯೋಗವಿಲ್ಲವೊ ಏನೊ? ಮಿಥುನ, ಕಟಕ, ಸಿಹ್ಮ, ಕನ್ಯೆ ಈ ನಾಲ್ಕು ತಿಂಗಳಿಗೂ ಮೊದಲಿನ ಎರಡಕ್ಕೆ ಪ್ರಾವೃಟ್ ಎಂತಲೂ ಸಿಹ್ಮ ಕನ್ಯೆ ಎರಡಕ್ಕೆ ವರ್ಷ ಎಂತಲೂ ಕರೆದಿದ್ದಾನೆ ಆದರೆ ಈ ಎರಡೂ ವರ್ಷಋತುವಿಗೇನೇ ಹೆಸರೆಂತಲೂ ಪರ್ಯಾಯಪದಗಳೆಂತಲೂ ಕೋಶ ಗಳಲ್ಲಿವ ಬಾಹಟದಲ್ಲಿ ಋತುಚರ್ಯಾಧ್ಯಾಯ ಪ್ರಾರಂಭದಲ್ಲಿ " ಮಾಸೈರ್ದ್ವಿಸಂಖ್ಯೈ ರ್ಮಾಘಾದ್ಯಾಃ " ಎಂಬದಾಗಿ ಚಾಂದ್ರಮಾನ ಕ್ರಮದಿಂದಲೇ ಋತುಗಳನ್ನು ಹೇಳಿ ಶಿಶಿರಋತುವನ್ನೂ ಸೇರಿಸಿರುತ್ತಾನೆ.

ಗ್ರೀಷ್ಮೇಸಂಚೀಯತೇವಾಯುಃಪ್ರಾವೃಟ್ಕಾಲೇಪ್ರಕುಪ್ಯತಿ ||
ವರ್ಷಾಸುಚೀಯತೇಪಿತ್ತಂಶರತ್ಕಾಲೇಪ್ರಕುಪ್ಯತಿ || ೨೭ ||
ಹೇಮಂತೇಚೀಯತೇಶ್ಲೇಷ್ಮಾಸವಸಂತೇಪ್ರಕುಪ್ಯತಿ ||
ಪ್ರಾಯೇಣಪ್ರಶಮಂಯಾತಿಸ್ವಯಮೇವಸಮೀರಣಃ || ೨೮ ||
ಶರತ್ಕಾಲೇವಸಂತೇಚಪಿತ್ತಂಪ್ರಾವೃಡೃತೌಕಫಃ ||

ಕಾಲವನ್ನು ಆರು ಋತುವಾಗಿ ವಿಭಾಗಮಾಡಿಕೊಂಡು ಈ ಶ್ಲೋಕಗಳಲ್ಲಿ ದೋಷಗಳು ಪ್ರಕೋಪಗಳಾಗತಕ್ಕ ಕಾಲವನ್ನು ಹೇಳುತ್ತಾನೆ ಗ್ರೀಷ್ಮೇ ಅಂದರೆ ಗ್ರೀಷ್ಮ ಋತುವಿನಲ್ಲಿ ( ಮೇಷ, ವೃಷಭ ) ವಾಯುವು ಸಂಚೀಯತೆ ಅಂದರೆ ದೋಷಯುಕ್ತ ವಾಗಿ ಪ್ರಕೋಪವನ್ನು ಹೊಂದುವ ಸ್ಥಿತಿಗೆ ಬರುತ್ತದೆ. ಈ ರೀತಿಯಲ್ಲಿ ಸಂಚಿತವಾದ ವಾಯುವು ಪ್ರಾವೃಟ್ಕಾಲೆ ಅಂದರೆ ಮಿಥುನ, ಕಟಕ ಮಾಸಗಳಲ್ಲಿ ಪ್ರಕೋಪವನ್ನು ಹೊಂದುತ್ತದೆ. ಹೀಗೆಯೇ ವರ್ಷಋತುವಿನಲ್ಲಿ ( ಸಿಹ್ಮ, ಕನ್ಯೆ ) ಪಿತ್ತವು ಕೂಡಿಹಾಕಿ ಕೊಂಡಿದ್ದು ಶರದೃತು ( ತುಲಾ, ವೃಶ್ಚಿಕ ) ವಿನಲ್ಲಿ ಪ್ರಕೋಪವನ್ನು ಹೊಂದುತ್ತದೆ. ಹಿಮಂತಋತುವಿನಲ್ಲಿ ( ಧನುಸ್ಸು, ಮಕರ ) ಶ್ಲೇಷ್ಮವು ಕೂಡಿಹಾಕಿಕೊಂಡಿದ್ದು ವಸಂತ ( ಕುಂಭ, ಮೀನ ) ಋತುವಿನಲ್ಲಿ ಪ್ರಕುಪಿತವಾಗುತ್ತದೆ. ಅಂದರೆ ಮೇಲೆ ಹೇಳಿರತಕ್ಕ ಕಾಲಗಳಲ್ಲಿ ವಾತ ಪಿತ್ತ ಶ್ಲೇಷ್ಮಗಳು ಪ್ರಕುಪಿತಗಳಾಗಲು ದೇಶಕಾಲಗಳೇ ಕಾರಣಗಳು. ವಾತ ಪಿತ್ತ ಶ್ಲೇಷ್ಮಗಳು ಸ್ವತಏವ ಪ್ರಕುಪಿತಗಳಾದಂತೆ ಸ್ವತಏವ ಶಾಂತಗಳಾಗತಕ್ಕ ಕಾಲಗಳ್ಯಾವವಂದರೆ:- ಪ್ರಕುಪಿತವಾದ ವಾಯುವು ಶರದೃತುವಿನಲ್ಲಿ ಸ್ವತಏವ ಶಾಂತ ವಾಗುತ್ತದೆ. ಪ್ರಕುಪಿತವಾದ ಪಿತ್ತವು ವಸಂತಋತುವಿನಲ್ಲಿ ಸ್ವತಏವ ಶಾಂತವಾಗುತ್ತದೆ. ವರ್ಷಋತು ಅಂದರೆ ಮಿಥುನ ಕಟಕ ಮಾಸಗಳಲ್ಲಿ ಶ್ಲೇಷ್ಮ ಪ್ರಕೋಪವು ಸ್ವತಏವ ಶಾಂತವಾಗುತ್ತದೆ.

ಕಾರ್ತಿಕಸ್ಯದಿನಾನ್ಯಷ್ಟಾವಷ್ಟಾವಾಗ್ರಯಣಸ್ಯಚ || ೨೯ ||

**ಯಮದಂಷ್ಟ್ರಾಸಮಾಖ್ಯಾತಾಸ್ವಲ್ಪಭುಕ್ತೋಹಿಜೀವತಿ ॥**

ಕಾರ್ತಿಕ ಮಾಸದ ಕೊನೆಯಲ್ಲಿ ಎಂಟು ದಿವಸವು, ಮಾರ್ಗಶಿರ ಮಾಸದ ಮೊದಲಿನಲ್ಲಿ ಎಂಟು ದಿವಸವೂ ಯಮದಂಷ್ಟ್ರ ಎನ್ನಿಸಿಕೊಳ್ಳುತ್ತದೆ. ಆ ದಿವಸಗಳಲ್ಲಿ ಆಹಾರ ವಿಹಾರಗಳನ್ನೆಲ್ಲ ಮಿತದಲ್ಲಿಟ್ಟುಕೊಂಡು ಆರೋಗ್ಯವನ್ನು ಕಾಪಾಡಿಕೊಳ್ಳಬೇಕು.

**ಚಯಕೋಪಶಮಾದೋಷಾವಿಹಾರಾಹಾರಸೇವನೈಃ ॥ ೩೦ ॥**
**ಸಮಾನ್ಯೈರ್ಯಾಂತ್ಯಕಾಲೇಪಿವಿಪರೀತೈರ್ವಿಪರ್ಯಯಂ ॥**

ತ್ರಿದೋಷಗಳು ಸ್ವಭಾವತಃ ಪ್ರಕುಪಿತಗಳಾಗತಕ್ಕ ಕಾಲವನ್ನೂ ಸ್ವಭಾವತಃ ಶಾಂತಗಳಾಗತಕ್ಕ ಕಾಲವನ್ನೂ ಹೇಳಿ ನೈಮಿತ್ತಿಕ ದೋಷ ಪ್ರಕೋಪವನ್ನು ಹೇಳು ತ್ತಾನೆ. ವಾತ ಪಿತ್ತ ಶ್ಲೇಷ್ಮಗಳೆಂಬ ಮೂರು ದೋಷಗಳೂ ಸಮಾನ್ಯೈಃ ಅಂದರೆ ಸ್ವಸ್ವವ ರ್ಧಕಗಳಾದ ಆಹಾರ ವಿಹಾರಗಳನ್ನು ಅನುಸರಿಸೋಣದರಿಂದ ಅಕಾಲದಲ್ಲಿ ಅಂದರೆ ಪ್ರಕೋಪಕ್ಕೆ ಹಿಂದೆ ಹೇಳಿರುವ ಕಾಲವನ್ನು ಬಿಟ್ಟು ಬೇರೇ ಕಾಲಗಳಲ್ಲಿಯೂ ಪ್ರಕೋಪ ವನ್ನು ಹೊಂದುತ್ತವೆ. ವಿಪರೀತೈಃ ಅಂದರೆ ಅವುಗಳನ್ನು ಶಮನಮಾಡತಕ್ಕ ಆಹಾರ ವಿಹಾರಗಳಿಂದ ಶಾಂತವಾಗುತ್ತವೆ.

**ಲಘುರೂಕ್ಷಮಿತಾಹಾರಾದತಿಶೀತಾತ್ಶ್ರಮಾತ್ತಥಾ ॥ ೩೧ ॥**
**ಪ್ರದೋಷೇಕಾಮಶೋಕಾಭ್ಯಾಂಭೀಚಿಂತಾರಾತ್ರಿಜಾಗರೈಃ ॥**
**ಅಭಿಘಾತಾದಪಾಂಗಾಹಾಜ್ಜೀರ್ಣೇನ್ನೇಧಾತುಸಂಕ್ಷಯಾತ್ ॥ ೩೨ ॥**
**ವಾಯುಃಪ್ರಕೋಪಂಯಾತ್ಯೇಭಿಃಪ್ರತ್ಯನೀಕೈಶ್ಚಶಾಮ್ಯತಿ ॥**

ಹಿಂದಲ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ವಿಸ್ತಾರವಾಗಿ ಹೇಳುತ್ತಾನೆ. ಯಾವಾಗಲೂ ಲಘುವಾದ ಆಹಾರವನ್ನೇ ತಿನ್ನುತ್ತಿರುವುದು, ರೂಕ್ಷವಾದ ಆಹಾರವನ್ನು ತಿನ್ನುವುದು, ಯಾವಾಗ್ಲೂ ತನಗೆ ಬೇಕಾಗುವುದಕ್ಕಿಂತ ಕಡಮೆಯಾದ ಆಹಾರವನ್ನು ತಿನ್ನುವುದು, ಅತಿಯಾಗಿ ಶೀತಕ್ಕೆ ಅವಕಾಶ ಕೊಡುವುದು, ಮಿತಿಮೀರಿ ಶ್ರಮಪಡುವುದು, ಪ್ರದೋಷಕಾಲವೇ ವಾತಪ್ರಕೋಪಕಾಲವಾದ್ದರಿಂದ ಆ ಹೊತ್ತಿನಲ್ಲಿ, ಕಾಮ ಎಂದರೆ ದುರ್ಲಭವಾದ ಸ್ತ್ರೀವಿಷಯವಾದ ಅಪೇಕ್ಷೆ, ಅತಿಯಾಗಿ ದುಃಖಪಡುವುದು, ಭಯ, ಅತಿಯಾದ ಚಿಂತೆ ಅಂದರೆ ಯೋಚನೆ, ರಾತ್ರಿ ಹೊತ್ತಿನಲ್ಲಿ ನಿದ್ರೆಗೆಡುವುದು, ಆಕಸ್ಮಿಕ ವಾಗಿ ಶರೀರಕ್ಕೆ ಪೆಟ್ಟು ತಗಲುವುದು, ನೀರಿನಲ್ಲಿ ಮುಳುಗುವುದು ಅಂದರೆ ಅತಿಯಾದ ಜಲವಿಹಾರ, ಆಹಾರವು ಜೀರ್ಣವಾಗಿ ಹೊಟ್ಟೆಯಲ್ಲಿ ಏನೂ ಇಲ್ಲದಿರುವಾಗಲೂ, ಧಾತು ಕ್ಷಯದಿಂದಲೂ ವಾಯುವು ಅಕಾಲದಲ್ಲಿಯೂ ಕುಪಿತವಾಗುತ್ತದೆ ಪ್ರಕುಪಿತವಾದ ವಾಯುವನ್ನು ಸ್ವಸ್ಥಪಡಿಸತಕ್ಕ ಆಹಾರ ವಿಹಾರಗಳಿಂದ ಶಾಂತವಾಗುತ್ತದೆ.

**ವಿದಾಹಿಕಟುಕಾಮ್ಲೋಷ್ಣಭೋಜ್ಯೈರತ್ಯುಷ್ಣಸೇವನಾತ್ ॥ ೩೩ ॥**
**ಮಧ್ಯಾಹ್ನೇಕ್ಷುತ್ತೃಷೋರೋಧಾತ್ಜೀರ್ಯತ್ಯನ್ನೇರ್ಧರಾತ್ರಕೇ ॥**
**ಪಿತ್ತಂಪ್ರಕೋಪಂಯಾತ್ಯೇಭಿಃಪ್ರತ್ಯನೀಕೈಶ್ಚಶಾಮ್ಯತಿ ॥ ೩೪ ॥**

ವಿದಾಹಿ ಅಂದರೆ ಉಷ್ಣಮಾಡತಕ್ಕ ಬಿದರುಕಳಲೆ ಮೊದಲಾದ ಪದಾಥ ಗಳನ್ನು ಭೋಜನ ಮಾಡುವುದರಿಂದಲೂ, ಅತಿಯಾಗಿ ಕಾರವನ್ನು ತಿನ್ನುವುದರಿಂದಲೂ

ಹೆಚ್ಚಿಗೆ ಹುಳಿಯನ್ನು ತಿನ್ನುವುದರಿಂದಲೂ, ಉಷ್ಣವೀರ್ಯಗಳಾದ ಪದಾರ್ಥಗಳನ್ನು ಅತಿಯಾಗಿ ತಿನ್ನುವುದರಿಂದಲೂ, ಮಧ್ಯಾಹ್ನದ ಹೊತ್ತಿನಲ್ಲಿಯೂ, ಅತಿ ಬಿಸಿಯನ್ನು ಭೋಜನ ಮಾಡುವುದರಿಂದಲೂ, ಹಸಿವು ಬಾಯಾರಿಕೆಗಳನ್ನು ತಡೆಯುವುದರಿಂದಲೂ, ಅನ್ನವು ಜೀರ್ಣವಾಗತಕ್ಕ ಕಾಲದಲ್ಲಿಯೂ, ಅರ್ಧರಾತ್ರಿಯಲ್ಲಿಯೂ ಪಿತ್ತವು ಪ್ರಕುಪಿತವಾಗುತ್ತದೆ. ಪ್ರತ್ಯನೀಕೈಃ ಅಂದರೆ ಹಿಂದೆ ಹೇಳಿದ್ದಕ್ಕೆ ಪ್ರತಿಕೂಲಗಳಾದ ಆಹಾರ ವಿಹಾರಗಳಿಂದ ಶಮನವಾಗುತ್ತದೆ.

ಮಧುರಸ್ನಿಗ್ಧಶೀತಾದಿಭೋಜ್ಯೈರ್ದಿವಸನಿದ್ರಯಾ ||
ಮಂದೇಗ್ನೌ ಚ ಪ್ರಭಾತೇ ಚ ಭುಕ್ತಮಾತ್ರೇ ತಥಾ ಶ್ರಮಾತ್ || ೩೫ ||
ಶ್ಲೇಷ್ಮಾ ಪ್ರಕೋಪಂ ಯಾತ್ಯೇಭಿಃ ಪ್ರತ್ಯನೀಕೈಶ್ಚ ಶಾಮ್ಯತಿ ||

ಮಧುರವಾದ ಆಹಾರಗಳಿಂದಲೂ, ಸ್ನಿಗ್ಧ ಅಂದರೆ ಜಿಡ್ಡಾದ ಆಹಾರಗಳಿಂದಲೂ, ಶೀತವೀರ್ಯಗಳಾದ ಪದಾರ್ಥಗಳನ್ನು ಭೋಜನ ಮಾಡುವುದರಿಂದಲೂ, ಹಗಲು ಮಲಗುವುದರಿಂದಲೂ, ಅಗ್ನಿಮಾಂದ್ಯದಿಂದಲೂ, ಬೆಳಗಿನ ಹೊತ್ತಿನಲ್ಲಿಯೂ, ವ್ಯಾಯಾಮ ಮಾಡದಿರೋಣದರಿಂದಲೂ, ಶ್ಲೇಷ್ಮವು ಪ್ರಕುಪಿತವಾಗುತ್ತದೆ. ಪ್ರತ್ಯನೀಕೈಃ ಅಂದರೆ ಶ್ಲೇಷ್ಮವನ್ನು ಶಮನಮಾಡತಕ್ಕ ಪ್ರತಿಕೂಲಗಳಾದ ಆಹಾರ ವಿಹಾರಗಳಿಂದ ಶಮನ ಹೊಂದುತ್ತದೆ.

**ವೈದ್ಯರ ಸೌಕರ್ಯಕ್ಕಾಗಿ ವಾತ ಪಿತ್ತ ಶ್ಲೇಷ್ಮಗಳ ಚಯಪ್ರಕೋಪ ಪ್ರಶಮನಗಳನ್ನು ವಿವರಿಸಿರುತ್ತೆ.**

| | ವಾತ. | ಪಿತ್ತ. | ಕಫ. |
|---|---|---|---|
| ಸಂಚಯ. | ಗ್ರೀಷ್ಮ.<br>ವೈಶಾಖ - ಜ್ಯೇಷ್ಠ<br>ಮೇಷ - ವೃಷಭ | ವರ್ಷ.<br>ಭಾದ್ರ - ಆಶ್ವೀಜ<br>ಸಿಂಹ - ಕನ್ಯೆ | ಹೇಮಂತ.<br>ಪುಷ್ಯ - ಮಾಘ<br>ಧನು - ಮಕರ |
| ಪ್ರಕೋಪ. | ಪ್ರಾವೃಟ್.<br>ಆಷಾಢ - ಶ್ರಾವಣ<br>ಮಿಥುನ - ಕಟಕ | ಶರತ್.<br>ಕಾರ್ತಿಕ - ಮಾರ್ಗ<br>ತುಲ - ವೃಶ್ಚಿಕ | ವಸಂತ.<br>ಕುಂಭ - ಮೀನ<br>ಫಾಲ್ಗುನ - ಚೈತ್ರ |
| ಪ್ರಶಮ. | ಶರದೃತು.<br>ಕಾರ್ತಿಕ - ಮಾರ್ಗ<br>ತುಲ - ವೃಶ್ಚಿಕ | ವಸಂತ.<br>ಫಾಲ್ಗುನ - ಚೈತ್ರ<br>ಕುಂಭ - ಮೀನ | ಪ್ರಾವೃಟ್.<br>ಮಿಥುನ - ಕಟಕ<br>ಆಷಾಢ - ಶ್ರಾವಣ |

**-: ಎರಡನೆಯ ಅಧ್ಯಾಯ ಸಂಪೂರ್ಣ. :-**

## ನಾಡೀಪರೀಕ್ಷಾಕ್ರಮ.

**ಕರಸ್ಯಾಂಗುಷ್ಠಮೂಲೇಯಾಧಮನೀಜೀವಸಾಕ್ಷಿಣೀ ॥**
**ತಚ್ಚೇಷ್ಟಯಾಸುಖಂದುಃಖಂಜ್ಞೇಯಂಕಾಯಸ್ಯಪಂಡಿತೈಃ ॥ ೧ ॥**

ನಾಡೀಪರೀಕ್ಷೆ ಮಾಡಬೇಕಾದರೆ ವೈದ್ಯನು ಬೆಳಿಗ್ಗೆ ಸ್ನಾನಶೌಚಾದಿಗಳನ್ನು ತೀರಿಸಿಕೊಂಡು ಶುದ್ಧಮನಸ್ಕನಾಗಿ ಶೌಚಮುಖಮಾರ್ಜನಾದಿಗಳನ್ನು ತೀರಿಸಿಕೊಂಡು ಶುದ್ಧನಾದ ರೋಗಿಯ ನಾಡಿಯನ್ನು ಪರೀಕ್ಷಿಸಬೇಕು. ರೋಗಿ ಮತ್ತು ವೈದ್ಯ ಈ ಇಬ್ಬರೂ ಶುದ್ಧಮನಸ್ಕರಾಗಿರಬೇಕು. “ **ಪ್ರಾಯಃಸ್ಫುಟಾಭವತಿವಾಮಕರೇವಧೂನಾಂಪುಂಸಾಂಚದಕ್ಷಿಣಕರೇ** ” ಎಂಬದಾಗಿ ವೈದ್ಯಸಂಪ್ರದಾಯೋಕ್ತಿಯಂತೆ ನಾಡಿಯನ್ನು ಹೆಂಗಸರ ಎಡಗೈಯ್ಯಿನಲ್ಲಿಯೂ, ಗಂಡಸರ ಬಲಗೈಯ್ಯಿನಲ್ಲಿಯೂ ಪರೀಕ್ಷಿಸತಕ್ಕದ್ದು. ನಾಡೀಪರೀಕ್ಷೆ ಮಾಡಬೇಕಾದರ ರೋಗಿಯು ತನ್ನ ಕೈಯ್ಯನ್ನು ಮೊಣಕಾಲಿನ ಮೇಲೆ, ತೊಡೆಯಮೇಲೆ ಇಟ್ಟುಕೊಳ್ಳದೆ ಚೆನ್ನಾಗಿ ನೀಡಿ ಐದು ಬೆರಳುಗಳನ್ನೂ ಚೆನ್ನಾಗಿ ಬಿಚ್ಚಿಕೊಂಡು ಇರಬೇಕು. ನಾಡೀಪರೀಕ್ಷೆಗೆ ಪೂರ್ವಭಾವಿಯಾಗಿ ಇಷ್ಟು ಸೌಕರ್ಯಗಳನ್ನೂ ಕಲ್ಪಿಸಿಕೊಂಡು ನಂತರ ನಾಡಿಯನ್ನು ಪರೀಕ್ಷಿಸಲು ಪ್ರಾರಂಭಿಸಬೇಕು ಪರೀಕ್ಷಿಸತಕ್ಕ ನಾಡಿ ಯಾವದೆಂದು ಹೇಳುತ್ತಾನೆ. ಕೈ ಹೆಬ್ಬೆರಳಿನ ಬುಡದಲ್ಲಿರತಕ್ಕ ನಾಡಿಯೇ ಜೀವಸಾಕ್ಷಿಣಿ ಅಂದರೆ ಮನುಷ್ಯನು ಸುಖವಾಗಿದ್ದಾನೆ ಅಥವಾ ಕ್ಲೇಶಪಡುತ್ತಿದ್ದಾನೆ ಎಂಬ ದೇಹಗತವಾದ ಸುಖದುಃಖಗಳಿಗೆ ಸಾಕ್ಷೀಭೂತವಾದದ್ದಾಗಿರುತ್ತದೆ ಅದರ ಚಲನ ವಲನಾದಿಗಳಿಂದಲೇ ವೈದ್ಯನು ಶರೀರದ ಸುಖದುಃಖಗಳನ್ನು ಗೊತ್ತುಮಾಡಿಕೊಳ್ಳಬೇಕು. “ **ವಾರತ್ರಯಂಪರೀಕ್ಷೇತಧೃತ್ವಾಧೃತ್ವಾವಿಮೋಚಯೇತ್** ” ಅಂದರೆ ರೋಗಿಯ ಹೆಬ್ಬೆರಳಿನ ಬುಡದಲ್ಲಿರುವ ನಾಡಿಯಮೇಲೆ ತನ್ನ ಬಲಗೈಯ್ಯಿನ ತರ್ಜನಿ, ಮಧ್ಯಮ, ಅನಾಮಿಕ ಎಂಬ ಮೂರು ಬೆರಳುಗಳನ್ನೂ ಊರಿ ಮೂರುಸಾರಿ ಹಿಡಿದು ಹಿಡಿದು ಬಿಟ್ಟು ಪರೀಕ್ಷಿಸಬೇಕೆಂಬ ತಾತ್ಪರ್ಯ

**ನಾಡೀಧತ್ತೇಮರುತ್ಕೋಪೇಜಲೌಕಾಸರ್ಪಯೋರ್ಗತಿಂ ॥**
**ಕುಲಿಂಗಕಾಕಮಂಡೂಕಗತಿಂಪಿತ್ತಪ್ರಕೋಪತಃ ॥ ೨ ॥**
**ಹಂಸಪಾರಾವತಗತಿಂಧತ್ತೇಶ್ಲೇಷ್ಮಪ್ರಕೋಪತಃ ॥**

ವಾತಾದಿ ಪ್ರಕೋಪವನ್ನು ನಾಡೀಗತಿದ್ವಾರಾ ತಿಳಿಯತಕ್ಕ ಕ್ರಮವನ್ನು ಹೇಳುತ್ತಾನೆ. ವಾಯು ಪ್ರಕೋಪವಾಗಿರುವಾಗ್ಗೆ ನಾಡಿಯು ಜಲೂಕ ಅಂದರೆ ಸಾವಿರ ಕಾಲು ಎಂಬದಾಗಿ ವ್ಯವಹಾರದಲ್ಲಿರುವ ಹುಳದ ಮತ್ತು ಹಾವಿನ ಗತಿಯ ಹಾಗೆ ಗತಿಯುಳ್ಳದ್ದಾಗಿರುತ್ತದೆ. ಸಾವಿರ ಕಾಲು ಮತ್ತು ಹಾವುಗಳು ಸಹ ಭೂಮಿಯನ್ನು ಸ್ಪರ್ಶಮಾಡಿಕೊಂಡೇ ಹೇಗೆ ಹೋಗುತ್ತವೋ ಹಾಗೆಯೇ ನಾಡಿಯ ಗತಿಯು ಸಹ ನಾಡೀಸ್ಥಾನವನ್ನು ಸಂಬಂಧಿಸಿಕೊಂಡೇ ನಡೆಯುತ್ತಿರುತ್ತದೆ. ಪಿತ್ತಪ್ರಕೋಪದಲ್ಲಿ ನಾಡಿಯ ಗತಿಯು ಗುಬ್ಬಿ, ಕಾಕ, ಕಪ್ಪೆ ಇವುಗಳ ಗಮನದಂತೆ ಗಮನ ಉಳ್ಳದ್ದಾಗಿರುತ್ತದೆ. ಅಂದರೆ ಅವುಗಳು ಹಾರುತ್ತ ನಡೆಯುವಂತೆ ನಾಡಿಯೂ ಹಾರುತ್ತ ನಡೆಯುತ್ತಿರುತ್ತದೆ. ಶ್ಲೇಷ್ಮಪ್ರಕೋಪದಲ್ಲಿ ನಾಡಿಯು ಹಂಸ ಮತ್ತು ಪಾರಿವಾಳ ಇವುಗಳು ನಡೆಯುವಂತೆ

ನಿಧಾನವಾಗಿ ನಡೆಯುತ್ತಿರುತ್ತದೆ.

**ಲಾವತಿತ್ತಿರಿವರ್ತೀನಾಂಗಮನಂಸನ್ನಿಪಾತತಃ ॥ ೩ ॥**

ತ್ರಿದೋಷ ಸನ್ನಿಪಾತದಲ್ಲಿ ನಾಡಿಯ ಗತಿಯು ಒಂದೇ ವಿಧವಾಗಿರದೆ ಲಾವ ಎಂಬ ಪಕ್ಷಿ, ತಿತ್ತಿರಿ ಎಂಬ ಪಕ್ಷಿ, ವರ್ತಿ ಎಂಬುವುದೊಂದು ಪಕ್ಷಿ ಇವುಗಳ ಗಮನದಂತೆ ನಡೆಯುತ್ತಿರುತ್ತದೆ. ಅಂದರೆ ಮಂದವಾಗಿಯೂ ಹಾರುತ್ತಲೂ ಹಿಂದೆ ಹೇಳಿದ ತ್ರಿಧಾತುಗಳು ಪ್ರಕೋಪವಾದಾಗ್ಗೆ ಹೇಳಿರುವ ಗತಿಗಳು ಮಿಶ್ರಿತಗಳಾಗಿರುತ್ತವೆಂದು ತಾತ್ಪರ್ಯ.

**ಕದಾಚಿನ್ಮಂದಗಮನಾಕದಾಚಿದ್ವೇಗವಾಹಿನೀ ॥**
**ದ್ವಿದೋಷಕೋಪತೋಜ್ಞೇಯಾ .**

ಎರಡು ದೋಷಗಳು ಪ್ರಕುಪಿತಗಳಾಗಿದ್ದರೆ, ಅಂದರೆ ವಾತಪಿತ್ತ, ವಾತಶ್ಲೇಷ್ಮ, ಪಿತ್ತಶ್ಲೇಷ್ಮ ಈ ರೀತಿಯಾಗಿ ಎರಡೆರಡು ದೋಷಗಳು ಪ್ರಕುಪಿತಗಳಾಗಿದ್ದರೆ ಒಂದು ಸಲ ಮಂದಗತಿಯೂ ಒಂದೊಂದು ಸಲ ದ್ರುತಗತಿಯೂ ನಡೆಯುತ್ತಿರುತ್ತವೆ.

**ಹಂತಿಚಸ್ಥಾನವಿಚ್ಯುತಾ ॥ ೪ ॥**
**ಸ್ಥಿತ್ವಾಸ್ಥಿತ್ವಾಚಲತಿಯಾಸಾಸ್ಮೃತಾಪ್ರಾಣನಾಶಿನೀ ॥**
**ಅತಿಕ್ಷೀಣಾಚಶೀತಾಚಜೀವಿತಂಹಂತ್ಯಸಂಶಯಂ ॥ ೫ ॥**

ನಾಡಿಗೆ ಉಕ್ತವಾಗಿರುವ ಸ್ಥಾನವನ್ನು ಬಿಟ್ಟು ಬೇರೆ ಸ್ಥಾನದಲ್ಲಿ ನಡೆದರೆ ಅದು ಮರಣ ಸೂಚಕವೆಂದು ತಾತ್ಪರ್ಯ. ಉಕ್ತವಾಗಿರುವ ಸ್ಥಾನದಲ್ಲಿಯೇ ನಿಂತು ನಿಂತು ನಡೆದರೆ ಅದೂ ಸಹ ಪ್ರಾಣನಾಶವನ್ನೇ ಸೂಚಿಸುತ್ತದೆ. ಸ್ವಸ್ಥಾನದಲ್ಲಿ ಅತಿ ಕ್ಷೀಣವಾಗಿಯೂ ಶೀತಸ್ಪರ್ಶವುಳ್ಳದ್ದಾಗಿಯೂ ನಡೆಯುತ್ತಿದ್ದರೂ ಮರಣವನ್ನೇ ಸೂಚಿಸುತ್ತದೆಂದು ಗೊತ್ತುಮಾಡಬೇಕು.

**ಜ್ವರಪ್ರಕೋಪೇಧಮನೀಸೋಷ್ಣಾವೇಗವತೀಭವೇತ್ ॥**
**ಕಾಮಕ್ರೋಧಾದ್ವೇಗವಹಾಕ್ಷೀಣಾಚಿಂತಾಭಯಪ್ಲುತಾ ॥ ೬ ॥**
**ಮಂದಾಗ್ನೇಃಕ್ಷೀಣಧಾತೋಶ್ಚನಾಡೀಮಂದತರಾಭವೇತ್ ॥**
**ಅಸೃಕ್ಪೂರ್ಣಾಭವೇತ್ಕೋಷ್ಣಾಗುರ್ವೀಸಾಮಾಗರೀಯಸೀ ॥ ೭ ॥**
**ಲಘ್ವೀವಹತಿದೀಪ್ತಾಗ್ನೇಸ್ತಥಾವೇಗವತೀಮತಾ ॥**
**ಸುಖಿತಸ್ಯಸ್ಥಿರಾಜ್ಞೇಯಾತಥಾಬಲವತೀಮತಾ ॥ ೮ ॥**
**ಚಪಲಾಕ್ಷುಧಿತಸ್ಯಾಪಿತೃಪ್ತಸ್ಯವಹತಿಸ್ಥಿರಾ ॥**

ಜ್ವರ ಬಂದಿರತಕ್ಕ ಕಾಲದಲ್ಲಿ ನಾಡಿಯು ಉಷ್ಣವಾಗಿಯೂ ವೇಗಯುಕ್ತವಾಗಿಯೂ ಇರುತ್ತದೆ. ಕಾಮ ಅಂದರೆ ಸ್ತ್ರೀವಿಷಯಕವಾದ ಗಮನ ಪ್ರಯತ್ನದಲ್ಲಿಯೂ, ಸಿಟ್ಟು ಬಂದಾಗಲೂ ವೇಗವಾಗಿಯೇ ಇರುತ್ತದೆ. ಯೋಚನೆ ಮತ್ತು ಭಯ ಇವುಗಳಲ್ಲಿ ನಾಡಿಯು ಕ್ಷೀಣಗತಿಯಿಂದ ನಡೆಯುತ್ತಿರುತ್ತದೆ. ಅಗ್ನಿಮಾಂದ್ಯ, ಧಾತುಕ್ಷಯ ಇವುಗಳಲ್ಲಿ ನಾಡಿಯು ಅತ್ಯಂತ ನಿದಾನವಾಗಿರುತ್ತದೆ ರಕ್ತವು ಪ್ರಕುಪಿತವಾಗಿ ನಾಡಿಗಳಲ್ಲಿ ರಕ್ತವು ತುಂಬಿಕೊಂಡು ಓಡಾಡ ಹತ್ತಿದರೆ ನಾಡಿಯನ್ನು ಅದುಮಿದರು ಸಹ ಬಗ್ಗದೆಷ್ಟು

ಬಿಗಿಯಾಗಿಯೂ ಕೊಂಚ ಬಿಸಿಯಾಗಿಯೂ ಇರುತ್ತದೆ. ಅನ್ನರಸವು ಸರಿಯಾಗಿ ಪಚನವಾಗದೆ ಇದ್ದರೆ ನಾಡಿಯು ಇನ್ನೂ ಬಿಗಿಯಾಗಿರುತ್ತದೆ. ಜಠರಾಗ್ನಿಪಾಟವ ಚನ್ನಾಗಿರುವವನಿಗೆ ನಾಡಿಯು ಲಘುವಾಗಿಯೂ ವೇಗವತ್ತಾಗಿಯೂ ಇರುತ್ತದೆ. ದೇಹಕ್ಕೆ ಯಾವ ಬಾಧೆಯೂ ಇಲ್ಲದೆ ಸುಖವಾಗಿರುವ ಮನುಷ್ಯನಿಗೆ ಒಂದೇ ಸಮವಾಗಿ ಬಲವಾಗಿ ನಾಡಿ ಹೊಡೆಯುತ್ತಿರುತ್ತದೆ. ಹಸಿವಿನಲ್ಲಿರುವವನಿಗೆ ನಾಡಿಯು ಅವ್ಯವಸ್ಥಿತವಾಗಿ ಓಡಾಡುತ್ತಿರುತ್ತದೆ. ಹೊಟ್ಟೆ ತುಂಬಿರುವ ಕಾಲದಲ್ಲಿ ಶಾಂತವಾಗಿ ಸ್ಥಿರವಾಗಿರುತ್ತದೆ.

**ದೂತಾಃಸ್ವಜಾತಯೋಽವ್ಯಂಗಾಃಪಟವೋನಿರ್ಮಲಾಂಬರಾಃ ॥ ೯ ॥**
**ಸುಖಿನೋಽಶ್ವವೃಷಾರೂಢಾಶ್ಶುಭ್ರಪುಷ್ಪಫಲೈರ್ಯುತಾಃ ॥**
**ಸುಜಾತಯಸ್ಸುಚೇಷ್ಟಾಶ್ಚಸಜೀವದಿಶಿಸಂಶ್ರಿತಾಃ ॥ ೧೦ ॥**
**ಭಿಷಜಂಸಮುಯೇಽಪ್ರಾಪ್ತಾರೋಗಿಣಃಸುಖಹೇತವೇ ॥**

ನಾಡೀ ಪರೀಕ್ಷಾಕ್ರಮವನ್ನು ಸಾಮಾನ್ಯವಾಗಿ ಹೇಳಿ ವೈದ್ಯನು ತನ್ನನ್ನು ಕರೆಯಲು ಬರುವ ಮನುಷ್ಯನ ಲಕ್ಷಣಗಳನ್ನು ಕೂಡ ಚೆನ್ನಾಗಿ ಗಮನಿಸಿ ಅದರಿಂದಲೂ ರೋಗಿಗೆ ಸುಖವಾಗುತ್ತದೆ ಅಥವಾ ರೋಗವು ಅಸಾಧ್ಯ ಎಂಬ ಸಂಗತಿಯನ್ನೂ ಊಹಿಸಿಕೊಳ್ಳಬಹುದೆಂದು ತಿಳಿಸುತ್ತಾನೆ. ರೋಗಿಯ ದೇಹಸ್ಥಿತಿಯನ್ನು ವೈದ್ಯನಿಗೆ ತಿಳಿಸುವುದಕ್ಕೋಸ್ಕರ ಹೋಗತಕ್ಕವರು ರೋಗಿಗೆ ರಕ್ತಸಂಬಂಧಿಗಳಾಗಿರಬೇಕು. ಅಂಗಹೀನರಾಗಿರಬಾರದು. ಚಟುವಟಿಕೆಯುಳ್ಳವರಾಗಿರಬೇಕು ಶುಭ್ರವಾದ ಬಟ್ಟೆ ಬರಗಳುಳ್ಳವರಾಗಿರಬೇಕು. ಅವರು ಯಾವ ರೋಗದಿಂದಲೂ ಪೀಡಿತರಾಗಿರಬಾರದು. ಕುದುರೆಯನ್ನಾಗಲಿ ಎತ್ತನ್ನಾಗಲಿ ಹತ್ತಿಕೊಂಡು ಬಂದಿರಬೇಕು ಕೈಯ್ಯಲ್ಲಿ ಶುಭ್ರಗಳಾದ ಹೂವುಗಳನ್ನೂ ಹಣ್ಣುಗಳನ್ನೂ ಹಿಡಿದುಕೊಂಡು ಬಂದಿರಬೇಕು. ರೋಗಿಯ ಜಾತಿಯವರೇ ಆಗಿರಬೇಕು. ರೋಗಿಗಿಂತ ನಿಕೃಷ್ಟಜಾತಿಯವರಾಗಿರಬಾರದು. ಒಳ್ಳೆಯ ನಡತೆಯುಳ್ಳವರಾಗಿರಬೇಕು. ಸಜೀವದಿಶಿಸಂಶ್ರಿತಾಃ ಅಂದರೆ ಬಂದ ದೂತರು ಯಾವಾಗ್ಗೂ ವೈದ್ಯನ ಹತ್ತಿರ ನಿಲ್ಲಬೇಕಾದರೆ ದಕ್ಷಿಣ ದಿಕ್ಕನ್ನು ಬಿಟ್ಟು ಬೇರೇ ದಿಕ್ಕಿನಲ್ಲಿಯೇ ನಿಲ್ಲಬೇಕು. ದಕ್ಷಿಣ ದಿಕ್ಕನ್ನು ನಿರ್ಜೀವದಿಕ್ಕೆಂಬದಾಗಿಯೂ ಉಳಿದ ದಿಕ್ಕುಗಳನ್ನು ಸಜೀವದಿಕ್ಕೆಂಬದಾಗಿಯೂ ವೈದ್ಯರು ವ್ಯವಹರಿಸುತ್ತಾರೆ. ಸಜೀವ ದಿಕ್ಕಿನಲ್ಲಿ ನಿಲ್ಲುವುದೂ ವೈದ್ಯರಿಗೊಂದು ಶುಭಶಕುನವೆಂಬ ಅಭಿಪ್ರಾಯ. ಶುಭವಾದ ಶುಭಶಕುನಾದಿಗಳಿಂದಲೂ ಶುಭಮುಹೂರ್ತದಲ್ಲಿಯೂ ವೈದ್ಯನನ್ನು ಕರೆಯಲು ಬಂದರೆ ರೋಗಿಗೆ ಆರೋಗ್ಯವಾಗುವುದೆಂದು ವೈದ್ಯನು ಊಹಿಸಬೇಕು

**ವೈದ್ಯಾಹ್ವಾನಾಯದೂತಸ್ಯಗಚ್ಛತೋಽರೋಗಿಣಃಕೃತೇ ॥ ೧೧ ॥**
**ನಶುಭಂಸೌಮ್ಯಶಕುನಂಪ್ರದೀಪ್ತಂಚಸುಖಾವಹಂ ॥**

ವೈದ್ಯನನ್ನು ಕರೆಯುವದಕ್ಕೆ ಬರುವ ದೂತನಿಗೆ ಶುಭಶಕುನಗಳಾಗುವುದು ಒಳ್ಳೆಯದಲ್ಲ. ಅಪಶಕುನಗಳಾದರೆ ರೋಗಿಗೆ ಸುಖವಾಗುತ್ತದೆಂದು ತಿಳಿಯಬೇಕು.

**ಚಿಕಿತ್ಸಾಂರೋಗಿಣಃಕರ್ತುಂಗಚ್ಛತೋಽಭಿಷಜಶ್ಶುಭಂ ॥ ೧೨ ॥**
**ಯಾತ್ರಾಯಾಂಸೌಮ್ಯಶಕುನಂಪ್ರೋಕ್ತಂದೀಪ್ತಂನಶೋಭನಂ ॥**

**ಆದರೆ ರೋಗಿಯನ್ನು ನೋಡಲು ಹೋಗುವ ವೈದ್ಯನಿಗೆ ಮಾತ್ರ ಶುಭಶಕುನ**

ಗಳಾಗುವುದೊಳ್ಳೆಯದು. ಅಪಶಕುನಗಳಾದರೆ ಮಾತ್ರ ರೋಗ ನಿವೃತ್ತಿಯಾಗುವುದಿಲ್ಲ ವೆಂದೂಹಿಸಬೇಕು.

**ನಿಜಪ್ರಕೃತಿವರ್ಣಾಭ್ಯಾಂಯುಕ್ತಸ್ಸತ್ತ್ವೇನಸಂಯುತಃ ॥ ೧೩ ॥**
**ಚಿಕಿತ್ಸ್ಯೋಭಿಷಜಾರೋಗೀವೈದ್ಯಭಕ್ತೋಜಿತೇಂದ್ರಿಯಃ ॥**

ಚಿಕಿತ್ಸೆ ಮಾಡತಕ್ಕ ರೋಗಿಯು ಹೇಗಿರಬೇಕಂದರೆ, ವಾತಪಿತ್ತ ಶ್ಲೇಷ್ಮ ಪ್ರಕೃತಿಯವರೆಂದು ಲಕ್ಷಣಗಳನ್ನು ಮುಂದೆ ಹೇಳುತ್ತಾನೆ ಅಂತಹ ಲಕ್ಷಣಗಳ ಪೈಕಿ ರೋಗಿಯು ಯಾವ ಪ್ರಕೃತಿಯವನೊ ಆ ಪ್ರಕೃತಿಯಲ್ಲಿ ವ್ಯತ್ಯಾಸವೇನೂ ಆಗಿರಬಾರದು ದೇಹದ ಬಲ, ವರ್ಣ ಅಂದರೆ ಕಾಂತಿ ಇವುಗಳು ಯಥಾಸ್ಥಿತಿಯಲ್ಲಿರಬೇಕು ವೈದ್ಯನಲ್ಲಿ ವಿಶ್ವಾಸವುಳ್ಳವನಾಗಿಯೂ ಜಿತೇಂದ್ರಿಯ ಅಂದರೆ ಇಂದ್ರಿಯಚಾಪಲ್ಯರಹಿತನಾಗಿಯೂ ಇರಬೇಕು ಇಂತಹ ರೋಗಿಯನ್ನು ಮಾತ್ರ ಚಿಕಿತ್ಸೆ ಮಾಡಬೇಕು

**ಸ್ವಪ್ನೇಷುನಗ್ನಾನ್ಮುಂಡಾಂಶ್ಚರಕ್ತಕೃಷ್ಣಾಂಬರಾವೃತಾನ್ ॥ ೧೪ ॥**
**ವ್ಯಂಗಾಶ್ಚವಿಕೃತಾನ್ಕೃಷ್ಣಾನ್ಸಪಾಶಾನ್ಸಾಯುಧಾನಪಿ ॥**
**ಬಧ್ನತೋನಿಘ್ನತಶ್ಚಾಪಿದಕ್ಷಿಣಾಂದಿಶಮಾಶ್ರಿತಾನ್ ॥ ೧೫ ॥**
**ಮಹಿಷೋಷ್ಟ್ರಖರಾರೂಢಾನ್ಸ್ತ್ರೀಪುಂಸೋಯಸ್ತುಪಶ್ಯತಿ ॥**
**ಸಸ್ವಸ್ಥೋಲಭತೇವ್ಯಾಧಿಂರೋಗೀಯಾತ್ಯೇವಪಂಚತಾಂ ॥ ೧೬ ॥**

ಸ್ವಪ್ನ ಪರೀಕ್ಷಾಕ್ರಮವನ್ನು ಹೇಳುತ್ತಾನೆ ಸ್ವಪ್ನದಲ್ಲಿ ಬರೀ ಮೈಯ್ಯಲ್ಲಿರುವವರನ್ನೂ, ಕ್ಷೌರಮಾಡಿಸಿಕೊಂಡವರನ್ನೂ, ಕೆಂಪುಬಟ್ಟೆ ಧರಿಸಿದವರನ್ನೂ, ಕಪ್ಪುಬಟ್ಟೆ ಧರಿಸಿದವರನ್ನೂ, ಅಂಗಹೀನರಾದವರನ್ನೂ, ವಿಕಾರವಾದ ಅಂಗಗಳುಳ್ಳವರನ್ನೂ, ಕಪ್ಪು ಬಣ್ಣ ಬಳಿದುಕೊಂಡಿರುವವರನ್ನೂ, ಹಗ್ಗವನ್ನಾಗಲಿ ಆಯುಧವನ್ನಾಗಲಿ ಕೈಯ್ಯಲ್ಲಿ ಹಿಡಿದುಕೊಂಡಿರುವವರನ್ನೂ, ತನ್ನನ್ನು ಕಟ್ಟಿಹಾಕುವಂತೆಯೂ, ಹೊಡೆಯುವಂತೆಯೂ ಕಾಣುವವರನ್ನೂ, ವಿಶೇಷವಾಗಿ ಈ ಹಿಂದೆ ಹೇಳುವವರೆಲ್ಲರೂ ದಕ್ಷಿಣ ದಿಕ್ಕಿನಲ್ಲಿಯೇ ಇರುವಂತೆ ಕಂಡು ಬಂದರೂ, ಎಮ್ಮೆ, ಒಂಟೆ, ಕತ್ತೆ ಇವುಗಳ ಮೇಲೆ ಹತ್ತಿಕೊಂಡಿರುವಂತೆಯೂ, ಗಂಡಸರನ್ನಾಗಲಿ ಹೆಂಗಸರನ್ನಾಗಲಿ ಸ್ವಪ್ನದಲ್ಲಿ ಕಂಡರೆ ಆರೋಗ್ಯವಂತನಾಗಿರುವವನು ರೋಗಿಯಾಗುತ್ತಾನೆಂದೂ ರೋಗಿಯೇ ಆಗಿದ್ದಲ್ಲಿ ಮರಣವನ್ನೇ ಹೊಂದುತ್ತಾನೆಂದೂ ತಿಳಿಯಬೇಕು

**ಅಧೋಯೋನಿಪತತ್ಯುಚ್ಚಾಜ್ಜಲೇಗ್ನೌವಾವಿಲೀಯತೆ ॥**
**ಶ್ವಾಪದೈರ್ಹನ್ಯತೇಯೋಪಿಮತ್ಸ್ಯಾದ್ಯೈರ್ಗಿಲಿತೋಭವೇತ್ ॥೧೭॥**
**ಯಸ್ಯನೇತ್ರೇವಿಲೀಯೇತೇದೀಪೋನಿರ್ವಾಣತಾಂವ್ರಜೇತ್ ॥**
**ತೈಲಂಸುರಾಂಪಿಬೇದ್ವಾಪಿಲೋಹಂವಾಲಭತೇತಿಲಾನ್ ॥ ೧೮ ॥**
**ಪಕ್ವಾನ್ನಂಲಭತೇಶ್ವಾತಿವಿಶೇತ್ಕೂಪಂರಸಾತಲಂ ॥**
**ಸಸ್ವಸ್ಥೋಲಭತೇರೋಗಂರೋಗೀಯಾತ್ಯೇವಪಂಚತಾಂ ॥ ೧೯ ॥**

ಸ್ವಪ್ನದಲ್ಲಿ ಎತ್ತರವಾದ ಪ್ರದೇಶದಿಂದ ಕೆಳಗೆ ಬಿದ್ದಂತಾಗುವುದು, ನೀರಿನಲ್ಲಿ ಮುಳುಗಿದಂತಾಗುವುದು, ತನ್ನ ಸುತ್ತಲೂ ಬೆಂಕಿಯು ಸುತ್ತಿಕೊಂಡಂತೆ ಕಾಣುವುದು,

ದುಷ್ಟಮೃಗಗಳು ತನ್ನನ್ನು ಸುತ್ತಿಕೊಂಡು ಕೊಲ್ಲುವ ಪ್ರಯತ್ನ ಮಾಡುವಂತೆ ತೋರು ವುದು, ಮೀನು ಮೊದಲಾದ ಜಲಚರಗಳು ತನ್ನನ್ನು ನುಂಗುವಂತೆ ತೋರುವುದು, ಒಂದೇ ಸರ್ತಿ ತನ್ನ ಕಣ್ಣುಗಳು ಇಂಗಿಹೋದಂತೆ ತೋರುವುದು, ನೋಡುತ್ತಿದ್ದಂತೆಯೇ ದೀಪವು ಆರಿಹೋದಂತೆ ಕಾಣುವುದು, ಎಣ್ಣೆಯನ್ನಾಗಲಿ, ಮದ್ಯವನ್ನಾಗಲಿ ತಾನು ಪಾನಮಾಡಿದಂತೆ ಕಾಣುವುದು, ಕಬ್ಬಿಣದ ತುಂಡಾಗಲಿ ಎಳ್ಳಾಗಲಿ ತನಗೆ ಸಿಕ್ಕಿದ ಹಾಗೆ ತೋರುವುದು, ತನಗೋಸ್ಕರ ಅಡಿಗೆಯು ಸಿದ್ಧವಾದಂತೆ ತೋರುವುದು, ತಾನು ಊಟಮಾಡಿದಂತೆಯೇ ತೋರುವುದು, ತಾನು ಭಾವಿಯನ್ನು ಇಳಿದಂತಾಗಲಿ ಪಾತಾಳ ವನ್ನು ಹೊಕ್ಕಂತಾಗಲಿ ತೋರುವುದು ಈ ರೀತಿಯಾದರೆ ಆರೋಗ್ಯವಂತನು ರೋಗಿ ಯಾಗುತ್ತಾನೆಂಬದಾಗಿಯೂ ರೋಗಿಯೇ ಆದಲ್ಲಿ ಮರಣಹೊಂದುತ್ತಾನೆಂದೂ ತಿಳಿಯ ಬೇಕು

> ದುಸ್ವಪ್ನಾನೇವಮಾದೀಂಶ್ಚ ದೃಷ್ಟ್ವಾ ಬ್ರೂಯಾನ್ನ ಕಸ್ಯಚಿತ್ ||
> ಸ್ನಾನಂಕುರ್ಯಾದುಷಸ್ಯೇವ ದದ್ಯಾದ್ಧೇಮತಿಲಾನಪಃ || ೨೦ ||
> ಪಠೇತ್ ಸ್ತೋತ್ರಾಣಿ ದೇವಾನಾಂ ರಾತ್ರೌ ದೇವಾಲಯೇ ವಸೇತ್ ||
> ಕೃತ್ವೈವಂ ತ್ರಿದಿನಂ ಮರ್ತ್ಯೋ ದುಸ್ವಪ್ನಾತ್ಪರಿಮುಚ್ಯತೇ || ೨೧ ||

ಇಂತಹ ದುಸ್ವಪ್ನಗಳನ್ನು ಕಂಡು ಸ್ವಪ್ನವೃತ್ತಾಂತವನ್ನು ಯಾರಿಗೂ ಹೇಳ ಬಾರದು ಪ್ರಾತಃಕಾಲದಲ್ಲಿಯೇ ಎದ್ದು ಸ್ನಾನ ಮಾಡಬೇಕು ಸುವರ್ಣ, ಎಳ್ಳು, ಕಬ್ಬಿಣ ಇವುಗಳನ್ನು ದಾನಮಾಡಬೇಕು ಆಯುರ್ವೃದ್ಧಿಕರಗಳಾಗಿಯೂ ಅಪಮೃತ್ಯುನಾಶಕ ಗಳಾಗಿಯೂ ಇರುವ ದೇವತಾ ಸ್ತೋತ್ರಗಳನ್ನು ಪಾರಾಯಣ ಮಾಡಬೇಕು ರಾತ್ರಿ ಯಲ್ಲಿ ದೇವಾಲಯಗಳಲ್ಲಿಯೇ ವಾಸಮಾಡಬೇಕು. ಈ ರೀತಿಯಾಗಿ ಮೂರುದಿವಸಗಳು ಮಾಡಿದಲ್ಲಿ ದುಸ್ವಪ್ನದೋಷಗಳು ಪರಿಹಾರವಾಗುತ್ತವೆ

> ಸ್ವಪ್ನೇಷು ಯಸ್ಸುರಾನ್ಭೂಪಾನ್ಜೀವತಸ್ಸುಹೃದೋದ್ವಿಜಾನ್ ||
> ಗೋಸಮಿದ್ಧಾಗ್ನಿ ತೀರ್ಥಾನಿ ಪಶ್ಯೇತ್ ಸುಖಮವಾಪ್ನುಯಾತ್ ||೨೨||
> ತೀರ್ತ್ವಾ ಕಲುಷನೀರಾಣಿ ಜಿತ್ವಾ ಶತ್ರುಗಣಾನಪಿ ||
> ಆರುಹ್ಯ ಸೌಧಗೋಶೈಲಕರಿವಾಹಾನ್ಸುಖೀ ಭವೇತ್ || ೨೩ ||
> ಶುಭ್ರಪುಷ್ಪಾಣಿ ವಾಸಾಂಸಿ ಮಾಂಸಮತ್ಸ್ಯಫಲಾನಿ ಚ ||
> ಪ್ರಾಪ್ಯಾತುರಸ್ಸುಖೀ ಭೂಯಾತ್ ಸ್ವಸ್ಥೋ ಧನಮವಾಪ್ನುಯಾತ್ ||
> ಅಗಮ್ಯಾಗಮನಾಲೇಪೋ ವಿಷ್ಠಾ ಯೂರುದಿತಂ ಮೃತಿಃ ||
> ಆಮಮಾಂಸಾಶನಂ ಸ್ವಪ್ನೇ ಧನಾರೋಗ್ಯಾಪ್ತಯೇ ವಿದುಃ || ೨೪ ||
> ಜಲೌಕಾಭ್ರಮರೀಸರ್ಪಾ ಮಕ್ಷಿಕಾವಾಪಿ ಯಂ ದಶೇತ್ ||
> ರೋಗೀ ಸಭೂಯಾದುಲ್ಲಾಘಃ ಸ್ವಸ್ಥೋ ಧನಮವಾಪ್ನುಯಾತ್||೨೫||

ಒಳ್ಳೇ ಸ್ವಪ್ನಗಳನ್ನು ಹೇಳುತ್ತಾನೆ. ಸ್ವಪ್ನದಲ್ಲಿ ಯಾವ ಮನುಷ್ಯನು ದೇವತೆ ಗಳನ್ನೂ, ರಾಜರುಗಳನ್ನೂ, ಬದುಕಿರತಕ್ಕ ತನ್ನ ಸ್ನೇಹಿತರುಗಳನ್ನೂ, ಬ್ರಾಹ್ಮಣರುಗ ಳನ್ನೂ, ಗೋವುಗಳನ್ನೂ, ಸಮಿತ್ತಿನಿಂದ ಹೋಮಮಾಡಲ್ಪಟ್ಟ ಅಗ್ನಿಯನ್ನೂ, ಗಂಗಾ ದಿಪುಣ್ಯತೀರ್ಥಗಳನ್ನೂ ಕಾಣುತ್ತಾನೆಯೋ ಅವನು ಸುಖವನ್ನು ಹೊಂದುತ್ತಾನೆ. ಸ್ವಚ್ಛ

ದಲ್ಲಿ ಕೊಚ್ಚೆಯು ನೀರನ್ನು ದಾಟುವುದು, ಶತ್ರುಗಳನ್ನು ಗೆಲ್ಲುವುದು, ಉಪ್ಪರಿಗೆಯ ಮೇಲೆ ಹತ್ತುವುದು, ವೃಷಭದ ಮೇಲೆ ಹತ್ತಿಕೊಳ್ಳುವುದು, ಪರ್ವತದ ಮೇಲೆ ಹತ್ತುವುದು, ಆನೆಯ ಮೇಲೆ ಹತ್ತುವುದು, ಕುದುರೆಯ ಮೇಲೆ ಹತ್ತುವುದು ಈರೀತಿಯಾದರೆ ಸುಖವಾಗುತ್ತದೆಂಬ ತಾತ್ಪರ್ಯ. ಸ್ವಪ್ನದಲ್ಲಿ ರೋಗಿಯು ಶುಭ್ರವಾದ ಪುಷ್ಪಗಳನ್ನೂ, ಶುಭ್ರವಾದ ವಸ್ತ್ರಗಳನ್ನೂ, ಮಾಂಸಗಳನ್ನೂ, ಮತ್ಸ್ಯಗಳನ್ನೂ, ಫಲಗಳನ್ನೂ ಹೊಂದಿದಂತೆ ಕಂಡರೆ ರೋಗಮುಕ್ತನಾಗುತ್ತಾನೆ. ಆರೋಗ್ಯವಾಗಿರುವವನಿಗೆ ಇಂತಹ ಸ್ವಪ್ನವಾದರ ದ್ರವ್ಯಲಾಭವಾಗುತ್ತದೆ. ಸ್ವಪ್ನದಲ್ಲಿ ಅಗಮ್ಯಾಗಮನಂ ಅಂದರೆ ಯಾವರೀತಿಯಿಂದಲೂ ತನಗೆ ಯೋಗ್ಯಳಲ್ಲದ ಸ್ತ್ರೀಯಲ್ಲಿ ತಾನು ರಮಿಸಿದಂತೆ ತೋರುವುದು, ಶರೀರಕ್ಕೆಲ್ಲಾ ಪಾಯಿಖಾನೆಯನ್ನು ಬಳದುಕೊಂಡಂತೆ ತೋರುವುದು, ರೋದನವನ್ನು ಕೇಳುವುದು, ಮರಣವನ್ನು ನೋಡುವುದು, ಹಸಿಯ ಮಾಂಸವನ್ನು ತಾನು ತಿಂದಂತೆ ಕಾಣುವುದು ಇವುಗಳೆಲ್ಲವೂ ಆರೋಗ್ಯಪ್ರಾಪ್ತಿಗೂ, ದ್ರವ್ಯಪ್ರಾಪ್ತಿಗೂ ಸೂಚನೆಗಳು. ಸ್ವಪ್ನದಲ್ಲಿ- ಸಾವಿರಕಾಲು, ಗುಂಬಿಹುಳ, ಹಾವು, ಜೇನುಹುಳ ಇವುಗಳು ಕಡಿದಂತೆ ಕಂಡರೆ ಅಂತಹ ರೋಗಿಯು ಶೀಘ್ರವಾಗಿಯೇ ಆರೋಗ್ಯವನ್ನು ಹೊಂದುತ್ತಾನೆ. ಆರೋಗ್ಯವಾಗಿರುವವನನ್ನೇ ಕಡಿದಂತೆ ಕಂಡರೆ ಅವನಿಗೆ ದ್ರವ್ಯಪ್ರಾಪ್ತಿಯಾಗುವುದೆಂಬ ತಾತ್ಪರ್ಯ.

– ಮೂರನೆಯ ಅಧ್ಯಾಯ ಸಂಪೂರ್ಣ. :–

**ಪಚೇನ್ನಾಮಂವಹ್ನಿಕೃಚ್ಚದೀಪನಂತದ್ಯಥಾಮಿಶಿಃ ॥**

ಔಷಧ ವಿಶೇಷಗಳ ಲಕ್ಷಣವನ್ನು ಹೇಳಲಾರಂಭಿಸುತ್ತಾನೆ. ಪ್ರಥಮ ತಃ ದೀಪನೌಷಧವೆಂದರೆ ಶರೀರಗತವಾದ " ಆಮಂ " ಎಂದರೆ ಅಪಕ್ವವಾದ ಅನ್ನರಸವನ್ನು ಪಚನಮಾಡದೆ ಜಠರಾಗ್ನಿಯನ್ನು ಮಾತ್ರ ವೃದ್ಧಿಪಡಿಸತಕ್ಕ ಔಷಧವು ದೀಪನವೆನ್ನಿಸಿಕೊಳ್ಳುತ್ತದೆ. ಇದಕ್ಕೆ ಉದಾಹರಣವೇನಂದರೆ " ಯಥಾಮಿಶಿಃ " ಸದಾಪಿನ ಸೊಪ್ಪು ಇದಕ್ಕೆ ಅಗ್ನಿವರ್ಧಕಶಕ್ತಿ ಇದೆಯೇ ವಿನಹ ಅಪಕ್ವವಾದ ಅನ್ನರಸವನ್ನು ಪಚನಮಾಡುವ ಶಕ್ತಿಯಿಲ್ಲ.

**ಪಚತ್ಯಾಮಂನವಹ್ನಿಂಚಕುರ್ಯಾದ್ಯತ್ತದ್ಧಿಪಾಚನಂ ॥ ೧ ॥**
**ನಾಗಕೇಸರವದ್ವಿದ್ಯಾಚ್ಚಿತ್ರೋದೀಪನಪಾಚನಃ ॥**

ಪಾಚನೌಷಧ ಲಕ್ಷಣವೇನಂದರೆ- ಅಪಕ್ವಗಳಾದ ಅನ್ನರಸಗಳನ್ನು ಮಾತ್ರ ಪಚನಮಾಡುವುದು. ಉದಾಹರಣ - ನಾಗಕೇಸರಿ ಇದು ಆಮರಸವನ್ನು ಪಕ್ವಸ್ಥಿತಿಗೆ ತರುತ್ತದೆ ವಿನಹ ಅಗ್ನಿವೃದ್ಧಿಮಾಡುವುದಿಲ್ಲ. ದೀಪನ ಪಾಚನ ಉಭಯವಿಧಗಳಾದ ಔಷಧಗಳಿಗೆ ಉದಾಹರಣ.- ಚಿತ್ರಮೂಲ. ಇದು ಆಮವಾದ ಅನ್ನರಸವನ್ನು ಪಚನ ಮಾಡುವ ಗುಣವುಳ್ಳದ್ದಾಗಿಯೂ, ಅಗ್ನಿದೀಪನ ಮಾಡುವುದಾಗಿಯೂ ಇದೆ.

**ನಶೋಧಯತಿನದ್ವೇಷ್ಟಿಸಮಾನ್‌ದೋಷಾಂಸ್ತಥೋದ್ಧತಾನ್ ॥ ೨ ॥**
**ಸಮೀಕರೋತಿವಿಷಮಾನ್‌ಶಮನಂತದ್ಯಥಾಮೃತಾ ॥**

ಶಮನೌಷಧದ ಲಕ್ಷಣವೇನಂದರೆ:- ವಾತ, ಪಿತ್ತ, ಕಫಗಳೆಂಬ ದೋಷಗಳ

ಮಧ್ಯೆ, ಶರೀರದಲ್ಲಿ ಸಾಮ್ಯಾವಸ್ಥೆಯಲ್ಲಿ ಅಂದರೆ ಹೆಚ್ಚುಕಡಮೆಯಿಲ್ಲದೆ ಸಮವಾಗಿರುವ ದೋಷಗಳನ್ನು ಮತ್ತು ಉದ್ಧತಾನ್ ಅಂದರೆ ವೃದ್ಧಿಹೊಂದಿ ಉನ್ಮಾರ್ಗಗಾಮಿಗಳಾದ ದೋಷಗಳನ್ನೂ ಶೋಧನ ಮಾರ್ಗದಿಂದ ಶರೀರವನ್ನು ಬಿಟ್ಟು ಹೊರಡಿಸುವುದೂ ಇಲ್ಲ. ಅವುಗಳಿಗೆ ವಿರುದ್ಧವಾಗಿ ಕಾರ್ಯಮಾಡಿ ಅವುಗಳನ್ನು ಅಡಗಿಸುವುದೂ ಇಲ್ಲ. ಆದರೆ ವಿಷಮಾವಸ್ಥೆಯಲ್ಲಿ ಅಂದರೆ ಹೆಚ್ಚಾಗಿಯಾಗಲಿ ಕಡಮೆಯಾಗಿಯಾಗಲಿ ಇರುವ ದೋಷಗಳನ್ನು ಅಲ್ಲಿಯೇ ಅಡಗಿಸಿ ಸಮಸ್ಥಿತಿಗೆ ತರುವ ಔಷಧವು ಶಮನೌಷಧವೆನ್ನಿಸುತ್ತದೆ. ಉದಾಹರಣ:- ಅಮೃತಬಳ್ಳಿ. ಇದು ದೋಷಗಳನ್ನು ಸಾಮ್ಯಾವಸ್ಥೆಗೆ ತರುವ ವಿಷಯದಲ್ಲಿ ಬಹಳ ಪ್ರಸಿದ್ಧವಾದದ್ದು.

**ಕೃತ್ವಾಪಾಕಂಮಲಾನಾಂಯದ್ಭಿತ್ವಾಬಂಧಮಧೋನಯೇತ್ ॥ ೩ ॥**
**ತಚ್ಚಾನುಲೋಮನಂಜ್ಞೇಯಂಯಥಾ ಪ್ರೋಕ್ತಾಹರೀತಕೀ ॥**

ಅನುಲೋಮನೌಷಧದ ಲಕ್ಷಣವೇನೆಂದರೆ - ಯಾವ ವಸ್ತುವು ಮಲಾನಾಂ ಅಂದರೆ ಪ್ರಕುಪಿತಗಳಾದ ವಾತ ಪಿತ್ತ ಕಫಾದಿಗಳನ್ನು ಪಕ್ವಾವಸ್ಥೆಗೆ ತಂದು ದೋಷಗಳು ಅಧೋಮುಖವಾಗುವುದಕ್ಕೆ ಇರುವ ಬಂಧನ ಅಂದರೆ ತೊಂದರೆಗಳನ್ನೆಲ್ಲಾ ನಿವಾರಣೆ ಮಾಡಿ ಅಧೋಮುಖವಾಗುವಂತೆ ಮಾಡುತ್ತದೋ ಅಂತಹ ವಸ್ತುವಿಗೆ ಅನುಲೋಮನವೆಂದು ಹೆಸರು. ಉದಾಹರಣೆ - ಅಳಲೇಕಾಯಿ ಇದು ಪ್ರಕುಪಿತಗಳಾದ ದೋಷಗಳನ್ನೆಲ್ಲಾ ಪರಿಪಕ್ವಾವಸ್ಥೆಗೆ ತಂದು ಅಧೋಮುಖಮಾಡುತ್ತದೆ

**ಪಕ್ತವ್ಯಂಯದಪಕ್ತ್ವೈವಶ್ಲಿಷ್ಟಂಕೋಷ್ಠೇಮಲಾದಿಕಂ ॥ ೪ ॥**
**ನಯತ್ಯಧಸ್ರಂಸನಂತದ್ಯಥಾಸ್ಯಾತ್ಕೃತಮಾಲಕಃ ॥**

ಸ್ರಂಸನೌಷಧದ ಲಕ್ಷಣವೇನಂದರೆ:- ಅಪಕ್ವವಾಗಿಯೇ ಕೋಷ್ಠದಲ್ಲಿ ಸೇರಿಕೊಂಡು ತೊಂದರೆ ಮಾಡುತ್ತಿರುವ ಮಲಾದಿಗಳನ್ನು ಪಕ್ವಾವಸ್ಥೆಗೆ ತರದೇನೇ ಕೆಳಗೆ ಜಾರಿಸಿ ಬಿಡತಕ್ಕ ಔಷಧವು ಸ್ರಂಸನೌಷಧವೆನ್ನಿಸುತ್ತದೆ. ಉದಾಹರಣಾರ್ಥವಾಗಿ ಕೃತಮಾಲ ಅಂದರೆ ಕಕ್ಕೇಕಾಯನ್ನು ಹೇಳಬಹುದು. ಇದು ಪಕ್ವಾಪಕ್ವ ವಿಚಾರವಿಲ್ಲದೆ ಕೋಷ್ಠಗತವಾದ ಪದಾರ್ಥಗಳನ್ನೆಲ್ಲಾ ಮಲದ್ವಾರದಿಂದ ಹೊರಹೊರಡಿಸಿ ಬಿಡುತ್ತದೆ.

**ಮಲಾದಿಕಮಬದ್ಧಂಚಬದ್ಧಂವಾಪಿಂಡಿತಂಮಲೈಃ ॥ ೫ ॥**
**ಭಿತ್ವಾಧಃಪಾತಯತಿತದ್ಭೇದನಂಕಟುಕೀಯಥಾ ॥**

ಭೇದನೌಷಧದ ಲಕ್ಷಣವೇನಂದರೆ:- ಶರೀರದಲ್ಲಿರತಕ್ಕ ಮಲಾದಿಗಳು ಬದ್ಧವಾಗಿರಲಿ, ಅಥವಾ ಬದ್ಧವಾಗದೆ ಇರಲಿ, ದೋಷಪ್ರಕೋಪದಿಂದ ಪಿಂಡಿತವಾಗಿಯೇ ಇರಲಿ, ಅಂತಹ ಮಲವನ್ನು ಭೇದಿಸಿ ಅಧೋದ್ವಾರದಿಂದ ಕೆಳಗೆ ತಳ್ಳುವ ಔಷಧವು ಭೇದನವೆನ್ನಿಸಿಕೊಳ್ಳುತ್ತದೆ. ಉದಾಹರಣೆಗಾಗಿ ಕಟುಕರೋಹಿಣಿಯನ್ನು ತೆಗೆದುಕೊಳ್ಳಬಹುದು ಇದು ಹೊಟ್ಟೆಯಲ್ಲಿರುವ ವಸ್ತುಗಳನ್ನೆಲ್ಲಾ ಕೆಳಗೆ ತಳ್ಳಿಬಿಡುತ್ತದೆ

**ವಿಪಕ್ವಂಯದಪಕ್ವಂವಾಮಲಾದಿದ್ರವತಾಂನಯೇತ್ ॥ ೬ ॥**
**ರೇಚಯತ್ಯಪಿತದ್‌ಜ್ಞೇಯಂರೇಚನಂತ್ರಿವೃತಾಯಥಾ ॥**

ದೇಹಗತವಾದ ಮಲಗಳು ಮತ್ತು ವಾತಾದಿ ದೋಷಗಳು ಸಹಾ ಪಕ್ವವಾಗಿ

ಠಲಿ ಅಪಕ್ವವಾಗಿರಲಿ ಅವುಗಳೆಲ್ಲವನ್ನೂ ದ್ರವರೂಪಕ್ಕೆ ತಂದು ಅಧೋದ್ವಾರದಿಂದ ರೇಚನವನ್ನು ಮಾಡಿಸತಕ್ಕ ಔಷಧಗಳಿಗೆ ರೇಚನೌಷಧಗಳೆಂದು ಹೆಸರು ಉದಾಹರಣ ವಾಗಿ ತಿಗಡೆಯನ್ನು ಹೇಳಬಹುದು. ತಿಗಡೆಯು ಅಂತರ್ಗತವಾದ ಮಲವನ್ನು ದ್ರವ ರೂಪಕ್ಕೆ ತಂದು ರೇಚನಮಾಡಿಸುವ ಸ್ವಭಾವವುಳ್ಳದ್ದು.

**ಅಪಕ್ವಪಿತ್ತಶ್ಲೇಷ್ಮಾಣೌಬಲಾದೂರ್ಧ್ವಂನಯೇತ್ತುಯತ್ ॥ ೭ ॥**
**ವಮನಂತದ್ಧಿವಿಜ್ಞೇಯಂಮದನಸ್ಯಫಲಂಯಥಾ ॥**

ವಮನೌಷಧದ ಲಕ್ಷಣವೇನಂದರೆ, ಯಾವ ವಸ್ತುವು ಶರೀರಗತಗಳಾದ ಅಪ ಕ್ವಗಳಾದ ಪಿತ್ತ ಮತ್ತು ಶ್ಲೇಷ್ಮಗಳನ್ನು ಬಲವಂತದಿಂದ ಊರ್ಧ್ವಮುಖಗಳಾಗು ವಂತೆ ಮಾಡಿ ಮುಖಮಾರ್ಗದಿಂದ ಹೊರಕ್ಕೆ ಹೊರಡಿಸುತ್ತನೆಯೊ ಅಂತಹ ಔಷಧೋ ಪಯೋಗಿ ವಸ್ತುಗಳಿಗೆ ವಮನ ವಸ್ತುಗಳೆಂಬ ಹೆಸರು ಉದಾಹರಣ:- ಮದನಫಲ ಅಂದರೆ ಮಗ್ಗಾರೇಕಾಯಿ. ಶ್ಲೇಷ್ಮವನ್ನು ವಮನದ್ವಾರದಿಂದಲೂ ಪಿತ್ತವನ್ನು ವಿರೇಚನ ದ್ವಾರದಿಂದಲೂ ಹೊರಪಡಿಸಬೇಕೆಂಬ ಸಿದ್ಧಾಂತವಿರುತ್ತ ಪಿತ್ತವನ್ನುಸಹ ವಮನ ಮಾಡಿಸುವುದಕ್ಕೆ ವಮನೌಷಧವೆಂಬದಾಗಿಹೇಳಿದ್ದು ಅಸಂಗತವಾಗುತ್ತದೆ ಪಿತ್ತ ಪ್ರಕೋಪಕ್ಕೆ ಚಿಕಿತ್ಸೆಯೇ ವಿರೇಚನವೆಂದರೆ- ಅಪಕ್ವವಾದ ಪಿತ್ತವನ್ನು ವಮನದ್ವಾರ ದಿಂದಲೇ ಹೊರಹೊರಡಿಸಬೇಕು. “ **ಅಪಕ್ವಪಿತ್ತಸ್ಯವಮನಾದೇವನಿಬರ್ಹ ಣಂಬೋದ್ಧವ್ಯಂ**” ಎಂಬ ಪ್ರಮಾಣವಿರುವುದರಿಂದಲೂ ಆಮ್ಲಪಿತ್ತಾದಿ ಚಿಕಿತ್ಸೆಗಳಲ್ಲಿ ಹೀಗೆ ಮಾಡುವುದೇ ಸಂಪ್ರದಾಯವಾಗಿರುವುದರಿಂದಲೂ ಪಿತ್ತಕ್ಕೆ ವಮನವನ್ನು ಸೂಚಿ ಸಿರುವುದು ದೋಷವಲ್ಲ

**ಸ್ಥಾನಾದ್ಬಹಿರ್ನಯೇದೂರ್ಧ್ವಮಧೋವಾಮಲಸಂಚಯಂ ॥ ೮ ॥**
**ದೇಹಸಂಶೋಧನಂತತ್ಸ್ಯಾದ್ದೇವದಾಲೀಫಲಂಯಥಾ ॥**

ಪ್ರಕುಪಿತಗಳಾದ ಮಲಗಳನ್ನು ಸ್ವಸ್ಥಾನದಿಂದ ಹೊರಡಿಸಿ ಊರ್ಧ್ವದ್ವಾರ ದಿಂದಲಾಗಲಿ ಅಧೋದ್ವಾರದಿಂದಲಾಗಲಿ ಹೊರಕ್ಕೆ ಹೊರಡಿಸುವ ಪದಾರ್ಥಕ್ಕೆ ದೇಹ ಸಂಶೋಧನವೆಂಬ ಹೆಸರು. ಉದಾಹರಣೆಗಾಗಿ ದೇವದಾಲಿ ಎಂಬ ಬಳ್ಳಿಯ ಹಣ್ಣು ಇದು ಪ್ರಕುಪಿತಗಳಾದ ದೋಷಗಳನ್ನು ಊರ್ಧ್ವಾಧೋಮಾರ್ಗಗಳ ಮಧ್ಯೆ ಯಾವದಾ ದರೂ ಮಾರ್ಗದಿಂದ ಹೊರಡಿಸುತ್ತದೆ.

**ಶ್ಲಿಷ್ಟಾನ್‌ಕಫಾದಿಕಾನ್‌ದೋಷಾನುನ್ಮೂಲಯತಿಯದ್ಬಲಾತ್ ॥೯॥**
**ಭೇದನಂತದ್ಯಥಾಕ್ಷಾರೋಮರಿಚಾನಿಶಿಲಾಜತು ॥**

ಶರೀರದಲ್ಲಿ ಗಂಟುಹಾಕಿಕೊಂಡು ತೊಂದರೆ ಪಡಿಸುತ್ತಿರುವ ಕಫಾದಿ ದೋಷ ಗಳನ್ನು ಬಲಾತ್ಕಾರದಿಂದ ಕತ್ತರಿಸಿ ಸಮೂಲವಾಗಿ ಹೊರಕ್ಕೆ ಹೊರಡಿಸತಕ್ಕ ಪದಾರ್ಥ ಕ್ಕೆ ಭೇದನವೆಂದು ಹೆಸರು. ಉದಾಹರಣಾರ್ಥವಾಗಿ ಕ್ಷಾರಗಳು, ಮೆಣಸು, ಶಿಲಾಜಿತು ( ಗೋಮೂತ್ರ ) ಇವುಗಳು ಭೇದನೌಷಧಗಳು.

**ಧಾತೂನ್ಮಲಾನ್ವಾದೇಹಸ್ಯವಿಶೋಷ್ಯೋಲ್ಲೇಖಯೇಚ್ಚಯತ್ ॥೧೦॥**
**ಲೇಖನಂತದ್ಯಥಾಕ್ಷೌದ್ರಂನೀರಮುಷ್ಣಂವಚಾಯವಾಃ ॥**

ಶರೀರಗತವಾದ ಧಾತುಗಳನ್ನಾಗಲಿ, ವಾತ ಪಿತ್ತ ಶ್ಲೇಷ್ಮಗಳೆಂಬ ಮಲಗಳನ್ನಾಗಲಿ, ಶೋಷಿಸಿ ಕೆಡೆದು ಯಾವ ಪದಾರ್ಥವು ಹೊರಪಡಿಸುತ್ತದೋ ಅದಕ್ಕೆ ಲೇಖನವಸ್ತುವೆಂದು ಹೆಸರು. ಉದಾಹರಣೆ:- ಜೇನುತುಪ್ಪ ಮತ್ತು ಬಿಸಿನೀರನ್ನು ಸಹ ಸೇರಿಸಿ ಕುಡಿಸುವುದರಿಂದ ಲೇಖನಮಾಡುತ್ತದೆ. ಬಜೆ, ಯವೆ ಎಂಬ ಧಾನ್ಯ ಇವು ಲೇಖನ ವಸ್ತುಗಳು.

ದೀಪನಂಪಾಚನಂಯತ್ಸ್ಯಾದುಷ್ಣತ್ವಾದ್ದ್ರವಶೋಷಕಂ ॥ ೧೧ ॥
ಗ್ರಾಹಿತಚ್ಚಯಥಾಶುಂಠೀಜೀರಕಂಗಜಪಿಪ್ಪಲೀ ॥

ಯಾವ ವಸ್ತುವು ಅಗ್ನಿವೃದ್ಧಿಮಾಡುವುದಾಗಿಯೂ, ಆಮಗಳಾದ ಶರೀರಗತಗಳಾದ ದೋಷಗಳು ಮೊದಲಾದವುಗಳನ್ನು ಪಕ್ವಮಾಡುವುದಾಗಿಯೂ, ಉಷ್ಣಸ್ವಭಾವವುಳ್ಳದಾದ್ದರಿಂದ ಶರೀರಗತವಾದ ದ್ರವವಸ್ತುವನ್ನು ಶೋಷಿಸತಕ್ಕದ್ದಾಗಿಯೂ ಇದೆಯೋ ಅದಕ್ಕೆ ಗ್ರಾಹಿವಸ್ತುವೆಂಬ ಹೆಸರು ಉದಾಹರಣ.- ಶುಂಠಿ, ಜೀರಿಗೆ, ದೊಡ್ಡ ಹಿಪ್ಪಲಿ.

ರೌಕ್ಷ್ಯಾಚ್ಛೈತ್ಯಾತ್ಕಷಾಯತ್ವಾಲ್ಲಘುಪಾಕಾಚ್ಚಯದ್ಭವೇತ್ ॥೧೨॥
ವಾತಕೃತ್‌ಸ್ತಂಭನಂತತ್ಸ್ಯಾದ್ಯಥಾವತ್ಸಕಟುಂಟುಕೌ ॥

ಯಾವ ಪದಾರ್ಥವು ರೂಕ್ಷಗುಣ, ಶೀತವೀರ್ಯ, ಕಷಾಯರಸ, ಪಾಕಾವಸ್ಥೆಯಲ್ಲಿ ಲಘುವಾಗಿರೋಣ ಈ ಕಾರಣಗಳಿಂದ ವಾತವನ್ನು ವೃದ್ಧಿಮಾಡುತ್ತದೋ ಅಂತಹ ವಸ್ತುವಿಗೆ ಸ್ತಂಭನವಸ್ತುವೆಂಬ ಹೆಸರು. ಉದಾಹರಣ.- ಕೊಡಸ, ಸ್ಯೋನಾಕವೆಂಬ ಮೂಲಿಕೆ

ರಸಾಯನಂಚತದ್‌ಜ್ಞೇಯಂಯಜ್ಜರಾವ್ಯಾಧಿನಾಶನಂ ॥ ೧೩ ॥
ಯಥಾಮೃತಾರುದಂತೀಚಗುಗ್ಗುಲುಶ್ಚಹರೀತಕೀ ॥

ಯಾವ ಪದಾರ್ಥವು ಜರಾ ಅಂದರೆ ಹಳತಾದ ಹಾಗೆಲ್ಲಾ ಜೀರ್ಣವಾಗತಕ್ಕ ಶರೀರದ ಸ್ವಾಭಾವಿಕವಾದ ಗುಣವನ್ನೂ ಮತ್ತು ಶರೀರಕ್ಕೆ ಬರತಕ್ಕ ರೋಗಗಳನ್ನೂ ನಾಶಮಾಡುತ್ತದೋ ಅಂತಹ ವಸ್ತುವಿಗೆ ರಸಾಯನವೆಂಬ ಹೆಸರು. ಉದಾಹರಣೆ.- ಅಮೃತಬಳ್ಳಿ, ರುದಂತಿ ಎಂಬದೊಂದು ಮೂಲಿಕೆ, ಗುಗ್ಗುಳ, ಅಳಲೇಕಾಯಿ ಇವುಗಳು.

ಯಸ್ಮಾದ್ದ್ರವ್ಯಾದ್ಭವೇತ್‌ಸ್ತ್ರೀಷುಹರ್ಷೋವಾಜೀಕರಂಚತತ್॥೧೪॥
ಯಥಾನಾಗಬಲಾದ್ಯಾಸ್ಯುರ್ಬೀಜಂಚಕಪಿಕಚ್ಛುಜಂ ॥

ಯಾವ ಪದಾರ್ಥದ ಉಪಯೋಗದಿಂದ ಮನುಷ್ಯನಿಗೆ ಸ್ತ್ರೀಯರ ವಿಷಯದಲ್ಲಿ ಅಂದರೆ, ಸ್ತ್ರೀಗಮನದಲ್ಲಿ ಮನಸ್ಸಿಗೆ ಅತೀವ ಸಂತೋಷವಾಗುತ್ತದೆಯೋ ಅಂತಹ ವಸ್ತುವಿಗೆ ವೈದ್ಯಶಾಸ್ತ್ರದಲ್ಲಿ ವಾಜೀಕರಣದ್ರವ್ಯವೆಂಬ ಹೆಸರು. ಉದಾಹರಣ, ನಾಗಬಲಾ ಎಂದರೆ ಕಳ್ಳಂಗಡ್ಲೆ ಮತ್ತು ನಸುಗುನ್ನಿಯಬೀಜ.

ಯಸ್ಮಾತ್ ಶುಕ್ರಸ್ಯವೃದ್ಧಿಸ್ಯಾತ್ ಶುಕ್ರಲಂಚತದುಚ್ಯತೆ ॥ ೧೫ ॥
ಯಥಾಶ್ವಗಂಧಾಮುಸಲೀಶರ್ಕರಾಚಶತಾವರೀ ॥
ದುಗ್ಧಂಮಾಷಾಶ್ಚಭಲ್ಲಾತಫಲಮಜ್ಜಾಮಲಾನಿಚ ॥ ೧೬ ॥
ಪ್ರವರ್ತಕಾನಿಕಥ್ಯಂತೆಜನಕಾನಿಚರೇತಸಃ ॥

ಯಾವ ವಸ್ತುವಿನ ಉಪಯೋಗದಿಂದ ಶುಕ್ರಧಾತುವು ವೃದ್ಧಿಯಾಗುತ್ತದೋ

ಅದಕ್ಕೆ ಶುಕ್ರಲವೆಂಬದಾಗಿ ಹೆಸರು. ಉದಾಹರಣೆ- ಅಶ್ವಗಂಧಿ, ನೆಲದೆಂಗು, ಸಕ್ಕರೆ, ಹಲವುಮಕ್ಕಳಬೇರು ಇವುಗಳು ಮತ್ತು ಹಾಲು, ಉದ್ದಿನಬೇಳೆಯಿಂದ ಮಾಡಲ್ಪಟ್ಟ ವಸ್ತುಗಳು, ಗೇರುವಪ್ಪು, ನೆಲ್ಲೀಕಾಯಿ ಇವುಗಳು ರೇತಸ್ಸನ್ನು ಉತ್ಪತ್ತಿಮಾಡುವುದು ಮತ್ತು ವೃದ್ಧಿಮಾಡುವುದು ಇಂತಹ ಕಾರ್ಯಕ್ಕೆ ಅತ್ಯುಪಯುಕ್ತಗಳು.

**ಪ್ರವರ್ತನೀಸ್ತ್ರೀಶುಕ್ರಸ್ಯರೇಚನಂಬೃಹತೀಫಲಂ || ೧೭ ||**
**ಜಾತೀಫಲಂಸ್ತಂಭನಂಚಶೋಷಣೀಚಹರೀತಕೀ ||**

ಸ್ವಸ್ಥಾನದಲ್ಲಿರುವ ಶುಕ್ರವು ಸ್ಥಾನವನ್ನು ಬಿಟ್ಟು ಹೊರಬೇಕಾದರೆ ಅದಕ್ಕೆ ಪ್ರವರ್ತಕಳಾದವಳು ಸ್ತ್ರೀ, ಅಂದರೆ ಸ್ತ್ರೀದರ್ಶನಸ್ಪರ್ಶನಾದಿಗಳಿಂದ ಶುಕ್ರಧಾತುವು ಸ್ವಸ್ಥಾನದಿಂದ ಹೊರಡುತ್ತದೆಂಬ ಭಾವ ಈ ಕೆಲಸ ಸ್ವಾಭಾವಿಕ, ಇನ್ನು ಬಲಾತ್ಕಾರದಿಂದ ಶುಕ್ರರೇಚನಮಾಡಿಸಬೇಕಾದರೆ ಬೃಹತೀಫಲಂ ಅಂದರೆ ಗುಳ್ಳದಕಾಯನ್ನು ಉಪಯೋಗಿಸಿದರೆ ಆಗುತ್ತದೆ ಶುಕ್ರವು ಜಾರದಂತೆ ಸ್ವಸ್ಥಾನದಲ್ಲಿಯೇ ನಿಲ್ಲಿಸಬೇಕಾದರೆ ಜಾಯಿಕಾಯಿಯಿಂದಾಗುತ್ತದೆ ಅಳಲೇಕಾಯಿ ಶುಕ್ರಧಾತುವನ್ನು ಶೋಷಿಸಿ ಮೂಲತಃ ನಾಶವೇ ಮಾಡಿಬಿಡುತ್ತದೆ

**ದೇಹಸ್ಯಸೂಕ್ಷ್ಮಛಿದ್ರೇಷುವಿಶೇದ್ಯತ್ಸೂಕ್ಷ್ಮಮುಚ್ಯತೇ || ೧೮ ||**
**ತದ್ಯಥಾಸೈಂಧವಂಕ್ಷೌದ್ರಂನಿಂಬತೈಲಂರುಬೂದ್ಭವಂ ||**

ಶರೀರದಲ್ಲಿರುವ ರೋಮಕೂಪಗಳೇ ಮುಂತಾದ ಸೂಕ್ಷ್ಮರಂಧ್ರಗಳದ್ವಾರ ಯಾವ ವಸ್ತುವು ಶರೀರದೊಳಕ್ಕೆ ಪ್ರವೇಶಿಸುವಷ್ಟು ಸಾಮರ್ಥ್ಯವನ್ನು ಹೊಂದಿರುತ್ತದೆಯೋ ಅಂತಹ ವಸ್ತುವಿಗೆ ಸೂಕ್ಷ್ಮವಸ್ತುವೆಂದು ಹೆಸರು ಉದಾಹರಣ - ಸೈಂಧಲವಣ, ಜೇನುತುಪ್ಪ, ಬೇವಿನಎಣ್ಣೆ, ಹರಳೆಣ್ಣೆ ಇವುಗಳು.

**ಪೂರ್ವಂವ್ಯಾಪ್ಯಾಖಿಲಂಕಾಯಂತತಃಪಾಕಂಚಗಚ್ಛತಿ || ೧೯ ||**
**ವ್ಯವಾಯಿತದ್ಯಥಾಭಂಗಾಫೇನಂಚಾಹಿಸಮುದ್ಭವಂ ||**

ಯಾವ ವಸ್ತುವನ್ನು ತಿಂದ ಮಾತ್ರವೇ ಜೀರ್ಣವಾಗುವ ಮೊದಲೇ ಶರೀರಕ್ಕೆಲ್ಲಾ ವ್ಯಾಪಿಸಿ ನಂತರ ಜೀರ್ಣವಾಗುತ್ತದೋ ಅಂತಹ ವಸ್ತುವಿಗೆ ವ್ಯವಾಯಿ ಎಂಬ ಹೆಸರಿದೆ. ಉದಾಹರಣೆ:- ಭಂಗಿ, ಅಫೀಮು.

**ಸಂಧಿಬಂಧಾಂಸ್ತುಶಿಥಿಲಾನ್ಯತ್ಕರೋತಿವಿಕಾಸಿತತ್ || ೨೦ ||**
**ವಿಶ್ಲೇಷ್ಯೌಜಶ್ಚಧಾತುಭ್ಯೋಯಥಾಕ್ರಮುಕಕೋದ್ರವಾಃ ||**

ಯಾವ ಪದಾರ್ಥವು ತಿಂದ ಮಾತ್ರದಲ್ಲಿ ಶರೀರಗತವಾದ ಓಜೋಧಾತುವನ್ನು ಇತರ ಧಾತುಗಳಿಂದ ಪ್ರತ್ಯೇಕಿಸಿ ತನ್ಮೂಲಕ ಶರೀರದ ಸಂಧಿಬಂಧಗಳನ್ನೆಲ್ಲಾ ಸಡಿಲ ಹುಟ್ಟಿಸುತ್ತದೆಯೋ ಅಂತಹ ವಸ್ತುವಿಗೆ “ ವಿಕಾಸಿ ” ಎಂಬದಾಗಿ ಹೆಸರು. ಅಡಿಕೆ, ಮುಗ್ಗಿದಧಾನ್ಯಗಳು, ಇವುಗಳು ಈ ವಿಕಾಸಿ ಪದಾರ್ಥದ ವರ್ಗಕ್ಕೆ ಸೇರಿದವುಗಳು. ಎಂದರೆ ಕೊಂಚ ಮದಜನಕಗಳು.

**ಬುದ್ಧಿಂಲುಂಪತಿಯದ್ದ್ರವ್ಯಂಮದಕಾರಿತದುಚ್ಯತೇ || ೨೧ ||**
**ತಮೋಗುಣಪ್ರಧಾನಂಚಯಥಾಮದ್ಯಂಸುರಾದಿಕಂ ||**

ಯಾವ ಪದಾರ್ಥವು ತಮೋಗುಣ ಪ್ರಧಾನವಾದ್ದರಿಂದ ಶರೀರಗತವಾದ ಕೂಡಲೆ ಬುದ್ಧಿಶಕ್ತಿಯನ್ನು ಹಾಳುಮಾಡುತ್ತದೋ ಅದಕ್ಕೆ ಮದಕರದ್ರವ್ಯವೆಂಬ ಹೆಸರು. ಉದಾಹರಣೆ:- ಮದ್ಯ, ಸುರೆ ಮೊದಲಾದವು.

**ವ್ಯವಾಯಿಚವಿಕಾಸಿಸ್ಯಾತ್ಸೂಕ್ಷ್ಮಂಛೇದಿಮದಾವಹಂ ॥ ೨೨ ॥**
**ಆಗ್ನೇಯಂಜೀವಿತಹರಂಯೋಗವಾಹಿಸ್ಮೃತಂವಿಷಂ ॥**

ಯಾವ ಪದಾರ್ಥವು ಹಿಂದೆ ಹೇಳಿದ ವ್ಯವಾಯಿ, ವಿಕಾಸಿ, ಸೂಕ್ಷ್ಮ, ಛೇದಿ, ಮದಜನಕ ಇತ್ಯಾದಿ ಗುಣಯುಕ್ತವಾಗಿ ಆಗ್ನೇಯಂ ಎಂದರೆ ಅತ್ಯುಷ್ಣವೂ ಕ್ರೂರವೂ ಆಗಿ ಪ್ರಾಣಹರಣವೂ ಮಾಡುತ್ತದೆಯೋ ಅಂತಹ ವಸ್ತುವಿಗೆ ಯೋಗವಾಹಿ ಎಂಬ ಹೆಸರು. ಉದಾಹರಣೆ:- ವಿಷ.

**ನಿಜವೀರ್ಯೇಣಯದ್ದ್ರವ್ಯಂಸ್ರೋತೋಭ್ಯೋದೋಷಸಂಚಯಂ॥೨೩॥**
**ನಿರಸ್ಯತಿಪ್ರಮಾಥಿಸ್ಯಾತ್ತದ್ಯಥಾಮರಿಚಂವಚಾ ॥**

ಯಾವ ಪದಾರ್ಥವು ಸ್ವಗತವಾದ ವೀರ್ಯದಿಂದ ಶರೀರದಲ್ಲಿರತಕ್ಕ ಸ್ರೋತಸ್ಸುಗಳಲ್ಲಿ ವ್ಯಾಪ್ತವಾಗಿರುವ ದೋಷಗಳನ್ನು ಹೊರಡಿಸುತ್ತದೆಯೋ ಅದಕ್ಕೆ ಪ್ರಮಾಥಿ ಎಂದು ಹೆಸರು ಉದಾಹರಣೆ:- ಮೆಣಸು, ಬಜೆ, ಇವುಗಳು.

**ಪೈಚ್ಛಿಲ್ಯಾದ್ಗೌರವಾದ್ದ್ರವ್ಯಂರುದ್ಧ್ವಾರಸವಹಾಶ್ಶಿರಾಃ ॥ ೨೪ ॥**
**ಧತ್ತೇಯದ್ಗೌರವಂತತ್ಸ್ಯಾದಭಿಷ್ಯಂದಿಯಥಾದಧಿ ॥**

ಯಾವ ವಸ್ತುವು ಸ್ವಗತವಾದ ಪಿಚ್ಛಿಲ (ಜಿಗಟು) ಗುಣದಿಂದಲೂ ಗುರುಗುಣದಿಂದಲೂ ರಸಧಾತುವಾಹಿ ನಾಡಿಗಳನ್ನು ನಿರೋಧಮಾಡಿ ಅಂದರ ತಡದು ಶರೀರದಲ್ಲಿ ಗೌರವವನ್ನು ಅಂದರೆ ಒಂದುವಿಧವಾದ ಮಾಂದ್ಯವನ್ನುಂಟುಮಾಡುತ್ತದೆಯೋ ಅದಕ್ಕೆ ಅಭಿಷ್ಯಂದಿ ಎಂಬ ಹೆಸರು. ಉದಾಹರಣೆ:- ಮೊಸರು

**-: ನಾಲ್ಕನೆಯ ಅಧ್ಯಾಯ ಸಂಪೂರ್ಣ. :-**

## ಪಂಚಮಾಧ್ಯಾಯ ಪ್ರಾರಂಭ.

**ಧಾತ್ವಾಶಯಾಂತರಸ್ಥಸ್ತುಯಃಕ್ಲೇದಸ್ತ್ವಧಿತಿಷ್ಠತಿ ॥**
**ದೇಹೋಷ್ಮಣಾವಿಪಕ್ವೋಯಸ್ಸಾಕಲೇತ್ಯಭಿಧೀಯತೆ ॥ ೧ ॥**
**ಕಲಾಸ್ಸಪ್ತಾಶಯಾಸ್ಸಪ್ತಧಾತವಸ್ಸಪ್ತತನ್ಮಲಾಃ ॥**
**ಸಪ್ತೋಪಧಾತವಸ್ಸಪ್ತತ್ವಚಸ್ಸಪ್ತಪ್ರಕೀರ್ತಿತಾಃ ॥ ೨ ॥**
**ತ್ರಯೋದೋಷಾನವಶತಂಸ್ನಾಯೂನಾಂಸಂಧಯಸ್ತಥಾ ॥**
**ದಶಾಧಿಕಂಚದ್ವಿಶತಮಸ್ಥ್ನಾಂಚತ್ರಿಶತಂತಥಾ ॥ ೩ ॥**
**ಸಪ್ತೋತ್ತರಂಮರ್ಮಶತಂಶಿರಾಃಸಪ್ತಶತಂತಥಾ ॥**
**ಚತುರ್ವಿಂಶತಿರಾಖ್ಯಾತಾಧಮನ್ಯೋರಸವಾಹಿಕಾಃ ॥ ೪ ॥**
**ಮಾಂಸಪೇಶ್ಯಸ್ಸಮಾಖ್ಯಾತಾನೃಣಾಂಪಂಚಶತಂಬುಧೈಃ ॥**

**ಸ್ತ್ರೀಣಾಂಚವಿಂಶತ್ಯಧಿಕಾಃಕಂಡರಾಶ್ಚೈವಷೋಡಶ ॥ ೫ ॥**
**ನೃದೇಹೇದಶರಂಧ್ರಾಣಿನಾರೀದೇಹೇತ್ರಯೋದಶ ॥**
**ಏತತ್ಸಮಾಸತಃಪ್ರೋಕ್ತಂವಿಸ್ತರೇಣಾಧುನೋಚ್ಯತೇ ॥ ೬ ॥**

ಮೊದಲಿನ ಶ್ಲೋಕವು ಅಧಿಕಪಾಠವೆಂದು ವ್ಯಾಖ್ಯಾನದವರು ಬಿಟ್ಟಿದಾರೆ. ಅರ್ಥವೇನಂದರೆ- ಧಾತುಗಳು ಅಂದರೆ ಶರೀರದಲ್ಲಿರತಕ್ಕ ರಸರಕ್ತಾದಿಧಾತುಗಳು, ಆಶಯಗಳು ಅಂದರೆ ಆಹಾರಗಳು ಶರೀರಗತವಾಗಿ ಶರೀರದಲ್ಲಿ ಧಾತುವಾಗಿ ಪರಿಣಮಿಸುವುದಕ್ಕೋಸ್ಕರ ಸಲ್ಲತಕ್ಕ ಪ್ರದೇಶಗಳು, ಈ ಧಾತು ಮತ್ತು ಆಶಯಗಳ ನಡುವೆ ಇರತಕ್ಕ ದೇಹಗತವಾದ ಉಷ್ಣದಿಂದ ಪರಿಪಕ್ವವಾದ ಒಂದು ಬಗೆಯ ಕ್ಲೇದ ಎಂದರ ದ್ರವವಸ್ತುವಿಗೆ ಕಲಾ ಎಂಬ ಹೆಸರು. ಇಂತಹ ಕಲೆಗಳು ಏಳು, ಆಶಯಗಳೂ ಏಳು, ಧಾತುಗಳೂ ಏಳು, ಧಾತುಮಲಗಳೂ ಏಳು, ಧಾತ್ವಾಶ್ರಿತಗಳಾದ ಉಪಧಾತುಗಳೂ ಏಳು, ಚರ್ಮಗಳು ಏಳು, ವಾತಪಿತ್ತಶ್ಲೇಷ್ಮಗಳೆಂಬುವು ಮೂರುದೋಷಗಳು, ನರಗಳು ಒಂಬತ್ತುನೂರು, ಸಂಧಿಗಳು ಎರಡುನೂರಾಇಪ್ಪತ್ತು, ಎಲುಗಳು ಮೂರುನೂರು, ಒಂದುನೂರಏಳು ಮರ್ಮಸ್ಥಾನಗಳು, ಸಿರಾ ಎಂಬ ನರಗಳು ಏಳುನೂರು, ರಸಧಾತುವನ್ನು ಶರೀರದಲ್ಲಿ ಸಂಚಾರಮಾಡಿಸತಕ್ಕ ಧಮನಿಗಳೆಂಬ ನರಗಳು ಇಪ್ಪತ್ತನಾಲ್ಕು, ಮಾಂಸಖಂಡಗಳು ಐದುನೂರು, ಹೆಂಗಸರ ಶರೀರದಲ್ಲಿ ಮಾಂಸಖಂಡಗಳು ಗಂಡಸರಿಗಿರುವುದಕ್ಕಿಂತ ಇಪ್ಪತ್ತು ಹೆಚ್ಚು. ಶರೀರಕ್ಕೆ ಬಿಗಿಯನ್ನುಂಟುಮಾಡತಕ್ಕ ಕಂಡರ ಎಂಬ ಒಂದು ಬಗೆಯ ನರದ ಭಾಗಗಳು ಹದಿನಾರು, ಪುರುಷರ ಶರೀರದಲ್ಲಿ ಹತ್ತು ರಂಧ್ರಗಳು, ಸ್ತ್ರೀಯರ ಶರೀರದಲ್ಲಿ ಹದಿಮೂರು ರಂಧ್ರಗಳು, ಈ ರೀತಿಯಲ್ಲಿ ಸಾಮಾನ್ಯತಃ ದೇಹರಚನೆಯಲ್ಲಿರುವ ಪದಾರ್ಥಗಳನ್ನು ಹೇಳಿಯಾಯಿತು, ಮುಂದೆ ಇದೇ ವಿಷಯವನ್ನು ವಿಸ್ತಾರವಾಗಿ ಹೇಳುತ್ತಾನೆ.

**ಮಾಂಸಾಸೃಙ್ಮೇದಸಾಂತಿಸ್ರೋಯಕೃತ್ಪ್ಲೀಹ್ನೋಶ್ಚತುರ್ಥಿಕಾ॥**
**ಪಂಚಮೀಚತಥಾನ್ತ್ರಾಣಾಂಷಷ್ಠೀಚಾಗ್ನಿಧರಾಮತಾ ॥ ೭ ॥**
**ರೇತೋಧರಾಸಪ್ತಮೀಸ್ಯಾದಿತಿಸಪ್ತಕಲಾಸ್ಮೃತಾಃ ॥**

ಸಂಕ್ಷೇಪವಾಗಿ ಹಿಂದೆ ಸಪ್ತಕಲೆಗಳನ್ನು ಹೇಳಿ ಈ ಶ್ಲೋಕದಲ್ಲಿ ವಿಸ್ತಾರವಾಗಿ ಕಲೆಗಳನ್ನೇ ವಿವರಿಸುತ್ತಾನೆ. ಏಳು ಕಲೆಗಳಲ್ಲ ಮೊದಲನೆಯ ಕಲೆಗೆ "**ಮಾಂಸಧರಾ**" ಎಂಬ ಹೆಸರ, ಸುಶ್ರುತದಲ್ಲಿ ಈ ವಿಷಯವಾಗಿ ಹೇಳಿರುವುದೇನಂದರೆ.- "**ತಾಸಾಂ ಪ್ರಥಮಾಮಾಂಸಧರಾನಾಮ ಯಸ್ಯಾಂಮಾಂಸೇಶಿರಾಸ್ನಾಯುಧಮನೀಸ್ರೋತಸಾಂಪ್ರತಾನಾಭವಂತಿ**" ಎಂದರೆ ಮೊದಲನೆಯ ಕಲೆಗೆ ಮಾಂಸಧರಾ ಎಂಬ ಹೆಸರು ಇದರ ಉಪಯೋಗವೇನಂದರೆ ಮಾಂಸಗತವಾದ ಸಿರ, ಸ್ನಾಯು, ಧಮನಿ ಎಂಬ ಮೂರು ವಿಧಗಳಾದ ನರಗಳೂ ಈ ಮಾಂಸಗತವಾದ "**ಮಾಂಸಧರಾ**" ಎಂಬ ಕಲೆಯ ಸಹಾಯದಿಂದಲೇ ವೃದ್ಧಿಯಾಗುತ್ತಿವೆ. ಎರಡನೆಯ ಕಲೆಗೆ ರಕ್ತಧರಾ ಎಂಬ ಹೆಸರು, ಸುಶ್ರುತದಲ್ಲಿ "**ದ್ವಿತೀಯಾರಕ್ತಧರಾನಾಮ ಮಾಂಸಸ್ಯಾಭ್ಯಂತರತಸ್ತಸ್ಯಾಂಶೋಣಿತಂವಿಶೇಷತಶ್ಚ ಶಿರಾಸ್ನಾಯುಯಕೃತ್ಪ್ಲೀಹ್ನೋಶ್ಚ ಭವತಿ**" ಎಂದರೆ ಎರಡನೆಯ ಕಲೆಗೆ ರಕ್ತಧರಾ ಎಂಬ ಹೆಸರು, ಈ ಕಲೆಯು ಮಾಂಸಮಧ್ಯದಲ್ಲಿಯೂ,

ಸಿರ, ಸ್ನಾಯು, ಯಕೃತ್ ಎಂಬ ಅವಯುವ, ಪ್ಲೀಹ ಎಂಬ ಅವಯುವ, [illegible] ವ್ಯಾಪಿಸುತ್ತದ. ರಕ್ತಧರಾ ಎಂಬ ಕಲೆಯನ್ನು ಗುರ್ತಿಸುವ [illegible] ವರೂ ಹಾಲು ಬರತಕ್ಕ ಮರವನ್ನು ಆಯುಧದಿಂದ [illegible] ದಿಂದ ಹಾಲು ಸುರಿಯುವಂತೆ ಈ ರಕ್ತಧರಾ ಎಂಬ [illegible] ಇರುವ ಪ್ರದೇಶಕ್ಕೆ [illegible] ದಾದರೂ ಪೆಟ್ಟು ಬಿದ್ದರೆ ಅಲ್ಲಿಂದ ರಕ್ತಸ್ರಾವನಾಗುತ್ತದೆ [illegible] ಕಲೆಗೆ ಮೇಧೋಧರಾ ಎಂಬ ಹೆಸರು ಸುಶ್ರುತದಲ್ಲಿ " [illegible] **ಮೇಧೋಹಿ ಸರ್ವಭೂತಾನಾಮುದರ [illegible]** **ವತಿ** " ಎಂದರೆ ಮೂರನೆಯ ಕಲೆಗೆ ಮೇದೋಧರಾ ಎಂಬ ಹೆಸರು ಈ ಕಲೆಯು ಮನುಷ್ಯರ ಹೊಟ್ಟೆಯ ಕೆಳಭಾಗ ಅಂದರೆ ಕಿಬ್ಬೊಟ್ಟೆಯ [illegible] ಪ್ರದೇಶದಲ್ಲಿರುತ್ತದೆ ಮತ್ತು ಶರೀರಗತವಾದ ಸ್ಥೂಲ [illegible] ಅಣ್ವಸ್ಥಿಗಳಲ್ಲಿಯೂ ಈ ಮೇದಸ್ಸು ಇರುತ್ತದೆ ಇದೇ ಮೇದಸ್ಸು [illegible] ವಸ್ಥಿಗಳ ಪೃಷ್ಠ ದಲ್ಲಿ ಮಜ್ಜಾ ಎನ್ನಿಸಿಕೊಂಡಿರುತ್ತದೆ ಈ ರೀತಿ ಮೇದಸ್ಸು [illegible] ಭಾಗಗಳಿರು ವ ಕಡೆಗಳಲ್ಲೆಲ್ಲಾ ಮೇಧೋಧರಾ ಎಂಬ ಕಲೆಯು ಇರುತ್ತದೆ ನಾಲ್ಕನೆಯ ಕಲೆಗೆ ಶ್ಲೇಷ್ಮಧರಾ ಎಂಬ ಹೆಸರು ಈ ಕಲೆಯು ಯಕೃತ್ ಎಂಬ ಅವಯುವದಲ್ಲಿಯೂ ಪ್ಲೀಹ ಎಂಬ ಅವಯುವದಲ್ಲಿಯೂ ಇರುತ್ತದೆ ಸುಶ್ರುತದಲ್ಲಿ " **ಚತುರ್ಥೀಶ್ಲೇಷ್ಮಧರಾನಾಮುಸರ್ವಸಂಧಿಷುಪ್ರಾಣಭೃತಾಂಭವತಿ** " ನಾಲ್ಕನೆಯ ಕಲೆಗೆ ಶ್ಲೇಷ್ಮಧರಾ ಎಂಬ ಹೆಸರು, ಅವಯುವಗಳಲ್ಲಿರತಕ್ಕ ಎಲ್ಲಾ ಕೀಲುಗಳಲ್ಲಿಯೂ ಈ ಕಲೆಯ ಸ್ಥಿತಿಯು ಗೊತ್ತಾಗುತ್ತದೆ ಬಂಡಿಯ ಅಚ್ಚಿನಲ್ಲಿ ಚಕ್ರ ತಗುಲಿಕೊಂಡಿರುವ ಭಾಗಕ್ಕೆ ಪದೇ ಪದೇ ಎಣ್ಣೆಯನ್ನು ಹಚ್ಚುತ್ತಿದ್ದರೇನೇ ಚಕ್ರವು ಸಲೀಸಾಗಿ ತಿರುಗುತ್ತದೆ ಅದರಂತೆ ಈ ಶ್ಲೇಷ್ಮಧರಾ ಎಂಬ ಕಲೆಯ ಸಹಾಯದಿಂದಲೇ ಶರೀರದಲ್ಲಿರತಕ್ಕ ಕೀಲುಗಳೆಲ್ಲಾ ತಡೆ ಯಿಲ್ಲದೆ ತಮ್ಮ ಕಾರ್ಯಗಳನ್ನು ಮಾಡುತ್ತಿರುತ್ತವೆ ಐದನೆಯ ಕಲೆಗೆ ಪುರೀಷಧರಾ ಎಂಬ ಹೆಸರು. ಇದು ಉದರಗತವಾದ ಅಂತ್ರ ( ಕರುಳು ) ಎಂಬ ಭಾಗದಲ್ಲಿರುತ್ತದೆ. ಸುಶ್ರುತದಲ್ಲಿ " **ಪಂಚಮೀಪುರೀಷಧರಾನಾಮಯಾಂತಃಕೋಷ್ಠೇಮಲಮಭಿವಿಭಜತೆಪಕ್ವಾಶಯಸ್ಥಾ** " ಎಂದರೆ ಈ ಪುರೀಷಧರಾ ಎಂಬ ಕಲೆಯು ಪಕ್ವಾಶಯದಲ್ಲಿದ್ದುಕೊಂಡು ಕೋಷ್ಠಗತವಾದ ಆಹಾರಪದಾರ್ಥದಲ್ಲಿ ಸಾರವಾದ ಭಾಗ ಮತ್ತು ಮಲಗಳನ್ನು ಪ್ರತ್ಯೇಕಿಸುತ್ತದೆ. ಆರನೆಯ ಕಲೆಗೆ ಅಗ್ನಿಧರಾ ಎಂಬ ಹೆಸರು. ಸುಶ್ರುತದಲ್ಲಿ " **ಷಷ್ಠೀಪಿತ್ತಧರಾನಾಮಯಾಚತುರ್ವಿಧಮನ್ನಪಾನಮುಪಯುಕ್ತಮಾಮಾಶಯಾತ್ಪ್ರಚ್ಯುತಂಪಕ್ವಾಶಯೋಪಸ್ಥಿತಂಧಾರಯತಿ** " ಆರನೆಯ ಕಲೆಗೆ ಪಿತ್ತಧರಾ ಎಂಬ ಹೆಸರು ಈ ಕಲೆಯು ಆಮಾಶಯದಿಂದ ಪಕ್ವಾಶಯಕ್ಕೆ ತಳ್ಳಲ್ಪಟ್ಟ ಅನ್ನಪಾನಗಳನ್ನು ತಡದು ಜೀರ್ಣವಾಗುವಂತೆ ಮಾಡುತ್ತದೆ. ಈ ವಿಷಯದಲ್ಲಿ ಪ್ರಮಾಣ." **ಅಶಿತಂ ಖಾದಿತಂ ಪೀತಂ ಲೀಢಂ ಕೋಷ್ಠಗತಂ ನೃಣಾಂ ॥ ತಜ್ಜೀರ್ಯತಿಯಥಾಕಾಲಂ ಶೋಷಿತಂಪಿತ್ತತೇಜಸಾ ॥** " ಏಳನೆಯ ಕಲೆಗೆ ರೇತೋಧರಾ ಎಂಬ ಹೆಸರು. ಸುಶ್ರುತದಲ್ಲಿ " **ಸಪ್ತಮೀಶುಕ್ರಧರಾನಾಮಯಾಸರ್ವಪ್ರಾಣಿನಾಂಸರ್ವಶರೀರವ್ಯಾಪಿನೀ** " ಏಳನೆಯ ಕಲೆಗೆ ಶುಕ್ರಧರಾ ಎಂಬ ಹೆಸರು- ಈ ಶುಕ್ರಧರಾ ಎಂಬ ಕಲೆಯು ಸರ್ವ ಶರೀರದಲ್ಲಿಯೂ ವ್ಯಾಪ್ತವಾಗಿರುತ್ತದೆ. " **ಯಥಾಪಯಸಿಸರ್ಪಿಸ್ತುಗೂಢ**

ಶ್ಚೇಕ್ಷೌರಸೋಯಥಾ || ಶರೀರೇಷುತಥಾಶುಕ್ರಂನೃಣಾಂವಿದ್ಯಾದ್ಭಿಷಗ್ವರಃ ||" ಹಾಲಿನಲ್ಲಿರತಕ್ಕ ಬೆಣ್ಣೆ ತುಪ್ಪಗಳು ಯಾವರೀತಿ ಪ್ರತ್ಯೇಕವಾಗಿ ಕಾಣದೆ ಗೂಢವಾಗಿರುತ್ತವೋ ಹಾಗೆ ಶುಕ್ರಧಾತುವು ಶರೀರದಲ್ಲಿ ಸರ್ವತ್ರ ವ್ಯಾಪ್ತವಾಗಿರುತ್ತದೆ.

ಶ್ಲೇಷ್ಮಾಶಯಃಸ್ಯಾದುರಸಿತಸ್ಮಾದಾಮಾಶಯಸ್ತ್ವಧಃ || ೭ ||
ಊರ್ಧ್ವಮಗ್ನ್ಯಾಶಯೋನಾಭೇರ್ವಾಮಭಾಗೇವ್ಯವಸ್ಥಿತಃ ||
ತಸ್ಯೋಪರಿತಿಲಂಜ್ಞೇಯಂತದಧಃಪವನಾಶಯಃ || ೮ ||
ಮಲಾಶಯಸ್ತ್ವಧಸ್ತಸ್ಮಾದ್ಬಸ್ತಿರ್ಮೂತ್ರಾಶಯಸ್ತ್ವಧಃ ||
ಜೀವರಕ್ತಾಶಯಮುರೋಜ್ಞೇಯಾಸ್ಸಪ್ತಾಶಯಾಸ್ತ್ವಮೀ || ೯ ||
ಪುರುಷೇಭ್ಯೋಧಿಕಾಶ್ಚಾನ್ಯೇನಾರೀಣಾಮಾಶಯಾಸ್ತ್ರಯಃ ||
ಧರಾಗರ್ಭಾಶಯಃಪ್ರೋಕ್ತಸ್ತನೌಸ್ತನ್ಯಾಶಯೌಮತೌ || ೧೦ ||

ಕಲಗಳನ್ನು ಹೇಳಿ ಆಶಯಗಳನ್ನು ಹೇಳುತ್ತಾನೆ ವಕ್ಷಸ್ಥಳದಲ್ಲಿ ಅಂದರೆ ಎದೆಯಲ್ಲಿ ಶ್ಲೇಷ್ಮಾ ಶಯವಿದೆ ಆ ಶ್ಲೇಷ್ಮಾಶಯದ ಕೆಳಭಾಗದಲ್ಲಿ ಆಮಾಶಯ (ಅಂದರೆ ಭೋಜನ ಮಾಡಿದ ಆಹಾರವು ಅಪಕ್ವವಾಗಿಯೇ ನಿಲ್ಲತಕ್ಕಸ್ಥಾನ ) ವಿದೆ. " ನಾಭಿಸ್ತನಾಂತರಂಜಂತೋರಾಮಾಶಯಇತಿಸ್ಮೃತಃ " ನಾಭಿಯ ಮೇಲ್ಭಾಗದಲ್ಲಿ ಅಗ್ನ್ಯಾಶಯವೆಂದರೆ ಪಾಚಕವೆಂಬ ಜಠರಾಗ್ನಿಗೆ ಸ್ಥಾನವಾದ ಗ್ರಹಣಿ ಎಂಬ ಹೆಸರಿನ ಅಗ್ನ್ಯಾಶಯವಿದೆ ಇದು ನಾಭಿಯ ಮೇಲ್ಭಾಗದಲ್ಲಿ ಬಲಗಡೆಯಲ್ಲಿದೆ " ಅಗ್ನ್ಯಧಿಷ್ಠಾನಮನ್ನಸ್ಯಗ್ರಹಣಾದ್ಗ್ರಹಣೀಮತಾ || ನಾಭೇರುಪರಿಸಾಹ್ಯಗ್ನಿಬಲೋಪಸ್ತಂಭವಾಹಿಚ " ಆ ಅಗ್ನ್ಯಾಶಯದ ಮೇಲ್ಭಾಗದಲ್ಲಿ ತಿಲ ಎಂಬದಾಗಿ ಹೇಳಿಸಿಕೊಳ್ಳುವ ಬಾಯರಿಕೆಗೆ ಸ್ಥಾನವಾದ ಜಲಾಶಯವಿದೆ. " ಜಲವಾಹಿಶಿರಾಮೂಲಂತಿಲಂ " ವೃದ್ಧವಾಗ್ಭಟದಲ್ಲಿ " ಅಗ್ನೇರೂರ್ಧ್ವಂಜಲಂಸ್ಥಾಪ್ಯಂತದನ್ನಂಚಜಲೋಪರಿ || ಅಗ್ನೇರಧಸ್ವಯಂವಾಯುಃಸ್ಥಿತೋಗ್ನಿಂಧಮತೇಶನೈಃ || ವಾಯುನಾಧಮಮಾನೋಗ್ನಿರತ್ಯುಷ್ಣಂಕುರುತೇಜಲಂ || ತದನ್ನಮುಷ್ಣತೋಯೇನಸಮಂತಾತ್ಪಚ್ಯತೆಶನೈಃ " ಅಗ್ನ್ಯಾಶಯದ ಕೆಳಭಾಗದಲ್ಲಿ ವಾಯುವು ಇರತಕ್ಕ ವಾಯುವಿನ ಸ್ಥಾನವಾದ ಪವನಾಶಯ, ಇದಕ್ಕಿಂತ ಕೆಳಭಾಗದಲ್ಲಿ ಮಲಕೋಶ ಅದರ ಕೆಳಭಾಗದಲ್ಲಿಯೇ ಬಸ್ತಿ ಎನ್ನಿಸಿಕೊಳ್ಳುವ ಮೂತ್ರಕೋಶ, ಹೊಕ್ಕಳಿನ ಸಮೀಪದಲ್ಲಿ ಕೊಂಚ ಎಡಭಾಗದಲ್ಲಿರುವ ಪ್ಲೀಹ ಎನ್ನಿಸಿಕೊಳ್ಳುವುದೇ ಜೀವಕ್ಕೆ ಮುಖ್ಯ ಆಧಾರವಾದ ರಕ್ತದ ಸ್ಥಾನ. ಈರೀತಿಯಾಗಿ ಏಳು ಆಶಯಗಳಿವೆ. ಈ ಏಳು ಆಶಯಗಳು ಪುರುಷರಿಗೆ, ಸ್ತ್ರೀಯರಿಗೆ ಪುರುಷರಿಗಿಂತಲೂ ಹೆಚ್ಚಿಗೆ ಮೂರು ಆಶಯಗಳಿವೆ, ಯಾವುವೆಂದರೆ:- ಗರ್ಭಾಶಯ ಮತ್ತು ಸ್ತನ್ಯಾಶಯ. ಈ ಗರ್ಭಾಶಯವೆನ್ನುವುದು ಪಕ್ವಾಶಯ ಎಂದರೆ ಮಲಾಶಯದ ಸಮೀಪದಲ್ಲಿದೆ. ಸ್ತನ್ಯಾಶಯಗಳೆರಡೂ ಸ್ತನಗಳಲ್ಲಿವೆ.

ರಸಾಸೃಙ್ಮಾಂಸಮೇದೋಸ್ಥಿಮಜ್ಜಾಶುಕ್ರಾಣಿಧಾತವಃ ||
ಜಾಯಂತೇನ್ಯೋನ್ಯತಸ್ಸರ್ವೇಪಾಚಿತಾಃಪಿತ್ತತೇಜಸಾ || ೧೧ ||
ರಸಾದ್ರಕ್ತಂತತೋಮಾಂಸಂಮಾಂಸಾನ್ಮೇದಃಪ್ರಜಾಯತೆ ||
ಮೇದಸೋಸ್ಥಿತತೋಮಜ್ಜಾಮಜ್ಜಾಯಾಃಶುಕ್ರಸಂಭವಃ ||೧೨||

ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜ, ಶುಕ್ರಗಳೆಂಬ ಸಪ್ತಧಾತುಗಳೂ ಕ್ರಮವಾಗಿ, ಭೋಜನ ಮಾಡಿದ ಆಹಾರವು ಶರೀರಗತವಾದ ಪಾಚಕಪಿತ್ತದಿಂದ ಪಕ್ವವಾಗುವುದರಿಂದ ಹುಟ್ಟುತ್ತವೆ ಹುಟ್ಟುತಕ್ಕ ಕ್ರಮವ್ಯಾವದೆಂದರೆ ರಸಧಾತುವಿನಿಂದ ರಕ್ತ, ರಕ್ತಧಾತುವಿನಿಂದ ಮಾಂಸ, ಮಾಂಸದಿಂದ ಮೇದಸ್ಸು ಈ ಕ್ರಮದಿಂದ ಪ್ರತಿಯೊಂದೂ ಪಾಚಕಪಿತ್ತನೆಂಬ ಧಾತ್ವಗ್ನಿಯಿಂದ ಪಕ್ವವಾಗಿ ಅಂದರೆ ರಸವು ಪಕ್ವವಾಗಿ ರಕ್ತ, ರಕ್ತವು ಪಕ್ವವಾಗಿ ಮಾಂಸ ಈರೀತಿಯಲ್ಲಿ ಹುಟ್ಟುತ್ತವೆ.

ಜಿಹ್ವಾನೇತ್ರಕಪೋಲಾನಾಂಜಲಂಪಿತ್ತಂಚರಂಜಕಂ ||
ಕರ್ಣವಿಡ್ರಸನಾದಂತಕಕ್ಷಾಮೇಢ್ರಾದಿಜಾಮಲಾ || ೧೩ ||
ನಖನೇತ್ರಮಲಂವಕ್ತ್ರೇಸ್ನಿಗ್ಧತ್ವಂಪಿಟಕಾಸ್ತಥಾ ||
ಜಾಯಂತೇಸಪ್ತಧಾತೂನಾಂಮಲಾನ್ಯೇತಾನ್ಯನುಕ್ರಮಾತ್ ||೧೪||
ಕಫಃಪಿತ್ತಂಮಲಂಖೇಷುಪ್ರಸ್ವೇದೋನಖರೋಮಚ ||
ನೇತ್ರವಿಟ್‌ತ್ವಕ್ಷುಚಸ್ನೇಹೋಧಾತೂನಾಂಕ್ರಮಶೋಮಲಾಃ ||೧೫||

ಧಾತುಮಲಗಳನ್ನು ಹೇಳುತ್ತಾನೆ. ಜಿಹ್ವಾ ಎಂದರೆ ನಾಲಿಗೆಯಲ್ಲಿ ಬರತಕ್ಕ ನೀರುಜೊಲ್ಲು, ಕಣ್ಣಿನಲ್ಲಿ ಬರುವ ನೀರು, ಕೆನ್ನೆಯಲ್ಲಿ ಕಾಣಿಸಿಕೊಳ್ಳತಕ್ಕ ಬೆವರಿನಂತಹ ಒಂದು ಬಗೆಯ ನೀರು, ಇವು ಮೂರೂ ರಸಧಾತುವಿನಿಂದ ಹುಟ್ಟಿದ ಮಲಗಳು ಶರೀರಕ್ಕೆ ಕಾಂತಿಯನ್ನುಂಟುಮಾಡತಕ್ಕ ರಂಜಕವೆಂಬ ಪಿತ್ತವು ರಕ್ತಧಾತುವಿನ ಮಲವೆನ್ನಿಸಿಕೊಳ್ಳುತ್ತದೆ. ಕರ್ಣವಿಟ್ ಅಂದರೆ ಕಿವಿಯಲ್ಲಿರತಕ್ಕ ಗುಗ್ಗೆ ಎಂಬ ಮಲವು ಮಾಂಸಮಲವೆನ್ನಿಸಿಕೊಳ್ಳುತ್ತದೆ. ನಾಲಿಗೆ, ಹಲ್ಲು, ಕಂಕಳು, ಶಿಶ್ನ ಇವುಗಳಲ್ಲಿರತಕ್ಕ ಮಲಗಳು ಮತ್ತು ಬೆವರು ಸಹ ಮೇದೋಧಾತುವಿನ ಮಲವೆನ್ನಿಸಿಕೊಳ್ಳುತ್ತವೆ ಉಗುರುಗಳು ಅಸ್ಥಿಮಲವೆನ್ನಿಸಿಕೊಳ್ಳುತ್ತವೆ. ನೇತ್ರಮಲವೆಂದರೆ ಕಣ್ಣಿನಲ್ಲಿ ಕಟ್ಟಿಕೊಳ್ಳುವ ಪಿಸರು, ವಕ್ತ್ರಸ್ನಿಗ್ಧತಾ ಎಂದರೆ ಬಾಯಲ್ಲಿ ತೋರುವ ಜಿಡ್ಡು ಸಹ ಮಜ್ಜಧಾತುವಿನ ಮಲವೆನ್ನಿಸಿಕೊಳ್ಳುತ್ತವೆ. ಪಿಟಕಾ ಅಂದರೆ ಮೊಡವೆ ಎನ್ನಿಸಿಕೊಳ್ಳುವ ಯವ್ವನಕಾಲದಲ್ಲಿ ಮುಖದ ಮೇಲೆ ಏಳುವ ಬೊಕ್ಕೆಗಳು ಶುಕ್ರಮಲವೆನ್ನಿಸಿಕೊಳ್ಳುತ್ತವೆ ಈ ವಿಷಯದಲ್ಲಿ ಪ್ರಮಾಣಾಂತರ, "ಕಿಟ್ಟಮನ್ನಸ್ಯವಿಣ್ಮೂತ್ರಂ ರಸಸ್ಯತುಕಫಃ, ಅಸೃಜಃಪಿತ್ತಂ, ಮಾಂಸಸ್ಯತುಮಲಂಖೇಷು ಸ್ವೇದಸ್ತುಮೇದಸಃ ನಖಮುಸ್ಥ್ನಸ್ತುಲೋಮಾದ್ಯಾಮಜ್ಜ್ಞಃ, ಶುಕ್ರಸ್ಯಾತಿಪ್ರಸನ್ನತ್ವಾನ್ಮಲಾಭಾವಇತಿಸ್ಮೃತಃ"

ಸ್ತನ್ಯಂರಜಶ್ಚನಾರೀಣಾಂಕಾಲೇಭವತಿಗಚ್ಛತಿ ||
ಶುದ್ಧಮಾಂಸಭವಸ್ನೇಹಸ್ಸಾವಸಾಪರಿಕೀರ್ತಿತಾ || ೧೬ ||
ಸ್ವೇದೋದಂತಾಸ್ತಥಾಕೇಶಾಸ್ತಥೈವೌಜಶ್ಚಸಪ್ತಮಂ ||
ಇತಿಧಾತುಭವಾಜ್ಞೇಯಾಏತೇಸಪ್ತೋಪಧಾತವಃ || ೧೭ ||
ಓಜಸ್ಸರ್ವಶರೀರಸ್ಥಂಶೀತಂಸ್ನಿಗ್ಧಂಸ್ಥಿರಂಮತಂ ||
ಸೋಮಾತ್ಮಕಂಶರೀರಸ್ಯಬಲಪುಷ್ಟಿಕರಂಮತಂ || ೧೮ ||

ಉಪಧಾತುಗಳನ್ನು ಹೇಳುತ್ತಾನೆ. ಸ್ತ್ರೀಯರಿಗೆ ಹುಟ್ಟುತಕ್ಕ ರಸಧಾತುವಿನ ಉಪಧಾತುವಾದ ಸ್ತನ್ಯವೂ ರಕ್ತಕ್ಕೆ ಉಪಧಾತುವಾದ ರಜಸ್ಸೂ ಅದರದರ ಕಾಲದಲ್ಲಿ

ಉತ್ಪನ್ನವಾಗುತ್ತದೆ, ಕಾಲದಲ್ಲಿ ಹೋಗುತ್ತದೆ, ಶುದ್ಧವಾದ ಮಾಂಸದಿಂದ ಉತ್ಪನ್ನವಾದ ಸ್ನೇಹರೂಪ ಉಪಧಾತುವಿಗೆ ವಸಾ ಎಂಬದಾಗಿ ಹೆಸರು, ಮೇದಸ್ಸಿನಿಂದ ಹುಟ್ಟಿದ ಉಪಧಾತುವಿಗೆ ಸ್ವೇದ (ಬೆವರು) ಎಂದು ಹೆಸರು. ಅಸ್ಥಿಯಿಂದ ಹುಟ್ಟಿದ ಉಪಧಾತುವೇ ಹಲ್ಲುಗಳು ಮಜ್ಜಧಾತುವಿನಿಂದ ಉತ್ಪನ್ನವಾದ ಉಪಧಾತುವೇ ಕೂದಲುಗಳು. ಶುಕ್ರಧಾತುವಿನಿಂದ ಉತ್ಪನ್ನವಾದ ಉಪಧಾತುವೇ ಓಜೋಧಾತು ಈರೀತಿಯಾಗಿ ಹಿಂದೆ ಹೇಳಿದ ಸಪ್ತಧಾತುವಿನಿಂದ ಹುಟ್ಟುವ ಉಪಧಾತುಗಳನ್ನೂ ತಿಳಿದುಕೊಳ್ಳಬೇಕು ಓಜಸ್ಸು ಎಂಬ ಶುಕ್ರಧಾತುವಿಗೆ ಉಪಧಾತುವಿನ ಸ್ಥಿತಿಯನ್ನು ಹೇಳುತ್ತಾನೆ. ಈ ಓಜೋಧಾತುವು ಶರೀರದಲ್ಲಿ ಸರ್ವತ್ರವ್ಯಾಪ್ತವಾಗಿ, ತಣ್ಣಗೆ ಸ್ನಿಗ್ಧವಾಗಿ, ಸ್ಥಿರವಾಗಿ ಅಂದರ ನಾಶರಹಿತವಾಗಿರುತ್ತದೆ ಸೃಷ್ಟಿಗೆ ಮೂಲಕಾರಣವಾದ್ದರಿಂದ ಇದನ್ನು ಸೋಮಸ್ವರೂಪವೆಂದು ಆಯುರ್ವೇದಜ್ಞರು ಕರೆದಿದ್ದಾರೆ ಶರೀರಕ್ಕೆ ಬಲ ಮತ್ತು ಪುಷ್ಟಿಗಳು ಈ ಓಜೋಧಾತುವಿನಿಂದಲೇ ಉಂಟಾಗುತ್ತವೆ.

ಜ್ಞೇಯಾವಭಾಸಿನೀಪೂರ್ವಂಸಿಧ್ಮಸ್ಥಾನಂಚಸಾಮತಾ ॥
ದ್ವಿತೀಯಾಲೋಹಿತಾಜ್ಞೇಯಾತಿಲಕಾಲಕಜನ್ಮಭೂಃ ॥ ೧೯ ॥
ಶ್ವೇತಾತೃತೀಯಾಸಂಖ್ಯಾತಾಸ್ಥಾನಂಚರ್ಮದಲಸ್ಯಸಾ ॥
ತಾಮ್ರಾಚತುರ್ಥೀವಿಜ್ಞೇಯಾಕಿಲಾಸಶ್ವಿತ್ರಭೂಮಿಕಾ ॥ ೨೦ ॥
ಪಂಚಮೀವೇದನೀಖ್ಯಾತಾಸರ್ವಕುಷ್ಠೋದ್ಭವಸ್ತತಃ ॥
ವಿಖ್ಯಾತಾರೋಹಿಣೀಷಷ್ಠೀಗ್ರಂಥಿಗಂಡಾಪಚೀಸ್ಥಿತಿಃ ॥ ೨೧ ॥
ಸ್ಥೂಲಾತ್ವಕ್‌ಸಪ್ತಮೀಖ್ಯಾತಾವಿದ್ರಧ್ಯಾದೇಸ್ಥಿತಿಶ್ಚಸಾ ॥
ಇತಿಸಪ್ತತ್ವಚಃಪ್ರೋಕ್ತಾಸ್ಥೂಲಾವ್ರೀಹಿದ್ವಿಮಾತ್ರಯಾ ॥ ೨೨ ॥

ಕ್ರಮವಾಗಿ ಸಪ್ತತ್ವಕ್ಕು (ಏಳುಚರ್ಮ) ಗಳನ್ನು ಹೇಳುತ್ತಾನೆ ಮೊದಲನೆಯ ಚರ್ಮಕ್ಕೆ ಅವಭಾಸಿನೀ ಎಂಬದಾಗಿ ಹೆಸರು ಶರೀರದ ವರ್ಣವನ್ನು ತೋರಿಸತಕ್ಕ ಚರ್ಮ, ಈ ಮೊದಲನೆಯ ಚರ್ಮದಲ್ಲಿಯೇ ಸಿಧ್ಮ. ಪದ್ಮಕಂಟಕ ಎಂಬ ಚರ್ಮರೋಗಗಳು ಹುಟ್ಟುತ್ತವೆ. ಎರಡನೆಯ ಚರ್ಮಕ್ಕೆ ಲೋಹಿತಾ ಎಂಬ ಹೆಸರು. ಈ ಎರಡನೆಯ ಚರ್ಮವೇ ತಿಲಕಾಲಕ, ನ್ಯಚ್ಛ, ವ್ಯಂಗಗಳೆಂಬ ಚರ್ಮವಿಕಾರಗಳಿಗೆ ಸ್ಥಾನವಾದದ್ದು, ಮೂರನೆಯ ಚರ್ಮಕ್ಕೆ ಶ್ವೇತಾ ಎಂಬ ಹೆಸರು ಈ ಚರ್ಮದಲ್ಲಿಯೇ ಚರ್ಮದಳ, ಮಶಕ, ಅಜಗಲ್ಲಿಕಾ ಎಂಬ ಕುಷ್ಠಗಳು ಹುಟ್ಟುತ್ತವೆ. ನಾಲ್ಕನೆಯ ಚರ್ಮಕ್ಕೆ ತಾಮ್ರಾ ಎಂಬ ಹೆಸರು. ಈ ನಾಲ್ಕನೆಯ ಚರ್ಮದಲ್ಲಿಯೇನೇ ಕಿಲಾಸ, ಶ್ವಿತ್ರ (ತೊನ್ನು) ಎಂಬ ಕುಷ್ಠಗಳು ಹುಟ್ಟುವುದು, ಐದನೆಯ ಚರ್ಮಕ್ಕೇನೇ ವೇದನೀ ಎಂಬದಾಗಿ ಹೆಸರು ಈ ಚರ್ಮದಲ್ಲಿಯೇ ಸಮಸ್ತವಾದ ಕುಷ್ಠಗಳೂ ಹುಟ್ಟುತ್ತವೆ ಆರನೆಯ ಚರ್ಮಕ್ಕೆ ರೋಹಿಣೀ ಎಂಬದಾಗಿ ಹೆಸರು, ಇದರಲ್ಲಿಯೇ ಗ್ರಂಥಿಗಳು ಅಂದರ ಕಫಮೇದವನ್ನು ಇವುಗಳು ಪ್ರಧಾನಗಳಾದ, ಶ್ಲೀಪದ (ಆನೆಕಾಲು,) ಅರ್ಬುದ (ಒಂದು ವಿಧವಾದ ಬಾವು) ಗಳಗಂಡ, ಗಂಡಮಾಲೆ ಮೊದಲಾದವುಗಳು ಹುಟ್ಟುತ್ತವೆ. ಏಳನೆಯ ಚರ್ಮಕ್ಕೆ ಸ್ಥೂಲಾ ಎಂಬ ಹೆಸರು. ಈ ಏಳನೆಯ ಚರ್ಮದಲ್ಲಿಯೇ ವಿದ್ರಧಿಗಳು, ಭಗಂದರ, ಅರ್ಶಸ್ಸು (ಮೂಲವ್ಯಾಧಿ) ಇವುಗಳು ಹುಟ್ಟುತ್ತವ ಈರೀತಿಯಲ್ಲಿ ಸಪ್ತತ್ವ

ಕ್ಕುಗಳನ್ನೂ ಹೇಳಿದ್ದಾಯಿತು, ಈ ಸತ್ತ್ವತ್ವಕ್ಕುಗಳೂ ದಪ್ಪಾಗಲ್ಲಿ ಎರಡು ಭತ್ತಾಕಾಲಿನ ಷ್ಟುಗಬಹುದು.

ವಾಯುಃಪಿತ್ತಂಕಫೋದೋಷಾಧಾತವಶ್ಚ ಮಲಾಮತಾಃ ॥
ತತ್ರಾಪಿಪಂಚಧಾಖ್ಯಾತಾಪ್ರತ್ಯೇಕಂದೇಹಧಾರಣಾತ್ ॥ ೨೩ ॥
ಶರೀರದೂಷಣಾದ್ದೋಷಾಧಾತವೋದೇಹಧಾರಣಾತ್ ॥
ವಾತಪಿತ್ತಕಫಾಜ್ಞೇಯಾಮಲಿನೀಕರಣಾನ್ಮಲಾಃ ॥ ೨೪ ॥
ಪಿತ್ತಂಪಂಗುಕಫಃಪಂಗುಪಂಗವೋಮಲಧಾತವಃ ॥
ವಾಯುನಾಯತ್ರನೀಯಂತೇತತ್ರಗಚ್ಛಂತಿಮೇಘವತ್ ॥ ೨೫ ॥
ಪವನಸ್ತೇಷುಬಲವಾನ್ವಿಭಾಗಕರಣಾನ್ಮತಃ ॥
ರಜೋಗುಣಮಯಃಸೂಕ್ಷ್ಮಃಶೀತೋರೂಕ್ಷೋಲಘುಶ್ಚಲಃ॥ ೨೬ ॥
ಮಲಾಶಯೇಚರೇತ್ಕೋಷ್ಠೇವಹ್ನಿಸ್ಥಾನೇತಥಾಹೃದಿ ॥
ಕಂಠೇಸರ್ವಾಂಗದೇಶೇಷುವಾಯುಃಪಂಚಪ್ರಕಾರತಃ ॥ ೨೭ ॥
ಅಪಾನಸ್ಯಾತ್ಸಮಾನಶ್ಚಪ್ರಾಣೋದಾನೌತಥೈವಚ ॥
ವ್ಯಾನಶ್ಚೇತಿಸಮೀರಸ್ಯನಾಮಾನ್ಯುಕ್ತಾನ್ಯನುಕ್ರಮಾತ್ ॥ ೨೮ ॥

ಮಲಗಳನ್ನು ಹೇಳುತ್ತಾನೆ. ಶರೀರದಲ್ಲಿರತಕ್ಕ ವಾತ, ಪಿತ್ತ ಕಫಗಳೆಂಬ ಮೂರಕ್ಕೂ ದೋಷಗಳೆಂಬದಾಗಿಯೂ, ಧಾತುಗಳೆಂಬದಾಗಿಯೂ, ಮಲಗಳೆಂಬದಾಗಿಯೂ ಮೂರು ವಿಧವಾಗಿಯೂ ವ್ಯವಹಾರವುಂಟು ಈ ಮೂರೂ ದೇಹಕಾರ್ಯಗಳು ಕ್ರಮವಾಗಿ ನಡಿಯುವುದಕ್ಕಾಗಿ ಪ್ರತಿಯೊಂದೊಂದೂ ಐದೈದು ಹೆಸರಿನಿಂದ ಬೇರೆಬೇರೆಯಾಗಿ ಸಹಾಯ ಮಾಡುತ್ತವೆ. ಈ ಮೂರೂ ಕುಪಿತಗಳಾದರೆ ಶರೀರಕ್ಕೆ ರೋಗವನ್ನು ತಂದು ಹಾಕಿ ಹಾಳುಮಾಡುವುದರಿಂದ ಇವಕ್ಕೆ ದೋಷಗಳೆಂಬ ಹೆಸರು ಕುಪಿತಗಳಾಗದೆ ಸಾಮ್ಯಾವಸ್ಥೆಯಲ್ಲಿದ್ದು ಶರೀರವನ್ನು ಸುಖವಾಗಿ ಇಟ್ಟಿರುವುದರಿಂದ ಧಾತುಗಳೆಂಬ ಹೆಸರನ್ನು ಹೊಂದುತ್ತವೆ. ಇವುಗಳ ಸ್ಥಿತಿಯಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಶರೀರವನ್ನು ಮಲಿನಮಾಡುವುದರಿಂದ ಮಲಗಳೆಂಬ ಹೆಸರನ್ನೂ ಹೊಂದುತ್ತವೆ. ಪಿತ್ತ ಕಫಗಳು ಮತ್ತು ಸಮಸ್ತಧಾತುಗಳು ಎಲ್ಲವೂ ಚಲನ ವಲನಾದಿ ಯಾವ ಸಾಮರ್ಥ್ಯವನ್ನೂ ಹೊಂದಿಲ್ಲ. ಆದರೆ ಆಕಾಶದಲ್ಲಿರುವ ಮೋಡವು ವಾಯುವು ಎಳದತ್ತ ಚಲಿಸುವಂತೆ, ಇವುಗಳೂ ದೇಹಗತವಾದ ವಾಯುವಿನ ಚಲನ ವಲನಾದಿಗಳನ್ನನುಸರಿಸಿವೆ. ಈ ವಾತ ಪಿತ್ತ ಕಫಗಳ ನಡುವೆ ವಾಯುವೇ ಬಲವತ್ತರವಾದದ್ದು. ಹೇಗಂದರೆ ಪದಾರ್ಥಗಳನ್ನು ಪ್ರತ್ಯೇಕಿಸಿ ವಿಭಜನ ಮಾಡುವುದು ಮೊದಲಾದ ಕೆಲಸಗಳೆಲ್ಲಾ ವಾಯುವಿನ ಸಹಾಯದಿಂದಲೇ ನಡೆಯಬೇಕಾಗಿದೆ. ಈ ವಾಯುವು ರಜೋಗುಣವೇ ಹೆಚ್ಚಿಗೆ ಉಳ್ಳದ್ದು. ಅಂದರೆ ರಾಜಸ, ಸೂಕ್ಷ್ಮ ಅಂದರೆ ಕಣ್ಣಿಗೆ ಕಾಣಿಸತಕ್ಕದ್ದಲ್ಲ. ಚರ್ಮಕ್ಕೆ ಮಾತ್ರ ತಣ್ಣಗೆ ಗೋಚರವಾಗುತ್ತದೆ. ಗುಣತಃ ನೋಡಿದರೆ ರೂಕ್ಷ ಅಂದರೆ ಕಠಿನ ಸ್ವಭಾವವುಳ್ಳದ್ದು. ಹಗುರವಾದದ್ದು, ಯಾವಾಗಲೂ ಒಂದು ಕಡೆಯಲ್ಲಿರದೆ ಸರ್ವದಾ ಚಲಿಸುವ ಸ್ವಭಾವವುಳ್ಳದ್ದು ದೇಹದಲ್ಲಿ ಈ ವಾಯುವು ಮಲಸ್ಥಾನ ಅಂದರೆ ಮಲಾಶಯದಲ್ಲಿಯೂ, ಶರೀರದಲ್ಲಿ ನಡೆಯತಕ್ಕ ಆಹಾರ ಪಾಕಾದಿ ಕಾರ್ಯಗಳಿಗೆ ಸಹಾಯಕವಾದ ಕೋಷ್ಠಾಗ್ನಿಯ

ಸ್ಥಾನನಲ್ಲಿಯೂ, ಹೃದಯದ . . . ಸ್ಥಾನದಲ್ಲಿ, ಶರೀರದ ಸರ್ವಾವಯವಗಳಲ್ಲಿಯೂ ಸ್ಥಾನಾನುಗುಣಗಳಾದ ಪಂಚ . . . ಐದುವಿಧವಾಗಿ ಸಂಚರಿಸುತ್ತದೆ. ಅಪಾನ, ಸಮಾನ, ಪ್ರಾಣ, ಉದಾನ, . . . ಎಂಬದಾಗಿ ಈ ವಾಯುವಿಗೆ ಐದು ಹೆಸರುಗಳು. ಅಪಾನವಾಯುವು ಮಲಾಶಯ . . . ಯೂ, ಸಮಾನವಾಯುವು ನಾಭಿಸ್ಥಾನದಲ್ಲಿಯೂ, ಪ್ರಾಣವಾಯುವು ಹೃದಯದ . . . , ಉದಾನವಾಯುವು ಕಂಠಪ್ರದೇಶದಲ್ಲಿಯೂ, ವ್ಯಾನವಾಯುವು ಶರೀರದಲ್ಲಿ . . . ಕಡೆಯಲ್ಲಿಯೂ ಸಂಚರಿಸುತ್ತದೆ.

**ಪಿತ್ತಮುಷ್ಣಂದ್ರ . . . ನೀಲಂಸತ್ವಗುಣೋತ್ತರಂ ||**
**ಕಟುತಿಕ್ತರಸಂಜ್ಞೇ . . . ಂಪಿದಗ್ಧಂಚಾಮ್ಲತಾಂವ್ರಜೇತ್ || ೨೯ ||**
**ಅಗ್ನ್ಯಾಶಯೇಭೇ . . . ತ್ತ್ರಮಗ್ನಿರೂಪಂತಿಲೋನ್ಮಿತಂ ||**
**ತ್ವಚಕಾಂತಿಕರಂ . . . ಮಂಲೇಪಾಭ್ಯಂಗಾದಿಪಾಚಕಂ || ೩೦ ||**
**ಸ್ಥಿತ್ಯಂಯಕೃತಿಯ . . . ತ್ತಂತದ್ರಸಂಶೋಣಿತಂನಯೇತ್ ||**
**ಯತ್ಪಿತ್ತಂನೇತ್ರ . . . ಗಳೇರೂಪದರ್ಶನಕಾರಿತತ್ || ೩೧ ||**
**ಮತ್ಪಿತ್ತಂಹೃದ . . . ತಿಷ್ಠೇನ್ಮೇಧಾಪ್ರಜ್ಞಾಕರಂಚತತ್ ||**
**ಸಾಧಕಂಭ್ರಾಜಕ . . . ಕೆ ವರಂಜಕಾಲೋಚಕೇತಥಾ || ೩೨ ||**
**ಸಾಧಕಂಚೇತಿಪಂ . . . ನಪಿತ್ತಸ್ಯಾಮಾನ್ಯನುಕ್ರಮಾತ್ ||**

ಪಿತ್ತದ ಸ್ವರೂಪವನ್ನು ಹೇಳುತ್ತಾನೆ. ಪಿತ್ತವು ಉಷ್ಣಗುಣವುಳ್ಳದ್ದು. ನೀರಿನಂತೆ ಅದು ದ್ರವಪದಾರ್ಥ. ಇದರ ಬಣ್ಣ ಹಳದಿ ಮತ್ತು ನೀಲಿ, ಸತ್ವಗುಣವೇ ಅದರಲ್ಲಿ ಹೆಚ್ಚು. ಕಾರ ಮತ್ತು ಕಹಿ ಅದರ ರಸಗಳು. ಪಕ್ವಾನ್ನವಿಲ್ಲದಿ ಪಿತ್ತವು ಅತಿಯಾಗಿ ಪಕ್ವವಾದರೆ ಆಗ್ಯೆ ಹುಳಿಯಾಗಿ ತೋರುತ್ತದೆ. ಅದು ಇರತಕ್ಕ ಸ್ಥಾನಗಳು, (ಪಕ್ವಾಶಯ ಮತ್ತು ಆಮಾಶಯಗಳ ಮಧ್ಯದಲ್ಲಿರುವುದು ಅಗ್ನ್ಯಾಶಯ,) ಅಗ್ನ್ಯಾಶಯದಲ್ಲಿರತಕ್ಕ ಪಿತ್ತವು ಆಹಾರಪಚನಕಾರ್ಯದಿಂದ ಅಗ್ನಿರೂಪವಾಗಿಯೇ ಇರುತ್ತದೆ. ಇದರ ಪ್ರಮಾಣವು ಎಳ್ಳುಕಾಳಿನಷ್ಟು. “ **ಸ್ಥೂಲಕಾಯೇಷುಸತ್ವೇಷುಯವಮಾತ್ರಂಪ್ರಮಾಣತಃ || ಹ್ರಸ್ವಮಾತ್ರೇಷುಸತ್ವೇಷುತಿಲಮಾತ್ರಂಪ್ರಮಾಣತಃ || ಕ್ರಿಮಿಕೀಟಪತಂಗೇಷುವಾಲಮಾತ್ರಂಹಿತಿಷ್ಠತಿ ||** ” ಈ ಪ್ರಮಾಣವು ಪ್ರಾಣಿಗಳ ಶರೀರದಲ್ಲಿರುವ ಪಾಚಕಪಿತ್ತದ ಪರಿಮಾಣವನ್ನು ಹೇಳುತ್ತದೆ. ಸ್ಥೂಲ ಶರೀರವುಳ್ಳ ಗಜಾದಿ ಪ್ರಾಣಿಗಳ ಶರೀರದಲ್ಲಿ ಪಾಚಕಪಿತ್ತವು ಧತ್ತದಕಾಳಿನಷ್ಟು, ಅದಕ್ಕಿಂತ ಚಿಕ್ಕ ಪ್ರಾಣಿಗಳ ಶರೀರದಲ್ಲಿ ಎಳ್ಳುಕಾಳಿನಷ್ಟು, ಕ್ರಿಮಿಕೀಟಾದಿಗಳ ಶರೀರದಲ್ಲಿ ಒಂದು ಕೂದಲಿನಷ್ಟಿರುತ್ತದೆ. ಚರ್ಮದಲ್ಲಿರತಕ್ಕ ಪಿತ್ತವು ಚರ್ಮಕ್ಕೆ ಕಾಂತಿಯನ್ನು ಕೊಡುವುದು. ಚರ್ಮದ ಮೇಲೆ ಹಚ್ಚತಕ್ಕ ಲೇಪಗಳು, ಅಭ್ಯಂಗಕ್ಕಾಗಿ ಹಚ್ಚತಕ್ಕ ತೈಲ ಇವುಗಳನ್ನು ಪರಿಪಕ್ವಸ್ಥಿತಿಗೆ ತಂದು ಅವುಗಳ ಗುಣವು ಶರೀರಕ್ಕೆ ವ್ಯಾಪಿಸುವಂತೆ ಮಾಡುವುದು, ಯಕೃತ್ ಎಂಬ ಅವಯವದಲ್ಲಿರುವ ಪಿತ್ತವು ರಸಧಾತುವನ್ನು ಪರಿಪಕ್ವಸ್ಥಿತಿಗೆ ತಂದು ರಕ್ತಧಾತುವಾಗಿಮಾಡುತ್ತದೆ ಚಕ್ಷುರಿಂದ್ರಿಯಗತವಾದಪಿತ್ತವು ಪದಾರ್ಥಗಳ ಸ್ವರೂಪವು ಇಂದ್ರಿಯಗಳ ದ್ವಾರಾ ಮನಸ್ಸಿಗೆ ಗೋಚರಿಸುವಂತೆ ಮಾಡುವುದು, ಹೃದಯದಲ್ಲಿರತಕ್ಕ ಪಿತ್ತವು ಬುದ್ಧಿಶಕ್ತಿ ಜ್ಞಾಪಕಶಕ್ತಿ ಇವುಗಳನ್ನು ವೃದ್ಧಿಪಡಿಸುವುದು. ಹಿಂದೆ ಹೇಳಿದ

ಐದುವಿಧವಾದ ಪಿತ್ತದ ಹೆಸರುಗಳೇನಂದರೆ:- ಪಾಚಕ, ಭ್ರಾಜಕ, ರಂಜಕ, ಆಲೋಚಕ, ಸಾಧಕಗಳೆಂಬದಾಗಿ

**ಕಫಃಸ್ನಿಗ್ಧೋಗುರುಶ್ವೆತಃಪಿಚ್ಛಿಲಶ್ಶೀತಲಸ್ತಥಾ ॥ ೩೩ ॥**
**ತಮೋಗುಣಾಧಿಕಸ್ಸ್ವಾದುಃವಿಧಗ್ಧೋಲವಣೋಭವೇತ್ ॥**
**ಕಫಶ್ಚಾಮಾಶಯೇಮೂರ್ಧ್ನಿಕಂಠೇಹೃದಿಚಸಂಧಿಷು ॥ ೩೪ ॥**
**ತಿಷ್ಠನ್ಕರೋತಿದೇಹೇಷುಸ್ಥೈರ್ಯಂಸರ್ವಾಂಗಪಾಟವಂ ॥**
**ಕ್ಲೇದನಸ್ನೇಹನಶ್ಚೈವರಸನಶ್ಚಾವಲಂಬನಃ ॥ ೩೫ ॥**
**ಶ್ಲೇಷ್ಮಕಶ್ಚೇತಿನಾಮಾನಿಕಫಸ್ಯೋಕ್ತಾನ್ಯನುಕ್ರಮಾತ್ ॥**

ದೇಹಗತವಾದ ಕಫವ ಸ್ವರೂಪ ಮತ್ತು ಕಾರ್ಯಗಳನ್ನು ಹೇಳುತ್ತಾನೆ. ಕಫವು ಜಿಡ್ಡು, ಗುರುಗುಣವುಳ್ಳದ್ದು, ಬಿಳೀಬಣ್ಣ, ಅಂಟಂಟಾಗಿರುತ್ತದೆ, ತಣ್ಣಗಿರುತ್ತದೆ, ಕಫದಲ್ಲಿ ತಮೋಗುಣವೇ ಪ್ರಚುರ. ಯಾವಾಗ್ಯೂ ಅದರ ರಸ ಸಿಹಿ. ಅತಿಪಕ್ವವಾದರೆ ಮಾತ್ರ ಉಪ್ಪುಪ್ಪಾಗುತ್ತದೆ. ಈ ಕಫವು ಆಮಾಶಯದಲ್ಲಿ, ಶಿರಸ್ಸಿನಲ್ಲಿ, ಕಂಠದಲ್ಲಿ, ಹೃದಯದಲ್ಲಿ, ಅವಯುವದಲ್ಲಿರುವ ಎಲ್ಲಾ ಸಂಧಿಗಳಲ್ಲಿ ಇದ್ದುಕೊಂಡು ಶರೀರಕ್ಕೆ ದಾರ್ಢ್ಯವನ್ನೂ ಅವಯುವಗಳಲ್ಲಿ ಚಟುವಟಿಕೆಯನ್ನೂ ಉಂಟುಮಾಡುತ್ತದೆ ಕ್ಲೇದನ, ಸ್ನೇಹನ, ರಸನ, ಅವಲಂಬನ, ಶ್ಲೇಷ್ಮಕ ಎಂಬದಾಗಿ ಈ ಕಫಕ್ಕೆ ಐದು ಹೆಸರುಗಳು.

**ಸ್ನಾಯುವೋಬಂಧನಂಪ್ರೋಕ್ತಾದೇಹೇಮಾಂಸಾಸ್ಥಿಮೇದಸಾಂ ॥ ೩೬ ॥**
**ಸಂಧಯಶ್ಚಾಂಗಸಂಧಾನಾದ್ದೇಹೇಪ್ರೋಕ್ತಾಃಕಫಾನ್ವಿತಾಃ ॥**
**ಆಧಾರಶ್ಚತಥಾಸಾರಃಕಾಯೇಸ್ಥೀನಿಬುಧಾಜಗುಃ ॥ ೩೭ ॥**
**ಮರ್ಮಾಣಿಜೀವಾಧಾರಾಣಿಪ್ರಾಯೇಣಮುನಯೋಜಗುಃ ॥**

ಮಾಂಸ, ಅಸ್ಥಿ, ಮೇದಸ್ಸುಗಳಿಂದ ವ್ಯಾಪೃತವಾದ ಈ ಶರೀರಕ್ಕೆ ಸ್ನಾಯುವು ಅಂದರೆ ಶರೀರಗತವಾದ ಮಾಂಸರಜ್ಜುಗಳು ಬಂಧನಕರಗಳು ಅಂದರೆ ಹಗ್ಗಗಳಂತೆ ಭದ್ರವಾಗಿ ಕಟ್ಟಲು ಸಾಧನಗಳು, ಕೈಯ್ಯಿ, ಕಾಲು ತಲೆಗಳಂತೆ ಶರೀರದ ನಾನಾಭಾಗಗಳನ್ನ ದೇಹದೊಂದಿಗೆ ಸೇರಿಸತಕ್ಕ ಭಾಗಕ್ಕೆ ಸಂಧಿಗಳೆಂಬ ಹೆಸರುಗಳು. ಈ ಸಂಧಿಗಳ ಚಲನ ವಲನಾದಿಗಳು ಸರಿಯಾಗಿ ನಡೆಯುವುದಕ್ಕೋಸ್ಕರ ಅಲ್ಲಿ ಕಫವಿರುತ್ತದೆ ಈ ಸಂಧಿಗಳು ಎರಡು ವಿಧ ಚಲ, ವಿಚಲ, ಚಲ ಅಂದರೆ ಕೊಂಚಮಾತ್ರ ಚಲಿಸತಕ್ಕವುಗಳು, ವಿಚಲ ಅಂದರೆ ವಿಶೇಷವಾಗಿ ಚಲಿಸತಕ್ಕವುಗಳು ' **ಹನ್ವೋಃಕಟ್ಯಾಂಚಶಾಖಾಸುಸಂಧಯಶ್ಚಚಲಾಸ್ಮೃತಾಃ॥ ಶೇಷಾಸ್ತುಸಂಧಯಸ್ಸರ್ವೇವಿಜ್ಞೇಯಾಅಚಲಾಬುಧೈಃ** " ಎಲುಬುಗಳು ಶರೀರ ರಚನೆಗೆ ಮೂಲಾಧಾರಗಳಾಗಿಯೂ ಮತ್ತು ಶರೀರಗತವಾದ ಇತರ ಎಲ್ಲಾ ಪದಾರ್ಥಗಳಿಗಿಂತಲೂ ಸಾರಭಾಗಿಯೂ ಅಂದರೆ ಬಲವಾಗಿಯೂ ಇರುವ ಪದಾರ್ಥಗಳೇ ಅಸ್ಥಿಗಳು ಈ ಅಸ್ಥಿಪಂಜರಕ್ಕೇನೆ ಮಾಂಸಗಳನ್ನು ಸ್ನಾಯುರಜ್ಜುಗಳಿಂದ ಬಿಗಿದು ಶರೀರವನ್ನು ನಿರ್ಮಿಸಿದ್ದಾರೆ ಇನ್ನು ಶರೀರಗತವಾದ ಪ್ರಾಣಶಕ್ತಿಗೆ ಮರ್ಮಸ್ಥಾನಗಳನ್ನು ಅಂದರೆ, ಯಾವ ಪ್ರದೇಶಕ್ಕೆ ಕೊಂಚವೇ ಹಿಂಸೆಯಾದರೂ ಪ್ರಾಣಶಕ್ತಿಯೇ ಹಾರಿಹೋಗುತ್ತದೋ ಶರೀರಗತವಾದ ಅಂತಹ ಭಾಗಕ್ಕೆ ಮರ್ಮಸ್ಥಾನಗಳೆಂಬದಾಗಿ ಹೆಸರುಗಳು. ಈ ಮರ್ಮಸ್ಥಾನಗಳು ಮಾಂಸಾಸ್ಥಿ ಭೇದ

ದಿಂದ ಅನೇಕಪ್ರಕಾರಗಳಾಗಿವೆ. " **ಸೋಮಮಾರುತತೇಜಾಂಸಿರಜಸ್ಸತ್ವತಮಾಂಸಿ ಚ ॥ ಮರ್ಮಸುಪ್ರಾಯಶಃಪುಂಸಾಂಭೂತಾತ್ಮಾಚಾವತಿಷ್ಠತೆ ॥ ಮರ್ಮಸ್ವಭಿಹತಾಸ್ತಸ್ಮಾನ್ನಜೀವಂತಿಶರೀರಿಣಃ** "

**ಮಾಂಸಪೇಶ್ಯೋಬಲಾಯುಸ್ಸ್ಯುರವಷ್ಟಂಭಾಯದೇಹಿನಃ ॥ ೩೯ ॥**
**ಪ್ರಸಾರಣಾಕುಂಚನಯೋರಂಗಾನಾಂಕಂಡರಾಮತಾಃ ॥**

ಶರೀರಗತಗಳಾದ ಮಾಂಸಖಂಡಗಳು ಶರೀರವು ಬಲವಾಗಿ ದೃಢವಾಗಿರಲು ಮುಖ್ಯ ಆಧಾರಗಳು ಕೈಕಾಲುಗಳನ್ನು ನೀಡುವುದು ಮಡಚುವುದು ಈ ಕೆಲಸಗಳಿಗೆ ಸಾಧನಗಳಾದ ಮಾಂಸಗಳಿಗೆ ಕಂಡರಗಳೆಂಬ ಹೆಸರು.

**ನಾಸಾನಯನಕರ್ಣಾನಾಂದ್ವೇದ್ವೇರಂಧ್ರೇಪ್ರಕೀರ್ತಿತೆ ॥ ೪೦ ॥**
**ಮೇಹನಾಪಾನವಕ್ತ್ರಾಣಾಮೇಕೈಕಂರಂಧ್ರಮುಚ್ಯತೆ ॥**
**ದಶಮಂಮಸ್ತಕೇಪ್ರೋಕ್ತಂರಂಧ್ರಾಣೀತಿನೃಣಾಂವಿದುಃ ॥ ೪೧ ॥**
**ಸ್ತ್ರೀಣಾಂತ್ರೀಣ್ಯಧಿಕಾನಿಸ್ಯುಸ್ತನಯೋರ್ಗರ್ಭವರ್ತ್ಮನಃ ॥**
**ಸೂಕ್ಷ್ಮಛಿದ್ರಾಣಿಚಾನ್ಯಾನಿಮತಾನಿತ್ವಚಿಜನ್ಮಿನಾಂ ॥ ೪೨ ॥**

ಶರೀರಗತಗಳಾದ ರಂಧ್ರಗಳನ್ನು ವಿವರಿಸುತ್ತಾನೆ ಮೂಗು, ಕಣ್ಣು, ಕಿವಿಗಳಲ್ಲಿ ಪ್ರತಿಯೊಂದರಲ್ಲಿಯೂ ಎರಡೆರಡು ರಂಧ್ರಗಳಿವೆ. ಮೇಹನ ಅಂದರೆ ಶಿಶ್ನ (ಪುರುಷರ ಮರ್ಮಸ್ಥಾನ) ಗುದದ್ವಾರ ಅಂದರೆ ಮಲಮಾರ್ಗ ಮತ್ತು ಬಾಯಿ ಇವುಗಳಲ್ಲಿ ಒಂದೊಂದೇ ರಂಧ್ರಗಳು. ನೆತ್ತಿಯ ಮೇಲಿರುವ ಬ್ರಹ್ಮರಂಧ್ರವು ಹತ್ತನೆಯದು ಪುರುಷರ ಶರೀರದಲ್ಲಿ ಇಷ್ಟು ರಂಧ್ರಗಳಿವೆ ಸ್ತ್ರೀಶರೀರದಲ್ಲಿ ಇನ್ನು ಮೂರುರಂಧ್ರಗಳು ಹೆಚ್ಚಿಗೆ ಇವೆ. ಯಾವವೆಂದರೆ:- ಎರಡು ಸ್ತನಗಳಲ್ಲಿ ಎರಡು ಅಂತೇಗರ್ಭದ್ವಾರ ಒಂದು. ಇವುಗಳಲ್ಲದ ಸ್ತ್ರೀಪುರುಷರುಗಳ ಶರೀರಾದ್ಯಂತದಲ್ಲಿಯೂ ಸೂಕ್ಷ್ಮಗಳಾದ ಅನೇಕ ರಂಧ್ರಗಳು ಚರ್ಮಗತಗಳಾಗಿವೆ.

**ತದ್ವಾಮೇಪುಪ್ಪುಸಪ್ಲೀಹಾದಕ್ಷಿಣಾಂಗೇಯಕೃನ್ಮತಂ ॥**
**ಉದಾನವಾಯೋರಾಧಾರಃ ಪುಪ್ಪುಸಃಪ್ರೋಚ್ಯತೇಬುಧೈಃ ॥ ೪೩ ॥**
**ರಕ್ತವಾಹಿಶಿರಾಮೂಲಂಪ್ಲೀಹಾಖ್ಯಾತಾಮಹರ್ಷಿಭಿಃ ॥**
**ಯಕೃದ್ರಂಜಕಪಿತ್ತಸ್ಯಸ್ಥಾನಂರಕ್ತಸ್ಯಸಂಶ್ರಯಃ ॥ ೪೪ ॥**
**ಜಲವಾಹಿಶಿರಾಮೂಲಂತೃಷ್ಣಾಚ್ಛಾದನಕಂತಿಲಂ ॥**

ಉದರದೊಳಗಿರುವ ಪುಪ್ಪುಸ ಪ್ಲೀಹಗಳೆಂಬ ಅವಯವಗಳ ವಿವರಣವನ್ನು ಕೊಡುತ್ತಾನೆ ಹೃದಯದ ವಾಮಭಾಗದಲ್ಲಿ ಪುಪ್ಪುಸ ಎಂಬ ಅಂಗವೂ ಪ್ಲೀಹ ಎಂಬ ಅಂಗವೂ ಇವೆ. ಪುಪ್ಪುಸ ಎಂಬ ಅವಯವದ ಕಾರ್ಯವಾವದೂ ಏನು ಎಂದರೆ, ಶರೀರದಲ್ಲಿ ಸಂಚರಿಸತಕ್ಕ ಐದು ವಿಧವಾದ ವಾತಗಳ ಮಧ್ಯೆ ಉದಾನ ಎಂಬ ಹೆಸರಿನ ವಾಯುವು ಈ ಪುಪ್ಪುಸದಲ್ಲಿ ಆಶ್ರಯಿಸಿಕೊಂಡು ಅಲ್ಲಿ ನಿಂತು ಶ್ವಾಸೋಚ್ಛ್ವಾಸ ಕ್ರಿಯೆಯನ್ನು ನಡೆಯಿಸುತ್ತದೆ ಈಗಿನ ವೈದ್ಯಶಾಸ್ತ್ರಜ್ಞರ ಅಭಿಪ್ರಾಯದಂತೆ ಈ ಪುಪ್ಪುಸವೆಂಬ ಅವಯವವೇ ಲಂಗ್ಸ್ ಎನ್ನುವದೆಂದು ತೋರುತ್ತದೆ. ಇನ್ನು ಪ್ಲೀಹದ ಕೆಲಸವನ್ನು ಹೇಳುತ್ತಾನೆ. ಶರೀರಗತವಾದ ರಕ್ತವನ್ನು ಶರೀರದಲ್ಲೆಲ್ಲಾ ಸಂಚಾರವಾಡಿಸತಕ್ಕ ನರ

ಗಳೆಲ್ಲಾ ಈ ಪ್ಲೀಹ ಎಂಬ ಅವಯವದಿಂದಲೇ ಹೊರಡುತ್ತವೆ ಈಗಿನ ಸಿದ್ಧಾಂತದಂತೆ ಇದೇ ಸ್ಪ್ಲೀನ್ ಎಂಬುವುದೋ ಏನೋ? ಹೃದಯದ ದಕ್ಷಿಣಭಾಗದಲ್ಲಿ ಯಕೃತ್ ಎಂಬ ಅವಯವವಿದೆ ಈ ಯಕೃತ್ ಎಂಬ ಅವಯವದ ಕೆಲಸವಾದರೂ ಏನೆಂದರೆ - ಶರೀರ ಗತವಾಗಿರುವ ಐದುವಿಧ ಪಿತ್ತಗಳ ಮಧ್ಯೆ ಶರೀರಕ್ಕೆ ವರ್ಣಕೊಡತಕ್ಕ ರಂಜಕವೆಂಬ ಪಿತ್ತಕ್ಕೆ ಈ ಯಕೃತ್ ಎಂಬ ಅವಯವವೇ ಸ್ಥಾನ. ಶರೀರಗತವಾದ ರಕ್ತಕ್ಕೂ ನೂ ಈ ಅವಯವವೇ ಮುಖ್ಯವಾಗಿ ಆಶ್ರಯಭೂತವಾದದ್ದು. ಯಕೃತ್ ಎಂಬ ಅವಯವದ ಹತ್ತಿರವೇ "ತಿಲ" ಎಂಬ ಮತ್ತೊಂದು ಅವಯವವಿದೆ. ಇದು ಶರೀರಗತಗಳಾದ ಉದಕವಾಹಿನಾಡಿಗಳಿಗೆಲ್ಲಾ ಮೂಲಸ್ಥಾನವಾಗಿದೆ. ಬಾಯಾರಿಕೆ ಉಂಟಾಗುವುದು ಇಲ್ಲದಿರುವುದು ಇದೆಲ್ಲಾ ಈ ತಿಲ ಎಂಬ ಅವಯವದ ಕಾರ್ಯವೇ ಆಗಿದೆ

**ವೃಕ್ಕೌಪುಷ್ಟಿಕರೌಪ್ರೋಕ್ತೌಜಠರಸ್ಥಸ್ಯಮೇದಸಃ ॥ ೪೫ ॥**
**ವೀರ್ಯವಾಹಿಶಿರಾಧಾರೌವೃಷಣೌಪೌರುಷಾವಹೌ ॥**
**ಗರ್ಭಾಧಾನಕರಂಲಿಂಗಮಯನಂವೀರ್ಯಮೂತ್ರಯೋಃ ॥ ೪೬ ॥**

ಮನುಷ್ಯನ ಪ್ರಧಾನಾವಯವಗಳಾದ ವೃಷಣ, ಶಿಶ್ನಗಳನ್ನು ವಿವರಿಸುತ್ತಾನೆ. ವೃಕ್ಕೌ ಅಂದರೆ ಉದರದಲ್ಲಿರುವ ರಕ್ತ ಮತ್ತು ಮೇದಸ್ಸುಗಳ ಸಾರರೂಪಗಳಾದ ಎರಡು ಗ್ರಂಥಿಗಳು ವೃಕ್ಕಗಳೆನ್ನಿಸಿಕೊಳ್ಳುತ್ತವೆ ಈ ಗ್ರಂಥಿಗಳು ಹೊಟ್ಟೆಯಲ್ಲಿರತಕ್ಕ ಮೇದೋಧಾತುವಿಗೆ ಪುಷ್ಟಿಯನ್ನುಂಟುಮಾಡತಕ್ಕವುಗಳು ಈ ವೃಕ್ಕಗಳೆಂಬುವವು, ಮೂತ್ರಜನಕಗಳಾದ ಎರಡು ಗ್ರಂಥಿಗಳೆಂದು ಆಂಗ್ಲವೈದ್ಯರು ತೋರಿಸುತ್ತಾರೆ, ಅವುಗಳಿರಬಹುದು. ವೃಷಣಗಳೆಂದರೆ ಪುರುಷರ ವೀರ್ಯವನ್ನು ವಹಿಸತಕ್ಕ ಅಂದರೆ ಅತ್ತಿತ್ತ ಚಲನಮಾಡಿಸತಕ್ಕ ಧಮನಿಗಳಿಗೆ ಆಶ್ರಯಗಳಾಗಿಯೂ ಮುಖ್ಯಪೌಂಸ್ತ್ವಕ್ಕೆ ಗುರುತಾಗಿಯೂ ಇರತಕ್ಕ ಅವಯವಗಳಿಗೆ ಹೆಸರು ಲಿಂಗ ( ಶಿಶ್ನ ) ವೆಂದರೆ ದೇಹಗತವಾದ ಪುರುಷ ವೀರ್ಯವನ್ನು ಸ್ತ್ರೀಯೋನಿದ್ವಾರಾ ಗರ್ಭಕೋಶಕ್ಕೆ ಹೊಂದಿಸತಕ್ಕದ್ದಾಗಿಯೂ ಮೂತ್ರದ್ರವವನ್ನು ದೇಹದಿಂದ ಹೊರವಡಿಸಲು ದ್ವಾರರೂಪವಾಗಿಯೂ ಇರುವ ಅವಯವಕ್ಕೆ ಹೆಸರು.

**ಶಿರಾಧಮನ್ಯೋನಾಭಿಸ್ಥಾಸ್ಸರ್ವಾಂವ್ಯಾಪ್ಯಸ್ಥಿತಾಸ್ತನುಂ ॥**
**ಪುಷ್ಣಂತಿಚಾನಿಶಂವಾಯೋಸ್ಸಂಯೋಗಾತ್ಸರ್ವಧಾತುಭಿಃ ॥ ೪೭ ॥**

ನಾಭಿಸ್ಥಾನಗತಗಳಾದ ಸಿರಾ ಮತ್ತು ಧಮನಿಗಳೆಂಬ ನಾಡಿಗಳು ಶರೀರದ ಎಲ್ಲಾ ಭಾಗಗಳನ್ನೂ ವ್ಯಾಪಿಸಿಕೊಂಡು ವಾಯುಸಂಯೋಗದಿಂದ ರಸಾದಿಧಾತುಗಳ ಸಹಾಯವನ್ನು ಶರೀರದ ಎಲ್ಲಾ ಭಾಗಕ್ಕೂ ಒದಗಿಸಿಕೊಟ್ಟು ಶರೀರಕ್ಕೆ ಪುಷ್ಟಿಯನ್ನುಂಟು ಮಾಡಿ ತದ್ವಾರಾ ಶರೀರಪೋಷಕಗಳಾಗುತ್ತವೆ.

**ನಾಭಿಸ್ಥಃಪ್ರಾಣಪವನಃಸ್ಪೃಷ್ಟ್ವಾಹೃತ್ಕಮಲಾಂತರಂ ॥**
**ಕಂಠಾದ್ಬಹಿರ್ವಿನಿರ್ಯಾತಿಪಾತುಂವಿಷ್ಣುಪದಾಮೃತಂ ॥ ೪೮ ॥**
**ಪೀತ್ವಾಚಾಂಬರಪೀಯೂಷಂಪುನರಾಯಾತಿವೇಗತಃ ॥**
**ಪ್ರೀಣಯನ್‌ದೇಹಮಖಿಲಂಜೀವಯನ್‌ಜಠರಾನಲಂ ॥ ೪೯ ॥**

**ನಾಭಿಸ್ಥಾನಗತವಾದ ಪ್ರಾಣವಾಯುವು ಹೃದಯಕಮಲವನ್ನು ಸ್ಪರ್ಶಮಾಡಿ**

ಅಂದರೆ ಅಲ್ಲಿ ಎಚ್ಚರಿಕೆಯನ್ನು ಕೊಟ್ಟು, **ಕಂಠಾದ್ಬಹಿಃ** ಅಂದರೆ ಕಂಠಸ್ಥಾನಕ್ಕಿಂತಲೂ ಮೇಲ್ಭಾಗದಲ್ಲಿರುವ “ **ವಿಷ್ಣು ಪದಾಮೃತಂ** ” ಅಂದರೆ ಶಿರಸ್ಸಿನಲ್ಲಿ ಬ್ರಹ್ಮರಂಧ್ರಪ್ರದೇಶದಲ್ಲಿರುವ ಅಮೃತವನ್ನು ಪಾನಮಾಡುವ ಉದ್ದಿಶ್ಯ ಅಲ್ಲಿನವರಿಗೂ ಹೋಗುತ್ತದೆ. ಅಲ್ಲಿರತಕ್ಕ ಅಮೃತ ಪಾನಮಾಡಿದ ನಂತರ ಪುನಶ್ಚ ಶರೀರದ ಎಲ್ಲಾ ಭಾಗವನ್ನೂ ತೃಪ್ತಿಗೊಳಿಸುತ್ತ, ಜಠರಾಗ್ನಿಯನ್ನು ಬದುಕಿಸುತ್ತ ಎಂದರೆ ಜಠರಾಗ್ನಿಗೆ ಉತ್ತೇಜನ ಕೊಡುತ್ತ ವೇಗದಿಂದ ಸ್ವಸ್ಥಾನವನ್ನೇ ಸೇರುತ್ತದೆ. ಈರೀತಿ ಪ್ರತಿಕ್ಷಣದಲ್ಲಿಯೂ ಪ್ರಾಣವಾಯುವಿನ ಕಾರ್ಯವು ನಡೆಯುತ್ತಿರುತ್ತದೆ. ಪ್ರಾಣವಾಯುವಿನ ಸ್ಥಾನವು ಹೃದಯವೆಂದು ಹೇಳಿದ ಮೇಲೆ “ **ನಾಭಿಸ್ಥಃಪ್ರಾಣಪವನಃ** ” ಎಂಬ ಮಾತು ತಪ್ಪಾಯಿತೆಂಬ ಆಯುರ್ವೇದಜ್ಞರದೊಂದು ಆಕ್ಷೇಪ, “ **ನಾಭಿಸ್ಥಾಃಪ್ರಾಣಿನಾಂಪ್ರಾಣಾಃ ಪ್ರಾಣಾನ್ನಾಭಿರ್ವ್ಯಪಾಶ್ರಿತಾ** ” ಎಂಬ ಪ್ರಮಾಣವನ್ನನುಸರಿಸಿ ಪ್ರಾಣವಾಯುವಿನ ಸ್ಥಾನವು ಹೃದಯವಾದರೂ ಪ್ರಾಣದ ಚಲನ ವಲನಾದಿಗಳನ್ನು ತೋರಿಸತಕ್ಕ ನಾಡಿಗಳ ಮೂಲವು ನಾಭಿಸ್ಥಾನದಲ್ಲಿರುವುದರಿಂದ ಪ್ರಾಣವಾಯುವೇ ನಾಭಿಯಲ್ಲಿದೆ ಎಂದು ಔಪಚಾರಿಕವಾಗಿ ಹೇಳಿದ್ದಾರೆಂದರೆ ಸಮಾಧಾನ ಸಾಕು. ಬ್ರಹ್ಮರಂಧ್ರದಲ್ಲಿ ಅಮೃತವಿರುವದೆಂದರೇನು ಎಂಬದೊಂದು ಸಣ್ಣಪಶ್ನೆ “ **ಚಕ್ರಂಸಹಸ್ರಪತ್ರಂತುಬ್ರಹ್ಮರಂಧ್ರೇವ್ಯವಸ್ಥಿತಂ ॥ ತತ್ಸುಧಾಸಾರಧಾರಾಭಿರಭಿವರ್ಧಯತೇತನುಂ** ” ಕಮಲದ ಆಕಾರವಾದ ಒಂದು ಚಕ್ರವು ಬ್ರಹ್ಮರಂಧ್ರದಲ್ಲಿದೆ. ಅದರಲ್ಲಿರತಕ್ಕ ಅಮೃತಧಾರೆಯಿಂದ ಶರೀರವಾದ್ಯಂತವೂ ಆಪ್ಯಾಯಿತವಾಗುತ್ತದೆ ಎಂಬ ಶಾಸ್ತ್ರೋಕ್ತಿಯಂತೆ ಬ್ರಹ್ಮರಂಧ್ರಾಕಾಶದಲ್ಲಿ ಅಮೃತವಿದೆ, ಅದನ್ನು ಪಾನಮಾಡಲು ಪ್ರಾಣವಾಯುವು ಕಂಠದಿಂದ ಮೇಲೆ ಬ್ರಹ್ಮರಂಧ್ರದವರಿಗೂ ಹೋಗುತ್ತದೆಂಬುವುದು ತಾತ್ಪರ್ಯ ಪ್ರಾಣವಾಯುವು ಸಂಚರಿಸುವುದು ಸ್ವಸ್ಥಾನವನ್ನು ಸೇರುವುದು ಇದೆಲ್ಲಾ ಕೇವಲ ಯೋಗಸಾಮರ್ಥ್ಯದಿಂದ ಮಹರ್ಷಿಗಳು ನೋಡಿ ನಿಶ್ಚಯಿಸಿ ಬರೆದ ವಿಷಯವಾಗಿದೆ. ನಮ್ಮ ಆಲೋಚನೆಯಿಂದಲೂ ನಮ್ಮ ಈ ಚರ್ಮ ಚಕ್ಷುಸ್ಸಿನಿಂದಲೂ ನಾವು ಈಗ ಎಷ್ಟು ಪ್ರಯತ್ನಪಟ್ಟರೂ ನೋಡಲೂ ಆರೆವು. ಆಲೋಚಿಸಲೂ ಆರೆವು ಈ ವಿಷಯದ ಮೇಲೆ ಅನೇಕ ವಾದಕಲ್ಪಿತ ಪೂರ್ವಪಕ್ಷಗಳನ್ನೇರಿಸಬಹುದು ಅದರಂತೆ ಉತ್ತರಗಳನ್ನೂ ಹೇಳಬಹುದು ಅವಲ್ಲಾ ಇಲ್ಲಿಗೆ ಅಪ್ರಕೃತ.

**ಶರೀರಪ್ರಾಣಯೋರೇವಸಂಯೋಗಾದಾಯುರುಚ್ಯತೆ ॥**
**ಕಾಲೇನತದ್ವಿಯೋಗಾಚ್ಚಪಂಚತ್ವಂಕಥ್ಯತೇಬುಧೈಃ ॥ ೩೦ ॥**
**ನಜಂತುಃಕಶ್ಚಿದಮರಃಪೃಥಿವ್ಯಾಂಜಾಯತೇಕ್ವಚಿತ್ ॥**
**ಅತೋಮೃತ್ಯುರವಾರ್ಯಸ್ಸ್ಯಾತ್ಕಿಂತುರೋಗಾನ್ನಿವಾರಯೇತ್ ॥ ೩೧ ॥**

ಆಯುಸ್ಸು ಎಂದರೆ ಎಲ್ಲಿನವರೆಗೆ ಈ ಶರೀರಕ್ಕೂ ಪ್ರಾಣವಾಯುವಿಗೂ ಸಂಬಂಧವಿರುತ್ತದಯೋ ಅಲ್ಲಿನವರಿಗಿನ ಕಾಲಕ್ಕೆ ಹೆಸರು. ಮರಣವೆಂದರೆ ಶರೀರ ಮತ್ತು ಪ್ರಾಣಗಳ ವಿಯೋಗವೆಂದರೆ ಅಗಲಿಕೆಗೇನೇ ಹೆಸರು. ಈ ಮರಣವನ್ನೇ ಪಂಚತ್ವವೆಂಬದಾಗಿಯೂ ಕರೆಯುತ್ತಾರೆ. ಈ ಭೂಮಿಯಲ್ಲಿ ಹುಟ್ಟಿದ ಪ್ರಾಣಿಗಳೆಲ್ಲವೂ ಮರಣವನ್ನು ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ. ಯಾವ ಪ್ರಾಣಿಯೂ ಮರಣರಹಿತವಾಗಿಲ್ಲ.

ಮರಣವನ್ನು ನಿವಾರಣೆಮಾಡುವುದಕ್ಕೂ ಆಗುವುದಿಲ್ಲ. ಆದ್ದರಿಂದ ರೋಗಗಳನ್ನು ನಿವಾರಣೆಮಾಡಿಕೊಳ್ಳಬಹುದು.

**ಯಾಪ್ಯತ್ವಂಯಾತಿಸಾಧ್ಯಸ್ತುಯಾಪ್ಯೋಗಚ್ಛತ್ಯಸಾಧ್ಯತಾಂ ||**
**ಜೀವಿತಂಹಂತ್ಯಸಾಧ್ಯಸ್ತುನರಸ್ಯಾಪ್ರತಿಕಾರಿಣಃ || ೫೨ ||**

ರೋಗಗಳು ಸಾಧ್ಯ, ಯಾಪ್ಯ, ಅಸಾಧ್ಯ ಎಂಬದಾಗಿ ಮೂರು ವಿಧ. ಚಿಕಿತ್ಸೆಯಿಂದ ಗುಣವಾಗುವುದಕ್ಕೆ ಸಾಧ್ಯವೆಂಬದಾಗಿಯೂ, ಚಿಕಿತ್ಸೆ ಮಾಡಿದರೂ ಗುಣವಾಗದ ಕಾಲಹರಣಮಾಡುವ ರೋಗವು ಯಾಪ್ಯವೆಂಬದಾಗಿಯೂ, ಚಿಕಿತ್ಸೆಗೆ ಅಸಾಧ್ಯವೇ ಆದ ರೋಗವು ಅಸಾಧ್ಯವೆಂಬದಾಗಿಯೂ ಹೇಳಿಸಿಕೊಳ್ಳುತ್ತದೆ ಪ್ರಕೃತ ಚಿಕಿತ್ಸೆಗೆ ಸಾಧ್ಯವಾದ ರೋಗವು ಕೂಡ ಸಕಾಲದಲ್ಲಿ ಚಿಕಿತ್ಸೆಮಾಡದಿದ್ದಲ್ಲಿ ಯಾಪ್ಯವೆಂಬ ಅವಸ್ಥೆಗೆ ಬರುತ್ತದೆ ಯಾಪ್ಯವಾದ ರೋಗವು ಕೂಡ ತತ್ಕಾಲೋಚಿತವಾದ ಉಪಶಮನವನ್ನು ಮಾಡದಿದ್ದಲ್ಲಿ ಅಸಾಧ್ಯವೆಂಬ ಅವಸ್ಥೆಗೆ ಬರುತ್ತದೆ. ಇನ್ನು ಅಸಾಧ್ಯವೇ ಆದ ರೋಗವು ತತ್ಕಾಲೋಪಶಾಂತಿ ಇಲ್ಲದಿದ್ದರ ಕೂಡಲೇ ಕೊಂದುಬಿಡುತ್ತದೆ.

**ಧರ್ಮಾರ್ಥಕಾಮಮೋಕ್ಷಾಣಾಂಶರೀರಂಸಾಧನಂಯತಃ ||**
**ಅತೋರುಗ್ಭ್ಯಸ್ತನುಂರಕ್ಷೇನ್ನರಃಕರ್ಮವಿಪಾಕವಿತ್ || ೫೩ ||**

ಇಷ್ಟೂಕಷ್ಟಪಟ್ಟು ಈ ನಾಶವಂತವಾದ ಶರೀರವನ್ನು ಕಾಪಾಡುವುದರ ಫಲವಾದರೂ ಏನೆಂಬ ಸಂದೇಹವನ್ನು ಪರಿಹರಿಸುತ್ತಾನೆ. ಧರ್ಮಾದಿ ನಾಲ್ಕು ಪುರುಷಾರ್ಥಗಳನ್ನು ಸಾಧಿಸುವುದಕ್ಕೂ ಈ ಸ್ಥೂಲ ದೇಹವೇ ಮುಖ್ಯ ಸಾಧನವಾದ್ದರಿಂದ ಈ ಶರೀರಕ್ಕೆ ಆಗಾಗ್ಗೆ ಬರಬಹುದಾದ ರೋಗಗಳನ್ನು ನಿವಾರಣೆ ಮಾಡಿಕೊಂಡು ಶರೀರವನ್ನು ಕಾಪಾಡಿಕೊಳ್ಳಬೇಕು. ಇದರಿಂದ ಕರ್ಮಗಳು ಪರಿಪಕ್ವವಾದ ಕಾಲದಲ್ಲಿ ಉತ್ತಮವಾದ ಪ್ರಯೋಜನವಾಗಬಹುದು. ಇದೇ ಅರ್ಥಕ್ಕೇನೇ ನೀತಿವಚನವು ಕೂಡ ಇದೆ.- " ವಿನಾಶೇಬಹವೋದೋಷಾಜೀವನ್ ಭದ್ರಾಣಿಪಶ್ಯತಿ "

**ಧಾತವಸ್ತನ್ಮಲಾದೋಷಾನಾಶಯಂತ್ಯಸಮಾಸ್ತನುಂ ||**
**ಸಮಾಸ್ಸುಖಾಯವಿಜ್ಞೇಯಾಬಲಾಯೋಪಚಯಾಯಚ || ೫೪ ||**

ಶರೀರದಲ್ಲಿರತಕ್ಕ ಸಪ್ತಧಾತುಗಳು, ಹಿಂದೆ ಹೇಳಲ್ಪಟ್ಟಿರತಕ್ಕ ಈ ಧಾತುಮಲಗಳೂ, ವಾತ ಪಿತ್ತ ಕಫಗಳೆಂಬ ದೋಷತ್ರಯಗಳೂ ಕೂಡ ಶರೀರವು ಸುಖವಾಗಿರಲು ಯಾವ ಪರಿಮಾಣದಿಂದ ಇರಬೇಕು ಎಂಬ ನಿಯಮವಿದೆಯೋ ಆ ಪರಿಮಾಣದಲ್ಲಿದ್ದರೆ ಮಾತ್ರ ಶರೀರಕ್ಕ ಸುಖಕರಗಳಾಗುತ್ತವೆ. ಅದಕ್ಕಿಂತ ಸ್ವಲ್ಪ ಹೆಚ್ಚುಕಡಮೆಯಾದರೂ ಶರೀರವನ್ನು ನಾಶಮಾಡಿಯೇ ಬಿಡುತ್ತವೆ. ಶರೀರದಲ್ಲಿ ಯಾವ ಯಾವ ಪದಾರ್ಥಗಳು ಎಷ್ಟೆಷ್ಟು ಪರಿಮಾಣದಲ್ಲಿರಬೇಕೆಂಬ ವಿಷಯವನ್ನು ಶಾರ್ಙ್ಗಧರಾಚಾರ್ಯರು ವಿಶದವಾಗಿ ಹೇಳಲಿಲ್ಲ. ಗ್ರಂಥಾಂತರದಲ್ಲಿ ಹೇಳಿರತಕ್ಕದ್ದರ ತಾತ್ಪರ್ಯವನ್ನು ಸಂಗ್ರಹಿಸಿರುತ್ತೆ. ಆರೋಗ್ಯವಂತನ ಶರೀರದಲ್ಲಿರತಕ್ಕ ಅನ್ನರಸದ ಪರಿಮಾಣ ಒಂಬತ್ತು ಬೊಗಸೆ, ರಕ್ತ ಎಂಟು ಬೊಗಸೆ, ಮಲ ಏಳು ಬೊಗಸೆ, ಪಿತ್ತ ಐದು ಬೊಗಸೆ, ಕಫ ಆರು ಬೊಗಸೆ, ಮೂತ್ರ ನಾಲ್ಕು ಬೊಗಸೆ, ವಸ ಎಂಬ ಮಾಂಸರಸ ಮೂರು ಬೊಗಸೆ, ಮೇದಸ್ಸು ಎರಡು ಬೊಗಸೆ, ಮಜ್ಜಧಾತು ಒಂದು ಬೊಗಸೆ, ಶುಕ್ರಧಾತು ಒಂದು ಶರೆ, ಓಜೋಧಾತು

ವೂ ಅಷ್ಟೇ ವರ ಾಣ. ಸ್ತ್ರೀಯರಿಗೆ ರಜಸ್ಸು ನಾಲ್ಕು ಬೊಗಸೆ, ಸ್ತನ್ಯ ಎರಡು ಬೊಗಸೆ, ಈರೀತಿ " ಪ್ರಮಾಣಮೇತತ್ಸುತಾನಾಮುದಾಹ್ಟಾನಾಮುದಾಹೃತಂ || ಹೀನಾಸ್ಯುಸ್ತತ್ಪ್ರಮಾಣಾತ್ತುಪ್ರವೃದ್ಧಾಶ್ಚಾಪಿಧಾತವಃ || ಯೋಜಂತಿವಿಕಾರೇಷುದೋಷಾವೃದ್ಧಿಕ್ಷಯಪ್ರದಾಃ ಆರೋಗ್ಯವಂತನಾದವನ ಶರೀರದಲ್ಲಿರಬೇಕು. ಹೆಚ್ಚುಕಡಿಮೆಯಾದಲ್ಲ ಶರೀರಸ್ವಾಸ್ಥ್ಯಕ್ಕೇನೇ ಕಾರಣವಾಗುತ್ತವೆ.

ಜಗದ್ಯೋನೇರನಿಚ್ಛಸ್ಯಚಿದಾನಂದೈಕರೂಪಿಣಃ ||
ಪುಂಸೋಽಸ್ತಿಪ್ರಕೃತಿರ್ನಿತ್ಯಾಪ್ರತಿಚ್ಛಾಯೇವಭಾಸ್ವತಃ || ೫೫ ||

ಆಯುರ್ವೇದ ಸಿದ್ಧಾಂತ ಸಮ್ಮತವಾದ ಜಗತ್ಸೃಷ್ಟಿಕ್ರಮವನ್ನು ಹೇಳುತ್ತಾನೆ ಸಚ್ಚಿದಾನಂದ ಸ್ವರೂಪನಾದ, ಜಗದುತ್ಪತ್ತಿಕಾರಣನಾದ, ಇಚ್ಛಾದ್ವೇಷರಹಿತನಾದ ಪರಮಾತ್ಮಶಬ್ದವಾಚ್ಯನಾದ ಪುರುಷನಿಗೆ, ಗಗನಮಂಡಲದಲ್ಲಿ ಪ್ರಕಾಶಿಸುವ ಸೂರ್ಯನ ನೀರಿನಲ್ಲಿ ಪ್ರತಿಫಲಿಸಿರುವ ಪ್ರತಿಬಿಂಬದಂತೆ, ಪ್ರಕೃತಿ ಎಂಬುದೊಂದು ಪ್ರತಿಬಿಂಬವಿದೆ.

ಅಚೇತನಾಪಿಚೈತನ್ಯಯೋಗೇನಪರಮಾತ್ಮನಃ ||
ಅಕರೋದ್ವಿಶ್ವಮಖಿಲಮನಿತ್ಯಂನಾಟಕಾಕೃತಿ || ೫೬ ||

ಅಂತಹ ಪರಮಾತ್ಮಪ್ರತಿಬಿಂಬರೂಪವಾದ ಪ್ರಕೃತಿಯು ತಾನು ಅಚೇತನವಾದರೂ ಪರಮಾತ್ಮಚೈತನ್ಯಸಂಬಂಧವು ತನಗೆ ಇರೋಣದರಿಂದ ನಾಟಕದಂತೆ ಅನಿತ್ಯವಾದ ಅಂದರೆ ಕ್ಷಣಭಂಗುರವಾದ ಈ ಪ್ರಸಂಚವನ್ನು ನಿರ್ಮಿಸಿದೆ.

ಪ್ರಕೃತಿರ್ವಿಶ್ವಜನನೀಪೂರ್ವಂಬುದ್ಧಿಮಜೀಜನತ್ ||
ಇಚ್ಛಾಮಯೀಂಮಹದ್ರೂಪಾಮಹಂಕಾರಸ್ತತೋಽಭವತ್ || ೫೭ ||
ತ್ರಿವಿಧಸ್ಸೋಽಪಿಸಂಜಾತೋರಜಸ್ಸತ್ವತಮೋಗುಣೈಃ ||

ಜಗದುತ್ಪತ್ತಿಕ್ರಮವನ್ನು ಮುಂದರಿಸುತ್ತಾನೆ. ಪ್ರಪಂಚವನ್ನೇ ಸೃಷ್ಟಿಮಾಡತಕ್ಕ ಪ್ರಕೃತಿಯು ಮೊದಲು ಬುದ್ಧಿಯನ್ನು ಉಂಟುಮಾಡಿತು ಬುದ್ಧಿಯ ಸ್ವಭಾವವೆಂತಹುದೆಂದರೆ " ಇಚ್ಛಾಮಯೀಂ " ಸತ್ವ, ರಜಸ್ಸು, ತಮಸ್ಸು ಎಂಬ ಮೂರು ವಿಧವಾದ ಸ್ವಭಾವವುಳ್ಳದ್ದು. ಈ ಬುದ್ಧಿಗೇನೇ ಮಹಾನ್ ಎಂಬ ಪರ್ಯಾಯನಾಮವೂ ಉಂಟು ಹಿಂದೆ ಹೇಳಿದ ಸತ್ವ ರಜಸ್ಸು ತಮಸ್ಸು ಎಂಬ ಮೂರು ಸ್ವಭಾವಯುಕ್ತವಾದ ಬುದ್ಧಿಯಿಂದಲೇ ಅಹಂಕಾರವು ಉಂಟಾಯಿತು ಇಂತಹ ಬುದ್ಧಿಯಿಂದ ಹುಟ್ಟಿದ ಅಹಂಕಾರವು ಕೂಡ ಮೂರುವಿಧವೇ ಆಯಿತು.

ತಸ್ಮಾತ್ಸತ್ವರಜೋಯುಕ್ತಾದಿಂದ್ರಿಯಾಣಿದಶಾಭವನ್ || ೫೮ ||
ಮನಶ್ಚಜಾತಂತಾನ್ಯಾಹುಶ್ಶ್ರೋತ್ರತ್ವಙ್ನಯನಂತಥಾ ||
ಜಿಹ್ವಾಘ್ರಾಣವಚೋಹಸ್ತಪಾದೋಪಸ್ಥಗುದಾನಿಚ || ೫೯ ||
ಪಂಚಬುದ್ಧೀಂದ್ರಿಯಾಣ್ಯಾಹುಃಪ್ರಾಕ್ತನಾನೀತರಾಣಿಚ ||
ಕರ್ಮೇಂದ್ರಿಯಾಣಿಪಂಚೈವಕಥ್ಯಂತೆಸೂಕ್ಷ್ಮಬುದ್ಧಿಭಿಃ || ೬೦ ||

ಇಂತಹ ತ್ರಿಗುಣಯುಕ್ತವಾದ ಅಹಂಕಾರದಿಂದ ಹತ್ತು ಇಂದ್ರಿಯಗಳು ಮತ್ತು ಮನಸ್ಸು ಸಹ ಹುಟ್ಟಿದವು. ಅವುಗಳ ನಾಮನಿರ್ದೇಶಮಾಡುತ್ತಾನೆ. ಕಿವಿ,

ಹೇಳಿರುವ ಸ್ತ್ರೀವ್ಯಾಮೋಹ. ಕ್ರೋಧವೆಂದರೆ " **ಯದುಷ್ಮಾಹೃದಯೂಜಂತೋಸ್ಸಮುತ್ತಿಷ್ಠತಿವ್ವೈಸಕೃತ್ ॥ ಪರಹಿಂಸಾತ್ಮಕಃಕ್ಲೇಶಃಕ್ರೋಧಇತ್ಯಭಿಧೀಯತೆ** " ಎಂಬ ಶ್ಲೋಕದಲ್ಲಿ ಹೇಳಿರುವಂತಹ ಮಾನಸಿಕವಾದ ಪರಹಿಂಸೇಚ್ಛೆ. ಲೋಭವೆಂದರೆ " **ಪರಾರ್ಥಪರಭೋಗಾಂಶ್ಚ ಪರಸಾಮರ್ಥ್ಯಮೇವಚ ॥ ದೃಷ್ಟ್ವಾಶ್ರುತ್ವಾಚಂಯಾತೃಷ್ಣಾಜಾಯತೇಲೋಭಏವಸಃ** ॥ " ಎಂಬ ಶ್ಲೋಕದಲ್ಲಿ ಹೇಳಿರುವಂತಹ ಆಸೆಗೇನೇ ಲೋಭವೆಂಬ ಹೆಸರು. ಮೋಹವೆಂದರೆ " **ಮಿಥ್ಯಾಜ್ಞಾನಂತು ತಂಪ್ರಾಹುರಹಿತೇಹಿತದರ್ಶನಂ** " ಎಂಬ ಶ್ಲೋಕದಲ್ಲಿ ಹೇಳಿರುವ ಮೇರೆಗೆ ಹಿತವಲ್ಲದ್ದನ್ನೆಲ್ಲಾ ಹಿತವೆಂದು ತಿಳಿದುಕೊಳ್ಳುವ ಜ್ಞಾನಕ್ಕೆ ಹೆಸರು. ಅಹಂಕಾರ ಎಂದರೆ ಯಾವ ಕಾರ್ಯದಲ್ಲಿಯೂ " **ಅಹಮಿತ್ಯಭಿಮಾನೇನಯಃಕ್ರಿಯಾಸುಪ್ರವರ್ತತೆ** ॥ " ಎಂಬ ಶ್ಲೋಕೋಕ್ತವಾದ ಅಹಂ ಎಂಬ ಅಭಿಮಾನಕ್ಕೇನೇ ಹೆಸರು. ಇವುಗಳು ಮತ್ತು ಹತ್ತು ಇಂದ್ರಿಯಗಳು, ಬುದ್ಧಿ ಇವಿಷ್ಟೂ ಲಿಂಗಶರೀರಿ ಎನ್ನಿಸಿಕೊಳ್ಳುವ ಜೀವಾತ್ಮನಿಗೆ ಬಂಧಕ್ಕೆ ಕಾರಣಗಳು.

**ಆಪ್ನೋತಿಬಂಧಮಜ್ಞಾನಾದಾತ್ಮಜ್ಞಾನಾತ್ಪ್ರಮುಚ್ಯತೆ ॥**
**ತದ್ದುಃಖ್ಯಯೋಗಕೃದ್ವ್ಯಾಧಿರಾರೋಗ್ಯಂತತ್ಸುಖಾವಹಂ ॥ ೭೩ ॥**

ಮನುಷ್ಯನು ಅಜ್ಞಾನದಿಂದ ಬಂಧನವನ್ನು ಹೊಂದುತ್ತಾನೆ. ಪರಮಾತ್ಮಜ್ಞಾನವನ್ನು ಹೊಂದಿದನೆಂದರೆ ಯಾವ ಬಂಧನವೂ ಇಲ್ಲದೆ ಮುಕ್ತನಾಗುತ್ತಾನೆ. ಜೀವಾತ್ಮನಿಗೆ ದುಃಖ್ಖಪಡಿಸತಕ್ಕದ್ದಕ್ಕೆ ವ್ಯಾಧಿ ಎಂತಲೂ ಜೀವಾತ್ಮನಿಗ ಸುಖವಾಗುವುದೇ ಆರೋಗ್ಯವೆಂಬದಾಗಿಯೂ ಹೇಳಿಸಿಕೊಳ್ಳುತ್ತದೆ

**—: ಪಂಚಮಾಧ್ಯಾಯ ಸಂಪೂರ್ಣ. :—**



**ಯಾತ್ಯಾಮಾಶಯಮಾಹಾರಃಪೂರ್ವಂಪ್ರಾಣಾನಿಲೇರಿತಃ ॥**
**ಮಾಧುರ್ಯಂಫೇನಭಾವಂಚಷಡ್ರಸೋಪಿಲಭೇತಸಃ ॥ ೧ ॥**

ಆಹಾರವು ಜೀರ್ಣವಾಗಿ ರಕ್ತಗತವಾಗುವ ಕ್ರಮವನ್ನು ಹೇಳುತ್ತಾನೆ. ಪ್ರಾಣವಾಯುವಿನಿಂದ ಪ್ರೇರಿತವಾದ ಆಹಾರವು ಮೊದಲು ಆಮಾಶಯಕ್ಕೆ ಹೋಗುತ್ತದೆ. ಆಮಾಶಯವೆಂದರೆ ನಾಭಿ ಮತ್ತು ಸ್ತನಗಳ ಮಧ್ಯಭಾಗಕ್ಕೆ ಹೆಸರು; ಅಲ್ಲಿಗೆ ಹೋದ ಲವಣ ಆಮ್ಲಾದಿ ಷಡ್ರಸಯುಕ್ತವಾದ ಆಹಾರವೂ ಕೂಡ ಮಧುರವಾದ ರಸವೊಂದೇ ಉಳ್ಳದ್ದಾಗಿ ನೊರೆಯಂತಾಗುತ್ತದೆ.

**ಅಥಪಾಚಕಪಿತ್ತೇನವಿದಗ್ಧಶ್ಚಾಮ್ಲತಾಂವ್ರಜೇತ್ ॥**
**ತತಸ್ಸಮಾನಮರುತಾಗ್ರಹಣೀಮಭಿನೀಯತೆ ॥ ೨ ॥**

ಈ ರೀತಿ ಆಮಾಶಯದಲ್ಲಿ ಪ್ರವೇಶಮಾಡಿದ ಕೂಡಲೆ ಆಹಾರವು ಸೀಯಾಗಿ ನೊರೆಯಂತಾಗುತ್ತದೆ, ಕೊಂಚ ಕಾಲದಮೇಲೆ ಆಮಾಶಯದಲ್ಲಿ ಪಾಚಕಪಿತ್ತದೊಡನೆ ಸೇರಿ ಪಕ್ವವಾಗುವುದಕ್ಕೆ ಆರಂಭವಾಗಿ ಹುಳಿಯಾಗುತ್ತದೆ. ನಂತರ ನಾಭಿಸ್ಥಾನಗತವಾದ ಸಮಾನವಾಯುವಿನ ಸಂಬಂಧವಾದ ಮೇಲೆ ಸಮಾನವಾಯುವಿನಿಂದ ತಳ್ಳಲ್ಪಟ್ಟು ಗ್ರಹಣಿ ಎಂಬ ಅಗ್ನಿಸ್ಥಾನಕ್ಕೆ ಸೇರುತ್ತದೆ.

ಷಷ್ಠೀಪಿತ್ತಧರಾನಾಮಯಾಕಲಾಪರಿಕೀರ್ತಿತಾ ॥
ಪಕ್ವಾಮಾಶಯಮಧ್ಯಸ್ಥಾಗ್ರಹಣೀತ್ಯಭಿಧೀಯತೆ ॥ ೩ ॥
ಗ್ರಹಣ್ಯಾಂಪಚ್ಯತೆಕೋಷ್ಠವಹ್ನಿನಾಜಾಯತೇಕಟುಃ ॥
ರಸೋಭಗತಿಸಂಪಾಕಾದಪಕ್ವಾದಾಮಸಂಭವಃ ॥ ೪ ॥
ವಹ್ನೇರ್ಬಲೇನಮಾಧುರ್ಯಂಸ್ನಿಗ್ಧತಾಂಯಾತಿತದ್ರಸಃ ॥
ಪುಷ್ಣಾತಿಧಾತೂನಖಿಲಾನ್ಸಮ್ಯಕ್ಪಕ್ವೋಮೃತೋಪಮಃ ॥ ೫ ॥
ಮಂದವಹ್ನಿವಿದಗ್ಧಶ್ಚಕಟುಶ್ಚಾಮ್ಲೋಭವೇದ್ರಸಃ ॥
ವಿಷಭಾವಂವ್ರಜೇತ್ಸ್ವಾಪಿಕುರ್ಯಾದ್ವಾರೋಗಸಂಕರಂ ॥ ೬ ॥

ಗ್ರಹಣಿ ಎಂಬ ಅಗ್ನಿಸ್ಥಾನಕ್ಕೆ ಹೋಗುತ್ತದೆಂದು ಹೇಳಿರುತ್ತದಷ್ಟೆ. ಗ್ರಹಣಿ ಎಂದರೇನು? ಎಂಬ ಪ್ರಶ್ನೆಗೆ ಹೇಳುತ್ತಾನೆ. ಆಮಾಶಯ ಮತ್ತು ಪಕ್ವಾಶಯಗಳ ನಡುವೆ ಇರುತ್ತಿರುವ ಪಿತ್ತಧರಾ ಎಂಬ ಆರನೆಯಕಲೆ ಯಾವದುಂಟೋ ಅವನ್ನೇ ಗ್ರಹಣಿ ಎಂದು ಕರೆಯುತ್ತಾರೆ. ಸಮಾನವಾಯುವಿನಿಂದ ತಳ್ಳಲ್ಪಟ್ಟು ಗ್ರಹಣಿ ಎಂಬ ಪಕ್ವಸ್ಥಾನ ವನ್ನು ಸೇರಿದ ಆಮ್ಲವಾದ ಆಹಾರವು ಗ್ರಹಣೀಸ್ಥಾನದಲ್ಲಿಯೇ ಕೋಷ್ಠಾಗ್ನಿಯಿಂದ ಪಕ್ವವಾಗುತ್ತದೆ ಅಲ್ಲಿ ಅದರ ರಸವು ಕಾರವಿರುತ್ತದೆ. ಕೋಷ್ಠಾಗ್ನಿಯಿಂದ ಚನ್ನಾಗಿ ಪಕ್ವವಾದರೆ ರಸವಾಗುತ್ತದೆ. ಜಠರಾಗ್ನಿ ದೌರ್ಬಲ್ಯದಿಂದ ಚನ್ನಾಗಿ ಪಕ್ವವಾಗದೆ ನಿಂತಲ್ಲಿ ಆಮೋತ್ಪತ್ತಿಯಾಗುತ್ತದೆ. ಈ ಆಮವೆಂಬುವುದೇ " ಜಠರಾನಲದೌರ್ಬಲ್ಯಾದವಿಪಕ್ವಸ್ತುಯೋರಸಃ ॥ ಸಆಮಸಂಜ್ಞಕೋದೇಹೇಸರ್ವವಸ್ತುಪ್ರಕೋಪಕಃ " ಸಕಲರೋಗಗಳಿಗೂ ಮೂಲಕಾರಣವಾದದ್ದು ಕೋಷ್ಠಾಗ್ನಿಯಿಂದ ಪಕ್ವವಾದ ರಸವು ಪುನಶ್ಚ ಅಗ್ನಿಸಾಮರ್ಥ್ಯದಿಂದಲೇ ಮಾಧುರ್ಯವನ್ನೂ ಸ್ನಿಗ್ಧತ್ವವನ್ನೂ ಅಂದರೆ ಸ್ವಲ್ಪ ಜಿಡ್ಡು ಉಳ್ಳೋಣವನ್ನೂ ಹೊಂದುತ್ತದೆ. ಹೀಗೆ ಮಧುರವಾಗಿಯೂ ಸ್ನಿಗ್ಧಭಾವವುಳ್ಳದ್ದಾಗಿಯೂ ಆದ ರಸವು ಸಮ್ಯಕ್ಪಕ್ವಃ ಎಂದರೆ ಜಠರಾಗ್ನಿಯ ಶಾಖದಿಂದ ಚನ್ನಾಗಿ ಪಾಕವನ್ನು ಹೊಂದಿ ಅಮೃತಸದೃಶವಾಗಿ ದೇಹಗತವಾದ ಎಲ್ಲಾ ಧಾತುಗಳನ್ನೂ ಅಭಿವೃದ್ಧಿಪಡಿಸುತ್ತದೆ. ಅದೇ ರಸವು ಜಠರಾಗ್ನಿಮಾಂದ್ಯದಿಂದ ವಿದಗ್ಧ ಅಂದರೆ ಅಪಕ್ವವಾದರೆ ಕಾರವಾಗಿಯೂ ಹುಳಿಯಾಗಿಯೂ ಆಗುತ್ತದೆ. ಹೀಗಾದ ರಸವು ವಿಷಸದೃಶವಾಗಿ ಅನೇಕ ರೋಗಗಳನ್ನು ಹುಟ್ಟಿಸುತ್ತದೆ ಒಂದೇಸರ್ತಿ ಕೊಂದುಹಾಕಿದರೂಹಾಕಬಹುದು.

ಆಹಾರಸ್ಯರಸಸ್ಸಾರಸ್ಸಾರಹೀನೋಮಲದ್ರವಃ ॥
ಶಿರಾಭಿಸ್ತಜ್ಜಲಂಸ್ನೀತಂಬಸ್ತಾಮೂತ್ರತ್ವಮಾಪ್ನುಯಾತ್ ॥ ೭ ॥
ತತ್ಕಿಟ್ಟಂಚಮಲಂಜ್ಞೇಯಂತಿಷ್ಠೇತ್ಪಕ್ವಾಶಯೇಚತತ್ ॥
ವಲಿತ್ರಿತಯಮಾರ್ಗೇಣಯಾತ್ಯಪಾನೇನನೋದಿತಂ ॥ ೮ ॥
ಪ್ರವಾಹಿಣೀಸರ್ಜನೀಚಗ್ರಾಹಿಕೇತಿಚತುಷ್ಟಯಂ ॥

ಈರೀತಿಯಿಂದ ಭೋಜನಮಾಡಿದ ಆಹಾರದಲ್ಲಿ ಜಠರಾಗ್ನಿಯಿಂದ ಪಕ್ವವಾಗಿ ಜಲರೂಪವಾಗಿ ಬೇರೆ ಆಗುವ ಸಾರವಾದ ಭಾಗವೇ ರಸಧಾತುವೆನ್ನಿಸುವುದು. ಸಾರ ರಹಿತವಾಗಿ ಉಳಿಯುವ ದ್ರವ ಭಾಗವೇ ಮಲಭಾಗ ಅಂದರೆ ಅನುಪಯುಕ್ತವಾದ ಭಾಗ. ಅಂತಹ ಅನುಪಯುಕ್ತವಾದ ಮಲದ್ರವವು " ಸಿರಾ " ಅಂದರೆ ಅದಕ್ಕೋಸ್ಕರ

ವೇ ದೇಹದಲ್ಲಿರುವ ನಾಡಿಗಳ ದ್ವಾರ ಮೂತ್ರಾಶಯಕ್ಕೆ ಹೋಗಿ ಮೂತ್ರವೆನ್ನಿಸಿಕೊಂಡು ಮೂತ್ರದ್ವಾರದ ಮಾರ್ಗವಾಗಿ ಹೊರಬೀಳುತ್ತವೆ. ಸಾರವಾದ ಭಾಗವು ವಿಸಿಯೋಗವಾದ ಮೇಲೆ ಉಳಿಯುವ ಮಲಭಾಗದ ವಿಚಾರ ಹೇಳಿದ್ದಾಯಿತು. ಅಸಾರವಾದ ಘನವಸ್ತುವಿಗೇನೇ ಕಿಟ್ಟ ಅಥವಾ ಮಲವೆಂಬ ಹೆಸರು; ಅದು ಪಕ್ವಾಶಯವೆಂದರೆ ಮಲಾಶಯದಲ್ಲಿರುತ್ತದೆ. ಅಂತಹ ಮಲಾಶಯಗತವಾದ ಕಿಟ್ಟವು ಅಪಾನವಾಯುವಿನಿಂದ ತಳ್ಳಲ್ಪಟ್ಟು "**ವಳಿತ್ರಿತಯಮಾರ್ಗೇಣ**" ಅಂದರೆ ಮೂರು ವಲಿಗಳುಳ್ಳ ಗುದದ ಮಾರ್ಗವಾಗಿ ಶರೀರದಿಂದ ಹೊರಕ್ಕೆ ಹೋಗುತ್ತದೆ. ಗುದದ್ವಾರದಲ್ಲಿರತಕ್ಕ ವಲಿತ್ರಿತಯಗಳು ಯಾವುವೆಂದರೆ:- ಪ್ರವಾಹಿಣಿ, ವಿಸರ್ಜನಿ, ಗ್ರಾಹಿಕಾ ಎಂಬಿವೇ ಮೂರು ವಳಿಗಳು.

**ರಸಸ್ತು ಹೃದಯಂಯಾತಿ ಸಮಾನಮರುತೇರಿತಃ ॥ ೯ ॥**
**ರಂಜಿತಃಪಾಚಿತಸ್ತತ್ರ ಪಿತ್ತೇನಾಯಾತಿರಕ್ತತಾಂ ।**
**ರಕ್ತಂಸರ್ವಶರೀರಸ್ಥಂಜೀವಸ್ಯಾಧಾರಮುತ್ತಮಂ ॥ ೧೦ ॥**
**ಸ್ನಿಗ್ಧಂಗುರುಚಲಂಸ್ವಾದುವಿದಗ್ಧಂಪಿತ್ತವದ್ಭವೇತ್ ।**

ಆಹಾರವು ಜಠರಾಗ್ನಿ ಪಾಕದಿಂದ ರಸಧಾತುವಾಗಿ ಪರಿಣಮಿಸುವುದನ್ನು, ಮಲಭಾಗವು ಘನ ಮತ್ತು ದ್ರವರೂಪಗಳಿಂದವೇ ಬಂದು ಹೊರಬೀಳುವುದನ್ನೂ ಹೇಳಿ ರಸಧಾತುವು ಶರೀರವನ್ನು ಪೋಷಿಸುವುದಕ್ಕೆ ಬರುವ ರೂಪಾಂತರಗಳನ್ನು ಹೇಳುತ್ತಾನೆ. ಗ್ರಹಣೀ ಸ್ಥಾನದಲ್ಲಿ ಪಕ್ವವಾಗಿ ರಸಾವಸ್ಥೆಯನ್ನು ಹೊಂದಿದ ಆಹಾರಗಳ ಸಾರರೂಪವಾದ ದ್ರವವು ಸಮಾನವಾಯುವಿನಿಂದ ತಳ್ಳಲ್ಪಟ್ಟು ಹೃದಯಸ್ಥಾನಕ್ಕೆ ಬರುತ್ತದೆ ಹೃದಯಸ್ಥಾನದಲ್ಲಿರುವ ರಂಜಕವೆಂಬ ಪಿತ್ತದಿಂದ ಪಕ್ವವಾಗಿ "**ರಂಜಿತಃ**" ಅಂದರೆ ಕೆಂಪುಬಣ್ಣವನ್ನೂ ಹೊಂದಿ ಅನಂತರ ರಕ್ತತ್ವವನ್ನು ಹೊಂದುತ್ತದೆ ಈ ರಕ್ತವೆಂಬ ಧಾತುವು ಸರ್ವಶರೀರದಲ್ಲಿಯೂ ವ್ಯಾಪಿಸಿಕೊಂಡು ಜೀವಕ್ಕೆ ಮುಖ್ಯಾಧಾರವಾಗಿರುತ್ತದೆ. ಇದರ ಗುಣಗಳು- ಜಿಡ್ಡಾಗಿರುವುದು, ಗುರುಗುಣವುಳ್ಳದ್ದು, ದ್ರವರೂಪವಾದ್ದರಿಂದ ಚಲನಾತ್ಮಕವಾದದ್ದು, ಮಧುರರಸವುಳ್ಳದ್ದು. ರಸಧಾತ್ವವಸ್ಥೆಯನ್ನು ಬಿಟ್ಟು ರಕ್ತಧಾತ್ವವಸ್ಥೆಗೆ ಬರುವಾಗ್ಗೆ ಪಿತ್ತಗತವಾದ ಔಷ್ಣ್ಯದಿಂದ "**ವಿದಗ್ಧಂ**" ಅಂದರೆ ಸರಿಯಾಗಿ ಪಾಕವಾಗದೆ ಹೋದರೆ ಪಿತ್ತವು ಹೇಗೆ ಅಮ್ಲಪಾಕವನ್ನು ಹೊಂದಿ ರೋಗೋತ್ಪಾದಕವಾಗುತ್ತದೆಯೋ ಹಾಗೆ ರಕ್ತವೂ ಪಿತ್ತದಂತೆಯೇ ಆಗಿ ರೋಗವನ್ನು ಹುಟ್ಟಿಸುತ್ತದೆ.

**ಪಾಚಿತಾಃಪಿತ್ತತಾಪೇನರಸಾದ್ಯಾಧಾತವಃಕ್ರಮಾತ್ ॥ ೧೧ ॥**
**ಶುಕ್ರತ್ವಂಯಾಂತಿಮಾಸೇನತಥಾಸ್ತ್ರೀಣಾಂರಜೋಭವೇತ್ ॥**

ರಸಧಾತುವು ಪಿತ್ತಗತವಾದ ತೇಜಸ್ಸಿನಿಂದ ಪಕ್ವವಾಗಿ ರಕ್ತಧಾತುವಾಗುವಂತೆಯೇ ಮುಂದಲ ರಕ್ತಾದಿಧಾತುಗಳು ಕೂಡ ಕ್ರಮವಾಗಿ ಪಿತ್ತತೇಜಸ್ಸಿನಿಂದಲೇ ಪಕ್ವವಾಗುತ್ತ ಹೋಗಿ ಕೊನೆಗೆ ಅಂದರೆ ಅನ್ನವು ರಸಧಾತುವಾಗಿ ಪರಿಣಮಿಸಿದ ಒಂದು ತಿಂಗಳಿನ ಹೊತ್ತಿಗೆ ಪುರುಷರಿಗೆ ಶುಕ್ರಧಾತುವಾಗಿಯೂ, ಸ್ತ್ರೀಯರಿಗೆ ರಜಸ್ಸಾಗಿಯೂ ಪರಿಣಾಮವನ್ನು ಹೊಂದುತ್ತದೆ.

ಕಾಮಾನ್ಮಿಥುನಸಂಯೋಗೇಶುದ್ಧಶೋಣಿತಶುಕ್ರಜಃ ॥ ೧೨ ॥
ಗರ್ಭಸ್ಸಂಜಾಯತೇನಾರ್ಯಾಸ್ಸಜಾತೋಬಾಲಉಚ್ಯತೆ ॥
ಆಧಿಕ್ಯೇರಜಸಃಕನ್ಯಾಪುತ್ರಶ್ಶುಕ್ರಾಧಿಕೇಭವೇತ್ ॥ ೧೩ ॥
ನಪುಂಸಕಂಸಮತ್ವೇನಯಥೇಚ್ಛಾಪಾರಮೇಶ್ವರೀ ॥

ರಸಾದಿಶುಕ್ರಶೋಣಿತಾಂತಪರಿಣಾಮವನ್ನು ಹೇಳಿ ಮುಂದೆ ಶುಕ್ರಶೋಣಿತಗಳ ಪರಿಣಾಮವೇನೆಂಬುವುದನ್ನು ನಿರೂಪಿಸುತ್ತಾನೆ. ಪುರುಷರಿಗೆ ಶುಕ್ರಧಾತುವಾಗಿಯೂ ಸ್ತ್ರೀಯರಿಗೆ ಶೋಣಿತಧಾತುವಾಗಿಯೂ ಪರಿಣಾಮವನ್ನು ಹೊಂದಿದ ಆಹಾರರಸವು, ಸ್ತ್ರೀಪುರುಷರಿಗೆ ಉಂಟಾಗತಕ್ಕ ಸ್ವಾಭಾವಿಕವಾದ ಮೈಥುನೇಚ್ಛೆಯಿಂದ ಪರಸ್ಪರ ಸಂಯೋಗ ಉಂಟಾದ ಕಾಲದಲ್ಲಿ ಶುಕ್ರಶೋಣಿತಗಳೆರಡೂ ಕೂಡಿ ಸ್ತ್ರೀವ್ಯಕ್ತಿಯಲ್ಲಿ ಗರ್ಭವೆಂಬ ಪರಿಣಾಮವನ್ನು ಹೊಂದಿ ಗರ್ಭದಲ್ಲಿಯೇ ವೃದ್ಧಿಹೊಂದಿ ಗರ್ಭವಾಸವನ್ನು ಬಿಟ್ಟು ಹೊರಬಿದ್ದ ಕಾಲದಲ್ಲಿ " ಬಾಲ " ಎಂದರೆ ಶಿಶು, ಮಗು ಎಂಬ ಹೆಸರನ್ನು ಹೊಂದುತ್ತದೆ. ಸ್ತ್ರೀಪುರುಷರು ಕೂಡಿ ಶುಕ್ರಶೋಣಿತ ಸಂಯೋಗವಾಗತಕ್ಕ ಕಾಲದಲ್ಲಿ ಶುಕ್ರಶೋಣಿತಗಳ ಪರಿಮಾಣದಲ್ಲಿ ವ್ಯತ್ಯಾಸವಾದಲ್ಲಿ ಅಂದರೆ ಶೋಣಿತವು ಹೆಚ್ಚಾದರೆ ಹುಟ್ಟತಕ್ಕ ವ್ಯಕ್ತಿಯು ಸ್ತ್ರೀವ್ಯಕ್ತಿಯಾಗಿಯೂ, ಶುಕ್ರಧಾತುವು ಅಧಿಕವಾಗಿದ್ದರೆ ಪುರುಷವ್ಯಕ್ತಿಯಾಗಿಯೂ, ಎರಡೂ ಸಮವಾದ ಪ್ರಮಾಣದಲ್ಲಿ ಸೇರಿದರೆ ಪುರುಷ ಮತ್ತು ಸ್ತ್ರೀ ಈ ಎರಡು ವ್ಯಕ್ತಿಗಳಿಗೂ ಭಿನ್ನವಾದ ಮೂರನೆಯ ವ್ಯಕ್ತಿಯಾಗಿಯೂ ಪರಿಣಾಮವಾಗುತ್ತದೆ ಅಥವಾ ಸೃಷ್ಟಿಕರ್ತನ ಇಚ್ಛೆ ಹೇಗಿರುತ್ತದೆಯೋ ಹಾಗೆ ಆಗುತ್ತದೆಂದರೂ ಆಗಬಹುದು

ಬಾಲಸ್ಯಪ್ರಥಮೋಮಾಸಿದೇಯಾಭೇಷಜರಿಕ್ತಿಕಾ ॥ ೧೪ ॥
ಅವಲೇಹೀಕೃತೇಕೈವಕ್ಷೀರಕ್ಷೌದ್ರಸಿತಾಘೃತೈಃ ॥
ವರ್ಧಯೇತ್ತಾವದೇಕೈಕಾಂಯಾವದ್ಭವತಿವತ್ಸರಃ ॥ ೧೫ ॥
ಮಾಷೈರ್ವೃದ್ಧಿಸ್ತದೂರ್ಧ್ವಂಸ್ಯಾದ್ಯಾವತ್ಷೋಡಶವತ್ಸರಃ ॥
ತತಸ್ಥಿರಾಭವೇತ್ತಾವದ್ಯಾವದ್ವರ್ಷಾಣಿಸಪ್ತತಿಃ ॥ ೧೬ ॥
ತತೋಬಾಲಕವನ್ಮಾತ್ರಾಹ್ರಾಸನೀಯಾಶನೈಃಶನೈಃ ॥
ಮಾತ್ರೇಯಂಕಲ್ಕಚೂರ್ಣಾನಾಂಕಷಾಯಾಣಾಂಚತುರ್ಗುಣಾ ॥

ದೇಹಧಾರಣೆಮಾಡಿದಮೇಲೆ ದೇಹಕ್ಕೆ ವಾತಾದಿ ಸಂಪರ್ಕವೂ, ಧಾತು ವೈಷಮ್ಯವೂ, ಅದರಿಂದ ರೋಗಾದಿಗಳೂ ಸಂಭವಿಸಲೇ ಸಂಭವಿಸುತ್ತವೆಂಬ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಬಾಲ್ಯಾವಸ್ಥೆಯಲ್ಲಿ ಔಷಧ ಪ್ರಯೋಗಮಾಡುವ ಪ್ರಮಾಣವನ್ನು ತಿಳಿಸುತ್ತಾನೆ. ಬಾಲಕರು ಮೂರುವಿಧ. ಹಾಲು ಕುಡಿಯತಕ್ಕವರು, ಅನ್ನವನ್ನು ತಿನ್ನತಕ್ಕವರು, ಹಾಲು ಮತ್ತು ಅನ್ನ ಎರಡನ್ನೂ ಉಪಯೋಗಿಸತಕ್ಕವರು. ಹಾಲು ಕುಡಿಯತಕ್ಕವರೆಂದರೆ- ಕೇವಲ ಒಂದು ವರುಷದೊಳಗಿನ ಅವಸ್ಥೆ. ಈ ಅವಸ್ಥೆಯಲ್ಲಿರುವ ಮಕ್ಕಳಿಗೆ ಔಷಧಪ್ರಯೋಗಮಾಡುವುದಿದ್ದರೆ " ರಿಕ್ತಿಕಾ " ಎಂಬದಾಗಿ ಹಿಂದೆ ಹೇಳಿರುವ ಪ್ರಮಾಣಗಳ ಮಧ್ಯೆ ಅಲ್ಪಪ್ರಮಾಣದಲ್ಲಿ ಔಷಧವನ್ನು ಕೊಡಬೇಕು. ಅದು ಕೂಡ ಹಾಲಿನಲ್ಲಿ ಕದಡಿಯಾಗಲಿ ಅಥವಾ ಜೇನುತುಪ್ಪ, ಸಕ್ಕರೆ ಇವುಗಳೊಡನೆ ಸೇರಿಸಿ

ನೆಕ್ಕುವಂತೆ ಮಾಡಿಯಾಗಲಿ ಕೊಡತಕ್ಕದ್ದು. ಇದು ಮಕ್ಕಳಿಗೆ ಮೊದಲನೆಯ ತಿಂಗಳಿನಲ್ಲಿ ಕೊಡತಕ್ಕ ಔಷಧದ ಪರಿಮಾಣ. ಮುಂದಕ್ಕೆ ತಿಂಗಳು ಹೆಚ್ಚಿದ ಹಾಗೆಲ್ಲಾ ಔಷಧದ ಪ್ರಮಾಣವನ್ನು ಒಂದೊಂದು " ರಿಕ್ತಿಕೆ " ಯಷ್ಟು ಹೆಚ್ಚಿಸುತ್ತ ಹೋಗಬೇಕು. ಈರೀತಿ ಒಂದು ವರುಷದವರಿಗೂ ಮಾಡುವುದು. ವರುಷವಾದಮೇಲೆ ಹದಿನಾರು ವರುಷದವರಿಗೂ ಪ್ರತಿಯೊಂದು ವರುಷಕ್ಕೂ ಒಂದೊಂದು ಮಾಷದಂತೆ ಪ್ರಮಾಣದಲ್ಲಿ ಹೆಚ್ಚಿಸುತ್ತ ಹೋಗಬೇಕು. ಹದಿನಾರು ವರುಷವಾದಮೇಲೆ ಮುಂದೆ ಎಪ್ಪತ್ತು ವರುಷವಾಗುವವರಿವಿಗೂ ಔಷಧ ಕೊಡತಕ್ಕ ಪ್ರಮಾಣವು ಒಂದೇರೀತಿಯಲ್ಲಿರತಕ್ಕದ್ದು. ಅಲ್ಲಿಂದ ಮುಂದೆ ಮಕ್ಕಳಿಗೆ ಹೆಚ್ಚಿಸಿದಂತೆ ಕ್ರಮವಾಗಿ ಮುದುಕರಿಗೆ ಕಡಿಮೆಮಾಡುತ್ತ ಬರಬೇಕು. ಈಹಿಂದೆ ಹೇಳಿದ ಪರಿಮಾಣವು, ಕಲ್ಕರೂಪವಾದ ಔಷಧ ಮತ್ತು ಚೂರ್ಣರೂಪವಾದ ಔಷಧಗಳಿಗೆ ಹೇಳಲ್ಪಟ್ಟದ್ದು. ಕಷಾಯವನ್ನು ಕೊಡಬೇಕಾದರೆ ಇದರ ನಾಲ್ಕರಷ್ಟನ್ನು ಕೊಡಬೇಕು

**ಅಂಜನಂಚತಥಾಲೇಪಃಸ್ನಾನಮಭ್ಯಂಗಕರ್ಮಚ ||**
**ವಮನಂಪ್ರತಿಮರ್ಶಶ್ಚಜನ್ಮಪ್ರಭೃತಿಶಸ್ಯತೆ || ೧೮ ||**
**ಕವಲಃಪಂಚಮಾದ್ವರ್ಷಾದಷ್ಟಮಾನ್ನಸ್ಯಕರ್ಮಚ ||**
**ವಿರೇಕಃಷೋಡಶಾದ್ವರ್ಷಾದ್ವಿಂಶತೇಶ್ಚೈವಮೈಥುನಂ || ೧೯ ||**

ಮಕ್ಕಳಿಗೆ ಕಣ್ಣಿಗೆ ಅಂಜನಹಾಕುವುದು, ಲೇಪಃ ಎಂದರೆ ಮೈಯ್ಯಿಗೆ ಯಾವದಾದರೂ ವಸ್ತುವನ್ನು ಬಳಿಯುವುದು, ಸ್ನಾನಮಾಡಿಸುವುದು, ತೈಲಾಭ್ಯಂಗ ಮಾಡಿಸುವುದು, ವಮನೌಷಧಗಳನ್ನು ಕುಡಿಸಿ ವಮನಮಾಡಿಸುವುದು, ಪ್ರತಿಮರ್ಶವೆಂಬ ಶಿರೋವಿರೇಚನನಸ್ಯ ( ಮೃದುನಸ್ಯ ) ಇವುಗಳನ್ನು ಹುಟ್ಟಿದ ಮೊದಲುಗೊಂಡು ಮಾಡಬಹುದು. "**ಕವಲಃ**" ಅಂದರೆ ದ್ರವರೂಪವಾದ ಔಷಧವನ್ನು ಬಾಯಿಯಲ್ಲಿ ಕೆಲವು ಹೊತ್ತು ಇಟ್ಟುಕೊಂಡು ಬಾಯಿ ಮುಕ್ಕಳಿಸುವುದಕ್ಕೆ ಹೆಸರು. ಐದನೆಯ ವರುಷದಿಂದ ಮುಂದೆ ಈ ಕವಲಕ್ರಮವನ್ನೂ, ಎಂಟುವರುಷವಾದ ಮೇಲೆ ನಸ್ಯಕ್ರಮವೆಂದರೆ ಮೂಗಿನ ದ್ವಾರದಿಂದ ಔಷಧವನ್ನು ಪ್ರಯೋಗಿಸುವ ಕೆಲಸವನ್ನೂ ಮಾಡಬಹುದು. ವಿರೇಚನೌಷಧಗಳನ್ನು ಅಂದರೆ ಕರಿಣಗಳಾದ ವಿರೇಚನೌಷಧ ( ಭೇದಿ ) ಗಳನ್ನು ಹದಿನಾರು ವರುಷಗಳು ಕಳೆಯುವವರಿಗೂ ಪ್ರಯೋಗಿಸಬಾರದು, ಇಪ್ಪತ್ತುವರುಷವಾಗುವವರಿಗೂ ಸ್ತ್ರೀಸಮಾಗಮಕ್ಕೆ ಅವಕಾಶವಿರಬಾರದು.

**ಬಾಲ್ಯಂವೃದ್ಧಿಶ್ಛವಿರ್ಮೇಧಾತ್ವಗ್ದೃಷ್ಟಿಶ್ಶುಕ್ರವಿಕ್ರಮೌ ||**
**ಬುದ್ಧಿಃಕರ್ಮೇಂದ್ರಿಯಂಚೇತೋಜೀವಿತಂದಶತೋಹ್ರಸೇತ್||೨೦||**

ಮನುಷ್ಯನ ಆಯುಸ್ಸು ನೂರ ಇಪ್ಪತ್ತುವರುಷಗಳೆಂಬ ಲೆಕ್ಕವನ್ನು ಇಟ್ಟುಕೊಂಡು ಕ್ರಮವಾಗಿ ಬಾಲ್ಯ ಮೊದಲಾದವುಗಳ ಪರಿಮಾಣವನ್ನು ನಿಷ್ಕರ್ಷಿಸುತ್ತಾನೆ. ಹುಟ್ಟಿದ ಮೊದಲಿನಿಂದ ಹತ್ತುವರುಷಕ್ಕೆ ಬಾಲ್ಯವು ಕಳೆಯುತ್ತದೆ. ಅನಂತರ ಹತ್ತುವರುಷ ಅಂದರೆ ಹುಟ್ಟಿದ ಇಪ್ಪತ್ತುವರುಷದವರಿಗೂ ಶರೀರವು ವೃದ್ಧಿಯಾಗುತ್ತಿರುತ್ತದೆ, ದೇಹಕಾಂತಿಯು ಮೂವತ್ತುವರುಷಗಳವರಿವಿಗೂ ವೃದ್ಧಿಯಾಗುತ್ತಿರುತ್ತದೆ. ಜ್ಞಾಪಕಶಕ್ತಿಯು ನಲವತ್ತುವರುಷದ ತನಕ. ಚರ್ಮದ ಕಾಂತಿಯು ಐವತ್ತುವರುಷದವರಿಗೆ

ಇರುತ್ತದೆ. ದೃಷ್ಟಿ ಪಾಟವ ಅರವತ್ತರವರಿಗೂ ಹೆಚ್ಚುತ್ತಿರುತ್ತದೆ. ಶುಕ್ರಪಾಟವವು ಎಪ್ಪತ್ತುವರುಷದವರಿಗೂ ಇರುತ್ತದೆ. ದೇಹದಲ್ಲಿ ಶಕ್ತಿಯು ಎಂಭತ್ತುವರುಷದವರಿಗೂ ಇರುತ್ತದೆ. ಬುದ್ಧಿಶಕ್ತಿಯು ತೊಂಬತ್ತುವರುಷದವರಿಗೂ ಇರುತ್ತದೆ. ಕರ್ಮೇಂದ್ರಿಯಗಳೆಂದರೆ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಇವುಗಳಲ್ಲಿ ನೂರುವರುಷದವರಿಗೂ ಪಾಟವವಿರುತ್ತದೆ. ಮನಸ್ಸಿನ ಸ್ಥಿತಿ ನೂರಹತ್ತುವರುಷದವರಿಗೂ ಚೆನ್ನಾಗಿರುತ್ತದೆ. ಪ್ರಾಣವಾಯುವಿಗೆ ಈ ಶರೀರದಲ್ಲಿ ಒಂದುನೂರುಇಪ್ಪತ್ತುವರುಷಗಳು ಇರುವಷ್ಟು ಶಕ್ತಿ ಇದೆ.

ಅಲ್ಪಕೇಶಃಕೃಶೋರೂಕ್ಷೋವಾಚಾಲಶ್ಚಲಮಾನಸಃ ॥
ಆಕಾಶಚಾರೀಸ್ವಪ್ನೇಷುವಾತಪ್ರಕೃತಿಕೋನರಃ ॥ ೨೦ ॥

ಕ್ರಮವಾಗಿ ವಾತ ಪಿತ್ತ ಶ್ಲೇಷ್ಮಪ್ರಕೃತಿಯವರ ಲಕ್ಷಣಗಳನ್ನು ಹೇಳುತ್ತಾನೆ. ವಾತಪ್ರಕೃತಿಯುಳ್ಳಮನುಷ್ಯನ ಬಾಹ್ಯಲಕ್ಷಣಗಳೇನಂದರೆ:- ಕೂದಲುಗಳು ಕೊಂಚವಾಗಿರುವುದು, ಅವಯವಗಳು ಅಷ್ಟುಪುಷ್ಟವಾಗಿರುವುದಕ್ಕಿಲ್ಲ, ದೇಹಸ್ಥಿತಿ ರೂಕ್ಷಗುಣವುಳ್ಳದ್ದಾಗಿರುವುದು, ಬಹಳವಾಗಿ ವಾಚಾಳಿಯಾಗಿರುವುದು, ಮನಸ್ಸು ಯಾವಾಗಲೂ ಸ್ಥಿರವಿಲ್ಲ. ಸ್ವಪ್ನದಲ್ಲಿ ಆಕಾಶದಲ್ಲಿ ತಾನು ಸಂಚರಿಸಿದಂತೆ ಕಾಣುವುದು ಇಂತಹ ಮನುಷ್ಯನು ವಾತಪ್ರಕೃತಿಯುಳ್ಳವನಾಗುತ್ತಾನೆ.

ಅಕಾಲೇಪಲಿತೈರ್ವ್ಯಾಪ್ತೋಧೀಮಾನ್‌ಸ್ವೇದೀಚರೋಷಣಃ ॥
ಸ್ವಪ್ನೇಷುಜ್ಯೋತಿಷಾಂದ್ರಷ್ಟಾಪಿತ್ತಪ್ರಕೃತಿಕೋನರಃ ॥ ೨೨ ॥

ಪಿತ್ತಪ್ರಕೃತಿಯ ಲಕ್ಷಣಗಳೇನಂದರೆ:- ಅಕಾಲದಲ್ಲಿ ತಲೆಯಕೂದಲು ನೆರೆತು ಬೆಳ್ಳಗಾಗುವುದು, ಬುದ್ಧಿಶಕ್ತಿ ಚೆನ್ನಾಗಿರುವುದು, ಶರೀರದಲ್ಲಿ ಬೆವರುವುದುಜಾಸ್ತಿ, ಸಿಟ್ಟು ಬಹಳ ಹೆಚ್ಚು. ಸ್ವಪ್ನದಲ್ಲಿ ತೇಜಸ್ಸುಗಳು ಅಂದರೆ ಸೂರ್ಯಚಂದ್ರನಕ್ಷತ್ರಗಳು ಬೆಂಕಿ ಇವುಗಳನ್ನು ಕಾಣುವವನು ಪಿತ್ತಪ್ರಕೃತಿಯುವನೆನ್ನಿಸಿಕೊಳ್ಳುತ್ತಾನೆ.

ಗಂಭೀರಬುದ್ಧಿಸ್ಥೂಲಾಂಗೋಸ್ನಿಗ್ಧಕೇಶೋಮಹಾಬಲಃ ॥
ಸ್ವಪ್ನೇಜಲಾಶಯಾಲೋಕೀಶ್ಲೇಷ್ಮಪ್ರಕೃತಿಕೋನರಃ ॥ ೨೩ ॥
ಜ್ಞಾತವ್ಯಾಮಿಶ್ರಚಿಹ್ನೈಶ್ಚದ್ವಿತ್ರಿದೋಷೋಲ್ಬಣಾನರಾಃ ॥

ಶ್ಲೇಷ್ಮಪ್ರಕೃತಿಯವನ ಲಕ್ಷಣ:- ಬುದ್ಧಿಗಂಭೀರವಾಗಿರುವುದು ಅಂದರೆ ಅಭಿಪ್ರಾಯವನ್ನು ತಿಳಿಯುವುದು ಕಷ್ಟವಾಗುವುದು, ಅವಯವಗಳು ಸ್ಥೂಲವಾಗಿರುವುದು, ಕೂದಲಿನಲ್ಲಿ ಯಾವಾಗ್ಲೂ ಜಿಡ್ಡಿರುವುದು, ಅತಿಬಲಶಾಲಿಯಾಗಿರುವುದು, ಸ್ವಪ್ನದಲ್ಲಿ ಕೆರೆ, ನದಿ ಇಂತವುಗಳನ್ನು ಕಾಣುವ ಸ್ವಭಾವವುಳ್ಳವನಾಗಿರುವುದು, ಇವು ವಾತಪ್ರಕೃತಿಯವರ ಲಕ್ಷಣಗಳೆಂದು ತಿಳಿಯಬೇಕು. ಹಿಂದೆ ಹೇಳಿರತಕ್ಕ ಪ್ರತ್ಯೇಕವಾದ ದೋಷ ಲಕ್ಷಣಗಳು ಎರಡುಮೂರು ಕೂಡಿದ್ದರೆ ದ್ವಿತ್ರಿದೋಷೋಲ್ಬಣ ಪ್ರಕೃತಿಗಳೆಂಬದಾಗಿ ತಿಳಿಯಬೇಕು.

ತಮಃಕಫಾಭ್ಯಾಂನಿದ್ರಾಸ್ಯಾತ್ಸ್ನಾಚ್ಛಾಪಿತ್ತತಮೋಭವಾ ॥ ೨೪ ॥
ರಜಃಪಿತ್ತಾನಿಲೈರ್ಭ್ರಾಂತಿಸ್ತಂದ್ರಾಶ್ಲೇಷ್ಮತಮೋನಿಲೈಃ ॥

ಕಫ ಹೆಚ್ಚಾಗಿ ಅಜ್ಞಾನ ಸೇರಿದರೆ ನಿದೆ. ಬರುತ್ತದೆ. ಪಿತ್ತವೃದ್ಧಿಯಾಗಿ ಅಜ್ಞಾ

ಕ ಸೇರಿದರೆ ಮೂರ್ಛೆಬರುತ್ತದೆ. ಪಿತ್ತ ಮತ್ತು ವಾಯುವೃದ್ಧಿಯಾಗಿ ರಜೋಗುಣ ಸೇರಿದರೆ ಬುದ್ಧಿಭ್ರಮಣೆ ಬರುತ್ತದೆ. ಶ್ಲೇಷ್ಮ ಮತ್ತು ವಾಯುವೃದ್ಧಿಯಾಗಿ ಅದರ ಜೊತೆಗೆ ಅಜ್ಞಾನ ಸೇರಿದರೆ ಆಕಳಿಕೆ, ಆಲಸ್ಯ ತೋರುತ್ತದೆ.

ಗ್ಲಾನಿರೋಜಃಕ್ಷಯಾದ್ದುಃಖದಜೀರ್ಣಾಚ್ಚ ಶ್ರಮಾತ್ತಥಾ ॥ ೨೫ ॥
ಯಸ್ಸಾಮರ್ಥ್ಯೇಽಪ್ಯನುತ್ಸಾಹಸ್ತದಾಲಸ್ಯಮುದೀರ್ಯತೆ ॥

ಗ್ಲಾನಿಃ ಅಂದರೆ ಯಾವ ಕೆಲಸಮಾಡುವುದಕ್ಕೂ ಸಂತೋಷವಿಲ್ಲದೆ ಬಳಲಿದ ಹಾಗೆ ಇರಲು ಕಾರಣಗಳೇನಂದರೆ, ಓಜಃಕ್ಷಯಾತ್ ಅಂದರೆ ಶುಕ್ರಧಾತುವಿನ ಕ್ಷಯ ದಿಂದ ಬಳಲಿಕೆ ಬರುತ್ತದೆ. ದುಃಖದಿಂದಲೂ ಬಳಲಿಕೆಯೇ ಬರುತ್ತದೆ ಅಜೀರ್ಣದಿಂದ ಲೂ ಬಳಲಿಕೆ ಬರುತ್ತದೆ. ಶ್ರಮದಿಂದಲೂ ಬಳಲಿಕೆ ಬರುತ್ತದೆ. ಕೆಲಸ ಮಾಡುವ ಸಾಮರ್ಥ್ಯ ಚೆನ್ನಾಗಿಯೇ ಇದ್ದರೂ ಕೆಲಸಮಾಡಲು ಮನಸ್ಸಿಲ್ಲದಿರುವುದಕ್ಕೆ ಆಲಸ್ಯ ವೆಂಬದಾಗಿ ಹೆಸರು; ಇದೇ ಸೋಮಾರಿತನ.

ಚೈತನ್ಯಶಿಥಿಲತ್ವಾದ್ಯಃಪೀತ್ವೇಕಶ್ವಾಸಮುದ್ವಮೇತ್ ॥ ೨೬ ॥
ವಿದೀರ್ಣವದನಃಶ್ವಾಸಂಜೃಂಭಾಸಾಕಥ್ಯತೇಬುಧೈಃ ॥
ಉದಾನಪ್ರಾಣಯೋರೂರ್ಧ್ವಯೋಗಾನ್ಮೌಳಿಕಫಸ್ರವಾತ್ ॥ ೨೭ ॥
ಶಬ್ದಸ್ಸಂಜಾಯತೇನಸ್ತಃಕ್ಷುತಂತತ್ಕಥ್ಯತೇಬುಧೈಃ ॥

ಆಕಳಿಕೆಯೆಂದರೇನು ಎಂಬ ವಿಷಯತಿಳಿಸುತ್ತಾನೆ. ಜ್ಞಾನತಂತುವಿನ ಶಕ್ತಿಯು ಕೊಂಚ ಕಡಮೆಯಾಗೋಣದರಿಂದ ಬಾಯಿ ತೆರೆದುಕೊಂಡು ಒಂದು ಸಾರಿ ಉಸಿರನ್ನು ಒಳಕ್ಕೆ ತೆಗೆದುಕೊಂಡು ಪುನಃ ಹೊರಕ್ಕೆ ಉಸಿರನ್ನು ಬಿಡುವುದಕ್ಕೆ ಆಕಳಿಕೆ ಎಂಬ ಹೆಸರು. ಕಂಠಪ್ರದೇಶದಲ್ಲಿರುವ ಉದಾನವಾಯು ಹೃದಯದಲ್ಲಿರುವ ಪ್ರಾಣವಾಯು ಈ ಎರಡೂ ಊರ್ಧ್ವಭಾಗದಲ್ಲಿ ಅಂದರೆ ಶಿರಸ್ಸಿನಲ್ಲಿರುವ ಧಮನಿಗಳಲ್ಲಿ ಸೇರಿ ಆಕಾಲದ ಲ್ಲಿಯೇ ಶಿರಸ್ಸಿನಲ್ಲಿರುವ ಕಫವೂ ಸ್ರವಿಸಿ ಮೂಗಿನಿಂದ ಶಬ್ದಯುಕ್ತವಾಗಿ ಹೊರಟರೆ ಅದಕ್ಕೆ ಕ್ಷುತ ಎಂದರೆ ಸೀನು ಎಂದು ಹೆಸರನ್ನು ಕೊಟ್ಟಿದ್ದಾರೆ.

ಉದಾನಕೋಪಾದಾಹಾರಸ್ವಸ್ಥಿತತ್ವಾಚ್ಚಯದ್ಭವೇತ್ ॥ ೨೮ ॥
ಪವನಸ್ಯೋರ್ಧ್ವಗಮನಂತಮುದ್ಗಾರಂಪ್ರಚಕ್ಷತೆ ॥

ಭೋಜನಮಾಡಿದ ಆಹಾರವು ಸ್ವಸ್ಥಾನದಲ್ಲಿ ಸೇರಿ ನಿಲ್ಲುವುದರಿಂದಲೂ ಉದಾನವಾಯು ( ಕಂಠಸ್ಥಾನಗತ )ವು ಪ್ರಕುಪಿತವಾಗೋಣದರಿಂದಲೂ ವಾಯುವು ಊರ್ಧ್ವಮುಖವಾಗಿ ಹೊರಡುವುದಕ್ಕೆ ಉದ್ಗಾರವೆಂಬದಾಗಿ ಹೆಸರು.

-: ಷಷ್ಠಾಧ್ಯಾಯ ಸಂಪೂರ್ಣ. :-



ರೋಗಾಣಾಂಗಣನಾಪೂರ್ವಂಮುನಿಭಿರ್ಯಾಪ್ರಕೀರ್ತಿತಾ ॥
ಮಯಾತ್ರಪ್ರೋಚ್ಯತೇಸೈವತದ್ಭೇದಾಬಹವೋಮತಾಃ ॥ ೧ ॥

ಆಯುರ್ವೇದ ಪ್ರವರ್ತಕರಾದ ಪ್ರಾಚೀನರಾದ ಮಹರ್ಷಿಗಳು ರೋಗಗಳನ್ನೂ ಮತ್ತು ಅವುಗಳ ಅವಾಂತರಪ್ರಭೇದಗಳನ್ನೂ ಯಾವಯಾವ ರೀತಿಯಿಂದ ವಿವರ ಮಾಡಿರುತ್ತಾರೋ ಅದೇ ರೀತಿಯಿಂದಲೇ ಈ ಗ್ರಂಥದಲ್ಲಿ ನಾನೂ ವಿವರಿಸುತ್ತೇನೆ.

ಪಂಚವಿಂಶತಿರುದ್ದಿಷ್ಟಾಜ್ವರಾಸ್ತದ್ಭೇದಉಚ್ಯತೇ ||
ಪೃಥಗ್ದೋಷೈಸ್ತಥಾದ್ವಂದ್ವಭೇದೇನತ್ರಿವಿಧಸ್ಮೃತಃ || ೨ ||
ಏಕಶ್ಚಸನ್ನಿಪಾತೇನತದ್ಭೇದಾಬಹವೋಮತಾಃ ||
ಪ್ರಾಯಶಸ್ಸನ್ನಿಪಾತೇನಪಂಚಸ್ಯುರ್ವಿಷಮಜ್ವರಾಃ || ೩ ||
ಸಂತತಸ್ಸತತಶ್ಚೈವಅನ್ಯೇದ್ಯುಷ್ಕಸ್ತೃತೀಯಕಃ ||
ಚಾತುರ್ಥಕಶ್ಚಪಂಚೈತೇಕೀರ್ತಿತಾವಿಷಮಜ್ವರಾಃ || ೪ ||
ತಥಾಗಂತುಜ್ವರೋಽಪ್ಯೇಕಸ್ತ್ರಯೋದಶವಿಧೋಮತಃ ||
ಅಭಿಚಾರಗ್ರಹಾವೇಶಶಾಪೈರಾಗಂತುಕಸ್ತ್ರಿಧಾ || ೫ ||
ಶ್ರಮಾಚ್ಛೇದಾತ್ಕ್ಷತಾದ್ದಾಹಾಚ್ಚತುರ್ಧಾಘಾತಜೋಜ್ವರಃ ||
ಕಾಮಾಧ್ಭೀತೇಸ್ಸ್ಯುಚೋರೋಷಾದ್ವಿಷಾದೌಷಧಗಂಧತಃ || ೬ ||
ಅಭಿಷಂಗಜ್ವರಾಃಷಟ್ಸ್ಯುರೇವಂಜ್ವರವಿನಿಶ್ಚಯಃ ||

ಮೊದಲು ಜ್ವರದ ವಿವರಣೆಯನ್ನು ಹೇಳುತ್ತಾನೆ. ಜ್ವರವು ಸಾಮಾನ್ಯವಾಗಿ ಇಪ್ಪತ್ತೈದು ವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ವಾತಪಿತ್ತಜ, ವಾತಶ್ಲೇಷ್ಮಜ, ಪಿತ್ತಶ್ಲೇಷ್ಮಜ, ತ್ರಿದೋಷಸನ್ನಿಪಾತಜ ಎಂಬದಾಗಿ ಏಳು. ಸನ್ನಿಪಾತದಿಂದಲೇ ಹುಟ್ಟಿದ ವಿಷಮಜ್ವರಗಳೈದು ಸಂತತ, ಸತತ, ಅನ್ಯೇದ್ಯುಷ್ಕ, ತೃತೀಯಕ, ಚತುರ್ಥಕ, ಆಗಂತುಕಗಳಾದ ಜ್ವರಗಳು ಹದಿಮೂರುವಿಧ. ಹದಿಮೂರರಲ್ಲಿ ಮಾರಣ ಮಂತ್ರಾದ್ಯಾಭಿಚಾರಿಕಕೃತ್ಯಗಳಿಂದ ಹುಟ್ಟುವಂತಹುದು, ಗ್ರಹಭೂತಾದ್ಯಾವೇಶದಿಂದ ಹುಟ್ಟುವಂತಹುದು, ಗುರುವೃದ್ಧಾದಿ ಸತ್ಪುರುಷರ ಶಾಪದಿಂದ ಹುಟ್ಟುವಂತಹುದು, ಆಯಾಸದಿಂದ, ಆಯುಧಗಳಪೆಟ್ಟಿನಿಂದ, ಬೇರೇ ಕಾರಣಾಂತರದಿಂದ ಹುಟ್ಟಿದ ಗಾಯಗಳಿಂದ, ಬೆಂಕಿಯಿಂದ ಸುಟ್ಟುಕೊಳ್ಳೋಣದರಿಂದ, ದುರ್ಲಭಸ್ತ್ರೀವಿಷಯಕವಾದ ಕಾಮದಿಂದ, ಹೆದರಿಕೆಯಿಂದ, ದುಖ್ಖದಿಂದ, ಶಿಟ್ಟಿನಿಂದ, ವಿಷಪ್ರಯೋಗದಿಂದ, ಯಾವುದಾದರೂ ಔಷಧಗಳ ವಾಸನೆಯಿಂದ, ಈರೀತಿಯಾಗಿ ಜ್ವರ ಸಾಮಾನ್ಯವೂ ಇಪ್ಪತ್ತೈದು ಭೇದದಲ್ಲಿಯೇ ಪರ್ಯವಸಾನವಾಗುತ್ತದೆ

ಪೃಥಕ್ತ್ರಿದೋಷೈಸ್ಸರ್ವೈಶ್ಚಶೋಕಾದಾಮಾದ್ಭಯಾದಪಿ || ೭ ||
ಅತೀಸಾರಸ್ಸಪ್ತಧಾಸ್ಯಾದ್ಗ್ರಹಣೀಪಂಚಧಾಮತಾ ||
ಪೃಥಗ್ದೋಷೈಸ್ಸನ್ನಿಪಾತಾತ್ತಥಾಚಾಮೇನಪಂಚಮೀ || ೮ ||
ಪ್ರವಾಹಿಕಾಚತುರ್ಧಾಸ್ಯಾತ್ಪೃಥಗ್ದೋಷೈಸ್ತಥಾಸ್ರತಃ ||

ಅತಿಸಾರ, ಗ್ರಹಣಿ, ಪ್ರವಾಹಿಕೆಗಳನ್ನು ಹೇಳುತ್ತಾನೆ. ಅತಿಸಾರವು ಏಳುವಿಧ. ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ತ್ರಿದೋಷಪ್ರಕೋಪಜನ್ಯ, ಶೋಕಜನ್ಯ, ಆಮಜನ್ಯ, ಭಯಜನ್ಯ ಎಂಬದಾಗಿ. ಆತಿಸಾರದಲ್ಲಿ ಭೇದವಾದ ಗ್ರಹಣಿ ಎಂಬ ರೋಗವು ಐದುವಿಧ. ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ತ್ರಿದೋಷಸನ್ನಿಪಾತಜನ್ಯ, ಆಮಜನ್ಯ ಎಂಬದಾಗಿ ಪ್ರವಾಹಿಕೆಯೆಂಬ ಅತಿಸಾರ ವಿಶೇಷವು ನಾಲ್ಕುವಿಧ. ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ರಕ್ತಜನ್ಯ ಎಂಬದಾಗಿ.

ಅಜೀರ್ಣಂತ್ರಿವಿಧಂಪ್ರೋಕ್ತಂವಿಷ್ಟಬ್ಧಂವಾಯುನಾಮತಂ || ೯ ||

ಪಿತ್ತಾದ್ವಿದಗ್ಧಂವಿಜ್ಞೇಯಂಕಫೇನಾಮಂತದುಚ್ಯತೇ ||
ವಿಷಾಜೀರ್ಣಂರಸಾದೇಕಂದೋಷೈಸ್ಸ್ಯಾದಲಸಸ್ತ್ರಿಧಾ || ೧೦ ||
ವಿಷೂಚೀತ್ರಿವಿಧಾಪ್ರೋಕ್ತಾದೋಷೈಸ್ಸಾಸ್ಯಾತ್ಪೃಥಕ್ಪೃಥಕ್ ||
ದಂಡಕಾಲಸಕಶ್ಚೈಕಏಕೈವಸ್ಯಾದ್ವಿಲಂಬಿಕಾ || ೧೧ ||

ಅಜೀರ್ಣವು ಮೂರುವಿಧ. ವಾತಜನ್ಯವಾದ ಅಜೀರ್ಣಕ್ಕೆ ವಿಷ್ಟಬ್ಧವೆಂಬ ಹೆಸರು, ಪಿತ್ತಜನ್ಯವಾದ ಅಜೀರ್ಣಕ್ಕೆ ವಿದಗ್ಧಾಜೀರ್ಣವೆಂಬ ಹೆಸರು, ಕಫಜನ್ಯವಾದ ಅಜೀರ್ಣಕ್ಕೆ ಆಮಾಜೀರ್ಣವೆಂದು ಹೆಸರು, ವಿಷದಿಂದ ಹುಟ್ಟಿದ ಅಜೀರ್ಣವೆಂಬುವುದನ್ನೇ ರಸಾಜೀರ್ಣವೆಂದೂ ಹೇಳುತ್ತಾರೆ. ಅಲಸವೆಂಬ ಅಜೀರ್ಣ ಭೇದವು ವಾತಾದಿದೋಷಭೇದಗಳಿಂದ ಮೂರುವಿಧ, ವಿಷೂಚಿ ಎಂಬ ರೋಗವೂ ವಾತಾದಿದೋಷ ಭೇದದಿಂದ ಮೂರುವಿಧ, ದಂಡಕಾಲಸಕ ಎಂಬ ರೋಗವೂ, ವಿಲಂಬಿಕಾ ಎಂಬ ರೋಗವೂ ಸಹ ಒಂದೊಂದೇ ವಿಧ.

ಅರ್ಶಾಂಸಿಷಡ್ವಿಧಾನ್ಯಾಹುರ್ವಾತಪಿತ್ತಕಫಾಸ್ರತಃ ||
ಸನ್ನಿಪಾತಾಚ್ಚಸಂಸರ್ಗಾತ್ತೇಷಾಂಭೇದೋದ್ವಿಧಾಮತಃ || ೧೨ ||
ಸಹಜೋತ್ತರಜನ್ಮಭ್ಯಾಂತಥಾಶುಷ್ಕಾದ್ರ್ರಭೇದತಃ ||
ತ್ರಿಧೈವಚರ್ಮಕೀಲಾನಿವಾತಾತ್ಪಿತ್ತಾತ್ಕಫಾದಪಿ || ೧೩ ||

ಮೂಲವ್ಯಾಧಿ ಆರುವಿಧ. ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ಸನ್ನಿಪಾತಜನ್ಯ, ರಕ್ತಜನ್ಯ, ಸಂಸರ್ಗಜನ್ಯ ಅಂದರೆ ತಂದೆಯಿಂದ ಮಗನಿಗೆ ಮಗನಿಂದ ಮೊಮ್ಮಗನಿಗೆ ಈರೀತಿ ವಂಶಪರಂಪರೆಯಿಂದ ಹುಟ್ಟತಕ್ಕದ್ದು ಎಂಬದಾಗಿ ಆರುವಿಧ. ಮೂಲವ್ಯಾಧಿ ಸಾಮಾನ್ಯವೂ ಸಹಜಾರ್ಶಸ್ಸು (ಅಂದರೆ ದೋಷಪ್ರಕೋಪಜನ್ಯ) ಉತ್ತರಜ ಎಂದರೆ ವಂಶಪರಂಪರೆಯಿಂದ ಬರುವುದು ಈರೀತಿಯಾಗಿಯೂ, ಶುಷ್ಕಾರ್ಶಸ್ಸು (ಒಣಮೂಲ ಅಂದರೆ ರಕ್ತಾದಿಸ್ರಾವವಿಲ್ಲದೆ ಮೊಳೆ ಮಾತ್ರ ತೊಂದರೆ ಮಾಡುವುದು) ದ್ರವಾರ್ಶಸ್ಸು ಅಂದರೆ ಮೊಳಿಕೆಯ ಜೊತೆಯಲ್ಲಿ ರಕ್ತಸ್ರಾವವೂ ಇರುವುದು ಈರೀತಿ ನಾನಾ ಹೆಸರುಗಳಿಂದ ಕರೆಯಿಸಿಕೊಳ್ಳುತ್ತದೆ. ಚರ್ಮಕೀಲವೆಂಬ ಈ ಮೂಲವ್ಯಾಧಿಯಂತೆ ಮೊಳಕೆಗಳಿರುವ ಮತ್ತೊಂದು ವಿಧವಾದ ರೋಗವು ವಾತಜನ್ಯ, ಪಿತ್ತಜನ್ಯ, ಕಫಜನ್ಯ ಎಂಬುದಾಗಿ ಮೂರುವಿಧ.

ಏವಂವಿಂಶತಿಭೇದೇನಕ್ರಿಮಯಸ್ಸ್ಯುರ್ದ್ವಿಧಾಚತೇ ||
ಬಾಹ್ಯಾಸ್ತಥಾಭ್ಯಂತರಾಸ್ಸ್ಯುಸ್ತೇಷುಯೂಕಾಬಹಿಶ್ಚರಾಃ || ೧೪ ||
ಲಿಕ್ಷಾಶ್ಚಾನ್ಯೇಂತರಚರಾಃಕಫಾತ್ತೇಹೃದಯೋದರಾಃ ||
ಅಂತ್ರಾದಾಉದರಾವೇಷ್ಟಾಶ್ಚುರವಶ್ಚಮಹಾಗುಹಾಃ || ೧೫ ||
ಸುಗಂಧಾದರ್ಭಕುಸುಮಾಸ್ತಥಾರಕ್ತಾಶ್ಚಮಾತರಃ ||
ಸೌರಸಾಲೋಮವಿಧ್ವಂಸಾರೋಮದ್ವೀಪಾಉದುಂಬರಾಃ || ೧೬ ||
ಕೇಶಾದಾಶ್ಚತಥೈವಾನ್ಯೇಶಕೃಜ್ಜಾತಾಮಕೇರುಕಾಃ ||
ಲೇಲಿಹಾಶ್ಚಸಲೂನಾಶ್ಚಸೌಸುರಾದಾಃಕಕೇರುಕಾಃ || ೧೭ ||
ತಥಾನ್ಯಃಕಫರಕ್ತಾಭ್ಯಾಂಸಂಜಾತಾಸ್ಸ್ನಾಯುಕಸ್ಸ್ಮೃತಃ ||

**ವ್ರಣಸ್ಯಕ್ರಿಮಯಶ್ಚಾನ್ಯೈವಿಷವಾಬಾಹ್ಯಯೋನಯಃ ॥ ೧೮ ॥**

ಶರೀರಕ್ಕೆ ರೋಗವನ್ನೂ ಬಾಹ್ಯವಾದ ಹಿಂಸೆಯನ್ನೂ ಉಂಟುಮಾಡತಕ್ಕ ಕ್ರಿಮಿಗಳು ಇಪ್ಪತ್ತುವಿಧ. ಪ್ರಥಮತಃ ಬಾಹ್ಯಗಳೆಂಬದಾಗಿಯೂ ಅಭ್ಯಂತರಗಳೆಂಬದಾಗಿಯೂ ಎರಡುವಿಧ. ಯೂಕ ( ಅಂದರೆ ಹೇನುಗಳು ) ಲಿಕ್ಷ ( ಅಂದರೆ ಕೂರೆಗಳು ) ಎಂಬ ಎರಡು ಜಾತಿಯ ಕ್ರಿಮಿಗಳು ಶರೀರದ ಬಾಹ್ಯದಲ್ಲಿ ಹುಟ್ಟಿ ಶರೀರವನ್ನೇ ಆಶ್ರಯಿಸಿರುತ್ತವೆ. ಉಳಿದ ಕ್ರಿಮಿಗಳು ಶರೀರದ ಅಂತರ್ಭಾಗದಲ್ಲಿರತಕ್ಕವುಗಳು. ಅಂತರ್ಭಾಗದಲ್ಲಿರುವವುಗಳ ಮಧ್ಯೆ ಕಫದಲ್ಲಿ ಹುಟ್ಟತಕ್ಕವುಗಳು- ಹೃದಯೋದಕ, ಅಂತ್ರಾದ, ಉದರಾವೇಷ್ಟ, ಚುರವ, ಮಹಾಗುಹ, ಸುಗಂಧ, ದರ್ಭಕುಸುಮ ಎಂಬ ಏಳು. ರಕ್ತದಲ್ಲಿ ಹುಟ್ಟತಕ್ಕವುಗಳು- ಮಾತರ, ಸೌರಸ, ಲೋಮವಿಧ್ವಂಸ, ರೋಮದ್ವೀಪ, ಉದುಂಬರ, ಕೇಶಾದ ಎಂಬದಾಗಿ ಆರುವಿಧ. ಮಲದಲ್ಲಿ ಹುಟ್ಟತಕ್ಕವುಗಳು- ಮಕೇರುಕ, ಲೇಲಿಹ, ಸಲೂನ, ಸೌಸುರಾದ, ಕಕೇರುಕ ಎಂಬದಾಗಿ ಐದುವಿಧ. ಈರೀತಿಯಾಗಿ ಸಾಮಾನ್ಯತಃ ಕ್ರಿಮಿಗಳು ಇಪ್ಪತ್ತುವಿಧ. ಕಫ ಮತ್ತು ರಕ್ತಗಳಿಂದ ಹುಟ್ಟಿದ ಸ್ನಾಯುಕವೆಂಬ ಒಂದು ಕ್ರಿಮಿಯಿದೆ. ಅದೂನೂ ಶ್ಲೇಷ್ಮಜನ್ಯ ಕ್ರಿಮಿಗಳಲ್ಲಿಯೇ ಸೇರಿದೆ. ಆಕಾರ ಮಾತ್ರ ದೊಡ್ಡದು, ಹೊಟ್ಟೆಹುಳವೆಂದು ಲೋಕದಲ್ಲಿ ಅದನ್ನು ಕರೆಯುತ್ತಾರೆ. ಇಲ್ಲಿ ಚಿಕಿತ್ಸಕರಿಗೋಸ್ಕರ ಅದನ್ನು ಬೇರೆಯಾಗಿ ಹೇಳಿದೆ. ಶರೀರದಲ್ಲಿ ಹೊರಭಾಗದಲ್ಲಿ ಕಾಣಬರುವ ವ್ರಣಗಳಲ್ಲಿ ಹುಟ್ಟತಕ್ಕ ಕ್ರಿಮಿಗಳು ಬೇರೆಯೇ ಇವೆ. ಅವುಗಳು ಇದರಲ್ಲಿ ಸೇರಲಿಲ್ಲ ಅವು ಶರೀರದ ಹೊರಗೇನೇ ಹುಟ್ಟತಕ್ಕವುಗಳು.

**ಪಾಂಡುರೋಗಾಶ್ಚ ಪಂಚಸ್ಯುರ್ವಾತಪಿತ್ತಕಫೈಸ್ತ್ರಿಧಾ ॥**
**ತ್ರಿದೋಷೈರ್ಮೃತ್ತಿಕಾಭಿಶ್ಚ ತಥೈಕಾಕಾಮಲಾಸ್ಮೃತಾ ॥ ೧೯ ॥**
**ಸ್ಯಾತ್ಕುಂಭಕಾಮಲಾಚೈಕಾತಥೈಕಂ ಚ ಹಲೀಮಕಂ ॥**

ಪಾಂಡುರೋಗ ಐದುವಿಧ. ವಾತಜನ್ಯ, ಪಿತ್ತಜನ್ಯ, ಕಫಜನ್ಯ, ತ್ರಿದೋಷಸನ್ನಿಪಾತಜನ್ಯ. ಮಣ್ಣನ್ನು ತಿನ್ನುವುದರಿಂದ. ಕಾಮಲಾರೋಗ ಒಂದುವಿಧ, ಕುಂಭಕಾಮಲಾ ಎನ್ನುವುದೂ ಒಂದೇವಿಧ, ಹಲೀಮಕವೆಂಬುವುದು ಒಂದೇವಿಧ, ಇವುಗಳೆಲ್ಲಾ ಕಾಮಲೆಯ ತರಹದ ರೋಗಗಳೇನೇ.

**ರಕ್ತಪಿತ್ತಂತ್ರಿಧಾಪ್ರೋಕ್ತಮೂರ್ಧ್ವಗಂಕಫಸಂಭವಂ ॥ ೨೦ ॥**
**ಅಧೋಗಂಮಾರುತಂಜ್ಞೇಯಂತದ್ವಯೇನದ್ವಿಮಾರ್ಗಗಂ ॥**

ರಕ್ತಪಿತ್ತ ( ಮೂಗು ಬಾಯಿ ಮತ್ತು ಗುದಗಳಿಂದ ರಕ್ತಸ್ರಾವವಾಗುವುದು ) ರೋಗವು ಮೂರುವಿಧ. ಕಫ ಮತ್ತು ಪಿತ್ತಗಳಿಂದ ರಕ್ತಪಿತ್ತರೋಗವು ಹುಟ್ಟಿದರೆ ಊರ್ಧ್ವದ್ವಾರದಿಂದ ರಕ್ತ ಬರುತ್ತದೆ. ಊರ್ಧ್ವದ್ವಾರವೆಂದರೆ ಕಿವಿ, ಕಣ್ಣು, ಮೂಗು, ಬಾಯಿ, ವಾಯು ಮತ್ತು ಪಿತ್ತ ಸಹ ಪ್ರಧಾನವಾದರೆ ಅಧೋಗಾಮಿ ರಕ್ತಪಿತ್ತವೆಂಬದಾಗಿಯೂ, ಕಫ ಮತ್ತು ವಾತಗಳೆರಡೂ ಕುಪಿತಗಳಾದರೆ ಊರ್ಧ್ವಾಧೋಮಾರ್ಗಗಳೆರಡರಲ್ಲಿಯೂ ರಕ್ತ ಹೊರಡತಕ್ಕ ರಕ್ತಪಿತ್ತವಾಗುತ್ತದೆ.

**ಕಾಸಾಃಪಂಚಸಮುದ್ದಿಷ್ಟಾಸ್ತ್ರೀತ್ರಯಸ್ತ್ರಿಭಿರ್ಮಲೈಃ ॥ ೨೧ ॥**
**ಉರಕ್ಷತಾಚ್ಚತುರ್ಥಸ್ಯಾತ್ಕ್ಷಯಾದ್ಧಾತೋಶ್ಚ ಪಂಚಮಃ ॥**

ಕೆಮ್ಮು ಐದುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ,ಎದೆಗೆ ಯಾವುದಾದರೂ ಬಲವಾದ ಪೆಟ್ಟು ಬೀಳೋಣದರಿಂದ ಹುಟ್ಟತಕ್ಕದ್ದು, ಧಾತುಕ್ಷಯದಿಂದ ಹುಟ್ಟತಕ್ಕದ್ದು ಎಂಬದಾಗಿ.

**ಕ್ಷಯಾಃಪಂಚೈವವಿಜ್ಞೇಯಾಸ್ತ್ರಿಭಿರ್ದೋಷೈಸ್ತ್ರಯಶ್ಚತೆ ॥ ೨೨ ॥**
**ಚತುರ್ಥಸ್ಸನ್ನಿಪಾತೇನಪಂಚಮಸ್ಸ್ಯಾದುರಃಕ್ಷತಾತ್ ॥**
**ಶೋಷಾಸ್ಯುಷಟ್ಪ್ರಕಾರೇಣಸ್ತ್ರೀಪ್ರಸಂಗಾಚ್ಛುಚೋವ್ರಣಾತ್ ॥**
**ಅಧ್ವಶ್ರಮಾಚ್ಚವ್ಯಾಯಾಮಾದ್ವಾರ್ಧಕ್ಯಾದಪಿಜಾಯತೆ ॥**

ಕ್ಷಯರೋಗ ಐದುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ಎದೆಗೆ ಯಾವುದಾದರೂ ಏಟು ಬೀಳುವುದರಿಂದ ಉತ್ಪನ್ನವಾಗುವುದು ಎಂಬದಾಗಿ. ಶೋಷ( ಇದೊಂದು ಕ್ಷಯರೋಗದಂತಹುದು) ರೋಗವು ಆರುವಿಧ. ಹೆಚ್ಚಿನ ಸ್ತ್ರೀಸಂಗದಿಂದ ಬರತಕ್ಕದ್ದು, ದುಃಖದಿಂದ ಬರತಕ್ಕದ್ದು, ಶರೀರಗತವಾದ ವ್ರಣದಿಂದ ಬರತಕ್ಕದ್ದು, ಹೆಚ್ಚಿಗೆ ದಾರಿನಡೆಯೋಣದರಿಂದ ಬರತಕ್ಕದ್ದು, ಮಿತಿ ತಪ್ಪಿದ ವ್ಯಾಯಾಮದಿಂದ ಬರತಕ್ಕದ್ದು, ಮುಪ್ಪಿನಿಂದ ಬರತಕ್ಕದ್ದೆಂಬದಾಗಿ.

**ಶ್ವಾಸಾಶ್ಚಪಂಚವಿಜ್ಞೇಯಾಃಕ್ಷುದ್ರಸ್ಯಾತ್ತಮಕಸ್ತಥಾ ॥ ೨೪ ॥**
**ಊರ್ಧ್ವಶ್ವಾಸೋಮಹಾಶ್ವಾಸಶ್ಛಿನ್ನಶ್ವಾಸಶ್ಚಪಂಚಮಃ ॥**

ಶ್ವಾಸರೋಗವು ಐದುವಿಧ. ಕ್ಷುದ್ರಶ್ವಾಸ, ತಮಕಶ್ವಾಸ, ಊರ್ಧ್ವಶ್ವಾಸ, ಮಹಾಶ್ವಾಸ, ಛಿನ್ನಶ್ವಾಸ ಎಂಬದಾಗಿ.

**ಕಥಿತಾಃಪಂಚಹಿಕ್ಕಾಸ್ತುತಾಸ್ತುಕ್ಷುದ್ರಾನ್ನಜಾತಥಾ ॥ ೨೫ ॥**
**ಗಂಭೀರಾಯಮಲಾಚೈವಮಹತೀಪಂಚಮೀಸ್ಮೃತಾ ॥**

ಬಿಕ್ಕಳಿಕೆ ಐದುವಿಧ. ಕ್ಷುದ್ರಾ, ಅನ್ನಜಾ, ಗಂಭೀರಾ, ಯಮಳಾ, ಮಹತಿ ಎಂಬದಾಗಿ.

**ಚತ್ವಾರೋಗ್ನೇರ್ವಿಕಾರಾಸ್ಯುರ್ವಿಷಮೋವಾತಸಂಭವಃ ॥ ೨೬ ॥**
**ತೀಕ್ಷ್ಣಃಪಿತ್ತಾತ್ಕಫಾನ್ಮಂದೋಭಸ್ಮಕೋವಾತಪಿತ್ತಯೋಃ ॥**

ಅಗ್ನಿಮಾಂದ್ಯ ನಾಲ್ಕುವಿಧ. ವಾತಜನ್ಯವಾದದ್ದಕ್ಕೆ ವಿಷಮಾಗ್ನಿ ಎಂಬದಾಗಿಯೂ, ಪಿತ್ತಜನ್ಯವಾದ ಅಗ್ನಿವಿಕಾರಕ್ಕೆ ತೀಕ್ಷ್ಣಾಗ್ನಿ ಎಂಬದಾಗಿಯೂ, ಕಫಜನ್ಯವಾದ ಅಗ್ನಿವಿಕಾರಕ್ಕೆ ಮಂದಾಗ್ನಿ ಎಂಬದಾಗಿಯೂ, ವಾಯು ಮತ್ತು ಪಿತ್ತಗಳ ಪ್ರಕೋಪದಿಂದ ಹುಟ್ಟಿದ ಅಗ್ನಿವಿಕಾರವು ಭಸ್ಮಕನೆಂಬದಾಗಿಯೂ ಹೆಸರು.

**ಪಂಚೈವಾರೋಚಕಾಜ್ಞೇಯಾವಾತಪಿತ್ತಕಫೈಸ್ತ್ರಿಧಾ ॥ ೨೭ ॥**
**ಸನ್ನಿಪಾತಾನ್ಮನಸ್ತಾಪಾತ್** ... ... ....... ... .. ..... . . .. ...॥

ಅರೋಚಕರೋಗವು ಐದುವಿಧ. ವಾತಜನ್ಯ, ಪಿತ್ತಜನ್ಯ, ಕಫಜನ್ಯ, ಸನ್ನಿಪಾತ (ತ್ರಿದೋಷ) ಜನ್ಯ, ಮನಸ್ಸಿನ ಸಂತಾಪದಿಂದ ಹುಟ್ಟುವಂಥಾದ್ದು ಎಂಬದಾಗಿ.

.................................**ಛರ್ದಯಸ್ಸಪ್ತಧಾಮತಾಃ ॥**

ತ್ರಿಭಿರ್ದೋಷೈಃಪೃಥಕ್ತಿಸ್ರಃಕ್ರಿಮಿಭಿಸ್ಸನ್ನಿಪಾತತಃ ॥ ೨೮ ॥
ಘೃಣಯಾಚತಥಾಸ್ತ್ರೀಣಾಂಗರ್ಭಾಧಾನಾಚ್ಚಜಾಯತೆ ॥

ವಮನರೋಗವು ಏಳುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ, ಹೊಟ್ಟೆಯಲ್ಲಿ ಕ್ರಿಮಿಗಳು ಹೆಚ್ಚಾಗುವುದರಿಂದ, ತ್ರಿದೋಷಸನ್ನಿಪಾತದಿಂದ, ಅಸಹ್ಯಗಳಾದ ಮಲಮೂತ್ರಾದಿಗಳನ್ನು ನೋಡೋಣದರಿಂದ, ಹೆಂಗಸರು ಗರ್ಭಿಣಿಯರಾಗೋಣದರಿಂದ, ಈಕಾರಣಗಳಂದ ವಮನರೋಗವು ಏಳುವಿಧವಾಗಿರುತ್ತೆ.

ಸ್ವರಭೇದಾಷ್ಷಡೇವಸ್ಯುರ್ವಾತಪಿತ್ತಕಫೈಸ್ತ್ರಯಃ ॥
ಮೇದಸಾಸನ್ನಿಪಾತೇನಕ್ಷಯಾತ್ ಷಷ್ಠಃಪ್ರಕೀರ್ತಿತಃ ॥ ೨೯ ॥

ಸ್ವರಭೇದರೋಗವು ಆರುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ, ಶರೀರದಲ್ಲಿ ಕೊಬ್ಬು ಹೆಚ್ಚುವುದರಿಂದ ಉಂಟಾಗತಕ್ಕದ್ದು, ತ್ರಿದೋಷಸನ್ನಿಪಾತದಿಂದ ಉಂಟಾಗತಕ್ಕದ್ದು, ಕ್ಷಯರೋಗದಿಂದ ಬರತಕ್ಕ ಸ್ವರಭೇದ ಒಂದು ಈರೀತಿಯಾಗಿ.

ತೃಷ್ಣಾಚಷಡ್ವಿಧಾಪ್ರೋಕ್ತಾವಾತಾತ್ಪಿತ್ತಾತ್ಕಫಾದಪಿ ॥
ತ್ರಿದೋಷೈರುಪಸರ್ಗೇಣಕ್ಷಯಾದ್ಧಾತೋಶ್ಚಷಷ್ಟಿಕಾ ॥ ೩೦ ॥

ತೃಷ್ಣಾರೋಗವು ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ಆಗಂತುಕ, ಧಾತುಕ್ಷಯಜನ್ಯ ಎಂಬದಾಗಿ ಆರುವಿಧ. ಊಟಮಾಡುವಕಾಲದಲ್ಲಿ ಹುಟ್ಟತಕ್ಕ ಬಾಯಾರಿಕೆಯೂ ಒಂದು ಸೇರಿ ಏಳು ವಿಧವೆಂದು ಕೆಲವರನ್ನುತ್ತಾರೆ. ಊಟಮಾಡುವಕಾಲದಲ್ಲಿ ಹುಟ್ಟತಕ್ಕ ಬಾಯಾರಿಕೆಯು ದೋಷಪ್ರಕೋಪಜನ್ಯವೇ ಹೊರ್ತು ಬೇರೆ ಅಲ್ಲವೆಂಬದಾಗಿ ಶಾರ್ಙ್ಗಧರಾಚಾರ್ಯರ ಅಭಿಪ್ರಾಯ.

ಮೂರ್ಛಾಚತುರ್ವಿಧಾಜ್ಞೇಯಾವಾತಪಿತ್ತಕಫೈಃಪೃಥಕ್ ॥
ಚತುರ್ಥೀಸನ್ನಿಪಾತೇನತಥೈಕಶ್ಚಭ್ರಮಸ್ಮೃತಃ ॥ ೩೧ ॥
ನಿದ್ರಾತಂದ್ರಾಚಸನ್ನ್ಯಾಸೋಗ್ಲಾನಿಶ್ಚೈಕೈಕಶಸ್ಮೃತಃ ॥

ಮೂರ್ಛಾರೋಗವು ನಾಲ್ಕುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ ಎಂಬವಾಗಿ. ಭ್ರಮವೆಂದರೆ ಬುದ್ಧಿಯು ಚಕ್ರದಮೇಲೆ ಹತ್ತಿದಹಾಗೆ ತಿರುಗುವುದು, ಸ್ತಿಮಿತವಿಲ್ಲದಿರುವುದು, ಅದು ಒಂದೇ ವಿಧ, ನಿದ್ರಾರೋಗ (ಅರೆನಿದ್ರೆ), ತಂದ್ರಾರೋಗ (ತೂಕಡಿಕೆ), ಸನ್ಯಾಸ (ಯಾವರೋಗದ ಚಿಹ್ನೆಗಳೂ ಕಾಣದೆ ಮನುಷ್ಯ ಮಾತ್ರ ಒಣಗಿಕೊಂಡು ಹೋಗುವುದು, ) ಬಳಲಿಕೆ ಗ್ಲಾನಿ ಇವುಗಳು ಒಂದೊಂದೇ ವಿಧ

ಮದಾಸ್ಸಪ್ತಸಮಾಖ್ಯಾತಾವಾತಪಿತ್ತಕಫೈಸ್ತ್ರಯಃ ॥
ತ್ರಿದೋಷೈರಸೃಜಾಮದ್ಯಾದ್ವಿಷಾದಪಿಚಸಪ್ತಮಃ ॥ ೩೨ ॥
ಮದಾತ್ಯಯಶ್ಚತುರ್ಧಾಸ್ಯಾದ್ವಾತಾದ್ಪಿತ್ತಾತ್ಕಫಾದಪಿ ॥
ತ್ರಿದೋಷೈರಪಿವಿಜ್ಞೇಯಏಕಃಪರಮದಸ್ತಥಾ ॥ ೩೪ ॥

ಪಾನಾಜೀರ್ಣಂತಥಾಚ್ಯೈಕಂತಥೈಕಃಪಾನವಿಭ್ರಮಃ ||
ಪಾನಾತ್ಯಯಶ್ಚಸ್ತುಥಾಚ್ಯೈಕೋ.... ....... .................. ||

ಬುದ್ಧಿಶಕ್ತಿಯೇ ಕಡಮೆಯಾಗತಕ್ಕ ಮದವೆಂಬ ರೋಗವು ಏಳುವಿಧ. ವಾತಜನ್ಯ, ಪಿತ್ತಜನ್ಯ, ಕಫಜನ್ಯ, ತ್ರಿದೋಷಸನ್ನಿಪಾತಜನ್ಯ, ರಕ್ತಪ್ರಕೋಪಜನ್ಯ, ಮದ್ಯಪಾನಜನ್ಯ, ಯಾವದಾದರೂ ಕೃತ್ರಿಮವಿಷಪಾನದಿಂದ ಹುಟ್ಟತಕ್ಕದ್ದು ಎಂಬದಾಗಿ. ಮಿತಿಮೀರಿ ಮದ್ಯಪಾನಮಾಡುವುದರಿಂದ ಹುಟ್ಟತಕ್ಕ ರೋಗಕ್ಕೆ ಮದಾತ್ಯಯವೆಂಬ ಹೆಸರು, ಇದು ನಾಲ್ಕುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ ಎಂಬದಾಗಿ. ಪರಮದವೆಂಬ ಮದಾತ್ಯಯಭೇದವೂ, ಪಾನಾಜೀರ್ಣವೆಂಬುವುದೂ, ಪಾನವಿಭ್ರಮವೆಂಬುವುದೂ, ಪಾನಾತ್ಯಯವೆಂಬುವುದೂ ಸಹ ಒಂದೊಂದು ವಿಧ.

............ ......... ........ದಾಹಾಸ್ಸಪ್ತಮತಾಸ್ತಥಾ || ೩೫ ||
ರಕ್ತಪಿತ್ತಾತ್ತಥಾರಕ್ತಾತ್ತೃಷ್ಣಾಯಾಃಪಿತ್ತತಸ್ತಥಾ ||
ಧಾತುಕ್ಷಯಾನ್ಮರ್ಮಘಾತಾದ್ರಕ್ತಪೂರ್ಣೋದರಾದಪಿ || ೩೬ ||

ದಾಹವೆಂಬದಾಗಿ ಸರ್ವಾಂಗದಲ್ಲಿಯೂ ಉರಿಯುವಂತಹ ರೋಗವು ಏಳುವಿಧ. ರಕ್ತಪಿತ್ತದಿಂದ ಹುಟ್ಟಿದ್ದು, ಶರೀರದಲ್ಲಿ ರಕ್ತೋದ್ರೇಕವಾಗುವುದರಿಂದ, ಬಾಯಾರಿಕೆಯನ್ನು ತಡೆಯುವುದರಿಂದ, ಪಿತ್ತವು ಉದ್ರೇಕವಾಗೋಣದರಿಂದ, ಶರೀರದಲ್ಲಿರುವ ರಸರಕ್ತಾದಿ ಧಾತುಗಳು ಕ್ಷಯಿಸಿಹೋಗೋಣದರಿಂದ, ಶರೀರಗತವಾದ ಮರ್ಮಸ್ಥಾನಕ್ಕೆ ಯಾವುದಾದರೂ ಪೆಟ್ಟು ಬೀಳುವುದರಿಂದ, ಉದರದಲ್ಲಿ ಹೆಚ್ಚಾಗಿ ರಕ್ತವು ತುಂಬಿಕೊಳ್ಳೋಣದರಿಂದ ಈರೀತಿಯಾಗಿ.

ಉನ್ಮಾದಾಷ್ಷಟ್ಸಮಾಖ್ಯಾತಾಸ್ತ್ರಿಭಿರ್ದೋಷೈಸ್ತ್ರಯಶ್ಚತೆ ||
ಸನ್ನಿಪಾತಾದ್ವಿಷಾದ್ಧೇಯಃಷಷ್ಠೋದುಃಖೇನಚೇತಸಃ || ೩೭ ||
ಭೂತೋನ್ಮಾದಾವಿಂಶತಿಃಸ್ಯುಸ್ತೇದೇವಾದ್ದಾನವಾದಪಿ ||
ಗಂಧರ್ವಾತ್ಕಿಂನರಾದ್ಯಕ್ಷಾತ್ಪಿತೃಭ್ಯೋಗುರುಶಾಪತಃ || ೩೮ ||
ಪ್ರೇತಾಚ್ಚಗುಹ್ಯಕಾದ್ವೃದ್ಧಾತ್ಸಿದ್ಧಾದ್ಭೂತಾತ್ಪಿಶಾಚತಃ ||
ಜಲಾಧಿದೇವತಾಯಾಶ್ಚನಾಗಾದ್ಬ್ರಹ್ಮರಾಕ್ಷಸಾತ್ || ೩೯ ||
ರಾಕ್ಷಸಾದಪಿಕೂಷ್ಮಾಂಡಾತ್ಕೃತ್ಯಾವೇತಾಲಯೋರಪಿ ||

ಉನ್ಮಾದವೆಂದರೆ ಹುಚ್ಚು. ಇದು ಆರುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ವಿಷಭಕ್ಷಣಜನ್ಯ, ಮನಸ್ಸಿಗೆ ಯಾವುದಾದರೂ ದುಃಖವು ಹತ್ತಿಹೋಗೋಣದರಿಂದ ಹುಟ್ಟತಕ್ಕದ್ದು ಎಂಬದಾಗಿ. ಭೂತೋನ್ಮಾದವೆಂಬದಾಗಿ ಒಂದು ಬಗೆಯ ಗ್ರಹಬಾಧೆಯಿಂದ ಹುಟ್ಟತಕ್ಕ ಹುಚ್ಚು ಇಪ್ಪತ್ತುವಿಧ. ದೇವಗ್ರಹಗಳ (ಗಣ-ಮಾತೃಕಾ) ಬಾಧೆಯಿಂದ ಉತ್ಪನ್ನವಾಗತಕ್ಕದ್ದು, ರಾಕ್ಷಸಗ್ರಹಗಳ ಬಾಧೆಯಿಂದ ಹುಟ್ಟತಕ್ಕದ್ದು, ಗಂಧರ್ವಗ್ರಹಬಾಧೆ, ಕಿನ್ನರಗ್ರಹಬಾಧೆ, ಯಕ್ಷಗ್ರಹಬಾಧೆ, ಪಿತೃಗ್ರಹಬಾಧೆ, ಗುರುಜನರುಗಳ ಅನಿಷ್ಟಾಶಂಸನರೂಪವಾದ ಶಾಪ, ಪ್ರೇತಗ್ರಹಬಾಧೆ, ಗುಹ್ಯಕಗ್ರಹಬಾಧೆ, ಸಿದ್ಧಗಣಗಳಬಾಧೆ, ಭೂತ

ಬಾಧೆ, ಪಿಶಾಚಬಾಧೆ, ಜಲಾಧಿದೇವತೆಗಳಬಾಧೆ, ನಾಗಬಾಧೆ, ಬ್ರಹ್ಮರಾಕ್ಷಸಗ್ರಹಗಳ ಬಾಧೆ, ರಾಕ್ಷಸಗ್ರಹಗಳಬಾಧೆ, ಕೂಷ್ಮಾಂಡವೆಂಬ ಹೆಸರಿನ ರಾಕ್ಷಸಗ್ರಹಗಳಬಾಧೆ, ಮಂತ್ರಮಾರಣಾದಿಗಳಿಂದ, ಬೇತಾಳಬಾಧೆ, ಕುಲವೃದ್ಧರಾದವರ ಶಾಪಬಾಧೆ ಈ ಕಾರಣಗಳಿಂದ ಹುಟ್ಟತಕ್ಕದ್ದೆಂಬದಾಗಿ.

ಅಪಸ್ಮಾರಶ್ಚ ತುರ್ಧಾಸ್ಯಾತ್ಸಮೀರಾತ್ಪಿತ್ತತಸ್ತಥಾ ॥ ೪೦ ॥
ಶ್ಲೇಷ್ಮಣೋಪಿತೃತೀಯಸ್ಸ್ಯಾಚ್ಚತುರ್ಥಸ್ಸನ್ನಿಪಾತತಃ ॥

ಅಪಸ್ಮಾರವೆಂಬ ರೋಗವು ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯವೆಂಬದಾಗಿ ನಾಲ್ಕುವಿಧ.

ಚತ್ವಾರಶ್ಚಾಮವಾತಾಸ್ಯುರ್ವಾತಪಿತ್ತಕಫೈಸ್ತ್ರಿಧಾ ॥ ೪೧ ॥
ಚತುರ್ಥಸ್ಸನ್ನಿಪಾತೇನ..................................॥

ಆಮವಾತವೆಂಬ ರೋಗವು ವಾತಜನ್ಯ, ಪಿತ್ತಜನ್ಯ, ಕಫಜನ್ಯ, ತ್ರಿದೋಷಸನ್ನಿಪಾತಜನ್ಯ ಎಂಬದಾಗಿ ನಾಲ್ಕುವಿಧ.

..........................ಶೂಲಾನ್ಯಷ್ಟೌಬುಧಾಜಗುಃ ॥
ಪೃಥಗ್ದೋಷೈಸ್ತ್ರಿಧಾದ್ವಂದ್ವಭೇದೇನತ್ರಿವಿಧಾನ್ಯಪಿ ॥ ೪೨ ॥
ಆಮೇನಸಪ್ತಮಂಪ್ರೋಕ್ತಂಸನ್ನಿಪಾತೇನಚಾಷ್ಟಮಂ ॥

ಶೂಲರೋಗವು ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ವಾತಪಿತ್ತಜನ್ಯ, ವಾತಶ್ಲೇಷ್ಮಜನ್ಯ, ಪಿತ್ತಶ್ಲೇಷ್ಮಜನ್ಯ, ಆಮರಸಜನ್ಯ, ತ್ರಿದೋಷಸನ್ನಿಪಾತಜನ್ಯ ಎಂಬದಾಗಿ ಎಂಟುವಿಧ.

ಪರಿಣಾಮಭವಂಶೂಲಮಷ್ಟಧಾಪರಿಕೀರ್ತಿತಂ ॥ ೪೩ ॥
ಮತ್ಯೈಯ್ರೈಶ್ಶೂಲಸಂಖ್ಯಾಸ್ಯಾತ್ತೈರೇವಪರಿಣಾಮಜಂ ॥
ಅನ್ನದ್ರವಭವಂಶೂಲಂಜ್ವರತ್ಪಿತ್ತಭವಂತಥಾ ॥ ೪೪ ॥
ಏಕೈಕಂಗಣಿತಂಸುಜ್ಞೈಃ...............................॥

ಭೋಜನ ಮಾಡಿದ ಅನ್ನವು ಜೀರ್ಣವಾಗತಕ್ಕ ಕಾಲದಲ್ಲಿ ಬರತಕ್ಕ ಹೊಟ್ಟೆಶೂಲೆಗೆ ಪರಿಣಾಮಶೂಲೆ ಎಂಬದಾಗಿ ಹೆಸರು, ಇದು ಎಂಟುವಿಧ. ಇದು ಕೂಡ ಹಿಂದೆ ಹೇಳಿದ ಶೂಲೆಯಂತೆ ವಾತ, ಪಿತ್ತ, ಕಫಗಳಿಂದ ಮೂರು, ವಾತಪಿತ್ತ, ವಾತಶ್ಲೇಷ್ಮ, ಪಿತ್ತಶ್ಲೇಷ್ಮಗಳಿಂದ ಮೂರು, ಆಮರಸಜನ್ಯ, ಸನ್ನಿಪಾತಜನ್ಯ, ಎಂಬದಾಗಿ ಎರಡು ಅಂತೂ ಎಂಟುವಿಧ. ಅನ್ನದ್ರವಶೂಲೆ ಒಂದು, ಪಿತ್ತವು ಜೀರ್ಣವಾಗುವಾಗ್ಗೆ ಅಂದರೆ ಆಮ್ಲಪಿತ್ತಜನ್ಯವಾಗುವ ಶೂಲೆ ಒಂದು, ಈರೀತಿಯಾಗಿ ಈ ಎರಡು ಶೂಲೆಗಳೂ ಒಂದೊಂದೇ ವಿಧ.

..........................ಉದಾವರ್ತಾಸ್ತ್ರಯೋದಶ ॥
ಏಕಃಕ್ಷುನ್ನಿಗ್ರಹಾತ್ಪ್ರೋಕ್ತಸ್ತೃಷ್ಣಾರೋಧಾದ್ವಿತೀಯಕಃ ॥ ೪೫ ॥
ನಿದ್ರಾಘಾತಾತ್ತೃತೀಯಸ್ಸ್ಯಾಚ್ಚತುರ್ಥಶ್ಶ್ವಾಸನಿಗ್ರಹಾತ್ ॥
ಛರ್ದಿರೋಧಾತ್ಪಂಚಮಸ್ಸ್ಯಾತ್ಷಷ್ಠಃಕ್ಷವಥುನಿಗ್ರಹಾತ್ ॥ ೪೬ ॥
ಜೃಂಭಾರೋಧಾತ್ಸಪ್ತಮಸ್ಸ್ಯಾದುದ್ಗಾರಗ್ರಹತೋಷ್ಟಮಃ ॥

ನವಮುಸ್ಯಾದಶುಕ್ರರೋಧಾದ್ದಶಮುಶ್ಶುಕ್ರಧಾರಣಾತ್ || ೪೭ ||
ಮೂತ್ರರೋಧಾನ್ಮಲಸ್ಯಾಪಿರೋಧಾದ್ವಾತವಿನಿಗ್ರಹಾತ್ ||
ಉದಾವರ್ತಾಸ್ತ್ರಯಶ್ಚೈತೇಘೋರೋಪದ್ರವಕಾರಕಾಃ || ೪೮ ||

ಉದಾವರ್ತವೆಂಬ ವಾತರೋಗವು ಹದಿಮೂರುವಿಧ. ಮುಂದೆ ಹೇಳುವ ಒಂದೊಂದು ವೇಗವೂ ವಾಯುವಿನಿಂದಲೇ ಉಂಟಾಗುವುದರಿಂದ ಅಂತಹ ವೇಗವನ್ನು ತಡೆಯುವುದರಿಂದ ಬರತಕ್ಕ ರೋಗಕ್ಕೂ ಉದಾವರ್ತವೆಂಬ ಹೆಸರು, ಇವುಗಳ್ಯಾವುವೆಂದರೆ- ಹಸಿವನ್ನು ತಡೆಯೋಣದರಿಂದ ಬರತಕ್ಕದ್ದು, ಬಾಯಾರಿಕೆಯನ್ನು ತಡೆಯೋಣದರಿಂದ ಉಂಟಾಗತಕ್ಕದ್ದು, ನಿದ್ರೆಯನ್ನು ತಡೆಯೋಣದರಿಂದುಂಟಾಗತಕ್ಕದ್ದು, ಉಸಿರನ್ನು ತಡೆಯುವುದರಿಂದುಂಟಾಗತಕ್ಕದ್ದು, ವಮನವನ್ನು ತಡೆಯೋಣದರಿಂದುಂಟಾಗತಕ್ಕದ್ದು, ಶೀನನ್ನು ತಡೆಯುವುದರಿಂದ ಉಂಟಾಗತಕ್ಕದ್ದು, ಆಕಳಿಕೆಯನ್ನು ತಡೆಯುವುದರಿಂದುಂಟಾಗತಕ್ಕದ್ದು, ತೇಗನ್ನು ತಡೆಯುವುದರಿಂದುಂಟಾಗತಕ್ಕದ್ದು, ಕಣ್ಣೀರನ್ನು ತಡೆಯುವುದರಿಂದುಂಟಾಗತಕ್ಕದ್ದು, ರೇತಸ್ಸಿನ ವೇಗವನ್ನು ತಡೆಯುವುದರಿಂದುಂಟಾಗತಕ್ಕದ್ದು, ಮಲ, ಮೂತ್ರ, ಅಧೋವಾಯು ಇವುಗಳನ್ನು ತಡೆಯುವುದರಿಂದ ಹುಟ್ಟತಕ್ಕವುಗಳು ಎಂಬದಾಗಿ ಹದಿಮೂರುವಿಧ. ಈ ಉದಾವರ್ತಗಳು ಭಯಂಕರವಾದ ಉಪದ್ರವಗಳನ್ನುಂಟುಮಾಡುತ್ತವೆ

ಆನಾಹೋದ್ವಿವಿಧೋಜ್ಞೇಯಏಕಃಪಕ್ವಾಶಯೋದ್ಭವಃ ||
ಆಮಾಶಯೋದ್ಭವಶ್ಚಾನ್ಯಃಪ್ರತ್ಯಾನಾಹಸ್ಸಕಥ್ಯತೆ || ೪೯ ||

ಆನಾಹರೋಗ (ಹೊಟ್ಟೆಯುಬ್ಬರ) ವು ಎರಡುವಿಧ. ಪಕ್ವಾಶಯದಲ್ಲಿ ಹುಟ್ಟುವುದೊಂದು, ಆಮಾಶಯದಲ್ಲಿ ಹುಟ್ಟುವುದೊಂದು, ಈ ಆಮಾಶಯದಲ್ಲಿ ಹುಟ್ಟುವ ಹೊಟ್ಟೆಯುಬ್ಬರಕ್ಕೇನೇ ಪ್ರತ್ಯಾನಾಹವೆಂಬದಾಗಿಯೂ ನಾಮಾಂತರವುಂಟು.

ಉರೋಗ್ರಹಸ್ತಥಾಚೈಕೋಹೃದ್ರೋಗಾಃಪಂಚಕೀರ್ತಿತಾಃ ||
ವಾತಾದಿಭಿಸ್ತ್ರಯಃಪ್ರೋಕ್ತಾಶ್ಚತುರ್ಥಸ್ಸನ್ನಿಪಾತತಃ || ೫೦ ||
ಪಂಚಮಃಕ್ರಿಮಿಸಂಜಾತ......... ....... . ........ ||

ಉರೋಗ್ರಹವೆಂಬ ರೋಗವು ಒಂದೇವಿಧ. ಉರೋಗ್ರಹವೆಂದರೆ ಎದೆಯಲ್ಲಿ ಹಿಡಿದುಕೊಳ್ಳುವುದು. ಹೃದ್ರೋಗಗಳು ಐದುವಿಧ ( ಹೃದಯದಲ್ಲಿ ವೇದನೆಯಾಗುವುದು) ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ಕ್ರಿಮಿಜನ್ಯ ಎಂಬದಾಗಿ.

.......................... . ಸ್ತಥಾಷ್ಟಾವುದರಾಣಿಚ ||
ವಾತಾತ್ಪಿತ್ತಾತ್ಕಫಾತ್ತ್ರೀಣಿತ್ರಿದೋಷೇಭ್ಯೋಜಲಾದಪಿ || ೫೧ ||
ಪ್ಲೀಹ್ನಃಕ್ಷತಾದ್ಬದ್ಧಗುದಾದಷ್ಟಮಂಪರಿಕೀರ್ತಿತಂ ||

ಉದರರೋಗಗಳೆಂಟುವಿಧ ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ ಎಂಬದಾಗಿ ನಾಲ್ಕು, ಜಲೋದರವೆಂದರೆ ಪ್ರಶಸ್ತವಲ್ಲದ ನೀರನ್ನು ಕುಡಿಯುವುದರಿಂದ ಹುಟ್ಟತಕ್ಕ ಉದರ, ಪ್ಲೀಹೋದರವೆಂದರೆ ಪ್ಲೀಹಾಭಿವೃದ್ಧಿಯಿಂದ ಹುಟ್ಟತಕ್ಕ ಉದರಕ್ಕೆ ಹೆಸರು, ಕ್ಷತೋದರವೆಂದರೆ ಹೊಟ್ಟೆಯ

ಲ್ಲಿರತಕ್ಕ ಮಾಂಸ ಮೊದಲಾದ ಭಾಗಗಳಿಗೆ ಯಾವದಾದರೂ ಪೆಟ್ಟು ಬಿದ್ದು ಅವುಗಳು ಊದಿಕೊಂಡು ಅವರಿಂದ ಉಂಟಾಗತಕ್ಕ ಉದರಾಭಿವೃದ್ಧಿಗೆ ಕ್ಷತೋದರವೆಂಬ ಹೆಸರು. ಬದ್ಧಗುದೋದರವೆಂದರ ಮಲದ್ವಾರವು ಬಂದಾಗಿ ಮಲಪ್ರವೃತ್ತಿಯಾಗದೆ ಉದರಾಭಿವೃದ್ಧಿಯಾಗುವುದುಬದ್ಧಗುದೋದರವೆನ್ನಿಸಿಕೊಳ್ಳುತ್ತದೆ. ಈರೀತಿಯಾಗಿ ಉದರಗಳೆಂಟು.

ಗುಲ್ಮಾಸ್ತ್ವಷ್ಟೌಸಮಾಖ್ಯಾತಾವಾತಪಿತ್ತಕಫೈಸ್ತ್ರಯಃ ॥ ೩೨ ॥
ದ್ವಂದ್ವಭೇದಾಸ್ತ್ರಯಃಪ್ರೋಕ್ತಾಸ್ಸಪ್ತಮಸ್ಸನ್ನಿಪಾತತಃ ॥
ರಕ್ತಾದಷ್ಟಮಕಃಖ್ಯಾತೋ.............................॥

ಗುಲ್ಮರೋಗವೆಂಟುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ವಾತಪಿತ್ತೋಭಯ ದೋಷಪ್ರಕೋಪಜನ್ಯ, ವಾತಶ್ಲೇಷ್ಮೋಭಯ ದೋಷಪ್ರಕೋಪಜನ್ಯ, ಪಿತ್ತಶ್ಲೇಷ್ಮೋಭಯ ದೋಷಪ್ರಕೋಪಜನ್ಯ ಎಂಬದಾಗಿ ಆರು, ತ್ರಿದೋಷಸನ್ನಿಪಾತಜನ್ಯವಾದದ್ದೊಂದು, ರಕ್ತಗುಲ್ಮವೆಂದರೆ ಹೆಂಗಸರು ಬಾಣಂತಿಯರಾಗಿರುವಾಗ್ಗೆ ಅಪಥ್ಯ ಭೋಜನಾದಿಗಳನ್ನು ಮಾಡುವುದು ಮತ್ತು ಆಗಾಗ್ಯೆ ಗರ್ಭಪಾತ, ಸ್ರಾವಾದಿಗಳು ಆಗುವುದು ಈ ಕಾರಣಗಳಿಂದ ಹೆಂಗಸರಿಗೇನೇ ಹುಟ್ಟತಕ್ಕ ರಕ್ತಗುಲ್ಮವೆಂಬುದೊಂದು ಈರೀತಿಯಾಗಿ ಗುಲ್ಮವು ಎಂಟುವಿಧ.

...... . ..... ..ಮೂತ್ರಾಘಾತಾಸ್ತ್ರಯೋದಶ ॥ ೩೩ ॥
ವಾತಕುಂಡಲಿಕಾಪೂರ್ವಂವಾತಾಷ್ಠೀಲಾತತಃಪರಾ ॥
ವಾತಬಸ್ತಿಸ್ತೃತೀಯಸ್ಸ್ಯಾನ್ಮೂತ್ರಾತೀತಶ್ಚತುರ್ಥಕಃ ॥ ೩೪ ॥
ಪಂಚಮಂಮೂತ್ರಜಠರಂಷಷ್ಠೋಮೂತ್ರಕ್ಷಯಸ್ಮೃತಃ ॥
ಮೂತ್ರೋತ್ಸರ್ಗಸ್ಸಪ್ತಮಸ್ಸ್ಯಾನ್ಮೂತ್ರಗ್ರಂಥಿಸ್ತಥಾಷ್ಟಮಃ ॥ ೩೫ ॥
ಮೂತ್ರಶುಕ್ರಂತುನವಮಂವಿಡ್ಘಾತೋದಶಮಸ್ಮೃತಃ ॥
ಮೂತ್ರಸಾದಸ್ತ್ವೋಷ್ಣವಾತೋಬಸ್ತಿಕುಂಡಲಿಕಾತಥಾ ॥ ೩೬ ॥
ತ್ರಯೋಪ್ಯೇತೇಮೂತ್ರಘಾತಾಃಪೃಥಗ್ಘೋರಾಃಪ್ರಕೀರ್ತಿತಾಃ ॥

ಮೂತ್ರಾಘಾತರೋಗವು ಪದಿಮೂರು ವಿಧ. ವಾತಕುಂಡಲಿಕಾ ಎಂದರೆ ವಾಯುವು ಮೂತ್ರಕೋಶದಲ್ಲಿ ಸೇರಿ ಅಲ್ಲಿಯೇ ಸುತ್ತಿಕೊಂಡು ಸಂಚರಿಸುತ್ತ ಮೂತ್ರವು ಹೊರಡಲು ತೊಂದರೆಮಾಡುವುದು, ವಾತಾಷ್ಠೀಲಾ ಎಂದರೆ ವಾಯು ಮೂತ್ರಾಶಯದಲ್ಲಿ ನುಗ್ಗಿ ಕಲ್ಲಿನಂತೆ ಗಟ್ಟಿಯಾಗಿ ನಿಂತುಕೊಂಡು ಮೂತ್ರದ್ವಾರವನ್ನು ತಡೆಯುವುದು, ವಾತಬಸ್ತಿ ಎಂದರ ಮೂತ್ರಾಶಯದಲ್ಲಿ ವಾಯುವು ಸೇರಿಕೊಂಡು ದೊಡ್ಡದಾಗಿ ಮೂತ್ರಾಶಯ ಮತ್ತು ಉದರ ಎರಡೂ ಪರಸ್ಪರ ಒತ್ತಿ ಮೂತ್ರಮಾರ್ಗವನ್ನು ತಡದು ಮೂತ್ರವು ಹೊರಡದಂತೆ ಮಾಡುವುದು, ಮೂತ್ರಾತೀತವೆಂದರೆ ಮೂತ್ರಾಶಯದಲ್ಲಿ ಮೂತ್ರವು ಬಹಳಹೊತ್ತು ನಿಲ್ಲುವುದು, ಮೂತ್ರ ಹೊರಡುವಾಗ್ಗೆ ನಿದಾನವಾಗಿಯಾಗಲಿ ಕೊಂಚಕೊಂಚವಾಗಿಯಾಗಲಿ ಹೊರಡುವುದು, ಮೂತ್ರಜಠರವೆಂದರೆ, ಮೂತ್ರಾಶಯದಲ್ಲಿ ಮೂತ್ರವು ತುಂಬಿಕೊಂಡು ಕಿಬ್ಬೊಟ್ಟೆ ಉಬ್ಬಿಕೊಳ್ಳುವುದು, ಮೂತ್ರಕ್ಷಯವೆಂದರೆ ಪಿತ್ತ ಮತ್ತು ವಾತಗಳು ಪ್ರಕುಪಿತಗಳಾಗಿ ಮೂತ್ರಾಶಯದಲ್ಲಿ ಸೇರಿಕೊಂಡು ಮೂ

ತ್ರದ್ರವವೇ ಕ್ಷಯಿಸಿಹೋಗುವುದು, ಮೂತ್ರೋತ್ಸರ್ಗವೆಂದರೆ ಮೂತ್ರವು ಕೊಂಚ ಕೊಂಚವಾಗಿಯಾದರೂ, ಉರಿಯಿಂದ ಕೂಡಿ ಅಥವಾ ಉರಿಯಿಲ್ಲದೇನೇ ಹೊರಡುವುದು, ಮೂತ್ರಗ್ರಂಥಿ ಎಂದರೆ ಮೂತ್ರದ್ವಾರದಲ್ಲಿ ಒಂದು ಗ್ರಂಥಿಯಾಗಿ ಮೂತ್ರವನ್ನು ತಡೆಯುವುದು, ಮೂತ್ರಶುಕ್ರವೆಂದರೆ. ಮೂತ್ರದ ಜೊತೆಯಲ್ಲಾಗಲಿ ಅನಂತರದಲ್ಲಿಯಾಗಲಿ ಕೊಂಚ ಶುಕ್ರವು ಹೋಗುತ್ತಿರುವುದು, ವಿಡ್ಘಾತವೆಂದರೆ ಮಲವು ಬದ್ಧವಾಗೋಣದರಿಂದ ಮೂತ್ರದಲ್ಲಿ ಮಲದ ಕಣಗಳೂ ಮತ್ತೂ ಗಂಧವೂ ಸಹ ಸೇರಿರುವುದು, ಮೂತ್ರಸಾದವೆಂದರೆ ಮೂತ್ರವು ಉರಿಯೊಡನೆ ಕೆಂಪಗೂ ಬೆಳ್ಳಗೂ ಹೊರಡುವುದು, ಉಷ್ಣವಾತವೆಂದರೆ ಮೂತ್ರಿಸಲು ಬಹಳ ಕಷ್ಟದೊಡನೆ ಒಂದೊಂದೇ ತೊಟ್ಟು ಅರಿಸಿನದ ಬಣ್ಣವಾಗಿಯಾಗಲಿ, ಕೆಂಪುಬಣ್ಣವಾಗಿಯಾಗಲಿ ಮೂತ್ರಿಸುವುದು, ಬಸ್ತಿಕುಂಡಲಿಕಾ ಎಂದರೆ ಮೂತ್ರಾಶಯದಲ್ಲಿ ಶೂಲೆ ಉರಿ ಇವುಗಳೊಡನೆ ಮೂತ್ರಿಸುತ್ತಿರುವುದು, ಬಸ್ತಿಯನ್ನು ಅಮುಕಿದರೆ ಮೂತ್ರ ಧಾರಾಕಾರವಾಗಿ ಮೂತ್ರಹೊರಡುವುದು ಇದಕ್ಕೆ ಹೆಸರು.

ಮೂತ್ರಕೃಚ್ಛ್ರಾಣಿಚಾಷ್ಟೌಸ್ಯುರ್ವಾತಪಿತ್ತಕಫೈಸ್ತ್ರಿಧಾ ॥
ಸನ್ನಿಪಾತಾಚ್ಚತುರ್ಥಸ್ಯಾಚ್ಛುಕ್ರಕೃಚ್ಛ್ರಂಚಪಂಚಮಂ ॥
ವಿಟ್ಕೃಚ್ಛ್ರಂಷಷ್ಠಮಾಖ್ಯಾತಂಘಾತಕೃಚ್ಛ್ರಂಚಸಪ್ತಮಂ ॥೫೮॥
ಅಷ್ಟಮಂಚಾಶ್ಮರೀಕೃಚ್ಛ್ರಂ.................. ......॥

ಮೂತ್ರಕೃಚ್ಛ್ರ ಎಂಟುವಿಧ ( ಕಷ್ಟವಾದ ಮೂತ್ರ ). ವಾತಪ್ರಕೋಪಜನ್ಯ. ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ಬಹಳ ಕಷ್ಟದೊಡನೆ ಮೂತ್ರದ ಜೊತೆಯಲ್ಲಿ ಶುಕ್ರವೂ ಹೋಗುವುದು, ಶುಕ್ರಕೃಚ್ಛ್ರ, ಮಲ ಬದ್ಧವಾಗೋಣದರಿಂದ ಅಪಾನವಾಯುವು ಕುಪಿತವಾಗಿ ಮೂತ್ರಾಶಯವನ್ನು ಕ್ಲೇಶಗೊಳಿಸಿ ಮೂತ್ರ ಹೊರಡಲು ಪ್ರತಿಬಂಧಿಸಿದರೆ ಅದಕ್ಕೆ ವಿಟ್ಕೃಚ್ಛ್ರವೆಂಬ ಹೆಸರು. ಮೂತ್ರಮಾರ್ಗಕ್ಕೆ ಯಾವುದಾದರೂ ಶಸ್ತ್ರಗಳ ಏಟು ಬೀಳುವುದು,ಮುಳ್ಳುತಗಲುವುದು ಈ ಕಾರಣಗಳಿಂದ ಹುಟ್ಟಿದ ಮೂತ್ರಕೃಚ್ಛ್ರಕ್ಕೆ ಘಾತಕೃಚ್ಛ್ರವೆಂಬ ಹೆಸರು, ಮೂತ್ರದ್ವಾರದಲ್ಲಿ ಯಾವದಾದರೂ ಘನಪದಾರ್ಥ ಸಿಕ್ಕಿಕೊಂಡು ಮೂತ್ರ ಹೊರಡಲು ತೊಂದರೆಯಾಗಿ ಶಿಶ್ನ ಮತ್ತು ಮೂತ್ರಾಶಯಗಳಲ್ಲಿ ನೋವುಉಂಟಾದರೆ ಅಶ್ಮರೀಕೃಚ್ಛ್ರವೆನ್ನಿಸಿಕೊಳ್ಳುತ್ತದೆ.

.............................ಚತುರ್ಧಾಚಾಶ್ಮರೀಮತಾ ॥
ವಾತಾಶ್ಪಿತ್ತಾತ್ಕಫಾಚ್ಛುಕ್ರಾತ್.......................॥

ಅಶ್ಮರಿ ಎಂದರೆ ಮೂತ್ರದ್ವಾರದಲ್ಲಿ ಸಿಕ್ಕಿಕೊಳ್ಳುವ ಕಲ್ಲಿನಂತಹ ಘನಪದಾರ್ಥವು ನಾಲ್ಕು ವಿಧ. ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ಶುಕ್ರಜನ್ಯ ಎಂಬದಾಗಿ.

.........................ತಥಾಮೇಹಾಶ್ಚವಿಂಶತಿಃ ॥ ೫೯ ॥
ಇಕ್ಷುಮೇಹಸ್ಸುರಾಮೇಹಃಪಿಷ್ಟಮೇಹಶ್ಚ ಸಾಂದ್ರಕಃ ॥
ಶುಕ್ರಮೇಹೋದಕಾಖ್ಯೌಚಲಾಲಾಮೇಹಶ್ಚಶೀತಕಃ ॥ ೬೦ ॥
ಸಿಕತಾಖ್ಯಶ್ಚಶನೈರ್ಮೇಹೋದಶೈತೇಕಫಸಂಭವಾಃ ॥

ಮಂಜಿಷ್ಠಾಖ್ಯೋಹರಿದ್ರಾಖ್ಯೋನೀಲಮೇಹಶ್ಚರಕ್ತಕಃ ॥ ೬೦ ॥
ಕೃಷ್ಣಮೇಹಃಕ್ಷಾರಮೇಹೋಹ್ಯೇಷಡ್ಯೈತೆಪಿತ್ತಸಂಭವಾಃ ॥
ಹಸ್ತಿಮೇಹೋವಸಾಮೇಹೋಮಜ್ಜಾಮೇಹೋಮಧುಪ್ರಭಃ ॥
ಚತ್ವಾರೋವಾತಜಾಮೇಹಾಃಇತಿಮೇಹಾಶ್ಚವಿಂಶತಿಃ ॥

ಮೇಹರೋಗವೆಂದರೆ ಮೂತ್ರಾಶಯ ಮೂತ್ರಮಾರ್ಗಗಳಿಗೆ ಸಂಬಂಧಿಸಿದ ರೋಗವು ಇಪ್ಪತ್ತುವಿಧ. ಇಕ್ಷುಮೇಹವೆಂದರೆ ಮೂತ್ರವು ಕಬ್ಬಿನಹಾಲಿನ ಹಾಗಿರುವುದು, ಸುರಾಮೇಹವೆಂದರೆ ಮೂತ್ರವು ಹೆಂಡದಂತಿರುವುದು, ಪಿಷ್ಟಮೇಹವೆಂದರೆ ಮೂತ್ರವು ಹಿಟ್ಟನ್ನು ಕದರಿದ ನೀರಿನಂತಿರುವುದು, ಸಾಂದ್ರಮೇಹವೆಂದರೆ ಮೂತ್ರದಲ್ಲಿ ಕಲ್ಮಶಗಳು ಸೇರಿಕೊಂಡು ಮೂತ್ರವು ಮಂದವಾಗಿರುವುದು, ಶುಕ್ರಮೇಹವೆಂದರೆ ಮೂತ್ರವು ಶುಕ್ರದಂತಿರುವುದು, ಉದಕಮೇಹವೆಂದರೆ ಮೂತ್ರವು ನೀರಿನಂತಿರುವುದು, ಲಾಲಾಮೇಹವೆಂದರೆ ಮೂತ್ರವು ಜೊಲ್ಲಿನಂತೆ ಜಿಗಟಾಗಿರುವುದು, ಶೀತಮೇಹವೆಂದರೆ ಮೂತ್ರವು ಅನೇಕಸಾರಿ ಮಧುರ ಪದಾರ್ಥದೊಡನೆ ಸೇರಿಕೊಂಡು ತಣ್ಣಗೆ ಹೊರಡುವುದು, ಸಿಕತಾಮೇಹವೆಂದರೆ ಮೂತ್ರದಲ್ಲಿ ಮರಳಿನಂತಹ ಸಣ್ಣಸಣ್ಣ ತಣಕುಗಳು ಕಂಡುಬರುವದು, ಶನೈರ್ಮೇಹವೆಂದರೆ ಮೂತ್ರದ ವೇಗವು ಬಹಳ ಸಾವಕಾಶವಾಗಿರುವುದು ಈ ಹತ್ತುವಿಧವಾದ ಮೇಹಗಳೂ ಕಫಪ್ರಧಾನವಾದ ಮೇಹಗಳೆಂದು ತಿಳಿಯಬೇಕು. ಮಂಜಿಷ್ಠಾಮೇಹವೆಂದರೆ ಮೂತ್ರವು ಮಂಜಿಷ್ಠೆಯ ಕಷಾಯದಂತಿರುವುದು, ಹರಿದ್ರಾಮೇಹವೆಂದರೆ ಮೂತ್ರವು ಅರಿಸಿನದ ನೀರಿನಂತಿರುವುದು, ನೀಲಮೇಹವೆಂದರೆ ಮೂತ್ರವು ನೊರೆಯಿಂದ ಕೂಡಿ ನೀಲವರ್ಣವಾಗಿರುವುದು, ರಕ್ತಮೇಹವೆಂದರೆ ಮೂತ್ರವು ರಕ್ತದವಾಸನೆಯೊಡನೆಯೂ ರಕ್ತದ ವರ್ಣದೊಡನೆಯೂ ಕೂಡಿರುವುದು, ಕೃಷ್ಣಮೇಹವೆಂದರೆ ಮೂತ್ರವು ಮಸಿಯ ವರ್ಣವಾಗಿರುವುದು, ಕ್ಷಾರಮೇಹವೆಂದರೆ ಉಪ್ಪಿನ ವಾಸನೆಯೊಡನೆ ಉಪ್ಪಿನ ನೀರಿನಂತೆ ಮೂತ್ರವಿರುವುದು, ಇವು ಆರೂ ಪಿತ್ತಪ್ರಧಾನವಾದ ಮೇಹಗಳು. ಹಸ್ತಿಮೇಹವೆಂದರೆ ಮೂತ್ರದ ಪರಿಮಾಣ ಮತ್ತು ವರ್ಣಗಳು ಆನೆಯ ಮೂತ್ರದಷ್ಟಿರುವುದು, ವಸಾಮೇಹವೆಂದರೆ ಮೂತ್ರದೊಂದಿಗೆ ಮಾಂಸರಸ ಸೇರಿರುವುದು ಅಥವಾ ಮಾಂಸರಸದಂತೆ ಮೂತ್ರವಿರುವುದು, ಮಜ್ಜಾಮೇಹವೆಂದರೆ ಮೂತ್ರವು ಮಜ್ಜಧಾತುವಿನಂತೆಯಾಗಲಿ ಮಜ್ಜಮಿಶ್ರವಾಗಿಯಾಗಲಿ ಇರುವುದು, ಮಧುಮೇಹವೆಂದರೆ ಮೂತ್ರವು ಜೇನುತುಪ್ಪದಂತಿರುವುದು, ಈ ನಾಲ್ಕೂ ವಾತಪ್ರಧಾನವಾದ ಮೇಹಗಳು.

ಸೋಮರೋಗಸ್ತಥಾಚೈಕಃಪ್ರಮೇಹಪಿಟಕಾದಶ ॥ ೬೩ ॥
ಶರಾವಿಕಾಕಚ್ಛಪಿಕಾಪುತ್ರಿಣೀವಿನತಾಲಜೀ ॥
ಮಸೂರಿಕಾಸರ್ಷಪಿಕಾಜಾಲಿನೀಚವಿದಾರಿಕಾ ॥ ೬೪ ॥
ವಿದ್ರಧಿಶ್ಚದಶೈತಾಸ್ಸ್ಯುಃಪಿಡಕಾಮೇಹಸಂಭವಾಃ ॥

ಸೋಮರೋಗವೆಂದರೆ ಶರೀರದಲ್ಲಿರುವ ಸ್ನಿಗ್ಧಧಾತುಗಳೂ ನೀರಾಗಿ ಮೂತ್ರಮಾರ್ಗದಿಂದ ಹೋಗುತ್ತಿರುವುದಕ್ಕೆ ಹೆಸರು. ರೋಗದ ಚಿಹ್ನೆಗಳಲ್ಲಿ ಅಶಕ್ತಿ ಬಹು ಮುಖ್ಯವಾದದ್ದು. ಮೇಹರೋಗದ ಕುರುಗಳು ಹತ್ತುವಿಧ. ಶರಾವಿಕ ಅಂದರೆ

ಮಣ್ಣಿನ ಶರಾವೆಯನ್ನು ಇಟ್ಟಂತೆ ಸುತ್ತಲೂ ಎತ್ತರವಾಗಿ ಮಧ್ಯದಲ್ಲಿ ತಗ್ಗಾಗಿರುವ ಕುರಕ್ಕೆ ಹೆಸರು. ಕಚ್ಛಪಿಕಾ ಎಂದರೆ ಆಮೆಯಂತೆ ಮಧ್ಯದಲ್ಲಿ ಎತ್ತರವಾಗಿ ಸುತ್ತಲೂ ತಗ್ಗಾಗಿರುವುದು, ಮಹತ್ತರವಾದ ಒಂದು ಕುರ ಅದರ ಹತ್ತಿರ ಒಂದು ಸಣ್ಣಕುರ ಇದ್ದರೆ ಪುತ್ರಿಣಿ ಎಂಬ ಹೆಸರು. ಪೃಷ್ಠದ ಮೇಲಾಗಲಿ ಕಿಬ್ಬೊಟ್ಟೆಯ ಮೇಲಾಗಲಿ ಬಾವಿನಂತೆ ಎದ್ದು ಬಹಳ ನೋವಾಗಿ ಕೊಂಚ ನೀಲಿಯಬಣ್ಣವಾಗಿರುವುದು ವಿನತಾ ಎನ್ನಿಸಿಕೊಳ್ಳುತ್ತದೆ. ಅಲಜಿ ಎನ್ನುವುದು ಬಹಳ ಉರಿ, ಕೆಂಪಗೂ ಕಪ್ಪಗೂ ಇರುತ್ತದೆ. ದೊಡ್ಡ ಬಾವಿನ ಸುತ್ತಲೂ ಸಣ್ಣ ಸಣ್ಣ ಬಕ್ಕೆಗಳು ಸಹ ವಿಶೇಷವಾಗಿರುತ್ತವೆ; ಇದೇ ಅಲಜಿ ಎನಿಸಿಕೊಳ್ಳುವದು. ಮಸೂರಿಕ ಎಂದರೆ ಮಸೂರ ಎಂಬ ಒಂದುವಿಧವಾದ ತೊಗರಿಯ ಬೇಳೆಯಹಾಗೆ ಸಣ್ಣಗೆ ಕೆಂಪಾಗಿರುವ ಪ್ರಮೇಹದ ಬಕ್ಕೆಗಳಿಗೆ ಹೆಸರು. ಸರ್ಷಪಿಕ ಎಂದರೆ ಸಾಸುವೆಯಷ್ಟು ಸಣ್ಣವಾದ ಕೆಂಪು ಬೊಕ್ಕೆಗಳು ಎದೆಯಲ್ಲಿ ಸ್ತನಗಳಲ್ಲೇ ಇರುವುದು. ಜಾಲಿನಿ ಎನ್ನುವುದು ಮಾಂಸಮಯವಾದ ಒಲೆಯನ್ನು ದೇಹದಮೇಲೆ ಹರಡಿರುವಂತೆ ಒಂದರ ಹತ್ತರ ಒಂದು ಕುರುಗಳಿರುವುದು. ವಿದಾರಿಕಾ ಎಂದರೆ ವಿದಾರಿ ಎಂಬ ಗೆಣಸಿನ ಗೆಡ್ಡೆಯಂತೆ ದಪ್ಪವಾಗಿ ಬಹಳ ಕಠಿನವಾಗಿರುವ ಬಾವಿಗೆ ವಿದಾರಿಕಾ ಎಂಬ ಹೆಸರು ವಿದ್ರಧಿ ಎಂಬುವುದು ಮುಂದೆ ಹೇಳುವ ವಿದ್ರಧಿ ಲಕ್ಷಣಗಳಿಂದಲೇ ಕೂಡಿರುವುದಕ್ಕೆ ಹೆಸರು. ಈ ಹತ್ತೂ ಮೇಹಪಮ್ಮಂಥವಾದ ವ್ರಣಗಳು.

ಮೇದೋರೋಗಸ್ತಥಾಚೈಕೋ ಶೋಥರೋಗಾನವಸ್ಮೃತಾಃ ॥೬೫॥
ದೋಷೈಃಪೃಥಕ್ಸಮಸ್ತೈಸ್ಸರ್ವೈರಭಿಘಾತಾದ್ವಿಷಾದಪಿ ॥

ಮೇದೋರೋಗವೆಂದರೆ ಸಾಮಾನ್ಯವಾಗಿ ಲೋಕದಲ್ಲಿ ಬೊಜ್ಜು ಎಂದು ಕರೆಯುವ ರೋಗವು ಒಂದು ವಿಧ ಶೋಥರೋಗವೆಂದರೆ ಮೈ, ಕೈ, ಕಾಲುಗಳಲ್ಲಿ ಬಾವು ಬರುವುದು, ಇದು ಒಂಬತ್ತು ವಿಧ. ವಾತಜನ್ಯಶೋಥ, ಪಿತ್ತಜನ್ಯಶೋಥ, ಶ್ಲೇಷ್ಮಜನ್ಯಶೋಥ, ವಾತಪಿತ್ತಜನ್ಯ, ವಾತ ಶ್ಲೇಷ್ಮಜನ್ಯ, ಪಿತ್ತಶ್ಲೇಷ್ಮಜನ್ಯ, ತ್ರಿದೋಷಪ್ರಕೋಪಜನ್ಯ, ಯಾವದಾದರೂ ಪೆಟ್ಟು ಬಿದ್ದು ಮೈಯೂದುವುದು, ವಿಷಾದಿಗಳನ್ನು ಪಾನಮಾಡುವುದರಿಂದ ಮೈಯ್ಯೂದುವುದು, ಎಂಬದಾಗಿ ಒಂಬತ್ತು ವಿಧ. ಕಳ್ಳಿಹಾಲು, ಎಕ್ಕದ ಹಾಲು, ಗೇರು ಇವುಗಳೆಲ್ಲಾ ಈ ವಿಷವರ್ಗದಲ್ಲಿ ಸೇರಿದ ಶೋಥೆಯನ್ನು ಹುಟ್ಟಿಸತಕ್ಕವುಗಳೇ.

ವೃದ್ಧಯಸ್ಸಪ್ತಗದಿತಾವಾತಾತ್ಪಿತ್ತಾತ್ಕಫೇನಚ ॥ ೬೬ ॥
ರಕ್ತೇನಮೇದಸಾಮೂತ್ರಾದಂತ್ರವೃದ್ಧಿಶ್ಚ ಸಪ್ತಮೀ ॥

ವೃದ್ಧಿ ಅಂದರೆ ವೃಷಣ ಬಾತುಹೋಗುವ ರೋಗ. ಇದು ಏಳು ವಿಧ. ಗಾಳಿ ತುಂಬಿದ ಚರ್ಮದ ಚೀಲದಂತಿರುವದು ವಾತವೃದ್ಧಿ, ಪಕ್ವವಾದ ಅತ್ತೀಹಣ್ಣಿನಂತೆ ಕೆಂಪಗೆ ವೇದನೆಯಿರುವುದು ಪಿತ್ತವೃದ್ಧಿ, ಸ್ವಲ್ಪನೋವು, ನವೆ ಇವುಗಳಿಂದ ಕೂಡಿ ವೃಷಣವು ಒರಟಾಗಿರುವುದು ಶ್ಲೇಷ್ಮಜನ್ಯವೃದ್ಧಿ, ಪಿತ್ತಜನ್ಯವೃದ್ಧಿಯ ಲಕ್ಷಣಗಳ ಜೊತೆಯಲ್ಲಿ ವೃಷಣದಮೇಲೆ ಕೆಂಪು, ಕಪ್ಪು ಬೊಕ್ಕೆಗಳಿದ್ದರೆ ರಕ್ತಜವೃದ್ಧಿ ಎಂದು ಹೆಸರು, ಕಫವೃದ್ಧಿಯ ಲಕ್ಷಣಗಳೇ ಇದ್ದು ತಾಳಫಲದ ಹಾಗೆ ವೃಷಣಗಳು ನಿತ್ಯವೂ ದೊಡ್ಡದಾಗುತ್ತಿರುವದು ಮೇದೋಜವೃದ್ಧಿ, ಮೂತ್ರವೇಗವನ್ನು ತಡೆಯುವ ಸ್ವಭಾವದವರ

ವೃಷಣಗಳು ನೀರಿನ ಪಕಾಲಿಗಳಂತೆ ದೊಡ್ಡದಾಗುತ್ತಿರುತ್ತವೆ, ಇದು ಮೂತ್ರಜವೃದ್ಧಿ, ಸೂಕ್ಷ್ಮಾಂತ್ರವು ವಂಕ್ಷಣಗಳಲ್ಲಿರತಕ್ಕ ಸಂಧಿಗಳಿಂದ ಅಂದರೆ ದ್ವಾರಗಳಿಂದ ವೃಷಣದೊಳಗೆ ಇಳಿಯುವದು ಅಂತ್ರಜ ವೃಷಣವೃದ್ಧಿ ಎನ್ನಿಸಿಕೊಳ್ಳುತ್ತದೆ.

ಅಂಡವೃದ್ಧಿಸ್ತಥಾಚೈಕಾತಥೈಕಾಗಂಡಮಾಲಿಕಾ ॥ ೬೭ ॥
ಗಂಡಾಲಜೀತುಚೈಕಾಸ್ಯಾತ್......................॥

ಅಂಡವೃದ್ಧಿ ಎಂಬ ರೋಗವು ಒಂದೇ ವಿಧ. ಗಂಡಮಾಲಾ ಎಂಬ ರೋಗವು ಒಂದು ವಿಧ; ಕಂಠದಸುತ್ತಲೂ ಆಗಲಿ, ಕಂಕುಳಿನಲ್ಲಿ ಆಗಲಿ, ಗೆಜ್ಜೆಕಟ್ಟಿನಲ್ಲಿಯಾಗಲಿ ಬೋರೇಹಣ್ಣು ನೆಲ್ಲಿಕಾಯಿಗಳಷ್ಟು ಪ್ರಮಾಣಗಳಾಗಿ ಮಾಲೆಯ ಹಾಗೆ ಗಂಟುಗಳೇಳುವುದೇ ಗಂಡಮಾಲಾ ರೋಗವೆನ್ನಿಸುತ್ತದೆ. ಗಂಡಾಲಜೀ ಎಂಬ ರೋಗ ಒಂದುವಿಧ, ಕಂಠಪ್ರದೇಶದಲ್ಲಿ ದೊಡ್ಡ ಬಿಲ್ವದ ಕಾಯಿನಂತಹ ಒಂದು ಗಂಟು ಪ್ರತಿನಿತ್ಯವೂ ದೊಡ್ಡದಾಗುತ್ತಿದ್ದರೆ ಅವಕ್ಕೆ ಗಂಡಾಲಜಿ ಅಥವಾ ಗಲಗಂಡವೆಂಬ ಹೆಸರಿದೆ.

..... ............ ........ಗ್ರಂಥಯೋನವಧಾಮತಾಃ ||
ತ್ರಿಭಿರ್ದೋಷೈಸ್ತ್ರಯೋರಕ್ತಾಚ್ಛಿರಾಭಿರ್ಮೇದಸೋವ್ರಣಾತ್ ||೬೮||
ಅಸ್ಥ್ನಾಮಾಂಸೇನನವಮಃ... ......... ........॥

ಗ್ರಂಥಿರೋಗವೆಂದರೆ ವ್ರಣಜನಕವಾದ ಗಂಟುಗಳು ಶರೀರದಲ್ಲಿ ಏಳುವುದು ಒಂಬತ್ತುವಿಧ. ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯ, ರಕ್ತಜನ್ಯ, ನರಗಳಲ್ಲಿ ದೋಷವು ಸೇರಿ ಹುಟ್ಟತಕ್ಕದ್ದು, ಮೇದಸ್ಸಿನಿಂದ ಹುಟ್ಟತಕ್ಕದ್ದು , ವ್ರಣದಿಂದ ಹುಟ್ಟತಕ್ಕದ್ದು, ಅಸ್ಥಿದೋಷದಿಂದ ಹುಟ್ಟತಕ್ಕದ್ದು, ಮಾಂಸದೋಷದಿಂದ ಹುಟ್ಟತಕ್ಕದ್ದು ಎಂಬದಾಗಿ.

. . ........... .... ಷಡ್ವಿಧಂಸ್ಯಾತ್ತಥಾರ್ಬುದಂ ||
ವಾತಾತ್ಪಿತ್ತಾತ್ಕಫಾದ್ರಕ್ತಾನ್ಮಾಂಸಾದಪಿಚಮೇದಸಃ ॥ ೬೯ ॥

ಅರ್ಬುದವೆಂದರೆ ಬಾವು, ಇದು ಆರುವಿಧ, ವಾತಜನ್ಯ, ಪಿತ್ತಜನ್ಯ, ಕಫಜನ್ಯ, ರಕ್ತಪ್ರಕೋಪಜನ್ಯ, ಮಾಂಸಜನ್ಯ, ಮೇದೋಜನ್ಯ ಎಂಬದಾಗಿ

ಶ್ಲೀಪದಂಚತ್ರಿಧಾಪ್ರೋಕ್ತಂವಾತಾತ್ಪಿತ್ತಾತ್ಕಫಾದಪಿ ||

ಶ್ಲೀಪದವೆಂದರೆ ಆನೆಕಾಲು ಎಂಬ- ಕಾಲಿಗೇನೇ ಬೋದು ಬರುವ ಒಂದು ವಿಧವಾದ ರೋಗ. ಇದು ಮೂರುವಿಧ, ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯವೆಂಬದಾಗಿ.

ವಿದ್ರಧಿಃಷಡ್ವಿಧಃಖ್ಯಾತೋವಾತಪಿತ್ತಕಫೈಸ್ತ್ರಯಃ ॥ ೭೦ ॥
ರಕ್ತಾತ್ಕ್ಷತಾತ್ತ್ರಿದೋಷೈಶ್ಚ..........................||

ವಿದ್ರಧಿ ಎಂದರೆ ಇದೊಂದು ವಿಧವಾದ ಉರಿಯಿಂದಕೂಡಿದ ವ್ರಣ, ಇದು ಆರುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ರಕ್ತಪ್ರಕೋಪಜನ್ಯ, ಪೆಟ್ಟು ಬೀಳುವುದರಿಂದ ಉಂಟಾಗುವ ವಿದ್ರಧಿ ಕೆಲವರು ಇದನ್ನು ತೊಡೆವಾಳವೆಂದು ಕರೆಯುತ್ತಾರೆ.

.......................ವ್ರಣಾಃಪಂಚದಶೋದಿತಾಃ ||

ಶ್ಲೇಷ್ಮಾಂಚತತ್ಪಾಗ್ಭೇದಾಸ್ಸ್ಯುರಾಂಗಂತುರ್ದೇಹಜಸ್ತಥಾ ॥ ೭೧ ॥
ಕ್ಷುದ್ರೋದುಷ್ಟಶ್ಚವಿಜ್ಞೇಯಸ್ತತ್ವಂಖ್ಯಾಕಥ್ಯತೇಪೃಥಕ್ ॥
ವಾತವ್ರಣಃಪಿತ್ತಜಶ್ಚಕಫಜೋರಕ್ತಜೋವ್ರಣಃ ॥ ೭೨ ॥
ವಾತಪಿತ್ತಭವಶ್ಚಾನ್ಯೋವಾತಶ್ಲೇಷ್ಮಭವಸ್ತಥಾ ॥
ತಥಾಪಿತ್ತಕಫಾಭ್ಯಾಂಚಸನ್ನಿಪಾತೇನಚಾಷ್ಟಮಃ ॥ ೭೩ ॥
ನವಮೋವಾತರಕ್ತೇನದಶಮೋರಕ್ತಪಿತ್ತತಃ ॥
ಶ್ಲೇಷ್ಮರಕ್ತಭವಶ್ಚಾನ್ಯೋವಾತಪಿತ್ತಾಸೃಗುದ್ಭವಃ ॥ ೭೪ ॥
ವಾತಶ್ಲೇಷ್ಮಾಸೃಗುತ್ಪನ್ನಃಪಿತ್ತಶ್ಲೇಷ್ಮಾಸೃಸಂಭವಃ ॥
ಸನ್ನಿಪಾತಾಸೃಗುದ್ಭೂತಇತಿಪಂಚದಶವ್ರಣಾಃ ॥ ೭೫ ॥

ವ್ರಣಗಳು ಹದಿನೈದುವಿಧ. ಮೊದಲು ವ್ರಣಗಳನ್ನು ನಾಲ್ಕುಭೇದಮಾಡಿಕೊಳ್ಳಬೇಕು. ಸಹಜ, ಆಗಂತುಕ, ಕ್ಷುದ್ರ, ದುಷ್ಟ ಎಂಬದಾಗಿ ಸಹಜ ಅಥವಾ ಶರೀರಜ ವ್ರಣವು ದೇಹಗತವಾದ ಧಾತುಪ್ರಕೋಪದಿಂದ ಹುಟ್ಟುತ್ತದೆ. ಆಗಂತುಕ ವ್ರಣವು ಶಸ್ತ್ರಾದಿಗಳಿಂದ ಪೆಟ್ಟು ಬೀಳುವುದು, ತಾನೇ ಎಲ್ಲಿಂದಲಾದರೂ ಬೀಳುವುದು ಇಂತಹ ಕಾರಣಗಳಿಂದ ಹುಟ್ಟುತ್ತದೆ. ಕ್ಷುದ್ರವ್ರಣವು ಅಲ್ಪಕಾರಣಗಳಿಂದ ಹುಟ್ಟಿದ್ದಾಗಿರುತ್ತದೆ. ದುಷ್ಟವ್ರಣವು ದೋಷವೈಷಮ್ಯಜನ್ಯವಾದದ್ದು. ವ್ರಣಗಳ ಹದಿನೈದು ಪ್ರಕಾರಗಳ್ಯಾವವೆಂದರೆ:— ವಾತಪ್ರಕೋಪಜನ್ಯವಾದ ವಾತವ್ರಣ, ಪಿತ್ತಪ್ರಕೋಪಜನ್ಯವಾದ ಪಿತ್ತವ್ರಣ, ಕಫಪ್ರಕೋಪಜನ್ಯವಾದ ಕಫವ್ರಣ, ರಕ್ತಪ್ರಕೋಪಜನ್ಯವಾದ ರಕ್ತವ್ರಣ, ವಾತ ಮತ್ತು ಪಿತ್ತಗಳೆಂಬ ದ್ವಂದ್ವದೋಷಜನ್ಯ, ವಾತಶ್ಲೇಷ್ಮಜನ್ಯ, ಪಿತ್ತಶ್ಲೇಷ್ಮಜನ್ಯ, ತ್ರಿದೋಷಸನ್ನಿಪಾತಜನ್ಯ, ವಾತರಕ್ತರೋಗಪ್ರಯುಕ್ತ ವ್ರಣವಂದು, ರಕ್ತಪಿತ್ತಜನ್ಯವಾದ ವ್ರಣ ಒಂದು, ಶ್ಲೇಷ್ಮ ಮತ್ತು ರಕ್ತಗಳಿಂದ ಹುಟ್ಟಿದ ವ್ರಣ ಒಂದು, ವಾತಪಿತ್ತರಕ್ತಜನ್ಯ, ವಾತಶ್ಲೇಷ್ಮರಕ್ತಜನ್ಯ, ಪಿತ್ತಶ್ಲೇಷ್ಮರಕ್ತಜನ್ಯ, ತ್ರಿದೋಷಸನ್ನಿಪಾತ ಮತ್ತು ರಕ್ತಜನ್ಯ ಒಂದು ಈರೀತಿಯಾಗಿ ದೋಷಭೇದದಿಂದ ವ್ರಣಗಳು ಹದಿನೈದುವಿಧ.

ಸದ್ಯೋವ್ರಣಸ್ತ್ವಷ್ಟಧಾಸ್ಯಾದವಿಕ್ಲೃಪ್ತವಿಲಂಬಿತೌ ॥
ಛಿನ್ನಭಿನ್ನಪ್ರಚಲಿತಾಘೃಷ್ಟವಿದ್ಧನಿಪಾತಿತಃ ॥ ೭೬ ॥

ಸದ್ಯೋವ್ರಣವೆಂದರೆ ಆಗಂತು ವ್ರಣಕ್ಕೇನೆ ಹೆಸರು. ಇದು ಎಂಟು ವಿಧ. ಅವಿಕ್ಲೃಪ್ತ ಎನ್ನುವುದು ಯಾವುದಾದರೂ ಶಸ್ತ್ರದಿಂದ ಕೊಯ್ಯಲ್ಪಟ್ಟ ವ್ರಣದ ಹೆಸರು. ವಿಲಂಬಿತವೆನ್ನುವದು ಮಾಂಸವು ಜೋಲುತ್ತಿರುವ ವ್ರಣ, ಛಿನ್ನವೆಂದರೆ ಶಸ್ತ್ರದಿಂದ ಉದ್ದುದ್ದವಾಗಿಯೋ ಅಡ್ಡಲಾಗಿಯೋ ಕತ್ತರಿಸಲ್ಪಟ್ಟ ವ್ರಣ. ಭಿನ್ನವೆಂದರೆ ಯಾವುದಾದರೂ ಮೊನೆಯಾದ ಆಯುಧದಿಂದ ಶರೀರದ ಒಳಭಾಗದಲ್ಲಿರುವ ಕೋಷ್ಠಗಳು ತೂತು ಕೆಡವಲ್ಪಟ್ಟರೆ ಅದಕ್ಕೆ ಹೆಸರು. ಪ್ರಚಲಿತವೆನ್ನುವುದು ಯಾವುದಾದರೂ ಬಲವಾದ ಪೆಟ್ಟಿನಿಂದ ಅಸ್ಥಿ ಮಾಂಸಾದಿಗಳು ಬಾತು ವ್ರಣವಾಗಿದ್ದರೆ ಅದಕ್ಕೆ ಹೆಸರು. ಘೃಷ್ಟವೆಂದರೆ ಘೃಷ್ಟವೆನ್ನುವುದು ಯಾವುದಾದರೂ ತಿಕ್ಕಾಟದಿಂದ ಶರೀರದ ಮೇಲಿನ ಚರ್ಮವು ಹಾರಿಹೋಗಿ ವ್ರಣವಾಗಿರುವುದಕ್ಕೆ ಹೆಸರು. ವಿದ್ಧವೆನ್ನುವುದು ಸೂಕ್ಷ್ಮವಾದ ತುದಿಯುಳ್ಳ ಸೂಜಿ ಮೊದಲಾದವುಗಳಿಂದ ಸಂಭವಿಸಿದ ಗಾಯಕ್ಕೆ ಹೆಸರು. ನಿಪಾತಿತ

ವೆನ್ನುವುದು ಬಿದ್ದು ಯಾವುದಾದರೂ ಅವಯವಕ್ಕೆ ಸಂಭವಿಸುವ ಗಾಯಕ್ಕೆ ಹೆಸರು.

**ಕೋಷ್ಠಭೇದೋದ್ವಿಧಾಪ್ರೋಕ್ತಶ್ಛಿನ್ನಾಂತ್ರೋನಿಸ್ಸೃತಾಂತ್ರಕಃ ||**

ಕೋಷ್ಠಭೇದವೆಂಬ ರೋಗವು ಎರಡುವಿಧ. ಛಿನ್ನಾಂತ್ರವೆಂಬದೊಂದು, ನಿಸ್ಸೃತಾಂತ್ರವೆಂಬದೊಂದು; ಛಿನ್ನಾಂತ್ರವೆಂದರೆ ಕರಳುಕತ್ತರಿಸಿ ಹೋಗಿರುವುದು, ನಿಸ್ಸೃತಾಂತ್ರವೆಂದರೆ ಕರುಳು ಹೊರಗೆ ಹೊರಟಿರುವುದು.

**ಅಸ್ಥಿಭಂಗೋಷ್ಟಧಾಪ್ರೋಕ್ತೋಭಗ್ನಪಿಷ್ಟವಿದಾರಿತೌ || ೭೭ ||**
**ವಿವರ್ತಿತಶ್ಚವಿಶ್ಲಿಷ್ಟಸ್ತಿರ್ಯಕ್ ಕ್ಷಿಪ್ತಸ್ತ್ವಧೋಗತಃ ||**
**ಊರ್ಧ್ವಗಸ್ಸಂಧಿಭಗ್ನಶ್ಚವಹ್ನಿದಗ್ಧಶ್ಚತುರ್ವಿಧಃ || ೭೮ ||**
**ಪ್ಲುಷ್ಟೋವಿದಗ್ಧೋದುರ್ದಗ್ಧಃಸಮ್ಯಗ್ದಗ್ಧಃಪ್ರಕೀರ್ತಿತಃ ||**

ಅಸ್ಥಿಭಂಗ ಎಂದರೆ ಎಲುವು ಮುರಿಯುವುದು ಎಂಟುವಿಧ; ಈ ಅಸ್ಥಿಭಂಗಕ್ಕೆ ಭಗ್ನ ಎಂಬದಾಗಿಯೂ ಹೆಸರು. ಪಿಷ್ಟ, ವಿದಾರಿತ, ವಿವರ್ತಿತ, ವಿಶ್ಲಿಷ್ಟ, ತಿರ್ಯಕ್ಕ್ಷಿಪ್ತ, ಅಧೋಗತ, ಊರ್ಧ್ವಗ, ಸಂದಿಭಗ್ನ ಎಂಬದಾಗಿ. ಪಿಷ್ಟ ಎಂದರೆ ಎಲುವು ಯಾವುದಾದರೂ ಪೆಟ್ಟಿನಿಂದ ಹಿಟ್ಟಿನಂತೆ ಪುಡಿಯಾಗಿ ಹೋಗುವುದು, ಅಸ್ಥಿಗಳು ಶೀಳಿಹೋಗಿರುವುದು ವಿದಾರಿತವೆನ್ನಿಸಿಕೊಳ್ಳುತ್ತದೆ. ವಿವರ್ತಿತವೆಂದರೆ ಮುರಿದುಹೋದ ಎಲುಬು ಒಂದು ಕಡೆಗೆ ತಿರಿಗಿಕೊಂಡು ತೊಂದರೆಪಡಿಸುವುದು. ವಿಶ್ಲಿಷ್ಟವೆಂದರೆ ಸ್ವಲ್ಪಮಟ್ಟಿಗೆ ಸಂಧಿಗಳ ಬಂಧನ ಸಡಲಿರುವುದು, ತಿರ್ಯಕ್ಕ್ಷಿಪ್ತವೆಂದರೆ ಕೀಲುತಪ್ಪಿದಮೇಲೆ ಯಲುವು ಮೊದಲಿನಂತಿಲ್ಲದೆ ಸ್ವಲ್ಪ ಅಡ್ಡಲಾಗುವುದು. ಅಧೋಗತವೆಂದರೆ ಮುರಿದ ಎಲುವು ಕೆಳಗೊಂದು ಮೇಲೊಂದು ಆಗುವುದು. ಊರ್ಧ್ವಗವೆಂದರೆ ಹಿಂದಲಡಕ್ಕೆ ಪ್ರತಿಕೂಲವಾಗಿ ಮುರಿದದ್ದು ಮೇಲಕ್ಕೆ ಬರುವುದು. ಸಂಧಿಭಗ್ನವೆಂದರೆ ಕೀಲಿನಲ್ಲಿಯೇ ಮುರಿದುಹೋಗಿರುವುದು. ಬೆಂಕಿಯಲ್ಲಿ ಸುಟ್ಟವ್ರಣವು ನಾಲ್ಕುವಿಧ, ಪ್ಲುಷ್ಟ, ವಿದಗ್ಧ, ದುರ್ದಗ್ಧ, ಸಮ್ಯಗ್ದಗ್ಧ ಎಂಬದಾಗಿ.

**ನಾಡ್ಯಃಪಂಚಸಮಾಖ್ಯಾತಾವಾತಪಿತ್ತಕಫೈಸ್ತ್ರಿಧಾ ||**
**ತ್ರಿದೋಷೈರಪಿಶಲ್ಯೇನ.......................... .||**

ನಾಡೀವ್ರಣ ಎಂದರೆ ನಾರುಹುಣ್ಣು. ಇದು ಐದುವಿಧ. ವಾತಜನ್ಯ, ಪಿತ್ತಜನ್ಯ, ಕಫಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ಯಾವುದ್ದಾದರೂ ಆಗಂತುಕ ಕಾರಣಜನ್ಯ ಎಂಬದಾಗಿ.

**... ......................ತಥಾಷ್ಟೌಸ್ಯುರ್ಭಗಂಧರಾಃ ||**
**ಶತಪೋನಸ್ತುಪವನಾದುಷ್ಟ್ರಗ್ರೀವಶ್ಚಪಿತ್ತತಃ || ೮೦ ||**
**ಪರಿಸ್ರಾವೀಕಫಾದ್ವಲ್ಲೀಯಯುಜುರ್ವಾತಕಫೋದ್ಭವಃ ||**
**ಪರಿಕ್ಷೇಪೀಮರುತ್ಪಿತ್ತಾದರ್ಶೋಜಃಕಫಪಿತ್ತತಃ || ೮೧ ||**
**ಆಗಂತುಜಾತಶ್ಚೋನ್ಮಾರ್ಗೀಶಂಬಾವರ್ತಸ್ತ್ರಿದೋಷಜಃ ||**

ಭಗಂದರವೆಂಬರೋಗವು ಎಂಟುವಿಧ. ಭಗಂದರವೆಂದರೆ ಸ್ತ್ರೀಯರ ಪ್ರಧಾನಾಂಗದ ಸಮೀಪದಲ್ಲಿಯೂ, ಗುದದ್ವಾರದ ಸಮೀಪದಲ್ಲಿಯೂ ಪ್ರಧಾನಾಂಗದ

ಹಾಗೆಯೇ ಅಂದರೆ ಅದರ ಆಕಾರದಲ್ಲಿಯೇ ಆಗತಕ್ಕ ವ್ರಣಕ್ಕೆ ಭಗಂದರವೆಂಬಹೆಸರು. ವಾತಪ್ರಚುರವಾದ ಈ ಭಗಂದರ ವ್ರಣಕ್ಕೆ ಶತಪೋನವೆಂಬ ಹೆಸರು. ಪಿತ್ತಪ್ರಧಾನವಾದ ವ್ರಣವು ಉಷ್ಟ್ರಗ್ರೀವವೆನ್ನಿಸಿಕೊಳ್ಳುತ್ತದೆ. ಕಫಪ್ರಧಾನವಾದ ವ್ರಣವು ಯಾವಾಗ್ಗೂ ಪೂಯಶೋಣಿತಾದಿಗಳನ್ನು ಸ್ರವಿಸುತ್ತಲೇ ಇರುತ್ತದೆ, ಇದಕ್ಕೆ ಪರಿಸ್ರಾವೀ ಎಂಬದಾಗಿ ಹೆಸರು ವಾತ ಮತ್ತು ಕಫಗಳೆಂಬ ದ್ವಂದ್ವದೋಷೋಲ್ಬಣವಾದ ವ್ರಣಕ್ಕೆ ಋಜುವೆಂಬ ಹೆಸರು. ವಾತ ಮತ್ತು ಪಿತ್ತಗಳೆಂಬ ಎರಡುದೋಷಜನ್ಯವಾದ ವ್ರಣಕ್ಕೆ ಪರಿಕ್ಷೇಪೀ ಎಂಬದಾಗಿ ಹೆಸರು. ಕಫ ಮತ್ತು ಪಿತ್ತಗಳೆಂಬ ದೋಷಗಳಿಂದ ಉತ್ಪನ್ನವಾದ ವ್ರಣಕ್ಕೆ ಅರ್ಶೋಭಗಂದರವೆಂದು ಹೆಸರು. ಆಗಂತುಕಗಳಾದ ಕಾರಣಗಳಿಂದ ಹುಟ್ಟಿದ ಭಗಂದರ ವ್ರಣಕ್ಕೆ ಉನ್ಮಾರ್ಗೀಭಗಂದರ ವ್ರಣವೆಂದು ಹೆಸರು. ತ್ರಿದೋಷಪ್ರಕೋಪಜನ್ಯವಾದ ಭಗಂದರ ವ್ರಣಕ್ಕೆ ಶಂಬೂಕಾವರ್ತವೆಂಬದಾಗಿ ಹೆಸರು.

**ಮೇಢ್ರೇಪಂಚೋಪದಂಶಾಸ್ಯುರ್ವಾತಪಿತ್ತಕಫೈಸ್ತ್ರಿಧಾ ॥ ೮೨ ॥**
**ಸನ್ನಿಪಾತೇನರಕ್ತಾಚ್ಚ...................... .... . .. ॥**

ಉಪದಂಶಗಳೆಂಬ ವ್ರಣವು ಐದುವಿಧ. ಉಪದಂಶವೆಂದರೆ ಶಿಶ್ನದಲ್ಲಿ ಸಂಭವಿಸತಕ್ಕ ವ್ರಣಗಳಿಗೆ ಹೆಸರು. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷ ಸನ್ನಿಪಾತಜನ್ಯ, ರಕ್ತಜನ್ಯ ಎಂಬದಾಗಿ. ದುಷ್ಟಯೋನಿಸಂಬಂಧದಿಂದ ಶಿಶ್ನದಲ್ಲಿ ಹುಟ್ಟತಕ್ಕ ವ್ರಣವು ಆಗಂತುಕವಾದ ಆರನೆಯದೊಂದು ಜಾತಿಯ ಉಪದಂಶವಿದೆ. ಅದನ್ನು ಹೇಳಲಿಲ್ಲವೆಂಬುದೊಂದು ಆಕ್ಷೇಪ. ಆಗಂತುಕವಾದ ಉಪದಂಶವು ಕೂಡ ದೋಷಪ್ರಕೋಪಜನ್ಯವೇ ಆಗಿರುವುದರಿಂದ ಆಯಾ ದೋಷಪ್ರಕೋಪಜನ್ಯವಾದ ಉಪದಂಶದೊಳಗೇನೇ ಅಂತರ್ಭೂತವಾಗುತ್ತದೆಂದುಸಮಾಧಾನ

**. . .... . . . .. ಮೇಢ್ರೇಶೂಕಾಮಯಾಸ್ತಥಾ ॥**
**ಚತುರ್ವಿಂಶತಿರಾಖ್ಯಾತಾಲಿಂಗಾರ್ಶೋಗ್ರಥಿತಂತಥಾ ॥ ೮೩ ॥**
**ನಿವೃತ್ತಮವಮಂಥಶ್ಚಮೃದಿತಂಶತಪೋನಕಃ ॥**
**ಅಷ್ಠೀಲಿಕಾಸರ್ಷಪಿಕಾತ್ವಕ್ಪಾಕಶ್ಚಾವಪಾಟಿಕಾ ॥ ೮೪ ॥**
**ಮಾಂಸಪಾಕಸ್ಪರ್ಶಹಾನಿರ್ನಿರುದ್ಧಮಣಿರುತ್ತಮಾ ॥**
**ಮಾಂಸಾರ್ಬುದಂಪುಷ್ಕರಿಕಾಸಮ್ಮೂಢಪಿಡಕಾಲಜಿ ॥ ೮೫ ॥**
**ರಕ್ತಾರ್ಬುದಂವಿದ್ರಧಿಶ್ಚಕುಂಭಿಕಾತಿಲಕಾಲಕಃ ॥**
**ನಿರುದ್ಧಪ್ರಕಾಶಃಪ್ರೋಕ್ತಸ್ತಥೈವಪರಿವರ್ತಿಕಾ ॥ ೮೬ ॥**

ಶೂಕದೋಷವೆಂಬುವುದೊಂದು ವ್ರಣವಿಶೇಷವೇ. ಇದು ಸಹ ಪುರುಷರ ಪ್ರಧಾನಾವಯವವೆಂದರೆ ಶಿಶ್ನಕ್ಕೇನೇ ಸಂಭವಿಸಬಹುದಾದ ರೋಗ. ಇದು ಇಪ್ಪತ್ತು ನಾಲ್ಕು ವಿಧ. ಮೊದಲನೆಯದಕ್ಕೆ ಲಿಂಗಾರ್ಶಸ್ಸೆಂಬ ಹೆಸರು, ಇದು ಗುದದ್ವಾರದಲ್ಲಿ ಬರುವ ಅರ್ಶಸ್ಸಿನಂತೆಯೇ ಲಿಂಗದಲ್ಲಿ ಹುಟ್ಟತಕ್ಕ ಒಂದು ವಿಧದ ಚರ್ಮಕೀಲವಾಗಿದೆ. ಎರಡನೆಯದಕ್ಕೆ ಗ್ರಥಿತವೆಂಬದಾಗಿ ಹೆಸರು, ಗ್ರಥಿತವೆನ್ನುವುದು ಶಿಶ್ನವನ್ನು ಸ್ಥೂಲಮಾಡಿಕೊಳ್ಳಲು ಕಾಮಸೂತ್ರಾದಿಗಳಲ್ಲಿ ಹೇಳಿರುವ ಶೂಕವೆಂಬ ಒಂದು ಬಗೆಯ ವಿಷ

ಜಂತುವನ್ನು ಮರ್ದನಮಾಡಿ ಶಿಶ್ನಕ್ಕೆ ಲೇಪಮಾಡಿಕೊಳ್ಳೋಣದರಿಂದ ವಿಷದೋಷ ದಿಂದ ಶಿಶ್ನದಲ್ಲಿ ಸಂಭವಿಸತಕ್ಕ ಒಂದು ಒಗೆಯ ವ್ರಣ ನಿವೃತ್ತವೆನ್ನುವುದು. ಶಿಶ್ನದ ಮೇಲಿನ ಚರ್ಮವನ್ನು ಹಿಸಿಕಿಕೊಳ್ಳುವುದು, ಬಲವಂತವಾಗಿ ಹಿಂದಕ್ಕೆ ಎಳೆಯುವುದು ಮೊದಲಾದ ಕಾರಣಗಳಿಂದ ಗೌಸಣಿಗೆಯಂತಿರುವ ಶಿಶ್ನದ ಚರ್ಮವು ಹಿಂದಕ್ಕೆ ತೆರೆಯಪ್ಪಟ್ಟು ಆ ಚರ್ಮದ ಭಾಗದಲ್ಲಿ ಮತ್ತು ಶಿಶ್ನದ ಅಗ್ರಭಾಗ ಮಣಿಯಂತಿರುವುದರ ಸುತ್ತಲೂ ಉಂಟಾಗತಕ್ಕ ವ್ರಣಗಳಿಗೆ ನಿವೃತ್ತವೆಂಬ ಹೆಸರು. ಅವಮಂಥವೆಂದರೆ ಶಿಶ್ನದ ಮೇಲ್ಭಾಗದಲ್ಲಿ ಮಧ್ಯದಲ್ಲಿ ವ್ರಣಗಳಾಗಿ ಶ್ಲೇಷ್ಮ ಮತ್ತು ರಕ್ತದಿಂದುಂಟಾದ ಈ ವ್ರಣವು ಬಹಳ ನೋವಾಗಿರುವುದಕ್ಕೇನೇ ಅವಮಂಥವೆಂಬದಾಗಿ ಹೆಸರು ಪ್ರುದಿತವೆಂದರೆ ಕೈಯಿಂದ ಶಿಶ್ನವನ್ನು ಪದೇ ಪದೇ ಮರ್ದನಮಾಡಿಕೊಳ್ಳೋಣದ ರಿಂದ ವಾಯುವು ಪ್ರಕುಪಿತವಾಗಿ ಶಿಶ್ನವು ಊದಿಕೊಳ್ಳುವುದಕ್ಕೆ ಹೆಸರು ಶತ ಪೋನಕವೆಂದರೆ ಶಿಶ್ನದ ಮುಂಭಾಗದಲ್ಲಿರುವ ಮಣಿಯು ವ್ರಣವಾಗಿ ಸಣ್ಣ ಸಣ್ಣ ರಂಧ್ರಗಳು ಬಿದ್ದಿರುವುದಕ್ಕೆ ಹೆಸರು. ಅಷ್ಠೀಲಿಕಾ ಎಂದರೆ ಶಿಶ್ನದ ಮೇಲೆ ವಾತ ಪ್ರಕೋಪದಿಂದ ಕಠಿಣವಾದ ಗಂಟು ಬರುವುದು. ಸರ್ಷಪಿಕಾ ಎಂದರೆ ಶಿಶ್ನದ ಮೇಲೆ ಸಾಸುವೆಯ ಕಾಳಿನಷ್ಟು ಸಣ್ಣಗಾದ ಬೊಕ್ಕೆಗಳೇಳುವುದು ತ್ವಕ್ಪಾಕವೆಂದರೆ ಜ್ವರ ಮತ್ತು ಉರಿಯಿಂದ ಕೂಡಿ ಶಿಶ್ನದ ಮೇಗಣ ಚರ್ಮವೆಲ್ಲಾ ಪಕ್ವವಾಗಿ ಬಿಡುವುದು. ಅವಪಾಟಿಕವೆಂದರೆ ಶಿಶ್ನದ ಮೇಲಣ ಚರ್ಮ ಅಂದರೆ ತುದಿಯ ಚರ್ಮ ಕಿತ್ತು ಹೋಗಿರುವದಕ್ಕೆ ಹೆಸರು ಮಾಂಸಪಾಕವೆಂದರೆ ಶಿಶ್ನದ ಮಾಂಸದಂಡವು ಪಕ್ವ ವಾಗಿ ಒಡೆದುಹೋಗಿರುವುದಕ್ಕೆ ಹೆಸರು ಸ್ಪರ್ಶಹಾನಿ ಎಂದರೆ ಹಿಂದೆ ಹೇಳಿದಂತೆ ಶಿಶ್ನ ವೃದ್ಧಿಗಾಗಿ ಲೇಪಮಾಡಿಕೊಳ್ಳೋಣದರಿಂದ ಶಿಶ್ನದ ಮೇಲಣ ಚರ್ಮವು ಕಿತ್ತು ಸ್ಪರ್ಶಜ್ಞಾನವೇ ನಾಶವಾಗಿ ಹೋಗುವುದಕ್ಕೆ ಸ್ಪರ್ಶಹಾನಿ ಎಂದು ಹೆಸರು ನಿರುದ್ಧ ಮಣಿ ಎಂದರೆ ಶಿಶ್ನದ ಮುಂಭಾಗದ ಮಣಿಯಲ್ಲಿ ಮೂತ್ರ ಹೊರಡುವ ದ್ವಾರವು ರುದ್ಧ ವಾಗಿ ಹೋಗಿ ಸ್ವಲ್ಪ ಸ್ವಲ್ಪ ಮೂತ್ರ ಹೊರಡುವುದು ನಿರುದ್ಧಮಣಿ ಎನ್ನಿಸಿಕೊಳ್ಳು ತ್ತದೆ ಉತ್ತಮ ಎಂದರೆ ಉದ್ದಿನ ಕಾಳಿನಂತೆ, ಹೆಸರು ಕಾಳಿನಂತೆ ಕೆಂಪಾದ ಬೊಕ್ಕೆ ಗಳು ರಕ್ತ ಮತ್ತು ಪಿತ್ತ ದೋಷದಿಂದ ಶಿಶ್ನದ ಮೇಲೆ ಏಳುವುದಕ್ಕೆ ಹೆಸರು. ಮಾಂಸಾ ರ್ಬುದವೆಂದರೆ ಶಿಶ್ನದ ಮೇಲೆ ಮಾಂಸದೋಷದಿಂದ ಏಳತಕ್ಕ ದೊಡ್ಡ ಬಾವಿಗೆ ಹೆಸರು. ಪುಷ್ಕರಿಕಾ ಎಂದರೆ ಕಮಲದ ಹುವ್ವಿನಂತೆ ದುಂಡಾಗಿ ಸಣ್ಣ ಬೊಕ್ಕೆಗಳು ಶಿಶ್ನದ ಮೇಲೆ ಅದರ ಸುತ್ತುಮುತ್ತಲೂ ಏಳುವುದಕ್ಕೆ ಪುಷ್ಕರಿಕಾ ಎಂಬ ಹೆಸರು. ಸಮ್ಮೂಢಪಿಟಕಾ ಎಂದರೆ ಏಳತಕ್ಕ ಬಾವಿಗೆ ಮೂಗುಮುಸಣೆ ಒಂದೂ ಇಲ್ಲದಿರು ವುದಕ್ಕೆ ಹೆಸರು. ಅಲಜಿ ಎಂದರೆ ಹಿಂದೆ ಹೇಳಿದ ಅಲಜಿ ಎಂಬ ವ್ರಣದ ಲಕ್ಷಣ ಗಳೇ ಶಿಶ್ನದ ಮೇಲಿರುವ ವ್ರಣಕ್ಕೂ ಇದ್ದರೆ ಅಲಜಿ ಎಂಬದಾಗಿಯೇ ಹೆಸರು. ರಕ್ತಾರ್ಬುದವೆಂದರೆ ಕಪ್ಪು ಮತ್ತು ಕೆಂಪು ಬೊಕ್ಕೆಗಳು ಶಿಶ್ನದ ಮೇಲೆ ಸುತ್ತು ಮುತ್ತಲೂ ಇರುವುದು, ಮೂತ್ರಕೋಶದಲ್ಲಿ ಅತಿ ವೇದನೆಯಿರುವುದು ಇದಕ್ಕೆ ಹೆಸರು. ವಿದ್ರಧಿ ಎನ್ನುವುದು ರಕ್ತ ಮತ್ತು ಪಿತ್ತ ದೋಷದಿಂದ ಉತ್ಪನ್ನವಾದ ನೇರಳ ಬೀಜ ದಂತಹ ಶಿಶ್ನದ ಮೇಲಿನ ವ್ರಣ. ಕುಂಭಿಕಾ ಎನ್ನುವುದು ಶಿಶ್ನದ ಹತ್ತರ ಏಳುವ ದುಂಡಾದ ಬಾವು. ತಿಲಕಾಲಕವೆನ್ನುವುದು ಕಪ್ಪು ಮತ್ತು ನಾನಾ ವಿಧ ಚಿತ್ರ

ವರ್ಣವೆ ಶಿಶ್ನದ ಮೇಲೆಲ್ಲಾ ಏಳುವ ಸಣ್ಣ ಬೊಕ್ಕೆಗಳು. ನಿರುದ್ಧಪ್ರಕಾಶನೆಂದರೆ ಶಿಶ್ನದ ಮೇಲಿನ ಗೌಸು ಮುಂಭಾಗದಲ್ಲಿ ವ್ರಣದಿಂದ ಕೂಡಿ ಹೋಗಿ ಮೂತ್ರ ಹೊರಡಲು ಮುಂಭಾಗದಲ್ಲಿ ತಡೆಯುವುದಕ್ಕೆ ಹೆಸರು. ಈ ರೀತಿ ಇಪ್ಪತ್ತು ನಾಲ್ಕು ವಿಧ.

ಕುಷ್ಠಾನ್ಯಷ್ಟಾದಶೋಕ್ತಾನಿವಾತಾತ್ಕಾಪಾಲಿಕಂಭವೇತ್ ||
ಪಿತ್ತೇನೋದುಂಬರಂಪ್ರೋಕ್ತಂಕಫಾನ್ಮಂಡಲಚರ್ಚಿಕೇ || ೮೭ ||
ಮರುತ್ಪಿತ್ತಾದೃಷ್ಯಜಿಹ್ವಂಶ್ಲೇಷ್ಮವಾತಾದ್ವಿಪಾದಿಕಾ ||
ತಥಾಸಿಧ್ಮೈಕಕುಷ್ಠಂಚಕಿಟಿಭಂಚಾಲಸಂತಥಾ || ೮೮ ||
ಕಫಪಿತ್ತಾತ್ತ್ವನರ್ದದ್ರೂಃಪಾಮಾವಿಸ್ಫೋಟಕಂತಥಾ ||
ಮಹಾಕುಷ್ಠಂಚರ್ಮದಳಂಪುಂಡರೀಕಂಶತಾರುಕಂ || ೮೯ ||
ತ್ರಿದೋಷೈಃಕಾಕಣಾಜ್ಞೇಯಂತಥಾನ್ಯತ್ಶ್ವಿತ್ರಸಂಜ್ಞಿತಂ ||
ತಥಾವಾತೇನಪಿತ್ತೇನಶ್ಲೇಷ್ಮಣಾಚತ್ರಿಧಾಭವೇತ್ || ೯೦ ||

ಕುಷ್ಠರೋಗವು ಹದಿನೇಟು ವಿಧ, (ಕುಷ್ಠರೋಗವೆಂದರೆ ಶರೀರದಲ್ಲಿ ಹುಟ್ಟತಕ್ಕ ಒಂದು ವಿಧವಾದ ಚರ್ಮರೋಗ) ವಾತಪ್ರಕೋಪಜನ್ಯವಾದ ಕುಷ್ಠರೋಗಕ್ಕೆ ಕಪಾಲಕುಷ್ಠವೆಂಬ ಹೆಸರು. ಇದರಲ್ಲಿ ಚರ್ಮವೆಲ್ಲಾ ಒಡಕು ಮಡಕೆಯ ಚೂರಿನಂತೆ ಕಪ್ಪಗೆ ಒರಟಾಗಿರುತ್ತದೆ. ಪಿತ್ತಪ್ರಕೋಪದಿಂದ ಹುಟ್ಟುವ ಕುಷ್ಠಕ್ಕೆ ಉದುಂಬರ ಕುಷ್ಠವೆಂದು ಹೆಸರು. ಇದರಲ್ಲಿ ಚರ್ಮದ ಮೇಲೆಲ್ಲಾ ಅತ್ತಿಯ ಸಣ್ಣ ಕಾಯಿನಂತೆ ಗಂಟುಗಳಾಗುತ್ತವೆ. ಮಂಡಲಾಕಾರವಾಗಿ ಅಂದರೆ ದುಂಡಾಗಿ ಕೆಂಪು ಮತ್ತು ಬಿಳುಪಾದ ಬೊಕ್ಕೆಗಳು ಮೈಯಲ್ಲೆಲ್ಲಾ ಸೂಸುವುದಕ್ಕೆ ಮಂಡಲಕುಷ್ಠವೆಂದು ಹೆಸರು. ನವೆ ಮತ್ತು ಉರಿ ಇವುಗಳಿಂದ ಯುಕ್ತವಾಗಿ ಶರೀರದ ಮೇಲೆ ಏಳುವ ಬೊಕ್ಕೆಗಳಿಗೆ ವಿಚರ್ಚಿಕೆ ಎಂಬ ಹೆಸರು. ಈ ಮಂಡಲ ಮತ್ತು ವಿಚರ್ಚಿಕಗಳೆಂಬ ಕುಷ್ಠಗಳು ಕಫಪ್ರಕೋಪಜನ್ಯಗಳು. ವಾತ ಮತ್ತು ಪಿತ್ತಗಳೆಂಬ ಎರಡು ದೋಷಗಳ ಪ್ರಕೋಪದಿಂದ ಹುಟ್ಟತಕ್ಕ ಕುಷ್ಠರೋಗಕ್ಕೆ ಋಷ್ಯಜಿಹ್ವವೆಂಬ ಹೆಸರು. ಇದರಲ್ಲಿ ಚರ್ಮವೆಲ್ಲಾ ಹಸವಿನ ನಾಲಿಗೆಯಂತೆ ಒರಟಾಗಿ ಕೈಯಲ್ಲಿ ಮುಟ್ಟಿದರೆ ತರಕಲಾಗಿರುತ್ತದೆ. ಶ್ಲೇಷ್ಮ ಮತ್ತು ವಾಯು ಇವುಗಳ ಪ್ರಕೋಪದಿಂದ ಹುಟ್ಟುವ ಕುಷ್ಠಕ್ಕೆ ಉಪಾದಿಕಾ ಎಂದು ಹೆಸರು. ಇದರಲ್ಲಿ ಕೈ ಮತ್ತು ಕಾಲುಗಳು ಸಹ ಚೂರು ಚೂರಾಗಿ ಒಡೆದು ಹೋಗುತ್ತದೆ. ಸಿಧ್ಮ ಎಂಬುವುದೊಂದು ವಿಧವಾದ ಕುಷ್ಠ. ಇದರಲ್ಲಿ ಚರ್ಮವೆಲ್ಲಾ ಬೆಳ್ಳಗಾಗುತ್ತ ನವೆಯಾಗಿ ತಿಕ್ಕಿದರೆ ಉದುರುವುದಕ್ಕೆ ಪ್ರಾರಂಭವಾಗುತ್ತದೆ. ಧೂಮ್ರ ವರ್ಣ ಮತ್ತು ಕೆಂಪು ಬಣ್ಣಗಳಿಂದ ಕೂಡಿ ಮುಟ್ಟಿದರೆ ಒರಟಾಗಿ ನವೆಯೂ ಇದ್ದರೆ ಕಿಟಿಭವೆಂದು ಹೆಸರು. ಅಲಸವೆಂದರೆ ನವೆಯಿಂದ ಕೂಡಿದ ಕೆಂಪಾದ ಗುಳ್ಳೆಗಳು ಗಂಟುಗಳು ಏಳುತ್ತಿದ್ದರೆ ಅದಕ್ಕೆ ಹೆಸರು. ಕಫ ಮತ್ತು ಪಿತ್ತ ಇವುಗಳ ಪ್ರಕೋಪದಿಂದ ಹುಟ್ಟತಕ್ಕ ಒಂದು ಬಗೆಯ ಚರ್ಮರೋಗವು ದದ್ರೂ ಎನ್ನಿಸಿಕೊಳ್ಳುತ್ತದೆ. ಇದರಲ್ಲಿ ಮೈಮೇಲೆಲ್ಲಾ ಮಂಡಲಾಕಾರವಾದ ಬಿಳೀ ಸಣ್ಣ ಬೊಕ್ಕೆಗಳು ನವೆಯಿಂದ ಕೂಡಿಕೊಂಡಿರುತ್ತವೆ. ಪಾಮಾ ಎಂಬುವುದು ಮೈ ನವೆ ಮತ್ತು ಯಾವಾಗಲೂ ಜಿಗಟಾದ ರಸಿಕೆಯು ಬರುತ್ತಿರುವುದು ಇಂತಹ ಕುಷ್ಠಕ್ಕೆ ಹೆಸರು. ವಿಸ್ಫೋಟವೆಂಬ ಕುಷ್ಠವು ಕೈಯಲ್ಲಿ, ಕಂಕುಳಲ್ಲಿ, ಅಂಡಿನ ಮೇಲೆ ಸಹ ಎದ್ದು ಉರಿ

ಮತ್ತು ಸೋರುವುದು ಇವುಗಳಿಂದ ಕೂಡಿರುತ್ತವೆ. ಮಹಾಕುಷ್ಠವೆಂಬುವುದು ಹುಟ್ಟುವಾಗ್ಯ ಅಲ್ಪ ಕಾರಣಗಳಿಂದಲೇ ಹುಟ್ಟಿದರೂ ಬಹಳ ಜಾಗ್ರತೆಯಾಗಿ ರಸ ರಕ್ತಾದಿ ಧಾತುಗಳಲ್ಲೆಲ್ಲಾ ವ್ಯಾಪಿಸಿ ಸುಲಭವಾಗಿ ಚಿಕಿತ್ಸಿಸುವುದಕ್ಕಾಗದೆ ಬಹಳ ತೊಂದರೆಪಡಿಸುತ್ತದ. ಚರ್ಮದಳವೆಂಬ ಕುಷ್ಠದಲ್ಲಿ ಮೈ ಚರ್ಮವೆಲ್ಲಾ ಮೀನಿನ ಚರ್ಮದ ಹಾಗೆ ಪದರೆಪದರೆಯಾಗಿ ಕಾಣುತ್ತ ಆನೆಯ ಚರ್ಮದಂತೆ ಒರಟಾಗಿರುತ್ತದೆ ಪುಂಡರೀಕವೆಂಬ ಕುಷ್ಠದಲ್ಲಿ ಚರ್ಮವು ಬಿಳುಪಾದ ಕಮಲದ ಪತ್ರದ ಹಾಗೆ ತುದಿ ಯಲ್ಲಿ ಬೆಳ್ಳಗೂ ಮಧ್ಯಭಾಗದಲ್ಲಿ ಕೆಂಪಗೂ ಇರುತ್ತ ಉಬ್ಬಿಕೊಂಡಿರುತ್ತದೆ. ಶತಾ ರುಕವೆಂಬ ಕುಷ್ಠವು ಕೆಂಪಗೆ ಮತ್ತು ಧೂಮ್ರವರ್ಣವಾಗಿ ಮೈಯ್ಯಲ್ಲೆಲ್ಲಾ ವ್ರಣ ವಾಗಿರುತ್ತದ. ವಾತ ಪಿತ್ತ ಕಫಗಳೆಂಬ ಮೂರು ದೋಷಗಳೂ ಪ್ರಕುಪಿತಗಳಾಗಿ ಹುಟ್ಟತಕ್ಕ ಕಾಕಣವೆಂಬ ಕುಷ್ಠವು ಮಧ್ಯಭಾಗವೆಲ್ಲ ಕಪ್ಪಾಗಿಯೂ ಕೊನೆಯಲ್ಲಿ ಕೆಂಪಾಗಿಯೂ ಬಹಳ ವೇದನೆಯಿಂದ ಕೂಡಿ ಜಾಗ್ರತೆಯಾಗಿ ಪಕ್ವಕ್ಕೆ ಬಾರದೆ ತೊಂದರೆಪಡಿಸುತ್ತದ. ಶ್ವಿತ್ರವೆಂದರೆ ತೊನ್ನು. ಇದೂ ಒಂದು ಕುಷ್ಠರೋಗದಲ್ಲಿಯೇ ಸೇರತಕ್ಕ ರೋಗ. ಈ ಶ್ವಿತ್ರವೆಂಬ ರೋಗವು ವಾತಜನ್ಯ ಪಿತ್ತಜನ್ಯ ಶ್ಲೇಷ್ಮಜನ್ಯ ವೆಂಬದಾಗಿ ಮೂರು ವಿಧ.

ಕ್ಷುದ್ರರೋಗಾಷ್ಷಷ್ಟಿಸಂಖ್ಯಾಸ್ಸ್ಯುರಜಗಲ್ಲಿರಾ ಕರ್ಕರಾಬುರ್ದಂ ||
ಇಂದ್ರವೃದ್ಧಾಪನಸಿಕಾವಿವೃತಾಂಧಾಲಜೀತಥಾ || ೯೧ ||
ವರಾಹದಂಷ್ಟ್ರೋವಲ್ಮೀಕಂಕಚ್ಛಪೀತಿಲಕಾಲಕಃ ||
ಗರ್ದಭೀರಸಕಾಚೈವಯುವಪ್ರಖ್ಯಾವಿದಾರಿಕಾ || ೯೨ ||
ಕದರೋಮಸಕಶ್ಚೈವನೀಲಿಕಾಜಾಲಗರ್ದಭಃ ||
ಇರಿವೇಲ್ಲೀಜತುಮಣಿರ್ಗುದಭ್ರಂಶೋಗ್ನಿರೋಹಿಣೀ || ೯೩ ||
ಸನ್ನಿರುದ್ಧಗುದಃಕೋಠಃಕುನಖೋನುಶಯೀತಥಾ ||
ಪದ್ಮಿನೀಕಂಟಕಶ್ಚಿಪ್ಯಮಲಸೋಮುಖದೂಷಿಕಾ || ೯೪ ||
ಕಕ್ಷಾವೃಷಣಕಚ್ಛ್ವಶ್ಚಗಂಧಃಪಾಷಾಣಗರ್ದಭಃ ||
ರಾಜಕಾಚತಥಾವ್ಯಂಗಶ್ಚತುರ್ಧಾಪರಿಕೀರ್ತಿತಃ || ೯೫ |
ವಾತಾತ್ಪಿತ್ತಾತ್ಕಫಾದ್ರಕ್ತಾದಿತ್ಯುಕ್ತಂವ್ಯಂಗಲಕ್ಷಣಂ ||
ವಿಸ್ಫೋಟಾಃಕ್ಷುದ್ರರೋಗೇಷುತೇಷ್ಟಧಾಪರಿಕೀರ್ತಿತಾಃ || ೯೬ ||
ಪೃಥಗ್ದೋಷೈಸ್ತ್ರಯೋದ್ವಂದ್ವೈಸ್ತ್ರಿವಿಧಸ್ಸಪ್ತಮೋಸೃಜಃ ||
ಅಷ್ಟಮಸ್ಸನ್ನಿಪಾತೇನಕ್ಷುದ್ರರುಕ್ಮಸೂರಿಕಾ || ೯೭ ||
ಚತುರ್ದಶಪ್ರಕಾರೇಣತ್ರಿಭಿರ್ದೋಷೈಸ್ತ್ರಿಧಾಚಸಾ ||
ದ್ವಂದ್ವಜಾತ್ರಿವಿಧಾಪ್ರೋಕ್ತಾಸನ್ನಿಪಾತೇನಸಪ್ತಮೀ || ೯೮ ||
ಅಷ್ಟಮೀತ್ವಗ್ಗತಾಜ್ಞೇಯಾನವಮೀರಕ್ತಜಾಮತಾ ||
ದಶಮೀಮಾಂಸಜಾಖ್ಯಾತಾಚತಸ್ರೋನ್ಯಾಸ್ತುದುಸ್ತರಾಃ || ೯೯ ||
ಮೇದೋಸ್ಥಿಮಜ್ಜಾಶುಕ್ರಸ್ಥಾಃಕ್ಷುದ್ರರೋಗಾಇತೀರಿತಾಃ ||

ಕ್ಷುದ್ರರೋಗಗಳು ಅರುವತ್ತು ವಿಧ. ಕ್ಷುದ್ರವೆಂಬ ಮಾತಿಗೆ ಲೋಕದಲ್ಲಿ ಅಲ್ಪ, ಸ್ವಲ್ಪವೆಂಬ ಅರ್ಥವು ರೂಢಿಯಲ್ಲಿದೆ. ಅದೇ ಅರ್ಥವನ್ನೇ ಇಲ್ಲಿಯೂ ಇಟ್ಟುಕೊಂಡರೆ

ಅಲ್ಪಗಳಾದ ರೋಗಗಳು ಅಂದರೆ ಸ್ವಲ್ಪವೇ ಕಾರಣದಿಂದ ಹುಟ್ಟತಕ್ಕ ರೋಗಗಳೆಂದು ಅರ್ಥವಾಗುತ್ತದೆ. ಕ್ಷುದ್ರರೋಗವೆಂಬ ಪದಕ್ಕೆ ಹೀಗೆ ಅರ್ಥಮಾಡಬಹುದು. ಇನ್ನೊಂದು ವಿಧವಾಗಿ ಅಂದರೆ ಕ್ಷುದ್ರ ಶಬ್ದಕ್ಕೆ ಅಲ್ಪವಾದ ಪ್ರಾಣಿಗಳು ಸಣ್ಣ ಮಕ್ಕಳು ಎಂಬದಾಗಿ ಅರ್ಥಮಾಡಿಕೊಂಡು ಮಕ್ಕಳಿಗೆ ಸಂಭವಿಸತಕ್ಕ ರೋಗಗಳಿಗೇನೇ ಕ್ಷುದ್ರ ರೋಗಗಳೆಂದು ಹೆಸರನ್ನಿಟ್ಟಿದ್ದಾರೆಂದರೂ ಸಾದೀತು. ಶಾರ್ಙ್ಗಧರಾಚಾರ್ಯರು ಅನೇಕ ರೋಗಗಳಿಗೊಂದು ಗುಂಪಿಗೆ ಕ್ಷುದ್ರರೋಗಗಳೆಂಬದಾಗಿ ಹೆಸರು ಕೊಟ್ಟಿದ್ದಾರೆ. ಮೊದಲನೆಯದಕ್ಕೆ ಶರ್ಕರಾರ್ಬುದವೆಂದು ಹೆಸರು. ಇದರ ಲಕ್ಷಣ-ಹುಣ್ಣು ಕೊಳತು ದುರ್ವಾಸನೆಯಾಗಿ ಕೀವಿನಿಂದ ಕೂಡಿ ನಾನಾ ವರ್ಣಗಳಾದ ಸ್ರಾವಗಳಾಗುತ್ತಿದ್ದಲ್ಲಿ ಅದಕ್ಕೇನೇ ಈ ಹೆಸರು, ಇಂದ್ರವೃದ್ಧಾ ಎಂದರೆ ಮೊದಲು ಒಂದು ದೊಡ್ಡ ಬೊಕ್ಕೆ ಎದ್ದು ಅದರ ಮೇಲೆ ಸಣ್ಣ ಸಣ್ಣ ಬೊಕ್ಕೆಗಳು ತುಂಬಿಕೊಳ್ಳುವುದಕ್ಕೆ ಹೆಸರು. ಪನಸಿಕ ಎಂದರೆ ಕಿವಿಯ ಒಳಭಾಗದಲ್ಲಿ ಸಣ್ಣ ಬೊಕ್ಕೆಗಳೆದ್ದು ಕ್ರಮವಾಗಿ ಆದ ವ್ರಣಕ್ಕೆ ಹೆಸರು. ವಿವೃತ ಎಂದರೆ ಪಿತ್ತದಿಂದ ವ್ರಣವು ಅತಿಯಾಗಿ ಉರಿಯುತ್ತ ಬಾಯಿ ತೆರೆದಿರುವುದಕ್ಕೆ ಹೆಸರು ಅಂಧಾಲಜಿ ಎಂದರೆ ಹೊರಕ್ಕೆ ಮುಖವೇನೂ ಕಾಣದ ರಕ್ತ ಮತ್ತು ಕೀವುಗಳು ಸೋರುವ ಅತ್ತಿಯ ಹಣ್ಣಿನಂತಹ ಹುಣ್ಣಿಗೆ ಹೆಸರು. ವರಾಹದಂಷ್ಟ್ರ ಎಂದರೆ ಹಂದಿಯ ಹುಣ್ಣು ಎಂಬದಾಗಿ ಲೋಕದಲ್ಲಿ ವ್ಯವಹಾರವಿರುವ ವ್ರಣಕ್ಕೆ ಹೆಸರು. ಈ ವ್ರಣದಲ್ಲಿ ವ್ರಣದ ಜೊತೆಗೆ ವ್ರಣದಲ್ಲಿ ನವೆ ಜ್ವರ ಎರಡೂ ಇರುತ್ತವೆ. ವಲ್ಮೀಕವೆಂದರೆ ಹುತ್ತದ ಹುಣ್ಣು ಎಂದು ಲೋಕದಲ್ಲಿ ವ್ಯವಹರಿಸುತ್ತಾರೆ. ಹುತ್ತಕ್ಕೆ ದ್ವಾರಗಳಿರುವಂತೆ ಅಲ್ಲಲ್ಲಿ ಉಬ್ಬಿಕೊಂಡು ಅನೇಕ ದ್ವಾರಗಳಿರುತ್ತವೆ. ಈ ವ್ರಣವು ಕೊರಳಿನ ಮೇಲೆ, ಭುಜದಲ್ಲಿ, ಕಂಕುಳಿನಲ್ಲಿ, ಕೈ ಕಾಲುಗಳಲ್ಲಿ, ಕೀಲುಗಳಲ್ಲಿ, ಕಂಠದಲ್ಲಿ ( ಅಂದರೆ ಕೆಳಭಾಗದಲ್ಲಿ ) ಈ ಪ್ರದೇಶಗಳಲ್ಲಿಯೇ ಪ್ರಾಯಿಕವಾಗಿ ಇರುತ್ತದೆ. ಕಚ್ಛಪಿ ಎಂದರೆ ಆಮೆಯ ಬೆನ್ನಿನಂತೆ ಮಧ್ಯದಲ್ಲಿ ಉಬ್ಬಿಕೊಂಡು ಸುತ್ತಲೂ ತಗ್ಗಾಗಿರುವ ವ್ರಣಕ್ಕೆ ಹೆಸರು. ತಿಲಕಾಲಕವೆಂದರೆ ಯಾವ ವೇದನೆಯೂ ಇಲ್ಲದ ಎಳ್ಳು ಕಾಳಿನಂತಹ ಸಣ್ಣ ಮತ್ತು ಕಪ್ಪಾದ ವ್ರಣಗಳು ಶರೀರದಲ್ಲಿ ಆದ್ಯಂತದಲ್ಲಿಯೂ ವ್ಯಾಪಿಸಿರುವುದಕ್ಕೆ ಹೆಸರು. ಗರ್ದಭೀ ಎಂದರೆ ದುಂಡಾಗಿ ಎತ್ತರವಾಗಿ ಉಬ್ಬಿಕೊಂಡು ಬಹಳ ನೋವಿನಿಂದ ಕೂಡಿದ ವ್ರಣಕ್ಕೆ ಹೆಸರು. ರಕಸಾ ಎಂದರೆ ಬಹಳ ನವೆಯೊಡನೆ ಕೂಡಿರುವ ಒಣ ಕಜ್ಜಿ ಅಂದರೆ ಕಜ್ಜಿ ಯಾವಾಗ್ಯೂ ಒಣಗಿಯೇ ಇರುತ್ತದೆ. ಯುವಪ್ರಖ್ಯಾ ಎಂದರೆ ಗೋಧೀ ಕಾಳಿನಂತಹ ಉದ್ದುದ್ದವಾದ ಕಜ್ಜಿಗಳು. ವಿದಾರಿಕಾ ಎಂದರೆ ಚಿಕ್ಕ ಗೆಣಸಿನ ಗಡ್ಡೆಯಂತೆ ದುಂಡಾದ ಉದ್ದುದ್ದವಾದ ವ್ರಣಗಳು, ಇವುಗಳು ತೊಡೆ, ಕಂಕಳು, ಗೆಜ್ಜೆಕಟ್ಟು ಇಂತಹ ಸ್ಥಳಗಳಲ್ಲಿಯೇ ಹುಟ್ಟುವುದು ವಿಶೇಷ. ಕದರವೆಂದರೆ ಬೋರೇ ಹಣ್ಣಿನಂತೆ ದುಂಡಾಗಿ ಕಾಲಿನಲ್ಲಿ ಮಾತ್ರ ಉಂಟಾಗುವ ವ್ರಣಗಳಿಗೆ ಹೆಸರು ಇದಕ್ಕೆ ಲೋಕದಲ್ಲಿ ಕಲ್ಲೊತ್ತು, ಆನೆ ಬೆಳೆಯುವುದು ಎಂಬದಾಗಿ ನಾನಾ ವಿಧವಾಗಿ ವ್ಯವಹಾರವಿದೆ; ಕಾಲಿನ ಅಡಿಭಾಗದಲ್ಲಿ ಅಂಗಾಲು ಮುಂಗಾಲುಗಳಲ್ಲಿ ಎಲ್ಲಿಯಾದರೂ ಬರಬಹುದು. ಮಷಕವೆಂದರೆ ಉದ್ದಿನ ಕಾಳಿನಷ್ಟು ಗಾತ್ರ ಕಪ್ಪಗೆ ಒಣಗಿಕೊಂಡಿರುವ ಕಜ್ಜಿಗಳು, ಕಜ್ಜಿಯಲ್ಲಿ ಯಾವ ವಿಧವಾದ ಸ್ರವವೂ ಇರುವುದಿಲ್ಲ. ನೀಲಿಕಾ

ಎಂದರೆ ಚರ್ಮವು ನೀಲವರ್ಣವಾಗಿ ಒರಟಾಗುತ್ತ ಹೋಗುವುದು. ಜಾಲಗರ್ದಭ ವೆಂದರೆ ಶರೀರದಲ್ಲೆಲ್ಲಾ ಇವತ್ತೊಂದು ಕಡೆ ನಾಳೆ ಮತ್ತೊಂದು ಕಡೆ ಈ ರೀತಿಯಾಗಿ ಸಂಚಾರವಮಾಡುವ ಬಾಕಿಗೆ ಹೆಸರು ಅಂದರೆ ಇವತ್ತು ಮುಂಗೈ ಬಾತುಕೊಳ್ಳುವುದು ನಾಳೆ ಮೊಳಕೈ ಈ ರೀತಿಯಾಗಿ ಇರಿವೇಲ್ಲೀ ಎಂದರೆ ತಲೆಯಲ್ಲಿ ಆಗತಕ್ಕ ಗುಂಡಾದ ಹುಣ್ಣುಗಳಿಗೆ ಹೆಸರು; ಬಹಳ ನೋವು ಜ್ವರ ಸಹ ಇರುತ್ತದೆ. ಜಂತುಮಣಿ ಎಂದರೆ ಶರೀರದಲ್ಲಿ ದುಂಡುದುಂಡಾಗಿರುವ ಕೆಂಪಾದ ಹುಳುಕಡ್ಡಿಗೆ ಹೆಸರು. ಗುದ ಭ್ರಂಶವೆಂದರೆ ಗುದವು ಮಲವಿಸರ್ಜನೆ ಮಾಡುವಾಗಲಾಗಲಿ ಅಥವಾ ಹಾಗೆಯೇ ಆಗಲಿ ಹೊರಕ್ಕೆ ಹೊರಡುವುದಕ್ಕೆ ಹೆಸರು; ಲೋಕದಲ್ಲಿ ಗೂದಿ ಹಾಯುವುದೆಂದು ಇದನ್ನು ಕರೆಯುತ್ತಾರೆ. ಅಗ್ನಿರೋಹಿಣೀ ಎಂದರೆ ಕಂಕಳಿನಲ್ಲಿ ಬೆಂಕಿಯಿಂದ ಸುಟ್ಟಂತೆ ಉರಿ ಯಾಗುತ್ತಾ ಕಾಣಿಸಿಕೊಳ್ಳುವ ಬೊಕ್ಕೆಗಳಿಗೆ ಹೆಸರು. ಸನ್ನಿರುದ್ಧಗುದವೆಂದರೆ ಮಲವನ್ನು ತಡೆಯುವುದರಿಂದ ಅಪಾನವಾಯುವು ಪ್ರಕುಪಿತವಾಗಿ ಗುದದ್ವಾರವು ಸಂಕುಚಿತವಾಗು ವಂತೆ ಮಾಡುತ್ತದೆ, ಇದರಿಂದ ಮಲವಿಸರ್ಜನೆಗೆ ಬಹಳ ಕಷ್ಟವಾಗಿ ಮಲವು ಸಲೀ ಸಾಗಿ ಹೊರಡದೆ ಕೊಂಚ ಕೊಂಚವೇ ಹೊರಡುತ್ತದೆ ಕೋಠ ಎಂದರೆ ಒಂದು ಕ್ಷಣ ದಲ್ಲಿ ಮೈಯ್ಯಲ್ಲೆಲ್ಲಾ ಗಂದೆಗಳೇಳುವುದು, ಮತ್ತೊಂದು ಕ್ಷಣದಲ್ಲಿ ಕಾಣದೆ ಹೋಗು ವುದು ಇದಕ್ಕೆ ಹೆಸರು. ಕುನಖ ಎಂದರೆ ಉಗರೆಲ್ಲಾ ಕಪ್ಪಾಗಿಹೋಗುವುದಕ್ಕೆ ಹೆಸರು. ಅನುಶಯೀ ಎಂದರೆ ಕಾಲಿನ ಮೇಲುಭಾಗದಲ್ಲಿ ಕಾಲಿನ ವರ್ಣದಂತಹ ಬೊಕ್ಕೆಗಳೇಎದ್ದು ತೊಂದರೆಪಡಿಸುವುದಕ್ಕೆ ಹೆಸರು. ಪದ್ಮಿನೀಕಂಟಕವೆಂದರೆ ತಾವರೇ ದಂಟಿನ ಮೇಲಿ ರುವ ಸಣ್ಣಮುಳ್ಳಿನಂತಿರುವ ಮುಳ್ಳುಗಳಿಂದ ತುಂಬಿರುವ ವ್ರಣಗಳಿಗೆ ಹೆಸರು. ಚಿಪ್ಪ ವೆಂದರೆ ಉಗುರಿನ ಹತ್ತಿರದಲ್ಲಿ ಹುಟ್ಟುವ ವ್ರಣಕ್ಕೆ ಹೆಸರು, ಇದಕ್ಕೆ ಲೋಕದಲ್ಲಿ ಉಗುರುಸುತ್ತೆಂದು ಕರೆಯುತ್ತಾರೆ ಅಲಸವೆಂದರೆ ಯಾವಾಗಲೂ ಕೆಸರನ್ನು ತುಳಿಯು ವುದರಿಂದ ಕಾಲುಬೆರಳುಗಳ ಕೆಳಭಾಗದಲ್ಲಿ ಹುಟ್ಟುವ ವ್ರಣಗಳಿಗೆ ಹೆಸರು, ಇದನ್ನು ಕೆಸರುಹುಣ್ಣೆಂದು ಕರೆಯುತ್ತಾರೆ. ಮುಖದೂಷಿಕವೆಂದರೆ ಯವ್ವನ ಪ್ರಯುಕ್ತವಾಗಿ ಮುಖದ ಮೇಲೆ ಏಳುವ ಬೊಕ್ಕೆಗಳಿಗೆ ಹೆಸರು. ಕಕ್ಷಾ ಎಂದರೆ ಕಂಕಳಿನಲ್ಲಿ ಹುಟ್ಟ ತಕ್ಕ ಒಂದು ಪ್ರಕಾರದ ಗ್ರಂಥಿ ವ್ಯವಹಾರದಲ್ಲಿ ಶಂಖದಾಳವೆಂಬದಾಗಿ ಹೆಸರು. ವೃಷಣ ಕಚ್ಛು ಎಂದರ ಸರಿಯಾದ ಕ್ಷಾಳನವಿಲ್ಲದೆ ವೃಷಣದಲ್ಲಿ ಕೊಳೆನೇರಿ ನವೆಯಾಗಿ ಕರದು ಗಾಯವಾದದ್ದಕ್ಕೆ ಹೆಸರು. ಗಂಧವೆಂದರೆ ಕಂಕುಳಲ್ಲಿ ಹುಟ್ಟುವ ಗ್ರಂಥಿಯ ಹಾಗೆಯೇ ಮೈಯ್ಯಿನ ಇತರ ಭಾಗಗಳಲ್ಲಿ ಹುಟ್ಟತಕ್ಕ ಗ್ರಂಥಿಗೆ ಹೆಸರು. ಪಾಷಾಣಗರ್ದಭವೆಂದರ ಕೊರಳಿನಲ್ಲಿ ಬರತಕ್ಕ ಗಟ್ಟಿಯಾದ ಗಂಟಿಗೆ ಹೆಸರು. ರಾಜಿಕಾ ಎಂದರೆ ಸಾಸುವೆಯ ಕಾಳಿನಂತಹ ಬೊಕ್ಕೆಗಳು ಮೈಯ್ಯಲ್ಲೆಲ್ಲಾ ಆಗಲಿ, ಒಂದೇ ಕಡೆಯಲ್ಲಾಗಲಿ ಕಾಣಿಸಿ ಕೊಳ್ಳುವುವು. ವ್ಯಂಗವೆಂದರೆ ಮುಖದ ಮೇಲೆ ಹತ್ತತಕ್ಕ ಬಂಗಿಗೆ ಹೆಸರು. ಈಗ ವ್ಯಂಗವೆಂಬ ಚರ್ಮವ್ಯಾಧಿಯು ವಾತಜನ್ಯ, ಪಿತ್ತಜನ್ಯ, ಕಫಜನ್ಯ, ರಕ್ತದೋಷಜನ್ಯ ಎಂಬದಾಗಿ ನಾಲ್ಕುವಿಧ. ವಿಸ್ಫೋಟಗಳೆಂಬ ಒಂದು ವಿಧವಾದ ಗುಳ್ಳೆಗಳೇಳುವ ರೋಗವು ಕ್ಷುದ್ರರೋಗದ ಸಮುದಾಯದಲ್ಲಿ ಸೇರಿಸಲ್ಪಟ್ಟಿದೆ. ವಿಸ್ಫೋಟರೋಗವು ಎಂಟು ವಿಧ. ವಾತದೋಷಜನ್ಯ, ಪಿತ್ತದೋಷಜನ್ಯ. ಕಫದೋಷಜನ್ಯ, ವಾತಪಿತ್ತದೋಷಜನ್ಯ, ವಾತ ಶ್ಲೇಷ್ಮದೋಷಜನ್ಯ, ಪಿತ್ತಶ್ಲೇಷ್ಮಜನ್ಯ, ರಕ್ತದೋಷಜನ್ಯ, ತ್ರಿದೋಷಸನ್ನಿಪಾತಜನ್ಯ

ಎಂಬದಾಗಿ ಮಸೂರಿಕಾ ರೋಗವನ್ನೂ ಕ್ಷುದ್ರರೋಗದಲ್ಲಿಯೇ ಸೇರಿಸಿರುತ್ತಾರೆ. ಮಸೂರ ಎಂಬುವು ಒಂದು ಬಗೆಯ ಧಾನ್ಯದ ಕಾಳಿನ ಆಕಾರದ ಬೊಕ್ಕೆಗಳು ಮೈತುಂಬ ಏಳುವುದು; ಇದಕ್ಕೆ ಶಿಡಬೆಂದು ವ್ಯವಹಾರವಿದೆ. ಈ ಮಸೂರಿಕಾರೋಗವು ಹದಿನಾಲ್ಕು ವಿಧ ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ವಾತಪಿತ್ತ ಪ್ರಕೋಪಜನ್ಯ, ವಾತಶ್ಲೇಷ್ಮಪ್ರಕೋಪಜನ್ಯ, ಪಿತ್ತಶ್ಲೇಷ್ಮಪ್ರಕೋಪಜನ್ಯ, ತ್ರಿದೋಷ ಸನ್ನಿಪಾತಜನ್ಯ, ತ್ವಗ್ಗತ, ರಕ್ತಗತ, ಮಾಂಸಗತ ಇವುಗಳಲ್ಲದೆ ಕಠಿನಗಳಾದ ಬೇರೆ ನಾಲ್ಕು ವಿಧಗಳುಂಟು. ಅವುಗಳ ಹೆಸರುಗಳು ಕ್ರಮವಾಗಿ ಮೇದೋಧಾತ್ವಾಶ್ರಿತ ಮಸೂರಿಕ, ಮಜ್ಜಧಾತ್ವಾಶ್ರಿತ, ಅಸ್ಥಿಧಾತ್ವಾಶ್ರಿತ, ಶುಕ್ರಧಾತ್ವಾಶ್ರಿತ ಎಂಬದಾಗಿ ಈ ರೀತಿಯಾಗಿ ಕ್ಷುದ್ರರೋಗಗಳು ಹೇಳಲ್ಪಟ್ಟ ಹಾಗಾಯಿತು.

ವಿಸರ್ಪರೋಗೋ ನವಧಾ ವಾತ ಪಿತ್ತ ಕಫೈಸ್ತ್ರಿಧಾ॥
ತ್ರಿಧಾ ಸದ್ವಂದ್ವಭೇದೇನ ಸನ್ನಿಪಾತೇನ ಸಪ್ತಮಃ॥
ಅಷ್ಟಮೊ ವಹ್ನಿದಾಹೇನ ನವಮುಶ್ಚಾಭಿಘಾತಜಃ ॥೧೦೧॥

ವಿಸರ್ಪರೋಗವೆಂದರೆ ಬೇಸಿಗೆ ಕಾಲದಲ್ಲಿ ಮೈಯ್ಯಲ್ಲೆಲ್ಲಾ ಏಳತಕ್ಕ ಬೆವರಿನ ಬೊಕ್ಕೆಯಂತಹ ಒಂದು ಬಗೆಯ ಬೊಕ್ಕೆ. ಇದು ಬಹಳ ತೊಂದರೆಪಡಿಸತಕ್ಕ ಬೊಕ್ಕೆ ಯಾಗಿದೆ ಇದು ಒಂಭತ್ತು ವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮ ಪ್ರಕೋಪಜನ್ಯ, ವಾತಪಿತ್ತಜನ್ಯ, ವಾತಶ್ಲೇಷ್ಮಜನ್ಯ, ಪಿತ್ತಶ್ಲೇಷ್ಮಜನ್ಯ, ತ್ರಿದೋಷಸನ್ನಿ ಪಾತಜನ್ಯ, ಬೆಂಕಿಯಿಂದ ಸುಟ್ಟುಕೊಳ್ಳೋಣದರಿಂದ ಹುಟ್ಟತಕ್ಕದ್ದು. ಅಭಿಘಾತ ವೆಂದರೆ ಯಾವುದಾದರೂ ಪೆಟ್ಟುತಗಲುವುದರಿಂದ ಹುಟ್ಟತಕ್ಕದ್ದು ಎಂಬದಾಗಿ ಹಿಂದೆ ಹೇಳಿದ ದ್ವಂದ್ವದೋಷಜನ್ಯ ವಿಸರ್ಪಕ್ಕೇನೆ ಗ್ರಂಥಾಂತರಗಳಲ್ಲಿ ಬೇರೆಬೇರೆ ಹೆಸರು ಗಳಿಂದ ವ್ಯವಹಾರವಿದೆ ಹೇಗಂದರೆ ವಾಯು ಮತ್ತು ಪಿತ್ತಗಳ ಪ್ರಕೋಪದಿಂದ ಹುಟ್ಟುವ ವಿಸರ್ಪರೋಗಕ್ಕೆ ಅಗ್ನಿವಿಸರ್ಪವೆಂಬದಾಗಿಯೂ, ಕಫವಾತ ಪ್ರಕೋಪಜನ್ಯ ವಾದ ವಿಸರ್ಪಕ್ಕೆ ಗ್ರಂಥಿಕವಿಸರ್ಪವೆಂಬದಾಗಿಯೂ ಪಿತ್ತ ಮತ್ತು ಕಫಗಳ ಪ್ರಕೋಪ ದಿಂದ ಉತ್ಪನ್ನವಾದ ವಿಸರ್ಪಕ್ಕೆ ಕರ್ದಮವೆಂಬದಾಗಿಯೂ ವ್ಯವಹಾರ

ತದ್ವೈಕಶ್ಲೇಷ್ಮಪಿತ್ತಾಭ್ಯಾಮುದರ್ದಃ ಪರಿಕೀರ್ತಿತಃ॥
ವಾತಪಿತ್ತೇನಚೈಕಸ್ತು ಶೀತಪಿತ್ತಾಮಯಸ್ಮೃತಃ ॥೧೦೨॥
ಅಮ್ಲಪಿತ್ತಂ ತ್ರಿಧಾಪ್ರೋಕ್ತಂ ವಾತೇನ ಶ್ಲೇಷ್ಮಣಾತಥಾ॥
ತೃತೀಯಂ ಶ್ಲೇಷ್ಮವಾತಾಭ್ಯಾಂ ವಾತರಕ್ತಂತಥಾಷ್ಟಧಾ ॥೧೦೩॥
ವಾತಾಧಿಕ್ಯೇನ ಪಿತ್ತಾಚ್ಚ ಕಫಾದ್ದೋಷತ್ರಯೇಣಚ॥
ರಕ್ತಾಧಿಕ್ಯೇನ ದೋಷಾಣಾಂ ದ್ವಂದ್ವೇನ ತ್ರಿವಿಧಸ್ಮೃತಃ ॥೧೦೪॥

ಉದರ್ದವೆಂದರೆ ಯಾವುದಾದರೂ ಹುಳಗಳು ಕಡಿದಂತೆ ಕಾಣಿಸಿಕೊಳ್ಳುತ್ತ ಶರೀರದಲ್ಲಿ ಅಲ್ಲಲ್ಲಿಯೇ ಬಾತುಹೋಗುವುದಕ್ಕೆ ಹೆಸರು. ಈ ರೋಗವು ಶ್ಲೇಷ್ಮ ಮತ್ತು ಪಿತ್ತಗಳಪ್ರಕೋಪದಿಂದ ಹುಟ್ಟಬಹುದು. ವಾಯು ಮತ್ತು ಪಿತ್ತಗಳ ಪ್ರಕೋಪದಿಂದ ಲೂ ಹುಟ್ಟಬಹುದು. ಈ ರೋಗಕ್ಕೇನೇ ಶೀತಪಿತ್ತರೋಗವೆಂಬದಾಗಿಯೂ ವ್ಯವಹಾರ ವಿದೆ. ಅಮ್ಲಪಿತ್ತರೋಗವೆಂದರೆ ಎದೆಯಲ್ಲಿ ಉರಿಯಿಂದ ಕೂಡಿದ ಹುಳಿ ತೇಗುಬರು

ವುದಕ್ಕೆ ಹೆಸರು. ಇದು ಅಜೀರ್ಣದಿಂದ ಬರತಕ್ಕ ರೋಗ. ಇದು ಮೂರುವಿಧ. ವಾತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ಶ್ಲೇಷ್ಮ ಮತ್ತು ವಾತಪ್ರಕೋಪೋಭಯಜನ್ಯ ಎಂಬದಾಗಿ. ವಾತರಕ್ತರೋಗವೆಂದರೆ ಕೈಕಾಲಿನ ಕೀಲುಗಳು ಹಿಡಿದುಕೊಳ್ಳುವುದು. ಇದು ಎಂಟು ವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ರಕ್ತಾಧಿಕ್ಯದಿಂದ ಉತ್ಪನ್ನವಾಗುವುದು. ವಾತಪಿತ್ತಜನ್ಯ, ವಾತಶ್ಲೇಷ್ಮಜನ್ಯ, ಪಿತ್ತಶ್ಲೇಷ್ಮಜನ್ಯ ಎಂಬದಾಗಿ.

ಅಶೀತಿರ್ವಾತಜಾರೋಗಾಃ ಕಥ್ಯಂತೇ ಮುನಿಭಾಷಿತಾಃ॥
ಆಕ್ಷೇಪಕೋಹನುಸ್ತಂಭ ಊರುಸ್ತಂಭಶ್ಶಿರೋಗ್ರಹಃ ||೧೧೫॥
ಬಾಹ್ಯಾಯಾಮೋಂತರಾಯಾಮಃ ಪಾರ್ಶ್ವಶೂಲಂ ಕಟಿಗ್ರಹಃ||
ದಂಡಾಪತಾನಕಃ ಖಲ್ಲೀಜಿಹ್ವಾಸ್ತಂಭಸ್ತಥಾರ್ದಿತಂ ॥೧೦೬||
ಪಕ್ಷಾಘಾತಃ ಕ್ರೋಷ್ಟುಶೀರ್ಷೋ ಮನ್ಯಾಸ್ತಂಭಶ್ಚ ಪಂಗುತಾ||
ಕಲಾಯಖಂಜತಾತೂನೀ ಪ್ರತಿತೂನೀಚ ಖಂಜತಾ ||೧೦೭॥
ಪಾದಹರ್ಷೋಗೃಧ್ರಸೀಚ ವಿಶ್ವಾಚೀ ಚಾಪಬಾಹುಕಃ||
ಅಪತಾನೋವ್ರಣಾಯಾಮೋವಾತ ಕಂಟೋಪತಂತ್ರಕಃ ||೧೦೮||
ಅಂಗಭೇದೋಂಗ ಶೋಷಶ್ಚ ಮಿನ್ಮಿನತ್ವಂಚ ಗಿಕ್ಲತಾ||
ಪ್ರತ್ಯಷ್ಠೀಲಾಷ್ಠೀಲಿಕಾಚ ವಾಮನತ್ವಂಚ ಕುಬ್ಜತಾ ||೧೦೯||
ಅಂಗಪೀಡಾಂಗಶೂಲಂಚ ಸಂಕೋಚ ಸ್ತಂಭರೂಕ್ಷತಾ॥
ಅಂಗಭಂಗೋಂಗ ವಿಭ್ರಂಶೋ ವಿಡ್ಗ್ರಹೋ ಬದ್ಧವಿಟ್ಕತಾ||೧೧೦||
ಮೂಕತ್ವಮತಿಜೃಂಭಾಸ್ಯಾದತ್ಯುದ್ಗಾರೋಂತ್ರಕೂಜನಂ||
ವಾತಪ್ರವೃತ್ತಿ ಸ್ಫುರಣಂ ಶಿರಾಣಾಂ ಪೂರಣಂತಥಾ ||೧೧೧||
ಕಂಪಃಕಾರ್ಶ್ಯಂ ಶ್ಯಾವತಾಚ ಪ್ರಲಾಪಃ ಕ್ಷಿಪ್ರಮೂತ್ರತಾ||
ನಿದ್ರಾನಾಶಃ ಸ್ವೇದನಾಶೋ ದುರ್ಬಲತ್ವಂ ಬಲಕ್ಷಯಃ ||೧೧೨||
ಅತಿಪ್ರವೃತ್ತಿಶ್ಶುಕ್ರಸ್ಯ ಕಾರ್ಶ್ಯಂ ನಾಶಶ್ಚ ರೇತಸಃ||
ಅನವಸ್ಥಿತ ಚಿತ್ತತ್ವಂ ಕಾಠಿನ್ಯಂ ವಿರಸಾಸ್ಯತಾ ||೧೧೩||
ಕಷಾಯವಕ್ತ್ರತಾಧ್ಮಾನಂ ಪ್ರತ್ಯಾಧ್ಮಾನಂಚ ಶೀತತಾ||
ರೋಮಹರ್ಷಶ್ಚ ಭೀರುತ್ವಂತೋದಃ ಕಂಡೂರಸಾಜ್ಞತಾ ||೧೧೪||
ಶಬ್ದಾಜ್ಞತಾ ಪ್ರಸುಪ್ತಿಶ್ಚ ಗಂಧಾಜ್ಞತ್ವಂ ರಸಕ್ಷಯಃ||

ವಾತರೋಗಗಳನ್ನು ಹೇಳುತ್ತಾನೆ. ವಾತಜನ್ಯರೋಗಗಳು ಎಂಭತ್ತು ವಿಧ. ಅಂದರೆ ಮುಂದೆ ಹೇಳುವ ವಾತವ್ಯಾಧಿಗಳು ಎಂಭತ್ತರಲ್ಲಿಯೂ ವಾತವೇ ಪ್ರಧಾನ ದೋಷವೆನ್ನುವುದು ಅಭಿಪ್ರಾಯ. ಆಕ್ಷೇಪಕವಾತವೆಂದರೆ ಮೈಕೈಯೆಲ್ಲಾ ನಡುಕ ಬರುವುದು, ಯಾವಾಗಲೂ ನಡುಗುತ್ತಿರುವುದು. ಹನುಸ್ತಂಭವೆಂದರೆ ದವಡೆಯ ಕೀಲುಗಳು ಹಿಡಿದುಕೊಳ್ಳುವುದು. ಇದು ಎರಡು ರೀತಿಯಾಗಿರುತ್ತವೆ. ಬಾಯಿ ಮುಚ್ಚಿರುವಾಗ್ಯೆ ಕೀಲುಹಿಡಿದು ಬಾಯಿತೆರಯುವುದೇ ಆಗುವುದಕ್ಕಿಲ್ಲ, ಬಾಯಿ ತೆರದಿರುವಾಗ್ಯೆ ಕೀಲುಹಿಡಿದರೆ ಬಾಯಿಯನ್ನು ಮುಚ್ಚುವುದೇ ಆಗುವುದಿಲ್ಲ. ಊರುಸ್ತಂಭವೆಂದರೆ ತೊಡೆಗಳು ಹಿಡಿದುಕೊಳ್ಳುವುದು. ಅಂದರೆ ತೊಡೆಗಳೆರಡೂ ತಣ್ಣಗಾಗಿ

ಯಾವ ಕೆಲಸವನ್ನೂ ಮಾಡದೆ ರೋಗಿಗೆ ಇವು ತನ್ನ ಅವಯವಗಳೇ ಅಲ್ಲವೆನ್ನುವಷ್ಟು ಮಟ್ಟಿನ ತಿಳುವಳಿಕೆ ಬರುವಷ್ಟು ನಿಷ್ಪ್ರಯೋಜನವಾಗಿ ಎತ್ತುವುದು ಇಡುವುದು ಇವುಗಳಿಗೆಕೂಡ ಪ್ರಯತ್ನವೇ ಅವಶ್ಯಕವಾಗುತ್ತದೆ. ಶಿರೋಗ್ರಹವೆಂದರೆ ತಲೆಹಿಡಿದುಕೊಂಡಂತೆ ತೋರುತ್ತ ಭಾರವಾಗಿರುವುದು, ಬಾಹ್ಯಾಯಾಮವೆಂದರೆ ಶರೀರವೆಲ್ಲವೂ ಬಿಲ್ಲಿನಹಾಗೆ ಹೊರಮುಖವಾಗ ಬಗ್ಗುವುದು. ಅಂತರಾಯಾಮವೆಂದರೆ ಹಿಂದೆ ಹೇಳಿದ್ದಕ್ಕೆ ಪ್ರತಿಕೂಲವಾಗಿ ಒಳಮುಖವಾಗಿ ಶರೀರವು ಬಗ್ಗಿ ಕುಗ್ಗಿಹೋಗುವುದು. ಪಾರ್ಶ್ವಶೂಲವೆಂದರೆ ಹೃದಯದ ಎರಡು ಪಾರ್ಶ್ವಗಳಲ್ಲಿಯೂ ಶೂಲೆಬರುವುದು. ಕಟಿಗ್ರಹವೆಂದರೆ ಸೊಂಟವು ಹಿಡಿದುಕೊಂಡು ಅತಿಯಾಗಿ ನೋವಾಗಿ ಸೊಂಟ ಅಲ್ಲಾಡದಂತೆ ಚಲನ ಶೂನ್ಯವಾಗುವುದು ದಂಡಾಪತಾನಕವೆಂದರೆ ಶರೀರವು ಆಕುಂಚನ ಪ್ರಸಾರಣ ರಹಿತವಾಗಿ ಅಂದರೆ ಯಾವ ಕಡೆಗೂ ಬಗ್ಗದೆ ದಂಡದಂತೆ ನೆಟ್ಟಗೇ ನಿಂತುಬಿಡುವುದಕ್ಕೆ ಹೆಸರು. ಖಲ್ಲೀ ಎಂದರೆ ಕೈಕಾಲುಗಳಲ್ಲಿ ಬರತಕ್ಕ ವಾತಶೂಲಕ್ಕೆ ಹೆಸರು. ಜಿಹ್ವಾಸ್ತಂಭವೆಂದರೆ ನಾಲಿಗೆಯಲ್ಲಿರತಕ್ಕ ವಾಕ್ಶಕ್ತಿಪ್ರದಗಳಾದ ನಾಡಿಗಳು ವಾಯುವಿನಿಂದ ಸ್ವಕಾರ್ಯದಲ್ಲಿ ಅಶಕ್ತಗಳಾಗಿ ನಾಲಿಗೆಗೆ ಮಾತನಾಡುವ ಶಕ್ತಿಯೇ ಕುಂಠಿತವಾಗಿ ಹೋಗುವುದು ಅರ್ದಿತವೆಂದರೆ ಮುಖದ ಅರ್ಧಭಾಗವು ವಾತಪ್ರಕೋಪದಿಂದ ವಕ್ರವಾಗುವುದಕ್ಕೆ ಹೆಸರು. ಪಕ್ಷಘಾತವೆಂದರೆ ಶರೀರದ ಒಂದು ಪಾರ್ಶ್ವವೆಲ್ಲಾ ವಾಯುವಿನಿಂದ ವಿಕಾರಹೊಂದುವುದು. ಕ್ರೋಷ್ಟುಕಶೀರ್ಷವೆಂದರೆ ವಾಯುಪ್ರಕೋಪದಿಂದ ಮೊಣಕಾಲಿನಲ್ಲಿ ಅಂದರೆ ಮಂಡಿಯಲ್ಲಿ ರಕ್ತವು ಕಟ್ಟಿಕೊಂಡು ಕಾಲು ನೀಡುವುದು ಮತ್ತು ಮಡಿಸಲಿಕ್ಕಾಗದಿರುವುದು. ಮನ್ಯಾಸ್ತಂಭವೆಂದರೆ (ಕೊರಳಿನ ಉಭಯಪಾರ್ಶ್ವಗಳಲ್ಲಿರುವ ನರಗಳಿಗೆ ಮನ್ಯಾ ಎಂದು ಹೆಸರು) ಕೊರಳಿನ ಉಭಯ ಪಾರ್ಶ್ವಗಳಲ್ಲಿರುವ ನರಗಳು ವಾತಪ್ರಕೋಪದಿಂದ ಹಿಡಿದುಕೊಂಡು ಕೊರಳನ್ನು ಅಲ್ಲಾಡದಂತ ಮಾಡುವುದಕ್ಕೆ ಹೆಸರು. ಪಂಗುತ್ವವೆಂದರೆ ವಾತಪ್ರಕೋಪದಿಂದ ಎರಡು ಕಾಲೂ ಕುಂಟಾಗುವುದು ಕಲಾಯಖಂಜತಾ ಎಂದರೆ ಕಾಲು ಕುಂಟಾಗದಿದ್ದರೂ ವಾತಪ್ರಕೋಪದಿಂದ ಕಾಲಿಟ್ಟರು ಕುಂಟರಂತೆಯೇ ಕಾಲು ಸ್ವಾಧೀನ ತಪ್ಪಿ ನಡೆಯಲಾಗದೆ ಹೋಗುವುದಕ್ಕೆ ಹೆಸರು. ತೂನೀ ಅಂದರೆ ಸ್ತ್ರೀಯರ ಮತ್ತು ಪುರುಷರ ಮರ್ಮಸ್ಥಾನಗಳಲ್ಲ ವಾಯುವಿನಿಂದ ವಡತ ಹುಟ್ಟಿ ಅಧೋಮುಖವಾಗಿ ಅಂದರೆ ಗುದದ್ವಾರದ ಕಡೆಗೆ ಹೋಗುವಂತೆ ತೋರುವುದಕ್ಕೆ ಹೆಸರು. ಪ್ರತಿತೂನೀ ಎಂದರೆ ಹಿಂದೆ ಹೇಳಿದ್ದಕ್ಕೆ ಪ್ರತಿಕೂಲವಾಗಿ ವಡತವು ಊರ್ಧ್ವಮುಖವಾಗಿ ಯೇರುವಂತೆ ತೋರಿದರೆ ಅದಕ್ಕೆ ಹೆಸರು. ಖಂಜತಾ ಎಂದರೆ ವಾತವಿಕಾರದಿಂದ ಒಂದು ಕಾಲು ಕುಂಟಾಗುವುದಕ್ಕೆ ಹೆಸರು. ಪಾದಹರ್ಷವೆಂದರೆ ವಾಯುವಿನಿಂದ ಕಾಲು ಜವ್ವುಹಿಡಿಯುವುದಕ್ಕೆ ಹೆಸರು. ಗೃಧ್ರಸೀ ಎಂದರೆ ಸೊಂಟ, ಪೃಷ್ಠಗಳು, ತೊಡೆ, ಮಂಡಿ, ಮೀನಖಂಡ, ಕಾಲು ಇವುಗಳಲ್ಲಿ ಕ್ರಮವಾಗಿ ವೇದನೆ, ಹಿಡಿದುಕೊಳ್ಳುವುದು ಇಂತಹ ತೊಂದರೆಗಳುಂಟಾಗರೆ ಅದಕ್ಕೆ ಗೃಧ್ರಸೀವಾತವೆಂಬದಾಗಿ ಹೆಸರು ವಿಶ್ವಾಚೀ ಎಂದರೆ ಎರಡು ಕೈಬೆರಳುಗಳು ಮತ್ತು ಮುಂಗೈ ಮೊಳಕೈ ತೋಳುಗಳಲ್ಲಿ ವೇದನೆಯುಂಟಾಗಿ ಕ್ರಮವಾಗಿ ಹಿಡಿದುಕೊಂಡು ತೊಂದರೆ ಪಡಿಸುವುದಕ್ಕೆ ಹೆಸರು. ಅಪಬಾಹುಕವೆಂದರೆ ಒಂದೇ ತೋಳಿನಲ್ಲಿ ಬೆರಳುಮೊದಲಾದುವುಗಳು ಹಿಡಿದುಕೊಂಡು ತೊಂದರೆಪಡಿಸುವುದಕ್ಕೆ ಹೆಸರು.

ಅಪತಾನಕವೆಂದರೆ ಹಿಂದೆ ಹೇಳಿದ ಆಕ್ಷೇಪಕವೆಂಬ ಮೈಯ್ಯೆಲ್ಲಾ ನಡುಗುವ ವಾತರೋಗದಲ್ಲಿ ರೋಗಿಯು ರೋಗವೇಗವನ್ನು ತಡೆಯಲಾರದೆ ಪದೇ ಪದೇ ಬೀಳುತ್ತಿದ್ದರೆ ಆ ಅವಸ್ಥೆಗೇನೇ ಅಪತಾನಕವೆಂಬ ಹೆಸರು. ವ್ರಣಾಯಾಮವೆಂದರೆ ಹಿಂದೆ ಹೇಳಿದ ಅಂತರಾಯಾಮಬಹಿರಾಯಾಮಗಳೇ ಯಾವುದಾದರೂ ಪೆಟ್ಟುಬೀಳುವದು ದೊಡ್ಡದಾದ ವ್ರಣ ಇವುಗಳಿಂದ ಉಂಟಾಗಿದ್ದಲ್ಲಿ ಅದಕ್ಕೆ ಹೆಸರು. ವಾತಕಂಟಕವೆಂದರೆ ಹರಡಿನ ಸ್ಥಾನದಲ್ಲಿರುವ ವಾಯುವು ಪ್ರಕುಪಿತವಾಗಿ ನೆಲದಮೇಲೆ ಕಾಲಿಕ್ಕಿ ನಡೆದರೆ ಮುಳ್ಳು ಚೊಕ್ಕಿರುವಂತೆ ಸರಿಯಾಗಿ ಕಾಲೂರಲು ಆಗದೆ ತೊಂದರೆ ಮಾಡುವುದಕ್ಕೆ ವಾತಕಂಟಕವೆಂಬ ಹೆಸರು. ಅಪತಂತ್ರಕವೆಂದರೆ ಹಿಂದೆ ಹೇಳಿದ ಮೈಯ್ಯನ್ನೆಲ್ಲಾ ನಡುಗಿಸುವ ಆಕ್ಷೇಪಕ ವಾತದಲ್ಲಿಯೇ ಮೈಯೆಲ್ಲಾ ನಡುಗಿ ಧನುಸ್ಸಿನ ಹಾಗೆ ಶರೀರವು ಬಗ್ಗಿ ಕೊಂಚಹೊತ್ತು ಜ್ಞಾನತಪ್ಪಿ ಗಂಟಲಿನಲ್ಲಿ ಗೊರಗುಟ್ಟಿ ಕಣ್ಣುಮುಚ್ಚಿಕೊಂಡಿರುವ ಅವಸ್ಥೆಗೆ ಅಪತಂತ್ರಕವೆಂಬ ಹೆಸರು. ಅಂಗಭೇದವೆಂದರೆ ಯಾವುದಾದರೂ ಅವಯವದಲ್ಲಿ ಪಡತ ಬರುವದು. ಅಂಗಶೋಷವೆಂದರೆ ಯಾವುದಾದರೂ ಒಂದು ಅಂಗವು ವಾಯುವೇದನೆಯಿಂದ ಶೋಷಿಸಿಹೋಗುವುದಕ್ಕೆ ಹೆಸರು. ಮಿನ್ಮಿನತ್ವವೆಂದರೆ ವಾತಪ್ರಕೋಪದಿಂದ ಮಾತನಾಡುವ ಶಕ್ತಿಯು ಕುಂಠಿತವಾಗಿ ಮೂಗಿನಲ್ಲಿಯೇ ಮಾತು ಅಸ್ಪಷ್ಟವಾಗಿ ಹೊರಡಲು ಪ್ರಾರಂಭವಾದರೆ ಅದನ್ನೇ ಮಿನ್ಮಿನತ್ವವೆಂದು ಕರೆಯುತ್ತಾರೆ. ವಿಕ್ಲತಾ ಎಂದರೆ ಬಿಕ್ಕುತ್ತ ಮಾತನಾಡುವುದಕ್ಕೆ ಹೆಸರು ಇದಕ್ಕೆ ತಿಕ್ಕಲು ಎಂಬದಾಗಿ ಲೋಕದಲ್ಲಿ ವ್ಯವಹಾರವಿದೆ. ಇದೊಂದು ವಾತವ್ಯಾಧಿ ಪ್ರತ್ಯಷ್ಠೀಲಾ ಎಂದರೆ ಶರೀರಗತವಾದ ಅಪಾನವಾಯುವು ಪ್ರಕುಪಿತವಾಗಿ ನಾಭಿಯಿಂದ ಕೆಳಭಾಗದಲ್ಲಿ ಕಲ್ಲಿನಂತಹ ಒಂದು ಗ್ರಂಥಿಯನ್ನುಂಟುಮಾಡಿ ಮಲಮೂತ್ರಗಳನ್ನು ತಡೆದರೆ ಆದಕ್ಕೆ ಪ್ರತ್ಯಷ್ಠೀಲಾ ಎಂಬದಾಗಿಯು ಗ್ರಂಥಿಯು ಮಾತ್ರ ಆಗಿ ಮಲಮೂತ್ರಗಳನ್ನು ರೋಧಮಾಡದಿದ್ದಲ್ಲಿ ಅಷ್ಠೀಲಾ ಎಂಬದಾಗಿಯೂ ಹೆಸರು. ವಾಮನತ್ವವೆಂದರೆ ವಾತಪ್ರಕೋಪದಿಂದ ಸಾಕಷ್ಟು ಉದ್ದವಾಗಿ ಆಳು ಬಳೆಯದೆ ಕುಳ್ಳನಾಗುವುದಕ್ಕೆ ಹೆಸರು. ಕುಬ್ಜತ್ವವೆಂದರೆ ಆಳು ಕುಳ್ಳನಾಗುವುದರ ಜೊತೆಯಲ್ಲಿ ಕೈಕಾಲುಗಳು ಸೊಟ್ಟವೂ ಎಲ್ಲಾ ಅಂಗಗಳೂ ವಿಕಾರವೂ ಆಗುವುದಕ್ಕೆ ಹೆಸರು. ಅಂಗಪೀಡಾ ಎಂದರೆ ಅವಯವಗಳಲ್ಲಿ ನೋವು ಬರುವುದು. ಅಂಗಶೂಲವೆಂದರ ಅವಯುವಗಳಲ್ಲಿ ಶೂಲೆ (ಪಡತ) ಬರುವುದು. ಸಂಕೋಚವೆಂದರೆ ವಾಯುವಿನಿಂದ ಅಂಗಗಳು ಕುಗ್ಗಿಹೋಗುವುದು. ಸ್ತಂಭವೆಂದರ ಯಾವ ಅವಯುವವಾದರೂ ವಾಯುವಿನಿಂದ ಸ್ತಬ್ಧವಾಗಿ ನಿಂತುಹೋಗುವುದು ರೂಕ್ಷತಾ ಎಂದರೆ ವಾಯುವಿನಿಂದ ಅವಯುವಗಳು ಸ್ನೇಹರಹಿತವಾಗಿ ಮುಟ್ಟಿದರೆ ತರಕಲಾಗಿ ಒಣಚರ್ಮದಂತೆ ತೋರುವುದು. ಅಂಗಭಂಗವೆಂದರೆ ವಾತಪ್ರಕೋಪದಿಂದ ಯಾವ ಅವಯುವವಾದರೂ ಮುರಿದಂತೆ ತೋರಿ ನಿಷ್ಪ್ರಯೋಜನಸ್ಥಿತಿಗೆ ಬರುವುದು. ಅಂಗವಿಭ್ರಂಶವೆಂದರ ಯಾವತ್ತಿಗೂ ಸರಿಯಾಗದಂತೆ ಅವಯುವವು ಪೂರಾ ಅಸುಪಯುಕ್ತಸ್ಥಿತಿಗೇನೇ ಬಂದು ಹೋಗುವುದು. ವಿಡ್ಗ್ರಹಃ ಎಂದರೆ ಮಲವು ಹೊರಡದೆ ಹೋಗುವುದು. ಬದ್ಧವಿಟ್ಕತಾ ಎಂದರ ವಾಯುವಿನಿಂದ ಮಲವು ಶುಷ್ಕವಾಗಿ ಒಣಗಿ ಇದ್ದಲ್ಲಿಯೇ ನಿಂತುಹೋಗುವುದು. ಇವೆರಡೂ ಪುರೀಷಸ್ಥಾನಗತವಾದ ವಾಯುವು ಪ್ರಕುಪಿತವಾಗುವುದರಿಂದ ಕಂಡುಬರುವ ವಾತವಿಕಾರಗಳು. ಮೂಕತ್ವವೆಂದರೆ ಜಿಹ್ವಾಗತವಾದ ವಾಕ್‌ಶಕ್ತಿಯೇ

ವಾಯುಪ್ರಕೋಪದಿಂದ ಕುಂಠಿತವಾಗಿ ಮಾತನಾಡುವುದೇ ನಿಂತುಹೋಗುವುದು. ಅತಿಜೃಂಭಾ ಎಂದರೆ ಅತಿಯಾಗಿ ಆಕಳಿಕೆ ಬರುವುದು ಇದೂ ವಾತವಿಕಾರವೇನೇ. ಆತ್ಯುದ್ಗಾರಃ ಅಂದರೆ ಅತಿಯಾಗಿ ಮೇಲಿಂದಮೇಲೆ ಭೋಜನಮಾಡಿದರೂ ಮಾಡದಿದ್ದರೂ ತೇಗುಬರುತ್ತಲೇ ಇರುವುದು. ಅಂತ್ರಕೂಜನ ಎಂದರೆ ಪಕ್ವಾಶಯಗತವಾದ ವಾಯುವು ಪ್ರಕುಪಿತವಾಗಿ ಕರುಳಿನೊಳಗೆ ಶಬ್ದಮಾಡುತ್ತಲಿರುವುದಕ್ಕೆ ಹೆಸರು ವಾತಪ್ರವೃತ್ತಿ ಎಂದರೆ ಅಪಾನವಾಯುವು ಅತಿಯಾಗಿ ಹೊರಡುವುದು. ಇದೊಂದು ವಾತವಿಕಾರ ಸ್ಫುರಣವೆಂದರೆ ಅವಯುವಗಳು ವಾಯುವಿನಿಂದ ಹಾರುವುದು. ಶಿರಾಣಾಂ ಪೂರಣಂ ಅಂದರೆ ನರಗಳಲ್ಲಿ ವಾಯುವು ತುಂಬಿಕೊಂಡು ಬಿಗತಬರುವುದು. ಕಂಪಃ ಎಂದರೆ ತಲೆಯಾಗಲಿ ಯಾವುದಾದರೂ ಅವಯುವವಾಗಲಿ ನಡುಗುವುದು ಕಾರ್ಶ್ಯವೆಂದರೆ ವಾತವೃದ್ಧಿಯಾಗಿ ಶರೀರವು ಕೃಶವಾಗಿ ಹೋಗುವುದು. ಕೆಲವು ಪುಸ್ತಕಗಳಲ್ಲಿ ಕಾರ್ಶ್ಯಂ ಎಂಬುವುದಕ್ಕೆ ಬದಲಾಗಿ ಕಾರ್ಷ್ಣ್ಯಂ ಎಂದಿದೆ ಅಂದರೆ ಮನುಷ್ಯನು ದಿನೇ ದಿನೇ ಕಪ್ಪಗಾಗುತ್ತ ಬರುವುದು ಇದೊಂದು ವಾತರೋಗ. ಶ್ಯಾವತಾ ಎಂದರೆ ವಾತದಿಂದ ಮನುಷ್ಯನು ಹೊಗೆಯುಬಣ್ಣಕೆ ( ಬಿಳುಪುಕಪ್ಪು ) ತಿರುಗುವುದು. ಪ್ರಲಾಪಃ ಎಂದರೆ ಮನಸ್ಸಿಮಾತನಾಡುವುದು ಇದೊಂದು ಪ್ರಲಾಪಸನ್ನಿ ಎನ್ನುವುದೇ ವ್ಯವಹಾರದಲ್ಲಿದೆ. ಕ್ಷಿಪ್ರಮೂತ್ರಕಾ ಎಂದರೆ ಬಸ್ತಿಗತವಾದ ವಾಯುವು ಪ್ರಕುಪಿತವಾಗಿ ಪದೇ ಪದೇ ಮೂತ್ರಪ್ರವೃತ್ತಿಯನ್ನು ಮಾಡಿಸುವುದು. ನಿದ್ರಾನಾಶಃ ಎಂದರೆ ವಾತವೃದ್ಧಿಯಾಗಿ ನಿದ್ರೆಯುಬರದೆ ಹೋಗುವುದು. ಸ್ವೇದನಾಶಃ ಎಂದರೆ ವಾತಪ್ರಕೋಪದಿಂದಲೇ ಬೆವರು ಬರುವುದು ಕೂಡ ಕಡಮೆಯಾಗಿ ಹೋಗುವುದು. ದುರ್ಬಲತ್ವಂ ದೇಹಬಲವು ಹಾಳಾಗಿ ಹೋಗುವುದು. ಬಲಕ್ಷಯಃ ಅಂದರೆ ದೇಹಬಲವು ಕ್ರಮೇಣ ಕ್ಷಯಿಸುತ್ತ ಬರುವುದು. ಅತಿಪ್ರವೃತ್ತಿಃಶುಕ್ರಸ್ಯ ಶುಕ್ರಧಾತುವು ಅತಿಯಾಗಿ ಹೋಗುವುದು ಅಂದರೆ ಮೈಥುನಾದಿ ನಿಮಿತ್ತಗಳಿಂದಲಾದರೂ ಕಾರಣವಿಲ್ಲದೇ ಆದರೂ ಅತಿಯಾಗಿ ಶುಕ್ರವಿರೇಚನವಾಗುವುದು ಶುಕ್ರಸ್ಯಕಾರ್ಶ್ಯಂ ಅಂದರೆ ಶುಕ್ರಧಾತುವು ವಾತಪ್ರಕೋಪದಿಂದ ಕ್ರಮೇಣ ಕ್ಷಯಿಸುತ್ತ ಬರುವುದು,ನಾಶಶ್ಚರೆ ತಸಃ ಅಂದರೆ ಶುಕ್ರಧಾತುವು ವಾತಪ್ರಕೋಪದಿಂದ ಮೂಲತಃ ನಾಶವಾಗಿಯೇ ಹೋಗಿಬಿಡುವುದು ಅನವಸ್ಥಿತಚಿತ್ತತ್ವಂ ಅಂದರೆ ವಾತಪ್ರಕೋಪದಿಂದ ಬುದಿಯು ಅವ್ಯವಸ್ಥಿತವಾಗಿ ಹೋಗುವುದು. ಬುದ್ಧಿಸರಿಯಾಗಿರುವುದಕ್ಕಿಲ್ಲ ಕಾಠಿನ್ಯಂ ಅಂದರೆ ಅವಯುವಗಳೆಲ್ಲಾ ಒರಟಾಗುವುದು ವಿರಸಾಸ್ಯತಾ ಅಂದರೆ ಬಾಯಿಗೆ ರುಚಿ ತಿಳಿಯದೆ ಹೋಗುವುದು,ಇದೂ ಒಂದು ವಾತವಿಕಾರ.ಕಷಾಯವಕ್ತ್ರತಾ ಅಂದರೆ ಯಾವಾಗಲೂ ಬಾಯಿ ಒಗರಾಗಿಯೇ ಇರುವಂತೆ ಕಷಾಯರಸವು ತೋರುತ್ತಿರುವುದು. ಆಧ್ಮಾನಂ ಹೊಟ್ಟೆಯೂದುವುದು, ಪ್ರತ್ಯಾಧ್ಮಾನಂ ಮೈಯೆಲ್ಲಾ ಊದುವುದು, ಶೀತತಂ ಮೈಯೆಲ್ಲಾ ತಣ್ಣಗಾಗುವುದು. ರೋಮಹರ್ಷಃ ಎಂದರೆ ರೋಮಾಂಚವಾಗುತ್ತಿರುವುದು, ಬೀರುತ್ವಂ ಯಾವಾಗ್ಲೂ ಸ್ವಭಾವವೇ ಪುಕ್ಕನಂತಾಗುವುದಕ್ಕೆ ಭೀರುತ್ವವೆಂದು ಹೆಸರು. ತೊದಃ ಎಂದರೆ ಮೈನೋವು. ಮೈಯಲ್ಲಿ ಯಾವಾಗಲೂ ನವೆಯಿರುವುದಕ್ಕೆ ಕಂಡೂ ಎಂಬ ಹೆಸರು. ರಸಜ್ಞತಾ ಅಂದರೆ ನಾಲಿಗೆಗೆ ರುಚಿ ತಿಳಿಯದೆ ಹೋಗುವುದು. ಶಬ್ದಾಜ್ಞತಾ ಅಂದರೆ ಕಿವಿ ಕಿವುಡಾಗುವುದು. ಪ್ರಸುಪ್ತಿಃ ಅಂದರೆ ಚರ್ಮವು ಸುಪ್ತವಾದಂತಾಗಿ ಸ್ಪರ್ಶಜ್ಞಾನವೂ ಇಲ್ಲದೆ ಹೋಗುವುದು. ಗಂಧಾಜ್ಞತ್ವಂ ಎಂದರೆ

ಮೂಗಿಗೆ ವಾಸನೆ ತಿಳಿಯದೆ ಹೋಗುವುದು. ದೃಶೋಃಕ್ಷಯಃ ಎಂದರೆ ವಾತಪ್ರಕೋಪ ದಿಂದ ನೇತ್ರೇಂದ್ರಿಯ ಪಾಟವವೂ ಕಡಮೆಯಾಗಿ ಹೋಗುವುದು ಈರೀತಿಯಾಗಿ ಈ ಎಂಬತ್ತೂ ವಾತಪ್ರಕೋಪಜನ್ಯವಾದ ವಿಕಾರಗಳು.

ಅಥಪಿತ್ತಭವಾರೋಗಾಶ್ಚತ್ವಾರಿಂಶದಿಹೋದಿತಾಃ ||
ಧೂಮೋದ್ಗಾರೋವಿದಾಹಸ್ಯಾದುಷ್ಣಾಂಗತ್ವಂಮತಿಭ್ರಮಃ ||
ಕಾಂತಿಹಾನಿಃಕಂಠಶೋಷೋಮುಖಶೋಷೋಲ್ಪಶುಕ್ರತಾ ||೧೦೭||
ತಿಕ್ತಾಸ್ಯತಾಮ್ಲವಕ್ತ್ರತ್ವಂಸ್ವೇದಸ್ರಾವೋಂಗಪಾಕತಾ ||
ಕ್ಲಮೋಹರಿತವರ್ಣತ್ವಮತೃಪ್ತಿಃಪೀತಗಾತ್ರತಾ || ೧೦೭ ||
ರಕ್ತಸ್ರಾವೋಂಗದರಣಂಲೋಹಗಂಧಾಸ್ಯತಾತಥಾ ||
ದೌರ್ಗಂಧ್ಯಂಪೀತಮೂತ್ರತ್ವಂಅರತಿಃಪೀತವಿಟ್ಕತಾ || ೧೦೮ ||
ಪೀತಾವಲೋಕನಂಪೀತನೇತ್ರತಾಪೀತದಂತತಾ ||
ಶೀತೇಚ್ಛಾಪೀತನಖತಾತೇಜೋದ್ವೇಷೋಲ್ಪನಿದ್ರತಾ || ೧೦೯ ||
ಕೋಪಶ್ಚಗಾತ್ರಸಾದಶ್ಚಭಿನ್ನವಿಟ್ಕತ್ವಮಂಧತಾ ||
ಉಷ್ಣೋಚ್ಛ್ವಾಸತ್ವಮುಷ್ಣತ್ವಂಮೂತ್ರಸ್ಯಚಮಲಸ್ಯಚ || ೧೧೦ ||
ತಮಸೋದರ್ಶನಂಪೀತಮಂಡಲಾನಾಂಚದರ್ಶನಂ ||
ನಿಸ್ಸರತ್ವಂಚಪಿತ್ತಸ್ಯಚತ್ವಾರಿಂಶದ್ರುಜಸ್ಮೃತಾಃ || ೧೧೧ ||

ಪಿತ್ತಪ್ರಕೋಪದಿಂದ ಹುಟ್ಟತಕ್ಕ ರೋಗಗಳು ನಲವತ್ತು. ಧೂಮೋದ್ಗಾರ ವೆಂದರೆ ಗಂಟಲಿನಿಂದ ಹೊಗೆ ಹೊರಟಂತೆ ತೇಗು ಹೊರಡುತ್ತಿರುವುದು. ವಿದಾಹವೆಂದ ರೆ ಊಷಚೋಷಗಳೆಂದು ತಂತ್ರಾಂತರಗಳಲ್ಲಿ ಹೇಳಿರುವ ಮೈಯ್ಯಾದ ಯಾವುದಾದರೂ ಒಂದು ಅವಯುವದಲ್ಲಿ ಉರಿ ಇವುಗಳು. ಉಷ್ಣಾಂಗತ್ವವೆಂದರೆ ಮೈಯ್ಯಿ ಯಾವಾಗ್ಯೂ ಜ್ವರಬಂದ ಹಾಗೆ ಬಿಸಿಯಾಗಿಯೇ ಇರುವುದು. ಮತಿಭ್ರಮಃ ಎಂದರೆ ಪಿತ್ತಪ್ರಕೋಪ ಜನ್ಯವಾದ ಬುದ್ಧಿಭ್ರಮಣ. ಕಾಂತಿಹಾನಿಃ ಎಂದರೆ ಶರೀರವೆಲ್ಲಾ ಬೆಂಕಿಯಿಂದ ಬೆಂದಂತಾಗಿ ದೇಹದ ತೇಜಸ್ಸೇ ಹಾಳಾಗಿಹೋಗುವುದು. ಕಂಠಶೋಷಃ ಎಂದರೆ ಪಿತ್ತದಿಂದ ಗಂಟಲು ಒಣಗುತ್ತಿರುವುದು ಮುಖಶೋಷಃ ಎಂದರೆ ಬಾಯಲ್ಲಿ ದ್ರವವೇ ಇಲ್ಲದಂತೆ ಪಿತ್ತದಿಂದ ಒಣಗಿ ಹೋಗುವುದು. ಅಲ್ಪಶುಕ್ರತಾ ಎಂದರೆ ಶುಕ್ರಧಾತುವು ಪಿತ್ತಪ್ರಕೋಪದಿಂದ ಕ್ಷಯಿಸಿಹೋಗಿರುವುದು. ತಿಕ್ತಾಸ್ಯತಾ ಎಂದರೆ ಯಾವಾಗ್ಯೂ ಬಾಯಿ ಕಹಿಯಾಗಿರುತ್ತಿರುವುದು. ಆಮ್ಲವಕ್ತ್ರತ್ವಂ ಎಂದರೆ ಬಾಯಿ ಯಾವಾಗ್ಯೂ ಹುಳಿಹುಳಿಯಾಗಿಯೇ ಇರುವುದು. ಸ್ವೇದಸ್ರಾವಃ ಎಂದರೆ ಯಾವಾಗಲೂ ಹೆಚ್ಚಾಗಿ ಬೆವರು ಬರುತ್ತಿರುವುದು. ಅಂಗಪಾಕತಾ ಎಂದರೆ ಅವಯುವಗಳಲ್ಲೆಲ್ಲಾ ಒಂದು ಬಗೆ ಯಾದ ಬೆವರುಸಾಲೆಯಂತಹ ಸಣ್ಣ ಬೊಕ್ಕೆಗಳೆದ್ದು ಹಿಂಸಪಡಿಸುವುದು ಕ್ಲಮಃ ಎಂದರೆ ಕಾರಣವಿಲ್ಲದ ಅತಿಯಾಗಿ ದೇಹದಲ್ಲಿ ಆಯಾಸತೋರುತ್ತಿರುವುದು. ಹರಿತವರ್ಣತ್ವಂ ಎಂದರೆ ಮೈಯ್ಯೆಲ್ಲಾ ಹಸುರುಬಣ್ಣಕ್ಕೆ ಬರುವುದು. ಅತೃಪ್ತಿಃ ಎಂದರೆ ಎಷ್ಟು ತಿಂದರೂ ತೃಪ್ತಿಯೇ ಆಗುವುದಕ್ಕಿಲ್ಲ. ಪೀತಗಾತ್ರತಾ ಎಂದರೆ ಶರೀರವು ಸ್ವಲ್ಪ ಬಿಳಪು ಸೇರಿದ ಹಳದಿಯ ಬಣ್ಣಕ್ಕೆ ಬರುವುದು. ರಕ್ತಸ್ರಾವಃ ಎಂದರೆ ಊರ್ಧ್ವ ಮತ್ತು

ಅಧೋದ್ವಾರಗಳಿಂದ ರಕ್ತವು ಹೊರಬೀಳುತ್ತಿರುವುದು. ಅಂಗದರಣಂ ಎಂದರೆ ಚರ್ಮವೆಲ್ಲಾ ಒಣಗಿ ಒರಟಾಗಿ ಬಿರಕುಬಿಟ್ಟಿರುವಂತೆ ತೋರುತ್ತಿರುವುದು. ಲೋಹಗಂಧಾಸ್ಯತಾ ಎಂದರೆ ಬಾಯಿನಿಂದ ಕಬ್ಬಿಣದ ವಾಸನೆಯುಕ್ತವಾದ ಶ್ವಾಸವು ಹೊರಡುತ್ತಿರುವುದು ದೌರ್ಗಂಧ್ಯಂ ಎಂದರೆ ಅವಯವಗಳಲ್ಲಿ ಎಲ್ಲಾ ಬೆವರಿನ ದುರ್ವಾಸನೆ ಬರುತ್ತಿರುವುದು. ಪೀತಮೂತ್ರತ್ವಂ ಎಂದರೆ ಮೂತ್ರವು ಅರಿಸಿನದ ನೀರಿನಂತೆ ಕಾಣುತ್ತಿರುವುದ . ಅರತಿಃ ಅಂದರೆ ಯಾವ ವಸ್ತುವಿನಲ್ಲಿಯೂ ಅಪೇಕ್ಷೆಯಿಲ್ಲದಿರುವುದು. ಪೀತವಿಟ್ಕತಾ ಎಂದರೆ ಮಲದ ಬಣ್ಣವು ಸಹ ಹಳದಿಯಾಗಿಯೇ ಇರುವುದು. ಪೀತಾವಲೋಕನಂ ಎಂದರೆ ಯಾವ ಪದಾರ್ಥವನ್ನು ನೋಡಿದರೂ ಹಳದಿಯ ಬಣ್ಣವಾಗಿ ಕಾಣುವುದು. ಪೀತನೇತ್ರತಾ ಎಂದರೆ ಕಣ್ಣು ಸಹ ಹಳದಿಯಬಣ್ಣವಾಗುವುದು ಪೀತದಂತತಾ ಅಂದರೆ ಹಲ್ಲುಗಳ ಬಣ್ಣವೂ ಹಳದಿಯಾಗಿ ಹೋಗುವುದು, ಶೀತೇಚ್ಛಾ ಅಂದರೆ ಯಾವಾಗಲೂ ತಣ್ಣಗಿರುವ ವಸ್ತುಗಳ ಮೇಲೆ ಅಪೇಕ್ಷೆಯಾಗುತ್ತಿರುವುದು. ಪೀತನಖತಾ ಎಂದರೆ ಉಗುರುಗಳು ಹಳದಿಬಣ್ಣವಾಗುವುದು. ತೇಜೋದ್ವೇಷಃ ಅಂದರೆ ಬಿಸಿಲು ಬೆಳಕು ಮೊದಲಾದವುಗಳನ್ನು ನೋಡುವುದಕ್ಕೆ ಬೇಜಾರು ಬರುವುದು. ಅಲ್ಪನಿದ್ರತಾ ಎಂದರೆ ನಿದ್ರೆ ಕಡಮೆಯಾಗುವುದು. ಕೋಪಃ ಎಂದರೆ ಸ್ವಲ್ಪ ಕಾರಣಗಳಿಂದಲೇ ಶೀಘ್ರವಾಗಿ ಶಿಟ್ಟು ಬರುವ ಸ್ವಭಾವ ಉಂಟಾಗುವುದು. ಗಾತ್ರಸಾದಃ ಎಂದರೆ ಅವಯವಗಳಲ್ಲಿ ಸೋಲು ಭಿನ್ನವಿಟ್ಕತ್ವಂ ಎಂದರೆ ನೀರಾಗಿ ಮಲಪ್ರವೃತ್ತಿಯಾಗುವುದು. ಅಂಧತಾ ಎಂದರೆ ಕಣ್ಣು ಕಾಣದೆ ಹೋಗುವುದು. ಉಷ್ಣೋಚ್ಛ್ವಾಸತ್ವಂ ಎಂದರೆ ಉಸಿರು ಬೆಚ್ಚಗಿರುವುದು. 'ಮೂತ್ರಸ್ಯಚ ಮಲಸ್ಯಚ ಉಷ್ಣತ್ವಂ ಎಂದರೆ ಮಲಮೂತ್ರಗಳು ಬಿಸಿಯಾಗಿರುವುದು. ತಮಸೋದರ್ಶನಂ ಅಂದರ ಕಣ್ಣು ಕತ್ತಲೆ ಹಿಡಿಯುವುದು. ಪೀತಮಂಡಲಾನಾಂಚದರ್ಶನಂ ಆಕಾಶದ ಕಡೆಗೆ ನೋಡಿದರೆ ಯಾವಾಗಲೂ ಹಳದಿ ಬಣ್ಣವಾಗಿ ಕಾಣುವುದು. ನಿಸ್ಸರತ್ವಂಚಪಿತ್ತಸ್ಯ ಅಂದರ ಪಿತ್ತವು ಪದೇ ಪದೇ ವಾಂತಿಯಾಗುತ್ತಿರುವುದು. ಇವು ನಲವತ್ತೂ ಪಿತ್ತಪ್ರಕೋಪಜನ್ಯ ರೋಗಗಳು.

> ಕಫಸ್ಯವಿಂಶತಿಃಪ್ರೋಕ್ತಾರೋಗಾಸ್ತಂದ್ರಾತಿನಿದ್ರತಾ ॥
> ಗೌರವಂಮುಖಮಾಧುರ್ಯಂಮುಖಲೇಪಃಪ್ರಸೇಕತಾ ॥ ೧೨೨ ॥
> ಶ್ವೇತಾವಲೋಕನಂಶ್ವೇತವಿಟ್ಕತ್ವಂಶ್ವೇತಮೂತ್ರತಾ ॥
> ಶ್ವೇತಾಂಗವರ್ಣತಾಶೈತ್ಯಮುಷ್ಣೇಚ್ಛಾತಿಕ್ತಕಾಮಿತಾ ॥ ೧೨೩ ॥
> ಮಲಾಧಿಕ್ಯಂಚಶುಕ್ರಸ್ಯಬಾಹುಲ್ಯಂಬಹುಮೂತ್ರತಾ ॥
> ಆಲಸ್ಯಂಮಂದಬುದ್ಧಿತ್ವಂತೃಪ್ತಿರ್ಘುರ್ಘುರವಾಕ್ಯತಾ ॥ ೧೨೪ ॥
> ಅಚೈತನ್ಯಂಚಗದಿತಾವಿಂಶತಿಶ್ಲೇಷ್ಮಜಾಗದಾಃ ॥

ಕಫಪ್ರಕೋಪದಿಂದ ಹುಟ್ಟತಕ್ಕ ರೋಗಗಳಿಪ್ಪತ್ತು ತಂದ್ರಾ ಎಂದರೆ ಆಕಳಿಕೆ ತೂಕಡಿಕೆಗಳು. ಅತಿನಿದ್ರತಾ ಎಂದರೆ ಅತಿಯಾದ ನಿದ್ರೆ. ಗೌರವಂ ಎಂದರೆ ತಲೆ ಮತ್ತು ಮೈಯ್ಯಿ ಸಹ ಭಾರವಾಗಿರುವಂತೆ ತೋರುತ್ತಿರುವುದು. ಮುಖಮಾಧುರ್ಯಂ ಎಂದರೆ ಬಾಯಿನಲ್ಲಿ ಯಾವಾಗಲೂ ಮಧುರರಸ ತೋರುತ್ತಿರುವುದು. ಮುಖಲೇಪಃ ಎಂದರೆ ಬಾಯಿ ತುಂಬಲೂ ಕಫವನ್ನು ಲೇಪಮಾಡಿದಂತೆ ತೋರುವುದು. ಪ್ರಸೇಕತಾ

ಎಂದರೆ ಬಾಯಿನಲ್ಲಿ ಜೊಲ್ಲುನೀರು ಹೆಚ್ಚಾಗುವುದು. ಶ್ವೇತಾವಲೋಕನವೆಂದರೆ ಯಾವ ವಸ್ತುವನ್ನು ನೋಡಿದರೂ ಬೆಳ್ಳಗೆ ಕಾಣುವುದು. ಶ್ವೇತವಿಟ್ಕತ್ವಂ ಶ್ವೇತಮೂತ್ರತಾ ಅಂದರೆ ಮಲಮೂತ್ರಗಳು ಬೆಳ್ಳಗಾಗುವುದು, ಶ್ವೇತಾಂಗವರ್ಣತಾ ಎಂದರೆ ಮೈ ಬಣ್ಣ ಬೆಳ್ಳಗಾಗುವುದು. ಶೈತ್ಯಂ ಎಂದರೆ ಯಾವಾಗಲೂ ಮೈ ತಣ್ಣಗಿರುವುದು. ಉಷ್ಣೇಚ್ಛಾ ಅಂದರೆ ಯಾವಾಗ್ಯೂ ಬಿಸಿಯಾದ ವಸ್ತುಗಳ ಮೇಲೆ ಅಪೇಕ್ಷೆ. ತಿಕ್ತಕಾಮಿತಾ ಎಂದರೆ ಕಾರ ಮತ್ತು ಕಹಿಯಾದ ವಸ್ತುಗಳಲ್ಲಿ ಅಪೇಕ್ಷೆ. ಮಲಾಧಿಕ್ಯಂ ಅಂದರೆ ಮಲವು ಪ್ರಮಾಣಕ್ಕಿಂತ ಹೆಚ್ಚಾಗಿರುವುದು. ಶುಕ್ರಸ್ಯಬಾಹುಳ್ಯಂ ಎಂದರೆ ಶುಕ್ರವು ಅತಿಯಾಗಿ ವೃದ್ಧಿಯಾಗುವುದು. ಬಹುಮೂತ್ರತಾ ಎಂದರೆ ಮೂತ್ರದ ಪ್ರಮಾಣವು ಹೆಚ್ಚಾಗುವುದು. ಆಲಸ್ಯವೆಂದರೆ ಕೆಲಸಮಾಡಲು ಸಾಮರ್ಥ್ಯವಿದ್ದರೂ ಇಚ್ಛೆಯೇ ಇಲ್ಲದಿರುವುದು ಅಂದರೆ ಸೋಮಾರಿತನ. ಮಂದಬುದ್ಧಿತ್ವಂ ಅಂದರೆ ಬುದ್ಧಿಯು ಮೊದ್ದಾಗುವುದು. ತೃಪ್ತಿಃ ಅಂದರೆ ಯಾವಾಗ್ಯೂ ಹೊಟ್ಟೆತುಂಬಿದಂತೆ ಅನ್ನದಮೇಲಿನ ಅಪೇಕ್ಷೆಯೇ ತಪ್ಪಿಹೋಗುವುದು. ಘರ್ಘರವಾಕ್ಯತಾ ಎಂದರೆ ಧ್ವನಿ ದಪ್ಪವಾಗಿ ಗೊಗ್ಗರ ಧ್ವನಿ ಬೀಳುವುದು. ಅಚೈತನ್ಯಂ ಅಂದರೆ ಜ್ಞಾನಶಕ್ತಿ ಕಡಮೆಯಾಗುತ್ತಿರುವುದು. ಈರೀತಿಯಾಗಿ ಇಪ್ಪತ್ತುವಿಧವಾದ ವಿಕಾರಗಳು ಶ್ಲೇಷ್ಮಪ್ರಕೋಪಜನ್ಯಗಳು.

ರಕ್ತಸ್ಯಚದಶಪ್ರೋಕ್ತಾವ್ಯಾಧಯಸ್ತೇಷುಗೌರವಂ ॥ ೧೨೫ ॥
ರಕ್ತಮಂಡಲತಾರಕ್ತನೇತ್ರತ್ವಂರಕ್ತಮೂತ್ರತಾ ॥
ರಕ್ತನಿಷ್ಠೀವನಂರಕ್ತಪಿಡಕಾನಾಂಚದರ್ಶನಂ ॥ ೧೨೬ ॥
ಔಷ್ಣ್ಯಂಚಪೂತಿಗಂಧತ್ವಂಪೀಡಾಪಾಕಶ್ಚಜಾಯತೇ ॥

ರಕ್ತದಲ್ಲಿ ಉತ್ಪನ್ನವಾಗತಕ್ಕ ರೋಗಗಳು ಹತ್ತು. ಗೌರವಂ ಎಂದರೆ ಮೈಭಾರ ಕಫಪ್ರಕೋಪದಲ್ಲಿರುವಂತೆಯೇ, ರಕ್ತಮಂಡಲತಾ ಎಂದರೆ ದುಂಡು ದುಂಡಾದ ಸಣ್ಣ ಬಕ್ಕೆಗಳು ಮೈಯ್ಯಲ್ಲೆಲ್ಲಾ ಏಳುವುದು. ರಕ್ತನೇತ್ರತ್ವಂ ಕಣ್ಣು ಕೆಂಪಗಾಗುವುದು. ರಕ್ತಮೂತ್ರತಾ ಅಂದರೆ ಮೂತ್ರದ ಬಣ್ಣವು ಕೆಂಪಾಗಿರುವುದು. ರಕ್ತನಿಷ್ಠೀವನಂ ಅಂದರೆ ಉಗುಳಿನ ಜೊತೆಯಲ್ಲಿ ರಕ್ತವು ಹೊರಬೀಳುತ್ತಿರುವುದು ರಕ್ತಪಿಡಕಾನಾಂಚದರ್ಶನಂ ಅಂದರೆ ರಕ್ತವರ್ಣವಾದ ಬಕ್ಕೆಗಳು ಮೈಯ್ಯಲ್ಲೆಲ್ಲಾ ಏಳುವುದು. ಔಷ್ಣ್ಯಂ ಅಂದರೆ ಮೈಬಿಸಿಯಾಗಿರುವುದು. ಪೂತಿಗಂಧತ್ವಂ ಅಂದರೆ ಬಾಯಲ್ಲಿ ದುರ್ವಾಸನೆ ಬರುವುದು ಪೀಡಾ ಅಂದರೆ ಮೈನೋವು ಪಾಕಃ ಅಂದರೆ ರಕ್ತಮಾಂಸಗಳಷ್ಟೂ ಹುಣ್ಣಾಗಿಹೋಗುವುದು. ಇವು ರಕ್ತದೋಷಜನ್ಯಗಳಾದ ರೋಗಗಳು.

ತೇಷ್ವೋಷ್ಠರೋಗಾಗಣಿತಾಏಕಾದಶಮಿಬುತಾಧೈಃ ॥
ವಾತಪಿತ್ತಕಫೈಸ್ತ್ರೇಧಾತ್ರಿದೋಷೈರಸ್ರಜಾತಥಾ ॥ ೧೨೮ ॥
ಕ್ಷತಂಮಾಂಸಾರ್ಬುದಂಚೈವಖಂಡೋಷ್ಠಂಚಜಲಾರ್ಬುದಂ ॥
ಮೇದೋರ್ಬುದಂಚಾರ್ಬುದಂಚರೋಗಾಏಕಾದಶಸ್ಮೃತಾಃ ॥ ೧೨೯ ॥

ತುಟಿಗಳಿಗೆ ಸಂಭವಿಸತಕ್ಕ ರೋಗಗಳು ಹನ್ನೊಂದು. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ದೋಷತ್ರಯಪ್ರಕೋಪಜನ್ಯ, ರಕ್ತದೋಷಜನ್ಯ, ಕ್ಷತೋಷ್ಠ, ಮಾಂಸಾರ್ಬುದ, ಖಂಡೋಷ್ಠ, ಜಲಾರ್ಬುದ, ಮೇದೋ

ರ್ಬುದ, ಅರ್ಬುದ ಎಂಬದಾಗಿ, ವಾತಪ್ರಕೋಪಜನ್ಯವಾದ ಓಷ್ಠರೋಗದಲ್ಲಿ ಓಷ್ಠಗಳು ಒರಟಾಗಿ ಸ್ತಬ್ಧವಾಗಿದ್ದುಕೊಂಡು ತುಟಿಯಲ್ಲಿ ವಾತಜನ್ಯವಾದ ವಡತ ಮಾತ್ರ ತೋರುತ್ತಿರುತ್ತದೆ. ಪಿತ್ತಪ್ರಕೋಪಜನ್ಯವಾದ ಓಷ್ಠರೋಗದಲ್ಲಿ ತುಟಿಯಮೇಲೆಲ್ಲಾ ಬೊಕ್ಕೆಗಳೇಳುವುದು. ತುಟಿ ಅತಿಯಾಗಿ ಉರಿಯುತ್ತಿರುವುದು ಹಳದಿ ಬಣ್ಣವಾಗುವುದು ಕಫಪ್ರಕೋಪಜನ್ಯವಾದ ಓಷ್ಠರೋಗದಲ್ಲಿ ತುಟಿ ಬೆಳ್ಳಗಾಗಿ ಬಿಳಿಯ ಬೊಕ್ಕಗಳಿಂದ ತುಂಬಿಕೊಳ್ಳುವುದು ಆದರೆ ನೋವು ಮುಂತಾದ್ದೇನೂ ಇರುವುದಿಕ್ಕಿಲ್ಲ. ತುಟಿಯು ಯಾವಾಗ್ಯೂ ಜಿಗಟಾಗಿ ತಣ್ಣಗಿರುವುದು. ತ್ರಿದೋಷಪ್ರಕೋಪಜನ್ಯವಾದ ಓಷ್ಠರೋಗದಲ್ಲಿ ತುಟಿಯು ಒಂದು ವೇಳೆ ಬೆಳ್ಳಗೆ ಮತ್ತೊಂದುವೇಳೆ ಕೆಂಪಗೆ ಕರ್ರಗೆ ಸಹ ಕಾಣುತ್ತ ಯಾವಾಗ್ಯೂ ನಾನಾವರ್ಣಗಳಾದ ಬೊಕ್ಕೆಗಳಿಂದ ತುಂಬಿಕೊಂಡಿರುತ್ತದೆ, ರಕ್ತದೋಷದಿಂದುತ್ಪನ್ನವಾದ ಓಷ್ಠರೋಗದಲ್ಲಿ ತುಟಿಯು ಖರ್ಜೂರದ ಹಣ್ಣಿನ ಬಣ್ಣವಾಗಿ ತುಟಿಯ ಮೇಲೆಲ್ಲಾ ಬಕ್ಕೆಗಳೆದ್ದು ಯಾವಾಗ್ಯೂ ರಕ್ತಸುರಿಯುತ್ತಿರುತ್ತದೆ. ಕ್ಷತಜನ್ಯವಾದ ಓಷ್ಠರೋಗದಲ್ಲಿ ತುಟಿಯಲ್ಲಿ ಗಾಯವಾಗುವುದು, ತುಟಿಯು ಕೆಂಪುಬಣ್ಣವಾಗಿ ಯಾವಾಗ್ಯೂ ವೇದನೆಯಿಂದ ಕೂಡಿಕೊಂಡೇ ಇರುವುದು ಮಾಂಸಾರ್ಬುದವೆಂದರೆ ತುಟಿಯಲ್ಲಿ ಮಾಂಸಾರ್ಬುದದಂತೆ ಕುರುಗಳೇಳುವುದು. ಇದರಲ್ಲಿ ಒಂದೊಂದು ವೇಳೆ ಹುಳ ಸಹ ಬೀಳುವದುಂಟು. ಖಂಡೋಷ್ಠವೆಂಬುವುದು ಯಾವುದಾದರೂ ಪೆಟ್ಟಿನಿಂದ ತುಟಿ ಕತ್ತರಿಸಿ ವಿಕಾರವಾಗುವುದು. ಜಲಾರ್ಬುದವೆಂದರೆ ನೀರಿನ ಗುಳ್ಳೆಯಂತೆ ತುಟಿಯಮೇಲೆಲ್ಲಾ ಗುಳ್ಳೆಗಳೇಳುವುದು. ಮೇದೋರ್ಬುದವೆಂದರೆ ತುಟಿ ಬೆಳ್ಳಗಾಗಿ ಬಿಳಿಯ ಬಣ್ಣದ ಬಾವೆದ್ದು ಯಾವಾಗ್ಯೂ, ನೋಯುತ್ತಿರುವುದು. ಅರ್ಬುದವೆಂದರೆ ತುಟಿಯಮೇಲೆ ಸಾಮಾನ್ಯವಾಗಿ ಬಾವು ಏಳುವುದು.

> ದಂತರೋಗಾದಶಖ್ಯಾತಾದಾಲನಃಕ್ರಿಮಿದಂತಕಃ ||
> ದಂತಹರ್ಷಃಕರಾಳಶ್ಚ ದಂತಚಾಲಶ್ಚ ಶರ್ಕರಾ || ೧೩೦ ||
> ಅಧಿದಂತಶ್ಯಾವದಂತೋದಂತಭೇದಃಕಪಾಲಿಕಾ ||
> ತಥಾತ್ರಯೋದಶಮಿತಾದಂತಮೂಲಾಮಯಾಸ್ಮೃತಾ || ೧೩೧ ||
> ಶೀತಾದೋಪಕುಶೌದ್ಧ್ಯತುದಂತವಿಪ್ರಧಿಪುಪ್ಪುಟೌ ||
> ಅಧಿಮಾಂಸೋವಿದರ್ಭಶ್ಚ ಮಹಾಸೌಷಿರಸೌಷಿರೌ || ೧೩೨ ||
> ತೇಷ್ವೇವಗತಯಃಪಂಚವಾತಾತ್ಪಿತ್ತಾತ್ಕಫಾದಪಿ ||
> ಸನ್ನಿಪಾತಾದ್ಗತಿಶ್ಚಾನ್ಯಾರಕ್ತನಾಡೀಚಪಂಚಮೀ || ೧೩೩ ||

ಹಲ್ಲಿಗೆ ಸಂಭವಿಸಬಹುದಾದ ರೋಗಗಳು ಹತ್ತು. ದಾಲನ, ಕ್ರಿಮಿದಂತ, ದಂತಹರ್ಷ, ಕರಾಳ, ದಂತಚಾಲ, ಶರ್ಕರಾ, ಅಧಿದಂತ, ಶ್ಯಾವದಂತ, ದಂತಭೇದ, ಕಪಾಲಿಕ, ಎಂಬದಾಗಿ, ದಾಲನವೆಂದರೆ ಹಲ್ಲನ್ನು ಕೀಳಲು ಅಲ್ಲಾಡಿಸುವಷ್ಟು ಮನಸ್ಸಿಗೆ ಹಿಂಸೆ ತೋರುತ್ತ ಹಲ್ಲಿನಲ್ಲಿ ಬರತಕ್ಕ ಒಂದು ವಿಧವಾದ ವಡತ. ಕ್ರಿಮಿದಂತವೆಂದರೆ ಹುಳಕ ಹಲ್ಲು ಬಿದ್ದು ಶೂಲೆ ಬರುವುದು. ದಂತಹರ್ಷವೆಂದರೆ ಹಲ್ಲಿಗೆ ಹುಳಿ, ಗಾಳಿ, ಗಟ್ಟಿ ಪದಾರ್ಥಗಳು ಇವು ಯಾವುದೂ ಸೋಕದಂತಾಗಿ ಹೋಗುವುದು, ಕರಾಳವೆಂದರೆ ವಾತಪ್ರಕೋಪದಿಂದ ಹಲ್ಲುಗಳು ಒಂದು ಸಮನಾಗಿ ಹುಟ್ಟದೆ ಹುಚ್ಚಾಬಟ್ಟೆ ಹುಟ್ಟುವದು. ದಂತಚಾಲವೆಂದರೆ ವಾತಾದಿಪ್ರಕೋಪದಿಂದ ಅಕಾಲದಲ್ಲಿ ಹಲ್ಲುಗಳು ಅಲ್ಲಾ

ಡುವುದು. ಶರ್ಕರಾ ಎಂದರೆ ಹಲ್ಲಿನ ಬುಡದಲ್ಲಿಕೊಳೆ ಸೇರಿಕೊಂಡು ಕ್ರಮೇಣ ಗಟ್ಟಿಯಾಗಿ ಕಲ್ಲಿನಂತಾಗುವುದು. ಅಧಿದಂತವೆಂದರೆ ವಾತಾದಿ ಪ್ರಕೋಪದಿಂದ ಹಲ್ಲಿನ ವತ್ತಿನಲ್ಲಿಯೇ ಹೆಚ್ಚಿಗೇ ಹಲ್ಲು ಹುಟ್ಟುವುದು ಶ್ಯಾವದಂತವೆಂದರೆ ಶುಭ್ರವಾಗಿರುವ ಹಲ್ಲುಗಳು ಕಪ್ಪಾಗುವುದು. ದಂತಭೇದವೆಂದರೆ ಹಲ್ಲುಶೂಲೆ. ಕಪಾಲಿಕಾ ಎಂದರೆ ಹಲ್ಲಿನ ಬುಡದಲ್ಲಿ ಹಿಂದೆ ಹೇಳಿದ ದಂತಶರ್ಕರಾ ರೋಗದಂತೆಯೇ ಕೊಳೆ ಸೇರಿ ಗಟ್ಟಿಯಾಗಿ ದಂತವನ್ನೆಲ್ಲಾ ಆವರಿಸಿಕೊಳ್ಳುವುದು.

ಹಲ್ಲಿನ ಬುಡದಲ್ಲಿ ಸಂಭವಿಸತಕ್ಕ ರೋಗಗಳು ಹದಿಮೂರು. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿವಾತಜನ್ಯ, ರಕ್ತನಾಡೀಜನ್ಯ, ಶೀತಾದ, ಉಪಕುಶ, ದಂತವಿದ್ರಧಿ, ಪುಪ್ಪುಟ, ಅಧಿಮಾಂಸ, ವಿದರ್ಭ, ಮಹಾಸೌಷಿರ, ಸೌಷಿರ, ಎಂಬದಾಗಿ. ಶೀತಾದವೆಂದರ ಹಲ್ಲಿನ ಬುಡದಲ್ಲಿ ಅಂದರ ವಸಡಿನಲ್ಲಿ ದುರ್ಗಂಧಯುಕ್ತವಾಗಿ ಕಪ್ಪಾದ ರಕ್ತಹೊರಡುತ್ತಿರುವುದು. ವಸಡುಬಾತು ವ್ರಣವಾಗುವುದು ಉಪಕುಶ ಎಂದರೆ ವಸಡು ಉರಿಯುವುದು. ವಸಡಿನ ಮೇಲೆಲ್ಲಾ ಸಣ್ಣ ಸಣ್ಣ ವ್ರಣಗಳಾಗುವುದು. ಹಲ್ಲು ಸಹಾ ಅಲ್ಲಾಡುವುದು. ದಂತವಿದ್ರಧಿ ಎಂದರೆ ಹೊರಭಾಗದಲ್ಲಿ ದವಡೆಯ ಮೇಲೆ ಊದಿಕೊಂಡು ಬಾವೆದ್ದು ಅದರಿಂದ ರಕ್ತ ಕೀವುಗಳು ಸೋರುವುದಕ್ಕೆ ಹೆಸರು. ದಂತಪುಪ್ಪುಟವೆಂದರೆ ಎರಡು ಅಥವಾ ಮೂರು ಹಲ್ಲುಗಳ ಬುಡದಲ್ಲಿ ಬಾತುಹೋಗುವುದಕ್ಕೆ ಹೆಸರು. ಅಧಿಮಾಂಸವೆಂದರೆ ಎಡಗಡೆಯ ಹಲ್ಲುಗಳ ಬುಡದಲ್ಲಿ ಶೋಥ ಉಂಟಾಗಿ ಅದರಿಂದ ಮುಖಕ್ಕೇನೇ ವಿಕಾರಉಂಟಾಗಿ ಜೊಲ್ಲು ಸುರಿಯಲಾರಂಭವಾದರ ಅದಕ್ಕೆ ಹೆಸರು. ವಿದರ್ಭವೆಂದರೆ ಹಲ್ಲುತಿಕ್ಕುವ ಸಾಧನಗಳಿಂದ ವಸಡಿಗೆ ಪೆಟ್ಟಾಗಿ ವಸಡಿನ ಬಿಗಿತಪ್ಪಿ ವಸಡಿನ ನೋವು, ಹಲ್ಲು ಅಲ್ಲಾಡುವುದು ಇಂತಹ ವಿಕಾರಗಳಾಗುವುದಕ್ಕೆ ಹೆಸರು. ಮಹಾಸೌಷಿರವೆಂದರೆ ವಸಡಿನಲ್ಲಿ ವಡತ ಹಲ್ಲುಗಳು ಅಲ್ಲಾಡುವುದು ಇದಕ್ಕೆ ಹೆಸರು. ಸೌಷಿರವೆಂದರೆ ವಸಡಿನಲ್ಲಿ ವಡತ ಹಲ್ಲು ಅಲ್ಲಾಡುವುದು, ವಸಡು ಬಾತು ಕೀವಾಗಿ ತುಂಬಿದ್ದು ಅದರಿಂದ ರಕ್ತ ಕೀವು ಸೋರುವುದು, ಗಾಯಗಳಾಗುವುದು ಇದಕ್ಕೆ ಹೆಸರು. ಮುಖ್ಯವಾಗಿ ಈ ದಂತಮೂಲಕ್ಕೆ ಬರತಕ್ಕ ರೋಗಗಳ ವಿಷಯವನ್ನು ತಿಳಿಯಬೇಕಾದರ ದಂತಮೂಲದಲ್ಲಿರತಕ್ಕ ನಾಡಿಗಳ ಸ್ವರೂಪವನ್ನರಿಯಬೇಕು. ಅಲ್ಲಿರುವ ನಾಡಿಗಳು ವಾತ, ಪಿತ್ತ, ಕಫ. ತ್ರಿದೋಷಸನ್ನಿವಾತ, ರಕ್ತ ಈ ದೋಷಗಳಿಂದ ದುಷ್ಟಗಳಾಗಿ ದಂತಮೂಲ ರೋಗವನ್ನು ಹುಟ್ಟಿಸುತ್ತವೆ.

ತಥಾಜಿಹ್ವಾಮಯಾಃಷಟ್ ಸ್ಯುರ್ವಾತಪಿತ್ತಕಫೈಸ್ತ್ರಿಧಾ ॥
ಅಲಾಸಶ್ಚ ಚತುರ್ಥಸ್ಯಾದಧಿಜಿಹ್ವಾಚಪಂಚಮೀ ॥ ೧೩೪ ॥
ಷಷ್ಠೀಚೈವೋಪಜಿಹ್ವಾಸ್ಯಾತ್ . .... . . .....

ನಾಲಿಗೆಗೆ ಬರತಕ್ಕ ರೋಗಗಳು ಆರುವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ಅಲಾಸ, ಅಧಿಜಿಹ್ವ, ಉಪಜಿಹ್ವ, ಎಂಬದಾಗಿ. ವಾತಪ್ರಕೋಪಜನ್ಯವಾದ ಜಿಹ್ವಾರೋಗದಲ್ಲಿ ನಾಲಿಗೆ ಒಡದು ಛಿದ್ರವಾಗಿ ಸ್ಪರ್ಶಜ್ಞಾನವಿಲ್ಲದಂತಾಗಿ ಒರಟಾಗಿರುತ್ತದೆ. ಪಿತ್ತಪ್ರಕೋಪಜನಿತವಾದ ಜಿಹ್ವಾರೋಗದಲ್ಲಿ

ನಾಲಿಗೆ ಕೆಂಪಾಗಿರುತ್ತದೆ. ನಾಲಿಗೆಯಲ್ಲಿ ಉರಿ ಇರುತ್ತದೆ. ನಾಲಿಗೆಯ ಮೇಲೆ ಕೆಂಪು ಮುಳ್ಳುಗಳು ಸಹ ಇರುವದುಂಟು. ಕಫಪ್ರಕೋಪಜನ್ಯವಾದ ಜಿಹ್ವಾರೋಗದಲ್ಲಿ ನಾಲಿಗೆ ದಪ್ಪವಾಗಿರುತ್ತದೆ. ನಾಲಿಗೆಯ ಮೇಲೆ ದಪ್ಪನಾದ ಮುಳ್ಳುಗಳಿರುತ್ತವೆ ಅಲಸವೆಂಬ ಜಿಹ್ವಾರೋಗವು ಕಫ ಮಾತ್ರ ರಕ್ತಪ್ರಕೋಪದಿಂದ ಹುಟ್ಟಿದ್ದಾಗಿರುತ್ತದೆ. ಇದರಲ್ಲಿ ನಾಲಿಗೆಯು ಊದಿರುತ್ತದೆ ನಾಲಿಗೆಯ ಬುಡದಲ್ಲಿ ವ್ರಣಗಳಿರುವುದು. ನಾಲಿಗೆಯಲ್ಲಿ ಚಲನಶಕ್ತಿಯೇ ನಷ್ಟವಾಗಿ ಹೋಗಿರುವುದೂ ಉಂಟು. ಅಧಿಜಿಹ್ವ ಎಂಬ ಜಿಹ್ವಾರೋಗದಲ್ಲಿ ನಾಲಿಗೆಯ ಮೇಲ್ಭಾಗವೆಲ್ಲಾ ಬಾತುಹೋಗಿ ಹೊಸದೊಂದು ನಾಲಿಗೆಯೆ ತನ್ನ ನಾಲಿಗೆಯ ಮೇಲೆ ಕುಳಿತಿರುವಂತೆ ತೋರುತ್ತಿರುವುದು. ಉಪಜಿಹ್ವಾ ಎಂದರೆ ನಾಲಿಗೆಯ ಕೆಳಭಾಗದಲ್ಲಿ ಬಾತುಹೋಗಿ ತೊಂದರೆಪಡಿಸುವುದಕ್ಕೆ ಹೆಸರು.

.. . ..... . . .. ..ತಥಾಷ್ಟೌತಾಲುಜಾಗದಾಃ ||
ಅರ್ಬುದಂತಾಲುಪಿಡಕಾಕಚ್ಛಪೀತಾಲುಸಂಹತಿಃ || ೧೩೫ ||
ಗಳಶುಂಡೀತಾಲುಶೋಥಸ್ತಾಲುಪಾಕಶ್ಚಪುಪ್ಪುಟಃ ||

ದವಡೆಯಲ್ಲಿ ಹುಟ್ಟತಕ್ಕ ರೋಗಗಳೆಂಟುವಿಧ. ಅರ್ಬುದ, ತಾಲುಪಿಟಕ, ಕಚ್ಛಪಿ, ತಾಲುಸಂಹತಿ, ಗಲಶುಂಡಿ, ತಾಲುಶೋಥ, ತಾಲುಪಾಕ, ಪುಪ್ಪುಟ ಎಂಬದಾಗಿ. ಅರ್ಬುದವೆಂದರೆ ದವಡೆಯ ಮಧ್ಯದಲ್ಲಿ ದುಂಡಾಗಿ ಕಮಲದ ಹೂವಿನ ಹಾಗೆ ಕೆಂಪಗೆ ಊದಿದರೆ ಹೆಸರು. ತಾಲುಪಿಟಕವೆಂದರೆ ದವಡೆಯ ಮೇಲೆ ಅನೇಕ ಬಕ್ಕೆಗಳೇಳುವುದು, ದವಡೆ ಊದುವುದು, ಜ್ವರ ಬರುವುದು. ಕಚ್ಛಪಿ ಅಂದರೆ ದವಡೆಯ ಮೇಲೆ ಆಮೆಯ ಆಕಾರದ ಕೆಂಪಾದ ಒಕ್ಕೆ ಏಳುವುದು. ತಾಲು ಸಂಹತಿ ಎಂದರೆ ದವಡೆಯ ಮಾಂಸವು ಒಂದು ಕಡೆಯಲ್ಲಿ ಸೇರಿ ಗಂಟಾಗುವುದು, ನೋವೇನೂ ಇರುವುದಿಲ್ಲ. ಗಲಶುಂಡಿ ಎಂದರೆ ಗಾಳಿ ತುಂಬಿದ ಚೀಲದಂತೆ ದವಡೆಯ ಮಾಂಸವು ಬಾತು ಮೊತ್ತಗೆ ದೊಡ್ಡದಾಗುವುದು, ಜ್ವರ, ಬಾಯಾರಿಕೆ, ಕೆಮ್ಮು, ಉಬ್ಬಸ ಇವೆಲ್ಲಾ ಇರುವುದು. ತಾಲುಶೋಥವೆಂದರೆ ದವಡೆಯೆಲ್ಲಾ ಊದುವುದು, ವಡತ ಬರುವುದು. ತಾಲುಪಾಕವೆಂದರೆ ಬಾಯಿ ಒಳಭಾಗದಲ್ಲಿ ದವಡೆಯಲ್ಲೆಲ್ಲಾ ಹುಣ್ಣಾಗುವುದು. ಪುಪ್ಪುಟ ಎಂದರೆ ಬೋರೇಬೀಜದಷ್ಟು ಗಾತ್ರದ ಒಕ್ಕೆಗಳು ದವಡೆಯಲ್ಲೆಲ್ಲಾ ಏಳುವುದು, ನೋವಾಗಲಿ ವಡತವಾಗಲಿ ಇರುವುದಿಲ್ಲ.

ಗಲರೋಗಾಸ್ತಥಾಖ್ಯಾತಾಅಷ್ಟಾದಶಮಿತಾಬುಧೈಃ || ೧೩೬ ||
ವಾತರೋಹಿಣಿಕಾಪೂರ್ವಂದ್ವಿತೀಯಾಪಿತ್ತರೋಹಿಣೀ ||
ಕಫರೋಹಿಣಿಕಾಪ್ರೋಕ್ತಾತ್ರಿದೋಷೈರಪಿರೋಹಿಣೀ || ೧೩೭ ||
ಮೇದೋರೋಹಿಣಿಕಾಪ್ಯಂದೋಗಲೌಘೋಗಲವಿದ್ರಧಿಃ ||
ಸ್ವರಹಾತುಂಡಿಕೇರೀಚಶತಘ್ನೀಶಾಲುಕೋರ್ಬುದಂ || ೧೩೮ ||
ಗಲಾಯುರ್ವಲಯಶ್ಚಾಪಿವಾತಾದ್ಗಂಡಃಕಫಾತ್ತಥಾ ||
ಮೇದೋಗಂಡಸ್ತಥೈವಸ್ಯಾದಿತ್ಯಷ್ಟಾದಶಕಂಠಜಾಃ || ೧೩೯ ||

ಗಂಟಲಿಗೆ ಸಂಭವಿಸುವ ರೋಗಗಳು ಹದಿನೆಂಟು ವಿಧ. ವಾತರೋಹಿಣಿ, ಪಿತ್ತರೋಹಿಣಿ, ಕಫರೋಹಿಣಿ, ತ್ರಿದೋಷಜನ್ಯರೋಹಿಣಿ, ಮೇದೋರೋಹಿಣಿ,

ಗಲಾಯು, ವಲಯ, ವಾತಗಂಡ, ಕಫಗಂಡ, ಮೇದೋಗಂಡ, ಈರೀತಿಯಾಗಿ. ಇವುಗಳಲ್ಲಿ ವಾತರೋಹಿಣಿ, ಪಿತ್ತರೋಹಿಣಿ ಕಫರೋಹಿಣಿ, ತ್ರಿದೋಷಸನ್ನಿಪಾತಜನ್ಯರೋಹಿಣಿ, ಮೇದೋರೋಹಿಣಿ, ಈ ಐದುರೋಗಗಳಲ್ಲಿಯೂ ನಾಲಿಗೆಯ ಸುತ್ತಲೂ ಮಾಂಸಾಂಕುರಗಳು ಅಂದರೆ ಮುಳ್ಳುಗಳು ಕಾಣಿಸಿಕೊಂಡು ಕಂಠನಾಳದ ದ್ವಾರವೇ ತಡೆದುಹೋಗುತ್ತವೆ. ನಾಲಿಗೆಯೂ ಬಿಕೊಳ್ಳುತ್ತದೆ ಆವರೆ ವಾತರೋಹಿಣಿಯಲ್ಲಿ ಈ ಲಕ್ಷಣಗಳ ಜೊತೆಗೆ ವಾತಲಕ್ಷಣಗಳೂ ಪಿತ್ತರೋಹಿಣಿಯಲ್ಲಿ ಪಿತ್ತದಲಕ್ಷಣಗಳೂ, ಕಫರೋಹಿಣಿಯಲ್ಲಿ ಪ್ರಕುಪಿತವಾದ ಕಫದ ಲಕ್ಷಣಗಳೂ ತ್ರಿದೋಷಸನ್ನಿಪಾತಜನ್ಯರೋಹಿಣಿಯಲ್ಲಿ ತ್ರಿದೋಷಲಕ್ಷಣಗಳೂ ಮೇದೋರೋಹಿಣಿಯಲ್ಲಿ ಮೇದೋದೋಷಗಳೂ ವಿಶೇಷತಃ ಕಾಣುತ್ತಿರುತ್ತವೆ. ಇನ್ನು ವೃಂದವೆಂದರೆ, ಗಂಟಲುಬಾತಿರುವುದಕ್ಕೆ ಹೆಸರು. ಗಲೌಘವೆಂದರೆ ಗಂಟಲುನಾಳವೇ ಮುಚ್ಚಿಹೋಗುವಬಾಕಿಗೆಗಲೌಘವೆಂಬದಾಗಿಹೆಸರು. ಗಲವಿದ್ರಧಿ ಎಂದರೆ ಗಂಟಲಿನಲ್ಲಿ ಬಾವುಏಳುವುದು. ಸ್ವರಹಾ ಎಂದರೆ ಕಂಠಸ್ವರವು ಸರಿಯಾಗಿ ಹೊರಡದೆ ತಡಸುಹೋಗುವುದು. ತುಂಡಿಕೇರಿಎಂದರೆ ಗಂಟಲಿನಲ್ಲಿರುವ ಗಂಟುಗಳು ಊದಿಕೊಂಡು ಕಷ್ಟಪಡಿಸುವುದು ಶತಘ್ನಿ ಎಂದರೆ ಗಂಟಲಿನಲ್ಲಿರುವ ಗಂಟುಗಳು ಬಾತುಹೋಗಿ ಕಲ್ಲಿನಷ್ಟುಗಟ್ಟಿಯಾಗಿ ಕಂಠನಾಳವನ್ನೇ ಮುಚ್ಚಿಕೊಂಡುಕೊಲ್ಲುವುದು ತಾಲುಕವೆನ್ನುವುದು ದವಡೆಯಲ್ಲಿ ಹಲ್ಲಿನಸಸಡುಗಳು ಪ್ರಬಲವಾಗಿ ಅದರಿಂದಗಂಟಲಿಗೂ ತೊಂದರೆಯಾಗುವುದು. ಅರ್ಬುದವೆಂದರೆ ಗಂಟಲಿನಲ್ಲಿ ಬಾವುಏಳುವುದು, ಗಲಾಯು ಎಂದರೆ ಗಂಟಲಿನಲ್ಲಿ ನಲ್ಲಿಯಬೀಜದಂತಹ ಗಂಟುಗಳಾಗುವುದು ವಲಯವೆಂದರೆ ಗಂಟಲಿನದ್ವಾರದ ಸುತ್ತಿನಲ್ಲಿ ಹುಟ್ಟುವವ್ರಣಗಳು, ವಾತಗಂಡ, ಕಫಗಂಡ, ಮೇದೋಗಂಡಗಳೆಂದರೆ ಗಂಟಲಿನಲ್ಲಿರತಕ್ಕ ಗಂಟುಗಳು ವಾಯು, ಕಫವು ತ್ತ ಮೇದಸ್ಸುವೃದ್ಧಿಯಾಗೋಣ ಈ ಕಾರಣಗಳಿಂದ ದೊಡ್ಡವುಗಳಾಗಿ ಗಂಟಲನ್ನು ತಡೆಯುವುದಕ್ಕೆಹೆಸರು.

ಮುಖಾಂತಸ್ತಂಭರಾರೋಗಾಷ್ಟೌಖ್ಯಾತಾಮುನಿರ್ಷಿಭಿಃ ॥
ಮುಖಪಾಕೋಭವೇದ್ವಾತಾತ್ಪಿತ್ತಾತ್ತಪ್ಷತ್ಕಫಾದಪಿ । ೧೪೦ ॥
ರಕ್ತಾಚ್ಚಸನ್ನಿಪಾತಚ್ಚಪೂತ್ಯಾಸ್ಯೋರ್ಧ್ವಗದಾವಪಿ ॥
ಅರ್ಬುದಂಚೇತಿಮುಖಜಾಷ್ಟತುಸ್ಸಪ್ತತಿರಾಮಯಾಃ ॥ ೧೪೧ ॥

ಬಾಯಿನಒಳಭಾಗದಲ್ಲಿ ಹುಟ್ಟತಕ್ಕರೋಗಗಳು ಎಂಟುವಿಧಗಳಾಗಿರುತ್ತವೆ. ಆಸ್ಯಪಾಕವೆಂದು ವ್ಯವಹಾರದಲ್ಲಿರುವ ಮುಖಪಾಕರೋಗವು ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ರಕ್ತದೋಷಜನ್ಯ, ಎಂಬದಾಗಿ ಐದುವಿಧ. ಪೂತ್ಯಾಸ್ಯವೆಂದರೆ ಬಾಯಲ್ಲಿಯಾವಾಗ್ಯೂ ದುರ್ವಾಸನೆಹೊರಡುತ್ತಿರುವುದು ಊರ್ಧ್ವಗದವೆಂದರೆ ಅದೊಂದುವಿಧವಾದ ಮುಖರೋಗ ಅರ್ಬುದವೆಂದರೆ ಮುಖದೊಳಗಿನಬಾವು, ಮುಖಕ್ಕೆಸಂಬಂಧಿಸಿದರೋಗಗಳೆಲ್ಲಾ ಎಪ್ಪತ್ತನಾಲ್ಕುವಿಧ

**ಕರ್ಣರೋಗಾಸ್ಸಮಾಖ್ಯಾತಾಅಷ್ಟಾದಶಮಿತಾಬುಧೈಃ**
**ವಾತಾತ್ಪಿತ್ತಾತ್ಕಫಾದ್ರಕ್ತಾತ್ಸನ್ನಿಪಾತಚ್ಚವಿದ್ರಧಿಃ ॥ ೧೪೨ ॥**

**ಶೋಥೊಬುರ್ದಂಪೂತಿಕರ್ಣಃಕರ್ಣಾರ್ಶಃಕರ್ಣ ಹಲ್ಲಿಕಾ ||**
**ಬಾಧಿರ್‍ಯಂತಂತ್ರಿಕಾಕಂಡೂಃಶಷ್ಕುಲೀಕ್ರಿಮಿಕರ್ಣಕ: || ೧೪೩ ||**
**ಕರ್ಣನಾದಃಪ್ರತೀನಾದಃಇತ್ಯಷ್ಟಾದಶಕರ್ಣಜಾಃ ||**

ಕಿವಿಯಲ್ಲಿಹುಟ್ಟತಕ್ಕರೋಗಗಳು ಹದಿನೆಂಟು ಎಂದು ಲೆಕ್ಕಿಸಲ್ಪಟ್ಟವೆ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ರಕ್ತದೋಷಜನ್ಯ ತ್ರಿದೋಷಸನ್ನಿಪಾತಜನ್ಯ, ಕರ್ಣವಿದ್ರಧಿ, ಶೋಥ, ಅರ್ಬುದ, ಪೂತಿಕರ್ಣ, ಕರ್ಣಾರ್ಶಸ್ಸು, ಕರ್ಣಹಲ್ಲಿಕಾ, ಬಧಿರತ್ವ, ತಂತ್ರಿಕಾ, ಕಂಡು. ಶಷ್ಕುಲಿ, ಕ್ರಿಮಿಕರ್ಣ, ಕರ್ಣನಾದ, ಪ್ರತಿನಾದ, ಈರೀತಿಹದಿನೆಂಟು. ಇವುಗಳಲ್ಲಿ ಕರ್ಣಶೋಥ, ಕರ್ಣವಿದ್ರಧಿ, ಕರ್ಣಾರ್ಬುದ ಇವುಮೂರೂ ಸಾಮಾನ್ಯಗಳಾದಶೋಥ, ಅರ್ಬುದ, ವಿದ್ರಧಿಗಳಲಕ್ಷಣಗಳಿಂದಲೇ ಕೂಡಿಕಿವಿಯಲ್ಲಿ ಉಂಟಾಗುತ್ತವೆ. ಪೂತಿಕರ್ಣವೆಂದರೆ ಕಿವಿಯಲ್ಲಿ ಕೀವುಸೋರುವುದು, ಕರ್ಣಾರ್ಶಃ ಎಂದರೆ ಕಿವಿಯಲ್ಲಿ ಮೂಲವ್ಯಾಧಿಯ ಮೊಳಕೆಯಂತಹವೊಳಿಕೆಬರುವುದು. ಕರ್ಣಹಲ್ಲಿಕಾ ಎಂದರೆ ಕಿವಿಯಲ್ಲಿಯಾವುದಾದರೂ ಕೀಟಕ್ರಿಮಿವೊದಲಾದುವುಗಳು ಹೋಗುವುದರಿಂದ ಹುಟ್ಟುವಬಾಧೆ ಬಾಧಿರ್‍ಯವೆಂದರೆ ಕಿವಿಯಲ್ಲಿರುವ ಶಬ್ದವಾಹಿನಿಗಳಾದ ನಾಡಿಗಳು ವಾಯುವಿನಿಂದ ಆವರಿಸಲ್ಪಟ್ಟು ರುದ್ಧಗಳಾಗಿ ಶಬ್ದಜ್ಞಾನವೇ ಆಗವಂತೆಮಾಡಿದಲ್ಲಿ ಅದಕ್ಕೆ ಬಾಧಿರ್‍ಯವೆಂದುಹೆಸರು. ತಂತ್ರಿಕಾ ಎಂದರೆ ಕಿವಿಯಲ್ಲಿಯಾವಾಗಲೂ ಕೊಳಲುಊದಿದಂತೆಯೂ ವೀಣೆವೊದಲಾದತಂತಿವಾದ್ಯಗಳನ್ನು ಬಾರಿಸಿದಂತಯೂ ಶಬ್ದವಾಗುತ್ತಿದ್ದರೆ ತಂತ್ರಿಕಾಎಂದುಹೆಸರು. ಕಂಡೂಃಎಂದರೆ ಕಫಮಿಶ್ರಿತವಾದ ವಾಯುವು ಪ್ರಕುಪಿತವಾಗಿ ಕಿವಿಯಲ್ಲಿ ಸಣ್ಣಗಂಟುಗಳನ್ನುಂಟುಮಾಡಿ ನವೆಯನ್ನುಂಟುಮಾಡುತ್ತದೆ. ಇದಕ್ಕೆ ಕರ್ಣಕಂಡೂಃ ಎಂಬಹೆಸರು. ಶಷ್ಕುಲಿ ಎಂದರೆ ಕಿವಿಯಗೂಡಿನಲ್ಲಿ ಹುಟ್ಟತಕ್ಕರೋಗಕ್ಕೆಹೆಸರು. ಕ್ರಿಮಿಕರ್ಣಕವೆಂದರೆ ಕ್ರಿಮಿಗಳು ಕಿವಿಯೊಳಗೆ ಹೋಗಿ ಮರಿಗಳನ್ನುಹಾಕಿಕೊಂಡು ತೊಂದರೆಪಡಿಸುವುದಕ್ಕೆ ಮೊದಲುಮಾಡಿದಲ್ಲಿ ಕ್ರಿಮಿಕರ್ಣಕವೆಂದು ಹೆಸರು. ಕರ್ಣನಾದವೆಂದರೆ ಕಿವಿಯಲ್ಲಿ ನಾನಾ ವಿಧಗಳಾದ ಧ್ವನಿಗಳು ಯಾವಾಗಲೂ ಕೇಳುತ್ತಿರುವುದು. ಪ್ರತಿನಾಹವೆಂದರೆ ಕಿವಿಯಿಂದ ಹೊರಡುವ ಕೀವು ಮುಂತಾದ ದ್ರವಗಳು ದಾರಿತಪ್ಪಿ ಮೂಗು ಬಾಯಿ ಮೊದಲಾದವುಗಳ ಮಾರ್ಗವನ್ನು ಹಿಡಿದರೆ ಅದಕ್ಕೆ ಪ್ರತಿನಾಹವೆಂಬ ಹೆಸರು.

**ಕರ್ಣಪಾಳೀಸಮುದ್ಭೂತಾರೋಗಾಸ್ಸಪ್ತ ಇಹೋದಿತಾಃ ||**
**ಉತ್ಪಾತಃಪಾಲಿಶೋಷಶ್ಚ ವಿದಾರೀದುಃಖವರ್ಧನಃ ||**
**ಪರಿಪೋಟಶ್ಚ ಲೇಹೀಚಪಿಪ್ಪಲೀಚೇತಿಸಂಸ್ಮೃತಾಃ || ೧೪೫ ||**

ಕಿವಿಯಲ್ಲಿ ಒಡವೆಗಳನ್ನಿಡಲು ರಂಧ್ರ ಕೊರೆಯತಕ್ಕ ಪ್ರದೇಶಕ್ಕೆ ಕರ್ಣಪಾಳಿ ಎಂಬದಾಗಿ ಹೆಸರು. ಅಲ್ಲಿ ಹುಟ್ಟತಕ್ಕ ರೋಗಗಳು ಏಳು ವಿಧ. ಉತ್ಪಾತ, ಪಾಲಿಶೋಷ ವಿದಾರೀ, ದುಃಖವರ್ಧನ, ಪರಿಪೋಟ, ಲೇಹೀ, ಪಿಪ್ಪಲೀ ಎಂಬದಾಗಿ ಕಿವಿಯರಂಧ್ರದಲ್ಲಿ ಭಾರವಾದ ಒಡವೆಗಳನ್ನು ಸಿಕ್ಕಿಸುವುದರಿಂದ ಕಿವಿಜಡ್ಡಿಊದಿಕೊಂಡು ಉರಿ

ನೋವು ಇವುಗಳುಂಟಾದರೆ ಅದಕ್ಕೆ ಉತ್ಪಾತವೆಂದು ಹೆಸರು. ಕಿವಿಯೆಲ್ಲಾ ಶೋಷಿಸಿ ಒಣಗುತ್ತಹೋಗುವುದಕ್ಕೆ ಪಾಳಿಶೋಷವೆಂದು ಹೆಸರು. ಕಿವಿಯಲ್ಲಿ ಗಡ್ಡೆಗಳಾಗುವುದಕ್ಕೆ ವಿದಾರೀ ಎಂದು ಹೆಸರು. ಕಿವಿಯ ರಂಧ್ರಮಾಡುವ ಪ್ರದೇಶಗಳಲ್ಲಿ ಗಾಯಗಳಾಗಿ ದುಃಖಪಡಿಸುತಿದ್ದರೆ ಆದಕ್ಕೆ ದುಃಖವರ್ಧನವೆಂಬ ಹೆಸರು. ಕಿವಿಯಲ್ಲಿ ಉಂಟಾಗುವ ನೋವಿನಿಂದ ಸಹಿತವಾದ ಶೋಥವನ್ನು ಬಹಳ ದಿವಸಗಳವರೆಗೂ ಉಪೇಕ್ಷಿಸಿದರೆ ಕ್ರಮೇಣ ಶೋಥವಲ್ಲವೂ ಕಪ್ಪುವರ್ಣವಾಗಿ ನೋವು ವಡತ ಸಹ ಹೆಚ್ಚುತ್ತಿದ್ದಲ್ಲಿ ಆದಕ್ಕೆ ಪರಿಪೋಟವೆಂಬ ಹೆಸರು ಕಿವಿಯ ಮಾಂಸಗಳನ್ನ ಶೋಷಿಸಿ ಕಡಮೆ ಮಾಡ ತಕ್ಕ ರೋಗಕ್ಕೆ ಲೇಹೀ ಎಂಬದಾಗಿ ಹೆಸರು. ಮಕ್ಕಳಿಗೆ ಕಿವಿಹಿಂಡ ವುದು, ಕಿವಿಯನ್ನು ಹಿಡಿದು ಎಳೆಯುವುದು ಇಂತಹ ಕಾರಣಗಳಿಂದ ಕಿವಿಯಲ್ಲಿ ಉಂಟಾಗುವ ವ್ರಣಗಳಿಗೆ ಪಿಪ್ಪಲಿಎಂಬದಾಗಿ ಹೆಸರು

**ಕರ್ಣಮೂಲಾಮಯಾಃ ಪಂಚವಾತಾತ್ಪಿತ್ತಾತ್ಕಫಾದಪಿ ॥**

**ಸನ್ನಿಪಾತಾಚ್ಚರಕ್ತಾಚ್ಚ ... ... ॥**

ಕರ್ಣಮೂಲವೆಂಬದಾಗಿ ಲೋಕಪ್ರಸಿದ್ಧವಾಗಿ ಕಿವಿಯ ಬುಡದಲ್ಲಿ ಬಾವು ಬರತಕ್ಕ ರೋಗವು ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ ಸನ್ನಿಪಾತಿಕ, ರಕ್ತದೋಷ ಜನ್ಯ ಎಂಬದಾಗಿ ಐದು ವಿಧ.

**ತಥಾನಾಸಾಭವಾಗದಾಃ ॥ ೧೪೬ ॥**

**ಅಷ್ಟಾದಶೈವಸಂಖ್ಯಾತಾಪ್ರತಿಶ್ಯಾಯಾಸ್ತುತೇಷ್ವಪಿ ॥**

**ವಾತಾತ್ಪಿತ್ತಾತ್ಕಫಾದ್ರಕ್ತಾತ್ಸನ್ನಿಪಾತೇನಪಂಚಮಃ ॥ ೧೪೭ ॥**

**ಅಪೀನಸಃಪೂತಿನಾಸೋನಾಸಾರ್ಶೋರ್ಭ್ರಂಶಥುಃಕ್ಷವಃ ॥**

**ನಾಸಾನಾಹಃಪೂತಿರಕ್ತಮರ್ಬುದಾದಾಷ್ಟಪೀನಸಃ ॥ ೧೪೮ ॥**

**ನಾಸಾಶೋಷೊಘ್ರಾಣಪಾಕಃಪೂಯಸ್ರಾವಶ್ಚದೀಪ್ತಕಃ ॥**

ಮೂಗಿನಲ್ಲಿ ಹುಟ್ಟುವ ರೋಗಗಳು ಹದಿನೆಂಟು ವಿಧ. ಅವುಗಳಲ್ಲಿ ಪ್ರತಿ ಶ್ಯಾಯರೋಗವು (ನೆಗಡಿ)ಐದು ವಿಧ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಕಫಪ್ರಕೋಪಜನ್ಯ, ರಕ್ತದೋಷಜನ್ಯ, ತ್ರಿದೋಷ ಸನ್ನಿಪಾತಜನ್ಯ ಎಂಬದಾಗಿ. ನೆಗಡಿಯ ಸಾಮಾನ್ಯ ಲಕ್ಷಣವೆಂದರೆ—ತಲೆಭಾರ, ಮೂಗು ಕಟ್ಟಿಕೊಂಡಿರುವುದು. ಮೂಗಿನಲ್ಲಿ ಬೊಟ್ಟು ಬೊಟ್ಟಾಗಿ ನೀರು ಸೋರುತ್ತಿರುವುದು ಇದಕ್ಕನೇ ಪ್ರತಿಶ್ಯಾಯ ವೆಂಬ ಹೆಸರು· ರಕ್ತದೋಷಜನ್ಯವಾದ ಪ್ರತಿಶ್ಯಾಯದಲ್ಲಿ ಮೂಗಿನಲ್ಲಿ ರಕ್ತವು ಹರಿ ಯುತ್ತಿರುತ್ತದೆ ಅಪೀನಸಃ ಎಂದರೆ ನೆಗಡಿಯ ಸಾಮಾನ್ಯ ಲಕ್ಷಣಗಳೇ ಕಾಣುತ್ತಿರು ವುದರ ಜೊತೆಗೆ ಮೂಗು ಬಾತಿರುವುದು, ಮೂಗಿನ ಒಳಭಾಗವೆಲ್ಲಾ ಒಣಗಿ ಹೋಗಿ ರುವುದು, ಮೂಗಿನಲ್ಲಿ ಉರಿ ಇರುವುದು, ಮೂಗಿಗೆ ವಾಸನೆಯು ತಿಳಿಯದೆ ಹೋಗು ವುದು, ಹೀಗಿದ್ದರೆ ಇದಕ್ಕೆ ಅಪೀನಸವೆಂಬ ಹೆಸರು ಪೂತಿನಾಸವೆಂದರೆ ಮೂಗಿನಲ್ಲಿ ಯಾವಾಗ್ಯೂ ದುರ್ಗಂಧವೇ ತೋರುತ್ತಿರುವುದು. ನಾಸಾರ್ಶವೆಂದರೆ ಮೂಲವ್ಯಾ ಧಿಯ ಮೊಳೆಯಂತಹ ಮೊಳೆಯು ಮೂಗಿನಲ್ಲಿ ಬರುವುದಕ್ಕೆ ಹೆಸರು. ಭ್ರಂಶಥು

ಎಂದರೆ ಮೂಗಿನಲ್ಲಿ ಹಕ್ಕು ಕಟ್ಟಿಕೊಂಡು ಬಿಸಲಿನ ತಾಪದಿಂದ ಒಣಗಿ ಎರಡು ಮೂರು ದಿವಸಕ್ಕೊಂದುಬಾರಿ ಗಟ್ಟಿಯಾಗಿ ಬೀಳುವುದು. ಕ್ಷವಃ ಎಂದರೆ ಪದೇ ಪದೇ ಶೀನು ಬರುತ್ತಿರುವುದಕ್ಕೆ ಹೆಸರು. ನಾಸಾನಾಹವೆಂದರೆ ಮೂಗು ಶ್ಲೇಷ್ಮದಿಂದ ತುಂಬಲ್ಪಟ್ಟು ಕಟ್ಟಿಕೊಂಡು ಊದುವುದು. ಪೂತಿರಕ್ತವೆಂದರೆ ತಲೆಗೆ ಯಾವದಾದರೂ ಪೆಟ್ಟು ಬೀಳೋಣದರಿಂದಲಾಗಲಿ ಬೇರೇ ಕಾರಣಾಂತರದಿಂದಲಾಗಲಿ ಮೂಗಿನಿಂದ ದುರ್ಗಂಧ ಯುಕ್ತವಾದ ರಕ್ತವು ಸೋರುತ್ತಿರುವುದಕ್ಕೆ ಹೆಸರು. ಅರ್ಬುದವೆಂದರೆ ಮೂಗಿನಲ್ಲಿ ಏಳತಕ್ಕ ಬಾವಿಗೆ ಹೆಸರು. ದುಷ್ಟಪೀನಸವೆಂದರೆ ದೇಹದಲ್ಲಿ ವಾತಾದಿ ದೋಷಗಳ ಪ್ರಕುಪಿತಗಳಾಗಿ ಹುಟ್ಟತಕ್ಕ ಪೀನಸ ರೋಗ. ಈ ರೋಗದಲ್ಲಿ ತಲೆ ಭಾರ, ಮೂಗಿನಲ್ಲಿ ನೋರುವುದು ಯಾವಾಗಲೂ ಉಗುಳುತ್ತಿರುವುದು, ಇವು ಇರುತ್ತವೆ ನಾಸಾ ಶೋಷವೆಂದರೆ ವಾತಪ್ರಕೋಪದಿಂದ ಮೂಗಿನ ದ್ವಾರವು ಒಣಗಿ ಹೋಗಿ ಉಛ್ವಾಸ ನಿಛ್ವಾಸಗಳಿಗೇನೇ ಬಹಳ ಕಷ್ಟವಾಗುವುದಕ್ಕೆ ಹೆಸರು ಘ್ರಾಣಪಾಕವೆಂದರೆ ಮೂಗಿನಲ್ಲಿ ದೋಷ ಪ್ರಕೋಪದಿಂದ ಬಕ್ಕೆಗಳೆದ್ದು ಗಾಯಗಳಾಗುವುದು. ಪೂತಿಸ್ರಾವವೆಂದರೆ ಮೂಗಿನಿಂದ ಗಟ್ಟಿಯಾಗಿ ಹಸುರು, ಹಳದಿ ಬಣ್ಣ ಯುಕ್ತವಾದ ದುರ್ವಾಸನೆಯ ದ್ರವವು ಸ್ರವಿಸುವುದು ದೀಪ್ತಕವೆಂದರೆ ಮೂಗಿನಲ್ಲಿ ಉರಿ ಮತ್ತು ಹೊಗೆ ಹಾಯುತ್ತಿರುವಂತೆ ತೋರುತ್ತಿರುವುದು

ತಥಾದಶಶಿರೋರೋಗಾವಾತೇನಾರ್ಧಾವಭೇದಕಃ ॥ ೧೪೯ ॥
ಶಿರಸ್ತಾಪಶ್ಚವಾತೇನಪಿತ್ತಪೀಡಾತೃತೀಯಕಾ ॥
ಚತುರ್ಥೀಕಫಜಾಪೀಡಾರಕ್ತಜಾಸನ್ನಿಪಾತಜಾ ॥ ೧೫೦ ॥
ಸೂರ್ಯಾವರ್ತಾಚ್ಛಿರಃಕಂಪಾತ್ಕ್ರಿಮಿಭಿಶ್ಚಾಯುಕ್ತೇನಚ ॥

ಶಿರೋರೋಗಗಳು ಹತ್ತು ವಿಧ ಅರ್ಧಾವಭೇದಕವೆಂದರೆ ಅರ್ಧ ತಲೆ ನೋವು, ಇದರಲ್ಲಿ ಕಣ್ಣು, ಕಿವಿ ಮೊದಲಾದ ಶಿರಸ್ಸಿನ ಒಂದು ಭಾಗವು ನೋಯುತ್ತಲಿರುವುದು, ಕೊಡಲಿಯಿಂದ ಸೀಳಿದಂತಾಗುವುದು. ಈ ರೋಗದ ಬಾಧೆಯಿಂದ ಕಿವಿಗಾಗಲಿ ಒಂದು ಕಣ್ಣಿಗಾಗಲಿ ಕ್ರಮೇಣ ಅಪಾಯವಾಗಲುವುದು ಇವುಗಳಾಗುತ್ತವೆ. ಶಿರಸ್ತಾಪವೆಂದರೆ ತಲೆಕಾಯುತ್ತ ನೋಯುವುದು, ಈ ನೋವು ರಾತ್ರಿಹೊತ್ತಿನಲ್ಲಿ ಹೆಚ್ಚು ತಲೆಗೆ ಬಟ್ಟೆ ಮೊದಲಾಗಿ ಏನಾದರೂ ಕಟ್ಟಿದರೆ ಹೆಚ್ಚುತ್ತದೆ. ಪಿತ್ತಪೀಡಾ ಎಂದರೆ ಪಿತ್ತಪ್ರಕೋಪದಿಂದ ಬರತಕ್ಕ ತಲೆನೋವು, ಕಫಪ್ರಕೋಪದಿಂದ ಬರತಕ್ಕ ತಲೆನೋವು, ಇದರಲ್ಲಿ ತಲೆಭಾರ ತಲೆ ತಣ್ಣಗಿರುತ್ತದೆ ರಕ್ತಪ್ರಕೋಪದಿಂದ ಬರತಕ್ಕ ಶಿರೋರೋಗ, ತ್ರಿದೋಷಸನ್ನಿಪಾತದಿಂದ ಬರತಕ್ಕ ತಲೆ ನೋವು. ಸೂರ್ಯಾವರ್ತವೆಂದರೆ ಸೂರ್ಯೋದಯದಲ್ಲಿ ಪ್ರಾರಂಭವಾಗಿ ಕ್ರಮೇಣ ಮಧ್ಯಾಹ್ನದವರೆಗೂ ಹೆಚ್ಚಿ ಇಳಿಹೊತ್ತಾದ ಮೇಲೆ ಕ್ರಮೇಣ ಕಡಮೆಯಾಗುತ್ತ ಬರುವ ತಲೆ ನೋವಿಗೆ ಹೆಸರು. ಶಿರಃಪಾಕದಿಂದ ಉಂಟಾಗುವ ಶಿರೋವೇದನೆ ಅಂದರೆ ಶಿರಃ ಕಪಾಲದಲ್ಲಿರುವ ರಕ್ತಮಾಂಸಗಳು ಧಾತುವೈಷಮ್ಯದಿಂದ ಕ್ಷಯಿಸುತ್ತಹೋಗಿ ಉಂಟಾಗುವ ಶಿರೋವೇದನೆಗೆ ಹೆಸರು. ಕ್ರಿಮಿಜನ್ಯ ಶಿರೋವೇದನೆ ಅಂದರೆ ಮೆದಳಿನಲ್ಲಿ ಕ್ರಿಮಿಸೇರಿ ತಲೆಯನ್ನೆಲ್ಲಾ ಒಳಗೇ ಏನೋ ತಿನ್ನುತ್ತಿರುವಂತೆ ತೋರುತ್ತ ಆಗಾಗ್ಯೆ ರಕ್ತ ಮತ್ತು ಮಾಂಸಗಳು

ಮೂಗಿನ ದ್ವಾರದಿಂದ ಹೊರಬೀಳುತ್ತಿರುವುದು. ತಲೆ ನೋವಿರುವುದು, ಇದಕ್ಕೆ ಹೆಸರು. ಶಂಖವೆಂಬ ಮರ್ಮಪ್ರದೇಶದಲ್ಲಿ ದೋಷಗಳು ಪ್ರಕುಪಿತಗಳಾಗಿ ತಲೆನೋವನ್ನುಂಟುಮಾಡಿದರೆ ಅದಕ್ಕೆ ಶಂಖಕ ಶಿರೋವೇದನೆ ಎಂದು ಹೆಸರು.

ತಥಾಕಪಾಲರೋಗಾಸ್ಯುರ್ನವತೇಷೂಪಶೀರ್ಷಕಂ ॥ ೧೫೧ ॥
ಅರುಂಷಿಕಾವಿದ್ರಧಿಶ್ಚದಾರುಣಂಪಿಡಿಕಾರ್ಬುದಂ ||
ಇಂದ್ರಲುಪ್ತಂಚಖಲತಿಃಪಲಿತಂಚೇತಿತೇನವ || ೧೫೨ ॥

ತಲೆಯಬುರುಡೆಯಲ್ಲಿ ಹುಟ್ಟತಕ್ಕರೋಗಗಳು ಒಂಬತ್ತು ವಿಧ. ಉಪಶೀರ್ಷಕವೆಂದರೆ ತಲೆಯಮೇಲೆ ಯಾವದಾದರೂ ಭಾಗದಲ್ಲಿ ಆಳವವೆಂದು ಹೇಳಿಸಿಕೊಳ್ಳುವ ಬಾಕಿನಂತಹಬಾವುಬರುವುದು ನೋವು ಗಾದಲಾದುದೇನೂ ಇರುವುದಕ್ಕಿಲ್ಲ ಇದಕ್ಕೆ ಹೆಸರು ಅರುಂಷಿಕಾ ಎಂದರೆ ತಲೆಯಲ್ಲಿ ಏಳುವಹುಣ್ಣುಗಳು. ವಿದ್ರಧಿ ಎಂದರೆ ಬುರುಡೆಯಮೇಲೆ ಏಳತಕ್ಕ ಬಾವಿಗ ಹೆಸರ. ದಾರುಣವೆಂದರೆ, ಕೂದಲಿರುವತಲೆಯಭಾಗದಲ್ಲಿ ಅಲ್ಲಲ್ಲಿಬರತಕ್ಕಗಂಟುಗಳು. ಪಿಡಕಾಎಂದರೆ ತಲೆಯಲ್ಲಿಏಳುವಬಕ್ಕೆಗಳು. ಅರ್ಬುದವೆಂದರೆ ತಲೆಯಲ್ಲಿಏಳುವಬಾವುಗಳು ಇಂದ್ರಲುಪ್ತವೆಂದರೆ ತಲೆಯಲ್ಲಿಕೂದಲುಗಳು ಉದರಿಹೋಗುವ ಒಂದುಬಗೆಯ ರೋಗ, ಖಲತಿಎಂದರೆ, ಇಂದ್ರಲುಪ್ತದಂತಹ ರೋಗವೆ ಲೋಕದಲ್ಲಿ ಬಟ್ಟತಲೆಎಂದುವ್ಯವಹಾರವಿದೆ. ಪಲಿತವೆಂದರೆ, ಕೂದಲುನರತುಬೆಳ್ಳಗಾಗುವುದಕ್ಕೆ ಹೆಸರು.

ತಥಾನೇತ್ರಭವಾಃಖ್ಯಾತಾಶ್ಚತುರ್ನವತಿರಾಮಯಾಃ ॥
ತೇಷುವರ್ತ್ಮಗತಾಃ ಪ್ರೋಕ್ತಾಶ್ಚತುರ್ವಿಂಶತಿಸಂಜ್ಞಕಾಃ ॥ ೧೫೩ ॥
ಕೃಚ್ಛ್ರೋನ್ಮೀಲಃಪಕ್ಷ್ಮಪಾತಃಕಫೋತ್ಕ್ಲಿಷ್ಟಲೋಹಿತಃ ||
ಅರುಜ್ಯೋಷಃಕಧಿರೋತ್ಕೋತ್ಕ್ಲಿಷ್ಟಃಕುಕೂಣಕಃ ॥ ೧೫೪ ॥
ಪಕ್ಷ್ಮೋಪರೋಧಃ ಪಕ್ಷ್ಮರೋಧಶ್ಚಪಿತ್ತೋತ್ಕ್ಲಿಷ್ಟಶ್ಚಪೋಥಕೀ ॥
ಬಸ್ತಿವರ್ತ್ಮಚಬಹಲಃಪಕ್ಷ್ಮೋತ್ಸಂಗಕಾರ್ಬುದಾ ॥ ೧೫೫ ॥
ಕುಂಭಿಕಾಸಿಕತಾವರ್ತ್ಮಲಗಣೋಂಜನನಾಮಿಕಾ ॥
ಕರ್ದಮಾಶ್ಯಾವವರ್ತ್ಮಾಚಬಿಸವರ್ತ್ಮತಥಾಲಜೀ ॥ ೧೫೬ ॥
ಉತ್ಕ್ಲಿಷ್ಟವರ್ತ್ಮಾನಿಮಿಷಃ ಪ್ರಕ್ಲಿನ್ನವರ್ತ್ಮಸಂಜ್ಞಿತಾಃ ॥
ನೇತ್ರಸಂಧಿಸಮುದ್ಭೂತಾನವರೋಗಾಃಪ್ರಕೀರ್ತಿತಾಃ ॥ ೧೫೭ ॥
ಜಲಸ್ರಾವಃಕಫಸ್ರಾವೋರಕ್ತಸ್ರಾವಶ್ಚಪರ್ವಣೀ ॥
ಪೂಯಾಸ್ರಾವ ಕ್ರಿಮಿಗ್ರಂಥಿರುಪನಾಹಸ್ತಥಾಲಜೀ ॥ ೧೫೮ ॥
ಪೂಯಾಲಸಇತಿಪ್ರೋಕ್ತಾರೋಗಾನಯನಸಂಧಿಜಾ: ॥
ತಥಾಶುಕ್ಲಗತಾರೋಗಾಬುಧೈಃಪ್ರೋಕ್ತಾಸ್ತ್ರಯೋದಶ ॥ ೧೫೯ ॥
ಶಿರೋತ್ಪಾತಶ್ಶಿರಾಹರ್ಷಶ್ಶಿರಾಜಾಲಶ್ಚಶುಕ್ತಿಕಾ ॥
ಶುಕ್ಲಾರ್ಮಚಾಧಿಮಾಂಸಾರ್ಮಪ್ರಸ್ತಾರ್ಯರ್ಮಚಪಿಷ್ಟಕಃ ॥೧೬೦॥

ಶಿರಾಯಾಶ್ಶಿಪ್ಪಿಟಂಚೈವಕಫಗ್ರಂಥಿತಕೋಽರ್ಜುನಃ ।
ಸ್ನಾಯ್ವರ್ಮಶೋಣಿತಾರ್ಮಸ್ಯಾದಿತಿಶುಕ್ಲಗತಾಗದಾಃ ॥ ೧೬೧ ॥
ತಥಾಕೃಷ್ಣಸಮುದ್ಭೂತಾಃಪಂಚರೋಗಾಃಪ್ರಕೀರ್ತಿತಾಃ॥
ಶುದ್ಧಶುಕ್ರಂಶಿರಾಶುಕ್ರಂಕ್ಷತಶುಕ್ರಂತಥಾಜಕಾ ॥ ೧೬೨ ॥
ಶಿರಾಸಂಗಶ್ಚಸರ್ವೇಽಪಿಪ್ರೋಕ್ತಾಃಕೃಷ್ಣಗತಾಗದಾಃ ॥
ಕಾಚಂತುಷಡ್ವಿಧಂಜ್ಞೇಯಂವಾತಾತ್ಪಿತ್ತಾತ್ಕಫಾದಪಿ ॥ ೧೬೩ ॥
ಸನ್ನಿಪಾತಾಚ್ಚರಕ್ತಾಚ್ಚಷಷ್ಠಂಸಂಸರ್ಗಸಂಭವಂ ॥
ತಿಮಿರಾಣಿಷಡೇವಸ್ಯುರ್ವಾತಪಿತ್ತಕಫೈಸ್ತ್ರಿಧಾ ॥ ೧೬೪ ||
ಸಂಸರ್ಗೇಣಚರಕ್ತೇನಷಷ್ಠಂಸ್ಯಾತ್ಸನ್ನಿಪಾತತಃ ॥
ಲಿಂಗನಾಶಸ್ಸಪ್ತಧಾಸ್ಯಾದ್ವಾತಾತ್ಪಿತ್ತಾತ್ಕಫೇನಚ ॥ ೧೬೫ ॥
ತ್ರಿದೋಷೈರುಪಸರ್ಗೇಣಸಂಸರ್ಗೇಣಾಸ್ರಜಾತಥಾ ॥
ಅಷ್ಟಧಾದೃಷ್ಟಿರೋಗಾಸ್ಸ್ಯುಸ್ತೇಷುಪಿತ್ತವಿದಗ್ಧಕಂ ॥ ೧೬೬ ॥
ಅಮ್ಲಪಿತ್ತವಿದಗ್ಧಂಚತಥೈವೋಷ್ಣವಿದಗ್ಧಕಂ ॥
ನಕುಲಾಂಧ್ಯಂಧೂಸರಾಧ್ಯಂರಾತ್ರ್ಯಾಂಧ್ಯಂಹ್ರಸ್ವದೃಷ್ಟಿಕಃ ॥ ೧೬೭॥
ಗಂಭೀರದೃಷ್ಟಿರಿತ್ಯೇತೇರೋಗಾದೃಷ್ಟಿಗತಾಮತಾಃ ॥
ಚತ್ವಾರಶ್ಚಾಧಿಮಂಥಾಸ್ಸ್ಯುರ್ವಾತಪಿತ್ತಕಫೈಸ್ತ್ರಯಃ ॥ ೧೬೮ ॥
ಅಭಿಷ್ಯಂದಾಶ್ಚಚತ್ವಾರೋರಕ್ತಾದ್ದೋಷೈಸ್ತ್ರಿಭಿಸ್ತ್ರಿಧಾ ॥
ಸರ್ವಾಕ್ಷಿರೋಗಾಶ್ಚಾಷ್ಟೌಸ್ಯುಸ್ತೇಷುವಾತವಿಪರ್ಯಯಃ ॥ ೧೬೯ ॥
ಅಲ್ಪಶೋಫೋಽನ್ಯತೋವಾತಸ್ತಥಾಪಾಕಾತ್ಯಯಸ್ಮೃತಃ ॥
ಶುಷ್ಕಾಕ್ಷಿಪಾಕಶ್ಚತಥಾಶೋಫೋಧ್ಯುಷಿತಏವಚ ॥ ೧೭೦ ॥
ಹತಾಧಿಮಂಥಇತ್ಯೇತೇರೋಗಾಸರ್ವಾಕ್ಷಿಸಂಭವಾಃ ॥

ಕಣ್ಣಿನಗೂಡು, ಕಣ್ಣಿನಬಿಳಿಯಗುಡ್ಡೆ ಕರಿಯಗುಡ್ಡೆ ಮೊದಲಾದ ನೇತ್ರದ ನಾನಾಭಾಗಗಳಲ್ಲಿ ಹುಟ್ಟತಕ್ಕರೋಗಗಳು ತೊಂಬತ್ತುನಾಲ್ಕುವಿಧವಾಗಿರುತ್ತವೆ. ಪ್ರಥಮತಃ ಕಣ್ಣು ರೆಪ್ಪೆಯಲ್ಲಿ ಹುಟ್ಟುವ ರೋಗಗಳಿಪ್ಪತ್ತನಾಲ್ಕು. ಅವುಗಳಲ್ಲಿ ಕೃಚ್ಛ್ರೋನ್ಮೀಲವೆಂದರೆ ಕಣ್ಣು ಮುಚ್ಚಿದ ಮೇಲೆ ರೆಪ್ಪೆ ತೆಗಿಯುವುದೇ ಬಹಳ ಕಷ್ಟವಾಗುವುದು ಪಕ್ಷ್ಮಘಾತವೆಂದರೆ ಕಣ್ಣು ರೆಪ್ಪೆಯಲ್ಲಿರುವ ಕೂದಲುಗಳು ಉದುರಿಹೋಗುವುದು. ನವೆ, ಉರಿ ಇರುವುದು ಕಫೋತ್ಕ್ಲಿಷ್ಟವೆಂದರೆ ಕಣ್ಣಿನ ರೆಪ್ಪೆಯಲ್ಲಿ ಪಿಸರಿನಂತಹ ಒಂದು ಬಗೆಯ ಲೊಟ್ಟೆಸುತ್ತಿಕೊಳ್ಳುವದು. ಲೋಹಿತವೆಂದರೆ ಕಣ್ಣುರೆಪ್ಪೆಯಲ್ಲಿ ಮೂಲವ್ಯಾಧಿಯ ಮೊಳೆಗಳಂತಹ ಸಣ್ಣ ಮೊಳಕೆಗಳಾಗುವುದಕ್ಕೆ ಹೆಸರು. ನಿಮೇಷವೆಂದರೆ ರೆಪ್ಪೆಯ ನರಗಳಲ್ಲಿ ವಾಯುವು ಪ್ರಕುಪಿತವಾಗಿ ಪದೇ ಪದೇ ರೆಪ್ಪೆ ಬಡಿಯುತ್ತಿರುವುದು. ರಕ್ತೋತ್ಕ್ಲಿಷ್ಟವೆಂದರೆ ರೆಪ್ಪೆಯಲ್ಲಿ ಮೂಲವ್ಯಾಧಿಯ ಮೊಳಕಗಳಂತಹ

ಮೊಳಕೆಗಳಾಗುವುದಲ್ಲದೆ ರೆಪ್ಪೆಯಲ್ಲಿ ರಕ್ತಸ್ರಾವವೂ ಆದರೆ ಅದಕ್ಕೆ ಹೆಸರು. ಕುಕೂಣಕವೆಂದರೆ ಮಕ್ಕಳಿಗೆ ಬರತಕ್ಕ ಕಣ್ಣಿನಲ್ಲಿ ನೀರು ಸುರಿಯುವುದು, ರೆಪ್ಪೆ ನವೆಯಾಗುವುದು, ಇದಕ್ಕೆ ಹೆಸರು. ಈ ರೋಗದಲ್ಲಿ ಮಗುವು ಯಾವಾಗಲೂ ಕಣ್ಣು ತಲೆ ಇವುಗಳನ್ನು ಕೈಯ್ಯಿನಿಂದ ಉಜ್ಜುತ್ತಿರುತ್ತದೆ. ಪಕ್ಷ್ಮಕೋಪವೆಂದರೆ ರೆಪ್ಪೆಯ ಚರ್ಮವನ್ನು ಹಿಸಿಕಿ ನೋಡಿದರೆ ಸಣ್ಣ ಸಣ್ಣ ಗಂಟುಗಳು ಸಿಕ್ಕುತಿದ್ದರೆ ಅದಕ್ಕೆ ಪಕ್ಷ್ಮಾರ್ಶ ಎಂಬ ಹೆಸರು ಗಂಟುಗಳು ಮುಟ್ಟಿನೋಡಿದರೆ ಸವುತೇ ಜೀಜದಂತೆ ತೋರುತ್ತಿರುತ್ತವೆ, ಪಕ್ಷ್ಮರೋಧವೆಂದರೆ ಕಣ್ಣು ರೆಪ್ಪೆಗಳು ಊದಿಕೊಂಡು ರೆಪ್ಪೆತೆರೆದು ನೋಡುವುದಕ್ಕೇನೇ ಆಗದಂತೆ ಆಗಿ ಹೋಗುವುದು. ಪಿತ್ತೋತ್ಕ್ಲಿಷ್ಟವೆಂದರೆ ರೆಪ್ಪೆಯ ಚರ್ಮದಲ್ಲಿ ಪಿತ್ತಪ್ರಕೋಪವಾಗಿ ರೆಪ್ಪೆಯಲ್ಲಿ ಕೆಂಪಗಾಗುವುದು ನವೆಯಿಂದ ಪದೇ ಪದೇ ತಿಕ್ಕುತ್ತಿರುವುದು ಇದಕ್ಕೆ ಹೆಸರು. ಪೋಥಕಿ ಎಂದರೆ ರೆಪ್ಪೆಯ ಮೇಲೆಲ್ಲಾ ಸಾಸುವೆಯ ಕಾಳಿನಂತಹ ಬೊಕ್ಕೆಗಳು ಏಳುವದು, ಒಂದು ಬಗೆಯ ದ್ರವವು ಸ್ರವಿಸುತ್ತಿರುವುದು, ನವೆಯಾಗ ತ್ತಲೂ ಇರುವುದು ಇದಕ್ಕೆ ಹೆಸರು. ಕ್ಲಿಷ್ಟವರ್ತ್ಮ ಎಂದರೆ ಯಾವಾಗ್ಲೂ ಕಣ್ಣು ರೆಪ್ಪೆಗಳು ಮುತ್ತಿ ಹಾಕಿಕೊಳ್ಳುವುದಕ್ಕೆ ಹೆಸರು ಬಹಲ ಎಂದರೆ ರೆಪ್ಪೆಯ ಮೇಲೆಲ್ಲಾ ಚರ್ಮದ ಬಣ್ಣದಂತಹ ಬಣ್ಣದ ಸಣ್ಣ ಸಣ್ಣ ಗುಳ್ಳೆ ಗಳೇಳುವುದಕ್ಕೆ ಹೆಸರು. ಪಕ್ಷ್ಮೋತ್ಸಂಗ ಎಂದರೆ ರೆಪ್ಪೆಯ ಮೇಲೆ ಕೆಂಪಾದ ಬಕ್ಕೆ ಏಳುವುದಕ್ಕೆ ಹೆಸರು. ಇವನ್ನು ಕಣ್ಣು ಕುಣಿಕೆಯಿಂದಲೂ ಕರೆಯುತ್ತಾರೆ. ಅರ್ಬುದವೆಂದರೆ ಕಣ್ಣು ರೆಪ್ಪೆಯ ಮೇಲೆ ಏಳುವ ಗಂಟುಬಾವು. ಕುಂಭಿಕಾ ಎಂದರೆ ಕಡೆ ಕಣ್ಣಿನಲ್ಲಿ ಏಳುವ ದಾಳಿಂಬ ಬೀಜದಂತಹ ಬೊಕ್ಕೆ ಸಿಕತಾವರ್ತ್ಮ ಎಂದರೆ ರೆಪ್ಪೆಯ ಮೇಲೆಲ್ಲಾ ಮರಳಿನ ಕಣಗಳಂತಹ ಬಕ್ಕೆಗಳು ತುಂಬಿಹೋಗುವುದು ಲಗಣವೆಂದರೆ ರೆಪ್ಪೆಯಬುಡದಲ್ಲಿ ಮಾಗಿಹತ್ತಿರ ಬೋರೆಯ ಬೀಜದಂತಹ ನೋವಿಲ್ಲದ ಗಂಟಿಗೆ ಹೆಸರು ಅಂಜನನಾಮಿಕಾ ಎಂದರೆ ರೆಪ್ಪೆಯಮೇಲೆ ಸೀತಕ್ಕ ಮೃದುವಾದ ಮತ್ತು ನೋವಿಲ್ಲದ ಕೆಂಪು ವರ್ಣದ ಒಕ್ಕೆಗೆ ಹೆಸರು ಕರ್ದಮ ವೆಂದರೆ ಕಣ್ಣಿನ ರೆಪ್ಪೆಯಲ್ಲಿರುವ ಪಿತ್ತವು ಪ್ರಕುಪಿತವಾಗಿ ರಕ್ತದೊಡನೆ ಕೂಡಿ ರೆಪ್ಪೆಯಲ್ಲಿ ಉರಿಯನ್ನುಂಟುಮಾಡಿದರ ಆದಕ್ಕೆ ಹೆಸರು ಶ್ಯಾವವರ್ತ್ಮ ಎಂದರೆ ರೆಪ್ಪೆಯಲ್ಲಿರುವ ವಾಯುವು ಪ್ರಕುಪಿತವಾಗಿ ರೆಪ್ಪೆಯು ನೊಮ್ಮ ವರ್ಣವಾಗಿ ಬಾತುಹೋಗುವಂತೆ ಮಾಡಿದ್ದಲ್ಲಿ ಅದಕ್ಕೆ ಹೆಸರು ಮೇಲೆ ನೋಡಿದರೆ ಬೆಂಕಿಯಿಂದ ಸುಟ್ಟಂತಿರುತ್ತದೆ. ಬಿಸವರ್ತ್ಮ ಎಂದರೆ ರೆಪ್ಪೆಯು ಊದಿಹೋಗಿ ತಾವರೆಯ ದಂಟಿನಲ್ಲಿ ಕಾಣುವ ರಂಧ್ರಗಳಂತಹ ರಂಧ್ರಗಳು ಇದರಲ್ಲಿಯೂ ಕಂಡರೆ ಅದಕ್ಕೆ ಹೆಸರು ಅಲಜಿ ಎಂದರೆ ರೆಪ್ಪೆಗಳು ಬಲತು ಹೋಗುವುದು. ಉತ್ಕ್ಲಿಷ್ಟವರ್ತ್ಮ ಎಂದರೆ ವಾತ ಪ್ರಕೋಪದಿಂದ ರೆಪ್ಪೆ ಬಿಗಿಯಾಗಿ ಮುಚ್ಚಿದ ಕಣ್ಣು ತೆರೆಯುವುದಕ್ಕೇನೇ ಬಾರದಂತಾದರೆ ಅದಕ್ಕೆ ಹೆಸರು ಈ ರೀತಿಯಾಗಿ ಕಣ್ಣು ರೆಪ್ಪೆಗೆ ಸಂಭವಿಸುವ ರೋಗಗಳು ಇಪ್ಪತ್ತನಾಲ್ಕು ಸಂಧಿಗತನೇತ್ರ ರೋಗಗಳನ್ನು ಹೇಳುತ್ತಾನೆ—ಜಲಸ್ರಾವವೆಂದರೆ ಹಳದಿಯ ಬಣ್ಣದ್ದಾಗಲಿ ಅಥವಾ ಕಪ್ಪು ಬಣ್ಣದ್ದಾಗಲಿ ದ್ರವವು ಕಣ್ಣಿನಿಂದ ಸ್ರವಿಸುತ್ತಿರುವುದಕ್ಕೆ ಹೆಸರು ಕಫಸ್ರಾವವೆಂದರೆ ಕಫಪ್ರಕೋಪದಿಂದ ಕಣ್ಣಿನಿಂದ ಬರುವ ಸ್ರಾವವು ಕೊಂಚ ದಪ್ಪವಾಗಿದ್ದರೆ ಅದಕ್ಕೆ ಹೆಸರು. ರಕ್ತ

ಸ್ರಾವವೆಂದರೆ ಕಣ್ಣಿನಿಂದ ರಕ್ತವಾಗಲಿ ರಕ್ತವಿಶಿಷ್ಟಪೂಯವಾಗಲಿ ಕೊಂಚ ಕೊಂಚವಾಗಿ ದ್ರವಿಸುತ್ತಿದ್ದರೆ ಅದಕ್ಕೆ ಹೆಸರು. ಪರ್ವಣಿ ಎಂದರೆ ಕರಿಗುಡ್ಡೆ ಮತ್ತು ಬಿಳೀಗುಡ್ಡೆಗಳು ಸೇರುವ ಸ್ಥಳದಲ್ಲಿ ಕೆಂಪು ಗೆರೆಯಂತಾಗಿ ಕಣ್ಣಾರಿ ಕಣ್ಣಿನಲ್ಲಿ ನಡತ ಇವುಗಳಿದ್ದಲ್ಲಿ ಅದಕ್ಕೆ ಪರ್ವಣಿ ಎಂದು ಹೆಸರು. ಪೂಯಸ್ರಾವ ಎಂದರೆ—ನೇತ್ರಗತವಾದ ತ್ರಿದೋಷ ಸನ್ನಿಪಾತದಿಂದ ದುರ್ವಾಸನೆಯುಕ್ತವಾದ ಕೀವು ಸೋರುತ್ತಿದ್ದರೆ ಅದಕ್ಕೆ ಹೆಸರು. ಕ್ರಿಮಿಗ್ರಂಥಿ ಎಂದರೆ ನಾನಾ ವಿಧಗಳಾದ ಕ್ರಿಮಿಗಳು ಎರಡು ರೆಪ್ಪೆಗಳು ಕೂಡುವ ಪ್ರದೇಶದಲ್ಲಿ ಗ್ರಂಥಿಯನ್ನು (ಸಣ್ಣ ಗಂಟು) ಹುಟ್ಟಿಸಿದರೆ ಅದಕ್ಕೆ ಹೆಸರು. ಉಪನಾಹವೆಂದರೆ ಕೆಳಗಿನ ಮತ್ತು ಮೇಲಿನ ರೆಪ್ಪೆಗಳು ಕೂಡತಕ್ಕ ದೃಷ್ಟಿಸಂಧಿಯಲ್ಲಿ ಕೆಂಪಾದ ದೊಡ್ಡ ಗಂಟಾಗುವುದು. ನೋವು ಕಡಮೆ. ನವೆ ಜಾಸ್ತಿ. ಹೀಗಿರುವುದಕ್ಕೆ ಹೆಸರು. ಅಲಜಿ ಎಂಬುವುದೂ ಒಂದು ವಿಧವಾದ ನೇತ್ರಸಂಧಿಯಲ್ಲಿರುವ ಗಂಟು. ಪೂಯಾಲಸವೆಂದರೆ ಕಣ್ಣಿನ ಬುಡದಲ್ಲಿ ಮೂಗಿನ ಹತ್ತಿರ ಎರಡು ರೆಪ್ಪೆಗಳೂ ಸೇರುವ ಜಾಗದಲ್ಲಿ ಗಂಟಾಗಿ ವ್ರಣವಾಗಿ ಕೀವು ಮತ್ತು ರಕ್ತ ಸೋರುತ್ತಿರುವುದಕ್ಕೆ ಹೆಸರು. ಈ ರೀತಿ ನೇತ್ರಸಂಧಿಗತರೋಗಗಳು ಒಂಬತ್ತು. ಬಿಳೀಗುಡ್ಡೆಯಲ್ಲಿ ಕಾಣಬರುವ ರೋಗಗಳು ಯಾವುವೆಂದರೆ- ಶಿರೋತ್ಪಾತವೆಂದರೆ ಬಿಳಿಗುಡ್ಡೆಯ ಮೇಲಿರುವ ನರಗಳು ದೋಷಪ್ರಕೋಪದಿಂದ ನೋವಿರಲಿ ಅಥವಾ ಇಲ್ಲದಿರಲಿ ಕೆಂಪಾಗುವುದಕ್ಕೆ ಹೆಸರು. ಶಿರಾಹರ್ಷವೆಂದರೆ ಈ ಶಿರೋತ್ಪಾತರೋಗವನ್ನೇ ಕೆಲವು ದಿವಸ ಚಿಕಿತ್ಸೆ ಮಾಡದೆ ಉಪೇಕ್ಷಿಸಿದರೆ ಅದೇ ಲಕ್ಷಣಗಳ ಜೊತೆಗೆ ಕಣ್ಣಿನಿಂದ ನೀರು ಸುರಿಯುವುದು, ಬೆಳಕನ್ನು ನೋಡುವುದು ಅಸಾಧ್ಯವಾಗುವುದು ಈ ಲಕ್ಷಣಗಳೂ ಸೇರಿಕೊಂಡು ಶಿರಾಹರ್ಷವೆನ್ನಿಸಿಕೊಳ್ಳುತ್ತದೆ. ಶಿರಾಜಾಲವೆಂದರೆ ಬಿಳೀಗುಡ್ಡೆಯ ಮೇಲಿರತಕ್ಕ ನರಗಳು ದೋಷ ಪ್ರಕೋಪದಿಂದ ಬಲೆಯಂತೆ ಮನೆ ಮನೆಯಾಗಿ ಕೆಂಪೇರಿಕೊಂಡು ತೊಂದರೆಪಡಿಸುವುದಕ್ಕೆ ಹೆಸರು. ಶುಕ್ತಿಕ ಎಂದರೆ ಬಿಳಿಯ ಗುಡ್ಡೆಯ ಮೇಲೆಲ್ಲಾ ಧೂಮ್ರವರ್ಣದ ಅಥವಾ ಕೆಂಪು ಬಣ್ಣದ ಸಣ್ಣ ಗುಳ್ಳೆಗಳಾಗುವುದು. ಶುಕ್ಲಾರ್ಮ ಎಂದರೆ ಬಿಳಿಯಗುಡ್ಡೆಯ ಮೇಲೆ ಬಿಳಿಯ ಬಣ್ಣದ್ದೇ ಮಾಂಸ ಬೆಳೆಯುವುದು. ಅಧಿಮಾಂಸಾರ್ಮ ಎಂದರೆ ಬಿಳಿಯ ಗುಡ್ಡೆಯ ಮೇಲೆ ಕೆಂಪು ವರ್ಣವಾದ ದುರ್ಮಾಂಸ ಬೆಳೆಯುವುದು. ಪ್ರಸ್ತಾರ್ಯರ್ಮ ಎಂದರೆ ಬಿಳಿಯ ಗುಡ್ಡೆಯ ಮೇಲೆ ದುರ್ಮಾಂಸವು ಧೂಮ್ರ ಅಥವಾ ಕೆಂಪು ಬಣ್ಣದಿಂದ ಬೆಳೆದು ಹರಡಿಕೊಳ್ಳುವ ಸ್ವಭಾವವುಳ್ಳದ್ದಾಗಿದ್ದರೆ ಅದಕ್ಕೆ ಹೆಸರು. ಪಿಷ್ಟಕವೆಂದರೆ ಬಿಳಿಯ ಗುಡ್ಡೆಯ ಮೇಲೆ ಕನ್ನಡಿಯ ಮೇಲೆ ಧೂಳುವ್ಯಾಪಿಸಿಕೊಂಡಂತೆ ಒಂದು ಬಗೆಯ ಮಬ್ಬುಬಣ್ಣವು ಬಂದರೆ ಹೆಸರು. ಶಿರಾಪಿಪ್ಪಿಟವೆಂದರೆ ಬಿಳಿಯಗುಡ್ಡೆಯ ಮೇಲೆ ಗುಳ್ಳೆಗಳು ಸಣ್ಣಗೆ ಏಳುವುದರ ಜೊತೆಗೆ ನರಗಳು ಕೂಡ ಕೆಂಪಾಗುತ್ತ ಹೋದರೆ ಹೆಸರು. ಕಫಗ್ರಂಥಿ ಎಂದರೆ ಬಿಳಿಯ ಗುಡ್ಡೆಯ ಮೇಲೆ ನೀರಿನ ಗುಳ್ಳೆಯಂತಹ ಗುಳ್ಳೆಯಾಗುವುದಕ್ಕೆ ಹೆಸರು. ಅರ್ಜುನ ಎಂದರೆ ಬಿಳೀಗುಡ್ಡೆಯ ಮೇಲೆ ಕೆಂಪಾದ ಒಂದು ಗುಳ್ಳೆಯಾಗುವುದು. ಸ್ನಾಯ್ವರ್ಮ ಎಂದರೆ ಬಿಳೀಗುಡ್ಡೆಯ ಮೇಲೆ ಬೆಳೆಯುವ ದುರ್ಮಾಂಸವು ಯಾವ ವಿಧವಾದ ಸ್ರಾವವೂ ಇಲ್ಲದೆ ಒಣಗಿಕೊಂಡಿದ್ದರೆ ಅದಕ್ಕೆ ಹೆಸರು. ಶೋಣಿತಾರ್ಮ ಎಂದರೆ

ಮಾಂಸವು ರಕ್ತಪ್ರಕೋಪದಿಂದ ಬೆಳೆಯುತ್ತಿದ್ದರೆ ಅದಕ್ಕೆ ಹೆಸರು. ಕಪ್ಪುಗುಡ್ಡೆಯ ಮೇಲೆ ಉಂಟಾಗತಕ್ಕ ರೋಗಗಳನ್ನು ಹೇಳುತ್ತಾನೆ. ಶುದ್ಧಶುಕ್ಲವೆಂದರೆ ಕಪ್ಪು ಗುಡ್ಡೆಯ ಮೇಲೆ ಬೆಳ್ಳಗಾಗಲಿ, ಧೂಮ್ರವರ್ಣವಾಗಿಯಾಗಲಿ ಗಂಜಿಸುತ್ತಿಕೊಂಡು ವ್ರಣಾದಿಗಳಿಲ್ಲದೆ ಸುಲಭಸಾಧ್ಯವಾಗುವಂತಿದ್ದರೆ ಅದಕ್ಕೆ ಹೆಸರು. ಶಿರಾಶುಕ್ಲವೆಂದರೆ ಹಿಂದೆ ಹೇಳಿದ ಶುದ್ಧಶುಕ್ಲದಲ್ಲಿಯೇ ನರಗಳು ಕೆಂಪೇರಿಕೊಂಡು ಕಾಣುತ್ತಿರುವುದಕ್ಕೆ ಹೆಸರು. ಲೋಕದಲ್ಲಿ ಈ ಎರಡನ್ನೂ ಕಣ್ಣಿನಲ್ಲಿ ಹುವ್ವು ಕುಳಿತಿರುವುದಾಗಿ ವ್ಯವಹರಿಸುತ್ತಾರೆ. ಕ್ಷತಶುಕ್ಲವೆಂದರೆ ಕಪ್ಪುಗುಡ್ಡೆಯ ಮೇಲಿರುವ ಹುವ್ವಿನಲ್ಲಿಯೇ ಸಣ್ಣವ್ರಣವೂ ಸೇರಿದ್ದರೆ ಅದಕ್ಕೆ ಹೆಸರು. ಅಜಕಾ ಎಂದರೆ ಆಡಿನ ಹಿಕ್ಕೆಯಂತೆ ಗುಂಡಾಗಿ ಕಣ್ಣು ಕಪ್ಪುಗುಡ್ಡೆಯ ಭಾಗವೇ ಹೊರಕ್ಕೆ ಹಾಯುವುದು. ಶಿರಾಸಂಗವೆಂದರೆ ಬಿಳೀಗುಡ್ಡೆಯು ದೊಡ್ಡದಾಗುತ್ತ ಕಪ್ಪುಗುಡ್ಡೆಯನ್ನೊತ್ತುವುದು ಅಥವಾ ಕಪ್ಪುಗುಡ್ಡೆ ದೊಡ್ಡದಾಗುತ್ತ ಬಿಳೀಗುಡ್ಡೆಯನ್ನೊತ್ತುವುದು. ಈ ರೀತಿ ಕಪ್ಪುಗುಡ್ಡೆಗೆ ಬರತಕ್ಕ ರೋಗಗಳು ಐದು. ಕಾಚವೆಂಬ ರೋಗವು ಆರು ವಿಧ. ಕಾಚವೆಂದರೆ ಕಣ್ಣು ಕಾಣದೆ ಹೋಗುವುದು. ಹಿಂದೆ ಹೇಳಿದ ರೋಗಗಳಲ್ಲೆಲ್ಲಾ ಕೊಂಚವಾದರೂ ಕಣ್ಣು ಕಾಣುತ್ತಿರುತ್ತದೆ; ಇದರಲ್ಲಿ ಕಣ್ಣು ಕಾಣುವುದಿಲ್ಲ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷ ಸನ್ನಿಪಾತಜನ್ಯ, ರಕ್ತಪ್ರಕೋಪಜನ್ಯ, ಸಂಸರ್ಗಜನ್ಯವಾದ ಕಾಚರೋಗ ಎಂಬದಾಗಿ ಆರು ವಿಧ. ತಿಮಿರವೆಂಬ ನೇತ್ರರೋಗವೂ ಆರು ವಿಧ ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷ ಪ್ರಕೋಪಜನ್ಯ, ರಕ್ತಪ್ರಕೋಪಜನ್ಯ, ಸಂಸರ್ಗಜನ್ಯ ಎಂಬದಾಗಿ. ವಾತಪ್ರಕೋಪಜನಿತವಾದ ತಿಮಿರರೋಗದಲ್ಲಿ ಯಾವ ಪದಾರ್ಥವನ್ನು ನೋಡಿದರೂ ಅದು ಸ್ವಲ್ಪ ಚಲಿಸುತ್ತಿರುವಂತೆಯೂ ಮತ್ತು ಯಾವ ಬಣ್ಣದ್ದಾಗಿದ್ದರೂ ಕೆಂಪಗೂ ಕಪ್ಪಗೂ ಕಾಣುತ್ತಿರುತ್ತದೆ. ಪಿತ್ತಪ್ರಕೋಪದಿಂದ ಹುಟ್ಟಿದ ತಿಮಿರರೋಗದಲ್ಲಿ ಸೂರ್ಯ, ಕಾಮನಬಿಲ್ಲು, ಮಿಂಚು ಮೊದಲಾದವುಗಳನ್ನು ಕಾಣುತ್ತಿರುವುದಲ್ಲದೆ ನೋಡಿದ ವಸ್ತುಗಳನ್ನೆಲ್ಲಾ ನೀಲವರ್ಣವಾಗಿಯೇ ನೋಡುತ್ತಿರುವುದಕ್ಕೆ ಹೆಸರು. ಕಫಪ್ರಕೋಪಜನಿತವಾದ ತಿಮಿರರೋಗದಲ್ಲಿ ನೋಡಿದ ಪದಾರ್ಥವೆಲ್ಲಾ ಬೆಳ್ಳಗೆ ಕಾಣುತ್ತಿರುತ್ತವೆ ಕಣ್ಣಿಗೆ ಕಂಡ ವಸ್ತುವೆಲ್ಲಾ ನೀರಿನಲ್ಲಿ ನೆನೆದಂತೆಯೇ ತೋರುತ್ತಿರುವುದು. ಸಂಸರ್ಗಜನ್ಯ ತಿಮಿರರೋಗದಲ್ಲಿ ಯಾವ ಕಡೆಗೆ ನೋಡಿದರೂ ಯಾವ ಪದಾರ್ಥವನ್ನು ನೋಡಿದರೂ ಅರಿಸಿನದ ವರ್ಣವಾಗಿಯೇ ಕಾಣುತ್ತಿರುವುದು. ರಕ್ತದೋಷಜನ್ಯವಾದ ತಿಮಿರರೋಗದಲ್ಲಿ ನೋಡಿದ ವಸ್ತುಗಳೆಲ್ಲಾ ಕೆಂಪಾಗಿ ಕಪ್ಪಾಗಿ ಹಳದಿಯಾಗಿ ಈ ರೀತಿ ನಾನಾ ವರ್ಣವಾಗಿ ಕಾಣುತ್ತಿರುತ್ತದೆ. ಸನ್ನಿಪಾತಜನ್ಯವಾದ ತಿಮಿರರೋಗದಲ್ಲಿ ನೋಡಿದ ವಸ್ತುಗಳೆಲ್ಲಾ ಚಿತ್ರವಿಚಿತ್ರವಾಗಿ ಗಳಿಗೆಗೊಂದು ವಿಧವಾಗಿ ಕಾಣುತ್ತಿರುತ್ತವೆ. ಲಿಂಗನಾಶವೆಂಬ ನೇತ್ರರೋಗವು ಏಳು ವಿಧ—ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ಸಂಸರ್ಗಜನ್ಯ, ತ್ರಿದೋಷ ಸನ್ನಿಪಾತಜನ್ಯ, ರಕ್ತದೋಷಜನ್ಯ, ಪರಸ್ಪರ ಸಂಕ್ರಮಣ ರೀತಿಯಿಂದ ಹುಟ್ಟುವುದು ಎಂಬದಾಗಿ. ಲಿಂಗವೆಂದರೆ ದೃಷ್ಟಿಶಕ್ತಿ. ಇದರ ನಾಶವೆಂದರೆ ಕಾಣದೆಹೋಗುವುದೆಂದರ್ಥ. ದೃಷ್ಟಿರೋಗವು ಎಂಟು ವಿಧ—ಪಿತ್ತವಿದಗ್ಧ, ಅಮ್ಲಪಿತ್ತವಿದಗ್ಧ, ಉಷ್ಣವಿದಗ್ಧ, ನಕುಲಾಂಧ್ಯ, ಧೂಸರಾಂಧ್ಯ, ರಾಂತ್ಯಾಂ

ಧ್ಯ, ಹ್ರಸ್ವದೃಷ್ಟಿ, ಗಂಭೀರದೃಷ್ಟಿ ಎಂಬದಾಗಿ ಪಿತ್ತವಿದಗ್ಧವೆಂದರೆ ಪಿತ್ತಪ್ರಕೋಪದಿಂದ ನೋಡಿದ ಪದಾರ್ಥವೆಲ್ಲವೂ ಹಳದಿಯ ಬಣ್ಣವಾಗಿ ಕಾಣುತ್ತಲಿರುವುದಲ್ಲ. ಕಣ್ಣು ಸಹ ಹಳದಿಯ ಬಣ್ಣಕ್ಕೆ ತಿರುಗುತ್ತದೆ. ಅಮ್ಲಪಿತ್ತವಿದಗ್ಧವೆಂದರೆ ಅಮ್ಲಪಿತ್ತವೆಂಬ ರೋಗದಲ್ಲಿ ವಮನವು ಮುಖ್ಯವಾದ್ದರಿಂದ ವಮನದಲ್ಲಿ ಕಫವೇ ಮುಖ್ಯವಾದ್ದರಿಂದ ಅಮ್ಲಪಿತ್ತವಿದಗ್ಧವೆಂಬ ದೃಷ್ಟಿರೋಗವನ್ನು ತಂತ್ರಾಂತರಕಾರರು ಅಂದರೆ ವೈದ್ಯಶಾಸ್ತ್ರದಲ್ಲಿಯೇ ಪುಸ್ತಕಗಳನ್ನು ಬರದ ಇತರರು ಶ್ಲೇಷ್ಮವಿದಗ್ಧವೆಂದು ಹೇಳುತ್ತಾರೆ. ಇದರಲ್ಲಿ ನೋಡಿದ್ದೆಲ್ಲಾ ಶುಭ್ರವಾಗಿಯೇ ಕಾಣುವುದು, ಕಣ್ಣುಕೂಡ ಬೆಳ್ಳಗಾಗಿರುವುದು. ಉಷ್ಣವಿದಗ್ಧವೆಂದರೆ ಬಿಸಿಲಿನಿಂದ ಹಗಲು ಕಣ್ಣು ಕಾಣದಂತಾಗುವುದು. ನಕುಲಾಂಧ್ಯವೆಂದರೆ ಹಗಲು ಯಾವ ಪದಾರ್ಥವನ್ನು ನೋಡಿದರೂ ಒಂದು ವಿಧವಾಗಿ ಕಾಣದೆ ಚಿತ್ರವಿಚಿತ್ರವಾಗಿ ಕಾಣಹತ್ತಿದರೆ ಅದಕ್ಕೆ ಹೆಸರು. ಧೂಸರಾಂಧ್ಯವೆಂದರೆ ಯೇನನ್ನು ನೋಡಿದರೂ ಮಸಮಸಕಾಗಿಯೇ ಕಾಣುತ್ತಿರುವುದು. ರಾತ್ರ್ಯಾಂಧ್ಯಂ ಎಂದರೆ ರಾತ್ರಿಯಲ್ಲಿ ಕಣ್ಣುಕಾಣದಂತಿರುವುದು. ಹ್ರಸ್ವದೃಷ್ಟಿ ಎಂದರೆ ಯಾವ ಎಷ್ಟು ದೊಡ್ಡ ವಸ್ತುವೂ ಕಣ್ಣಿಗೆ ಸಣ್ಣದಾಗಿಯೇ ಕಾಣಿಸುವುದು. ಗಂಭೀರದೃಷ್ಟಿ ಎಂದರೆ ವಾಯು ಪ್ರಕೋಪದಿಂದ ಪದಾರ್ಥವನ್ನು ನೋಡಿದರೆ ಮೊದಲು ಸರಿಯಾಗಿ ದೃಷ್ಟಿಗೆ ಹತ್ತುವುದೇ ಇಲ್ಲ, ಬಹಳ ಹೊತ್ತು ದೃಷ್ಟಿಸಿ ನೋಡಿದರೆ ದೃಷ್ಟಿಗೆ ಹತ್ತುತ್ತದೆ, ಇದಕ್ಕೆ ಹೆಸರು. ಅಭಿಷ್ಯಂದವೆಂಬ ನೇತ್ರರೋಗವು ನಾಲ್ಕುವಿಧ—ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ರಕ್ತದೋಷಜನ್ಯ ಎಂಬದಾಗಿ. ವಾತಪ್ರಕೋಪಜನಿತವಾದ ಅಭಿಷ್ಯಂದ ರೋಗದಲ್ಲಿ ಕಣ್ಣಿನಲ್ಲಿ ತುರಿಕೆ, ಕಣ್ಣಿನ ಕೂದಲುಗಳು ಎದ್ದುಕೊಂಡು ಕಣ್ಣಿನಲ್ಲಿ ನೀರು ಸುರಿಯುತ್ತಿರುತ್ತದೆ. ಪಿತ್ತಪ್ರಕೋಪಜನ್ಯವಾದ ಅಭಿಷ್ಯಂದರೋಗದಲ್ಲಿ ಕಣ್ಣುರಿ, ಕಣ್ಣಿನಲ್ಲಿ ಬಕ್ಕೆಗಳೇಳುವುದು, ಬಿಸಿಯಾಗಿ ಕಣ್ಣಿನಲ್ಲಿ ನೀರು ಸುರಿಯುವುದು. ಕಫಪ್ರಕೋಪಜನ್ಯವಾದ ಅಭಿಷ್ಯಂದ ರೋಗದಲ್ಲಿ ಬಿಸಿಯಾದ ಸೇಕ ಕೊಟ್ಟು ಕೊಳ್ಳಬೇಕೆಂಬ ಅಪೇಕ್ಷೆ, ಕಣ್ಣು ಊದುವುದು, ಕಣ್ಣಿನಲ್ಲಿ ಒಂದು ವಿಧವಾದ ಭಾರ, ಕಣ್ಣಿನಿಂದ ಬರುವ ನೀರು ಮಂದವಾಗಿ ಜಿಗಟಾಗಿರುವುದು. ರಕ್ತಪ್ರಕೋಪಜನಿತವಾದ ನೇತ್ರಾಭಿಷ್ಯಂದರೋಗದಲ್ಲಿ ಕಣ್ಣಿನಲ್ಲಿ ಸುರಿಯುವ ನೀರು ರಕ್ತವರ್ಣವಾಗಿರುವುದು, ಕಣ್ಣು ಕೆಂಪಾಗುವುದು. ಕಣ್ಣಿನ ನರಗಳೆಲ್ಲಾ ಕೆಂಪಾಗುವುದು. ಕಣ್ಣಿಗೆಲ್ಲಕ್ಕೂ ಸಂಬಂಧಪಡುವ ನೇತ್ರರೋಗಗಳು ಎಂಟುವಿಧ—ವಾತವಿಪರ್ಯಯ, ಅಲ್ಪಶೋಫ, ಅನ್ಯತೋವಾತ, ಪಾಕಾತ್ಯಯ, ಶುಷ್ಕಾಕ್ಷಿಪಾಕ, ಶೋಫ, ಅಧ್ಯುಷಿತ, ಹತಾಧಿಮಂಥ ಎಂಬದಾಗಿ. ವಾತವಿಪರ್ಯಯವೆಂದರೆ ವಾತವು ಪ್ರಕುಪಿತವಾಗಿ ಕೆಲವು ವೇಳೆ ಹುಬ್ಬಿನಲ್ಲಿ ಕೆಲವು ವೇಳೆ ಕಣ್ಣಿನ ಇತರ ಭಾಗಗಳಲ್ಲಿ ವಡತ ಬರುವದು. ಅಲ್ಪಶೋಫವೆಂದರೆ ಕಣ್ಣಿನಲ್ಲಿ ಬಾಕು ಮೊದಲಾಗಿ ಏನೂ ಇಲ್ಲದೆ ವ್ರಣಗಳಾಗುವುದು, ನವೆ, ಕಣ್ಣೀರು ಇವುಗಳೆಲ್ಲಾ ಇರುವುದು. ಅನ್ಯತೋವಾತವೆಂದರೆ ಶಿರಸ್ಸು, ಕಿವಿ, ಶಂಖ, ಮನ್ಯಾ ಈ ರೀತಿಯಾಗಿ ಎಲ್ಲಾದರೂ ಇರತಕ್ಕ ವಾಯುವು ಪ್ರಕುಪಿತವಾಗಿ ಹುಬ್ಬು ಮತ್ತು ಕಣ್ಣುಗಳಲ್ಲಿ ಯಾವ ಭಾಗದಲ್ಲಿಯಾಗಲಿ ನೋವು ವಡತ ಬಂದರೆ ಅದಕ್ಕೆ ಹೆಸರು. ಪಾಕಾತ್ಯಯವೆಂದರೆ—ನೇತ್ರಗತವಾದ ದೋಷವು ಪ್ರಕುಪಿತವಾಗಿ ಬಿಳಿಗುಡ್ಡೆಯೆಲ್ಲಾ ಕ್ರಮವಾಗಿ ಕಪ್ಪುಗುಡ್ಡೆಯನ್ನು ಆಕ್ರಮಿಸಿಕ್ಕೊಳ್ಳುತ್ತ ಬಂದಲ್ಲಿ ಅದಕ್ಕೆ ಹೆಸರು. ಶುಷ್ಕಾಕ್ಷಿ

ಪಾಕವೆಂದರೆ ಕಣ್ಣಿನಲ್ಲಿ ಉರಿ, ರೆಪ್ಪೆಗಳ ಒಳಭಾಗವೆಲ್ಲ ಒಣಗಿಹೋಗಿರುವುದು, ವ್ರಣಗಳಾಗಿರುವಂತೆ ತೋರುತ್ತಿರುವುದು ಇದಕ್ಕೆ ಹೆಸರು. ಶೋಫವೆಂದರೆ ವ್ರಣ ಮತ್ತು ಬಾಕು ಸಹ ಇರುವುದು. ಅಧ್ಯುಷಿತವೆಂದರೆ ಕಣ್ಣು ಕೆಂಪಗಾಗಿ ಬಾಕು ಉರಿ ಸಹ ಇದ್ದು ಕಣ್ಣಿನಲ್ಲಿ ನೀರು ಸುರಿಯುತ್ತಿರುವುದು. ಹತಾಧಿಮಂಥವೆಂದರೆ ಹಿಂದೆ ಹೇಳಿದ ಅಧಿಮಂಥವೆಂಬ ನೇತ್ರರೋಗವನ್ನು ಸಕಾಲದಲ್ಲಿ ಚಿಕಿತ್ಸೆ ಮಾಡದೆ ಉಪೇಕ್ಷಿಸೋಣದರಿಂದ ರೋಗವು ಅಸಾಧ್ಯ ಸ್ಥಿತಿಗೆ ಬಂದಲ್ಲಿ ಹತಾಧಿಮಂಥವೆಂದು ಹೆಸರು.

ಪುಂಸ್ತ್ವದೋಷಾಸ್ತು ಪಂಚೈವ ಪ್ರೋಕ್ತಾಸ್ತತ್ರೇರ್ಷ್ಯಕಸ್ಮೃತಃ ॥
ಆಸೇಕ್ಯಶ್ಚೈವ ಕುಂಭೀಕಸ್ಸುಗಂಧಿಷ್ಷಂಡಸಂಜ್ಞಕಃ ॥ ೧೭೨ ॥

ಪುಂಸ್ತ್ವದೋಷಗಳು ಅಂದರೆ ನಪುಂಸಕತ್ವವನ್ನು ಉಂಟುಮಾಡುವ ದೋಷಗಳು ಐದುವಿಧ—ಈರ್ಷ್ಯಕ, ಆಸೇಕ್ಯ, ಕುಂಭೀಕ, ಸುಗಂಧಿ, ಷಂಡ. ಈರ್ಷ್ಯಕನೆಂದರೆ ಇತರರು ಸ್ತ್ರೀಸಂಭೋಗಮಾಡಿದರೆ ಅದನ್ನು ನೋಡಿದರೆ ಮಾತ್ರ ಇವನಿಗೂ ಸಂಭೋಗಾಪೇಕ್ಷೆ ಉಂಟಾಗುತ್ತದೆ. ಆಸೇಕ್ಯನೆಂದರೆ ಸ್ತ್ರೀಯರ ಗುಹ್ಯಾಂಗಗಳನ್ನು ಸ್ಪರ್ಶಮಾಡಿದ ಹೊರ್ತು ಯಾರಿಗೆ ಸಂಭೋಗಕೆ ಶಕ್ತಿಯೇ ಬರುವುದಿಲ್ಲವೊ ಅವನಿಗೆ ಹೆಸರು. ಕುಂಭೀಕನೆಂದರೆ ತನ್ನ ಗುದದ್ವಾರದಲ್ಲಿ ಇತರ ಪುರುಷರಿಂದ ಮೈಥುನಮಾಡಿಸಿಕೊಂಡು ನಂತರವೇ ಸ್ತ್ರೀಗಮನಶಕ್ತಿಯನ್ನು ಹೊಂದುತ್ತಾನೆ. ಸುಗಂಧಿ ಎಂದರೆ ಯೋನಿಯ ವಾಸನೆಯನ್ನು ಆಘ್ರಾಣಮಾಡಿದ ಮೇಲೆಯೇ ಸ್ತ್ರೀಗಮನದ ವಿಷಯದಲ್ಲಿ ಹರ್ಷವನ್ನು ಹೊಂದುವವನಿಗೆ ಹೆಸರು. ಷಂಡನೆಂದರೆ ಯೌವನ ನಡೆನುಡಿಗಳೆಲ್ಲವೂ ಕೇವಲ ಸ್ತ್ರೀಯರಂತೆಯೇ ಇರುತ್ತವೆಯೋ ಮತ್ತು ಸಂಪೂರ್ಣವಾಗಿ ಶುಕ್ರಬಲವೇ ಇರುವುದಿಲ್ಲವೊ ಅವನಿಗೆ ಹೆಸರು.

ಶುಕ್ರದೋಷಾಸ್ತಥಾಷ್ಟೌಸ್ಯುರ್ವಾತಾತ್ಪಿತ್ತಾತ್ಕಫೇನಚ ॥
ಕುಣಪಂಚಾಸ್ರಪಿತ್ತಾಭ್ಯಾಂಪೂಯಾಭಂಶ್ಲೇಷ್ಮಪಿತ್ತತಃ ॥
ಕ್ಷೀಣಂಚವಾತಪಿತ್ತಾಭ್ಯಾಂಗ್ರಂಥಿಲಂಶ್ಲೇಷ್ಮವಾತತಃ ॥ ೧೭೩ ॥
ಮಲಾಭಂಸನ್ನಿಪಾತಾಚ್ಚ ಶುಕ್ರದೋಷಾಇತೀರಿತಾ ॥

ವಾತಪಿತ್ತಾದಿ ದೋಷಗಳ ಪ್ರಕೋಪದಿಂದ ದುಷ್ಟವಾದ ಶುಕ್ರವು ಎಂಟುವಿಧ. ಶುಕ್ರಗತಗಳಾದ ಗರ್ಭಾನುತ್ಪಾದಕ ದೋಷಗಳ ಭೇದದಿಂದ ಈ ಶುಕ್ರದೋಷಗಳುಂಟಾಗುತ್ತವೆ—ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ಕುಣಪ ಎಂದರೆ ಶುಕ್ರದಲ್ಲಿ ಸತ್ತ ಹೆಣದ ವಾಸನೆ ಇರುತ್ತದೆ, ಇದು ರಕ್ತ ಮತ್ತು ಪಿತ್ತಗಳ ಪ್ರಕೋಪದಿಂದ ಉತ್ಪನ್ನವಾಗುವ ರೋಗ. ಪೂಯಾಭ ಎಂದರೆ ಶುಕ್ರವು ಶುದ್ಧವಾಗಿ ಕೀವಿನಂತಾಗಿ ಹೋಗುವುದಕ್ಕೆ ಹೆಸರು; ಇದು ಶ್ಲೇಷ್ಮ ಮತ್ತು ಪಿತ್ತದೋಷಗಳಿಂದ ಉಂಟಾಗುತ್ತದೆ. ಕ್ಷೀಣಶುಕ್ರವೆಂದರೆ ಶುಕ್ರದಲ್ಲಿ ಬಲವೇ ಇರುವುದಕ್ಕಿಲ್ಲ, ಇದು, ವಾಯು ಮತ್ತು ಪಿತ್ತಗಳೆಂಬ ದೋಷಗಳಿಂದ ಉಂಟಾಗುತ್ತದೆ. ಗ್ರಂಥಿಲವೆಂದರೆ ಶುಕ್ರವು ಸ್ವಚ್ಛವಾಗಿಲ್ಲದೆ ಗಂಟುಗಂಟುಗಳಿಂದ ತುಂಬಿರುವುದು. ಶ್ಲೇಷ್ಮ ಮತ್ತುವಾತಗಳಿಂದ ಶುಕ್ರವು ಈ ರೀತಿಯಾಗುತ್ತದೆ. ಮಲಾಭವೆಂದರೆ ಶುಕ್ರವು

ಮಲಮೂತ್ರಗಳ ಗಂಧಗಳಿಂದ ಯುಕ್ತವಾಗಿರುವುದು. ಇದು ತ್ರಿದೋಷ ಸನ್ನಿಪಾತ ದಿಂದುಂಟಾಗುತ್ತದೆ.

ಅಥಸ್ತ್ರೀರೋಗನಾಮಾನಿಪ್ರೋಚ್ಯಂತೇಪೂರ್ವಶಾಸ್ತ್ರತಃ ॥ ೧೭೪ ॥
ಅಷ್ಟಾವಾರ್ತವದೋಷಾಸ್ಯುರ್ವಾತಪಿತ್ತಕಫೈಸ್ತ್ರಿಧಾ ॥
ಪೂಯಾಭಂಕುಣಪಂಗ್ರಂಥಿಕ್ಷೀಣಂಮಲಸಮಂತಥಾ ॥ ೧೭೫ ॥
ತಥಾಚರಕ್ತಪ್ರದರಂಚತುರ್ವಿಧಮುದಾಹೃತಂ ॥
ವಾತಪಿತ್ತಕಫೈಸ್ತ್ರೇಧಾಚತುರ್ಥಂಸನ್ನಿಪಾತತಃ ॥ ೧೭೬ ॥

ಶುಕ್ರದೋಷಗಳನ್ನು ಹೇಳಿ ಇನ್ನು ಶೋಣಿತ ದೋಷಗಳನ್ನು ಹೇಳುತ್ತಾನೆ ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜ ನ್ಯ, ಕೀವಿನಂತಿರುವುದು, ಹೆಣದವಾಸನೆಯಿಂದಿರುವುದು, ಗಂಟುಗಳಿಂದ ಕೂಡಿರುವುದು, ಶೋಣಿತವೇ ಕ್ಷಯಿಸಿಹೋಗಿರುವುದು, ಮಲದ ವಾಸನೆಯಿರುವುದು, ಈ ರೀತಿಯಾಗಿ ಎಂಟು ವಿಧ. ರಕ್ತಪ್ರದರವೆಂದರೆ ಋತುಕಾಲದಲ್ಲಿ ನಡೆಯತಕ್ಕ ಸ್ರಾವವೇ ಉತ್ತರೋತ್ತರ ಹೆಚ್ಚುತ್ತ ಹೋಗುವುದಕ್ಕೆ ಹೆಸರು. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪ ಜನ್ಯ, ತ್ರಿದೋಷಸನ್ನಿಪಾತಜನ್ಯ ಎಂಬದಾಗಿ.

ವಿಂಶತಿರ್ಯೋನಿರೋಗಾಸ್ಯುರ್ವಾತಾತ್ಪಿತ್ತಾತ್ಕಫಾದಪಿ ॥
ಸನ್ನಿಪಾತಾಚ್ಚರಕ್ತಾಚ್ಚಲೋಹಿತಕ್ಷಯತಸ್ತಥಾ ॥ ೧೭೭ ॥
ಶುಷ್ಕಾಚವಾಮನೀಚೈವಷಂಡಿತಾಂತರ್ಮುಖೀತಥಾ ॥
ಸೂಚೀಮುಖೀವಿಪ್ಲುತಾಚಜಾತಘ್ನೀಚಪರಿಪ್ಲುತಾ ॥ ೧೭೮ ॥
ಉಪಪ್ಲುತಾಪ್ರಾಕ್ಚರಣಾಮಹಾಯೋನಿಸ್ತುಕರ್ಣಿನೀ ॥
ಸ್ಯಾನ್ನಂದಾಚಾತಿಚರಣಾಯೋನಿರೋಗಾಇತೀರಿತಾಃ ॥ ೧೭೯ ॥

ಯೋನಿಯಲ್ಲಿ ಉಂಟಾಗತಕ್ಕ ರೋಗಗಳು ಇಪ್ಪತ್ತುವಿಧ—ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ರಕ್ತದೋಷ ಜನ್ಯ, ದೇಹದಲ್ಲಿ ರಕ್ತವು ಕ್ಷಯಿಸೋಣದರಿಂದ ಹುಟ್ಟತಕ್ಕದ್ದು. ಶುಷ್ಕಾ ಎಂದರೆ ದೋಷಪ್ರಕೋಪದಿಂದ ಪ್ರತಿ ತಿಂಗಳಿನಲ್ಲಿ ನಡಿಯುವ ಋತುಸ್ರಾವವೇ ನಿಂತುಹೋಗಿ ರುವುದು ವಾಮನಿ ಎಂದರೆಯೋನಿದೋಷದಿಂದ ಪ್ರತಿ ತಿಂಗಳಿನ ರಜಸ್ರಾವದ ಜೊತೆ ಯಲ್ಲಿ ಆ ವರಿಗೂ ಗ್ರಹಣಮಾಡಿದ ಬೀಜವನ್ನೂ ಬಿಟ್ಟುಬಿಡುವುದು. ಷಂಡಿತಾ ಎಂದರೆ ಸ್ತ್ರೀಚಿಹ್ನವಾತ್ರವಾದ ಯೋನಿದ್ವಾರವಿರುವುದು, ಸ್ತನಾದಿಗಳಿರುವುದಕ್ಕಿಲ್ಲ. ಮೈಥುನಮಾಡಿದಲ್ಲಿ ಕೂಡ ಸುಖವಿರಲಿಕ್ಕಿಲ್ಲ. ಅಂತರ್ಮುಖೀ ಎಂದರೆ ಬೀಜಗ್ರಹಣ ಮಾಡತಕ್ಕ ಗರ್ಭಕೋಶದ ಮುಖವು ಆಳದಲ್ಲಿದ್ದು ಅತಿ ಸ್ಥೂಲವಾದ ಲಿಂಗವನ್ನೇ ಅಪೇಕ್ಷಿಸುವಂತಹದಕ್ಕೆ ಹೆಸರು. ಸೂಚೀಮುಖೀ ಎಂದರೆ ಯೋನಿಯ ಮುಖದ್ವಾರವು ಸೂಜಿ ಹಿಡಿಯುವಷ್ಟು ಸಣ್ಣನಾಗಿಯೇ ಹೋಗಿರುವುದು. ವಿಪ್ಲುತಾ ಎಂದರೆ ವಾತ ದೋಷದಿಂದ ಯಾವಾಗ್ಯೂ ಯೋನಿಯಲ್ಲಿ ವೇದನೆ ಇದ್ದೇ ಇರುವುದು. ಜಾತಘ್ನಿ ಎಂದರೆ ಗರ್ಭವುನಿಂತಕೂಡಲೇ ಸ್ರಾವವೋ ಪಾತವೋ ಯಾವುದಾದರೂ ಒಂದು ವಿಧದಿಂದ

ಗರ್ಭವನ್ನು ನಾಶಮಾಡುವ ಸ್ವಭಾವವುಳ್ಳದ್ದಕ್ಕೆ ಹೆಸರು. ಷಂಡ್ಯಾ ಎಂದರೆ ಯಾವ ಯೋನಿಯಲ್ಲಿ ಮೈಥುನಮಾಡಿದರೆ ಸ್ತ್ರೀಪುರುಷರಿಬ್ಬರಿಗೂ ಸುಖವಾಗುವ ಬದಲು ಅತಿಶಯವ್ಯಥೆಯಾಗುತ್ತದೆಯೋ ಅಂತಹದಕ್ಕೆ ಹೆಸರು. ಉಪಪ್ಲುತಾ ಎಂದರೆ ಋತುಕಾಲದಲ್ಲಿ ಶೋಣಿತವನ್ನು ಕೊಂಚವಾಗಿ ಕಷ್ಟದಿಂದ ನೊರೆನೊರೆಯಾಗಿ ವಿಸರ್ಜಿಸುವುದಕ್ಕೆ ಹೆಸರು. ಪ್ರಾಕ್ಚರಣಾ ಎಂದರೆ ಪುರುಷಶುಕ್ರಸ್ರಾವಕ್ಕಾಗುವ ಮುಂಚೆಯೇ ಮೈಥುನದಿಂದ ತೃಪ್ತಿಹೊಂದುವ ಸ್ವಭಾವವಿರುವದಕ್ಕೆ ಹೆಸರು. ಮಹಾಯೋನಿ ಎಂದರೆ ಯೋನಿಮುಖವು ಸ್ವಭಾವಕ್ಕಿಂತ ಹೆಚ್ಚಾಗಿ ವಿಸ್ತೃತವಾಗಿರುವುದಕ್ಕೆ ಹೆಸರು. ಕರ್ಣಿನಿ ಎಂದರೆ ಯೋನಿದ್ವಾರವು ಕರ್ಣರಂಧ್ರದಂತೆ ವಕ್ರವಾಗಿರುವುದು ಅಥವಾ ಯೋನಿದ್ವಾರದಲ್ಲಿ ಒಂದು ಸಣ್ಣ ಮಾಂಸಗ್ರಂಥಿ ಇರುವುದು. ಸ್ಯಾನ್ನಂಧ್ರಾ ಎಂದರೆ ಎಷ್ಟು ಮೈಥುನಮಾಡಿದರೂ ತೃಪ್ತಿಯನ್ನು ಹೊಂದದಿರುವುದಕ್ಕೆ ಹೆಸರು. ಅತಿಚರಣಾ ಎಂದರೆ ಪುರುಷ ಶುಕ್ರಸ್ರಾವವಾದ ಎಷ್ಟೋ ಹೊತ್ತಿನ ಮೇಲೆ ಯೋನಿಮುಖವು ವಿಸ್ತೃತವಾಗುವುದು. ಈ ರೀತಿಯಾಗಿ ಯೋನಿರೋಗಗಳಿಪ್ಪತ್ತು ವಿಧ.

ಚತುರ್ವಿಧಂಯೋನಿಕಂದಂವಾತಪಿತ್ತಕಫೈಸ್ತ್ರಿಧಾ ॥
ಚತುರ್ಥಂಸನ್ನಿಪಾತೇನ ... ... .. ...

ಯೋನಿಕಂದವೆಂದರೆ ಯೋನಿಯಲ್ಲಿ ನಿಂಬೆಯ ಹಣ್ಣಿನಷ್ಟು ಅಥವಾ ಕೊಂಚ ದೊಡ್ಡದಾಗಿ ಮಾಂಸಗ್ರಂಥಿಯುಂಟಾದರೆ ಅದಕ್ಕೆ ಹೆಸರು. ಇದು ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷ ಸನ್ನಿಪಾತಜನ್ಯ ಎಂಬದಾಗಿ ನಾಲ್ಕು ವಿಧ.

.... .. . ತಥಾಷ್ಟೌಗರ್ಭಜಾಗದಾಃ ॥೧೮೦॥
ಉಪವಿಷ್ಟಕಗರ್ಭಸ್ಯಾತ್ತಥಾನಾಗೋದರಸ್ಮೃತಃ ॥
ಮಕ್ಕಲ್ಲೋಮೂಢಗರ್ಭಶ್ಚವಿಷ್ಕಂಭೋಗೂಢಗರ್ಭಕಃ ॥೧೮೧॥
ಜರಾಯುದೋಷೋಗರ್ಭಸ್ಯಪಾತಶ್ಚಾಷ್ಟಮಕಸ್ಮೃತಃ ॥

ಶುಕ್ರಶೋಣಿತಸಂಯೋಗದಿಂದ ಉಂಟಾಗುವ ಗರ್ಭಕ್ಕೆ ಸಂಭವಿಸ ಬಹುದಾದ ರೋಗಗಳು ಎಂಟುವಿಧ. ಉಪವಿಷ್ಟಕವೆಂದರೆ ಗರ್ಭಿಣಿಯು ಉಷ್ಣವಾದ ಮತ್ತು ತೀಕ್ಷ್ಣವಾದ ಆಹಾರವಿಹಾರಗಳನ್ನು ಉಪಯೋಗಿಸುತ್ತ ಬರುವುದರಿಂದ ಗರ್ಭವು ವೃದ್ಧಿಯಾಗ ಹಾಗೆಲ್ಲಾ ಅಂದರೆ ತಿಂಗಳುಗಳು ಕಳೆದಹಾಗೆಲ್ಲಾ ಗರ್ಭವು ವೃದ್ಧಿಯಾಗುವ ಬದಲು ಕ್ಷಯಿಸುತ್ತ ಬರುವುದು. ಆಗಾಗ್ಯೆ ತಿಂಗಳು ಗಟ್ಲೆ ಋತುಸ್ರಾವವಾಗುತ್ತಿರುವುದು ಪ್ರಸವ ಕಾಲವೂ ಬದಲಾಯಿಸುವುದು, ಅಂದರೆ ಹೆಚ್ಚಾಗುತ್ತಿರುವುದು ಇದಕ್ಕೆ ಹೆಸರು. ನಾಗೋದರ ವೆಂದರೆ ಸ್ತ್ರೀ ಪುರುಷ ಸಂಯೋಗಕಾಲದಲ್ಲಿ ಗರ್ಭಧಾರಣಾರ್ಥವಾಗಿ ಶುಕ್ರಶೋಣಿತಗಳು ಕೂಡುವಾಗ್ಯೆ ದುಷ್ಟವಾತ ಸಂಪರ್ಕವಾಗುವುದರಿಂದ ಗರ್ಭಕ್ಕೆ ಜೀವ ಕಳೆಯಿಲ್ಲದೆ ಅಂದರೆ ಪ್ರಾಣವಾಯು ಸಂಪರ್ಕವಿಲ್ಲದೆ ಗರ್ಭಧಾರಣೆಯ ಮಾಸಗಳು ಕಳದಂತೆ ಉದರವು ಮಾತ್ರ ವೃದ್ಧಿಯಾಗುತ್ತಿರುವುದಕ್ಕೆ ಹೆಸರು. ಕೆಲವು ಕಾಲದ ಮೇಲೆ ಈ ನಾಗೋದರವು ತನ್ನಷ್ಟಕ್ಕೆ ಶಾಂತವಾಗಿ ಹೋಗುತ್ತದೆ. ಮಕ್ಕಲ

ವೆಂದರೆ ವಾಯುಪ್ರಕೋಪದಿಂದುಂಟಾಗುವ ಗರ್ಭಶೂಲೆ, ಇದು ಗರ್ಭಿಣಿಯಾಗಿರುವಾಗ ಮತ್ತು ಪ್ರಸವಿಸಿದಮೇಲೆ ಎಂಬಥಾಗಿ ಎರಡು ರೀತಿಯಿಂದ ಸಂಭವಿಸುತ್ತದೆ. ಮೂಢಗರ್ಭವೆಂದರೆ ಗರ್ಭವಾಯುವು ಪ್ರಕುಪಿತವಾಗಿ ಪ್ರಸವ ಕ್ರಮದಲ್ಲಿ ಕ್ರಮವನ್ನು ತಪ್ಪಿಸುವುದು. ಹೊಟ್ಟೆಯಲ್ಲಿ ಯೋನಿಪ್ರದೇಶದಲ್ಲಿ ಶೂಲೆಯನ್ನುಂಟುಮಾಡುವುದು, ಮೂತ್ರ ಸಂಗ್ಗವನ್ನುಂಟುಮಾಡುವುದು ಇದಕ್ಕೆ ಹೆಸರು. ವಿಷ್ಕಂಭಕವೆಂದರೆ ಗರ್ಭವಾಯು ಪ್ರಕೋಪದಿಂದ ಗರ್ಭವು ಶೋಷಿಸಿ ಹೋಗಿ ವೃದ್ಧಿಯಾಗಿಗರ್ಭಕೋಶದ ತುಂಬ ತುಂಬಿಕೊಳ್ಳದೆ ಗರ್ಭಾಶಯದಲ್ಲಿಯೇ ಕೊಂಚ ಮಾತ್ರ ಚಲಿಸುತ್ತ ಗರ್ಭಮಾರ್ಗವನ್ನು ನಿರೋಧ ಮಾಡಿ ತಡದು ಕೊಳ್ಳುವುದಕ್ಕೆ ಹೆಸರು. ಗೂಢ ಗರ್ಭವೆಂದರೆ ಗರ್ಭಧಾರಣೆಗೆ ಮೊದಲು ಗರ್ಭಾಶಯ ಸಂಬಂಧವಾದ ವಾತ ದೋಷಗಳಿರುವ ಪಕ್ಷದಲ್ಲಿ ಆ ದೋಷಗಳಿಂದ ಗರ್ಭವು ಸರಿಯಾಗಿ ನಿಂತು ಚಿಹ್ನೆಗಳನ್ನು ತೋರಿಸಿಕೊಂಡು ವೃದ್ಧಿಯಾಗದೆ ಹಾಗೆಯೇ ನಾಶವಾಗುವುದು. ಜರಾಯುದೋಷವೆಂದರೆ ಗರ್ಭಸ್ಥವಾದ ಶಿಶುವನ್ನು ಗರ್ಭದಲ್ಲಿರುವಾಗ್ಯೆ ಆಛಾದನಮಾಡಿಕೊಂಡಿರುವ ತೆಳುವಾದ ಚರ್ಮದಲ್ಲಿರುವ ದೋಷಗಳಿಂದ ಗರ್ಭಕ್ಕೆ ಸಂಭವಿಸುವ ತೊಂದರೆಗಳಿಗೆ ಹೆಸರು. ಗರ್ಭಪಾತವೆನ್ನುವುದು ಎರಡು ವಿಧ. ಒಂದನೆಯದು ಸ್ರಾವ ಎರಡನೆಯದು ಪಾತ. ಗರ್ಭಧಾರಣೆಯಿಂದ ನಾಲ್ಕು ತಿಂಗಳು ಆಗುವವರೆಗೂ ಗರ್ಭದಲ್ಲಿ ದ್ರವಭಾಗ ಹೆಚ್ಚು, ಕಠಿನ ಭಾಗ ಕಡಮೆ. ಆಗ ಆಗತಕ್ಕ ಗರ್ಭವಿಮೋಚನವು ಸ್ರಾವ ವೆನ್ನಿಸಿಕೊಳ್ಳುತ್ತದೆ. ನಾಲ್ಕು ತಿಂಗಳು ಕಳದು ಐದಾರನೆಯ ತಿಂಗಳುಗಳಲ್ಲಿ ಗರ್ಭದಲ್ಲಿ ದ್ರವಭಾಗ ಕಡಮೆ ಕಠಿಣ ಭಾಗ ಹೆಚ್ಚು, ಆಗ ಆಗತಕ್ಕ ಗರ್ಭವಿಮೋಚನಕ್ಕೆ ಪಾತವೆಂದು ಹೆಸರು.

ಪಂಚೈವಸ್ತನರೋಗಾಸ್ಯುರ್ವಾತಪಿತ್ತಕಫಾದಪಿ ||೧೮೨||
ಸನ್ನಿಪಾತಾತ್ ಕ್ಷತಾಚ್ಚೈವತಥಾಸ್ತನ್ಯೋದ್ಭವಾಗದಾಃ ॥
ಬಾಲರೋಗೇಷು ಕಥಿತಾಃ ಸ್ತ್ರೀದೋಷಾಶ್ಚ ಕ್ರಮಶಸ್ತ್ರಿತಃ || ೧೮೩ ||
ಅದಕ್ಷಪುರುಷೋತ್ಪನ್ನಃ ಸಪತ್ನಿವಿಹಿತಸ್ತಥಾ ||
ದೈವಾಚ್ಚಾತಸ್ತ್ರೀಯಸ್ತತಥಾಚಸೂತಿಕಾಗದಃ || ೧೮೪ ||
ಜ್ವರಾದಯಶ್ಚಿಕಿತ್ಸ್ಯಾಸ್ತ್ರೀಯಥಾದೋಷಂಯಥಾಬಲಂ ||

ಸ್ತ್ರೀಯರಸ್ತನಗಳಲ್ಲಿ ಹುಟ್ಟತಕ್ಕ ರೋಗಗಳು ಐದು ವಿಧವಾಗಿವೆ. ವಾತಪ್ರಕೋಪಜನ್ಯ, ಪಿತ್ತಪ್ರಕೋಪಜನ್ಯ, ಶ್ಲೇಷ್ಮಪ್ರಕೋಪಜನ್ಯ, ತ್ರಿದೋಷಸನ್ನಿಪಾತಜನ್ಯ, ಗಾಯದಿಂದ ಉತ್ಪನ್ನವಾಗತಕ್ಕದ್ದು ಎಂಬದಾಗಿ. ಸ್ತನ್ಯ ಎಂದರೆ ಮೊಲೆ ಹಾಲಿನಿಂದ ಉತ್ಪನ್ನವಾಗತಕ್ಕ ರೋಗಗಳನ್ನು ಬಾಲರೋಗಪ್ರಕರಣದಲ್ಲಿ ಹೇಳಿ ಮುಗಿಸಿದಾಗಿದೆ. ಸ್ತ್ರೀ ದೋಷ ಜನಿತಗಳಾದ ರೋಗಗಳು ಮೂರು ವಿಧ. ಅದಕ್ಷಪುರುಷೋತ್ಪನ್ನ ವೆಂದರೆ ಅನ್ನಪಾನಗಳನ್ನು ಕುಟುಂಬಕ್ಕೆ ಸಾಕಾಗುವಷ್ಟು ಸಂಪಾದಿಸಲಾರದವನನ್ನು ಮದುವೆಯಾಗೋಣದರಿಂದ ಹೊಟ್ಟೆ ಬಟ್ಟೆಗೆ ಸಾಲದೆ ಅದರಿಂದ ಸ್ತ್ರೀಯರಿಗೆ ಉಂಟಾಗುವ ರೋಗಗಳ್ಕೆ ಹೆಸರು. ಸಪತ್ನಿ ವಿಹಿತವೆಂದರೆ ಸವತಿಯರ ದುಸ್ಸಹವಾಸದಿಂದ ಸ್ತ್ರೀಯರ ಮನಸ್ಸು ಮತ್ತು ದೇಹಸ್ಥಿತಿಗಳು ಆಹಾರವಿಹಾರಗಳ ಅಭಾವದಿಂದ ಕೆಟ್ಟು ಅದರಿಂದ

ಹುಟ್ಟತಕ್ಕರೋಗಗಳು ಸಪತ್ನಿ ವಿಹಿತವೆನ್ನಿಸಿಕೊಳ್ಳುತ್ತವೆ. ದೈವಾಜ್ಞಾತಃ ಎಂದರೆ ದೈವಿಕಕಾರಣಗಳಿಂದ ಉಂಟಾಗತಕ್ಕ ಸ್ತ್ರೀಯರ ಅಸ್ವಸ್ಥಗಳಿಗೆಲ್ಲಾ ಹೆಸರು.

ಸೂತಿಕಾಗದಾಃ ಎಂದರೆ ಪ್ರಸವಕಾಲದಲ್ಲಿ ಮತ್ತು ಪ್ರಸವವಾದ ಮೇಲೆ ಬಾಣಂತಿಯಾಗಿರುವಕಾಲದಲ್ಲಿ ಸಹ ಉಂಟಾಗುವ ರೋಗಗಳಿಗೆ ಹೆಸರು. ಈ ರೋಗಗಳನ್ನೂ ತತ್ಸಂಬಂಧದಿಂದ ಬರತಕ್ಕ ಜ್ವರಾದಿ ರೋಗಗಳನ್ನೂ ರೋಗಿಯ ಮತ್ತು ರೋಗದ ಬಲಾಬಲಗಳನ್ನು ನೋಡಿಕೊಂಡು ಚಿಕಿತ್ಸಿಸಬೇಕು.

ದ್ವಾವಿಂಶತಿರ್ಬಾಲರೋಗಾಸ್ತೇಷುಕ್ಷೀರಾಲಸಾಸ್ತ್ರಯಃ ॥
ವಾತಾತ್ಪಿತ್ತಾತ್ಕಫಾಚ್ಚೈವದಂತೋದ್ಭೇದಶ್ಚತುರ್ಥಕಃ ॥
ದಂತಘಾತೋದಂತಶಬ್ದೋಕಾಲದಂತೋಹಿಪೂತನಂ ॥ ೧೮೬ ॥
ಮುಖಪಾಕೋಮುಖಸ್ರಾವೋಗುದಪಾಕೋಪಶೀರ್ಷಕಾ ॥
ಪಾರ್ಶ್ವಾರುಣಸ್ತಾಲುಕಂಟೋವಿಚ್ಛಿನ್ನಂಪರಿಗರ್ಭಿಕಃ ॥ ೧೮೭ ॥
ದೌರ್ಬಲ್ಯಂಗಾತ್ರಶೋಷಶ್ಚಶಯ್ಯಾಮೂತ್ರಂಕುಕೂಣಕಃ ॥
ರೋದನಂಚಾಜಗಲ್ಲೀಸ್ಯಾದಿತಿದ್ವಾವಿಂಶತಿಸ್ಮೃತಾಃ ॥ ೧೮೮ ॥

ಮಕ್ಕಳಿಗೆ ಬರತಕ್ಕ ರೋಗಗಳು ಇಪ್ಪತ್ತೆರಡು—ಹದಿನಾರು ವರುಷ ವಯಸ್ಸಾಗುವವರಿಗೂ ಬಾಲಕರೆಂದೇ ವೈದ್ಯರು ವ್ಯವಹರಿಸುತ್ತಾರೆ, ಬಾಲಕರು ಮೂರು ವಿಧ—ಹಾಲು ಮಾತ್ರ ಕುಡಿಯುವ ಮಕ್ಕಳು, ಅನ್ನ ಮತ್ತು ಹಾಲು ಸಹ ಕುಡಿಯುವ ಮಕ್ಕಳು, ಕೇವಲ ಅನ್ನವನ್ನೇ ತಿನ್ನುವ ಮಕ್ಕಳು ಎಂಬದಾಗಿ. ಬಾಲರೋಗದಲ್ಲಿ ಮೊದಲಿನಕ್ಷೀರಾಲಸವೆಂಬ ರೋಗವು ಮೂರು ವಿಧ, ಇದು ಹಾಲು ಕುಡಿಯುವ ಮಕ್ಕಳಿಗೆ ಮಾತ್ರ ಬರತಕ್ಕದ್ದು ವಾತಪ್ರಕೋಪಜನ್ಯಕ್ಷೀರಾಲಸ, ಪಿತ್ತಪ್ರಕೋಪಜನ್ಯಕ್ಷೀರಾಲಸ, ಶ್ಲೇಷ್ಮಪ್ರಕೋಪಜನ್ಯಕ್ಷೀರಾಲಸ. ದಂತೋದ್ಭೇದವೆಂದರೆ ಹಲ್ಲು ಹುಟ್ಟತಕ್ಕಕಾಲದಲ್ಲಿ ಬರತಕ್ಕ ರೋಗಗಳು. ದಂತಘಾತವೆಂದರೆ ಮಕ್ಕಳಿಗೆ ಹುಟ್ಟಿದ ಹಾಲುಹಲ್ಲುಗಳು ಬೀಳುವಾಗ್ಯೆ ಬರತಕ್ಕ ರೋಗಗಳಿಗೂ ಮತ್ತು ಏನಾದರೂ ಪೆಟ್ಟುಮಾಡಿಕೊಂಡು ಹಲ್ಲುಮುರಿದುಕೊಂಡಲ್ಲಿ ಉತ್ಪನ್ನವಾಗತಕ್ಕ ರೋಗಗಳು ಇವುಗಳಿಗೂ ಹೆಸರು. ದಂತಶಬ್ದವೆಂದರೆ ರಾತ್ರಿ ಮಲಗಿದಾಗ್ಯೆ ಮಕ್ಕಳು ಹಲ್ಲು ಕಡಿಯುವುದು. ಅಕಾಲದಂತವೆಂದರೆ ಹಲ್ಲುಹುಟ್ಟುವದಕ್ಕೆ ನಿಯಮಿತವಾದ ಕಾಲಕ್ಕಿಂತ ಮುಂಚಿತವಾಗಿ ಹಲ್ಲು ಹುಟ್ಟುವುದಕ್ಕೆ ಹೆಸರು ಅಹಿಪೂತನವೆಂದರೆ ಮಕ್ಕಳು ಮಲಮೂತ್ರಗಳನ್ನು ವಿಸರ್ಜಿಸಿದ ಮೇಲೆ ಸರಿಯಾಗಿ ಪ್ರಕ್ಷಾಳನೆಮಾಡದಿರೋಣದರಿಂದ ನವೆಯುಂಟಾಗಿ ಹುಟ್ಟತಕ್ಕ ವ್ರಣಗಳಿಗೆ ಹೆಸರು. ಮುಖಪಾಕವೆಂದರೆ ಮಕ್ಕಳಿಗೆ ಮುಖದ ಮೇಲೆ ಹುಟ್ಟತಕ್ಕ ವ್ರಣಗಳಿಗೆ ಹೆಸರು. ದೋಷಪ್ರಕೋಪದಿಂದ ಇಂತಹ ವ್ರಣಗಳುಂಟಾಗುತ್ತವೆ. ಮುಖಸ್ರಾವವೆಂದರೆ ಬಾಯಿನಿಂದ ಜೊಲ್ಲು ಸುರಿಯುತ್ತಿರುವುದು. ಗುದಪಾಕವೆಂದರೆ ಮಕ್ಕಳಿಗೆ ಅಂಡಿನ ಮೇಲೆಲ್ಲಾ ಗಾಯಗಳಾಗುವುದು. ಉಪಶೀರ್ಷಕವೆಂದರೆ ದೋಷಪ್ರಕೋಪದಿಂದ ತಲೆಯಲ್ಲಿ ಹುಟ್ಟತಕ್ಕ ಹುಣ್ಣುಗಳಿಗೆ ಹೆಸರು. ಪಾರ್ಶ್ವಾರುಣವೆಂದರೆ ಪಾರ್ಶ್ವಗಳಲ್ಲಿ ಮತ್ತು ಮೈಯ್ಯಲ್ಲೆಲ್ಲಾ ದುಂಡಗೂ ಚಪ್ಪಟೆಯಾ

ಗಿಯೂ ಕೆಂಪಗೆ ವ್ರಣಗಳಾಗುವುದಕ್ಕೆ ಹೆಸರು, ಇದನ್ನೇ ಕರಪಾಣಿ ಎಂದು ಕರೆಯು ತ್ತಾರೆ. ತಾಲುಕಂಟವೆಂದರೆ ಮಕ್ಕಳಿಗೆ ದೇಹದಲ್ಲಿ ಶ್ಲೇಷ್ಮ ಪ್ರಕೋಪವಾಗಿ ದವಡೆ ಯಲ್ಲಿ ಮುಳ್ಳಿನಂತಹ ಸಣ್ಣ ಮೊಳಿಕೆಗಳಿದ್ದರೆ ಅದಕ್ಕೆ ತಾಲುಕಂಟವೆಂದು ಹೆಸರು. ವಿಚ್ಛಿನ್ನವೆಂದರೆ ಮಕ್ಕಳಿಗೆ ದೇಹದಲ್ಲಿ ದೋಷಪ್ರಕೋಪ ಉಂಟಾಗಿ ಇದರಿಂದ ಸ್ತನ್ಯ ಪಾನದಲ್ಲಿ ದ್ವೇಷ, ಒಂದೊಂದುವೇಳೆ ಬಹಳ ಕಷ್ಟದಿಂದ ಸ್ತನ್ಯಪಾನಮಾಡುವುದು, ನೀರಿಗೆ ಹಾತೊರೆಯುವುದು, ಕಣ್ಣು ತಲೆಗಳಲ್ಲಿ ನೋವು, ಪರಿಗರ್ಭಿತವೆಂದರೆ ಗರ್ಭಿ ಣಿಯಾದ ತಾಯಿಯ ಸ್ತನ್ಯಪಾನಮಾಡುವುದರಿಂದ ಮಕ್ಕಳಿಗೆ ಉಂಟಾಗುವ ಕೆಮ್ಮು, ಅಗ್ನಿಮಾಂದ್ಯ, ವಮನ, ಕೃಶತ್ವ, ಮೊದಲಾದವುಗಳಿಗೆ ಹೆಸರು. ದೌರ್ಬಲ್ಯವೆಂದರೆ ಮಕ್ಕಳಿಗೆ ಉಂಟಾಗುವ ಬಲಹಾನಿಗೆ ಹೆಸರು. ಗಾತ್ರಶೋಷವೆಂದರೆ ಮಕ್ಕಳು ದಿನೇ ದಿನೇ ಬಡವಾಗಿ ಹೋಗುವದು. ಶೈಯ್ಯಾಮೂತ್ರವೆಂದರೆ ಮಕ್ಕಳು ಹಾಸಿಗೆಯಲ್ಲಿ ಮೂತ್ರಿಸುವುದಕ್ಕೆ ಹೆಸರು, ಕುಕೂಣಕವೆಂದರೆ ಮಕ್ಕಳು ದೋಷದುಷ್ಟವಾದ ತಾಯಿಯ ಹಾಲನ್ನು ಕುಡಿಯುವುದರಿಂದುಂಟಾಗುವ ನೇತ್ರರೋಗ, ಇದರಲ್ಲಿ ಕಣ್ಣು ಕೆಂಪಾಗಿ ಪಿಸರುಕಟ್ಟಿಕೊಂಡು ಕಣ್ಣಿನಲ್ಲಿ ಯಾವಾಗ್ಯೂ ನೀರು ಸುರಿಯುತ್ತಿರು ತ್ತದೆ ಮಗುವು ತಲೆ ಕಣ್ಣು ಮೂಗುಗಳನ್ನು ತುರಿಸುತ್ತಿರುತ್ತದೆ. ಮಗುವಿಗೆ ಬೆಳ ಕು ಮತ್ತು ಬಿಸಿಲನ್ನು ನೋಡುವುದಕ್ಕಾಗುವುದಿಲ್ಲ. ರೋದನ ಎಂದರೆ ಮಗುವು ಯಾವಾಗ್ಲೂ ಹಿಂಸೆಯನ್ನು ತಡೆಯಲಾರದೆ ಅಳುತ್ತಿರುವುದು. ಅಜಗಲ್ಲಿಎಂದರೆ ಮಕ್ಕ ಳಿಗೆ ಬರತಕ್ಕ ಒಂದು ವಿಧವಾದ ಕಜ್ಜಿಯಂತಹ ತ್ವಗ್ರೋಗ,

ತಥಾಬಾಲಗ್ರಹಾಃಖ್ಯಾತಾದ್ವಾದಶೈವಮುನೀಶ್ವರೈಃ ॥
ಸ್ಕಂದಗ್ರಹೋವಿಶಾಖಸ್ಯಾತ್ಸ್ವಗ್ರಹಶ್ಚಪಿತೃಗ್ರಹಃ ॥೧೮೯॥
ನೈಗಮೇಯಗ್ರಹಸ್ತದ್ವಚ್ಛಕುನಿಶ್ಶೀತಪೂತನಾ ॥
ಮುಖಮುಂಡಿತಿಕಾತದ್ವತ್ಪೂತನಾಚಾಂಧಪೂತನಾ ॥೧೯೦॥
ರೇವತೀಚೈವಸಂಖ್ಯಾತಾತಥಾಸ್ಯಾಚ್ಛುಷ್ಕರೇವತೀ ॥

ಮಕ್ಕಳಿಗೆ ಬರತಕ್ಕ ಬಾಲಗ್ರಹ ಪೀಡೆಯು ಹನ್ನೊಂದು ವಿಧ ಸ್ಕಂದಗ್ರಹ ಲಕ್ಷಣವೇನಂದರೆ ಮಗುವಿನ ಒಂದು ಕಣ್ಣಿನಲ್ಲಿ ಮಾತ್ರ ನೀರು ಸುರಿಯತ್ತಿರುವುದು, ಆಗಾಗ್ಯೆ ಶರೀರದ ಒಂದು ಭಾಗ ನಡುಗುತ್ತಿರುವುದು, ಮೇಲಕ್ಕೆ ಕಣ್ಣು ಸಿಕ್ಕಿ ಹೋಗು ವುದು, ಹಲ್ಲುಕಡಿಯುವುದು, ಮೊಲೆಯುಣ್ಣುವುದಿಲ್ಲ, ಹೆಚ್ಚಿಗೆರೋದನವೂ ಮಾಡುವು ದಿಲ್ಲ. ಸ್ವಗ್ರಹ ಲಕ್ಷಣವೇನಂದರೆ ಜ್ಞಾನತಪ್ಪಿದಾಗ್ಯೆ ಬಾಯಲ್ಲಿ ನೊರೆ ಸುರಿಯು ವುದು, ಜ್ಞಾನವಾದ ಒಡನೆ ಅತಿಯಾಗಿ ಅಳುವುದು ನೈಗಮೇಯಗ್ರಹಲಕ್ಷಣವೇನಂ ದರೆ ಆಗಾಗ್ಯೆ ವಮನ, ಮೈ ನಡುಕ, ಬಾಯಿ ಗಂಟಲೆಲ್ಲಾ ಒಣಗಿಕೊಂಡು ಹೋಗು ವುದು, ಹಲ್ಲುಕಡಿಯುವುದು, ಮೇಲೆ ನೋಡುವುದು. ಶಕುನಿಗ್ರಹ ಲಕ್ಷಣವೇನಂದರೆ ಹೆದರಿ ಯಾವಾಗ್ಯೂ ನಡುಗುತ್ತಿರುವುದು, ಮೈಯ್ಯಲ್ಲೆಲ್ಲಾ ಗಂದೆಗಳಿರುತ್ತವೆ, ಮೇಲಕ್ಕೆ ನೋಡುವುದು, ಕಣ್ಣು ಸಿಕ್ಕಿ ಕೊಳ್ಳುವದು, ಇವುಗಳೆಲ್ಲಾ ಇರುತ್ತವೆ. ಶೀತಪೂತ ನಗ್ರಹಲಕ್ಷಣಗಳೇನಂದರೆ ನಡುಗುವುದು ಕೆಮ್ಮುವುದು, ನೇತ್ರರೋಗ ಬಾಧೆಯಿರು ತ್ತದೆ. ವಮನಭೇದಿ ಎರಡೂ ಇರುತ್ತವೆ. ಮುಖಮುಂಡನಿ ಗ್ರಹದ ಲಕ್ಷಣವೇನಂದರೆ

ಮುಖದ ಕಡೆ ರೋಗ ಲಕ್ಷಣಗಳೇನೂ ತೋರುವುದಿಲ್ಲ, ಮಗುವಿನ ಮೈಯೆಲ್ಲಾ ಮೂತ್ರದ ವಾಸನೆ ಇರುತ್ತದೆ, ಮಗುವು ವಿತಿಮೀರಿ ತಿಂಡಿತಿನ್ನುವ ಸ್ವಭಾವ ದ್ದಾಗುತ್ತದೆ. ಪೂತನಾಗ್ರಹ ಲಕ್ಷಣವೇನಂದರೆ ಅತಿಸಾರ, ಜ್ವರ, ಬಾಯಾರಿಕೆ, ಮೇಲೆ ನೋಡುವುದು, ಅಳುವುದು, ನಿದ್ದೆ ನಿಂತೇಹೋಗುತ್ತದೆ, ಅಂಧ ಪೂತನಾ ಗ್ರಹದ ಲಕ್ಷಣವೇನಂದರೆ—ವಮನ, ಕೆಮ್ಮು, ಜ್ವರ, ಬಾಯಾರಿಕೆ, ಮಗುವು ಮಾಂಸರಸದ ವಾಸನೆಯಾಗುವುದು, ಮೊಲೆಯುಣ್ಣುವುದಕ್ಕಿಲ್ಲ. ರೇವತೀಗ್ರಹ ಲಕ್ಷಣವೇನಂದರೆ—ಮಗುವಿಗೆ ಮೈಯ್ಯೆಲ್ಲಾ ಕಜ್ಜಿ, ರಕ್ತ ಕೀವು ಸೋರುವುದು, ಕೆಸರಿನ ವಾಸನೆ, ಜ್ವರ, ಬಾಯಾರಿಕೆ, ಮಲಪ್ರವೃತ್ತಿ, ಅಳುತ್ತಿರುವುದು. ಇಲ್ಲಿ ಬಿಟ್ಟುಹೋಗಿರುವ ಗ್ರಹಚೇಷ್ಟೆಗಳ ಲಕ್ಷಣಗಳನ್ನು ಬಾಲತಂತ್ರದಲ್ಲಿ ನೋಡ ಬಹುದು.

ತಥಾಚರಣಭೇದಾಸ್ಸ್ಯುರ್ವಾತರಕ್ತಾದಿಕಾಶ್ಚಯೆ ॥ ೧೯೧ ॥
ದ್ವಿಚತ್ವಾರಿಂಶದುಕ್ತಾಸ್ತೆರೋಗೇಷ್ವೇವಮುನೀಶ್ವರೈಃ ॥
ದ್ವಿಷಷ್ಟಿದೋರ್ಷಭೇದಾಸ್ಸ್ಯುಸ್ಸನ್ನಿಪಾತಾದಿಕಾಶ್ಚಯೆ ॥ ೧೯೨ ॥
ತೇಪಿರೋಗೇಷುಗಣಿತಾಃಪ್ಯಥಕ್ ಪ್ರೋಕ್ತಾನತೇಕ್ವಚಿತ್ ॥

ಚರಣಭೇದಾಃ ಎಂದರೆ ಕಾಲಿಗೆ ಬರತಕ್ಕ ವಾತ ರಕ್ತ ಮೊದಲಾದ ಪಾದ ರೋಗಗಳು, ಅವಯವಗಳಿಗೆ ಸಂಬಂಧಿಸಿದ ರೋಗಗಳು ನಲವತ್ತೆರಡು. ಆ ರೋಗಗಳೆಲ್ಲಾ ವಾತಾದಿರೋಗಗಳ ಪ್ರಕರಣಗಳಲ್ಲಿಯೇ ಸೇರಿಸಿ ಋಷಿಗಳು ಹೇಳಿದ್ದಾರೆ ವಾತ ಪಿತ್ತ ಶ್ಲೇಷ್ಮಗಳೆಂಬ ಮೂರು ದೋಷಗಳೂ ರೋಗಗಳಿಗೆ ಸಂಬಂಧಿಸಿದಂತೆ ಹೆಚ್ಚುಕಡಮೆ ಮಾಡಿಕೊಂಡು ಅಂದರೆ ವಾತಜನ್ಯ, ಪಿತ್ತಜನ್ಯ ಶ್ಲೇಷ್ಮಜನ್ಯ, ವಾತಪಿತ್ತಜನ್ಯ, ವಾತಶ್ಲೇಷ್ಮಜನ್ಯ, ಪಿತ್ತಶ್ಲೇಷ್ಮಜನ್ಯ ಈ ರೀತಿ ರೋಗೋತ್ಪತ್ತಿ ಕಾರಣಗಳೆಂಬದಾಗಿ ಲೆಕ್ಕಹಾಕುತ್ತಾ ಹೋದರೆ ಅವು ಕೂಡ ಅರವತ್ತೆರಡು ವಿಧವಾಗುತ್ತವೆ. ಅವುಗಳನ್ನು ಕೂಡ ಆಯಾಯ ರೋಗಗಳ ಪ್ರತ್ಯೇಕ ಪ್ರಕರಣಗಳಲ್ಲಿಯೇ ವಾತಜನ್ಯ, ಪಿತ್ತಜನ್ಯ, ಈ ರೀತಿಯಾಗಿ ಹೇಳಿ ಪೂರೈಸಿರುವುದರಿಂದ ಅದನ್ನು ಪುನಶ್ಚ ಇಲ್ಲಿ ಹೇಳಲಿಲ್ಲ.

ಹೀನಮಿಥ್ಯಾತಿಯೋಗೇನಭೇದೈಃಪಂಚದಶೋದಿತಾಃ ॥
ಪಂಚಕರ್ಮಭವಾರೋಗಾರೋಗೇಷ್ವೇವಪ್ರಕೀರ್ತಿತಾಃ ॥
ಸ್ನೇಹಸ್ವೇದೌತಥಾಧೂಮೋಗಂಡೂಷೋಂಜನತರ್ಪಣೆ ॥ ೧೯೪ ॥
ಪೀಡಾಅಷ್ಟಾದಶೈತಜ್ಜಾಸ್ತಾಶ್ಚರೋಗೇಷುಲಕ್ಷಿತಾಃ ॥

ವಮನ, ವಿರೇಚನ, ನಿರೂಹ, ಅನುವಾಸನ, ನಸ್ಯ ಇವುಗಳಿಗೆ ಪಂಚ ಕರ್ಮಗಳೆಂದು ಹೆಸರು. ಈ ಪಂಚಕರ್ಮಗಳಿಗೆ ಉಪಯುಕ್ತಗಳಾದ ಪದಾರ್ಥ

ಗಳ ಹೀನ, ಮಿಥ್ಯಾ, ಅತಿಯೋಗ ಅಂದರೆ ಹೆಚ್ಚುಕಡಮೆಯಾಗಿ ಉಪಯೋಗಿಸೋಣದರಿಂದ ಉಂಟಾಗುವ ರೋಗಗಳು ಹದಿನೈದು ವಿಧ. ಈ ರೋಗಗಳನ್ನು ಆಯಾಯ ರೋಗಗಳ ಪ್ರಕರಣದಲ್ಲಿಯೇ ಸೇರಿಸಿ ಹೇಳಿದ್ದಾಗಿದೆ. ಸ್ನೇಹ, ಸ್ವೇದ, ಧೂಮಪಾನ, ಗಂಡೂಷ, ಅಂಜನ, ತರ್ಪಣ, ಇವುಗಳನ್ನು ಕೂಡಾ ಉಪಯೋಗಿಸುವುದರಲ್ಲಿ ಹೆಚ್ಚು ಕಡಮೆಯಾಗುವುದರಿಂದ ಉತ್ಪನ್ನವಾಗುವ ರೋಗಗಳು ಹದಿನೆಂಟು ವಿಧ, ಅವುಗಳನ್ನು ಕೂಡ ಆಯಾ ರೋಗಪ್ರಕರಣದಲ್ಲಿ ಸೇರಿಸಿದ್ದಾಗಿದೆ

ಶೀತೋಪದ್ರವಏಕಸ್ಸ್ಯಾದೇಕಶ್ಚೋಷ್ಣೋದ್ಭವೋಮತಃ ॥ ೧೯೫ ॥
ಶಲ್ಯೋಪದ್ರವಏಕಶ್ಚ ಕ್ಷಾರಾಚ್ಚೈಕಸ್ಸ್ಮೃತಸ್ತಥಾ ॥

ಶೀತೋಪದ್ರವವೆಂದರೆ, ಅತಿ ಶೀತಕಾಲ, ಅತಿ ಶೀತದೇಶ, ಅತಿಶೀತಗಳಾದ ಔಷಧೋಪಚಾರಗಳು ಇವುಗಳಿಂದ ಹುಟ್ಟತಕ್ಕ ರೋಗ, ಹೀಗೆಯೇ ಅತ್ಯುಷ್ಣದಿಂದ ಹಿಂದೆಹೇಳಿದಂತೆಯೇ ಹುಟ್ಟತಕ್ಕರೋಗ. ಮತ್ತು ಶಲ್ಯೋಪದ್ರವ ಎಂದರೆ ಕೈಕಾಲು ಮೊದಲಾಗಿ ಶರೀರದ ಭಾಗಗಳಿಗೆ ಮೊಳೆ, ಮುಳ್ಳು, ಗೂಟ ಮೊದಲಾದವುಗಳು ಹೊಗುವುದರಿಂದ ಉಂಟಾಗುವ ರೋಗ ಒಂದು ವಿಧ, ಮತ್ತು ಕ್ಷಾರವೆಂದರೆ ಯವಕ್ಷಾರ, ಸರ್ಜಕ್ಷಾರ, ವಜ್ರಕ್ಷಾರ, ಸ್ನುಹಿಕ್ಷಾರ ಮೊದಲಾದ ಕ್ಷಾರಗಳನ್ನು ರೋಗನಿವೃತ್ತಿಗಾಗಿ ಪ್ರಯೋಗಿಸುವ ಕ್ರಮಕ್ಕೆ ಕ್ಷಾರಕರ್ಮವೆಂದು ಹೆಸರು, ಇದರಲ್ಲಿ ಉಪಯೋಗಿಸುವ ಕ್ಷಾರದ ಹೀನ ಮಿಥ್ಯಾಯೋಗಗಳಿಂದ ಉಂಟಾಗುವ ಉಪದ್ರವ ಒಂದು ವಿಧ, ಈ ರೀತಿಯಾಗಿ ಹಿಂದೆ ಹೇಳಿದ ರೋಗಗಳೆಲ್ಲಾ ಒಂದೊಂದು ವಿಧ.

ಸ್ಥಾವರಂಜಂಗಮಂಚೈವಕೃತ್ರಿಮಂಚತ್ರಿಧಾವಿಷಂ ॥ ೧೯೬ ॥
ತೇಷಾಂಚಕಾಲಕೂಟಾದ್ಯೈರ್ನವಧಾಸ್ಥಾವರಂವಿಷಂ ॥
ಜಂಗಮಂಬಹುಧಾಪ್ರೋಕ್ತಂತತ್ರಲೂತಾಭುಜಂಗಮಾಃ॥ ೧೯೭ ॥
ವೃಶ್ಚಿಕಾಮೂಷಿಕಾಃಕೀಟಾಃಪ್ರತ್ಯೇಕಂತೇಚತುರ್ವಿಧಾಃ ॥
ದಂಷ್ಟ್ರಾವಿಷರಿನಖವಿಷಂವಾಲಶೃಂಗಾಸ್ಥಿಭಿಸ್ತಥಾ ॥ ೧೯೮ ॥
ಮೂತ್ರಾತ್ಪುರೀಷಾಚ್ಚುಕ್ರಾಚ್ಚದೃಷ್ಟೇರ್ನಿಶ್ವಾಸತಸ್ತಥಾ ॥
ಲಾಲಾಯಾಸ್ಪರ್ಶತಸ್ತದ್ವತ್ತಥಾಶಂಕಾವಿಷಂಮತಂ ॥ ೧೯೯ ॥
ಕೃತ್ರಿಮಂದ್ವಿವಿಧಂಪ್ರೋಕ್ತಂಗರದೂಷೀವಿಭೇದತಃ ॥
ಸಪ್ತಧಾತುವಿಷಂಜ್ಞೇಯಂತಥಾಸಪ್ತೋಪಧಾತುಜಂ ॥ ೨೦೦ ॥
ತಥ್ಯೈವೋಪವಿಷೇಭ್ಯಶ್ಚ ಜಾತಂಸಪ್ತವಿಧಂಮತಂ ॥
ದುಷ್ಟನೀರವಿಷಂಚೈಕಂತಥೈಕಂ ದಿಗ್ಧಜಂವಿಷಂ ॥ ೨೦೧ ॥

**ತಕ್ಷಿಕ್ಕಚ್ಛುಭವಾಕಂಡೂರ್ದುಷ್ಟನೀರಭವಾತಥಾ ॥**
**ತಥಾಸೂರಣಕಂಡೂಶ್ಚ ಶೋಥೋಭಲ್ಲಾತಜಸ್ತಥಾ ॥ ೨೦೨ ॥**

ವಿಷವು ಮೂರು ವಿಧ—ಸ್ಥಾವರವಿಷ, ಜಂಗಮವಿಷ, ಕೃತ್ರಿಮವಿಷ ಎಂಬದಾಗಿ. ಸ್ಥಾವರವೆಂದರೆ ಭೂಮಿಯಲ್ಲಿ ಹುಟ್ಟಿತಕ್ಕ ಮೂಲಿಕೆಗಳ ಸಮ್ಬಂಧವಾದ ವಿಷಕ್ಕೆ ಹೆಸರು, ಇದು ಒಂಭತ್ತು ವಿಧ—(೧) ಕಾಲಕೂಟ, (೨) ವತ್ಸನಾಭ, (೩) ಶೃಂಗಿಕ, (೪) ಪ್ರದೀಪನ, (೫) ಹಾಲಾಹಲ, (೬) ಬ್ರಹ್ಮಪುತ್ರ, (೭) ಹಾರಿದ್ರ, (೮) ಶಕ್ತುಕ, (೯) ಸೌರಾಷ್ಟ್ರಿಕ. ಕೆಲವು ಮತಗಳಲ್ಲಿ ಸ್ಥಾವರವಿಷವು ಹದಿನೆಂಟು ವಿಧ, ಈ ಹದಿನೆಂಟರಲ್ಲಿ ಔಷಧೋಪಯೋಗಕ್ಕಾಗಿ ಸಕ್ತುಕ, ಮುಸ್ತಕ, ಶೃಂಗಿ, ವಾಲುಕ, ಸರ್ಷಪ, ವತ್ಸನಾಭ, ಶ್ವೇತಶೃಂಗಿ, ಇವುಗಳನ್ನು ಶೋಧನಾದಿಗಳನ್ನು ಮಾಡಿ ಉಪಯೋಗಿಸಬಹುದೆಂದೂ, ಕಾಲಕೂಟ, ಮೇಷಶೃಂಗಿ, ದರ್ದುರ, ಹಾಲಾಹಲ, ಕರ್ಕಟ, ಗಹ್ವರ, ಗ್ರಂಥಿಹರಿದ್ರ, ರಕ್ತಶೃಂಗಿ, ಕೇಶರ ಇವುಗಳನ್ನು ಯಾವ ರೀತಿಯಿಂದಲೂ ಔಷಧಕ್ಕೆ ಉಪಯೋಗಿಸಬಾರದೆಂದೂ ತಾತ್ಪರ್ಯ, ಜಂಗಮ ವಿಷವೆಂದರೆ ಪ್ರಾಣಿ ಸಂಬಂಧವಾದ ವಿಷ, ಇದು ಲೆಕ್ಕವಿಲ್ಲದಷ್ಟು ವಿಧವಾಗಿರುತ್ತದೆ, ಲೂತ ಎಂದರೆ ಜೇಡನ ಹುಳದಂತಹ ಒಂದು ಜಗೆಯ ಹುಳ, ಅಹಿ ಎಂದರೆ ವ್ಯವಹಾರ, ಭುಜಂಗಮಾಃ ಎಂದರೆ ಹಾವುಗಳು, ವೃಶ್ಚಿಕ ಎಂದರೆ ಚೇಳು, ಮೂಷಿಕ ಎಂದರೆ ಇಲಿ, ಕೀಟ ಎಂದರೆ ಕ್ರಿಮಿಗಳು, ಈ ವಿಷಕ್ರಿಮಿಗಳು ಪ್ರತ್ಯೇಕ ನಾಲ್ಕು ವಿಧವಾಗಿರುತ್ತವೆ. ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ, ಎಂಬದಾಗಿ. ಈ ಜಂಗಮವಿಷವು ಹಲ್ಲಿನಿಂದ ಉತ್ಪನ್ನವಾಗುವುದು, ಉಗುರಿನಿಂದ ಪಟ್ಟುವುದು, ಕೂದಲು, ಕೊಂಬು, ಎಲುಬು, ಮಲ, ಮೂತ್ರ, ಶುಕ್ರ, ನೋಡುವುದು, (ದೃಷ್ಟಿವಿಷ) ಉಸಿರುಬಿಡುವುದು. (ಶ್ವಾಸವಿಷ) ಜೊಲ್ಲು, ಮುಟ್ಟುವುದು, ಅನುಮಾನ (ಶಂಕಾವಿಷ) ಎಂಬದಾಗಿ ಇನ್ನೂ ಅವಾಂತರ ಭೇದಗಳುಳ್ಳದ್ದಾಗಿದೆ. ಕೃತ್ರಿಮವಿಷವು ಎರಡು ವಿಧವಾಗಿರುತ್ತದೆ, ಗರವೆಂಬದಾಗಿಯೂ ದೂಷೀವಿಷವೆಂಬದಾಗಿಯೂ ಇದರ ಭೇದಗಳು. ಗರವೆಂದರೆ ಸ್ತ್ರೀಯರು ತಮಗೆ ಇಷ್ಟವಾದ ಪುರುಷರನ್ನು ತಮ್ಮ ಇಷ್ಟಾನುಸಾರ ವರ್ತಿಸುವಂತೆ ಮಾಡಿಕೊಳ್ಳುವ ಉದ್ದೇಶದಿಂದಲಾಗಲಿ, ಅಥವಾ ಯಾರೇ ಆಗಲಿ ಯಾವದೇ ವಸ್ತುವನ್ನು ಇತರರನ್ನು ವಶಪಡಿಸಿಕೊಳ್ಳುವ ಉದ್ದೇಶ್ಯದಿಂದ ಆಹಾರಾದಿಗಳ ಜೊತೆಯಲ್ಲಿಯಾಗಲಿ ಬೇರೆ ಯಾವ ರೀತಿಯಾಗಿಯಾಗಲಿ ಶರೀರದೊಳಗೆ ಪ್ರಯೋಗಿಸುವುದು ಸಂಪ್ರದಾಯವಿಷ, ಆದರಿಂದ ಉದ್ದಿಷ್ಟಕಾರ್ಯ ನೆರವೇರುವುದುಂಟು, ಕೆಲವು ವೇಳೆ ಅದಕ್ಕೆ ಬದಲಾಗಿ ಪ್ರಯೋಗಮಾಡಿದ ವಸ್ತುವು ವಿಷಮಯವಾಗಿ ಪರಿಣಮಿಸಿ ದೇಹ ಮತ್ತು ಬುದ್ಧಿಯ ಶಕ್ತಿಗಳನ್ನು ಹಾಳುಮಾಡಿ ತನ್ನ ವಿಷಶಕ್ತಿಯನ್ನು ಪ್ರದರ್ಶನಮಾಡಿ ಕೆಡಕನ್ನುಂಟುಮಾಡುವುದುಂಟು. ಇದಕ್ಕೇನೇ ಗರವಿಷವೆಂದು ಹೆಸರು. ದೂಷೀವಿಷವೆಂದರೆ ನಮ್ಮ ನಿತ್ಯೋಪಯೋಗದ ಆಹಾರ ಪದಾರ್ಥಗಳ ಉಪಯೋಗಮಾಡುವ ವಿಧಾನ ಅಂದರೆ ಪರಸ್ಪರ ಸಂ

ಯೋಜನಕಾಲ ಮತ್ತು ಭಕ್ಷಣಕಾಲಗಳಲ್ಲಿ ಪರಸ್ಪರ ವಿರುದ್ಧಗಳಾಗಿ ವಿಷದಿಂದ ಸಂಭವಿಸಬಹುದಾದ ಮರಣವನ್ನುಂಟುಮಾಡತಕ್ಕಷ್ಟು ಕಾರ್ಯ ಮಾಡುತ್ತವೆ. ಇಂತಹ ವಿಷಕ್ಕೇನೇ ದೂಷೀವಿಷವೆಂದು ಹೆಸರು. ಇದಲ್ಲದೆ ಸಪ್ತಧಾತುಗಳೆಂದರೆ ಔಷಧಗಳಿಗಾಗಿ ಸುವರ್ಣರಜತ ಮೊದಲಾದ ಧಾತುಗಳನ್ನು ಉಪಯೋಗಪಡಿಸುವ ಸಂದರ್ಭದಲ್ಲಿ ಮಾಡತಕ್ಕ ಶುದ್ಧಿಕ್ರಮವು ಸರಿಯಿಲ್ಲದೆ ಹೋಗೋಣದರಿಂದ ಔಷಧವು ವಿಷವಾಗಿ ಪರಿಣಮಿಸುವುದುಂಟು, ಅಥವಾ ಬೇರೊಂದು ವಿಷ ಪದಾರ್ಥವೇ ಉತ್ಪನ್ನವಾಗುವುದೂ ಉಂಟು, ಹೀಗೇನೇ ಉಪಧಾತುಗಳೆಂದರೆ ತಾಳಕ ಮೊದಲಾದವುಗಳನ್ನು ಶೋಧನ ಮಾಡುವುದರಿಂದ ಸರಿ ತಪ್ಪಿ ಸಂಭವಿಸಿ ವಿಷಗಳುತ್ಪನ್ನವಾಗಬಹುದು, ಇದಕ್ಕೆ ಉಪಧಾತುಜನ್ಯ ವಿಷವೆಂದು ಹೆಸರು. ಸ್ನಾನಮಾಡುವ ಮತ್ತು ಪಾನಮಾಡುವ ನೀರು ಕೆಟ್ಟುಹೋಗೋಣದರಿಂದ ಅವುಗಳನ್ನು ಉಪಯೋಗಿಸಿ ದೇಹದಲ್ಲಿ ವಿಷವಾಗಿ ಪರಿಣಮಿಸಿದರೆ ಇದಕ್ಕೆ ದುಷ್ಟನೀರ ವಿಷವೆಂಬ ಹೆಸರು. ಯುದ್ಧಕಾಲದಲ್ಲಿ ಉಪಯೋಗಿಸತಕ್ಕ ಕತ್ತಿ, ಅಂಬು ಮೊದಲಾದ ಛೇದನ ಭೇದನ ಸಾಧನಗಳಿಗೆ ಅವುಗಳ ಅಲುಗಿಗೆ ವಿಷವನ್ನು ಬಳಿದು ಉಪಯೋಗಿಸುತ್ತಾರೆ, ಇದರಿಂದ ಆಗತಕ್ಕ ಗಾಯಗಳು ಕೊಂಚವಾದರೂ ಆ ಗಾಯಗಳ ದ್ವಾರಾ ಆಯುಧಗಳಲ್ಲಿ ಲೇಪಮಾಡಿರುವ ವಿಷವು ರಕ್ತಗತವಾಗಿ ಮರಣವನ್ನುಂಟುಮಾಡಿದರೆ ಇದಕ್ಕೆ ದಿಗ್ಧವಿಷವೆಂಬ ಹೆಸರು. ನಸುಗುನ್ನಿ, ತುರಚಿ, ಗೇರು, ಸೂರಣಗೆಡ್ಡೆ, ಇವುಗಳಲ್ಲೆಲ್ಲಾ ಇರತಕ್ಕ, ಮುಟ್ಟಿದರೆ ತುರಿಕೆ ಬರತಕ್ಕ ದುರ್ಗುಣವೇ ಸ್ಪರ್ಶವಿಷವೆನ್ನಿಸಿಕೊಳ್ಳುತ್ತದೆ. ಈ ರೀತಿ ವಿಷಗಳು ಮತ್ತು ಅದರಿಂದ ಹುಟ್ಟಬಹುದಾದ ರೋಗಗಳು ಸಹ ನಾನಾ ವಿಧವಾಗಿವೆ.

ಮದಶ್ಚ ತುರ್ವಿಧಶ್ಚಾನ್ಯೈಃ ಪೂಗಭಂಗಾಕ್ಷಕೊದ್ರವೈಃ ॥
ಚತುರ್ವಿಧೊನ್ಯೊದ್ರವ್ಯಾಣಾಂ ಫಲತ್ವಙ್ಮೂಲಪತ್ರಜಃ॥ ೨೦೩ ॥

ಕೆಲವು ಪದಾರ್ಥಗಳನ್ನು ದೇಹದೊಳಕ್ಕೆ ಯಾವ ವಿಧದಿಂದ ಪ್ರಯೋಗಿಸಿದರೂ ಒಂದು ವಿಧವಾದ ಬುದ್ಧಿಪಲ್ಲಟವುಂಟಾಗುತ್ತದೆ. ಈ ಅವಸ್ಥೆಗೆ ಮದವೆಂದು ಹೆಸರು. ಆ ಪದಾರ್ಥಗಳ ಪೈಕಿ ಮುಖ್ಯವಾದ ಕೆಲವನ್ನು ಹೇಳಬಹುದು. ಅಡಿಕೆ—ಇದನ್ನು ಉಪಯೋಗಿಸಿದರೆ ಒಂದು ವಿಧವಾದ ಮದ ಬರುತ್ತದೆ. ಭಂಗಿ—ಇದು ಅಡಿಕೆಗಿಂತ ಕೊಂಚ ಹೆಚ್ಚಿಗೆ ಮದಕರ. ಅಕ್ಷ ಎಂದರೆ ತಾರೇಕಾಯಿನ ಪೊಪ್ಪನ್ನು ತಿನ್ನುವುದರಿಂದ ಬರುವ ಮದ. ಕೊದ್ರವವೆಂದರೆ ಧಾನ್ಯಗಳಲ್ಲಿ ಸಹ ತಿಂದರೆ ಮದ ಬರತಕ್ಕ ಕೆಲವು ಧಾನ್ಯಗಳಿವೆ, ಅವುಗಳಿಗೆ ಹೆಸರು. ಹೀಗೆಯೇ ಕೆಲಕೆಲವು ಮೂಲಿಕೆಗಳ ಕೆಲಕೆಲವು ಭಾಗಗಳು ಸಹ, ಅಂದರೆ—ಫಲ, ತ್ವಕ್ಕು, ಬೇರು, ಎಲೆ, ಇವುಗಳು ವಿಷಕಾರ್ಯಕರಗಳಾಗುವುದೂ ಉಂಟು. ಆಕಲಕರೆ ಮೊದಲಾದವುಗಳು ಇದಕ್ಕೆ ಉದಾಹರಣೆ.

**ಇತಿಪ್ರಸಿದ್ಧಾಗಣಿತಾಯೇಕಿಲೋಪದ್ರವಾಭುವಿ ||**
**ಅಸಂಖ್ಯಾಶ್ಚಾಪರೇಧಾತುಮೂಲಜೀವಾದಿಸಂಭವಾಃ || ೨೦೪ ||**

ಈ ಅಧ್ಯಾಯದಲ್ಲಿ ಲೋಕದಲ್ಲಿ ಪ್ರಸಿದ್ಧವಾಗಿರುವ ರೋಗಗಳನ್ನು ಮಾತ್ರ ಹೇಳಿದ್ದಾಗಿದೆ. ಇವುಗಳಲ್ಲದೆ ಧಾತುಗಳು ಮೂಲಗಳು ಅಂದರೆ ಫಲಮೂಲ ಪತ್ರಾದಿಗಳು, ಪ್ರಾಣಿಗಳು, ಇವುಗಳಿಂದ ಹುಟ್ಟತಕ್ಕ ಉಪದ್ರವಗಳು ಅಂದರೆ ರೋಗಗಳು ಇನ್ನೂ ಅಸಂಖ್ಯವಾಗಿವೆ.

ಇಲ್ಲಿಗೆ ಪಂಡಿತ. ಗೋಪಾಲಾಚಾರ್ಯ ಶಿಷ್ಯ ಪಟ್ನಗೆರೆ. ಸೂರ್ಯನಾರಾಯಣ ಶಾಸ್ತ್ರಿಯಿಂದ ಕರ್ನಾಟಕದಲ್ಲಿ ಅನುವಾದ ಮಾಡಲ್ಪಟ್ಟ ಶಾರ್ಙ್ಗಧರ ಸಂಹಿತ ಯಲ್ಲಿ ಪ್ರಥಮ ಖಂಡ ಸಂಪೂರ್ಣ.



# ಶಾರ್ಙ್ಗಧರಸಂಹಿತಾ.

## ಮಧ್ಯಮ ಖಂಡ.

### ಪ್ರಥಮಾಧ್ಯಾಯ.



**ಅಥಾತಸ್ಸ್ವರಸಃಕಲ್ಕಃಕ್ವಾಥಶ್ಚಹಿಮಫಾಂಟಕೌ ॥**
**ಜ್ಞೇಯಾಃಕಷಾಯಾಃಪಂಚೈತೇಲಘವಸ್ಸ್ಯುರ್ಯಥೋತ್ತರಂ ॥ ೧ ॥**

ಮೊದಲಿನ ಖಂಡದಲ್ಲಿ ವೈದ್ಯಶಾಸ್ತ್ರೋಪಯುಕ್ತ ಸಾಮಾನ್ಯ ಸೂಚನೆಗಳನ್ನೂ ರೋಗಗಳನ್ನೂ ನಿರೂಪಿಸಿ ರೋಗಜಯಕ್ಕೆ ಉಪಯುಕ್ತಗಳಾದ ಔಷಧಗಳನ್ನು ಹೇಳುವುದಕ್ಕೆ ಮೊದಲುಮಾಡುತ್ತಾನೆ. ಮೊದಲನೆಯ ಖಂಡದ ಮೊದಲನೆಯ ಅಧ್ಯಾಯದಲ್ಲಿ ಕೊಟ್ಟ ಸೂಚನೆಯಂತೆ ಈ ಎರಡನೆಯ ಖಂಡದ ಮೊದಲನೆಯ ಅಧ್ಯಾಯದಲ್ಲಿ ಮೊದಲು ಸ್ವರಸ (ಹಸಿಯ ಮೂಲಿಕೆಯನ್ನು ಕುಟ್ಟಿ ತೆಗೆಯುವ ರಸ) ಕಲ್ಪನಾಕ್ರಮವನ್ನು ವಿವರಿಸುತ್ತಾನೆ ಮೊದಲನೆಯ ಶ್ಲೋಕದ ತಾತ್ಪರ್ಯವೇನಂದರೆ—ಸ್ವರಸ (ಹಸಿಯ ಮೂಲಿಕೆಯಿಂದ ರಸ ತೆಗೆಯುವುದು) ಕಲ್ಕ (ಒಣಮೂಲಿಕೆಯನ್ನು ನೀರಿನಲ್ಲಿ ನೆನೆಸಿ ಕಲ್ಲಿನಿಂದರೆಯುವುದು) ಕ್ವಾಥ (ನೀರಿನಲ್ಲಿ ಮೂಲಿಕೆಯನ್ನು ಹಾಕಿ ಕುದಿಸುವುದು) ಹಿಮ (ತಣ್ಣೀರಿನಲ್ಲಿ ಮೂಲಿಕೆಯನ್ನು ಕೆಲವು ಸಮಯ ಅಥವಾ ಇಡೀ ದಿನ ಕುಟ್ಟಿ ನೆನೆಸಿ ಔಷಧವನ್ನು ತಯಾರಿಸುವುದು) ಫಾಂಟ (ಔಷಧ ದ್ರವ್ಯವನ್ನು ಚನ್ನಾಗಿ ಜಜ್ಜಿ ಚೂರ್ಣಮಾಡಿ ನೀರಿನಲ್ಲಿ ಹಾಕಿ ತಯಾರಿಸಿದ ಔಷಧ) ಈ ರೀತಿಯಾಗಿ ಕಷಾಯಗಳು ಐದು ವಿಧ, ಹೇಳಿರುವ ಕ್ರಮದಲ್ಲಿ ಮೊದಲಿಂದ ಉತ್ತರೋತ್ತರ ಒಂದಕ್ಕಿಂತ ಅವರ ಮುಂದಿನದು ಲಘು ಅಂದರೆ ಜಾಗ್ರತೆ ಜೀರ್ಣವಾಗತಕ್ಕದ್ದು. ಸ್ವರಸಕ್ಕಿಂತ ಕಲ್ಕ ಲಘು, ಕಲ್ಕಕ್ಕಿಂತ ಕ್ವಾಥ ಲಘು, ಈ ರೀತಿಯಾಗಿ.

**ಆಹತಾತ್ತತ್‌ಕ್ಷಣಾಕೃಷ್ಟಾದ್ದ್ರವ್ಯಾತ್‌ಕ್ಷುಣ್ಣಾತ್‌ಸಮುದ್ಧರೇತ್ ॥**
**ವಸ್ತ್ರನಿಷ್ಪೀಡಿತೋಯಸ್ಸರಸಸ್ಸ್ವರಃಉಚ್ಯತೇ ॥ ೨ ॥**
**ಕುಡವಂಚೂರ್ಣಿತಂದ್ರವ್ಯಂಕ್ಷಿಪ್ತಂಚದ್ವಿಗುಣೇಜಲೇ ॥**
**ಅಹೋರಾತ್ರಂಸ್ಥಿತಂತಸ್ಮಾದ್ಭವೇದ್ವಾರಸಉತ್ತಮಃ ॥ ೩ ॥**

**ಆದಾಯಶುಷ್ಕದ್ರವ್ಯಂವಾಸ್ವರಸಾನಾಮಸಂಭವೆ ॥**
**ಜಲೇಷ್ಟಗುಣಿತೆಸಾಧ್ಯಂಪಾದಶಿಷ್ಟಂಚಗೃಹ್ಯತೆ ॥ ೪ ॥**
**ಸ್ವರಸಸ್ಯಗುರುತ್ವಾಚ್ಚಪಲಮರ್ಧಂಪ್ರಯೋಜಯೇತ್ ॥**
**ನಿಶೋಷಿತಂಚಾಗ್ನಿಸಿದ್ಧಂಪಲಮಾತ್ರಂರಸಂಪಿಬೇತ್ ॥ ೫ ॥**

ಸ್ವರಸವೆಂದರೆ ನಿರ್ದಿಷ್ಟವಾದ ಮೂಲಿಕೆಯನ್ನು ಆಗತಾನೇ ತಂದು ಬಾಡಿ ಹೋಗುವ ಮುಂಚಿತವಾಗಿ ಚನ್ನಾಗಿ ಕುಟ್ಟಿ ಬಟ್ಟೆಯಲ್ಲಿ ಹಾಕಿ ಹಿಂಡಿತೆಗೆಯುವ ರಸಕ್ಕೆ ಹೆಸರು. ಈ ರೀತಿ ಹಸಿಯಾದ ಮೂಲಿಕೆಯನ್ನು ತಂದು ಸ್ವರಸವನ್ನು ತೆಗೆಯುವುದು ಸಾಧ್ಯವಿಲ್ಲದಿದ್ದಲ್ಲಿ ಕುಡವ ಪರಿಮಾಣ ಅಂದರೆ ಹದಿನಾರು ತೊಲ ದಷ್ಟು ಒಣಗಿದ ಮೂಲಿಕೆಯನ್ನು ಕುಟ್ಟಿ ಪುಡಿಮಾಡಿ ದ್ವಿಗುಣ ನೀರಿನಲ್ಲಿ ಅಂದರೆ ಮೂವತ್ತೆರಡು ತೊಲ ನೀರಿನಲ್ಲಿ ಒಂದು ದಿವಸ ಪೂರ್ಣ ನೆನೆಯಲಿಟ್ಟು ಮಾರ ನೆಯ ದಿವಸ ಬಟ್ಟೆಯಲ್ಲಿ ಹಿಂಡಿಕೊಂಡು ತೆಗೆಯುವ ರಸವೂ ಸ್ವರಸವೆಂದೇ ಹೇಳಿಸಿಕೊಳ್ಳುತ್ತದೆ. ತಾತ್ಪರ್ಯ ಮೂಲಿಕೆಯನ್ನು ಕುಟ್ಟಿ ಪುಡಿಮಾಡಿ ದ್ವಿಗುಣ ನೀರಿನಲ್ಲಿ ಒಂದು ದಿವಸ ಪೂರ್ಣ ನೆನೆಯಲಿಟ್ಟು ಆದರಿಂದ ಮಾರನೆಯ ದಿವಸ ತೆಗದುಕೊಂಡ ರಸವೂ ಸ್ವರಸಕ್ಕೆ ಸಮನಾಗುತ್ತದೆಂದು ಮುಖ್ಯ ತಾತ್ಪರ್ಯ ಈ ಹಿಂದೆ ಹೇಳಿದ ಎರಡು ವಿಧದಲ್ಲಿ ಯಾವುದೂ ಸಾಧ್ಯವಿಲ್ಲದಿದ್ದಲ್ಲಿ ಒಣಗಿದ ಮೂ ಲಿಕೆಯನ್ನು ತಂದು ಅದಕ್ಕೆ ಅಷ್ಟಗುಣ (ಎಂಟರಷ್ಟು) ನೀರನ್ನು ಸೇರಿಸಿ ಕಾಲು ಭಾಗ ಉಳಿಯುವವರಿಗೂ ಕಾಯಿಸಿ ನಂತರ ಇಳಿಸಿಕೊಂಡು ಉಪಯೋಗಿಸಿ ದಲ್ಲಿ ಇದೂ ಸ್ವರಸದಷ್ಟೇ ಗುಣಕರವಾದ ಕಷಾಯವಾಗುತ್ತದೆ ಈ ಸ್ವರಸವನ್ನು ರೋಗಿಗೆ ಕೊಡಬೇಕಾದಾಗ್ಯೆ ಮೂಲಿಕೆಯ ಶಕ್ತಿಯು ಹೆಚ್ಚಿಗೆ ಇರುವುದರಿಂದ ಅರ್ಧಪಲ (ಎರಡು ಅಥವಾ ಒಂದೂವರೆ ತೊಲ) ದಷ್ಟು ಮಾತ್ರ ಪ್ರಯೋಗಿಸ ಬೇಕು. ಆದರೆ ಹಸಿಯ ಮೂಲಿಕೆಯ ರಸ ಸಿಕ್ಕದೆ ಅದಕ್ಕೆ ಪ್ರತಿಯಾಗಿ ಹೇಳಿ ರುವ ಒಣಮೂಲಿಕೆಗಳಿಂದ ತಯಾರಿಸಿದ ಸ್ವರಸದ ಪ್ರತಿನಿಧಿಯನ್ನು ಮಾತ್ರ ಒಂದು ಪಲವೇ ಉಪಯೋಗಿಸಬೇಕು.

**ಮಧುಶ್ವೇತಾಗುಡಂಕ್ಷಾರಾಂಜೀರಕಂಲವಣಂತಥಾ ॥**
**ಘೃತಂತೈಲಂಚಚೂರ್ಣಾದೀನ್ಕೋಲಮಾತ್ರಾನ್ರಸೇಕ್ಷಿಪೇತ್ ॥ ೬ ॥**

ಸ್ವರಸವನ್ನು ರೋಗಿಗೆ ಪಾನಮಾಡಿಸತಕ್ಕ ಸಂದರ್ಭದಲ್ಲಿ ಅದರೊಂದಿಗೆ ಬೇರೆ ಏನನ್ನಾದರೂ ಕೂಡಿಸಬೇಕಾಗಿ ಯೋಗಗಳಲ್ಲಿ ಹೇಳಿದ್ದರೆ ಅದರ ಪರಿಮಾ ಣವನ್ನು ಕೂಡ ಅವರೇ ಹೇಳಿದ್ದಲ್ಲಿ ಸರಿ, ಒಂದು ವೇಳೆ ಹೇಳದಿದ್ದಲ್ಲಿ ಎಷ್ಟು ಸೇರಿಸಬಹುದೆಂಬ ಅನುಮಾನ ಬಂದರೆ ಅದರ ನಿವಾರಣೆಗಾಗಿ ಸಾಮಾನ್ಯವಾಗಿ ಒಂದು ಗುರ್ತನ್ನು ಗೊತ್ತು ಮಾಡುತ್ತಾನೆ. ಸ್ವರಸದಲ್ಲಿ ಜೇನು, ಬಿಳೀಕಲ್ಲು, ಸಕ್ಕರೆ, ಬೆಲ್ಲ, ಕ್ಷಾರಗಳು, ಜೀರಿಗೆಯಚೂರ್ಣ, ಉಪ್ಪು, ಘೃತ, ತೈಲ, ಚೂರ್ಣ

ಗಳು ಇವುಗಳನ್ನು ಯಾವುದನ್ನು ಸೇರಿಸಬೇಕಾದರೂ ಒಂದು ಕೋಲ ಪರಿಮಾಣ (ಒಂದು ತೊಲ) ಸೇರಿಸಬೇಕು.

**ಅಮೃತಾಯಾರಸಃಕ್ಷೌದ್ರಯುಕ್ತಸ್ಸರ್ವಪ್ರಮೇಹಜಿತ್ ॥**
**ಹರಿದ್ರಾಚೂರ್ಣಯುಕ್ತೋವಾರಸೋಧಾತ್ರ್ಯಾಸ್ಸಮಾಕ್ಷಿಕಃ ॥೭॥**

ರೋಗನಾಶಕಗಳಾದ ಕೆಲವು ಸ್ವರಸಗಳ ಪ್ರಯೋಗವನ್ನು ಹೇಳುತ್ತಾನೆ. ಹಸಿಯ ಅಮೃತಬಳ್ಳಿಯನ್ನು ತಂದು ಕುಟ್ಟಿ ಹಿಂಡಿದರಸ ಎರಡು ತೊಲಕ್ಕೆ ಒಂದು ತೊಲ ಜೇನುತುಪ್ಪವನ್ನು ಸೇರಿಸಿ ಕೊಡುತ್ತ ಬಂದರೆ ಸಮಸ್ತ ವಿಧವಾದ ಪ್ರಮೇಹವೂ ನಾಶವಾಗಿ ಹೋಗುತ್ತದೆ. ನೆಲ್ಲಿಕಾಯನ್ನು ತಂದು ಕುಟ್ಟಿ ಎರಡು ತೊಲರಸವನ್ನು ತೆಗೆದು ಅದಕ್ಕೆ ಒಂದು ತೊಲದಷ್ಟು ಅರಿಸಿನದ ಪುಡಿಯನ್ನು ಸೇರಿಸಿಕೊಟ್ಟರೂ ಸಕಲ ವಿಧವಾದ ಪ್ರಮೇಹಗಳೂ ಗುಣವಾಗುತ್ತವೆ.

**ವಾಸಕಸ್ವರಸಃಪೇಯೋಮಧುನಾರಕ್ತಪಿತ್ತಜಿತ್ ॥**
**ಜ್ವರಕಾಸಕ್ಷಯಹರಃಕಾಮಲಾಶ್ಲೇಷ್ಮಪಿತ್ತಹಾ ॥ ೮ ॥**
**ತ್ರಿಫಲಾಯಾರಸಃಕ್ಷೌದ್ರಯುಕ್ತೋದಾರ್ವೀರಸೋಥವಾ ॥**
**ನಿಂಬಸ್ಯವಾಗುಡೂಚ್ಯಾವಾಪೀತೋಜಯತಿಕಾಮಲಾಂ ॥ ೯ ॥**

ರಕ್ತಪಿತ್ತ ಮೊದಲಾದ ರೋಗಗಳಿಗೆ ಉಪಯುಕ್ತವಾದ ಸ್ವರಸವನ್ನು ಹೇಳುತ್ತಾನೆ—ಆಡುಸೋಗೇ ಸೊಪ್ಪಿನ ರಸ ಎರಡು ತೊಲ ತೆಗೆದು ಒಂದು ತೊಲ ಜೇನು ತುಪ್ಪ ಸೇರಿಸಿ ಕುಡಿಸಿದಲ್ಲಿ ರಕ್ತಪಿತ್ತರೋಗವು ಶಾಂತವಾಗುವುದಲ್ಲದೆ ಜ್ವರ, ಕೆಮ್ಮು, ಕ್ಷಯರೋಗ, ಕಾಮಲಾರೋಗ, ಶ್ಲೇಷ್ಮರೋಗ, ಪಿತ್ತ ರೋಗಗಳು ಇವುಗಳನ್ನು ಸಹ ಗುಣಪಡಿಸುತ್ತವೆ ತ್ರಿಫಲಾರಸವಾಗಲಿ, ಮರ ದರಿಸಿನದ ರಸವಾಗಲ, ಬೇವಿನ ರಸವಾಗಲಿ, ಅಮೃತಬಳ್ಳಿಯ ರಸವಾಗಲಿ ಎರಡು ತೊಲದಷ್ಟು ತೆಗದು ಒಂದು ತೊಲ ಜೇನುತುಪ್ಪ ಸೇರಿಸಿ ಕುಡಿಯುತ್ತ ಒಂದಲ್ಲಿ ಕಾಮಲಾರೋಗವು ಪೂರ್ಣವಾಗಿ ಗುಣಹೊಂದುತ್ತದೆ.

**ಪೀತೋಮರಿಚಚೂರ್ಣೇನತುಲಸೀಪತ್ರಜೋರಸಃ ॥**
**ದ್ರೋಣಪುಷ್ಪೀರಸೋವಾಪಿನಿಹಂತಿವಿಷಮಜ್ವರಾನ್ ॥ ೧೦ ॥**

ವಿಷಮಜ್ವರ ನಿವರ್ತಕವಾದ ಸ್ವರಸವನ್ನು ಹೇಳುತ್ತಾನೆ—ತುಲಸಿಯ ಸೊಪ್ಪಿನ ರಸ ಎರಡು ತುಲವಾಗಲಿ, ತುಂಬೆಸೊಪ್ಪಿನ ರಸ ಎರಡು ತುಲವಾಗಲಿ ಇದರೊಡನೆ ಒಂದು ತೊಲ ಮೆಣಸಿನಕಾಳಿನ ಚೂರ್ಣವನ್ನು ಸೇರಿಸಿ ಕುಡಿಸಿದಲ್ಲಿ ವಿಷಮಜ್ವರ ಕೂಡ ಶಮನವಾಗುತ್ತದೆ.

**ಜಂಬ್ವಾಮ್ರಾಮಲಕೀನಾಂಚಪಲ್ಲವೋತ್ಥೋರಸೋಜಯೇತ್ ॥**
**ಮಧ್ವಾಜ್ಯಕ್ಷೀರಸಂಯುಕ್ತೋರಕ್ತಾತೀಸಾರಮುಲ್ಬಣಂ ॥೧೧॥**

ರಕ್ತಾತಿಸಾರನಿವರ್ತಕವಾದ ಸ್ವರಸವನ್ನು ಹೇಳುತ್ತಾನೆ. ನೇರಿಲಚಿಗುರು, ಮಾವಿನಚಿಗುರು, ನೆಲ್ಲಿಯಚಿಗುರು, ಇವುಗಳ (ಎರಡು ತೊಲ) ಸ್ವರಸದ ಜೊತೆಗೆ ಒಂದು ತೊಲ ಜೇನು, ತುಪ್ಪ, ಹಾಲು, ಇವುಗಳನ್ನು ಸೇರಿಸಿ ಕುಡಿಸಿದಲ್ಲಿ ರಕ್ತಾತಿಸಾರವು ಅತ್ಯುಲ್ಬಣಾವಸ್ಥೆಯಲ್ಲಿದ್ದರೂ ಕ್ರಮೇಣ ಕಡಮೆಯಾಗುತ್ತದೆ.

**ಸ್ಥೂಲಬಬ್ಬೂಲಿಕಾಪತ್ರರಸಃಪಾನಾದ್ವ್ಯಪೋಹತಿ ॥**
**ಸರ್ವಾತಿಸಾರಾನ್ಸ್ಯೋನಾಕಕುಟಜತ್ವಗ್ರಸೋಥವಾ ॥ ೧೨ ॥**

ಸ್ಥೂಲಬಬ್ಬೂಲಿಕಾ ಎಂದರೆ ಜಾಲಿಯಚಿಗರಿನ ರಸವನ್ನಾಗಲಿ, ಹೆಮ್ಮರದ ಚಕ್ಕೆಯ ರಸವನ್ನಾಗಲಿ, ಕೊಡಸದ ತೊಪ್ಪೆಯ ರಸವನ್ನಾಗಲಿ, ಎರಡು ತೊಲ ಪಾನಮಾಡಿದಲ್ಲಿ ಸಮಸ್ತ ವಿಧವಾದ ಅತಿಸಾರವೂ ಶಮನವಾಗುತ್ತದೆ.

**ಆರ್ದ್ರಕಸ್ವರಸಃಕ್ಷೌದ್ರಯುಕ್ತೋವೃಷಣವಾತನುತ್ ॥**
**ಶ್ವಾಸಕಾಸಾರುಚೀರ್ಹಂತಿಪ್ರತಿಶ್ಯಾಯಂವ್ಯಪೋಹತಿ ॥ ೧೩ ॥**

ವಾತರೋಗ ನಾಶಕವಾದ ಸ್ವರಸವನ್ನು ಹೇಳುತ್ತಾನೆ—ಹಸಿಶುಂಠಿಯ ರಸ ಎರಡು ತೊಲಕ್ಕೆ ಒಂದು ತೊಲ ಜೇನುತುಪ್ಪ ಸೇರಿಸಿ ಕುಡಿದರೆ ವೃಷಣವಾತವೆಂದರೆ ತರಡು ಬಾತುಕೊಳ್ಳುವುದು, ಉಬ್ಬಸ, ಕೆಮ್ಮು, ಅರೋಚಕ. ನೆಗಡಿ, ಇವುಗಳನ್ನು ಒಡನೆಯೇ ಗುಣಪಡಿಸುತ್ತದೆ.

**ಬೀಜಪೂರರಸಃಪಾನಾನ್ಮಧುಕ್ಷಾರಯುತೋಜಯೇತ್ ॥**
**ಪಾರ್ಶ್ವಹೃದ್ಬಸ್ತಿಶೂಲಾನಿಕೋಷ್ಠವಾಯುಂಚದಾರುಣಂ ॥ ೧೪ ॥**

ಮಾದಳದ ಹಣ್ಣಿನ (ಎರಡು ತೊಲ) ರಸದ ಜೊತೆಗೆ ಒಂದು ತೊಲ ಜೇನು, ಒಂದು ತೊಲ ಯವಕ್ಷಾರ ಇವುಗಳನ್ನು ಸೇರಿಸಿ ಕುಡಿಯುವುದರಿಂದ ಪಾರ್ಶ್ವಶೂಲೆ, ಹೃದಯಶೂಲೆ, ವಸ್ತಿಶೂಲವೆಂದರೆ ಮೂತ್ರಾಶಯಶೂಲೆ, ಭಯಂಕರವಾದ ಕೋಷ್ಠವಾಯು (ಉದರವಾಯು) ಇವುಗಳೆಲ್ಲಾ ಗುಣವಾಗುತ್ತವೆ.

**ಶತಾವರ್ಯಾಶ್ಚಮಧುನಾಪಿತ್ತಶೂಲಹರೋರಸಃ ॥**
**ನಿಶಾಚೂರ್ಣಯುತಃಕನ್ಯಾರಸಃಪ್ಲೀಹಾಪಚೀಹರಃ ॥ ೧೫ ॥**

ಆಷಾಢೀಬೇರಿನ ಸ್ವರಸ ಎರಡು ತೊಲದ ಜೊತೆಯಲ್ಲಿ ಒಂದು ತೊಲ ಜೇನುತುಪ್ಪ ಸೇರಿಸಿ ತೆಗದುಕೊಂಡರೆ ಪಿತ್ತಜನ್ಯವಾದ ಉದರಶೂಲ ಗುಣವಾಗುತ್ತದೆ. ಲೋಳಿಸರದ ಬೇರಿನ ರಸ ಎರಡು ತೊಲದ ಜೊತೆಗೆ ಒಂದು ತೊಲ ಅರಿಸಿನದ ಪುಡಿಯನ್ನು ನೇರಿಸಿ ಕುಡಿದರೆ ಪ್ಲೀಹಾಭಿವೃದ್ಧಿ, ಅಪಚಿ ಎಂದರೆ ಅದೊಂದು ವಿಧವಾದ ಗಂಡಮಾಲೆ ಈ ಎರಡನ್ನೂ ಗುಣಪಡಿಸುತ್ತದೆ.

ಅಲಂಬುಷಾಯಾಃಸ್ವರಸೋಪೀತೊದ್ವಿಪಲಮಾತ್ರಯಾ ।।
ಅಪಚೀಗಂಡಮಾಲಾನಾಂಕಾಮಲಾಯಾಶ್ಚನಾಶನಃ ।। ೧೬ ।।

ಅಲಂಬುಷಾ ಎಂದರೆ ಗೊಂಡೇ ಗಿಡ ಅನಂತನ ಗೊಂಡೇ ಎಂಬದಾಗಿಯೂ ವ್ಯವಹಾರವಿದೆ, ಇದರ ರಸ ಎರಡುಪಲ ಮಾತ್ರ ಪಾನಮಾಡಿದಲ್ಲಿ ಅಪಚಿ ಎಂಬ ಗಂಡಮಾಲೆಯ ಹಳೆಯಹುಣ್ಣು, ಗಂಡಮಾಲೆ, ಕಾಮಿಲಾ ರೋಗ ಇವುಗಳನ್ನು ನಾಶಮಾಡುತ್ತದೆ.

ರಸೋಮುಂಡ್ಯಾಸ್ಸಕೊಷ್ಣೋವಾಮರಿಚೈಕೀವಧೂಲಿತಃ ।।
ಜಯೇತ್ಸಪ್ತದಿನಾಭ್ಯಾಸಾತ್ಸೂರ್ಯಾವರ್ತಾರ್ಧಭೇದಕೌ ।। ೧೭ ।।

ಮುಂಡಿ ಎಂದರೆ ಗದ್ದೆಗಳಲ್ಲಿ ಹುಟ್ಟುವ ಕೆಂಪಾದ ಚಂಡುಳ್ಳ ಒಂದು ವಿಧವಾದ ಗಿಡ, ಗೊಂಡೇ ಗಿಡವೆಂದೂ ಅನಂತನ ಗೊಂಡೆ ಎಂದೂ ಇದಕ್ಕೆ ವ್ಯವಹಾರಗಳಿವೆ. ಇದರ ಎರಡುತೊಲ ಬಿಸಿಸ್ವರಸಕ್ಕೆ ಒಂದು ತೊಲ ಮೆಣಸಿನಕಾಳಿನ ಚೂರ್ಣವನ್ನು ನೇರಿಸಿ ಏಳು ದಿವಸ ಸಾಧನೆಮಾಡುತ್ತ ಬಂದರೆ ಸೂರ್ಯಾವರ್ತ, ಅರ್ಧಾವಭೇದಕವೆಂಬ ಎರಡು ವಿಧವಾದ ಶಿರೋವಾತ (ಅರತಲೆನೋವು)ಗಳೂ ಗುಣವಾಗುತ್ತವೆ.

ಬ್ರಾಹ್ಮೀಕೂಷ್ಮಾಂಡಷಡ್ಗ್ರಂಥಾಶಂಖಿನೀಸ್ವರಸಾಃಪೃಥಕ್ ।।
ಮಧುಕುಷ್ಠಯುತಾಃಪೀತಾಸ್ಸರ್ವೋನ್ಮಾದಾಪಹಾರಿಣಃ ।। ೧೮ ।।

ಒಂದೆಲಗನ ಸೊಪ್ಪು, ಬೂದಿಕುಂಬಳಕಾಯಿ, ಬಜೆ, ಶಂಖಿನಿ(ಗಿರಿಕರ್ಣಿಕೆ ಎಂದು ಕೆಲವರೂ, ಈಶ್ವರಿ ಎಂದು ಕೆಲವರೂ ಹೇಳುತ್ತಾರೆ, ಇಲ್ಲಿಗೆ ಈಶ್ವರಿ ಎನ್ನುವುದೇ ಸಮವೆಂದು ತೋರುತ್ತದೆ) ಇವುಗಳ ಸ್ವರಸ ಎರಡು ತೊಲದ ಜೊತೆಯಲ್ಲಿ ಒಂದು ತೊಲ ಜೇನು ಮತ್ತು ಒಂದು ತೊಲ ಚಂಗಲಕೊಷ್ಟದ ಹುಡಿ ಎರಡನ್ನೂ ಸೇರಿಸಿ ಕುಡಿಯುತ್ತ ಬರುವುದರಿಂದ ಉನ್ಮಾದ ಎಂದರೆ ಬುದ್ಧಿಭ್ರಂಶರೋಗವು ಗುಣವಾಗುತ್ತದೆ

ಕೂಷ್ಮಾಂಡಕಸ್ಯಸ್ವರಸೊಗುಡೇನಸಹಯೋಜಿತಃ ।।
ದುಷ್ಟಕೋದ್ರವಸಂಜಾತಮದಂಪಾನಾದ್ವ್ಯಪೋಹತಿ ।। ೧೯ ।।

ಬೂದಿಕುಂಬಳಕಾಯಿನ ಸ್ವರಸ ಎರಡು ತೊಲದ ಜೊತೆಗೆ ಒಂದು ತೊಲ ಬೆಲ್ಲವನ್ನು ಸೇರಿಸಿ ಪಾನಮಾಡಿದರೆ, ದುಷ್ಟ ಎಂದರೆ ಮುಗ್ಗಿ ಹಾಳಾಗಿ ಹೋಗಿರುವ ಧಾನ್ಯಗಳನ್ನು ತಿನ್ನುವುದರಿಂದ ಉಂಟಾಗುವ ಮದ ಮುಂತಾದ ಹಿಂಸೆಗಳನ್ನು ನಿವಾರಣೆ ಮಾಡುತ್ತದೆ.

ಖಡ್ಗಾದಿಚ್ಛಿನ್ನಗಾತ್ರಸ್ಯ ತತ್ಕಾಲಂಪೂರಿತೋವ್ರಣಃ ॥
ಗಾಂಗೇರುಕೀಮೂಲರಸೈರ್ಜಾಯತೇಗತವೇದನಃ ॥ ೨೦ ॥

ಯಾವುದಾದರೂ ಆಯುಧಗಳಿಂದ ಶರೀರದ ಯಾವ ಭಾಗಕ್ಕಾದರೂ ಪೆಟ್ಟು ತಗಲಿ ದೊಡ್ಡ ವ್ರಣವಾದಲ್ಲಿ ಕಳ್ಳಗಂಡ್ಲೆಬೇರಿನ ರಸವನ್ನು ಆ ವ್ರಣದ ತುಂಬ ಲೇಪಮಾಡಿದರೆ ಶಸ್ತ್ರಘಾತದಿಂದ ಉತ್ಪನ್ನವಾದ ನೋವು ಮತ್ತು ವ್ರಣ ಸಹ ಗುಣವಾಗುತ್ತದೆ.

ಪುಟಪಾಕಸ್ಯಕಲ್ಕಸ್ಯಸ್ವರಸೋಗೃಹ್ಯತೇಯತಃ ॥
ಅತಸ್ತು ಪುಟಪಾಕಾನಾಂಯುಕ್ತಿರತ್ರೋಚ್ಯತೇಮಯಾ ॥ ೨೧ ॥
ಪುಟಪಾಕಸ್ಯಮಾತ್ರೇಯಂಲೇಪಸ್ಯಾಂಗಾರವರ್ಣತಾ ॥
ಲೇಪಂಚದ್ವ್ಯಂಗುಲಂಸ್ಥೂಲಂಕುರ್ಯಾದ್ವ್ಯಾಂಗುಲಮಾತ್ರಕಂ ॥೨೨॥
ಕಾಶ್ಮರೀವಟಜಂಬ್ವಾದಿಪತ್ರೈರ್ವೇಷ್ಟನಮುತ್ತಮಂ ॥
ಪಲಮಾತ್ರಂರಸೋಗ್ರಾಹ್ಯಃಕರ್ಷಮಾತ್ರಂಮಧುಕ್ಷಿಪೇತ್ ॥೨೩॥
ಕಲ್ಕಚೂರ್ಣದ್ರವಾದ್ಯಾಸ್ತುಜ್ಞೇಯಾಸ್ವರಸವದ್ಬುಧೈಃ ॥

ಪುಟಪಾಕ ಮತ್ತು ಕಲ್ಕ ಈ ಎರಡರಲ್ಲಿಯೂ ಸ್ವರಸ ತೆಗೆಯುವಂತೆಯೇ ರಸವನ್ನು ತೆಗೆಯುತ್ತದೆಯಾದ್ದರಿಂದಲೇ ಕಲ್ಕ ಮತ್ತು ಪುಟಪಾಕ ಇವುಗಳ ನಿರ್ಮಾಣ ಪ್ರಕರಣವನ್ನು ಒಟ್ಟಾಗಿಯೇ ಹೇಳಿರುತ್ತಾರೆ, ಪುಟಪಾಕ ಮಾಡತಕ್ಕ ಮೂಲಿಕೆಯನ್ನು ಜಜ್ಜಿ, ಹೊನ್ನೆ, ಆಲ, ನೇರಲು ಈ ಎಲೆಗಳಲ್ಲಿ ಸುತ್ತಿ ಅದರ ಮೇಲೆ ಎರಡು ಅಥವಾ ಒಂದಂಗುಲ ದಪ್ಪವಾಗಿ ಗೋಧಿಯ ಹಿಟ್ಟನ್ನೂ ಮಣ್ಣನ್ನೂ ಮೆತ್ತಿ ಬೆಂಕಿಯಲ್ಲಿ ಹಾಕಿ ಮೇಲೆ ಬೆಂಕಿಯನ್ನು ಮುಚ್ಚಬೇಕು ಮೇಲಿನ ಲೇಪವು ಮಸಿಯ ಬಣ್ಣಕ್ಕೆ ಬಂದದ್ದನ್ನು ನೋಡಿ ಹೊರಕ್ಕೆ ತೆಗೆದುಕೊಂಡು ಮೇಲಿನದೆಲ್ಲಾ ಕಿತ್ತುಹಾಕಿ ಒಳಗಿರುವ ಪಕ್ವವಾದ ಔಷಧವನ್ನು ತೆಗೆದುಕೊಂಡು ಒಂದು ಪಲಪ್ರಮಾಣ (ಮೂರು ಅಥವಾ ನಾಲ್ಕು ತೊಲ) ರಸವನ್ನು ಹಿಂಡಿ ಅದರಲ್ಲಿ ಒಂದು ತೊಲ ಜೇನುತುಪ್ಪ, ಕಲ್ಕ, ಚೂರ್ಣ, ಇನ್ನು ಮೊದಲಾದ ಸೇರಿಸತಕ್ಕ ವಸ್ತುಗಳನ್ನು ಸ್ವರಸಕ್ಕೆ ಸೇರಿಸುವಂತೆಯೇ ಸೇರಿಸಬೇಕು.

ತತ್ಕಾಲಾಕೃಷ್ಟಕುಟಜತ್ವಚಂತಂಡುಲವಾರಿಣಾ ॥ ೨೪ ॥
ಪಿಷ್ಟ್ವಾಂಚತುಷ್ಪಲಮಿತಾಂಜಂಬೂಪಲ್ಲವವೇಷ್ಟಿತಾಂ ॥

**ಸೂತ್ರೇಣಬದ್ಧಾಂಗೋಧೂಮವಿಷ್ಟೇನಪರಿವೇಷ್ಟಿತಾಂ ॥ ೨೫ ॥**
**ಲಿಪ್ತಾಂಚಘನಪಂಕೇನಗೋಧೂಮ್ಯೈರ್ವಹ್ನಿನಾದಹೇತ್ ॥**
**ಅಂಗಾರವರ್ಣಾಂಚಮೃದಂದೃಷ್ಟ್ವಾವಹ್ನೇಸ್ಸಮುದ್ಧರೇತ್ ॥೨೬॥**
**ತತೋರಸಂಗೃಹೀತ್ವಾಚಶೀತಂಕ್ಷೌದ್ರಯುತಂಪಿಬೇತ್ ॥**
**ಜಯೇತ್ಸರ್ವಾನತೀಸಾರಾನ್‌ದುಸ್ತರಾನ್‌ಸುಚಿರೋತ್ಥಿತಾನ್ ॥೨೭॥**

ಕೊಡಸದ ತ್ವಕ್ಕಿನ ಪುಟಪಾಕವನ್ನು ಹೇಳುತ್ತಾನೆ—ಹಸಿಯದಾದ ಅಂದರೆ ಆಗ ತಾನೆ ತೆಗೆದುಕೊಂಡು ಬಂದ ಕೊಡಸದ ತೊಪ್ಪೆಯನ್ನು, (ನಾಲ್ಕು ಪಲ) ಅಕ್ಕಿಯನ್ನು ತೊಳದ ನೀರಿನಿಂದ ಅರದು ನೇರಿಲ ಎಲೆಯಲ್ಲಿ ಸುತ್ತಿ ನೂಲಿನಿಂದ ಸುತ್ತಿ ಗೋಧಿಯ ಹಿಟ್ಟನ್ನು ಅದರ ಮೇಲೆ ಮೆತ್ತಿ ಅದರ ಮೇಲೆ ಕೆಮ್ಮಣ್ಣನ್ನು ಬಳಿದು ಬೆರಣಿಯಿಂದ ಪುಟಹಾಕಿ ಮೇಲ್ಮೈಮೆತ್ತಿರುವ ಮಣ್ಣು ಕಪ್ಪಗಾದ ಮೇಲೆ ಬೆಂಕಿಯಿಂದ ಹೊರಕ್ಕೆ ತೆಗದು ಮೇಲಿನ ಮಣ್ಣನ್ನೆಲ್ಲಾ ಉದುರಿಸಿ ರಸವನ್ನು ಹಿಂಡಿಕೊಂಡು ರಸವು ತಣ್ಣಗಾದ ಮೇಲೆ ಅದಕ್ಕೆ ಜೇನುತುಪ್ಪವನ್ನು ಸೇರಿಸಿ ಪಾನಮಾಡಿಸಿದಲ್ಲಿ ಭಯಂಕರವಾದ ಅತಿಸಾರವು ಕೂಡ ಸುಲಭವಾಗಿ ಗುಣಹೊಂದುತ್ತದೆ. ಎಷ್ಟುಕಾಲ ಹಳೆಯ ಅತಿಸಾರವಾದರೂ ಅನುಮಾನವಿಲ್ಲ.

**ಕಂಡಿತಂತಂಡುಲಪಲಂಜಲೇಷ್ಟಗುಣಿತೇಕ್ಷಿಪೇತ್ ॥**
**ಭಾವಯಿತ್ವಾಜಲಂಗ್ರಾಹ್ಯಂದೇಯಂಸರ್ವತ್ರಕರ್ಮಸು ॥ ೨೮ ॥**

ಒಂದು ಪಲ (ಮೂರು ವ ನಾಲ್ಕು ತೊಲ) ಚನ್ನಾಗಿ ಕುಟ್ಟಿ ತೊಳಸಿದ ಅಕ್ಕಿಯನ್ನು ಎಂಟರಷ್ಟು ನೀರಿನಲ್ಲಿ ನೆನಸಿ ಇರಿಸಿದ್ದು ತಂಡುಲೋದಕವೆಂದು ಎಲ್ಲೆಲ್ಲಿ ಪ್ರಯೋಗಿಸಿದರೂ ಇದನ್ನು ಉಪಯೋಗಿಸಬೇಕು

**ಅರಲುತ್ವಕ್ಕೃತಶ್ಚೈವಪುಟಪಾಕೋಗ್ನಿದೀಪನಃ ॥**
**ಮಧುಮೋಚರಸಾಭ್ಯಾಂಚಯುಕ್ತಸ್ಸರ್ವಾತಿಸಾರಜಿತ್ ॥ ೨೯ ॥**

ಅರಲು ಎಂದರೆ ಹೆಮ್ಮರದ ಚಕ್ಕೆಯ ಪುಟಪಾಕವನ್ನು ಮಾಡಿ ರಸವನ್ನು ತೆಗದುಕೊಂಡರೆ ಅಗ್ನಿ ಅಂದರೆ ಜಠರಾಗ್ನಿಗೆ ದೀಪ್ತಿಯನ್ನುಂಟುಮಾಡುತ್ತದೆ. ಪುಟಪಾಕ ರಸದ ಜೊತೆಗೇನೇ ಜೇನು ತುಪ್ಪ ಮತ್ತು ಮೋಚರಸವೆಂದರೆ ಬೂರಗದ ರಾಳ ಇವುಗಳನ್ನು ಸೇರಿಸಿ ತೆಗದುಕೊಂಡರೆ ಸಮಸ್ತ ವಿಧವಾದ ಅತಿಸಾರವನ್ನೂ ಗುಣಪಡಿಸುತ್ತದೆ.

**ನ್ಯಗ್ರೋಧಾದೇಶ್ಚಕಲ್ಕೇನಪೂರಯೇದ್ದಾರತಿತ್ತಿರೇಃ ॥**
**ನಿರಂತ್ರಮುದರಂಸಮ್ಯಕ್ಪುಡಪಾಕೇಸತತ್ವಚೇತ್ ॥ ೩೦ ॥**
**ತತ್ಕಲ್ಕಸ್ಯರಸಃಕ್ಷೌದ್ರಯುಕ್ತಸ್ಸರ್ವಾತಿಸಾರನುತ್ ॥**

ನ್ಯಗ್ರೋಧಾದಿ ಎಂದರೆ ಆಲ, ಅತ್ತಿ, ಅಶ್ವತ್ಥ, ಬಸರಿ, ವೇತಸವೆಂಬದಾಗಿ ನ್ಯಗ್ರೋಧಾದಿಗಣದಲ್ಲಿ ಹೇಳಿರತಕ್ಕ ಮರಗಳ ಚಕ್ಕೆಯನ್ನು ತಂದು ನೀರಿನಿಂದ ರದು ಕಲ್ಕಮಾಡಿ, ತಿತ್ತಿರಿ ಎಂದರೆ ಬಿಳೀ ಕಪಟದ ಹಕ್ಕಿಯನ್ನು ಕೊಂದು ಅದರ ಹೊಟ್ಟೆಯೊಳಗಿರುವುದನ್ನೆಲ್ಲಾ ತೆಗದು ಈ ಕಲ್ಕವನ್ನು ಅದರಲ್ಲಿ ತುಂಬಿ ಪುಟ ಪಾಕ ವಿಧಾನದಿಂದ ಪಕ್ವಮಾಡಿ ಅದರ ರಸ ಎರಡು ತೊಲಕ್ಕೆ ಒಂದು ತೊಲ ಜೇನುತುಪ್ಪ ಸೇರಿಸಿ ತೆಗೆದುಕ್ಕೊಂಡರೆ ಅತಿಸಾರವನ್ನು ನಿವಾರಣಮಾಡುತ್ತದೆ.

ಪುಟಪಾಕೇನವಿಪಚೇತ್ಸುಪಕ್ವಂದಾಡಿಮೀಫಲಂ ॥ ೩೦ ॥
ತದ್ರಸೊಮಧುಸಂಯುಕ್ತಸ್ಸರ್ವಾತೀಸಾರನಾಶನಃ ॥

ಒಳ್ಳೆ ದಾಳಿಂಬರೆಯ ಕಾಯನ್ನು ಪುಟಪಾಕವಿಧಾನದಿಂದ ಪಕ್ವಮಾಡಿ ಎರಡು ತೊಲ ಅದರ ರಸವನ್ನು ತೆಗೆದುಕ್ಕೊಂಡು ಒಂದು ತೊಲ ಜೇನು ಸೇರಿಸಿ ತೆಗೆದುಕ್ಕೊಂಡರೆ ಅತಿಸಾರವು ಗುಣವಾಗುತ್ತದೆ. ದಾಳಿಂಬದ ಕಾಯಿನಲ್ಲಿಯೇ ತಯಾರಿಸುವದು ರೂಢಿಯಾದ ಅನುಭವ

ಬೀಜಪೂರಾಮ್ರಜಂಬೂನಾಂಪಲ್ಲವಾನಿಜಟಾಃಪೃಥಕ್ ॥ ೩೧ ॥
ವಿಪಚೇತ್ಪುಟಪಾಕೇನಕ್ಷೌದ್ರಯುಕ್ತಶ್ಚತದ್ರಸಃ ॥
ಛರ್ದಿಂನಿವಾರಯೇದ್ಘೋರಾಂಸರ್ವದೋಷಸಮುದ್ಭವಾಂ ॥ ೩೨ ॥

ಮಾದಳದ ಚಿಗರು, ಮಾವಿನ ಚಿಗರು, ನೇರಲ ಚಿಗರು, ಮತ್ತು ಇವುಗಳ ಪ್ರತ್ಯೇಕ ಬೇರು, ಇವುಗಳನ್ನು ಪುಟಪಾಕ ವಿಧಾನದಿಂದ ಪಕ್ವಮಾಡಿ ರಸವನ್ನು ತೆಗದುಕ್ಕೊಂಡು ಅದಕ್ಕೆ ಜೇನುತುಪ್ಪವನ್ನು ಸೇರಿಸಿಕೊಡುವುದರಿಂದ ಭಯಂಕರ ವಾದ ವಮನ ನಿಲ್ಲುತ್ತದೆ

ಪಿಷ್ಟಾನಾಂವೃಷಪತ್ರಾಣಾಂಪುಟಪಾಕರಸೋಹಿಮಃ ॥
ಮಧುಯುಕ್ತೋಜಯೇದ್ರಕ್ತಪಿತ್ತಕಾಸಜ್ವರಕ್ಷಯಾನ್ ॥ ೩೩ ॥

ಆಡುಸೋಗೆಯ ಎಲೆಗಳನ್ನು ಚನ್ನಾಗಿ ಅರದು ಪುಟಪಾಕ ವಿಧಿಯಿಂದ ಪಕ್ವಮಾಡಿ ರಸವನ್ನು ಎರಡು ತೊಲದಷ್ಟು ತೆಗದುಕ್ಕೊಂಡು ತಣ್ಣಗಾದ ಮೇಲೆ ಒಂದು ತೊಲ ಜೇನು ಸೇರಿಸಿ ಕುಡಿಯುವುದರಿಂದ ರಕ್ತಪಿತ್ತ, ಕೆಮ್ಮು, ಜ್ವರ, ಕ್ಷಯರೋಗ ಇವುಗಳೆಲ್ಲವೂ ಶಮನಹೊಂದುತ್ತವೆ.

ಪಚೇತ್ಷುದ್ರಾಂಸಪಂಚಾಂಗಾಪುಟಪಾಕೇನತದ್ರಸಃ ॥
ಪಿಪ್ಪಲೀಚೂರ್ಣಸಂಯುಕ್ತಃಕಾಸಶ್ವಾಸಕಫಾಪಹಃ ॥ ೩೪ ॥

ನೆಲಗುಳ್ಳದ ಗಿಡವನ್ನು ಹುವ್ವು ಕಾಯಿ ಸಹಿತವಾಗಿ ಸಮೂಲಕಿತ್ತು ತಂದು ಚನ್ನಾಗಿ ಜಜ್ಜಿ ಪುಟಪಾಕವಿಧಿಯಿಂದ ಪಕ್ವಮಾಡಿ ರಸವನ್ನು ತೆಗೆದು

ಕೊಂಡು ಒಂದು ತೊಲ ಹಿಪ್ಪಲಿಯ ಚೂರ್ಣವನ್ನು ಸೇರಿಸಿ ಕುಡಿಯುವುದರಿಂದ ಕೆಮ್ಮು, ಉಬ್ಬಸ, ಶ್ಲೇಷ್ಮ, ಇವುಗಳನ್ನು ಗುಣಮಾಡಿಕೊಳ್ಳಬಹುದು.

ವಿಭೀತಕಫಲಂಕಿಂಚಿದ್ಘೃತೇನಾಭ್ಯಜ್ಯಲೇಪಯೇತ್ ॥
ಗೋಧೂಮಪಿಷ್ಟೇನಾಂಗಾರೈರ್ವಿಪಚೇತ್ಪುಟಪಾಕವತ್ ॥ ೩೬ ॥
ತತಃಪಕ್ವಂಸಮುದ್ಧೃತ್ಯತ್ವಚಾಂತಸ್ಯಮುಖೇಕ್ಷಿಪೇತ್ ॥
ಕಾಸಶ್ವಾಸಪ್ರತಿಶ್ಯಾಯಸ್ವರಭಂಗಾನ್ ಜಯೇತ್ತತಃ ॥ ೩೭ ॥

ತಾರೇಕಾಯನ್ನು ತಂದು ಅದರ ಮೇಲೆ ತುಪ್ಪವನ್ನು ಸವರಿ ಮೇಲೆ ಗೋಧೀಹಿಟ್ಟನ್ನು ಮೆತ್ತಿ ಪುಟಪಾಕ ಕ್ರಮದಿಂದ ಪಾಕವಾಡಬೇಕು. ಪಕ್ವ ವಾದದ್ದನ್ನು ನೋಡಿಕೊಂಡು ಅದನ್ನು ಹೊರಗೆ ತೆಗೆಗು ಅದರ ತೊಪ್ಪೆಯನ್ನು ಬಾಯಿಯಲ್ಲಿ ಹಾಕಿಕೊಂಡು ಅಗಿದು ಬರುವ ರಸವನ್ನು ನುಂಗುತ್ತ ಬಂದರೆ ಕೆಮ್ಮು, ಉಬ್ಬಸ, ನೆಗಡಿ, ಧ್ವನಿ ಕೆಟ್ಟುಹೋಗಿರುವುದು ಇವುಗಳೆಲ್ಲಾ ಗುಣ ವಾಗುತ್ತವೆ

ಚೂರ್ಣಂಕಿಂಚಿದ್ಘೃತಾಭ್ಯಕ್ತಂಶುಂಠ್ಯಾಏರಂಡಜೈರ್ದಳೈಃ ॥
ವೇಷ್ಟಿತಂಪುಟಪಾಕೇನವಿಪಚೇನ್ಮಂದವಹ್ನಿನಾ ॥ ೩೮ ॥
ತತಉದ್ಧೃತ್ಯತಚ್ಚೂರ್ಣಂಗ್ರಾಹ್ಯಂಪ್ರಾತಸ್ಸಿತಾನ್ವಿತಂ ॥
ತೇನಯಾಂತಿಶಮಂಪೀಡಾಆಮಾತೀಸಾರಸಂಭವಾಃ ॥ ೩೯ ॥

ಶುಂಠಿಯ ದಪ್ಪವಾದ ಚೂರ್ಣವನ್ನು ತುಪ್ಪದಲ್ಲಿ ಕಲಸಿ ಹರಳಿನ ಎಲೆಯಲ್ಲಿ ಸುತ್ತಿ ಪುಟಪಾಕಕ್ರಮದಲ್ಲಿ ಪಕ್ವಮಾಡಿ ಚೂರ್ಣವನ್ನು ಸಮವಾಗಿ ಸಕ್ಕರೆ ಯನ್ನು ಬೆರಸಿ ಬೆಳಗಿನ ಹೊತ್ತಿನಲ್ಲಿ ತೆಗೆದುಕೊಂಡಲ್ಲಿ ಆಮಾತಿಸಾರ ಮತು ಆಮಾತಿಸಾರ ಸಂಬಂಧವಾದ ಹೊಟ್ಟೆನೋವು ಮೊದಲಾದವುಗಳೆಲ್ಲಾ ಶಮನ ವಾಗುತ್ತವೆ.

ಶುಂಠೀಕಲ್ಕಂವಿನಿಕ್ಷಿಪ್ಯರಸೈರೇರಂಡಮೂಲಜೈಃ ॥
ವಿಪಚೇತ್ಪುಟಪಾಕೇನತದ್ರಸಃಕ್ಷೌದ್ರಸಂಯುತಃ ॥ ೪೦ ॥
ಆಮವಾತಸಮುದ್ಭೂತಾಂಪೀಡಾಂಜಯತಿದುಸ್ತರಾಂ ॥

ಶುಂಠಿಯನ್ನು ತಂದು ಹರಳುಬೇರಿನ ರಸದಲ್ಲಿ ಅರದು ಪುಟಪಾಕ ಕ್ರಮ ದಿಂದ ಪಕ್ವಮಾಡಿ ರಸ ಎರಡು ತೊಲ ತೆಗದುಕೊಂಡು ಒಂದು ತೊಲ ಜೇನು ತುಪ್ಪವನ್ನು ಸೇರಿಸಿ ಕುಡಿಯುತ್ತ ಬಂದಲ್ಲಿ ಭಯಂಕರವಾದ ಆಮವಾತ ಸಮ್ಬಂಧವಾದ ವ್ಯಥೆ ಕಡಮೆಯಾಗುತ್ತದೆ.

**ಸೌರಣಂಕಂದಮಾದಾಯಪುಟಪಾಕೇನಪಾಚಯೇತ್ ॥ ೪೧ ॥**
**ಸತೈಲಲವಣಸ್ತಸ್ಮಿನ್ಸಸ್ಯಾಶೋಂವಿಕಾರನುತ್ ॥**

ಚೂರ್ಣದ ಗಡ್ಡೆಯನ್ನು ತಂದು ಪುಟಪಾಕಕ್ರಮದಿಂದ ಪಕ್ವಮಾಡಿ ಎರಡು ತೊಲ ಅದರ ರಸದ ಜೊತೆಗೆ ಒಂದು ತೊಲ ಉಪ್ಪು ಮತ್ತು ಎಳ್ಳೆಣ್ಣೆ ಇವುಗಳನ್ನು ಸೇರಿಸಿ ತೆಗದುಕೊಂಡಲ್ಲಿ ಮೂಲವ್ಯಾಧಿಯ ವಿಕಾರಗಳೆಲ್ಲಾ ಶಮನವಾಗುತ್ತವೆ.

ಶರಾವಸಂಪುಟೇದಗ್ಧಂಶೃಂಗಂಹರಿಣಜಂಪಿಬೇತ್ ॥ ೪೨ ॥
ಗವ್ಯೇನಸರ್ಪಿಷಾಯುಕ್ತಂಹೃಚ್ಛೂಲಂನಾಶಯೇದ್ಧ್ರುವಂ ॥

ಜಿಂಕೆಯ ಕೋಡನ್ನು ತಂದು ಕತ್ತರಿಸಿ ಮಣ್ಣಿನ ಶ್ರಾವೆಯಲ್ಲಿ ಹಾಕಿ ಪುಟಪಾಕಕ್ರಮದಿಂದ ಅಂದರೆ ಶರಾವೆಗೆ ಮಣ್ಣನ್ನು ಸವರಿ ಬೆಂಕಿಯಲ್ಲಿ ಪುಟಹಾಕಿ ಪಕ್ವವಾಗುವುದನ್ನು ನೋಡಿ ತೆಗದು ಅದನ್ನು ಚೂರ್ಣಿಸಿ ಹಸುವಿನ ತುಪ್ಪದೊಂದಿಗೆ ಸೇರಿಸಿ ತೆಗದುಕೊಂಡಲ್ಲಿ ಹೃದಯಶೂಲೆಯು ಗುಣಹೊಂದುತ್ತದೆ.

ಇಲ್ಲಿಗೆ ಶಾರ್ಙ್ಗಧರ ಸಂಹಿತೆಯಲ್ಲಿ ದ್ವಿತೀಯ ಖಂಡದಲ್ಲಿ ಪ್ರಥಮಾಧ್ಯಾಯ ಸಮಾಪ್ತ.



## ದ್ವಿತೀಯಾಧ್ಯಾಯ.

ಪಾನೀಯಂಷೋಡಶಗುಣಂಕ್ಷುಣ್ಣೇದ್ರವ್ಯಪಲೇಕ್ಷಿಪೇತ್ ॥
ಮೃತ್ಪಾತ್ರೇಕ್ವಾಥಯೇದ್ಗ್ರಾಹ್ಯಮಷ್ಟಮಾಂಶಾವಶೇಷಿತಂ ॥ ೧ ॥
ತಜ್ಜಲಂಪಾಯಯೇದ್ಧೀಮಾನ್ಕೋಷ್ಣಂಮೃದ್ವಗ್ನಿಸಾಧಿತಂ ॥

ಈ ಅಧ್ಯಾಯದಲ್ಲಿ ಕಷಾಯಗಳನ್ನು ವಿವರಿಸುತ್ತಾನೆ—ಔಷಧೋಪಯುಕ್ತಗಳಾದ ದ್ರವ್ಯಗಳನ್ನು ಚನ್ನಾಗಿ ಕುಟ್ಟಿ ದ್ರವ್ಯದ ಹದಿನಾರರಷ್ಟು ನೀರನ್ನು ಹಾಕಿ ಮಣ್ಣಿನಪಾತ್ರೆಯಲ್ಲಿ ಮೃದ್ವಗ್ನಿಯಲ್ಲಿ ಪಾಕಮಾಡಿ ಎಂಟರಲ್ಲಿ ಒಂದಂಶ ನಿಲ್ಲಿಸಿಕೊಂಡು ಕೊಂಚ ಬಿಸಿ ಇರುವಾಗಲೇ ಕುಡಿಸಬೇಕು. ಈ ಕಷಾಯ ಕ್ರಮದಲ್ಲಿ ಕೆಲವು ವಿಶೇಷಗಳುಂಟು. ಮೃದು, ಮಧ್ಯ, ಕಠಿನಗಳೆಂಬದಾಗಿ ಕಷಾಯ ದ್ರವ್ಯಗಳು ಮೂರು ವಿಧ, ಮೃದು ದ್ರವ್ಯದ ಕಷಾಯ ಮಾಡುವಾಗ್ಯೆ ಚತುರ್ಗುಣ ಜಲವನ್ನು ಕೂಡಿಸಬೇಕು, ಮಧ್ಯಮ ದ್ರವ್ಯಕ್ಕೆ ಅಷ್ಟ ಗುಣ ಜಲವನ್ನು ಸೇರಿಸಬೇಕು. ಕಠಿನ ದ್ರವ್ಯಕ್ಕೆ ಷೋಡಶ ಗುಣಜಲ ಸೇರಿಸಿ ಕಷಾಯ ಮಾಡಬೇಕು. ಅಲ್ಲದೆ ಪಾಚನ ಮತ್ತು ಶೋಧನಗಳಿಗೆ ಕಷಾಯ ಕೊಡುವಾಗ್ಯೆ ಚತುರ್ಥಾಂತಕಷಾಯವನ್ನಿಳಿಸಿಕೊಳ್ಳಬೇಕು, ಈ ರೀತಿಯಾಗಿ ಇದರ ಕ್ರಮಗಳನ್ನು ಕೊಂಚ ಮಾತ್ರ ಅನುಭವದಿಂದಲೇ ತೆಗೆದುಕೊಳ್ಳಬೇಕು.

ಶೃತಃಕ್ವಾಥಃಕಷಾಯಶ್ಚ ನಿರ್ಯೂಹಸ್ಸನಿಗದ್ಯತೆ ॥ ೨ ॥
ಆಹಾರರಸಪಾಕೇಚಸಂಜಾತೆದ್ವಿಪಲೋನ್ಮಿತಂ ॥
ವೃದ್ಧವೈದ್ಯೋಪದೇಶೇನಪಿಬೇತ್‌ಕ್ವಾಥಂಸುಪಾಚಿತಂ ॥ ೩ ॥
ಕ್ವಾಥೇಕ್ಷಿಪೇತ್ಸಿತಾಮಂಶೈಶ್ಚತುರ್ಥಾಷ್ಟಮಷೋಡಶೈಃ ॥
ವಾತಪಿತ್ತಕಫಾತಂಕೆವಿಪರೀತಂಮಧುಸ್ಮೃತಂ ॥ ೪ ॥
ಜೀರಕಂಗುಗ್ಗುಲುಂಕ್ಷಾರಂಲವಣಂಚಶಿಲಾಜತು ॥
ಹಿಂಗುತ್ರಿಕಟುಕಂಚೈವಕ್ವಾಥೆಶಾಣೋನ್ಮಿತಂಕ್ಷಿಪೇತ್ ॥ ೫ ॥
ಕ್ಷೀರಂಘೃತಂಗುಡಂತೈಲಂಮೂತ್ರಂಚಾನ್ಯದ್ರವಂತಥಾ ॥
ಕಲ್ಕಂಚೂರ್ಣಾದಿಕಂಕ್ವಾಥೆನಿಕ್ಷಿಪೇತ್ಕರ್ಷಸಮ್ಮಿತಂ ॥ ೬ ॥
ಅಪಿಧಾನಮುಖೇಪಾತ್ರೆಜಲಂದುರ್ಜರತಾಂವ್ರಜೇತ್ ॥
ತಸ್ಮಾದಾವರಣಂತ್ಯಕ್ತ್ವಾಕ್ವಾಥಾದೀನಾಂವಿನಿಶ್ಚಯಃ ॥ ೭ ॥

ಕಷಾಯದ ಪರ್ಯಾಯ ನಾಮಗಳ್ಯಾವುವೆಂದರೆ—ಶೃತ, ಕ್ವಾಥ, ಕಷಾಯ, ನಿರ್ಯೂಹ ಇವು ಪರ್ಯಾಯ ನಾಮಗಳು. ಭೋಜನ ಮಾಡಿದ ಆಹಾರವು ಚೆನ್ನಾಗಿ ಜೀರ್ಣವಾಗಿರುವಾಗ್ಯೆ ವೈದ್ಯರ ಹೇಳಿಕೆಯಂತೆ ಪಕ್ವವಾದ ಕಷಾಯವನ್ನು ಎರಡು ಪಲದಷ್ಟು ಕುಡಿಯಬೇಕು. ಕಷಾಯದಲ್ಲಿ ವಾತ, ಪಿತ್ತ, ಕಫಗಳು ಪ್ರಕುಪಿತವಾಗಿರುವಾಗ್ಯೆ ಕ್ರಮವಾಗಿ ನಾಲ್ಕನೆಯ ಒಂದು ಭಾಗ, ಎಂಟನೆಯ ಒಂದು ಭಾಗ, ಹದಿನಾರನೆಯ ಒಂದು ಭಾಗ, ಈ ರೀತಿಯಾಗಿ ಸಕ್ಕರೆಯನ್ನೂ, ಜೇನುತುಪ್ಪವಾದರೆ ಕ್ರಮವಾಗಿ ಹದಿನಾರನೆಯ ಒಂದು ಭಾಗ, ಎಂಟನೆಯ ಒಂದು ಭಾಗ, ನಾಲ್ಕನೆಯ ಒಂದು ಭಾಗ, ಈ ರೀತಿಯಾಗಿಯೂ ಸೇರಿಸಿ ಕುಡಿಯಬೇಕು. ಕಷಾಯದಲ್ಲಿ ಜೀರಿಗೆಹುಡಿ, ಗುಗ್ಗುಲ, ಕ್ಷಾರಗಳು, ಲವಣಗಳು, ಶಿಲಾಜತು, ಇಂಗು, ತ್ರಿಕಟುಚೂರ್ಣ, ಇವುಗಳನ್ನು ಸೇರಿಸಬೇಕಾದಲ್ಲಿ ಅರ್ಧ ತುಲದಷ್ಟು ಶೇರಿಸತಕ್ಕದ್ದು. ಹಾಲು, ತುಪ್ಪ, ಬೆಲ್ಲ, ಎಣ್ಣೆ, ಮೂತ್ರ, ಇನ್ನೂ ಏನಾದರೂ ದ್ರವದ್ರವ್ಯಗಳು, ಕಲ್ಕ, ಚೂರ್ಣಗಳು, ಇವುಗಳನ್ನು ಸೇರಿಸುವಾಗ್ಯೆ ಒಂದು ತೊಲದಷ್ಟು ಸೇರಿಸಬೇಕು. ಕಷಾಯವನ್ನು ತಯಾರಿಸುವಾಗ್ಯೆ ಪಾತ್ರೆಯ ಮುಚ್ಚಳವನ್ನು ಮುಚ್ಚಿದ್ದರೆ ನೀರು ಬತ್ತದೆ ತೊಂದರೆಯಾಗುತ್ತದೆ, ಆದ್ದರಿಂದ ಕಷಾಯ ಕಾಯಿಸುವಾಗ್ಯೆ ಕಾಯಿಸತಕ್ಕ ಪಾತ್ರದ ಬಾಯನ್ನು ಚೆನ್ನಾಗಿ ತೆಗೆದು ಕಾಯಿಸಬೇಕು.

ಗುಡೂಚೀಧಾನ್ಯಕಾರಿಷ್ಟರಕ್ತಚಂದನಪದ್ಮಕೈಃ ॥
ಗುಡೂಚ್ಯಾದಿಗಣಕ್ವಾಥಃಸರ್ವಜ್ವರಹರಸ್ಮೃತಃ ॥ ೮ ॥
ದೀಪನೋದಾಹಹೃಲ್ಲಾಸತೃಷ್ಣಾಛರ್ದ್ಯರುಚೀರ್ಜಯೇತ್ ॥

ಜ್ವರಕಷಾಯವನ್ನು ಹೇಳುತ್ತಾನೆ—ಅಮೃತಬಳ್ಳಿ, ಕೊತ್ತುಂಬರಿಬೀಜ, ಬೇವಿನಪಟ್ಟೆ, ರಕ್ತಚಂದನ, ಪದ್ಮಕವೆಂಬ ಗಂಧಿಗೆಜಿನಸು, ಇವುಗಳಿಂದ ಸಿದ್ಧವಾದ ಕಷಾಯವು ಸಮಸ್ತ ಜ್ವರಗಳನ್ನೂ ಶಮನಗೊಳಿಸುತ್ತದೆ. ಅಗ್ನಿದೀಪನ, ಮೈಯ್ಯುರಿಯನ್ನು ಕಡಮೆಮಾಡುತ್ತದೆ; ಬಾಯಿ ನೀರುಬರುವುದು, ಬಾಯಾರಿಕೆ, ವಮನ, ಅರುಚಿ, ಇವುಗಳೆಲ್ಲವನ್ನೂ ನಿವಾರಣೆಮಾಡುತ್ತದೆ.

ನಾಗರಂದೇವಕಾಷ್ಟಂಚಧಾನ್ಯಕಂಬೃಹತೀದ್ವಯಂ ॥
ದದ್ಯಾತ್ಪಾಚನಕಂಪೂರ್ವಂಜ್ವರಿತಾನಾಂಜ್ವರಾಪಹಂ ॥
ಕಷ್ಣದ್ರಾಕಿರಾತತಿಕ್ತಂಚಶುಂಠೀಛಿನ್ನಾಚಪೌಷ್ಕರಂ ॥
ಕಷಾಯಏಷಾಂಶಮಯೇತ್ಪೀತಶ್ಚಾಷ್ಟವಿಧಂಜ್ವರಂ ॥

ಜ್ವರಪೀಡಿತನಿಗೆ ಶುಂಠಿ, ದೇವದಾರು, ಕೊತ್ತುಂಬರಿ, ಹೆಗ್ಗುಳ್ಳ, ನೆಲಗುಳ್ಳ ಇವುಗಳ ಕಷಾಯವನ್ನು ಪಾಚನವಾಗಿಯೂ, ಜ್ವರನಾಶಕವಾಗಿಯೂ ಉಪಯೋಗಿಸಬೇಕು. ನೆಲಗುಳ್ಳ. ಚಿರಾಯಿತ, ಶುಂಠಿ, ಅಮೃತಬಳ್ಳಿ, ಪುಷ್ಕರಮೂಲ ಇವುಗಳ ಕಷಾಯವು ಅಷ್ಟವಿಧ ಜ್ವರಗಳನ್ನೂ ಶಮನಪಡಿಸುತ್ತದೆ.

ಗುಡೂಚೀಪಿಪ್ಪಲೀಮೂಲನಾಗರೈಃಪಾಚನಂಸ್ಮೃತಂ ॥ ೯ ॥
ದದ್ಯಾದ್ವಾತಜ್ವರೇಪೂರ್ಣಲಿಂಗೇಸಪ್ತಮವಾಸರೆ ॥
ಶಾಲಿಪರ್ಣೀಬಲಾದ್ರಾಕ್ಷಾಗುಡೂಚೀಸಾರಿವಾತಥಾ ॥ ೧೦ ॥
ಆಸಾಂಕ್ವಾಥಂಪಿಬೇತ್ಕೋಷ್ಣಂತೀವ್ರವಾತಜ್ವರಚ್ಛಿದಂ ॥
ಕಾಶ್ಮರೀಸಾರಿಬಾದ್ರಾಕ್ಷಾತ್ರಾಯಮಾಣಾಮೃತಾಭವಃ ॥ ೧೧ ॥
ಕಷಾಯಸ್ಸಗುಡಃಪೀತೊವಾತಜ್ವರವಿನಾಶನಃ ॥
ಕಟ್ಫಲೇಂದ್ರಯವಾಪಾಠಾತಿಕ್ತಮುಸ್ತೈಶ್ಶೃತಂಜಲಂ ॥ ೧೨ ॥
ಪಾಚನಂದಶಮೇಹ್ನಿಸ್ಯಾತ್ತೀವ್ರೇಪಿತ್ತಜ್ವರೇನೃಣಾಂ ॥
ಪರ್ಪಟೋವಾಸಕಸ್ತಿಕ್ತಾಕೈರಾತೊಧನ್ವಯಾಸಕಃ ॥ ೧೩ ॥
ಪ್ರಿಯಂಗುಶ್ಚಕೃತಃಕ್ವಾಥಏಷಾಂಶರ್ಕರಯಾಯುತಃ ॥
ಪಿಪಾಸಾದಾಹಪಿತ್ತಾಸ್ರಯುತಂಪಿತ್ತಜ್ವರಂಜಯೇತ್ ॥ ೧೪ ॥
ದ್ರಾಕ್ಷಾಹರೀತಕೀಮುಸ್ತಂಕಟುಕೀಕೃತಮಾಲಕಃ ॥
ಪರ್ಪಟಶ್ಚಕೃತಃಕ್ವಾಥಏಷಾಂಪಿತ್ತಜ್ವರಾಪಹಃ ॥ ೧೫ ॥
ತೃಣ್ಮೂರ್ಛಾದಾಹಪಿತ್ತಾಸೃಕ್ಶಮನೊಭೇಧನಃಸ್ಮೃತಃ ॥
ಏಕಃಪರ್ಪಟಕಶ್ರೇಷ್ಠಃಪಿತ್ತಜ್ವರವಿನಾಶನಃ ॥ ೧೬ ॥
ಕಿಂಪುನರ್ಯದಿಯುಜ್ಯೇತಚಂದನೋಶೀರವಾಲಕೈಃ ॥

ಕ್ರಮವಾಗಿ ದೋಷಾನುರೋಧೇನ ಕೆಲವು ಕಷಾಯಗಳನ್ನು ಹೇಳುತ್ತಾನೆ— ಅಮೃತಬಳ್ಳಿ, ಹಿಪ್ಪಲಿ, ಮೋಡಿ, ಶುಂಠಿ ಇವುಗಳ ಕಷಾಯವನ್ನು ವಾತಪ್ರಕೋಪ ಜನ್ಯವಾದ ಜ್ವರವು ಸಂಪೂರ್ಣ ಲಕ್ಷಣಯುಕ್ತವಾಗಿರುವಾಗ್ಯೆ ಏಳು ದಿವಸ ಕಳೆದ ನಂತರ ಪಾಚನೌಷಧವಾಗಿ ಕೊಡಬೇಕು.

ಮೂರೆಲೆ ಹೊನ್ನೆ, ಕಳ್ಳಂಗಡಲೆ, ದ್ರಾಕ್ಷೆ, ಅಮೃತಬಳ್ಳಿ, ಸೊಗದೇಬೇರು ಇವುಗಳ ಕಷಾಯವನ್ನು ಭಯಂಕರವಾದ ವಾತಜ್ವರದಲ್ಲಿ ಸುಖೋಷ್ಣವಾಗಿ ಕುಡಿಯಬೇಕು.

ಶಿವನೆತೊಪ್ಪೆ, ಸೊಗದೇಬೇರು, ದ್ರಾಕ್ಷೆ, ಗಜ್ಜಿಗ, ಅಮೃತಬಳ್ಳಿ ಇವುಗಳ ಕಷಾಯದ ಜೊತೆಗೆ ಬೆಲ್ಲವನ್ನು ಸೇರಿಸಿ ಕುಡಿಸಿದಲ್ಲಿ ವಾತಜ್ವರವು ಶಾಂತ ವಾಗುತ್ತದೆ.

ಕಟ್ಫಲವೆಂದರೆ—ಕಾಯಿಫಲಚಕ್ಕೆ, (ಕಿರುಶಿವನೆತೊಪ್ಪೆ ಎಂದೂ ಹೇಳು ತ್ತಾರೆ.) ಕಾಯಿಫಲಚಕ್ಕೆ, ಕೊಡಸದಚಕ್ಕೆ, ಅಗಳುಶುಂಠಿ, ಚಿರಾಯಿತ, ತುಂಗ ಮುಸ್ತೆ, ಇವುಗಳಿಂದ ಮಾಡಿದ ಕಷಾಯವನ್ನು ಭಯಂಕರ ಪಿತ್ತಜ್ವರದಲ್ಲಿ ಜ್ವರ ಪ್ರಾರಂಭವಾಗಿ ಹತ್ತು ದಿವಸ ಕಳೆದ ಮೇಲೆ ಪಾಚನೌಷಧವಾಗಿ ಕೊಡಬೇಕು.

ಪರಪಾಷ್ಟಕ, ಆಡಸೋಗೆ, ಕಟುರೋಹಿಣಿ, ಚಿರಾಯಿತ, ತುರಚೇಬೇರು, ಪ್ರಿಯಂಗು (ಎಂದರೆ ಗೌಲವೆಂಬ ಸುಗಂಧದ್ರವ್ಯವೆಂದು ಕೆಲವರೂ, ಪದಾರ್ಥವೇ ಗೊತ್ತಿಲ್ಲವೆಂದು ಮತ್ತೆ ಕೆಲವರೂ ಹೇಳುತ್ತಾರೆ), ಈ ಪದಾರ್ಥಗಳಿಂದ ಕಷಾ ಯಮಾಡಿ ಸಕ್ಕರೆಯನ್ನು ಸೇರಿಸಿ ಕುಡಿಸಿದಲ್ಲಿ ಬಾಯಾರಿಕೆ, ಮೈಉರಿ, ರಕ್ತ ಪಿತ್ತ, ಇವುಗಳಿಂದ ಕೂಡಿದ ಪಿತ್ತಜ್ವರವನ್ನು ಸಹ ಅಣಗಿಸುತ್ತದೆ.

ದ್ರಾಕ್ಷೆ, ಅಳಲೆಕಾಯಿ, ಗೇಕಿನಗೆಡ್ಡೆ, ಕಟುರೋಹಿಣಿ, ಬೇಟೀತೊಪ್ಪೆ, ಪರ್ಪಾಟಕ ಇವುಗಳ ಕಷಾಯಮಾಡಿ ಕುಡಿಸಿದಲ್ಲಿ ಪಿತ್ತಜ್ವರ, ಬಾಯಾರಿಕೆ, ಮೂರ್ಛೆ, ಮೈಉರಿ, ರಕ್ತಪಿತ್ತ ಇವುಗಳನ್ನು ಶಮನಮಾಡಿ ಕೆಲವು ಸಾರಿ ಪ್ರವೃತ್ತಿಯೂ ಮಾಡಿಸುತ್ತದೆ.

ಪಿತ್ತಜ್ವರವನ್ನು ಶಮನಪಡಿಸುವ ವಿಷಯದಲ್ಲಿ ಪರ್ಪಾಟಕದ ಕಷಾಯ ಒಂದೇ ಅತ್ಯುತ್ತಮ ಗುಣಕರವಾಗಿರುತ್ತದೆ. ಇದರ ಜೊತೆಗೆ ರಕ್ತಚಂದನ, ಲಾಮಂಚ, ಮುಡಿವಾಳ ಇವುಗಳನ್ನು ಸೇರಿಸಿ ಕಷಾಯಮಾಡಿದಲ್ಲಿ ಅತ್ಯುತ್ತಮ ಫಲಪ್ರದವಾಗುತ್ತದೆ, ಅನುಮಾನವಿಲ್ಲ.

**ಬೀಜಪೂರಶಿಫಾಪಥ್ಯಾನಾಗರಗ್ರಂಥಿಕೈಶ್ಶೃತಂ ॥ ೧೭ ॥**
**ಸಕ್ಷಾರಂಪಾಚನಂಶ್ಲೇಷ್ಮಜ್ವರೇದ್ವಾದಶವಾಸರೆ ॥**

ಮಾದಳದ ಬೇರು, ಅಳಲೆಕಾಯಿ, ಶುಂಠಿ, ಗ್ರಂಥಿತಗರ ಇವುಗಳ ಕಷಾಯ ಮಾಡಿ ಯವಕ್ಷಾರವನ್ನು ಕೂಡಿಸಿ ಶ್ಲೇಷ್ಮಜ್ವರದಲ್ಲಿ ಹನ್ನೆರಡು ದಿವಸ ಕಳೆದ ಮೇಲೆ ಪಾಚನೌಷಧವಾಗಿ ಉಪಯೋಗಿಸಬಹುದು.

ಭೂನಿಂಬನಿಂಬಪಿಪ್ಪಲ್ಯಕ್ಕಶೀಶುಂಠೀಶತಾವರಿ ॥ ೧೮ ॥
ಗುಡೂಚೀಬೃಹತೀಚೇತಿಕ್ವಾಥೋಹನ್ಯಾತ್ ಕಫಜ್ವರಂ ॥
ಪಟೋಲತ್ರಿಫಲಾತಿಕ್ತಾಶಠೀವಾಸಾಮೃತಾಭವಃ ॥ ೧೯ ॥
ಕ್ವಾಥೋಮಧುಯುತಃಪೀತೋಹನ್ಯಾತ್ ಕಫಕೃತಂಜ್ವರಂ ॥

ಚಿರಾಯಿತ, ಬೇವಿನತೊಪ್ಪೆ, ಹಿಪ್ಪಲಿ, ಕಚೋರ, ಆಡುಸೋಗೆಯಲೆ, ಅಮೃತಬಳ್ಳಿ, ಹೆಗ್ಗುಳ್ಳ, ಇವುಗಳ ಕಷಾಯವು ಕಫಜ್ವರವನ್ನು ಶಮನ ಮಾಡುತ್ತದೆ.

ಕೈಪಡವಲ, ತ್ರಿಫಲ, ಕಟುಕರೋಹಿಣಿ, ಕಚೋರ, ಆಡುಸೋಗೆಯಲೆ, ಅಮೃತಬಳ್ಳಿ, ಇವುಗಳ ಕಷಾಯಕ್ಕೆ ಜೇನುತುಪ್ಪ ಸೇರಿಸಿ ಕುಡಿಸಿದಲ್ಲಿ ಕಫಜ್ವರವು ನಿವೃತ್ತಿಯಾಗುತ್ತದೆ.

ಪರ್ಪಟಾಬ್ದಾಮೃತಾವಿಶ್ವಕೈರಾತೈಸ್ಸಾಧಿತಂಜಲಂ ॥ ೨೦ ॥
ಪಂಚಭದ್ರಮಿದಂಜ್ಞೇಯಂವಾತಪಿತ್ತಜ್ವರಾಪಹಂ ॥

ಪಂಚಭದ್ರಕಷಾಯ—ಪರ್ಪಾಟಕ, ತುಂಗಮುಸ್ತೆ, ಅಮೃತಬಳ್ಳಿ, ಶುಂಠಿ, ಚಿರಾಯಿತ ಇವುಗಳಿಂದ ಮಾಡಲ್ಪಟ್ಟ ಕಷಾಯಕ್ಕೆ ಪಂಚಭದ್ರ ಕಷಾಯವೆಂದು ಹೆಸರು. ಈ ಕಷಾಯವು ವಾತಪಿತ್ತದ್ವಿದೋಷಜನ್ಯಜ್ವರದಲ್ಲಿ ಉಪಯುಕ್ತವಾದದ್ದು.

ಕ್ಷುದ್ರಾಶುಂಠೀಗುಡೂಚೀನಾಂಕಷಾಯಃಪೌಷ್ಕರಸ್ಯಚ ॥ ೨೧ ॥
ಕಫವಾತಾಧಿಕೇಪೇಯೊಜ್ವರೇವಾಪಿತ್ರಿದೋಷಜೆ ॥
ಕಾಸಶ್ವಾಸಾರುಚಿಹರಃಪಾರ್ಶ್ವಶೂಲವಿನಾಶನಃ ॥ ೨೨ ॥

ನೆಲಗುಳ್ಳ, ಶುಂಠಿ, ಅಮೃತಬಳ್ಳಿ, ಪುಷ್ಕರಮೂಲ, ಇವುಗಳ ಕಷಾಯವು ಕಫ ಮತ್ತು ವಾತಪ್ರಕೋಪಜನ್ಯಜ್ವರದಲ್ಲಿಯೂ, ತ್ರಿದೋಷಪ್ರಕೋಪಜನ್ಯಜ್ವರದಲ್ಲಿಯೂ, ಕೆಮ್ಮು, ಉಬ್ಬಸ, ಅರುಚಿ, ಪಾರ್ಶ್ವಶೂಲ ಇವುಗಳಲ್ಲಿಯೂ ಉಪಯೋಗವಾಗುತ್ತದೆ.

ಆರಗ್ವಧಕಣಾಮೂಲಮುಸ್ತಾತಿಕ್ತಾಭಯಾಕೃತಃ ॥
ಕ್ವಾಥಶ್ಶಮಯತಿಕ್ಷಿಪ್ರಂಜ್ವರಂವಾತಕಫೋದ್ಭವಂ ॥ ೨೩ ॥
ಆಮಶೂಲಪ್ರಶಮನೋಭೇದೀದೀಪನಪಾಚನಃ ॥

ವಾತಕಫಜ್ವರಕ್ಕೆ ಕಷಾಯವನ್ನು ಹೇಳುತ್ತಾನೆ—ಕಕ್ಕೆಯ ಬೇರು, ಹಿಪ್ಪಲಿಯ ಬೇರು, (ಮೋಡಿ) ಭದ್ರಮುಸ್ತೆ, ಕಟುಕರೋಹಿಣಿ, ಅಳಲೆಕಾಯಿ ಇವುಗಳ ಕಷಾಯವು ವಾತಕಫಜನ್ಯವಾದ ಜ್ವರವನ್ನೂ, ಆಮಶೂಲೆಯನ್ನೂ ನಾಶಮಾಡಿ, ಅಗ್ನಿದೀಪ್ತಿಯನ್ನುಂಟುಮಾಡಿ ಜೀರ್ಣಶಕ್ತಿಯನ್ನು ಹೆಚ್ಚಿಸಿ ಮಲಪ್ರವೃತ್ತಿಯನ್ನು ಮಾಡಿಸುತ್ತದೆ.

ಅಮೃತಾರಿಷ್ಟಕಟುಕಾಮುಸ್ತೇಂದ್ರಯವನಾಗರೈಃ ॥ ೨೪ ॥
ಪಟೋಲಚಂದನಾಭ್ಯಾಂಚಪಿಪ್ಪಲೀಚೂರ್ಣಯುಕ್ಶೃತಂ ॥
ಅಮೃತಾಷ್ಟಕಮೇತಚ್ಚ ಪಿತ್ತಶ್ಲೇಷ್ಮಜ್ವರಾಪಹಂ ॥ ೨೫ ॥
ಛರ್ದ್ಯರೋಚಕಹೃಲ್ಲಾಸದಾಹತೃಷ್ಣಾವಿನಾಶನಂ ॥

ಅಮೃತಾಷ್ಟಕಕ್ವಾಥ—ಅಮೃತಬಳ್ಳಿ, ಬೇವಿನತೊಪ್ಪೆ, ಕಟುಕರೋಹಿಣಿ, ಭದ್ರಮುಸ್ತೆ, ಕೊಡಸದಚಕ್ಕೆ, ಶುಂಠಿ, ಕೈಪಡವಲ, ರಕ್ತಚಂದನ, ಈ ದ್ರವ್ಯಗಳ ಕಷಾಯವನ್ನು ಮಾಡಿಕೊಡುವುದರಿಂದ ಪಿತ್ತಶ್ಲೇಷ್ಮಜ್ವರ, ವಮನ, ಅರುಚಿ, ಬಾಯಿನೀರುಬರುವುದು, ಮೈಯ್ಯುರಿ, ಬಾಯಾರಿಕೆ, ಇವುಗಳನ್ನು ಗುಣಪಡಿಸುತ್ತದೆ.

ಪಟೋಲಂಚಂದನಂಮೂರ್ವಾತಿಕ್ತಾಪಾಠಾಮೃತಾಗಣಃ॥ ೨೬ ॥
ಪಿತ್ತಶ್ಲೇಷ್ಮಜ್ವರಚ್ಛರ್ದಿದಾಹಕಂಡೂವಿಷಾಪಹಃ ॥

ಕೈಪಡವಲ, ರಕ್ತಚಂದನ, ಕುರಟಿಗನಬೇರು, ಕಟುರೋಹಿಣಿ, ಅಗಳು ಶುಂಠಿ, ಅಮೃತಬಳ್ಳಿ, ಇವುಗಳ ಕಷಾಯವು ಪಿತ್ತಶ್ಲೇಷ್ಮಜ್ವರ, ವಮನ, ಮೈಯ್ಯುರಿ, ಮೈನವೆ, ವಿಷದೋಷ ಇವುಗಳನ್ನು ಶಮನಮಾಡುತ್ತದೆ.

ಕಂಟಕಾರಿದ್ವಯಂಶುಂಠೀಧಾನ್ಯಕಂಸುರದಾರುಚ ॥ ೨೭ ॥
ಏಭಿಶ್ಶೃತಂಪಾಚನಂಸ್ಯಾತ್ಸರ್ವಜ್ವರವಿನಾಶನಂ ॥

ಹೆಗ್ಗುಳ್ಳ, ನೆಲಗುಳ್ಳ, ಶುಂಠಿ, ಕೊತ್ತುಂಬರಿಬೀಜ, ದೇವದಾರಿಚಕ್ಕೆ ಇವುಗಳನ್ನು ಸಮಪ್ರಮಾಣದಲ್ಲಿ ಹಾಕಿ ಕಷಾಯಮಾಡಿ ಕುಡಿಸಿದಲ್ಲಿ ಸಮಸ್ತ ಜ್ವರಗಳನ್ನೂ ನಿವಾರಣಮಾಡುತ್ತದಲ್ಲದೆ ಪಾಚನವೆಂದರೆ ಜ್ವರವನ್ನು ಪಂಪಕ್ವಸ್ಥಿತಿಗೂ ತರುತ್ತದೆ.

ಶಾಲಿಪರ್ಣೀಪೃಷ್ಣಿಪರ್ಣೀಬೃಹತೀದ್ವಯಗೋಕ್ಷುರೈಃ ॥ ೨೮ ॥
ಬಿಲ್ವಾಗ್ನಿಮಂಥಶ್ಯೋನಾಕಕಾಶ್ಮರೀಪಾಟಲಾಯುತೈಃ ॥
ದಶಮೂಲಮಿತಿಖ್ಯಾತಂಕ್ವಥಿತಂತಜ್ಜಲಂಪಿಬೇತ್ ॥ ೨೯ ॥

ಪಿಪ್ಪಲೀಚೂರ್ಣಸಂಯುಕ್ತಂವಾತಶ್ಲೇಷ್ಮಜ್ವರಾಪಹಂ ||
ಸನ್ನಿಪಾತಜ್ವರಹರಂಸೂತಿಕಾದೋಷನಾಶನಂ || ೩೦ ||
ಶೋಷಶೈತ್ಯಭ್ರಮಸ್ವೇದಕಾಸಶ್ವಾಸವಿಕಾರನುತ್ ||
ಹೃತ್ಕಂಠಗ್ರಹಪಾರ್ಶ್ವಾರ್ತಿತಂದ್ರಾಮಸ್ತಕಶೂಲಹೃತ್ || ೩೧ ||

ದಶಮೂಲಕ್ವಾಥ—ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಿಲು, ಬಿಲ್ವದಚಕ್ಕೆ, ನರುವಲಚಕ್ಕೆ, ಹೆಮ್ಮರದಚಕ್ಕೆ, ಶಿವನೆಚಕ್ಕೆ, ಪಾದರಿಚಕ್ಕೆ, ಇವುಗಳಿಗೆ ಹತ್ತಕ್ಕೂ ದಶಮೂಲವೆಂದು ಹೆಸರು ಇವುಗಳ ಕಷಾಯಕ್ಕೆ ಹಿಪ್ಪಲೀ ಚೂರ್ಣವನ್ನು ಸೇರಿಸಿ ಕುಡಿಸಿದಲ್ಲಿ ವಾತಶ್ಲೇಷ್ಮಜ್ವರ, ಸನ್ನಿಪಾತಜ್ವರ, ಸೂತಿಕಾದೋಷಗಳು, ಶರೀರವು ಶೋಷಿಸಿಕೊಂಡು ಹೋಗತಕ್ಕ ಶೋಷವೆಂಬ ಹೆಸರಿನ ರೋಗ, ಥಂಡಿ, ಬುದ್ಧಿಭ್ರಮ, ಯಾವಾಗಲೂ ಮೈ ಬೆವರುತ್ತಿರುವುದು, ಕೆಮ್ಮು, ಉಬ್ಬಸ, ಎದೆಹಿಡಿದುಕೊಳ್ಳುವುದು, ಗಂಟಲು ಹಿಡಿದುಕೊಂಡು ಧ್ವನಿಕುಗ್ಗಿಹೋಗುವುದು, ಪಾರ್ಶ್ವಶೂಲೆ, ಆಕಳಿಕೆ, ತಲೆಶೂಲೆ ಇವುಗಳನ್ನೆಲ್ಲಾ ನಿವಾರಣಮಾಡುತ್ತದೆ.

ಅಭಯಾಮುಸ್ತಧಾನ್ಯಾಕರಕ್ತಚಂದನಪದ್ಮಕೈಃ ||
ವಾಸಕೇಂದ್ರಯವೋಶೀರಗುಡೂಚೀಕೃತಮಾಲಕೈಃ || ೩೨ ||
ಪಾಠಾನಾಗರತಿಕ್ತಾಭಿಃಪಿಪ್ಪಲೀಚೂರ್ಣಯುಕ್ಶೃತಂ ||
ಪಿಬೇತ್ತ್ರಿದೋಷಜ್ವರಜಿತ್ಪಿಪಾಸಾಕಾಸದಾಹನುತ್ || ೩೩ ||
ಪ್ರಲಾಪಶ್ವಾಸತಂದ್ರಾಘ್ನಂದೀಪನಂಪಾಚನಂಪರಂ ||
ವಿಣ್ಮೂತ್ರಾನಿಲವಿಷ್ಟಂಭವಮಿಶೋಷಾರುಚಿಂಜಯೇತ್ || ೩೪ ||

ಅಭಯಾದಿಕ್ವಾಥ—ಅಳಲೆಕಾಯಿನಶಿಪ್ಪೆ, ತುಂಗಮುಸ್ತೆ, ಕೊತ್ತುಂಬರಿಬೀಜ, ರಕ್ತಚಂದನ, ಪದ್ಮಕವೆಂಬ ಗಂಧಗೆಜಿನಸು, ಆಡುಸೋಗೆಸೊಪ್ಪು, ಕೊಡಸದ ತೊಪ್ಪೆ, ಲಾಮಂಚ, ಅಮೃತಬಳ್ಳಿ, ಬೇಟೇತೊಪ್ಪೆ, ಅಗಳುಶುಂಠಿ, ಕಟುಕರೋಹಿಣಿ, ಇವುಗಳ ಕಷಾಯದ ಜೊತೆಗೆ ಹಿಪ್ಪಲಿಚೂರ್ಣವನ್ನು ಸೇರಿಸಿ ಕುಡಿಸಿದಲ್ಲಿ ತ್ರಿದೋಷಜ್ವರವನ್ನು ಶಮನಗೊಳಿಸುವುದಲ್ಲದೆ, ಬಾಯಾರಿಕೆ, ಕೆಮ್ಮು, ಮೈಯುರಿ, ಜ್ಞಾನಸರಿಯಿಲ್ಲದೆ ತಪ್ಪುಮಾತಾಡುವುದು, ಉಬ್ಬಸ, ಆಕಳಿಕೆ, ಇವುಗಳನ್ನು ಕಡಮೆಮಾಡುತ್ತದೆ. ಅಗ್ನಿವೃದ್ಧಿಮಾಡಿ ಅಪಕ್ವವಾದ ಆಹಾರವನ್ನು ಪಚನಮಾಡುತ್ತದೆ. ಮಲಮೂತ್ರ ಮತ್ತು ಅಧೋವಾಯುಗಳು ಬದ್ಧವಾದರೆ ಅದನ್ನು ಕಡಮೆಮಾಡುತ್ತದೆ. ವಮನ, ಶರೀರವು ಶೋಷಿಸುವುದು, ಅರೋಚಕ ಇವುಗಳನ್ನು ಕಡಮೆಮಾಡುತ್ತದೆ.

ಪಿಪ್ಪಲೀಪಿಪ್ಪಲೀಮೂಲಚವ್ಯಚಿತ್ರಕನಾಗರೈಃ ||
ವಚಾಸಾತಿವಿಷಾಜಾಜೀಪಾಠಾವತ್ಸಕರೇಣುಕೈಃ || ೩೫ ||

ಕಿರಾತತಿಕ್ತಕಂಮೂರ್ವಾಸರ್ಷಪಾಮರಿಚಾನಿಚ ||
ಕಟುಕಂಪುಷ್ಕರಂಭಾರ್ಗೀವಿಡಂಗಂಕರ್ಕಟಾಹ್ವಯಂ || ೩೬ ||
ಅರ್ಕಮೂಲಂಬೃಹತ್ಸಿಹ್ಮೇಶ್ರೇಯಸೀಸದುರಾಲಭಾ ||
ದೀಪ್ಯಕಂಚಾಜಮೋದಾಚಶುಕನಾಸಾದಿಹಿಂಗುಭಿಃ || ೩೭ ||
ಏತಾನಿಸಮಭಾಗಾನಿಗಣೋಷ್ಟವಿಂಶಕೋಮತಃ ||
ಕಷಾಯಮುಪಭುಂಜೀತವಾತಶ್ಲೇಷ್ಮಜ್ವರಾಪಹಂ || ೩೮ ||
ಹಂತಿವಾತಂತಥಾಶೀತಂಛೇದಜಂಪ್ರಬಲಂಕಫಂ ||
ಪ್ರಲಾಪಂಚಾತಿನಿದ್ರಾಂಚರೋಮಹರ್ಷಾರುಚೀತಥಾ || ೩೯ ||
ಮಹಾವಾತೇಪತಂತ್ರೇಚಸರ್ವಗಾತ್ರೇಚಶೂನ್ಯತಾಂ ||
ಅಯಂಸರ್ವಜ್ವರಾನ್‌ಹಂತಿಸನ್ನಿಪಾತಾಂಸ್ತ್ರಯೋದಶ || ೪೦ ||

ಪಿಪ್ಪಲ್ಯಾದಿಕಷಾಯ—ಪಿಪ್ಪಲಿ, ಮೋಡಿ, ಚವ್ಯ (ಕಾಡುಮೆಣಸಿನಬಳ್ಳಿ), ಚಿತ್ರಮೂಲ, ಶುಂಠಿ, ಬಜ, ಅತಿಬಜ, ಪೋವು, ಅಗಳುಶುಂಠಿ, ಕೊಡಸ, ರೇಣುಕ, ಚಿರಾಯಿತ, ಕುರಟಿಗ, ಸಾಸುವೆ, ಮೆಣಸು, ಕಟುಕರೋಹಿಣಿ, ಪುಷ್ಕರಮೂಲ, ಗಂಟುಪರಂಗಿ, ವಾಯುವಿಳಂಗ, ಕರ್ಕಾಟಕಶೃಂಗಿ, ಯಕ್ಕಡಬೇರು, ಆಡುಸೋಗೆ, ಆಳಲೆಕಾಯಿ, ತುರಚಿ, ಸೋಪು, ಕುರಾಸಾನಿಪೋಮ, ಇಲಿಕಿವಿಗಿಡ, ಹಿಂಗು, ಈ ಪದಾರ್ಥಗಳ ಕಷಾಯವನ್ನು ಕುಡಿಸಿದರೆ ವಾತಶ್ಲೇಷ್ಮಜ್ವರವನ್ನು ಛೇದಾದ್ಯಖಿಲ ಆಗಂತುಕಾರಣಜನ್ಯವಾದ ವಾಯುವನ್ನು, ಕಫರೋಗವನ್ನು, ಪ್ರಲಾಪವೆಂದರೆ ಹುಚ್ಚುಹರಟೆ, ಅತಿಯಾದನಿದ್ರೆ, ಮೈಕೂದಲು ನೆಟ್ಟಗಾಗುವುದು, ಅರುಚಿ, ಮಹಾವಾತ, ಅಪತಂತ್ರಕವಾತ, ಶರೀರದಲ್ಲೆಲ್ಲಾ ಸ್ಪರ್ಶಜ್ಞಾನವಿಲ್ಲದಿರುವಿಕೆ, ಇವುಗಳನ್ನೆಲ್ಲಾ ಗುಣಪಡಿಸಿ ಸಮಸ್ತ ವಿಧವಾದ ಜ್ವರಗಳನ್ನೂ ಹದಿಮೂರು ವಿಧವಾದ ಸನ್ನಿಪಾತಗಳನ್ನೂ ಗುಣಪಡಿಸುತ್ತದೆ.

ಕೈರಾತಕಟುಕೀಮುಸ್ತಾಧಾನ್ಯೇಂದ್ರಯವನಾಗರೈಃ ||
ದಶಮೂಲಮಹಾದಾರುಗಜಪಿಪ್ಪಲಿಕಾಯುತೈಃ || ೪೧ ||
ಕೃತಃಕಷಾಯಃಪಾರ್ಶ್ವಾರ್ತಿಸನ್ನಿಪಾತಜ್ವರಂಜಯೇತ್ ||
ಕಾಸಶ್ವಾಸವಮೀಹಿಕ್ಕಾತಂದ್ರಾಹೃದ್ಗ್ರಹನಾಶನಃ || ೪೨ ||

ಚಿರಾಯಿತ, ಕಟುರೋಹಿಣಿ, ತುಂಗಮುಸ್ತೆ, ಕೊತ್ತುಂಬರಿ, ಕೊಡಸದ ಚಕ್ಕೆ, ಶುಂಠಿ, ಹಿಂದೆ ದಶಮೂಲಕಷಾಯದ ಪ್ರಕರಣದಲ್ಲಿ ಹೇಳಿದ ದಶಮೂಲಗಳು, ದೊಡ್ಡಮರದಚಕ್ಕೆ, ಆನೆಪಿಪ್ಪಲಿ, ಇವುಗಳ ಕಷಾಯವು—ಪಕ್ಕನೋವು, ಸನ್ನಿಪಾತಜ್ವರ, ಕೆಮ್ಮು, ಉಬ್ಬಸ, ವಾಂತಿ, ಬಿಕ್ಕಳಿಕೆ, ಆಕಳಿಕೆ, ಹೃದಯಶೂಲೆ, ಎದೆಹಿಡಿದುಕೊಳ್ಳುವುದು, ಇವುಗಳನ್ನು ಗುಣಪಡಿಸುತ್ತವೆ.

ಕಟ್ಫಲಾಂಬುದಭಾರ್ಗೀಭಿಧಾನ್ಯರೋಹಿಷಪರ್ಪಟೈಃ ||
ವಚಾಹರೀತಕೀಶೃಂಗೀದೇವದಾರುಮಹೌಷಧೈಃ || ೮೩ ||
ಹಿಕ್ಕಾಂಕಾಸಜ್ವರಂಹಂತಿಶ್ವಾಸಶ್ಲೇಷ್ಮಗಲಗ್ರಹಾನ್ ||
ಕ್ವಾಥೋಜೀರ್ಣಜ್ವರಂಹಂತಿಗುಡೂಚ್ಯಾಪಿಪ್ಪಲೀಯುತಃ || ೮೪ ||
ತಥಾಪರ್ಪಟಜಃಕ್ವಾಥಃಪಿತ್ತಜ್ವರಹರಃಪರಃ ||
ಕಿಂಪುನರ್ಯದಿಯುಜ್ಯೇತಚಂದನೋಶೀರವಾಲಕೈಃ || ೮೫ ||

ಕಾಯಿಫಲಚಕ್ಕೆ, ಭದ್ರಮುಸ್ತೆ, ಗಂಟುಪರಂಗಿ, ಕೊತ್ತುಂಬರಿ, ರೋಹಿಷ ವೆಂಬ ಹುಲ್ಲು, ಪರ್ಪಾಟಕ, ಬಜೆ, ಅಳಲೆಕಾಯಿ, ಕರ್ಕಾಟಕಶೃಂಗಿ, ದೇವ ದಾರೀಚಕ್ಕೆ, ಸುಂಠಿ, ಇವುಗಳ ಕಷಾಯವು—ಬಿಕ್ಕಳಿಕೆ, ಕೆಮ್ಮಿನಿಂದ ಕೂಡಿದ ಜ್ವರ, ಉಬ್ಬಸ, ಶ್ಲೇಷ್ಮವೃದ್ಧಿ, ಗಂಟಲುಹಿಡಿದುಕೊಳ್ಳುವುದು, ಇವುಗಳನ್ನು ಗುಣಪಡಿಸುತ್ತದೆ. ಅಮೃತಬಳ್ಳಿ ಮತ್ತು ಹಿಪ್ಪಲಿ ಇವುಗಳ ಕಷಾಯವು ಜೀರ್ಣ ಜ್ವರವನ್ನು ಗುಣಪಡಿಸುತ್ತದೆ. ಪರ್ಪಾಟಕ, ರಕ್ತಚಂದನ, ಲಾಮಂಚ, ಮುಡಿ ವಾಳ, ಶುಂಠಿ, ಇವುಗಳ ಕಷಾಯ ಪಿತ್ತಜ್ವರವನ್ನು ನಿವಾರಣೆಮಾಡುವ ವಿಷಯ ದಲ್ಲಿ ಅತ್ಯುತ್ತಮವಾದದ್ದು.

ನಿದಿಗ್ಧಿಕಾಮೃತಾಶುಂಠೀಕಷಾಯಂಪಾಯಯೇದ್ಭಿಷಕ್ ||
ಪಿಪ್ಪಲೀಚೂರ್ಣಸಂಯುಕ್ತಂಶ್ವಾಸಕಾಸಾರ್ದಿತಾಪಹಂ || ೮೬ ||
ಪೀನಸಾರುಚಿವೈಸ್ವರ್ಯಶೂಲಾಜೀರ್ಣಜ್ವರಚ್ಛಿದಂ ||

ನಿದಿಗ್ಧಿಕಾದಿಕಷಾಯ (ನೆಲಗುಳ್ಳದ ಕಷಾಯ)—ನೆಲಗುಳ್ಳ, ಅಮೃತಬಳ್ಳಿ, ಶುಂಠಿ, ಇವುಗಳ ಕಷಾಯದ ಜೊತೆಗೆ ಹಿಪ್ಪಲಿಯ ಚೂರ್ಣವನ್ನು ಸೇರಿಸಿ ಕುಡಿ ಸುವುದರಿಂದ ಉಬ್ಬಸ, ಕೆಮ್ಮು, ಅರ್ದಿತವೆಂಬ ವಾತ, ನೆಗಡಿ, ಅರೋಚಕ, ಸ್ವರಭಂಗಶೂಲೆ, ಅಜೀರ್ಣಜ್ವರ ಇವುಗಳನ್ನು ಪರಿಹರಿಸುತ್ತದೆ.

ದೇವದಾರುವಚಾಕುಷ್ಠಂಪಿಪ್ಪಲೀವಿಶ್ವಭೇಷಜಂ || ೮೭ ||
ಕಟ್ಫಲಂಮುಸ್ತಭೂನಿಂಬತಿಕ್ತಾಧಾನ್ಯಾಹರೀತಕೀ ||
ಗಜಕೃಷ್ಣಾಚದುಸ್ಪರ್ಶಾಗೋಕ್ಷುರುರ್ಧನ್ವಯಾಸಕಂ || ೮೮ ||
ಬೃಹತ್ಯತಿವಿಷಾಚ್ಛಿನ್ನಾಕರ್ಕಟಂಕೃಷ್ಣಜೀರಕಂ ||
ಕ್ವಾಥಮಷ್ಟಾವಶೇಷಂತುಪ್ರಸೂತಾಂಪಾಯಯೇತ್ಸ್ತ್ರಿಯಂ||೮೯
ಶೂಲಕಾಸಜ್ವರಶ್ವಾಸಮೂರ್ಛಾಕಂಪಶಿರೋರ್ತಿಜಿತ್ ||

ದೇವದಾರ್ವ್ಯಾದಿಕ್ವಾಥ—ದೇವದಾರಿಚಕ್ಕೆ. ಬಜೆ, ಚಂಗಲಕೋಷ್ಟ, ಹಿಪ್ಪಲಿ, ಶುಂಠಿ, ಕಾಯಿಫಲಚಕ್ಕೆ, ತುಂಗೇಗೆಡ್ಡೆ, ಕಟುರೋಹಿಣಿ, ಚಿರಾಯಿತ, ಕೊತ್ತುಂ

ಬರಿಬೀಜ, ಅಳಲೆಕಾಯಿ, ಆನೆಹಿಪ್ಪಲಿ, ತುರಚಿ, ನೆಗ್ಗಲು, ಗಂಡುತುರಚಿ, ಹೆಗ್ಗುಳ್ಳ, ಅತಿಬಜೆ, ಅಮೃತಬಳ್ಳಿ, ಕರ್ಕಟಶೃಂಗಿ, ಕರಿಜೀರಿಗೆ, ಇವುಗಳನ್ನೆಲ್ಲಾ ಹಾಕಿ ಅಷ್ಟಮಾಂಶ ಕಷಾಯಮಾಡಿ ಸ್ತ್ರೀಯರು ಜನನವಾದಾಗ್ಯೆ ಕೊಡುವುದಕ್ಕೆ ಉಪಯುಕ್ತವಾಗುತ್ತದೆ. ಶೂಲೆ, ಕೆಮ್ಮು, ಜ್ವರ, ಉಬ್ಬಸ, ಮೂರ್ಛೆ, ನಡುಗು (ಕಂಪವಾತ), ತಲೆನೋವು ಇವುಗಳನ್ನು ಶಮನಮಾಡುತ್ತದೆ.

ಕ್ಷುದ್ರಾಧಾನ್ಯಕಶುಂಠೀಭಿರ್ಗುಡೂಚೀಮುಸ್ತಪದ್ಮಕೈಃ ॥ ೫೦ ॥
ರಕ್ತಚಂದನಭೂನಿಂಬಪಟೋಲವೃಷಪೌಷ್ಕರೈಃ ॥
ಕಟುಕೇಂದ್ರಯವಾರಿಷ್ಟಭಾರ್ಗೀಪರ್ಪಟಕೈಸ್ಸಮೈಃ ॥ ೫೧ ॥
ಕ್ವಾಥಂಪ್ರಾತರ್ನಿಷೇವೇತಸರ್ವಶೀತಜ್ವರಚ್ಛಿದಂ ॥

ಕ್ಷುದ್ರಾದಿಕಷಾಯ —ನೆಲಗುಳ್ಳ, ಕೊತ್ತುಂಬರಿ, ಶುಂಠಿ, ಅಮೃತಬಳ್ಳಿ, ತುಂಗಮುಸ್ತೆ, ಪದ್ಮಕವೆಂಬ ಗಂದಿಗೆಜಿನಸು, ರಕ್ತಚಂದನ, ಚಿರಾಯಿತ, ಕೈಪಡವಲ, ಆಡುಸೋಗೆ, ಪುಷ್ಕರಮೂಲ, ಕಟುಕರೋಹಿಣಿ, ಕೊಡಸದ ತೊಪ್ಪೆ, ಬೇವಿನತೊಪ್ಪೆ, ಗಂಟುಭಾರಂಗಿ, ಪರ್ಪಾಟಕ. ಇವುಗಳ ಸಮಾಂಶ ಕಷಾಯವನ್ನು ಬೆಳಗಿನ ಹೊತ್ತಿನಲ್ಲಿ ಕುಡಿಸಿದಲ್ಲಿ ಸಮಸ್ತ ವಿಧವಾದ ಶೀತಜ್ವರಗಳೂ ಗುಣಹೊಂದುತ್ತವೆ.

ಮುಸ್ತಾಕ್ಷುದ್ರಾಮೃತಾಶುಂಠೀಧಾತ್ರೀಕ್ವಾಥಸ್ಸಮಾಕ್ಷಿಕಃ ॥ ೫೨ ॥
ಪಿಪ್ಪಲೀಚೂರ್ಣಸಂಯುಕ್ತೋವಿಷಮಜ್ವರನಾಶನಃ ॥
ಪಟೋಲೇಂದ್ರಯವಾದಾರುತ್ರಿಫಲಾಮುಸ್ತಗೋಸ್ತನೈಃ ॥ ೫೩ ॥
ಮಧುಕಾಮೃತವಾಸಾನಾಂಕ್ವಾಥಂಕ್ಷೌದ್ರಯುತಂಪಿಬೇತ್ ॥
ಸಂತತೇಸತತೇಚೈವದ್ವಿತೀಯಕತೃತೀಯಕೆ ॥ ೫೪ ॥
ಐಕಾಹಿಕೇವಾವಿಷಮೇದಾಹಪೂರ್ವೇನವಜ್ವರೇ ॥

ವಿಷಮಜ್ವರಹರಕಷಾಯ—ಭದ್ರಮುಸ್ತೆ, ನೆಲಗುಳ್ಳ, ಅಮೃತಬಳ್ಳಿ, ಶುಂಠಿ, ನೆಲ್ಲಿಕಾಯಿ ಇವುಗಳ ಕಷಾಯಮಾಡಿ ಜೇನು ಮತ್ತು ಹಿಪ್ಪಲಿಯ ಚೂರ್ಣ ಇವುಗಳೊಡನೆ ಕೂಡಿಸಿ ಕುಡಿಸಿದಲ್ಲಿ ವಿಷಮಜ್ವರವನ್ನು ಸಹ ಶಮನಮಾಡುತ್ತದೆ.

ಕೈಪಡವಲ, ಕೊಡಸದ ಚಕ್ಕೆ, ದೇವದಾರುಚಕ್ಕೆ, ತ್ರಿಫಲ (ಅಂದರೆ ಅಳಲೆಕಾಯಿ, ತಾರೇಕಾಯಿ, ನೆಲ್ಲಿಕಾಯಿ), ಭದ್ರಮುಸ್ತೆ, ದ್ರಾಕ್ಷೆ, ಜ್ಯೇಷ್ಠಮಧು, ಅಮೃತಬಳ್ಳಿ, ಆಡುಸೋಗೆ ಇವುಗಳ ಕಷಾಯಮಾಡಿ ಜೇನು ಸೇರಿಸಿ ಕುಡಿಯುವುದಕ್ಕೆ ಕೊಟ್ಟಲ್ಲಿ ಸಂತತಜ್ವರ, ಸತತಜ್ವರ, ದ್ವಿತೀಯಕ, ತೃತೀಯಕ, ಒಂದು ದಿನ ಬಿಟ್ಟು ಬರುವ ಜ್ವರ, ವಿಷಮಜ್ವರ, ದಾಹಪೂರ್ವಕಜ್ವರವೆಂದರೆ ಉರಿಜ್ವರ, ನವಜ್ವರವೆಂದರೆ ಹೊಸಜ್ವರ ಇವುಗಳೆಲ್ಲವೂ ಬಿಟ್ಟುಹೋಗುವವು.

**ಪಟೋಲತ್ರಿಫಲಾನಿಂಬದ್ರಾಕ್ಷಾಶಮ್ಯಾಕವಾಸಕೈಃ || ೫೫ ||**
**ಕ್ವಾಥಸ್ಸಿತಾಮಧುಯುತೋಜಯೇದೈಕಾಹಿಕಂಜ್ವರಂ ||**

ಕೈವಿಡವಲ ತ್ರಿಫಲ(ಹಿಂದೆ ಹೇಳಿದೆ), ಬೇವಿನತೊಪ್ಪು, ದ್ರಾಕ್ಷಿ, ಕಕ್ಕೆತೊಪ್ಪೆ, ಆಡುಸೋಗೆಯ ಸೊಪ್ಪು, ಇವುಗಳ ಕಷಾಯದ ಜೊತೆಗೆ ಸಕ್ಕರೆ ಮತ್ತು ಜೇನು ತುಪ್ಪ ಸಹ ಸೇರಿ , ಏಕಾಹಿಕಜ್ವರನಿವಾರಣೆಗೆ ಕುಡಿಸುವುದೆಂದು ತಿಳಿಯುವುದು.

**ಗುಡೂಚೀಧಾನ್ಯಮುಸ್ತಾಭಿಶ್ಚಂದನೋಶೀರನಾಗರೈಃ || ೫೬ ||**
**ಕೃತಂಕಾಷಂಪಿಬೇತ್‌ಕ್ಷೌದ್ರಸಿತಾಯುಕ್ತಂಜ್ವರಾತುರಃ ||**
**ತೃತೀಯಜ್ವರನಾಶಾಯತೃಷ್ಣಾದಾಹನಿವಾರಣಂ || ೫೭ ||**

ಅಮೃತಬಳ್ಳಿ, ಕೊತ್ತುಂಬರಿಬೀಜ, ಭದ್ರಮುಸ್ತೆ, ರಕ್ತಚಂದನ, ಮುಡಿವಾಳ, ಶುಂಠಿ, ಇವುಗಳನ್ನು ಸಮಭಾಗ ಸೇರಿಸಿ ಕಷಾಯಮಾಡಿ ಸಕ್ಕರೆ ಮತ್ತು ಜೇನುತುಪ್ಪ ಸಹ ಸೇರಿಸಿ ಜ್ವರಪೀಡಿತನಾದವನು ಕುಡಿಯುತ್ತ ಬಂದರೆ ತೃತೀಯಕ ಜ್ವರ, ಬಾಯಾರಿಕೆ, ಮೈಯ್ಯುರಿ ಇವುಗಳು ನಿವಾರಣವಾಗುತ್ತವೆ.

**ದೇವದಾರುಶಿವಾವಾಸಾಶಾಲಿಪರ್ಣೀಮಹೌಷಧೈಃ ||**
**ಧಾತ್ರೀಯುತಂಶೃತಂಶೀತಂದದ್ಯಾನ್ಮಧುಸಿತಾಯುತಂ || ೫೮ ||**
**ಚಾತುರ್ಥಿಕಜ್ವರೇಶ್ವಾಸೇಕಾಸೇಮಂದಾನಲೇತಥಾ ||**

ದೇವದಾರುಚಕ್ಕೆ, ಅಳಲೆಕಾಯಿ, ಆಡುಸೋಗೇ ಸೊಪ್ಪು, ಒಂದೆಲೆಹೊನ್ನೆ, ಶುಂಠಿ, ನೆಲ್ಲಿಕಾಯಿ, ಇವುಗಳ ಕಷಾಯಮಾಡಿ, ಜೇನುತುಪ್ಪ ಮತ್ತು ಸಕ್ಕರೆ ಸೇರಿಸಿ ಕುಡಿಸಿದರೆ ಚಾತುರ್ಥಿಕಜ್ವರ, ಉಬ್ಬಸ, ಕೆಮ್ಮು, ಅಗ್ನಿಮಾಂದ್ಯ ಇವುಗಳನ್ನು ನಿವಾರಣವಾಡುತ್ತದೆ.

**ಗುಡೂಚೀಧಾನ್ಯಕೋಶೀರಶುಂಠೀವಾಲಕಪರ್ಪಟೈಃ || ೫೯ ||**
**ಬಿಲ್ವಪ್ರತಿವಿಷಾಪಾಠಾರಕ್ತಚಂದನವತ್ಸಕೈಃ ||**
**ಕಿರಾತಮುಸ್ತೇಂದ್ರಯವೈಃಕ್ವಥಿತಂಶಿಶಿರಂಪಿಬೇತ್ || ೬೦ ||**
**ಸಕ್ಷೌದ್ರಂರಕ್ತಪಿತ್ತಘ್ನಂಜ್ವರಾತೀಸಾರನಾಶನಂ ||**

ಜ್ವರಾತಿಸಾರಕ್ಕೆ—ಅಮೃತಬಳ್ಳಿ, ಕೊತ್ತುಂಬರಿಬೀಜ, ಮುಡಿವಾಳ, ಶುಂಠಿ, ಲಾಮಂಚ, ಪರ್ಪಾಟಕ, ಬಿಲ್ವದಚಕ್ಕೆ, ಅತಿಬಜೆ, ಅಗಳುಶುಂಠಿ, ರಕ್ತಚಂದನ, ಕೊಡಸದಚಕ್ಕೆ, ಕಿರಾಯಿತ, ಭದ್ರಮುಸ್ತೆ, ಕೊಡಸದಬೀಜ ಇವುಗಳ ಕಷಾಯ ಮಾಡಿ ತಣಗಾದ ಮೇಲೆ ಜೇನುತುಪ್ಪ ಸೇರಿಸಿ ಕುಡಿಸಿದರೆ ರಕ್ತಪಿತ್ತ (ಊರ್ಧ್ವಾ

ಘೋದ್ವಾರಗಳಲ್ಲಿ ರಕ್ತಹೋಗುವುದು)ಜ್ವರದಿಂದ ಕೂಡಿದ ಅತಿಸಾರ ಇವುಗಳನ್ನು ಗುಣಪಡಿಸುತ್ತದೆ.

**ನಾಗರಂಕುಟಜೋಮುಸ್ತಮಮೃತಾತಿವಿಷಾತಥಾ ॥ ೬೧ ॥**
**ಏಭಿಃಕೃತಂಪಿಬೇತ್ ಕ್ವಾಥಂಜ್ವರಾತೀಸಾರನಾಶನಂ ॥**

ಶುಂಠಿ, ಕೊಡಸದ ಚಕ್ಕೆ, ಭದ್ರಮುಸ್ತೆ, ಅಮೃತಬಳ್ಳಿ, ಅತಿಬಜೆ, ಇವುಗಳಿಂದ ಕಷಾಯಮಾಡಿ ಕುಡಿದರೆ ಜ್ವರದಿಂದ ಕೂಡಿದ ಅತಿಸಾರವು ಶಮನವಾಗುತ್ತದೆ.

**ಧಾನ್ಯಬಾಲಕಬಿಲ್ವಾಬ್ದನಾಗರೈಸ್ಸಾಧಿತಂಜಲಂ ॥ ೬೨ ॥**
**ಆಮಶೂಲಹರಂಗ್ರಾಹಿದೀಪನಂಪಾಚನಂಪರಂ ॥**

ಕೊತ್ತುಂಬರಿಬೀಜ, ಲಾಮಂಚ, ಬಿಲ್ವದತೊಪ್ಪೆ, ತುಂಗಮುಸ್ತೆ, ಶುಂಠಿ, ಇವುಗಳ ಕಷಾಯಮಾಡಿ ಕುಡಿಸಿದಲ್ಲಿ ಆಮಾಭಿವೃದ್ಧಿಯಿಂದ ಬರುವ ಹೊಟ್ಟೆಶೂಲೆಯನ್ನು ಗುಣಪಡಿಸುವುದಲ್ಲದೆ, ಅಗ್ನಿದೀಪನವಾಗಿಯೂ, ಪಾಚನವೆಂದರೆ ಶರೀರಗತವಾಗಿ ಅಪಕ್ವವಾಗಿರುವ ಮಲಗಳನ್ನು ಪಕ್ವಸ್ಥಿತಿಗೆ ತರತಕ್ಕದ್ದಾಗಿಯೂ, ಗ್ರಾಹಿ ಅಂದರೆ ಮಲಪ್ರವೃತ್ತಿ ಅಧಿಕವಾಗಿದ್ದಲ್ಲಿ ಅದನ್ನು ಕಡಮೆಮಾಡುವುದಾಗಿಯೂ ಇರುತ್ತದೆ.

**ಧಾನ್ಯನಾಗರಜಃಕ್ವಾಥಃಪಾಚನೋದೀಪನಸ್ತಥಾ ॥ ೬೩ ॥**
**ಏರಂಡಮೂಲಯುಕ್ತಶ್ಚಜಯೇದಾಮಾನಿಲವ್ಯಥಾಂ ॥**

ಆಮವಾತಕ್ಕೆ ಕಷಾಯ.—ಕೊತ್ತುಂಬರಿಬೀಜ, ಶುಂಠಿ, ಹರಳಿನಬೇರು, ಇವುಗಳ ಕಷಾಯವನ್ನು ಕುಡಿಸಿದಲ್ಲಿ ಆಮವಾತವೆಂದರೆ ಕೈಕಾಲು ಗಂಟುಗಳಲ್ಲಿ ಹುಟ್ಟುವ ನೋವನ್ನು ತೊಲಗಿಸುವುದಲ್ಲದೆ ಅಗ್ನಿದೀಪಕವಾಗಿಯೂ ಪಾಚಕವಾಗಿಯೂ ಇರುತ್ತದೆ.

**ವತ್ಸಕಾತಿವಿಷಾಬಿಲ್ವಮುಸ್ತಬಾಲಕಜಃಶೃತಃ ॥ ೬೪ ॥**
**ಅತೀಸಾರಂಜಯೇತ್ಸಾಮಂಚಿರಜಂರಕ್ತಶೂಲಜಿತ್ ॥**

ಕೊಡಸದಬೀಜ, ಅತಿಬಜೆ, ಬಿಲ್ವದಚಕ್ಕೆ, ಭದ್ರಮುಸ್ತೆ, ಲಾಮಂಚ, ಇವುಗಳ ಕಷಾಯವು ಬಹಳ ಕಾಲದ ಆಮಾತಿಸಾರವನ್ನು ಗುಣಪಡಿಸುವುದಲ್ಲದೆ, ರಕ್ತಾತಿಸಾರ ಮತ್ತು ಅದರಿಂದ ಹುಟ್ಟಿದ ಹೊಟ್ಟೆಶೂಲೆಯನ್ನು ಸಹ ಗುಣಪಡಿಸುತ್ತದೆ.

**ಕುಟಜಾತಿವಿಷಾಪಾಠಾಧಾತಕೀಲೋಧ್ರಮುಸ್ತಕೈಃ ॥ ೬೫ ॥**
**ಹ್ರೀಬೇರದಾಡಿಮಯುತೈಃಕೃತಃಕ್ವಾಥಸ್ಸಮಾಕ್ಷಿಕಃ ॥**

ಪೇಯೋನೋಚರಸೇನ್ಯೈವಕುಟಜಾಷ್ಟಕಸಂಜ್ಞಕಃ ॥ ೬೬ ॥
ಅತೀಸಾರಾಂಜಯೇದ್ದ್ವಾಹರಕ್ತಶೂಲಾಮದುಸ್ತರಾನ್ ॥

ಕೊಡಸದಚಕ್ಕೆ, ಅತಿಬಜೆ, ಅಗಳುಶುಂಠಿ, ಧಾತಕೀಕುಸುಮ, ಲೋಧ್ರದ ಚಕ್ಕೆ (ಪತಂಗದ ಚಕ್ಕೆ), ಭದ್ರಮುಸ್ತೆ, ಮುಡಿವಾಳ, ದಾಳಿಂಬರೆಚಕ್ಕೆ, ಇವುಗಳ ಕಷಾಯಕ್ಕೆ ಬೂರಗದನಿರ್ಯಾಸವೆಂದರೆ ಮೇಣವನ್ನು ಕೂಡಿಸಿ ಜೇನುತುಪ್ಪ ಸಹಿತವಾಗಿ ಕುಡಿಸಿದರೆ ವೈಯ್ಯುರಿ. ರಕ್ತಪ್ರವೃತ್ತಿ, ಶೂಲೆ, ಇವುಗಳಿಂದ ಕೂಡಿದ ಭಯಂಕರಗಳಾದ ಅತಿಸಾರಗಳನ್ನೆಲ್ಲಾ ನಿವಾರಣಮಾಡುತ್ತದೆ.

ಹ್ರೀಬೇರಧಾತಕೀಲೋಧ್ರಪಾಠಾಲಜ್ಜಾಲುವತ್ಸಕೈಃ ॥ ೬೭ ॥
ಧಾನ್ಯಕಾತಿವಿಷಾಮುಸ್ತಾಗುಡೂಚೀಬಿಲ್ವನಾಗರೈಃ ॥
ಕೃತಃಕಷಾಯಶ್ಶಮಯೇದತೀಸಾರಂಚಿರೋತ್ಥಿತಂ ॥ ೬೮ ॥
ಅರೋಚಕಾಮಶೂಲಾಸ್ರಜ್ವರಘ್ನಃಪಾಚನಸ್ಮೃತಃ ॥

ಲಾಮಂಚ, ಧಾತಕೀಕುಸುಮ, ಪತಂಗದಚಕ್ಕೆ, ಅಗಳುಶುಂಠಿ, ಮುಟ್ಟಿದರೆ ಮುನಿಯ, ಕೊಡಸದಚಕ್ಕೆ, ಕೊತ್ತುಂಬರಿಬೀಜ, ಅತಿಬಜೆ, ತುಂಗಮುಸ್ತೆ, ಅಮೃತಬಳ್ಳಿ, ಬಿಲ್ವದಚಕ್ಕೆ, ಶುಂಠಿ, ಇವುಗಳನ್ನು ಸಮಪ್ರಮಾಣದಲ್ಲಿ ಸೇರಿಸಿ ಮಾಡಿದ ಕಷಾಯವು ಹಳೆಯದಾದ ಅತಿಸಾರ, ಅರುಚಿ, ಆಮಶೂಲೆ ಅಂದರೆ ಅಜೀರ್ಣದ ಹೊಟ್ಟೆನೋವು, ರಕ್ತಾತಿಸಾರ, ಜ್ವರ, ಇವುಗಳನ್ನು ನಿವಾರಣೆಮಾಡಿ ದೇಹಗತವಾದ ಆಮದೋಷಗಳು ಪಕ್ವವಾಗುವಂತೆ ಮಾಡುತ್ತದೆ.

ಧಾತಕೀಬಿಲ್ವಲೋಧ್ರಾಣಿವಾಲಕಂಗಜಪಿಪ್ಪಲೀ ॥ ೬೯ ॥
ಏಭಿಃಕೃತಂಶೃತಂಶೀತಂಶಿಶುಭ್ಯಃಕ್ಷೌದ್ರಸಂಯುತಂ ॥
ಪ್ರದದ್ಯಾದವಲೇಹಂವಾಸರ್ವಾತೀಸಾರಶಾಂತಯೆ ॥ ೭೦ ॥

ಧಾತಕೀಕುಸುಮ, ಬಿಲ್ವದಚಕ್ಕೆ, ಪತಂಗದಚಕ್ಕೆ, ಲಾಮಂಚ, ದೊಡ್ಡ ಹಿಪ್ಪಲಿ, ಇವುಗಳನ್ನು ಸಮಾಂಶ ಸೇರಿಸಿ ಕಷಾಯಮಾಡಿ ಆರಿದ ಮೇಲೆ ಜೇನು ತುಪ್ಪವನ್ನು ಸೇರಿಸಿ ಕುಡಿಸಿದಲ್ಲಿ ಮಕ್ಕಳಿಗೆ ಸಂಭವಿಸುವ ಎಲ್ಲ ವಿಧವಾದ ಅತಿ ಸಾರವೂ ಗುಣವಾಗುವುದು. ಮೇಲೆ ಹೇಳಿದ ಕಷಾಯವನ್ನೇ ಲೇಹದಂತೆ ಯಾದರೂ ಮಾಡಿ ಮೇಲೆ ಹೇಳಿದ ರೋಗಗಳಿಗೇನೇ ಮಕ್ಕಳುಗಳಿಗೆ ಕೊಡ ಬಹುದು.

ಶಾಲಿಪರ್ಣೀಬಲಾಬಿಲ್ವಧಾನ್ಯಶುಂಠೀಕೃತಃಶೃತಃ ॥
ಆಧ್ಮಾನಶೂಲಸಹಿತಾಂವಾತಜಾಂಗ್ರಹಣೀಂಜಯೇತ್ ॥ ೭೧ ॥

**ಗುಡೂಚ್ಯತಿವಿಷಾಶುಂಠೀಮುಸ್ತೈಃ ಕ್ವಾಥಃ ಕೃತೋಜಯೇತ್ ॥**
**ಆಮಾನುಷಕ್ತಾಂ ಗ್ರಹಣೀಂ ಗ್ರಾಹೀ ಪಾಚನದೀಪನಃ ॥ ೭೨ ॥**

ಒಂದೆಲೆಹೊನ್ನೆ, ಕಳ್ಳಂಗಡ್ಲೆ, ಬಿಲ್ವದಬೇರು, ಕೊತ್ತುಂಬರಿ, ಶುಂಠಿ, ಇವುಗಳ ಕಷಾಯವು ಹೊಟ್ಟೆಯುಬ್ಬರ, ಶೂಲ, ವಾಯುಪ್ರಕೋಪದಿಂದ ಹುಟ್ಟಿದ ಗ್ರಹಣಿ (ಅತಿಸಾರ) ಇವುಗಳನ್ನು ಗುಣಪಡಿಸುತ್ತದೆ. ಅಮೃತಬಳ್ಳಿ, ಅತಿಬಜೆ, ಶುಂಠಿ, ಭದ್ರಮುಸ್ತೆ, ಇವುಗಳ ಕಷಾಯವು ಅಜೀರ್ಣದಿಂದ ಹುಟ್ಟಿದ ಭೇದಿಯನ್ನು ನಿಲ್ಲಿಸುವುದಲ್ಲದೆ ಅಗ್ನಿವರ್ಧಕವಾಗಿಯೂ, ಮಲಬಂಧಮಾಡತಕ್ಕದ್ದಾಗಿಯೂ, ಪಾಚನವೆಂದರೆ ಅಪಕ್ವವಾದ ಆಹಾರಗಳನ್ನು ಪಕ್ವಮಾಡತಕ್ಕದ್ದಾಗಿಯೂ ಇರುತ್ತದೆ.

**ಯವಧಾನ್ಯಪಟೋಲಾನಾಂ ಕ್ವಾಥಸ್ಸಕ್ಷೌದ್ರಶರ್ಕರಃ ॥**
**ಯೋಜ್ಯಸ್ಸರ್ವಾತಿಸಾರೇಷು ಬಿಲ್ವಾಮ್ರಾಸ್ಥಿಭವಸ್ತಥಾ ॥ ೭೩ ॥**

ಯವವೆಂದರೆ ಕೊಡಸದಬೀಜ, ಕೊತ್ತುಂಬರಿಬೀಜ, ಕೈಪಡವಲ, ಇವುಗಳ ಕಷಾಯಕ್ಕೆ ಜೇನುತುಪ್ಪ, ಸಕ್ಕರೆ ಸೇರಿಸಿ ಕೊಟ್ಟರೆ ಸಮಸ್ತ ವಿಧವಾದ ಅತಿಸಾರರೋಗವೂ ಗುಣ ಬಿಲ್ವದ ತಿರಳು, ಮಾವಿನತಿರಳು, ಇವುಗಳ ಕಷಾಯವೂ ಮೇಲಿನದರಷ್ಟೇ ಹಿತಕರವಾದದ್ದು.

**ತ್ರಿಫಲಾದೇವದಾರುಶ್ಚ ಮುಸ್ತಾ ಮೂಷಕಪರ್ಣಿಕಾ ॥**
**ಶಿಗ್ರುರೇತೈಃ ಕೃತಃ ಕ್ವಾಥಃ ಪಿಪ್ಪಲೀಚೂರ್ಣಸಂಯುತಃ ॥ ೭೪ ॥**
**ವಿಡಂಗಚೂರ್ಣಯುಕ್ತಶ್ಚ ಕ್ರಿಮಿಘ್ನಃ ಕ್ರಿಮಿರೋಗಹಾ ॥**
**ಫಲತ್ರಿಕಾಮೃತಾತಿಕ್ತಾನಿಂಬಕೈರಾತವಾಸಕೈಃ ॥ ೭೫ ॥**
**ಜಯೇನ್ಮಧುಯುತಃ ಕ್ವಾಥಃ ಕಾಮಲಾಂ ಪಾಂಡುತಾಂ ತಥಾ ॥**

ತ್ರಿಫಲ (ಹಿಂದೆ ಹೇಳಿದೆ), ದೇವದಾರುಚಕ್ಕೆ, ಭದ್ರಮುಸ್ತೆ, ಇಲಿಕಿವಿಸೊಪ್ಪು, ನುಗ್ಗಿಚಕ್ಕೆ, ಇವುಗಳ ಕಷಾಯಕ್ಕೆ ಹಿಪ್ಪಲಿಯ ಚೂರ್ಣವನ್ನೂ ವಾಯುವಿಡಂಗ ಚೂರ್ಣವನ್ನೂ ಸೇರಿಸಿ ತೆಗದುಕೊಂಡರೆ ಹೊಟ್ಟೆಯಲ್ಲಿರುವ ಹುಳಗಳನ್ನೂ, ಕ್ರಿಮಿರೋಗವನ್ನೂ ಶಮನಮಾಡುತ್ತದೆ. ತ್ರಿಫಲ (ಹಿಂದೆ ಹೇಳಿದೆ), ಅಮೃತಬಳ್ಳಿ, ಚಿರಾಯಿತ, ಕಟುರೋಹಿಣಿ, ಬೇವಿನತೊಪ್ಪ, ಆಡುಸೋಗೇ ಸೊಪ್ಪು, ಇವುಗಳ ಕಷಾಯವು ಕಾಮಲಾರೋಗ ಮತ್ತು ಪಾಂಡುರೋಗಗಳನ್ನು ಗುಣಮಾಡುತ್ತದೆ.

**ಪುನರ್ನವಾಭಯಾನಿಂಬದಾರ್ವೀತಿಕ್ತಾಪಟೋಲಕೈಃ ॥ ೭೬ ॥**
**ಗುಡೂಚೀನಾಗರಯುತೈಃ ಕ್ವಾಥೋ ಗೋಮೂತ್ರಸಂಯುತಃ ॥**
**ಪಾಂಡುಕಾಸೋದರಶ್ವಾಸಶೂಲಸರ್ವಾಂಗಶೋಥಹಾ ॥ ೭೭ ॥**

ಕೊಮ್ಮೆಬೇರು, ಆಳಲೆಕಾಯಿ, ಬೇವಿನತೊಪ್ಪೆ, ಮರದರಿಸಿನ, ಕಟುಕರೋಹಿಣಿ, ಕೃಪಡವಲ, ಅಮೃತಬಳ್ಳಿ, ಶುಂಠಿ, ಇವುಗಳ ಕಷಾಯಕ್ಕೆ ಗೋಮೂತ್ರವನ್ನು ಸೇರಿಸಿ ಕುಡಿಸಿದರೆ ಪಾಂಡುರೋಗ, ಉದರ, ಕೆಮ್ಮು, ಉಬ್ಬಸ, ಶೂಲೆ, ಸರ್ವಾಂಗಶೋಫೆ ಇವುಗಳನ್ನು ನಿವಾರಣೆಮಾಡುತ್ತದೆ.

ವಾಸಾದ್ರಾಕ್ಷಾಭಯಾಕ್ವಾಥಃಪೀತಸ್ಸಕ್ಷೌದ್ರಶರ್ಕರಃ ||
ನಿಹಂತಿರಕ್ತಪಿತ್ತಾರ್ತಿಶ್ವಾಸಕಾಸಾನ್ಸುದಾರುಣಾನ್ || ೭೮ ||
ರಕ್ತಪಿತ್ತಂಕ್ಷಯಂಕಾಸಂಶ್ಲೇಷ್ಮಪಿತ್ತಜ್ವರಂತಥಾ ||
ಕೇವಲೋವಾಸಕಕ್ವಾಥಃಪೀತಃಕ್ಷೌದ್ರೇಣನಾಶಯೇತ್ || ೭೯ ||

ಆಡುಸೋಗೆಯಸೊಪ್ಪು, ದ್ರಾಕ್ಷಿ, ಆಳಲೆಯಕಾಯಿ ಇವುಗಳ ಕಷಾಯದ ಜೊತೆಗೆ ಜೇನುತುಪ್ಪ, ಸಕ್ಕರೆ, ಇವುಗಳನ್ನು ಸೇರಿಸಿ ಕುಡಿಸಿದರೆ ರಕ್ತಪಿತ್ತ, ಉಬ್ಬಸ, ಕಾಸ, ಇವುಗಳು ಎಷ್ಟು ಭಯಂಕರವಾಗಿದ್ದರೂ ಗುಣವಾಗುತ್ತವೆ. ಆಡುಸೋಗೆಯ ಸೊಪ್ಪಿನ ಒಂದೇ ಕಷಾಯಕ್ಕೇನೇ ಜೇನುತುಪ್ಪವನ್ನು ಸೇರಿಸಿ ಕುಡಿದರೆ ರಕ್ತಪಿತ್ತ, ಕ್ಷಯ, ಕೆಮ್ಮು, ಶ್ಲೇಷ್ಮ, ಮತ್ತು ಪಿತ್ತಗಳ ಪ್ರಕೋಪದಿಂದ ಹುಟ್ಟಿದ ಜ್ವರ. ಇವುಗಳನ್ನು ಸುಖವಾಗಿ ಗುಣಪಡಿಸಿಕೊಳ್ಳಬಹುದು

ವಾಸಾಕ್ವಾದ್ರಾಮೃತಾಕ್ವಾಥಃಕ್ಷೌದ್ರೇಣಜ್ವರಕಾಸಹಾ ||
ಕಾಸಘ್ನಃಪಿಪ್ಪಲೀಚೂರ್ಣಯುಕ್ತಃಕ್ಷುದ್ರಾಶೃತಸ್ತಥಾ || ೮೦ ||

ಆಡುಸೋಗೆಸೊಪ್ಪು, ನೆಲಗುಳ್ಳ, ಅಮೃತಬಳ್ಳಿ ಇವುಗಳ ಕಷಾಯಕ್ಕೆ ಜೇನುತುಪ್ಪವನ್ನು ಸೇರಿಸಿ ಕುಡಿಸಿದಲ್ಲಿ ಜ್ವರ ಮತ್ತು ಕೆಮ್ಮು ಗುಣವಾಗುತ್ತವೆ. ನೆಲಗುಳ್ಳದ ಬೇರಿನ ಕಷಾಯದೊಡನೆ ಪಿಪ್ಪಲಿಯ ಚೂರ್ಣವನ್ನು ಕೂಡಿಸಿ ಕುಡಿಸುವುದರಿಂದ ಕೆಮ್ಮು ಶಮನವಾಗುತ್ತದೆ.

ಕ್ಷುದ್ರಾಕುಳಿತ್ಥವಾಸಾಭಿರ್ನಾಗರೇಣಚಸಾಧಿತಃ ||
ಕ್ವಾಥಃಪೌಷ್ಕರಚೂರ್ಣಾಢ್ಯಃಶ್ವಾಸಕಾಸೌನಿವಾರಯೇತ್ || ೮೧ ||

ನೆಲಗುಳ್ಳದಬೇರು, ಹುರುಳಿಯಕಾಳು, ಆಡುಸೋಗೆಯಸೊಪ್ಪು, ಶುಂಠಿ, ಇವುಗಳ ಕಷಾಯಕ್ಕೆ ಪುಷ್ಕರಮೂಲದ ಚೂರ್ಣವನ್ನು ಸೇರಿಸಿ ಕುಡಿಸಿದರೆ ಕೆಮ್ಮು, ಉಬ್ಬಸ ನಿವಾರಣೆಯಾಗುತ್ತದೆ.

ರೇಣುಕಾಪಿಪ್ಪಲೀಕ್ವಾಥೋಹಿಂಗುಕಲ್ಕೇನಸಂಯುತಃ ||
ಪಾನಾದೇವಹಿಪಂಚಾಪಿಹಿಕ್ಕಾನಾಶಯತಿಕ್ಷಣಾತ್ || ೮೨ ||
ಬಿಲ್ವತ್ವಚೋಗುಡೂಚ್ಯಾವಾಕ್ವಾಥಃಕ್ಷೌದ್ರೇಣಸಂಯುತಃ ||
ಜಯೇತ್ತ್ರಿದೋಷಜಾಂಛರ್ದಿಂಪರ್ಪಟಃಪಿತ್ತಜಾಂತಥಾ || ೮೩ ||

ರೇಣುಕವೆಂಬ ಗಂದಿಗೆಯದಿನಸು, ಹಿಪ್ಪಲಿ, ಇವುಗಳ ಕಷಾಯಕ್ಕೆ ಹಿಂಗಿನ ಸೀರನ್ನು ಕೂಡಿಸಿ ಕುಡಿಸಿದಲ್ಲಿ ಬಿಕ್ಕಳಿಕೆಯು ನಿಲ್ಲುತ್ತದೆ ಬಿಲ್ವದತೊಪ್ಪೆ, ಅಮೃತಬಳ್ಳಿ, ಇವುಗಳೊಂದೊಂದರ ಕಷಾಯಕ್ಕೂ ಜೇನುತುಪ್ಪವನ್ನು ಸೇರಿಸಿ ಕುಡಿಸಿದರೆ ತ್ರಿದೋಷಪ್ರಕೋಪದಿಂದ ಹುಟ್ಟಿದ ವಮನವನ್ನು ನಿಲ್ಲಿಸಬಹುದು ಪರ್ಪಾಟಕದ ಕಷಾಯಕ್ಕೆ ಜೇನುತುಪ್ಪ ಸೇರಿಸಿ ಕುಡಿಸಿದರೆ ಪಿತ್ತದ ವಮನವು ನಿಲ್ಲುತ್ತದೆ.

ಹಿಂಗುಪುಷ್ಕರಮೂಲಾಢ್ಯಂದಶಮೂಲಶೃತಂಜಯೇತ್ ॥
ಗೃಧ್ರಸೀಂಶೇನಲಃಕ್ವಾಥಃಶೇಫಾಲೀಪತ್ರಜಸ್ತಥಾ ॥ ೮೪ ॥

ಇಂಗು, ಪುಷ್ಕರಮೂಲ, ಇವುಗಳ ಚೂರ್ಣವನ್ನು ಹಿಂದೆ ಹೇಳಿದ ದಶಮೂಲಗಳ ಕಷಾಯದೊಡನೆ ಸೇರಿಸಿ ಕುಡಿಸಿದರೆ ಗೃಧ್ರಸಿ ಎಂಬ ಹೆಸರಿನ ವಾತರೋಗವು ಗುಣವಾಗುತ್ತದೆ ಲಕ್ಕಿಸೊಪ್ಪು ಒಂದರ ಕಷಾಯವಾದರೂ ಈ ಗೃಧ್ರಸೀವಾತರೋಗಕ್ಕೆ ಉತ್ತಮವಾಗೇ ಆಗುತ್ತದೆ.

ರಾಸ್ನಾಮೃತಾಮಹಾದಾರುನಾಗರೈರಂಡಜೈಶೃತಂ ॥
ಸಪ್ತಧಾತುಗತೇವಾತೇಸಾಮೇಸರ್ವಾಂಗಜೇಪಿಬೇತ್ ॥ ೮೫ ॥

ಸಣ್ಣರಾಸ್ಮೆ, ಅಮೃತಬಳ್ಳಿ, ದೇವದಾರಿಚಕ್ಕೆ, ಶುಂಠಿ, ಹರಳುಬೇರು ಇವುಗಳ ಕಷಾಯವು ಸಪ್ತಧಾತುಗತವಾಗಿ ಆಮದೋಷಯುಕ್ತವಾಗಿರುವ ಸರ್ವಾಂಗವಾತದಲ್ಲಿ ಅತ್ಯಂತ ಗುಣಕರವಾಗುತ್ತದೆ

ರಾಸ್ನಾಗೋಕ್ಷುರಕೈರಂಡದೇವದಾರುಪುನರ್ನವಾ ॥
ಗುಡೂಚ್ಯಾರಗ್ವಧಶ್ಚೈವಕ್ವಾಥಮೇಷಾಂವಿಪಾಚಯೇತ್ ॥ ೮೬ ॥
ಶುಂಠೀಚೂರ್ಣೇನಸಂಯುಕ್ತಂಪಿಬೇಜ್ಜಂಘಾಕಟೀಗ್ರಹೆ ॥
ಪಾರ್ಶ್ವಪೃಷ್ಠೋರುಪೀಡಾಯಾಮಾಮವಾತೇಸುದುಸ್ತರೆ ॥ ೮೭ ॥

ಸಣ್ಣರಾಸ್ಮೆ, ನೆಗ್ಗಲುಮುಳ್ಳು, ಹರಳುಬೇರು, ದೇವದಾರಿಚಕ್ಕೆ, ಕೊಮ್ಮೆಬೇರು, ಅಮೃತಬಳ್ಳಿ, ಕಕ್ಕೆತೊಪ್ಪೆ, ಇವುಗಳ ಕಷಾಯವಾಡಿ ಶುಂಠಿಯ ಚೂರ್ಣವನ್ನು ಸೇರಿಸಿ ಕುಡಿಯಿಸುವುದರಿಂದ ವಾಯುವಿನಿಂದ ಸೊಂಟಹಿಡಿದು ಕೊಳ್ಳುವುದು, ಪಾರ್ಶ್ವಶೂಲ, ಹಿಂಭಾಗದಶೂಲ, ತೊಡೆನಡತ, ಆಮವಾತ, ಇಂತಹ ವಾಯುರೋಗಗಳು ಬಹು ಭಯಂಕರವಾಗಿದ್ದರೂ ಗುಣವಾಗುತ್ತದೆ.

ರಾಸ್ನಾದ್ವಿಗುಣಭಾಗಾಸ್ಯಾದೇಕಭಾಗಾಸ್ತತಃಪರೆ ॥
ಧನ್ವಯಾಸಬಲೈರಂಡದೇವದಾರುಶಠೀವಚಾಃ ॥ ೮೮ ॥
ವಾಸಕೋನಾಗರಂಪಥ್ಯಾಚವ್ಯಾಮುಸ್ತಾಪುನರ್ನವಾಃ ॥
ಗುಡೂಚೀವೃದ್ಧದಾರುಶ್ಚ ಶತಪುಷ್ಪಾಚಗೋಕ್ಷುರಃ ॥ ೮೯ ॥

ಅಶ್ವಗಂಧಾಪ್ರತಿವಿಷಾಕೃತಪೂಲಕೃತಾವರೀ ॥
ಕೃಷ್ಣಾಸಹಚರಶ್ಚೈವಧಾನ್ಯಕಂಬೃಹತೀದ್ವಯಂ ॥ ೯೦ ॥
ಏಭಿಃಕೃತಂಪಿಬೇತ್ ಕ್ವಾಥಂಶುಂಠೀಚೂರ್ಣೇನಸಂಯುತಂ ॥
ಕೃಷ್ಣಾಚೂರ್ಣೇನವಾಯೋಗರಾಜಗುಗ್ಗುಲುನಾಥವಾ ॥ ೯೧ ॥
ಅಜಮೋದಾದಿನಾವಾಪಿತ್ತೈಲೇನೈರಂಡಜೇನವಾ ॥
ಸರ್ವಾಂಗಕಂಪೇಕುಬ್ಜತ್ವೇಪಕ್ಷಘಾತೇಪಬಾಹುಕೆ ॥ ೯೨ ॥
ಗೃಧ್ರಸ್ಯಾಮಾಮವಾತೇಚಶ್ಲೀಪದೇಚಾಪತಾನಕೆ ॥
ಅಂತ್ರವೃದ್ಧೌತಥಾಧ್ಮಾನೇಜಂಘಾಜಾನುಗತೇರ್ದಿತೆ ॥ ೯೩ ॥
ಶುಕ್ರಾಮಯೇಮೇಢ್ರರೋಗೇವಂಧ್ಯಾಯೋನ್ಯಾಮಯೇಷುಚ ॥
ಮಹಾರಾಸ್ನಾದಿರಾಖ್ಯಾತೋಬ್ರಹ್ಮಣಾಗರ್ಭಕಾರಣಂ ॥ ೯೪ ॥

ಮಹಾರಾಸ್ನಾದಿ ಕಷಾಯ:—ಸಣ್ಣರಾಸ್ಮೆ ೨ ಭಾಗ, ಮುಂದೆ ಹೇಳುವ ಮೂಲಿಕೆಗಳಲ್ಲಾ ಪ್ರತಿಯೊಂದೂ ಒಂದೊಂದು ಭಾಗ ಸೇರಿಸಬೇಕು. ಮೂಲಿಕೆಗಳ್ಯಾವವೆಂದರೆ–ತುರಚಿ, ಕಳ್ಳಂಗಡ್ಲೆ, ಹರಳುಬೇರು, ದೇವದಾರಿಚಕ್ಕೆ, ಕಚೋರ, ಬಜೆ, ಆಡುಸೋಗೆಯ ಸೊಪ್ಪು, ಶುಂಠಿ, ಅಳಲೆಕಾಯಿ, ಕಾಡುಮೆಣಸಿನ ಬಳ್ಳಿ, ಭದ್ರಮುಸ್ತೆ, ಕೊಮ್ಮೆಯಬೇರು, ಅಮೃತಬಳ್ಳಿ, ದೊಡ್ಡಮರವಚಕ್ಕೆ, ಸದಾಪಿನ ಸೊಪ್ಪು, ಆನೆನೆಗ್ಗಿಲು, ಹಿರೇಮದ್ದಿನಗಡ್ಡೆ, ಅತಿಬಜೆ, ಕಕ್ಕೇಬೇರು, ಹಲವು ಮಕ್ಕಳಬೇರು, ಹಿಪ್ಪಲಿ, ಗೋರಂಟೇಗಿಡ, ಕೊತ್ತಂಬರಿಬೀಜ, ಹೆಗ್ಗುಳ್ಳ, ನೆಲಗುಳ್ಳ, ಈ ಮೂಲಿಕೆಗಳ ಕಷಾಯವನ್ನು ಮಾಡಿಕೊಂಡು, ಇದಕ್ಕೆ ಶುಂಠಿಯ ಚೂರ್ಣವನ್ನಾಗಲಿ, ಹಿಪ್ಪಲಿಯ ಚೂರ್ಣವನ್ನಾಗಲಿ, ಯೋಗರಾಜಗುಗ್ಗುಳವನ್ನಾಗಲಿ, ಅಜಮೋದಾದಿ ಚೂರ್ಣವನ್ನಾಗಲಿ, ಹರಳೆಣ್ಣೆಯನ್ನಾಗಲಿ ಸೇರಿಸಿ ಕುಡಿಸುತ್ತ ಬಂದಲ್ಲಿ ಸರ್ವಾಂಗವೂ ನಡುಗುವ ಕಂಪವಾತ, ಕೈಕಾಲುಗಳು ಹಿಡಿದು ಗುಜ್ಜಾರಿಯಾಗುವುದು, ಪಾರ್ಶ್ವವಾಯುವಿನಲ್ಲಿಯೂ, ಅಪಬಾಹುಕವೆಂದರ ತೋಳುಹಿಡಿಯುವುದು, ಗೃಧ್ರಸಿ ಎಂಬ ವಾತರೋಗದಲ್ಲಿ, ಆಮವಾತ (ರೆಮಿಟಕ್ ಪೆಯಿನ್) ಶ್ಲೀಪದವೆಂದರೆ ಆನೆಕಾಲೆಂಬ ಕಾಲುದಪ್ಪನಾಗುವ ವಾತರೋಗ, ಅಪತಾನಕವೆಂಬ ಒಂದು ವಿಧದ ವಾತರೋಗ, ಅಂತ್ರವೃದ್ಧಿ ಎಂದರೆ ತರಡು ಬಾತುಹೋಗುವರೋಗ, ಹೊಟ್ಟೆ ಉಬ್ಬರಿಸುವರೋಗ, ತೊಡೆ, ಮಂಡಿ, ಮೊಣಕಾಲು ಮೊದಲಾದವುಗಳಿಗೆ ಬರುವ ವಾತರೋಗದಲ್ಲಿ, ಶುಕ್ರಧಾತುವಿಗೆ ಸಂಬಂಧಿಸಿದ ರೋಗಗಳಲ್ಲಿ, ಶಿಶ್ನಕ್ಕೆ ಬರತಕ್ಕ ರೋಗಗಳು ಅಂದರೆ ವಾತಸಂಬಂಧವಾದವುಗಳಲ್ಲಿ, ಬಂಜೆರೋಗದಲ್ಲಿ, ಯೋನಿಯಲ್ಲಿ ಬರತಕ್ಕ ವಾತರೋಗಗಳಲ್ಲಿ ಸಹ ಈ ಕಷಾಯವು ಅತ್ಯುತ್ತಮವಾದ ಫಲಪ್ರದವಾಗಿರುವುದಲ್ಲದೆ ಗರ್ಭಸ್ಥಾಪಕವೆನ್ನುವುದೂ ಅಭಿಪ್ರಾಯ.

**ಏರಂಡೋಬೀಜಪೂರಶ್ಚ ಗೋಕ್ಷುರೋಬೃಹತೀದ್ವಯಂ ||**
**ಅಶ್ಮಭೇದಸ್ತಥಾಬಿಲ್ವ ಏತನ್ಮೂಲೈಃಕೃತಶ್ಶೃತಃ || ೯೩ ||**
**ಏರಂಡತೈಲಹಿಂಗ್ವಾಢ್ಯಃಸಯವಕ್ಷಾರಸೈಂಧವಃ ||**
**ಸ್ತನಸ್ಕಂಧಕಟೀಮೇಢ್ರಹೃದಯೊತ್ಥಾಂವ್ಯಥಾಂಜಯೇತ್ ||೯೭||**

ಹರಳುಬೇರು, ಮಾದಳದಬೇರು, ನೆಗ್ಗಲು, ಹೆಗ್ಗುಳ್ಳ, ನೆಲಗುಳ್ಳ, ಪಾಷಾಣಭೇದಿ, ಬಿಲ್ವದ ಬೇರು, ಇವುಗಳ ಸಮಾಂಶ ಕಷಾಯಮಾಡಿ, ಹರಳೆಣ್ಣೆಯನ್ನೂ ಇಂಗನ್ನೂ (ಹುರಿದು), ಯವಕ್ಷಾರವನ್ನೂ, ಸೈಂಧವಲವಣವನ್ನೂ ಸೇರಿಸಿ ಕುಡಿಸುವುದರಿಂದ ಸ್ತನದಲ್ಲಿ ಹುಟ್ಟುವ ಶೂಲೆ, ಭುಜದಲ್ಲಿ ಹುಟ್ಟುವ ಶೂಲೆ, ಸೊಂಟಶೂಲೆ, ಶಿಶ್ನಶೂಲೆ, ಎದೆಶೂಲೆ ಇವುಗಳೆಲ್ಲವೂ ಶಮನ ಹೊಂದುವವು.

**ನಾಗರೈರಂಡಜಃಕ್ವಾಥಃಕ್ವಾಥಇಂದ್ರಯವಸ್ಯಚ ||**
**ಹಿಂಗುಸೌವರ್ಚಲೋಪೇತೊವಾತಶೂಲನಿವಾರಣಃ || ೯೭ ||**

ಶುಂಠಿ, ಹರಳುಬೇರು ಇವುಗಳ ಕಷಾಯ, ಕೊಡಸದ ಚಕ್ಕೆಯ ಕಷಾಯ ಇವುಗಳ ಜೊತೆಗ ಹುರಿದ ಇಂಗು, ಸೌವರ್ಚಲವಣ ಇವುಗಳನ್ನು ಸೇರಿಸಿ ಕುಡಿಸುವುದರಿಂದ ವಾತಪ್ರಕೋಪಜನ್ಯವಾದ ಉದರಶೂಲೆ ನಿವಾರಣೆಯಾಗುತ್ತದೆ.

**ತ್ರಿಫಲಾರಗ್ವಧಕ್ವಾಥಶ್ಶರ್ಕರಾಕ್ಷೌದ್ರಸಂಯುತಃ ||**
**ರಕ್ತಪಿತ್ತಹರೋದಾಹಪಿತ್ತಶೂಲನಿವಾರಣಃ || ೯೮ ||**

ತ್ರಿಫಲ (ಹಿಂದೆ ಹೇಳಿದೆ), ಬಟೇತ್ತೊಪ್ಪೆ, ಇವುಗಳ ಕಷಾಯಕ್ಕೆ ಸಕ್ಕರೆ, ಜೇನುತುಪ್ಪ, ಇವುಗಳನ್ನು ಸೇರಿಸಿ ಕುಡಿಸಿದರೆ ರಕ್ತಪಿತ್ತ, ಮೈಯ್ಯುರಿ, ಪಿತ್ತಶೂಲೆ ಇವುಗಳು ನಿವಾರಣವಾಗುತ್ತವೆ. ತ್ರಿಫಲವೆಂದರೆ ಅಳಲೆಕಾಯಿ, ತಾರೇಕಾಯಿ, ನೆಲ್ಲಿಕಾಯಿ ಎಂದು ಕೆಲವರೂ, ದ್ರಾಕ್ಷಿ ಶಿವನೇಹಣ್ಣು, ಖರ್ಜೂರ ಇವುಗಳಿಗೆ ತ್ರಿಫಲವೆಂಬ ಹೆಸರೆಂದೂ ಹೇಳುತ್ತಾರೆ (ಚರಕ)

**ಏರಂಡಮೂಲಂದ್ವಿಪಲಂಜಲೇಷ್ಟಗುಣಿತೇಪಚೇತ್ ||**
**ತತ್ ಕ್ವಾಥೊಯವಶೂಕಾಢ್ಯಪಾರ್ಶ್ವಹೃತ್ಕಫಶೂಲಹಾ || ೯೯ ||**

ಎರಡು ಪಲ ತೂಕ ಹರಳುಬೇರನ್ನು ಅಷ್ಟಗುಣಜಲದಲ್ಲಿ ಕಷಾಯಮಾಡಿ, ನಾಲ್ಕರಲ್ಲೊಂದು ಭಾಗ ಇಳಿಸಿಕೊಂಡು ಯವಕ್ಷಾರಚೂರ್ಣ ಸೇರಿಸಿ ಕುಡಿಸಿದಲ್ಲಿ ಪಾರ್ಶ್ವಶೂಲೆ, ಹೃದಯಶೂಲೆ, ಕಫಶೂಲೆ ಇವುಗಳನ್ನು ನಿವಾರಣಮಾಡುತ್ತದೆ.

**ದಶಮೂಲಕೃತಃಕ್ವಾಥಃಸಯವಕ್ಷಾರಸೈಂಧವಃ ||**
**ಹೃದ್ರೋಗಗುಲ್ಮಶೂಲಾನಿಕಾಸಂಶ್ವಾಸಂಚನಾಶಯೇತ್|| ೧೦೦ ||**

ದಶಮೂಲವೆಂದರೆ—ಬಿಲ್ವ, ನರುವಲ, ಹೆಮ್ಮರ, ಶಿವನೆ, ಪಾದರಿ ಇವು ಗಳು ಐದು, ಒಂದೆಲೆ ಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಲು ಇವು ಐದು, ಹತ್ತು ಸೇರಿದರೆ ದಶಮೂಲವೆನ್ನಿಸುತ್ತದೆ, ಇವುಗಳ ಕಷಾಯಕ್ಕೆ ಯವಕ್ಷಾರ, ಸೈಂಧವಲವಣ ಸೇರಿಸಿ ಕುಡಿಸುವುದರಿಂದ ಹೃದಯರೋಗ, ಗುಲ್ಮ, ಶೂಲೆ, ಕೆಮ್ಮು, ಉಬ್ಬಸ ಇವುಗಳು ಕಡಮೆಯಾಗುತ್ತವೆ.

ಹರೀತಕೀದುರಾಲಂಭಾಕೃತಮಾಲಕಗೋಕ್ಷುರೈಃ ॥
ಪಾಷಾಣಭೇದಸಹಿತೈಃಕ್ವಾಥೋಮಾಕ್ಷಿಕಸಂಯುತಃ ॥ ೧೦೦ ॥
ವಿಬಂಧೇಮೂತ್ರಕೃಚ್ಛ್ರೇಚಸದಾಹೇಸರುಜೇಹಿತಃ ॥

ಆಳಲೆಕಾಯಿ, ತುರಚೆ, ಕಕ್ಕೆತೊಪ್ಪೆ, ನೆಗ್ಗಿಲು, ಪಾಷಾಣಭೇದಿ ಇವುಗಳ ಚೂರ್ಣಮಾಡಿ ಜೇನುತುಪ್ಪ ಸೇರಿಸಿ ತೆಗದುಕೊಂಡರೆ ಮೂತ್ರ ತಡೆದಿರುವುದು, ಕಷ್ಟದಿಂದ ಮೂತ್ರಹೊರಡುವುದು, ಮೂತ್ರ ಹೊರಡುವಾಗ್ಯೆ ನೋವು, ಉರಿ, ಇವುಗಳನ್ನೆಲ್ಲಾ ಶಮನಮಾಡುತ್ತದೆ.

ವೀರತರುರ್ವೃಕ್ಷವಂದಾಕಾಶಸ್ಸಹಚರತ್ರಯಂ ॥ ೧೦೨ ॥
ಕುಶದ್ವಯಂನಲೋಗುಂದ್ರಾಬಕಪುಷ್ಪೋಗ್ನಿಮಂಥಕಃ ॥
ಮುರ್ವಾಪಾಷಾಣಭೇದಶ್ಚಸ್ಯೋನಾಕೋಗೋಕ್ಷುರಸ್ತಥಾ ॥ ೧೦೩ ॥
ಅಪಾಮಾರ್ಗಶ್ಚಕಮಲಂಬ್ರಾಹ್ಮೀಚೇತಿಗಣೋವರಃ ॥
ವೀರತರ್ವಾದಿರಿತ್ಯುಕ್ತಃಶರ್ಕರಾಶ್ಮರಿಕೃಚ್ಛ್ರಹಾ ॥ ೧೦೪ ॥
ಮೂತ್ರಾಘಾತಂವಾಯುರೋಗಾನ್ನಾಶಯೇನ್ನಿಖಿಲಾನಪಿ ॥

ವೀರತರು ಎಂದರೆ ಲಾಮಂಚ, ದರ್ಭೆ, ಕೆಂಪುಮತ್ತಿ ಎಂಬದಾಗಿ ಎರಡು ಮೂರು ಹೆಸರುಗಳನ್ನು ಹೇಳುತ್ತಾರೆ. ವೃಕ್ಷವಂದಾ ಎಂದರೆ ಗಿಡದ ಮೇಲೆ ಹುಟ್ಟುವ ಬಂದರಿಕೆ, ಕಾಶವೆಂದರೆ ಲಾಳದ ಹುಲ್ಲು, ಸಹಚರತ್ರಯವೆಂದರೆ ಹಳದಿ, ಕೆಂಪು, ನೀಲ ಬಣ್ಣದ ಗೋರಂಟೆ, ಕುಶದ್ವಯವೆಂದರೆ ಎರಡು ವಿಧ ದರ್ಭೆ, ನಲ ಎಂದರೆ ಅದೊಂದು ಬಗೆಯ ಹುಲ್ಲು, ಗುಂದ್ರಬಕಪುಷ್ಪ ಎಂಬವೆಲ ಹೂ ತೃಣವರ್ಗಕ್ಕೆ ಸೇರಿದ ಮೂಲಿಕೆಗಳು—ಅಗ್ನಿಮಂಥವೆಂದರೆ ನರುವಲತೊಪ್ಪೆ, ಕುರಟಿಗೆ, ಪಾಷಾಣಭೇದಿ, ದೊಡ್ಡಮರದ ಚಕ್ಕೆ, ನೆಗ್ಗಲಮುಳ್ಳು, ಉತ್ತರಣೆ, ಕಮಲ, ಒಂದೆಲಗನಸೊಪ್ಪು, ಇವುಗಳಿಗೆ ವೀರತರ್ವಾದಿಗಣವೆಂದು ಹೆಸರು. ಈ ಗಣೋಕ್ತದ್ರವ್ಯಗಳ ಕಷಾಯವನ್ನು ಕುಡಿಯುವುದರಿಂದ ಮೂತ್ರದಲ್ಲಿ ಕಲ್ಲು, ಮೂತ್ರ ತಡೆಯುವುದು, ಮೂತ್ರ ಉರಿಯುವುದು, ಅಪಾನವಾಯು ಬಂದಾಗು ವುದು, ವಾತಸಂಬಂಧ ಇನ್ನೂ ಇತರ ವಿಕಾರಗಳನ್ನು ಸಹ ಕಡಮೆಮಾಡುತ್ತದೆ.

ಏಲಾಮಧುಕಗೋಕಂಟರೇಣುಕೈರಂಡವಾಸಕಾಃ ॥ ೧೦೫ ॥
ಕೃಷ್ಣಾಶ್ಮಭೇದಸಹಿತಾಃ ಕ್ವಾಥಏಷಾಂಸುಸಾಧಿತಃ ॥
ಶಿಲಾಜತುಯುತಃಪೇಯಃ ಶರ್ಕರಾಶ್ಮರಿಕೃಚ್ಛ್ರಹಾ ॥ ೧೦೬ ॥
ಸಮೂಲಗೋಕ್ಷುರಕ್ವಾಥಃ ಸಿತಾಮಾಕ್ಷಿಕಸಂಯುತಃ ॥
ನಾಶಯೇನ್ಮೂತ್ರಕೃಚ್ಛ್ರಾಣಿತಥಾಚೋಷ್ಣಸಮೀರಣಂ ॥ ೧೦೭ ॥

ಯಾಲಕ್ಕಿ, ಜ್ಯೇಷ್ಠಮಧು, ನೆಗ್ಗಿಲು, ರೇಣುಕವೆಂಬ ಗಂದಿಗೆ ಜಿನಸು, ಹರಳಬೇರು, ಆಡುಸೋಗೇ ಸೊಪ್ಪು, ಹಿಪ್ಪಲಿ, ಪಾಷಾಣಭೇದಿ, ಇವುಗಳ ಕಷಾಯಮಾಡಿ ಶಿಲಾಜತುವನ್ನು ಸೇರಿಸಿ ಕುಡಿಸುವುದರಿಂದ ಮೂತ್ರದಲ್ಲಿ ಕಲ್ಲು, ಮೂತ್ರಬಂಧ, ಮೂತ್ರಕೃಚ್ಛ್ರ ಇವುಗಳು ಕಡಮೆಯಾಗುತ್ತವೆ. ನೆಗ್ಗಲು ಗಿಡವನ್ನು ಬೇರು ಸಹಿತ ಕಿತ್ತುತಂದು ಕಷಾಯಮಾಡಿ ಅದಕ್ಕೆ ಸಕ್ಕರೆ ಮತ್ತು ಜೇನುತುಪ್ಪ ಸಹ ಸೇರಿಸಿ ಕುಡಿಸುವುದರಿಂದ ಮೂತ್ರಕೃಚ್ಛ್ರ, ಉಷ್ಣವಾಯು ಇವುಗಳನ್ನು ಗುಣಪಡಿಸಿಕೊಳ್ಳಬಹುದು.

ವರಾದಾರ್ವ್ಯಬ್ದದಾರೂಣಾಂಕ್ವಾಥಃಕ್ಷೌದ್ರೇಣಮೇಹಹಾ ॥
ವತ್ಸಕ ತ್ರಿಫಲಾದಾರ್ವೀಮುಸ್ತಕೋಬೀಜಕಸ್ತಥಾ ॥ ೧೦೮ ॥

ವರಾ, ಅಳಲೆಕಾಯಿ, ತಾರೇಕಾಯಿ, ನೆಲ್ಲೀಕಾಯಿ, ಮರಅರಿಶಿನ, ಭದ್ರಮುಸ್ತೆ, ದೇವದಾರಿಚಕ್ಕೆ, ಇವುಗಳ ಕಷಾಯಕ್ಕೆ ಜೇನು ಸೇರಿಸಿ ಕುಡಿಸುವುದರಿಂದ ಮೇಹವು ಗುಣವಾಗುತ್ತದೆ. ಕೊಡಸದ ತೊಪ್ಪೆ, ತ್ರಿಫಲ, ಮರಅರಿಸಿಷ, ಭದ್ರಮುಸ್ತೆ, ಬೀಜಕವೆಂದರೆ ಹುಣಸೇ ಮರವೆಂದು ಕೆಲವರು, ಇವುಗಳ ಕಷಾಯಕ್ಕೂ ಜೇನುಸೇರಿಸಿ ಕುಡಿಸಿದರೆ ಮೇಹರೋಗ ಶಮನವಾಗುತ್ತದೆ.

ಫಲತ್ರಿಕಾಬ್ದದಾರ್ವೀಣಾಂವಿಶಾಲಾಯಾಃಶೃತಂಪಿಬೇತ್ ॥
ನಿಶಾಕಲ್ಕಯುತಂಸರ್ವಪ್ರಮೇಹವಿನಿವೃತ್ತಯೆ ॥ ೧೦೯ ॥

ತ್ರಿಫಲ, ಭದ್ರಮುಸ್ತೆ, ಮರಅರಿಸಿನ, ಹಾವು ಮಿಕ್ಕೆ ಕಾಯಿ ಇವುಗಳ ಕಷಾಯದ ಜೊತೆಗೆ ಅರಿಸಿನದ ಕಲ್ಕವನ್ನು ಸೇರಿಸಿ ಕುಡಿಸಿದರೆ ಸಮಸ್ತವಾದ ಮೇಹರೋಗವೂ ನಿವೃತ್ತವಾಗುತ್ತದೆ.

ದಾರ್ವೀರಸಾಂಜನಂಮುಸ್ತಂಭಲ್ಲಾತಶ್ರೀಫಲಂವೃಷಃ ॥
ಕೈರಾತಶ್ಚಪಿಬೇದೇಷಾಂಕ್ವಾಥಂಶೀತಂಸಮಾಕ್ಷಿಕಂ ॥ ೧೧೦ ॥
ಜಯೇತ್ಸಶೂಲಂಪ್ರದರಂಪೀತಶ್ವೇತಸಿತಾರುಣಂ ॥

ಮರಅರಿಸಿನ, ರಸಾಂಜನ, (ಮರಅರಿಸಿನದ ರಸಕ್ರಿಯೆ) ಭದ್ರಮುಸ್ತೆ, ಗೇರುಬೀಜ, ಬಿಲ್ವದಹಣ್ಣು, ಆಡುಸೋಗೇ ಸೊಪ್ಪು, ಚಿರಾಯಿತ, ಇವುಗಳ

ಕಷಾಯದ ಜೊತೆಗೆ ಆರಿದ ಮೇಲೆ ಜೇನು ಸೇರಿಸಿ ಕುಡಿಸಿದರೆ ನೊಂಟನೋವು, ವಡತ ಇವುಗಳಿಂದ ಕೂಡಿರುವ ಪ್ರದರ (ಯೋನಿದ್ವಾರದಿಂದ ಕೆಂಪಗೆ, ಹಳದಿ, ಬೆಳ್ಳಗೆ, ಕರ್ರಗೆ ಹೊರಡತಕ್ಕ ಸ್ರಾವ)ವನ್ನು ಗುಣಪಡಿಸುತ್ತದೆ.

ನ್ಯಗ್ರೋಧಪ್ಲಕ್ಷಕೋಶಾಮ್ರವೇತಸಾಬದರೀತುಣೀ ॥ ೧೧೧ ॥
ಮಧುಯಷ್ಟಿಃಪ್ರಿಯಾಲಶ್ಚ ಲೋಧ್ರದ್ವಯಮುದುಂಬರಃ ॥
ಪಿಪ್ಪಲಶ್ಚ ಮಧೂಕಶ್ಚ ತಥಾಪಾರಿಸಪಿಪ್ಪಲಃ ॥ ೧೧೨ ॥
ಸಲ್ಲಕೀತಿಂದುಕೀಜಂಬೂದ್ವಯಮಾಮ್ರತರುಶ್ಶಿವಾ ॥
ಕದಂಬಕಕುಭೌಚೈವಭಲ್ಲಾತಕಫಲಾನಿಚ ॥ ೧೧೩ ॥
ನ್ಯಗ್ರೋಧಾದಿಗಣಕ್ವಾಥಂಯಥಾಲಾಭಂಚಕಲ್ಪಯೇತ್ ॥
ಅಯಂಕ್ವಾಥೋಮಹಾಗ್ರಾಹೀವ್ರಣ್ಯೋಭಗ್ನಂಚಸಾಧಯೇತ್ ॥ ೧೧೪ ॥
ಯೋನಿದೋಷಹರೋದಾಹಮೇದೋಮೋಹವಿಷಾಪಹಃ ॥

ನ್ಯಗ್ರೋಧಾದಿಗಣಕ್ವಾಥ—ಆಲದ ಚಕ್ಕೆ, ಬಸರಿಮರದ ಚಕ್ಕೆ, ಅಮಟೆ ಚಕ್ಕೆ, ಹಬ್ಬೇಗಿಡದ ತೊಪ್ಪೆ, ಬೋರೇಚಕ್ಕೆ, ನಂದಿಚಕ್ಕೆ, ಜ್ಯೇಷ್ಠಮಧು, ಸಾರ ಪಪ್ಪು, ಲೋಧ್ರ, (ಪತಂಗದ ಗಿಡ) ಶಾಬರಲೋಧ್ರ, ಅತ್ತಿತೊಪ್ಪು, ಅರಳಿತೊಪ್ಪೆ, ಇಪ್ಪೆತೊಪ್ಪೆ, ಬುಗರಿತೊಪ್ಪೆ, ತದುಕಿನ ತೊಪ್ಪೆ, ನೇರಿಲಜಾತಿಗೆ ಸೇರಿದ ಎರಡು ಬಗೆಯ ತೊಪ್ಪೆ, ಮಾವಿನಚಕ್ಕೆ, ಆಳಲೆಕಾಯಿ, ಕದಂಬವೆಂದರೆ ಈಚಲನಾರು, ಮತ್ತಿತೊಪ್ಪೆ, ಗೇರುಬೀಜಗಳು, ಇಷ್ಟು ಪದಾರ್ಥಗಳಿಗೂ ನ್ಯಗ್ರೋಧಾದಿಗಣ ವೆಂದು ಹೆಸರು. ಇವುಗಳ ಮಧ್ಯೆಯಥಾಲಾಭವೆಂದರೆ ಸಿಕ್ಕಿದಷ್ಟನ್ನು ಕೂಡಿಸಿ ಕಷಾಯವಮಾಡಿ ಕುಡಿಸಿದರೆ ಅತ್ಯುತ್ತಮವಾಗಿ ಗ್ರಾಹಿಯಾಗಿಯೂ ವ್ರಣನಾಶಕ ವಾಗಿಯೂ ಕೈಕಾಲು ಮೊದಲಾದ ಅವಯವಗಳು ಸಂಧಿಬಂಧಗಳೂ ಯಾವು ದಾದರೂ ಕಾರಣದಿಂದ ಮುರಿದುಹೋಗಿದ್ದರೆ ಅದನ್ನು ಯಥಾಸ್ಥಿತಿಗೆ ತರುವು ದಾಗಿಯೂ, ಸ್ತ್ರೀಯರ ಯೋನಿದೋಷಗಳನ್ನೆಲ್ಲಾ ಪರಿಹರಿಸುವುದಾಗಿಯೂ ವೈಯ್ಯುರಿ, ಮೇದೋರೋಗ, ಮೋಹರೋಗ, ವಿಷವ್ಯಾಧಿ ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

ಬಿಲ್ವೋಗ್ನಿಮಂಥಸ್ಯೋನಾಕಃಕಾಶ್ಮರೀಪಾಟಲಾತಥಾ ॥ ೧೧೫ ॥
ಕ್ವಾಥವಿಷಾಂಜಯೇನ್ಮೇದೋದೋಷಂಕ್ಷೌದ್ರೇಣಸಂಯುತಃ ॥
ಕ್ಷೌದ್ರೇಣತ್ರಿಫಲಾಕ್ವಾಥಃಪೀತೋಮೇದೊಹರಃಸ್ಮೃತಃ ॥ ೧೧೬ ॥
ಶೀತೀಭೂತಂತಥೋಷ್ಣಾಂಬುಮೇದೊಹೃತ್‌ಕ್ಷೌದ್ರಸಂಯುತಂ॥

ಬಿಲ್ವದತೊಪ್ಪೆ, ನರುವಲತೊಪ್ಪೆ, ಹೆಮ್ಮರದ ಚಕ್ಕೆ, ಶಿವನೇತೊಪ್ಪೆ, ಪಾದರಿಯ ತೊಪ್ಪೆ, ಇವುಗಳ ಕಷಾಯಮಾಡಿ, ತಣಿಸಿ ಜೇನುತುಪ್ಪ ಸೇರಿಸಿ ಕುಡಿಸುವುದರಿಂದ ಮೇದೋರೋಗವು ಶಮನವಾಗುತ್ತದೆ. ತ್ರಿಫಲಾ ಕಷಾಯಮಾಡಿ ತಣಿಸಿ ಜೇನುತುಪ್ಪ ಸೇರಿಸಿ ಕುಡಿಸುವುದು ಮೇದೋದೋಷಹರ, ನೀರನ್ನು ಕಾಯಿಸಿ ಆರಿದ ಮೇಲೆ ಜೇನುತುಪ್ಪ ಸೇರಿಸಿ ಕುಡಿಸುವುದೂ ಮೇದೋರೋಗ ಹರವೇ.

ಚವ್ಯಚಿತ್ರಕವಿಶ್ವಾನಾಂಸಾಧಿತೋದೇವದಾರುಣಾ ॥ ೧೧೭ ॥
ಕ್ವಾಥಸ್ತ್ರಿವೃಚ್ಚೂರ್ಣಯುತೋಗೋಮೂತ್ರೇಣೋದರಾಂಜಯೇತ್ ॥

ಚವ್ಯವೆಂದರೆ ಕಾಡುಮೆಣಸಿನ ಬಳ್ಳಿ, ಚಿತ್ರಮೂಲ, ಶುಂಠಿ, ದೇವದಾರುಚಕ್ಕೆ, ಇವುಗಳ ಕಷಾಯಮಾಡಿ ಅದಕ್ಕೆ ತಿಗಡೆಯಚೂರ್ಣ, ಗೋಮೂತ್ರ ಇವುಗಳನ್ನು ಸೇರಿಸಿ ಕುಡಿಸಿದರೆ ಸಮಸ್ತ ವಿಧವಾದ ಉದರರೋಗವೂ ಶಮನವಾಗುತ್ತದೆ.

ಪುನರ್ನವಾಮೃತಾದಾರುಪಥ್ಯಾನಾಗರಸಾಧಿತಃ ॥ ೧೧೮ ॥
ಗೋಮೂತ್ರಗುಗ್ಗುಲುಯುತಃಕ್ವಾಥಶ್ಶೋಥೋದರಾಪಹಃ ॥

ಕೊಮ್ಮೆಬೇರು, ಅಮೃತಬಳ್ಳಿ, ಮರಅರಿಸಿನ, ಅಳಲೆಕಾಯಿ, ಶುಂಠಿ, ಇವುಗಳ ಕಷಾಯಕ್ಕೆ ಗುಗ್ಗುಲವನ್ನೂ ಗೋಮೂತ್ರವನ್ನೂ ಸೇರಿಸಿ ಕುಡಿಸಿದರ ಶೋಥೆ, ಉದರಗಳು ಎಲ್ಲವೂ ಶಮನಹೊಂದುತ್ತವೆ.

ಪಥ್ಯಾರೋಹಿತಕಕ್ವಾಥಂಯವಕ್ಷಾರಕಣಾಯುತಂ ॥ ೧೧೯ ॥
ಪಿಬೇತ್ಪ್ರಾತರ್ಯಕೃತ್ಪ್ಲೀಹಗುಲ್ಮೋದರನಿವೃತ್ತಯೆ ॥

ಅಳಲೇಕಾಯಿ, ರೋಹಿತಕವೆಂದರೆ (ಕಾಡುಹಾಲುವಾಣ, ಮುಳ್ಳುಮುತ್ತಗ ಎಂಬ ಎರಡು ಹೆಸರು) ಇವೆರಡರ ಕಷಾಯಕ್ಕೆ ಯವಕ್ಷಾರ, ಹಿಪ್ಪಲಿಯಚೂರ್ಣ ಇವುಗಳನ್ನು ಸೇರಿಸಿ ಬೆಳಿಗ್ಗೆ ಸೂರ್ಯೋದಯಕ್ಕೆ ಕುಡಿಯುತ್ತ ಬಂದರೆ ಯಕೃದುದರ (ಲಿವರ್ ಕಂಪ್ಲೇಂಟು) ಪ್ಲೀಹಾಭಿವೃದ್ಧಿ, ಗುಲ್ಮ, ಉದರರೋಗಗಳು ಇವುಗಳೆಲ್ಲಾ ನಿವೃತ್ತಿಯಾಗುತ್ತವೆ.

ಪುನರ್ನವಾದಾರುನಿಶಾನಿಶಾಶುಂಠೀಹರೀತಕೀ ॥ ೧೨೦ ॥
ಗುಡೂಚೀಚಿತ್ರಕೋಭಾರ್ಙ್ಗೀದೇವದಾರುಚತೈಶ್ಶೃತಃ ॥
ಪಾಣಿಪಾದೋದರಮುಖಪ್ರಾಪ್ತಂಶೋಫಂನಿವಾರಯೇತ್ ॥೧೨೧॥

ಕೊಮ್ಮೆಯಬೇರು, ಮರಅರಿಸಿನ, ಅರಿಸಿನ, ಶುಂಠಿ, ಅಳಲೆಕಾಯಿ, ಅಮೃತಬಳ್ಳಿ, ಚಿತ್ರಮೂಲ, ಗಂಟುಪರಂಗಿ, ದೇವದಾರಿಚಕ್ಕೆ, ಇವುಗಳನ್ನು ಸಮಾಂಶ

ಶೇರಿಸಿ ಕಷಾಯಮಾಡಿ ಕುಡಿಸಿದರೆ—ಕೈಯ್ಯಿ, ಕಾಲು, ಹೊಟ್ಟೆ, ಮುಖ ಇವು ಗಳಲ್ಲಿ ಉಂಟಾಗಿರುವ ಶೋಭೆಯನ್ನು ಗುಣಪಡಿಸುತ್ತದೆ.

ಫಲತ್ರಿಕೋದ್ಭವಂಕ್ವಾಥಂಗೋಮೂತ್ರೇಣೈವಪಾಯಯೇತ್ ॥
ವಾತಶ್ಲೇಷ್ಮಕೃತಂಹಂತಿಶೋಥಂವೃಷಣಸಂಭವಂ ॥ ೧೨೨ ॥

ತ್ರಿಫಲ ಕಷಾಯವನ್ನು ಮಾಡಿ ಜೊತೆಯಲ್ಲಿ ಗೋಮೂತ್ರವನ್ನು ಸೇರಿಸಿ ಕುಡಿಸುವುದರಿಂದ ವಾತ ಮತ್ತು ಶ್ಲೇಷ್ಮಗಳ ಪ್ರಕೋಪದಿಂದ ಹುಟ್ಟಿರುವ ವೃಷಣಶೋಥವೆಂದರೆ ತರಡಿನ ಬಾಕನ್ನು ಶಮನವಾಡುತ್ತದೆ.

ರಾಸ್ನಾವೃತಾಬಲಾಯಷ್ಟೀಗೋಕಂಟೈರಂಡಜಶೃತಃ ॥
ಏರಂಡತೈಲಸಂಯುಕ್ತೋವೃದ್ಧಿಮಂತ್ರಭವಾಂಜಯೇತ್॥ ೧೨೩ ॥

ಸಣ್ಣರಾಶ್ಮೆ, ಅಮೃತಬಳ್ಳಿ, ಕಳ್ಳಂಗಡ್ಲೆ, ಜ್ಯೇಷ್ಠಮಧು, ನೆಗ್ಗಲು, ಹರಳು ಬೇರು, ಇವುಗಳ ಕಷಾಯಕ್ಕೆ ಹರಳೆಣ್ಣೆಯನ್ನು ಸೇರಿಸಿ ಕುಡಿಸಿದರೆ ಅಂತ್ರವೃದ್ಧಿ ಎಂದರೆ ವೃಷಣವಾತವನ್ನು ಗೆಲ್ಲಬಹುದು.

ಕಾಂಚನಾರತ್ವಚಃಕ್ವಾಥಶ್ಶುಂಠೀಚೂರ್ಣೇನನಾಶಯೇತ್ ॥
ಗಂಡಮಾಲಾಂತಥಾಕ್ವಾಥಃಕ್ಷೌದ್ರೇಣವರುಣತ್ವಚಃ ॥ ೧೨೪ ॥

ಕಂಚುವಾಳದ ಗಿಡದ ಚಕ್ಕೆಯ ಕಷಾಯಕ್ಕೆ ಶುಂಠಿಯ ಚೂರ್ಣವನ್ನು ಸೇರಿಸಿ ಕುಡಿಯಿಸುವುದರಿಂದ ಗಂಡಮಾಲಾರೋಗವು ಶಾಂತವಾಗುತ್ತದೆ ವರುಣತ್ವಕ್ ಎಂದರೆ ಜಾಲೀಪಟ್ಟೆಯ ಕಷಾಯದೊಡನೆ ಜೇನುತುಪ್ಪ ಸೇರಿಸಿ ಕೊಟ್ಟರೂ ಗಂಡಮಾಲೆಯು ಶಾಂತಿಯಾಗುತ್ತದೆ

ಶಾಖೊಟವಲ್ಕಲಕ್ವಾಥಂಗೋಮೂತ್ರೇಣಯುತಂಪಿಬೇತ್ ॥
ಶ್ಲೀಪದಾನಾಂವಿನಾಶಾಯಮೇದೋದೋಷನಿವೃತ್ತಯೆ ॥ ೧೨೫ ॥
ಪುನರ್ನವಾವರುಣಯೋಃಕ್ವಾಥೋಂತರ್ವಿದ್ರಧೀನ್‌ಜಯೇತ್ ॥
ತಥಾಶಿಗ್ರುಭವಃಕ್ವಾಥೋಹಿಂಗುಸೈಂಧವಸಂಯುತಃ ॥ ೧೨೬ ॥

ಮುಳ್ಳುಮುತ್ತುಗದ ಚಕ್ಕೆಯ ಕಷಾಯಮಾಡಿ ಆದರ ಜೊತೆಯಲ್ಲಿ ಗೋಮೂತ್ರ ಸೇರಿಸಿ ಕುಡಿಸಿದರೆ ಆನೆಕಾಲು, ಮೇದೋವೃದ್ಧಿ ಇವುಗಳು ಕಡಮೆಯಾಗುತ್ತವೆ. ಕೊಮ್ಮೆಯಬೇರು, ಜಾಲಿಯಪಟ್ಟೆ ಇವುಗಳ ಕಷಾಯವನ್ನು ಅಂತರ್ವಿದ್ರಧಿ ಎಂಬ ವ್ರಣರೋಗದಲ್ಲಿ ಕೊಡಬಹುದು. ನುಗ್ಗೇತೊಪ್ಪೆಯ ಕಷಾಯವನ್ನು ಇಂಗು ಮತ್ತು ಸೈಂಧವಲವಣಗಳೊಡನೆ ಸೇರಿಸಿ ಕೊಟ್ಟರೂ ಅಂತರ್ವಿದ್ರಧಿರೋಗವು ಶಮನವಾಗುತ್ತದೆ.

ವರುಣಾದಿಗಣಕ್ವಾಥಮಪಕ್ವೇಮಧ್ಯವಿದ್ರಧೌ ||
ಊಷಕಾದಿರಜೋಯುಕ್ತಂಪಿಬೇಚ್ಛಮನಹೇತವೆ || ೧೨೭ ||
ವರುಣೊಬಕಪುಷ್ಪಶ್ಚಬಿಲ್ವಾಪಾಮಾರ್ಗಚಿತ್ರಕಾಃ ||
ಅಗ್ನಿಮಂಥದ್ವಯಂಶಿಗ್ರುದ್ವಯಂಚಬೃಹತೀದ್ವಯಂ || ೧೨೮ ||
ಸೌರೇಯಕತ್ರಯಂಮೂರ್ವಾಮೇಷಶೃಂಗೀಕಿರಾತಕಃ ||
ಅಜಶೃಂಗೀಚಬಿಂಬೀಚಕರಂಜಶ್ಚಶತಾವರೀ || ೧೨೯ ||
ವರುಣಾದಿಗಣಕ್ವಾಥಃಕಫಮೇದೊಹರಃಸ್ಮೃತಃ ||
ಹಂತಿಗುಲ್ಮಂಶಿರಶ್ಶೂಲಂತಥಾಭ್ಯಂತರವಿದ್ರಧೀನ್ || ೧೩೦ ||

ಮುಂದೆ ಹೇಳುವ ವರುಣಾದಿಗಣೋಕ್ತಗಳಾದ ಮೂಲಿಕೆಗಳ ಕಷಾಯ ಮಾಡಿ ಅದರ ಜೊತೆ ಊಷಕಾದಿಗಣೋಕ್ತ ದ್ರವ್ಯಗಳ ಚೂರ್ಣವನ್ನು ಅದರೊಟ್ಟಿಗೆ ಸೇರಿಸಿ ಪಾನಮಾಡಿಸಿದಲ್ಲಿ ಪಕ್ವವಾಗದೆ ಇರುವ ಮಧ್ಯಮವಿದ್ರಧಿಯಲ್ಲಿ ಅತ್ಯುಪಯುಕ್ತವಾಗಿರುತ್ತದೆ. ವರುಣಾದಿಗಣವೆಂದರೆ ಜಾಲೀತೊಪ್ಪೆ, ಅಗಸೆ, ಬಿಲ್ವ, ಉತ್ತರಣೆ, ಚಿತ್ರಮೂಲ, ನರುವಲ, ಬೂರಗ, ನುಗ್ಗಿ, ಶೋಭಾಂಜನ (ಮಧುಶಿಗ್ರು), ಹೆಗ್ಗುಳ್ಳ, ನೆಲಗುಳ್ಳ, ಸೌರೇಯಕತ್ರಯವೆಂದರೆ ಹಳದಿಗೋರಂಟಿ ಬಿಳೀ ಗೋರಂಟಿ, ನೀಲವರ್ಣದ ಗೋರಂಟಿ, ಕುರಟಿಗೆ, ಮೇಷಶೃಂಗಿ ಎಂಬ ಗಂದಿಗೆ ಜಿನಸು, ಚಿರಾಯಿತ, ಕರ್ಕಾಟಕಶೃಂಗಿ, ತೊಂಡೆ, ಹೊಂಗೆ, ಆಷಾಡಿ ಬೇರು, ಇಷ್ಟಕ್ಕೆ ವರುಣಾದಿಗಣವೆಂಬ ಹೆಸರು. ಉಷಾದಿಗಣವೆಂದರೆ—ಗ್ರಂಥಾಂತರದಲ್ಲಿ ಹೇಳಿರುವ ಉಷಕ (ಉಪ್ಪುಮಣ್ಣು), ಸೈಂಧವಲವಣ, ಶಿಲಾಜತು, ಕಾಸೀಸ, ಪುಷ್ಪಕಾಸೀಸ, ಇಂಗು, ಗುಗ್ಗುಲ, ತುತ್ಥ ಇವುಗಳಿಗೆ ಉಷಾದಿಗಣವೆಂಬ ಹೆಸರು.

ಖದಿರತ್ರಿಫಲಾಕ್ವಾಥೋಮಹಿಷೀಘೃತಸಂಯುತಃ ||
ವಿಡಂಗಚೂರ್ಣಯುಕ್ತಶ್ಚಭಗಂದರವಿನಾಶನಃ || ೧೩೧ ||

ಕಗ್ಗಲೀತೊಪ್ಪೆ, ತ್ರಿಫಲ ಇವುಗಳ ಕಷಾಯಮಾಡಿ ಅದಕ್ಕೆ ಎಮ್ಮೆಯ ತುಪ್ಪ, ವಾಯುವಿಡಂಗದ ಚೂರ್ಣ ಇವುಗಳನ್ನು ಸೇರಿಸಿ ಕುಡಿಸಿದರೆ ಭಗಂದರ ವ್ರಣವು ನಾಶವಾಗುತ್ತದೆ.

ಪಟೋಲತ್ರಿಫಲಾನಿಂಬಕಿರಾತಖದಿರಾಸನೈಃ ||
ಕ್ವಾಥಃಪೀತೋಜಯೇತ್ಸರ್ವಾನುಪದಂಶಾನ್ಸಗುಗ್ಗುಲುಃ ||೧೩೨||

ಕೈಪಡವಲ, ತ್ರಿಫಲ, ಬೇವಿನತೊಪ್ಪೆ, ಚಿರಾಯಿತ, ಕಗ್ಗಲಿತೊಪ್ಪೆ, ಅಸನವೆಂದರೆ ಹೊನ್ನೇತೊಪ್ಪೆ, ಇವುಗಳ ಕಷಾಯದ ಜೊತೆಗೆ ಗುಗ್ಗುಳವನ್ನು ಸೇರಿಸಿ ಕುಡಿಸಿದರೆ ಸಮಸ್ತ ವಿಧವಾದ ಉಪದಂಶರೋಗವನ್ನೂ ಗುಣಪಡಿಸುತ್ತದೆ.

ಅಮೃತೈರಂಡವಾಸಾನಾಂಕ್ವಾಥಏರಂಡತೈಲಯುಕ್ ॥
ಪೀತಸ್ಸರ್ವಾಂಗಸಂಚಾರಿವಾತರಕ್ತಂಜಯೇದ್ಧ್ರುವಂ ॥ ೧೩೩ ॥

ಅಮೃತಬಳ್ಳಿ, ಹರಳುಬೇರು, ಆಡುಸೋಗೇಸೊಪ್ಪು, ಇವುಗಳ ಕಷಾಯದ ಜೊತೆಗೆ ಹರಳೆಣ್ಣೆಯನ್ನು ಸೇರಿಸಿ ಕುಡಿಸಿದರೆ ಸಮಸ್ತ ಅವಯವಗಳಲ್ಲಿಯೂ ಓಡ್ಯಾಡುತ್ತಿರುವ ವಾತರಕ್ತವೆಂಬ ರೋಗವನ್ನು ಶಮನಮಾಡುತ್ತದೆ.

ಪಟೋಲಂತ್ರಿಫಲಾತಿಕ್ತಾಗುಡೂಚೀಚಶತಾವರೀ ॥
ಏತತ್ಕ್ವಾಥೋಜಯೇತ್ಪೀತೋವಾತಾಸ್ರಂದಾಹಸಂಯುತಂ ೧೩೪

ಕಹಿಪಡವಲ, ತ್ರಿಫಲ, ಕಟುಕರೋಹಿಣಿ, ಅಮೃತಬಳ್ಳಿ, ಆಷಾಡೀಬೇರು ಇವುಗಳ ಕಷಾಯವನ್ನು ಕುಡಿಸಿದಲ್ಲಿ ಮೈಯ್ಯುರಿಯೊಡನೆ ಕೂಡಿರುವ ವಾತರಕ್ತ ರೋಗವು ಶಮನವಾಗುತ್ತದೆ.

ಕ್ವಾಥೋವಲ್ಗುಜಚೂರ್ಣಾಢ್ಯೋಧಾತ್ರೀಖದಿರಸಾರಯೋಃ ॥
ಜಯೇತ್ಸುಶೀಲಿತೋನಿತ್ಯಂಶ್ವಿತ್ರಂಪಥ್ಯಾಶಿನಾಂನೃಣಾಂ ॥ ೧೩೫ ॥

ನೆಲ್ಲಿಯಕಾಯಿ, ಕಾಚು ಇವುಗಳ ಕಷಾಯಮಾಡಿ, ಬಾವಂಚಿಬೀಜದ ಚೂರ್ಣವನ್ನು ಸೇರಿಸಿ ಪ್ರತಿನಿತ್ಯವೂ ಕುಡಿಸುತ್ತ ಬಂದರೆ ತೊನ್ನು ಎನ್ನಿಸಿ ಕೊಳ್ಳುವ ಬಿಳಿಯ ಕುಷ್ಠವನ್ನು ನಾಶಪಡಿಸುತ್ತದೆ. ಕುಷ್ಠರೋಗೋಕ್ತಗಳಾದ ಪಥ್ಯಗಳನ್ನು ಮಾತ್ರ ಸರಿಯಾಗಿ ಮಾಡಬೇಕು.

ಮಂಜಿಷ್ಠಾತ್ರಿಫಲಾತಿಕ್ತಾವಚಾದಾರುನಿಶಾಮೃತಾ ॥
ನಿಂಬಶ್ಚೈಷಾಂಕೃತಃಕ್ವಾಥೋವಾತರಕ್ತವಿನಾಶನಃ ॥ ೧೩೬ ॥
ಪಾಮಾಕಪಾಲಿಕಾಕುಷ್ಠರಕ್ತಮಂಡಲಜಿನ್ಮತಃ ॥

ಮಂಜಿಷ್ಠೆ, ತ್ರಿಫಲ, ಕಟುಕರೋಹಿಣಿ, ಬಜೆ, ಮರಅರಿಸಿನ, ಅಮೃತಬಳ್ಳಿ, ಬೇವಿನತೊಪ್ಪೆ, ಇವುಗಳ ಕಷಾಯವನ್ನು ಕುಡಿಸುತ್ತ ಬರುವುದರಿಂದ ವಾತರಕ್ತ ವೆಂಬ ರೋಗವನ್ನೂ, ತುರಿಕೆ, ಕಪಾಲಕುಷ್ಠ, ರಕ್ತಕುಷ್ಠ, ಮಂಡಲಕುಷ್ಠ ಇವು ಗಳನ್ನು ಕಡಮೆಮಾಡುತ್ತದೆ.

ಮಂಜಿಷ್ಠಾಮುಸ್ತಕುಟಜಗುಡೂಚೀಕುಷ್ಠನಾಗರೈಃ ॥ ೧೩೭ ॥
ಭಾರ್ಗೀಕ್ಷುದ್ರಾವಚಾನಿಂಬನಿಶಾದ್ವಯಫಲತ್ರಿಕೈಃ ॥
ಪಟೋಲಕಟುಕೀಮೂರ್ವಾವಿಡಂಗಾಸನಚಿತ್ರಕೈಃ ॥ ೧೩೮ ॥
ಶತಾವರೀತ್ರಾಯಮಾಣಾಕೃಷ್ಣೇಂದ್ರಯವವಾಸಕೈಃ ॥

ಭೃಂಗರಾಜಮಹಾದಾರುಪಾಠಾಖದಿರಚಂದನೈಃ ॥ ೧೩೯ ॥
ತ್ರಿವೃದ್ವರುಣಕೈರಾತಬಾಕುಚೀಕೃತಮಾಲಕೈಃ ॥
ಶಾಖೋಟಕಮಹಾನಿಂಬಕರಂಜಾತಿವಿಷಾಜಲೈಃ ॥ ೧೪೦ ॥
ಇಂದ್ರವಾರುಣಿಕಾನಂತಾಸಾರಿಬಾಪರ್ಪಟೈಸ್ಸಮೈಃ ॥
ಏಭಿಃಕೃತಂಪಿಬೇತ್ ಕ್ವಾಥಂಕಣಾಗುಗ್ಗುಲುಸಂಯುತಂ ॥ ೧೪೧ ॥
ಅಷ್ಟಾದಶಸುಕುಷ್ಠೇಷುವಾತರಕ್ತಾರ್ದಿತೇತಥಾ ॥
ಉಪದಂಶೇಶ್ಲೀಪದೇಚಪ್ರಸುಪ್ತೌಪಕ್ಷಘಾತಕೇ ॥ ೧೪೨ ॥
ಮೇದೋದೋಷೇನೇತ್ರರೋಗೇಮಂಜಿಷ್ಠಾದಿಃಪ್ರಶಸ್ಯತೆ ॥

ಬೃಹನ್ಮಂಜಿಷ್ಠಾದಿಕ್ವಾಥ- ಮಂಜಿಷ್ಠೆ, ಭದ್ರಮುಸ್ತೆ, ಕೊಡಸದಚಕ್ಕೆ, ಗುಡೂಚೀ(ಅಮೃತಬಳ್ಳಿ), ಚಂಗಲಕೋಷ್ಠ,ಶುಂಠಿ,ಗಂಟುಭಾರಂಗಿ,ಅಳಲೆಕಾಯಿ,ಬಜೆ, ಬೇವಿನಪಟ್ಟೆ, ಅರಿಸಿನ, ಮರಅರಿಸಿನ, ತ್ರಿಫಲ (ಅಳಲೆಕಾಯಿ, ತಾರೇಕಾಯಿ, ನೆಲ್ಲಿಕಾಯಿ), ಕೈಪಡವಲ, ಕಟುರೋಹಿಣಿ, ಕುರಟಿಗೆ, ವಾಯವಿಡಂಗ, ಹೊನ್ನೆ, ಚಿತ್ರಮೂಲ, ಆಷಾಡೀಬೇರು, ತ್ರಾಯಮಾಣಾ (ಗಜಿಗ), ಜೀರಿಗೆ, ಕೊಡಸದ ಬೀಜ, ಆಡುಸೋಗೇ ಸೊಪ್ಪು, ಗರುಗದ ಸೊಪ್ಪು, ದೇವದಾರೀಚಕ್ಕೆ, ಅಗಳು ಶುಂಠಿ, ಜಾಲೀತೊಪ್ಪೆ, ರಕ್ತಚಂದನ, ತಿಗಡೆ, ಕಗ್ಗಲೀತೊಪ್ಪೆ, ಚಿರಾಯಿತ, ಬಾವಂಚಿಬೀಜ, ಕಕ್ಕೇಗಿಡ, ಮುಳ್ಳುಮುತ್ತುಗ, ಬೇವಿನತೊಪ್ಪೆ, ಹೊಂಗೆ, ಅತಿ ಬಜೆ, ಭದ್ರಮುಸ್ತೆ, ವಾಸಮಿಕ್ಕೆಕಾಯಿ, ತುರಚಿ, ಸುಗಂಧಿ, ಪರ್ಪಾಟಕ ಇವು ಗಳನ್ನು ಸಮಾಂಶ ಸೇರಿಸಿ ಕಷಾಯಮಾಡಿ ಹಿಪ್ಪಲಿಚೂರ್ಣ, ಗುಗ್ಗುಳ ಇವು ಗಳನ್ನು ಸೇರಿಸಿ ಕುಡಿಸುತ್ತಾ ಬಂದರೆ ಹದಿನೆಂಟು ಪ್ರಕಾರದ ಕುಷ್ಠಗಳು, ವಾತ ರಕ್ತ, ಆರ್ದಿತವಾತ, ಉಪದಂಶ,(ಸಿಫಿಲಿಸ್) ಆನೆಕಾಲು, ಚರ್ಮದಲ್ಲಿ ಸ್ಪರ್ಶ ಜ್ಞಾನ ಹೋಗುವುದು, ಪಕ್ಷವಧ, ಮೇದೋವೃದ್ಧಿಜನ್ಯವಾದ ರೋಗಗಳು, ನೇತ್ರ ರೋಗಗಳು ಇವುಗಳಲ್ಲೆಲ್ಲಾ ಈ ಬೃಹನ್ಮಂಜಿಷ್ಠಾದಿಕಷಾಯವು ಉತ್ತಮ ಗುಣ ಪ್ರದವಾದ ಔಷಧವಾಗಿದೆ.

ಪಥ್ಯಾಕ್ಷಧಾತ್ರೀಭೂನಿಂಬೈರ್ನಿಶಾನಿಂಬಾಮೃತಾಯುತೈಃ ॥ ೧೪೩ ॥
ಕೃತಃಕ್ವಾಥಃಷಡಂಗೋಯಂಸಗುಡಶ್ಶೀರ್ಷಶೂಲನುತ್ ॥
ಭ್ರೂಶಂಖಕರ್ಣಶೂಲಾನಿತಥಾರ್ಧಶಿರಸೋರುಜಂ ॥ ೧೪೪ ॥
ಸೂರ್ಯಾವರ್ತಂಶಂಖಕಂಚದಂತಪಾತಂಚತದ್ರುಜಂ ॥
ನಕ್ತಾಂಧ್ಯಂಪಟಲಂಶುಕ್ರಂಚಕ್ಷುಃಪೀಡಾಂವ್ಯಪೋಹತಿ ॥ ೧೪೫ ॥

ಪಥ್ಯಾಕ್ವಾಥ–ಅಳಲೆಕಾಯಿ, ತಾರೇಕಾಯಿ, ನೆಲ್ಲಿಕಾಯಿ, ಚಿರಾಯಿತ, ಅರಿ ಸಿನ, ಬೇವಿನಪಟ್ಟೆ, ಅಮೃತಬಳ್ಳಿ, ಇವುಗಳ ಕಷಾಯದ ಜೊತೆಗೆ ಬೆಲ್ಲವನ್ನು

ಸೇರಿಸಿ ಕುಡಿಸಿದಲ್ಲಿ ತಲೆಶೂಲೆ, ಹುಬ್ಬಿನ ವಡಕ, ತಲೆಯ ಪಾರ್ಶ್ವದಶೂಲೆ, ಕಿವಿಶೂಲೆ, ಅರ್ಧತಲೆನೋವು, ಸೂರ್ಯಾವರ್ತವೆಂಬ ತಲೆನೋವು, ಶಂಖಕವೆಂಬ ಶಿರೋವೇದನೆ. ಹಲ್ಲುನೋವು, ನಕ್ತಾಂಧ್ಯವೆಂದರೆ ಹಗಲು ಕಣ್ಣುಕಾಣದಿರುವುದು, ಕಣ್ಣಿನಲ್ಲಿ ಪರೆಬರುವುದು, ಶುಕ್ರನಕಣ್ಣು, ಇತರ ಕಣ್ಣುನೋವುಗಳು ಇವುಗಳನ್ನು ಗುಣಪಡಿಸುತ್ತದೆ.

ವಾಸಾವಿಶ್ವಾಮೃತಾದಾರ್ವೀರಕ್ತಚಂದನಚಿತ್ರಕೈಃ ||
ಭೂನಿಂಬನಿಂಬಕಟುಕಾಪಟೋಲತ್ರಿಫಲಾಂಬುದೈಃ || ೧೪೬ ||
ಯವಕಾಲಿಂಗಕುಟಜೈಃ ಕ್ವಾಥಸ್ಸರ್ವಾಕ್ಷಿರೋಗಹಾ ||
ವೈಸ್ವರ್ಯಂಪೀನಸಂ ಶ್ವಾಸಂನಾಶಯೇದುರಸಃಕ್ಷತಂ || ೧೪೭ ||

ಆಡುಸೋಗೇಸೊಪ್ಪು, ಶುಂಠಿ, ಅಮೃತಬಳ್ಳಿ, ಮರಅರಿಸಿನ, ರಕ್ತಚಂದನ, ಚಿತ್ರಮೂಲ, ಚಿರಾಯಿತ, ಬೇವಿನತೊಪ್ಪೆ, ಕಟುರೋಹಿಣಿ, ಕೈಪಡವಲ, ತ್ರಿಫಲ, ಭದ್ರಮುಸ್ತೆ, ಯವೆ ಎಂಬ ಧಾನ್ಯ, ಕೊಡಸದಬೀಜ, ಕೊಡಸದಚಕ್ಕೆ, ಇವುಗಳ ಕಷಾಯವು ಎಲ್ಲಾ ವಿಧವಾದ ನೇತ್ರರೋಗಗಳನ್ನೂ, ಸ್ವರ ಕೆಟ್ಟು ಹೋಗೋಣವನ್ನೂ ನೆಗಡಿಯನ್ನೂ, ಉಬ್ಬಸವನ್ನೂ, ಉರಃಕ್ಷತವನ್ನೂ ಗುಣಪಡಿಸುತ್ತದೆ, ಉರಃಕ್ಷತವೆಂದರೆ ಎದೆನೋವು.

ಅಮೃತಾತ್ರಿಫಲಾಕ್ವಾಥಃ ಪಿಪ್ಪಲೀಚೂರ್ಣಸಂಯುತಃ ||
ಸಕ್ಷೌದ್ರಶ್ಶೀಲಿತೋನಿತ್ಯಂಸರ್ವನೇತ್ರವ್ಯಥಾಂಜಯೇತ್ || ೧೪೮ ||

ಅಮೃತಬಳ್ಳಿ, ತ್ರಿಫಲೆ, ಇವುಗಳ ಕಷಾಯಮಾಡಿ ಹಿಪ್ಪಲಿಯ ಚೂರ್ಣವನ್ನು ಸೇರಿಸಿ ಜೇನುತುಪ್ಪವನ್ನೂ ಸೇರಿಸಿ ತೆಗದುಕೊಂಡಲ್ಲಿ ಸಮಸ್ತವಾದ ನೇತ್ರರೋಗವನ್ನೂ ಗುಣಪಡಿಸಿಕೊಳ್ಳಬಹುದು.

ಅಶ್ವತ್ಥೋದುಂಬರಪ್ಲಕ್ಷವಟವೇತಸಜಂಶೃತಂ ||
ವ್ರಣಶೋಥೋಪದಂಶಾನಾಂನಾಶನಂಕ್ಷಾಳನಾತ್ಸ್ಮೃತಂ ||೧೪೯||

ಅರಳಿ, ಅತ್ತಿ, ಬಸರಿ, ಆಲ, ಹಬ್ಬೆ, ಇವುಗಳ ಚಕ್ಕೆಯ ಕಷಾಯಮಾಡಿ ವ್ರಣಗಳು, ಬಾವು, ಮೇಹವ್ರಣಗಳು ಇವುಗಳನ್ನೆಲ್ಲಾ ತೊಳೆಯುತ್ತಾ ಬಂದರೆ ವ್ರಣಗಳು ಆರಿ ಮಾದುಹೋಗುವುವೆಂದು ತಾತ್ಪರ್ಯ.

ಕಷಾಯಗಳು ಸಂಪೂರ್ಣ.

## ಪ್ರ ಮ ಥ್ಯಾ .

ಪ್ರಮಥ್ಯಾಪ್ರೋಚ್ಯತೇದ್ರವ್ಯಪಲಾತ್ಕಲ್ಕೀಕೃತಾತ್ಶೃತಾತ್ ||
ತೋಯೇಷ್ಟಗುಣಿತೇತಸ್ಯಾಃಪಾನಮಾಹುಃಪಲದ್ವಯಂ || ೧೫೦ ||

ಪ್ರಮಥ್ಯಾ ಎಂಬುವದೊಂದು ಬಗೆಯ ಕಷಾಯವೇ. ಅದನ್ನು ಮಾಡುವ ಕ್ರಮವೇನಂದರೆ—ಪ್ರಮಥ್ಯಾ ಕಷಾಯವನ್ನು ಮಾಡಬೇಕಾದರೆ ದ್ರವ್ಯ ಒಂದು ಪಲ ತೆಗದುಕೊಂಡು ನೀರುಹಾಕಿ ಅರದು ಕಲ್ಕಮಾಡಿ ಕುದಿಸಿ ಅಷ್ಟಗುಣಜಲವನ್ನು ಸೇರಿಸಿ ಕುಡಿಯಿಸಬೇಕು, ಕುಡಿಸುವ ಪರಿಮಾಣ ಎರಡು ಪಲಮಾತ್ರ.

**ಮುಸ್ತಕೇಂದ್ರಯವೈಸ್ಸಿದ್ಧಾಪ್ರಮಥ್ಯಾದ್ವಿಪಲೋನ್ಮಿತಾ ।।**
**ಸುಶೀತಾಮಧುಸಂಯುಕ್ತಾರಕ್ತಾತೀಸಾರನಾಶಿನೀ ।। ೧೫೧ ।।**

ಭದ್ರಮುಸ್ತೆ, ಕೊಡಸದತೊಪ್ಪೆ ಇವುಗಳಿಂದ ಹಿಂದೆ ಹೇಳಿರುವ ಕ್ರಮದಿಂದ ಪ್ರಮಥ್ಯಾ ಎಂಬ ಕಷಾಯವನ್ನು ಮಾಡಿ ಜೇನುತುಪ್ಪವನ್ನು ಸೇರಿಸಿ ಕುಡಿಸುವುದರಿಂದ ರಕ್ತಾತಿಸಾರವನ್ನು ಗುಣಮಾಡಬಹುದು.

ಇಲ್ಲಿಗೆ ಪ್ರಮಥ್ಯಾ ಸಂಪೂರ್ಣ.

## ಯವಾಗೂ (ಗಂಜಿ) ಕಲ್ಪನೆ

**ಸಾಧ್ಯಂಚತುಷ್ಪಲಂದ್ರವ್ಯಂಚತುಷ್ಷಷ್ಟಿಪಲೇಂಬುನಿ ।।**
**ತತ್ಕ್ವಾಥೇನಾರ್ಧಶಿಷ್ಟೇನಯವಾಗೂಂಸಾಧಯೇದ್ಘನಾಂ ।।೧೫೨।।**

ಯವಾಗು ಎಂದರೆ ಗಂಜಿಗೆ ಹೆಸರು. ಇದು ಸಾಮಾನ್ಯವಾಗಿ ರೋಗಿಗೆ ಕೊಡುವ ಲಘ್ವಾಹಾರ ರೂಪವಾಗಿ ನೀರಿನಿಂದ ತಯಾರಿಸುವುದೊಂದು ವಿಧ, ನೀರಿಗೆ ಬದಲಾಗಿ ಔಷಧದ್ರವ್ಯಗಳ ಕಷಾಯವನ್ನು ಮಾಡಿಕೊಂಡು ಆ ಕಷಾಯದಿಂದ ಗಂಜಿಯನ್ನು ತಯಾರಿಸುವುದೊಂದು ವಿಧ, ಕಷಾಯದಿಂದ ಗಂಜಿಯನ್ನು ತಯಾರಿಸಿ ಉಪಯೋಗಿಸುವುದು ಅನೇಕ ರೋಗಗಳಲ್ಲಿ ಆವಶ್ಯಕ ಬೀಳುವುದರಿಂದ ಆ ಕ್ರಮವನ್ನು ಹೇಳುತ್ತಾನೆ—ಮೊದಲು ಕಷಾಯಮಾಡಬೇಕಾದ ಮೂಲಿಕೆಗೆ ಹದಿನಾರರಷ್ಟು ನೀರು ಸೇರಿಸಿ ಅರ್ಧ ಉಳಿಯುವಂತೆ ಕಷಾಯ ಮಾಡಿ ಶೋಧಿಸಿಕೊಂಡು ಅದಕ್ಕೆ ಅಕ್ಕಿಯ ನುಚ್ಚರವೆ ವಗೈರೆ ಸೇರಿಸಿ ಗಂಜಿ ಮಾಡಿ ಕುಡಿಯುವುದಕ್ಕೆ ಕೊಡುವುದು, ಇದಕ್ಕೇನೇ ಯವಾಗೂ ಎಂಬ ಹೆಸರು.

**ಆಮ್ರಾಮ್ರಾತಕಜಂಬೂತ್ವಕ್ಕಷಾಯೇವಿಪಚೇದ್ಬುಧಃ ।।**
**ಯವಾಗೂಂಶಾಲಿಭಿಸ್ಸಿಕ್ತಾಂತಾಂಭುಕ್ತ್ವಾಗ್ರಹಣೀಂಜಯೇತ್ ।। ೧೫೩ ।।**

ಮಾವಿನಚಕ್ಕೆ, ಅಮಟೆಚಕ್ಕೆ, ನೇರಿಲಚಕ್ಕೆ ಇವುಗಳ ಕಷಾಯವನ್ನು ಹಿಂದೆ ಹೇಳಿದಂತೆ ಮಾಡಿ ಆ ಕಷಾಯದಲ್ಲಿ ಅಕ್ಕಿಯ ನುಚ್ಚನ್ನು ಸೇರಿಸಿ ಗಂಜಿಯಾಗಿ ಮಾಡಿ ಅದನ್ನು ಕುಡಿಸುತ್ತ ಬಂದಲ್ಲಿ ದುಸ್ಸಾಧ್ಯವಾದ ಗ್ರಹಣೀರೋಗವು ಸುಲಭವಾಗಿ ಗುಣವಾಗುತ್ತದೆ.

## ಯೂಷಕಲ್ಪನೆ.

**ಕಲ್ಕದ್ರವ್ಯಪಲಂಶುಂಠೀಪಿಪ್ಪಲೀಚಾರ್ಧಕಾರ್ಷಿಕೇ ||**
**ವಾರಿಪ್ರಸ್ಥೇನವಿಪಚೇತ್ಸದ್ರವೋಯೂಷಉಚ್ಯತೇ || ೧೫೪ ||**

ಯೂಷವೆಂದರೆ ಇದೊಂದು ಬಗೆಯ ಕಷಾಯ. ಒಂದು ಪ್ರಸ್ಥ (ಅರವತ್ತು ನಾಲ್ಕು ತೊಲ) ನೀರಿನಲ್ಲಿ, ಔಷಧ ದ್ರವ್ಯಗಳ ಕಲ್ಕ ಒಂದೊಂದು ಪಲವನ್ನೂ, ಶುಂಠಿ, ಹಿಪ್ಪಲಿ ಇವುಗಳು ಅರ್ಧಕರ್ಷ ಸಹ ಸೇರಿಸಿ ಚನ್ನಾಗಿ ಕಾಯಿಸಿ ತಯಾರಿಸಿದ ದ್ರವ್ಯಕ್ಕ ಯೂಷವೆಂದು ಹೆಸರು.

**ಕುಲುತ್ಥಯವಕೋಲೈಶ್ಚಮುದ್ಗೈರ್ಮೂಲಕಶುಂಠಕೈಃ ||**
**ಶುಂಠೀಧಾನ್ಯಕಯುಕ್ತೈಶ್ಚಯೂಷಶ್ಲೇಷ್ಮಾನಿಲಾಪಹಃ || ೧೫೫ ||**
**ಸಪ್ತಮುಷ್ಟಿಕಇತ್ಯೇಷಸನ್ನಿಪಾತಜ್ವರಾಂಜಯೇತ್ ||**
**ಆಮವಾತಹರಃಕಂಠಹೃದ್ವಕ್ತ್ರಾಣಾಂವಿಶೋಧನಃ || ೧೫೬ ||**

ಹುರುಳಿ,ಯವೆ, ಬೋರೇತೊಪ್ಪೆ, ಹೆಸರು, ಮೂಲಕಶುಂಠವೆಂದರೆ ಒಣಗಿದ ಮೂಲಂಗಿಯ ತುಕ್ಕಡಗಳು, ಶುಂಠಿ, ಕೊತ್ತುಂಬರಿಬೀಜ ಇವುಗಳ ಯೂಷವನ್ನು ಮಾಡಿ ಕುಡಿಸಿದಲ್ಲಿ ಶ್ಲೇಷ್ಮಯುಕ್ತವಾದ ವಾತ, ಸನ್ನಿಪಾತಜ್ವರ, ಆಮವಾತ ಇವುಗಳು ಕಡಮೆಯಾಗುವುದಲ್ಲದೆ ಕಂಠನಾಳ, ಹೃದಯ, ಮುಖ ಅಂದರೆ ಬಾಯಿ ಇವುಗಳನ್ನೆಲ್ಲಾ ಶೋಧನಮಾಡುತ್ತದೆ, ಇದಕ್ಕೆ ಸಪ್ತಮುಷ್ಟಿಕ ಯೂಷವೆಂದು ಹೆಸರು. ಸೇರತಕ್ಕ ಏಳು ಪದಾರ್ಥಗಳೂ ಒಂದೊಂದು ಮುಷ್ಟಿ ಪರಿಮಾಣ ಮಾತ್ರವಾದ್ದರಿಂದಲೇ ಇದಕ್ಕೆ ಸಪ್ತಮುಷ್ಟಿಕವೆಂಬ ಹೆಸರು ಕೊಟ್ಟಿದ್ದಾರೆ.

**ಕ್ಷುಣ್ಣಂದ್ರವ್ಯಪಲಂಸಾಧ್ಯಂಚತುಷ್ಷಷ್ಠಿಪಲೇಜಲೇ ||**
**ಅರ್ಧಶಿಷ್ಟಂಚತದ್ದೇಯಂಪಾನೇಭಕ್ತಾದಿಸಂವಿಧೌ || ೧೫೭ ||**

ಪಾನವೆಂಬುವುದೂ ಒಂದು ವಿಧವಾದ ಕಷಾಯದಲ್ಲಿಯೇ ಭೇದ. ಇದನ್ನು ತಯಾರಿಸುವ ಕ್ರಮವೆಂತೆಂದರೆ—ಒಂದು ಪಲ ಪರಿಮಾಣ ಮೂಲಿಕಾ ದ್ರವ್ಯವನ್ನು ಅರವತ್ತು ನಾಲ್ಕು ಪಲನೀರಿಗೆ ಹಾಕಿ ಅರ್ಧಮಾತ್ರ ನಿಲ್ಲುವಂತೆ ಇಳಿಸಿ ಕುಡಿಯುವುದಕ್ಕೂ, ಅದಕ್ಕೇನೇ ಅಕ್ಕಿಯನ್ನು ಹಾಕಿ ಅನ್ನಮಾಡುವುದಕ್ಕೂ ಉಪಯೋಗಿಸಬಹುದು.

**ಉಶೀರಪರ್ಪಟೋದೀಚ್ಯಮುಸ್ತನಾಗರಚಂದನೈಃ ||**
**ಜಲಂಶೃತಂಹಿಮಂಪೇಯಂಪಿಪಾಸಾಜ್ವರನಾಶನಂ || ೧೫೮ ||**

ಲಾಮಂಚ, ಪರ್ಪಾಟಕ, ಮುಡಿವಾಳ, ಭದ್ರಮುಸ್ತೆ, ಶುಂಠಿ, ರಕ್ತ ಚಂದನ, ಈ ಮೂಲಿಕೆಗಳಿಂದ ಹಿಂದೆ ಹೇಳಿದಂತೆ ಪಾನವನ್ನು ಕಲ್ಪಿಸಿ ಕುಡಿಸುತ್ತ ಬಂದರೆ ಬಾಯಾರಿಕೆ ಸಹಿತವಾದ ಜ್ವರವು ಶಮನಹೊಂದುತ್ತದೆ.

## ಉಷ್ಣೋದಕ ಕಲ್ಪನಾ.

ಅಷ್ಟಮೇನಾಂಶಶೇಷೇಣಚತುರ್ಥೇನಾರ್ಧಕೇನವಾ ||
ಅಥವಾಕ್ವಥನೇನೈವಸಿದ್ಧಮುಷ್ಣೋದಕಂವದೇತ್ || ೧೫೯ ||
ಶ್ಲೇಷ್ಮಾಮವಾತಮೇದೋಘ್ನಂವಸ್ತಿಶೋಧನದೀಪನಂ ||
ಕಾಸಶ್ವಾಸಜ್ವರಹರಂಪೀತಮುಷ್ಣೋದಕಂನಿಶಿ || ೧೬೦ ||

ನೀರನ್ನು ಕಾಯಿಸುವುದಕ್ಕಿಟ್ಟು, ಅಷ್ಟಮಾಂಶ, ಚತುರ್ಥಾಂಶ, ಅರ್ಧಾಂಶ ಈ ರೀತಿ ನಿಲ್ಲುವಂತೆ ಕಾಯಿಸಿಯಾಗಲಿ ಅಥವಾ ಚನ್ನಾಗಿ ಕುದಿಸಿಯಾಗಲಿ ಬಿಸಿ ನೀರನ್ನು ಮಾಡಿಕೊಂಡು ಕುಡಿಸುತ್ತ ಬಂದರೆ ಶ್ಲೇಷ್ಮವ್ಯಾಧಿ, ಆಮವಾತ, ಮೇದೋದೋಷ, ಇವುಗಳನ್ನು ಶಮನಪಡಿಸುವುದಲ್ಲದೆ, ಮೂತ್ರಾಶಯ ಶೋಧಕ ವಾಗಿಯೂ, ಅಗ್ನಿದೀಪಕವಾಗಿಯೂ ಕೆಮ್ಮು, ಉಬ್ಬಸ, ಜ್ವರ ಇವುಗಳನ್ನು ಕಡಮೆಮಾಡುವುದಾಗಿದೆ ಔಷಧರೂಪವಾಗಿ ಈ ಉಷ್ಣೋದಕವನ್ನು ಪಾನಮಾಡಿಸುವುದಾದರೆ ರಾತ್ರಿವೇಳೆ ಪಾನಮಾಡಿಸಬೇಕು.

## ಕ್ಷೀರಪಾಕಕಲ್ಪನ.

ಕ್ಷೀರಮಷ್ಟಗುಣಂದ್ರವ್ಯಾತ್ ಕ್ಷೀರಾನ್ನೀರಂಚತುರ್ಗುಣಂ ||
ಕ್ಷೀರಾವಶೇಷಂತತ್ಪೀತಂಶೂಲಮಾಮೋದ್ಭವಂಜಯೇತ್ || ೧೬೧ ||
ಸರ್ವಜ್ವರಾಣಾಂಜೀರ್ಣಾನಾಂ ಕ್ಷೀರಂಭೈಷಜ್ಯಮುತ್ತಮಂ ||
ಶ್ವಾಸಾತ್‌ಕಾಲಾತ್‌ಶಿರಶ್ಶೂಲಾತ್ಪಾರ್ಶ್ವಶೂಲಾತ್ಸಪೀನಸಾತ್ ೧೬೨
ಮುಚ್ಯತೇಜ್ವರಿತಃಪೀತ್ವಾಪಂಚಮೂಲೀಶ್ರೃತಂಪಯಃ ||
ತ್ರಿಕಂಟಕಬಲಾವ್ಯಾಘ್ರೀಗುಡನಾಗರಸಾಧಿತಂ || ೧೬೩ ||
ವರ್ಚೋಮೂತ್ರವಿಬಂಧಘ್ನಂಕಫಜ್ವರಹರಂಪಯಃ ||

ಔಷಧ ದ್ರವ್ಯದ ಎಂಟರಷ್ಟು ಹಾಲು, ಹಾಲಿನ ನಾಲ್ಕರಷ್ಟು ನೀರು, ಇವುಗಳನ್ನು ಸೇರಿಸಿ ಕಾಯಿಸುತ್ತ ಹಾಲು ಮಾತ್ರ ನಿಲ್ಲುವವರಿಗೂ ಕಾಯಿಸಿ ಕುಡಿಯಿಸುತ್ತ ಬಂದಲ್ಲಿ ಆಮಶೂಲವು ನಾಶವಾಗಿಹೋಗುತ್ತದೆ. ಎಲ್ಲಾ ವಿಧವಾದ ಜೀರ್ಣಜ್ವರಗಳಲ್ಲಿಯೂ (ಹಳೆಜ್ವರ) ಈ ರೀತಿಯಾಗಿ ತಯಾರಿಸಿದ ಕ್ಷೀರವು ಉತ್ತಮವಾದ ಔಷಧವಾಗಿ ಪರಿಣಮಿಸುತ್ತದೆ. ಮುಂದೆ ಹೇಳುವ ಪಂಚಮೂಲಗಳನ್ನು ಸೇರಿಸಿ ಕ್ಷೀರಪಾಕಕಲ್ಪನವಿಧಿಯಿಂದ ತಯಾರಿಸಿದ ಕ್ಷೀರವು

ಉಬ್ಬಸ, ಕೆಮ್ಮು, ತಲೆನೋವು, ಪಾರ್ಶ್ವಶೂಲೆ, ನೆಗಡಿ ಇವುಗಳನ್ನು ಗುಣ ಪಡಿಸುತ್ತದೆ. ಪಂಚಮೂಲಗಳಾವುವೆಂದರೆ—ದರ್ಭೆ, ಲಾಳ, ವಿಶ್ವಾಮಿತ್ರದರ್ಭೆ, ಇನ್ನೊಂದು ವಿಧದ ದರ್ಭೆ, ಕಬ್ಬಿನಬೇರು, ಇವುಗಳಿಗೆ ಹೆಸರು.

ನೆಗ್ಗಿಲು, ಕಳ್ಳಂಗಡಲೆ, ನೆಲಗುಳ್ಳ, ಬೆಲ್ಲ, ಶುಂಠಿ, ಇವುಗಳಿಂದ ಹಿಂದೆ ಹೇಳಿದ ಕ್ರಮದಲ್ಲಿ ಹಾಲನ್ನು ತಯಾರಿಸಿ ಪಾನಮಾಡಿಸಿದರೆ ಮಲಮೂತ್ರಗಳು ಬದ್ಧವಾಗಿ ತೊಂದರೆ ಪಡಿಸುವುದು, ಕಫಜ್ವರ ಇವುಗಳನ್ನು ನಿವಾರಣಮಾಡುತ್ತದೆ.

## ಅನ್ನಪ್ರಕ್ರಿಯೆ.

**ಅಥಾನ್ನಪ್ರಕ್ರಿಯಾತ್ವೈವಪ್ರೋಚ್ಯತೇನಾತಿವಿಸ್ತರಾತ್ ॥ ೧೬೪ ॥**
**ಯವಾಗೂಃಷಡ್ಗುಣಜಲೇಸಿದ್ಧಾಸ್ಯಾತ್ಕೃಸರಾಘನಾ ॥**
**ತಂಡುಲೈರ್ಮುದ್ಗಮಾಷೈಶ್ಚತಿಲೈರ್ವಾಸಾಧಿತಾಹಿತಾ ॥ ೧೬೫ ॥**
**ಯವಾಗೂರ್ಗ್ರಾಹಿಣೀಬಲ್ಯಾತರ್ಪಣೀವಾತನಾಶಿನೀ ॥**

ಅಕ್ಕಿಯಿಂದ ತಯಾರಿಸತಕ್ಕ ಯವಾಗು (ಗಂಜಿ) ಮೊದಲಾದ ಆಹಾರ ವಸ್ತು ನಿರ್ಮಾಣಕ್ರಮವನ್ನು ಹೇಳುತ್ತಾನೆ—ಅನ್ನ ಮಾಡುವುದಕ್ಕಿಂತ ಆರರಷ್ಟು ಅಳತೆಯಲ್ಲಿ ಹೆಚ್ಚು ನೀರನ್ನಿಟ್ಟು ಅದಕ್ಕೆ ಅಕ್ಕಿಯನ್ನು ಹಾಕಿ ಚನ್ನಾಗಿ ಪಕ್ವವಾಗುವವರಿಗೂ ಬೇಯಿಸಿದ ಘನದ್ರವಮಿಶ್ರರೂಪವಾದ ಆಹಾರಕ್ಕೆ ಯವಾಗು ಎಂದು ಹೆಸರು. ಕೃಸರವೆಂದರೆ ಯವಾಗುವಿನಂತೆಯೇ ಅಕ್ಕಿಯ ಜೊತೆಗೆ ಹೆಸರುಬೇಳೆಯಾಗಲಿ, ಉದ್ದಿನ ಬೇಳೆಯನ್ನಾಗಲಿ ಸೇರಿಸಿ, ಕೊಂಚ ಎಳ್ಳನ್ನೂ ಸೇರಿಸಿ ಯವಾಗುವಿನಷ್ಟು ನೀರಾಗಿಲ್ಲದೆ ಕೊಂಚ ಗಟ್ಟಿಯಾಗಿ ತಯಾರಿಸಿದ ಆಹಾರಕ್ಕೆ ಹೆಸರು. ಈ ಯವಾಗುವಿನ ಗುಣಗಳೇನಂದರೆ— ಗ್ರಹಿಣಿ, ಅತಿಸಾರವನ್ನು ನಿವಾರಿಸುತ್ತದೆ. ದೇಹಕ್ಕೆ ಬಲಕರವಾಗಿರುತ್ತದೆ, ತೃಪ್ತಿಕರವಾಗಿರುತ್ತದೆ, ವಾತವ್ಯಾಧಿಗಳನ್ನು ನಾಶಮಾಡುತ್ತದೆ.

**ವಿಲೇಪೀಘನಸಿಕ್ಥಾಸ್ಯಾತ್ಸಿದ್ಧಾನೀರೇಚತುರ್ಗುಣೇ ॥ ೧೬೬ ॥**
**ತರ್ಪಣೀಬೃಂಹಣೀಹೃದ್ಯಾಮಧುರಾಪಿತ್ತನಾಶಿನೀ ॥**

ಇದೊಂದು ವಿಧವಾದ ಅನ್ನವೇ, ಇದನ್ನು ಮಾಡುವ ಕ್ರಮವೆಂತೆಂದರೆ ಅನ್ನಮಾಡುವುದಕ್ಕೆ ಇಡುವುದಕ್ಕಿಂತ ನಾಲ್ಕರಷ್ಟು ನೀರನ್ನಿಟ್ಟು ಅದಕ್ಕೆ ಅಕ್ಕಿಯನ್ನು ಹಾಕಿ ಮಾಡಿದ ಅನ್ನಕ್ಕೆ ಹೆಸರು. ಈ ಅನ್ನವು ತೃಪ್ತಿಯನ್ನುಂಟು ಮಾಡುತ್ತದೆ, ಶರೀರಕ್ಕೆ ಪುಷ್ಟಿಯನ್ನುಂಟುಮಾಡುತ್ತದೆ, ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತದೆ, ನಾಲಿಗೆಗೆ ರುಚಿಯಾಗಿರುತ್ತದೆ, ಪಿತ್ತವನ್ನು ಶಮನಪಡಿಸುತ್ತದೆ.

ದ್ರವಾಧಿಕಾಸ್ಸ್ವಲ್ಪಸಿಕ್ಥಾ ಚತುರ್ದಶಗುಣೇಜಲೇ || ೧೬೭ ||
ಸಿದ್ಧಾಪೇಯಾಬುಧೈರ್ಜ್ಞೇಯಾಯೂಷಃಕಿಂಚಿದ್ಘನಸ್ತತಃ ||
ಪೇಯಾಲಘುತರಾಜ್ಞೇಯಾಗ್ರಾಹಿಣೀಧಾತುಪುಷ್ಟಿದಾ || ೧೬೮ ||
ಯೂಷೋಬಲ್ಯಸ್ತತಃಕಂಠ್ಯೋಲಘುಪಾಕಃಕಫಾಪಹಃ ||

ಪೇಯಾ ಎಂಬ ಒಂದು ವಿಧವಾದ ಗಂಜಿಯನ್ನು ಹೇಳುತ್ತಾನೆ—ಅನ್ನ ಮಾಡುವುದಕ್ಕಿಂತ ಹದಿನಾಲ್ಕರಷ್ಟು ನೀರನ್ನಿಟ್ಟು ಅದರಲ್ಲಿ ಅಕ್ಕಿಯನ್ನು ಹಾಕಿ ಪಕ್ವಮಾಡಿದರೆ ಅದಕ್ಕೆ ಪೇಯಾ ಎಂದು ಹೆಸರು. ಇದರಲ್ಲಿ ದ್ರವಭಾಗ ಅಧಿಕ ವಾಗಿಯೂ ಗಟ್ಟಿಭಾಗವು ಕೊಂಚವಾಗಿಯೂ ಇರುತ್ತದೆ. ಇದಕ್ಕಿಂತ ಕೊಂಚ ಗಟ್ಟಿಯಾಗಿರುವಂತೆ ಮಾಡಿದರೆ ಅದಕ್ಕೆ ಯೂಷವೆಂಬದಾಗಿ ಹೆಸರು. ಮೊದಲು ಹೇಳಿದ ಪೇಯಾ ಎಂಬುವುದು ಅತಿಲಘು ಎಂದರೆ ಜಾಗ್ರತೆಯಾಗಿ ಜೀರ್ಣಕ್ಕೆ ಬರ ತಕ್ಕದ್ದು. ಗ್ರಾಹಿಣಿ ಎಂದರೆ ದ್ರವರೂಪವಾಗಿ ಮಲಪ್ರವೃತ್ತಿಯಾಗುವಂತಿದ್ದರೆ ಅದನ್ನು ಕಟ್ಟುತ್ತದೆ, ಧಾತುವೃದ್ಧಿ ಮಾಡುತ್ತದೆ. ಯೂಷವೆಂಬುವುದು ದೇಹಕ್ಕೆ ಬಲಪ್ರದವಾದದ್ದು, ಕಂಠಕ್ಕೆ ಹಿತಕರವಾದದ್ದು, ಜಾಗ್ರತೆಯಾಗಿ ಜೀರ್ಣವಾಗು ತ್ತದೆ, ಕಫವನ್ನು ನಾಶಮಾಡುತ್ತದೆ.

ಜಲೇಚತುರ್ದಶಗುಣೇತಂಡುಲಾನಾಂಚತುಷ್ಪಲಂ || ೧೬೯ ||
ವಿಪಚೇತ್ ಸ್ರಾವಯೇನ್ಮಂಡಂಸಭಕ್ತೋಮಧುರೋಲಘುಃ ||

ಅನ್ನವೆಂದರೆ ನಾಲ್ಕು ಪಲ ಅಕ್ಕಿಯನ್ನು ಹದಿನಾಲ್ಕರಷ್ಟು ನೀರಿನಲ್ಲಿ ಹಾಕಿ ಪಕ್ವಮಾಡಿ ಗಂಜಿಯನ್ನು ಬಸಿದ ಮೇಲೆ ನಿಲ್ಲತಕ್ಕ ಗಟ್ಟಿಭಾಗಕ್ಕೆ ಅನ್ನವೆಂದು ಹೆಸರು. ಈ ರೀತಿಯಾಗಿ ಮಾಡಿದ ಅನ್ನವು ಮಧುರವಾಗಿಯೂ ರುಚಿಕರ ವಾಗಿಯೂ ಇರುತ್ತದೆ.

ನೀರೇಚತುರ್ದಶಗುಣೇಸಿದ್ಧೋಮಂಡಸ್ತ್ವಸಿಕ್ಥಕಃ || ೧೭೦ ||
ಶುಂಠೀಸೈಂಧವಸಂಯುಕ್ತಃಪಾಚನೋದೀಪನಸ್ಸ್ಮೃತಃ ||

ಅನ್ನಕ್ಕೆ ಹಾಕುವುದಕ್ಕಿಂತ ಹದಿನಾಲ್ಕರಷ್ಟು ನೀರನ್ನು ಹಾಕಿ ಅದರಲ್ಲಿ ಅಕ್ಕಿ ಯನ್ನು ಹಾಕಿ ಬೇಯಿಸಿ ಘನಭಾಗವನ್ನೆಲ್ಲಾ ತೆಗೆದುಹಾಕಿದ ಮೇಲೆ ಉಳಿಯುವ ದ್ರವಭಾಗಕ್ಕೆ ಮಂಡವೆಂದು ಹೆಸರು. ಈ ದ್ರವಭಾಗಕ್ಕೆ ಶುಂಠಿಚೂರ್ಣವನ್ನು ಮತ್ತು ಸೈಂಧವಲವಣವನ್ನು ಸಹ ಸೇರಿಸಿ ಕುಡಿಯುವುದರಿಂದ ಜಠರಾಗ್ನಿಯು ದೀಪ್ತವಾಗುವುದಲ್ಲದೆ ದೇಹಗತವಾದ ಆಮದೋಷವು ಸಹ ಪಕ್ವವಾಗುತ್ತದೆ.

ಧಾನ್ಯತ್ರಿಕಟುಸಿಂಧೂತ್ಥಮುದ್ಗತಂಡುಲಯೋಜಿತಃ || ೧೭೧ ||
ಭೃಷ್ಟಶ್ಚಹಿಂಗುತೈಲಾಭ್ಯಾಂಸಮಂಡೋಷ್ಟಗುಣಸ್ಸ್ಮೃತಃ ||

ದೀಪನಃಪ್ರಾಣದೋವಸ್ತಿಶೋಧನೋರಕ್ತವರ್ಧನಃ ॥ ೧೭೨ ॥
ಜ್ವರಜಿತ್ಸರ್ವದೋಷಘ್ನೋವಮಂಡೋಷ್ಟಗುಣಉಚ್ಯತೇ ॥

ಅಷ್ಟಗುಣಮಂಡವನ್ನು ನಿರ್ಮಿಸುವ ಕ್ರಮವನ್ನು ಹೇಳುತ್ತಾನೆ—ಕೊತ್ತುಂಬರಿ, ಶುಂಠಿ, ಮೆಣಸು, ಹಿಪ್ಪಲಿ, ಸೈಂಧವಲವಣ, ಹೆಸರುಬೇಳೆ, ಅಕ್ಕಿ ಇವುಗಳ ಮಧ್ಯೆ ಅಕ್ಕಿಯನ್ನು ಎಣ್ಣೆಯಲ್ಲಿ ಚನ್ನಾಗಿ ಹುರಿದು ಹೆಸರುಬೇಳೆಯನ್ನೂ ಹುರಿದು ಎರಡೂ ಅರ್ಧ ಅರ್ಧ ಸೇರಿಸಿ ಉಳಿದ ವಸ್ತುಗಳನ್ನೆಲ್ಲಾ ಹಾಕಿ ಹಿಂದೆ ಹೇಳಿದ ಮಂಡವನ್ನು ತಯಾರಿಸುವ ರೀತಿಯಲ್ಲಿ ತಯಾರಿಸಿ ಅದಕ್ಕೆ ಇಂಗನ್ನೂ ಸೇರಿಸಿ ಭೋಜನಮಾಡೋಣದರಿಂದ ಅಗ್ನಿದೀಪ್ತಿಯುಂಟಾಗುತ್ತದೆ, ಶಕ್ತಿಯನ್ನು ವೃದ್ಧಿ ಪಡಿಸುತ್ತದೆ, ಮೂತ್ರಾಶಯವನ್ನು ಚೊಕ್ಕಟಪಡಿಸುತ್ತದೆ, ರಕ್ತವೃದ್ಧಿಮಾಡುತ್ತದೆ, ಜ್ವರವನ್ನು ಗೆಲ್ಲುತ್ತದೆ, ಸಮಸ್ತ ದೋಷಗಳನ್ನೂ ನಾಶಮಾಡುತ್ತದೆ.

ಸುಕಂಡಿತೈಸ್ತಥಾಭೃಷ್ಟೈರ್ವಾಟ್ಯಮಂಡೋಯವೈರ್ಭವೇತ್ ೧೭೩
ಕಫಪಿತ್ತಹರಃಕಂಠ್ಯೋರಕ್ತಪಿತ್ತಪ್ರಸಾದನಃ ॥

ಹಿಂದೆ ಹೇಳಿರುವ ಮಂಡವನ್ನು ಮಾಡುವ ಕ್ರಮದಲ್ಲಿಯೇ ಗೋಧಿಯನ್ನು ಒಡದು ನುಚ್ಚುಮಾಡಿ ಹುರಿದು ತಯಾರಿಸಿದ ಮಂಡಕ್ಕೆ ವಾಟ್ಯಮಂಡವೆಂದು ಹೆಸರು. ಇದು ಕಫ ಮತ್ತು ಪಿತ್ತಗಳನ್ನು ಕಡಮೆಮಾಡುತ್ತದೆ, ಕಂಠಕ್ಕೆ ಬಹಳ ಹಿತಕರವಾದದ್ದು, ರಕ್ತಪಿತ್ತರೋಗವನ್ನು ನಿವಾರಣಮಾಡುತ್ತದೆ.

ಲಾಜೈರ್ವಾತಂಡುಲೈರ್ಭೃಷ್ಟೈರ್ಲಾಜಮಂಡಃಪ್ರಕೀರ್ತಿತಃ॥೧೭೪॥
ಶ್ಲೇಷ್ಮಪಿತ್ತಹರೋಗ್ರಾಹೀಪಿಪಾಸಾಜ್ವರಜಿನ್ಮತಃ ॥

ಭತ್ತದ ಅರಳಿನಿಂದಲಾಗಲಿ ಹುರಿದ ಅಕ್ಕಿಯಿಂದಲಾಗಲಿ ಮಂಡನಿರ್ಮಾಣ ಕ್ರಮದಂತೆ ನಿರ್ಮಿಸಿದ್ದಕ್ಕೆ ಲಾಜಮಂಡವೆಂದು ಹೆಸರು, ಇದು ಶ್ಲೇಷ್ಮ ಮತ್ತು ಪಿತ್ತಗಳನ್ನು ಶಮನಮಾಡುತ್ತದೆ, ಮಲಪ್ರವೃತ್ತಿಯಾಗುತ್ತಿದ್ದಲ್ಲಿ ತಡೆಯುತ್ತದೆ. ಬಾಯಾರಿಕೆಯಿಂದ ಕೂಡಿದ ಜ್ವರವನ್ನು ಶಮನಪಡಿಸುತ್ತದೆ.

ಇಲ್ಲಿಗೆ ಎರಡನೆಯ ಅಧ್ಯಾಯ ಸಂಪೂರ್ಣ.

---

## ಮೂರನೆಯ ಅಧ್ಯಾಯ.

ಕ್ಷುಣ್ಣೇದ್ರವ್ಯಪಲೇಸಮ್ಯಗ್ಜಲಮುಷ್ಣಂವಿನಿಕ್ಷಿಪೇತ್ ॥
ಮೃತ್ಪಾತ್ರೇಕುಡವೋನ್ಮಾನಂತತಸ್ತುಸ್ರಾವಯೇತ್ಪಟಾತ್ ॥ ೧ ॥
ತಸ್ಯಚೂರ್ಣದ್ರವಃಫಾಂಟಸ್ತನ್ಮಾನಂದ್ವಿಪಲೋನ್ಮಿತಂ ॥
ಸಿತಾಮಧುಗುಡಾದೀಂಶ್ಚ ಕ್ವಾಥವತ್ತತ್ರನಿಕ್ಷಿಪೇತ್ ॥ ೨ ॥

ಫಾಂಟವೆಂಬ ಕಷಾಯವನ್ನು ನಿರ್ಮಿಸುವ ಕ್ರಮವನ್ನು ಹೇಳುತ್ತಾನೆ— ಫಾಂಟಕಷಾಯವನ್ನು ನಿರ್ಮಿಸಬೇಕಾದರೆ ಮೂಲಿಕಾದ್ರವ್ಯವನ್ನು ಒಂದು ಪಲದಷ್ಟು ಪರಿಮಾಣ ತೆಗದುಕೊಂಡು ಚನ್ನಾಗಿ ಕುಟ್ಟಿ ಪುಡಿಮಾಡಿ ಮಣ್ಣಿನ ಪಾತ್ರೆಯಲ್ಲಿ ಹಾಕಿ ಅದರಲ್ಲಿ ಒಂದು ಕುಡವ ಅಂದರೆ ನಾಲ್ಕು ಪಲದಷ್ಟು ಬಿಸಿಯಾದ ನೀರನ್ನು ಸುರಿದು ಒಂದು ಕ್ಷಣ ಮಾತ್ರ ಮುಚ್ಚಿರಿಸಿದ್ದು ನಂತರ ವಸ್ತ್ರದಲ್ಲಿ ಸೋಸಿಕೊಳ್ಳಬೇಕು, ಇದಕ್ಕೇನೇ ಚೂರ್ಣದ್ರವ, ಫಾಂಟ ಎಂಬದಾಗಿ ಸರುಗಳು (ಕಾಫಿ). ಇದನ್ನು ಕೊಡತಕ್ಕ ಪ್ರಮಾಣ ಎರಡು ತೊಲ. ಜೇನುತುಪ್ಪ, ಸಕ್ಕರೆ, ಬೆಲ್ಲ ಇವುಗಳನ್ನು ಇದಕ್ಕೆ ಸೇರಿಸಬೇಕಾದ ಸಂದರ್ಭದಲ್ಲಿ ಹಿಂದಲ ಅಧ್ಯಾಯದಲ್ಲಿ ಕ್ವಾಥಪ್ರಕರಣದಲ್ಲಿ ಹೇಳಿರುವುದನ್ನು ನೋಡಿಕೊಂಡು ಸೇರಿಸಿಕೊಳ್ಳಬೇಕು.

**ಮಧೂಕಪುಷ್ಪಂಮಧುಕಂಚಂದನಂಸಪರೂಷಕಂ ॥**
**ಮೃಣಾಳಂಕಮಲಂಲೋಧ್ರಂಕಂಭಾರೀನಾಗಕೇಸರಂ ॥ ೩ ॥**
**ತ್ರಿಫಲಾಸಾರಿಬಾದ್ರಾಕ್ಷಾಲಾಜಾನ್ಕೋಷ್ಣಜಲೇಕ್ಷಿಪೇತ್ ॥**
**ಸೀತಾಮಧುಯುತಃಪೇಯಃಫಾಂಟೊವಾಸೌಹಿಮೋಥವಾ ॥ ೪ ॥**
**ವಾತಪಿತ್ತಜ್ವರಂದಾಹಂತೃಷ್ಣಾಮೂರ್ಚ್ಛಾರತಿಭ್ರಮಾನ್ ॥**
**ರಕ್ತಪಿತ್ತಂಮದಂಹನ್ಯಾನ್ನಾತ್ರಕಾರ್ಯಾವಿಚಾರಣಾ ॥ ೫ ॥**

ಮಧೂಕಪುಷ್ಪಾದಿಫಾಂಟ—ಇಪ್ಪೆಯ ಹುವ್ವು, ಜ್ಯೇಷ್ಠಮಧು, ರಕ್ತಚಂದನ, ಪರೂಷಕವೆಂಬ ಒಂದು ಬಗೆಯ ಹಣ್ಣು, ತಾವರೆಯ ದಂಟು, ತಾವರೆಯ ಹುವ್ವು, ಲೋಧ್ರದ ಚಕ್ಕೆ, ಕಂಭಾರೀ ಅಂದರೆ ಶಿವನೆಯ ಕಾಯಿ, ನಾಗಕೇಸರಿ, ಅಳಲೆಕಾಯಿ, ತಾರೇಕಾಯಿ, ನೆಲ್ಲಿಯಕಾಯಿ, ಸೊಗದೇಬೇರು, ದ್ರಾಕ್ಷಿ, ಭತ್ತದ ಅರಳು, ಈ ಪದಾರ್ಥಗಳನ್ನು ಕುಟ್ಟಿ ಪುಡಿಮಾಡಿ ಬಿಸಿನೀರಿನಲ್ಲಿ ಹಾಕಿ ಫಾಂಟವೆಂಬ ಕಷಾಯವನ್ನಾಗಲಿ ತಣ್ಣೀರಿನಲ್ಲಿ ಹಾಕಿ ಹಿಮಕಷಾಯವನ್ನಾಗಲಿ ಮಾಡಿ ಸಕ್ಕರೆ ಜೇನುತುಪ್ಪ ಇವುಗಳನ್ನು ಸೇರಿಸಿ ಕುಡಿಸುವುದರಿಂದ ವಾತಪಿತ್ತಜ್ವರ, ವೈಯ್ಯುರಿ, ಬಾಯಾರಿಕೆ, ಮೂರ್ಚ್ಛೆ, ಅರುಚಿ, ಬುದ್ಧಿಭ್ರಮ, ರಕ್ತಪಿತ್ತ, ಮದ, ಇವುಗಳನ್ನೆಲ್ಲಾ ನಿವೃತ್ತಿಮಾಡುತ್ತದೆ. ಅನುಮಾನವಿಲ್ಲ.

**ಆಮ್ರಜಂಬೂಕಿಸಲಯೈರ್ವಟಶುಂಗಪ್ರರೋಹಕೈಃ ॥**
**ಉಶೀರೇಣಕೃತಃಫಾಂಟಸ್ಸಕ್ಷೌದ್ರೋಜ್ವರನಾಶನಃ ॥ ೬ ॥**
**ಪಿಪಾಸಾಛರ್ದ್ಯತೀಸಾರಾನ್ಮೂರ್ಛಾಂಜಯತಿದುಸ್ತರಾಂ ॥**

ಆಮ್ರಾದಿಫಾಂಟ—ಮಾವಿನ ಚಿಗುರು, ನೇರಲ ಚಿಗುರು, ಆಲದ ಚಿಗುರು ಮತ್ತು ಮಗ್ಗು, ಲಾಮಂಚ ಇವುಗಳನ್ನು ಫಾಂಟನಿರ್ಮಾಣ ಕ್ರಮದಲ್ಲಿ ನಿರ್ಮಿಸಿ ಜೇನುತುಪ್ಪವನ್ನು ಸೇರಿಸಿ ಕುಡಿಸುವುದರಿಂದ ಜ್ವರ, ಬಾಯಾರಿಕೆ, ವಮನ, ಅತಿಸಾರ, ಭಯಂಕರವಾದ ಮೂರ್ಚ್ಛೆ ಇವುಗಳೆಲ್ಲಾ ನಿವೃತ್ತಿಯಾಗುತ್ತವೆ.

ಮಧೂಕಪುಷ್ಪಕಂಭಾರೀಚಂದನೋಶೀರಧಾನ್ಯಕೈಃ ॥ ೭ ॥
ದ್ರಾಕ್ಷಯಾಚಕೃತಃಫಾಂಟಃಶೀತಶ್ಶರ್ಕರಯಾಯುತಃ ॥
ತೃಷ್ಣಾಪಿತ್ತಹರಃಪ್ರೋಕ್ತೋದಾಹಮೂರ್ಛಾಭ್ರಮಾನ್
ಜಯೇತ್ ॥ ೮ ॥

ಮಧೂಕಪುಷ್ಪಾದಿ ಲಘುಫಾಂಟ—ಇಪ್ಪೆಹುವ್ವು, ಶಿವನೇಕಾಯಿ, ರಕ್ತ ಚಂದನ, ಲಾಮಂಚ, ಕೊತ್ತುಂಬರಿಬೀಜ, ದ್ರಾಕ್ಷಿ ಇವುಗಳಿಂದ ಫಾಂಟಕಷಾಯ ವನ್ನು ನಿರ್ಮಾಣಮಾಡಿ ಸಕ್ಕರೆ ಸೇರಿಸಿ ಕುಡಿಸುವುದರಿಂದ ಬಾಯಾರಿಕೆ, ಪಿತ್ತ, ವೈಯ್ಯಾರಿ, ಮೂರ್ಛೆ, ಬುದ್ಧಿಭ್ರಮಣೆ, ಇವುಗಳನ್ನು ಗುಣಪಡಿಸುತ್ತದೆ.

## ಮಂಥಕಲ್ಪನೆ.

ಮಂಥೋಪಿಫಾಂಟಭೇದಸ್ಯಾತ್ತೇನಚಾತ್ರೈವಕಥ್ಯತೇ ॥
ಜಲೇಚತುಃಪಲೇಶೀತೇಕ್ಷುಣ್ಣಂದ್ರವ್ಯಪಲಂಕ್ಷಿಪೇತ್ ॥ ೯ ॥
ಮೃತ್ಪಾತ್ರೇಮಂಥಯೇತ್ಸಮ್ಯಕ್ತಸ್ಮಾಚ್ಚದ್ವಿಪಲಂಪಿಬೇತ್ ॥

ಮಂಥವೆಂಬುವುದು ಸಹ ಫಾಂಟಕಷಾಯದಲ್ಲಿಯೇ ಒಂದು ಭೇದವಾದ್ದ ರಿಂದ ಇಲ್ಲಿಯೇ ಅದನ್ನೂ ಹೇಳುತ್ತಾನೆ—ಮಂಥ ಕಷಾಯವನ್ನು ಕಲ್ಪಿಸಬೇಕಾ ದರೆ ಔಷಧ ದ್ರವ್ಯವನ್ನು ಚನ್ನಾಗಿ ಕುಟ್ಟಿ ಪುಡಿಮಾಡಿ ದ್ರವ್ಯದ ನಾಲ್ಕರಷ್ಟು ನೀರಿನಲ್ಲಿ ಹಾಕಿ ಮಣ್ಣಿನ ಪಾತ್ರೆಯಲ್ಲಿ ಇರಿಸಿಟ್ಟಿದ್ದು ಚನ್ನಾಗಿ ಕಡೆದು ಸೋಸಿ ಕೊಳ್ಳಬೇಕು, ಈ ರೀತಿಯಲ್ಲಿ ತಯಾರಿಸಿದ್ದರಲ್ಲಿ ಹೊತ್ತಿಗೆ ಎರಡು ಪಲ ಪ್ರಮಾ ಣ ಸೇವಿಸತಕ್ಕದ್ದು.

ಖರ್ಜೂರದಾಡಿಮೀದ್ರಾಕ್ಷಾತಿಂತಿಡೀಕಾಮ್ಲಿಕಾಮಲೈಃ ॥ ೧೦ ॥
ಸಪರೂಷೈಃಕೃತೋಮಂಥಃಸರ್ವಮದ್ಯವಿಕಾರನುತ್ ॥

ಉತ್ತುತ್ತೆ, ದಾಳಿಂಬದಹಣ್ಣು, ದ್ರಾಕ್ಷಿ, ಹುಣಸೇಹಣ್ಣು, ಪುಳ್ಳಂಪುರಚೀ ಸೊಪ್ಪು, ನೆಲ್ಲಿಕಾಯಿ, ಓಟೆಹುಳಿ ಇವುಗಳನ್ನು ಚನ್ನಾಗಿ ಕುಟ್ಟಿ ಮಂಥ ಕಷಾಯ ವನ್ನು ಕಲ್ಪಿಸುವಂತೆ ಕಲ್ಪಿಸಿ ತೆಗದುಕೊಂಡರೆ ಮದ್ಯಪಾನದಿಂದ ಉತ್ಪನ್ನವಾದ ವಿಕಾರಗಳೆಲ್ಲಾ ಶಮನವಾಗುತ್ತವೆ.

ಕೌದ್ರಯುಕ್ತಾಮಸೂರಾಣಾಂಸಕ್ತವೋದಾಡಿಮಾಂಭಸಾ ॥ ೧೧ ॥
ಮಥಿತಾವಾರಯಂತ್ಯಾಶುಛರ್ದಿಂದೋಷತ್ರಯೋದ್ಭವಾಂ ॥

ಮಸೂರ ಎಂಬ ಧಾನ್ಯದ ಹಿಟ್ಟನ್ನು ದಾಳಿಂಬರೀರಸದಲ್ಲಿ ಕದರಿ ಜೇನು ತುಪ್ಪವನ್ನು ಸೇರಿಸಿ ಕಡದು ಮಂಥಕಷಾಯವನ್ನು ಮಾಡಿ ಕುಡಿಸುವುದರಿಂದ ವಮನವನ್ನು (ತ್ರಿದೋಷಪ್ರಕೋಪಜನ್ಯವಾದ) ನಿವಾರಣೆ ಮಾಡಿಕೊಳ್ಳಬಹುದು.

**ಪ್ಲಾವಿತ್ವೈಶ್ಶೀತನೀರೇಣಸಘೃತ್ವೈರ್ಯವಸಕ್ತುಭಿಃ || ೧೨ ||**
**ನಾತಿಸಾಂದ್ರದ್ರವೋಮಂಥಸ್ತೃಷ್ಣಾದಾಹಾಸ್ರಪಿತ್ತಹಾ ||**

ಯವಧಾನ್ಯದ ಹಿಟ್ಟನ್ನು ತಣ್ಣೀರಿನಲ್ಲಿ ಕದರಿ ಸ್ವಲ್ಪ ತುಪ್ಪವನ್ನು ಹಾಕಿ ಮಂಥವನ್ನು ನಿರ್ಮಿಸಿ ಕುಡಿಸುವುದರಿಂದ ಬಾಯಾರಿಕೆ, ಮೈಯ್ಯುರಿ, ಇವುಗಳನ್ನು ಕಡಮೆಮಾಡುತ್ತದೆ.

ಇಲ್ಲಿಗೆ ಮೂರನೆಯ ಅಧ್ಯಾಯ ಸಂಪೂರ್ಣ.

---

## ಚತುರ್ಥೋಽಧ್ಯಾಯಃ.

**ಕ್ಷುಣ್ಣಂದ್ರವ್ಯಪಲಂಸಮ್ಯಕ್‌ಷಡ್ಭಿರ್ನೀರಪಲೈಃಪ್ಲುತಂ ||**
**ನಿಶೋಷಿತಂಹಿಮಸ್ಸಸ್ಯಾತ್ತಥಾಶೀತಕಷಾಯಕಃ || ೧ ||**
**ತನ್ಮಾನಂಫಾಂಟವತ್‌ಜ್ಞೇಯಂಸರ್ವತ್ರೈವೇಷನಿಶ್ಚಯಃ ||**

ಹಿಮಕಷಾಯವನ್ನು ಮಾಡತಕ್ಕ ರೀತಿಯನ್ನು ಹೇಳುತ್ತಾನೆ—ಒಂದು ಪಲದಷ್ಟು ಕಷಾಯ ಮಾಡತಕ್ಕ ಮೂಲಿಕೆಯನ್ನು ಚನ್ನಾಗಿ ಕುಟ್ಟಿ ಹುಡಿಮಾಡಿ ಆರು ಪಲ ನೀರಿನಲ್ಲಿ ಹಾಕಿ ರಾತ್ರಿ ಎಲ್ಲಾ ನೆನೆಯಲಿಟ್ಟು ಬೆಳಿಗ್ಗೆ ವಸ್ತ್ರ ಗಾಳಿತ ಮಾಡಿ ತೆಗೆದುಕೊಳ್ಳಬೇಕು, ಇದಕ್ಕೇನೇ ಹಿಮವೆಂದೂ, ಶೀತಕಷಾಯವೆಂದೂ ವ್ಯವಹಾರ, ಇದನ್ನು ಕೊಡುವ ಕ್ರಮವಾದರೂ ಫಾಂಟವೆಂಬ ಕಷಾಯವನ್ನು ಕುಡಿಯಲು ಹೇಳಿರುವ ಅಳತೆಯಂತೆಯೇ ಕುಡಿಯತಕ್ಕದ್ದು.

**ಆಮ್ರಜಂಬೂಚಕಕುಭಂಚೂರ್ಣೀಕೃತ್ಯಜಲೇಕ್ಷಿಪೇತ್ || ೨ ||**
**ಹಿಮಂತಸ್ಯಪಿಬೇತ್ಪ್ರಾತಃಸಕ್ಷೌದ್ರಂರಕ್ತಪಿತ್ತಜಿತ್ ||**

ಆಮ್ರಾದಿಹಿಮವನ್ನು ಮಾಡುವ ಕ್ರಮವೆಂತೆಂದರೆ—ಮಾವಿನತೊಪ್ಪೆ, ನೇರಿಲತೊಪ್ಪೆ, ಮತ್ತಿಯತೊಪ್ಪೆ, ಇವುಗಳನ್ನು ಚನ್ನಾಗಿ ಕುಟ್ಟಿ ನೀರಿನಲ್ಲಿ ಹಾಕಿ ರಾತ್ರಿ ಇರಿಸಿದ್ದು ಬೆಳಿಗ್ಗೆ ಸೋಸಿಕೊಂಡು ಆ ಹಿಮಕಷಾಯಕ್ಕೆ ಜೇನುಸೇರಿಸಿ ಕುಡಿಯುವುದರಿಂದ ರಕ್ತಪಿತ್ತರೋಗವು ಶಮನವಾಗುತ್ತದೆ.

**ಮರಿಚಂಮಧುಯಷ್ಟೀಚಕಾಕೋದುಂಬರಪಲ್ಲವಾಃ || ೩ ||**
**ನೀಲೋತ್ಪಲಂಹಿಮಸ್ತ್ವಜ್ಞಸ್ತೃಷ್ಣಾಚ್ಛರ್ದಿನಿವಾರಣಃ ||**

ಮರಿಚಾದಿಹಿಮಕಷಾಯ ಕಲ್ಪನೆಯನ್ನು ಹೇಳುತ್ತಾನೆ—ಮೆಣಸು, ಜ್ಯೇಷ್ಠಮಧು, ಕಾಡು ಅತ್ತಿಯ ಚಿಗುರು, ಕಮಲದ ಹುವ್ವು, ಇವುಗಳಿಂದ ಹಿಮ

ಕಷಾಯವನ್ನು ಮಾಡಿ ಕುಡಿದರೆ ಅಸಾಧ್ಯವಾದ ಬಾಯಾರಿಕೆ ಮತ್ತು ವಮನ ಸಹ ನಿಂತುಹೋಗುತ್ತದೆ.

ನೀಲೋತ್ಪಲಂಬಲಾದ್ರಾಕ್ಷಾಮಧೂಕಂಮಧುಕಂತಥಾ ॥ ೪ ॥
ಉಶೀರಂಪದ್ಮಕಂಚೈವಕಾಶ್ಮರೀಚಪರೂಷಕಂ ॥
ಏಷಶೀತಕಷಾಯುಶ್ಚವಾತಪಿತ್ತಜ್ವರಾನ್ ಜಯೇತ್ ॥ ೫ ॥
ಸಪ್ರಲಾಪಭ್ರಮಚ್ಛರ್ದಿಮೋಹತೃಷ್ಣಾನಿವಾರಣಃ ॥

ನೀಲೋತ್ಪಲಾದಿಹಿಮ—ನೀಲವರ್ಣದ ತಾವರೆ, ಕಳ್ಳಂಗಡ್ಲೆ, ದ್ರಾಕ್ಷೆ, ಇಪ್ಪೆಯ ಹುವ್ವು, ಜ್ಯೇಷ್ಠಮಧು, ಮುಡಿವಾಳ. ಪದ್ಮಕಾಷ್ಠವೆಂದು ಅಂಗಡಿಯಲ್ಲಿ ಸಿಕ್ಕುವ ಕಾಷ್ಠ, ಶಿವನೆಯ ಕಾಯಿಗಳು, ಪರೂಪಕವೆಂಬುವ ಮೂಲಿಕೆ, ಇವುಗಳ ಹಿಮಕಷಾಯುವನ್ನು ಮಾಡಿ ಕುಡಿಸಿದಲ್ಲಿ ವಾತಪ್ರಕೋಪಜನ್ಯ ಜ್ವರ ಮತ್ತು ಪಿತ್ತಪ್ರಕೋಪಜನ್ಯ ಜ್ವರ, ಜ್ವರದ ಜೊತೆಯಲ್ಲಿರುವ ಆಳೋಣ, ಬುದ್ಧಿಭ್ರಮಣೆ, ವಾಂತಿ, ಜ್ಞಾನಾಜ್ಞಾನ, ಅಸಾಧ್ಯವಾದ ಬಾಯಾರಿಕೆ, ಇವುಗಳನ್ನೆಲ್ಲಾ ನಿವಾರಣೆ ಮಾಡುತ್ತದೆ.

ಅಮೃತಾಯಾಹಿಮಃಪೇಯೋಜೀರ್ಣಜ್ವರಹರಃಸ್ಮೃತಃ ॥ ೬ ॥
ವಾಸಾಯಾಶ್ಚಹಿಮಃಕಾಸಂರಕ್ತಪಿತ್ತಜ್ವರಾನ್ ಜಯೇತ್ ॥

ಅಮೃತ ಬಳ್ಳಿಯನ್ನು ಕುಟ್ಟಿ ತಣ್ಣೀರಿನಲ್ಲಿ ಹಾಕಿ ಹಿಮಕಷಾಯ ಮಾಡಿ ಕುಡಿಸಿದಲ್ಲಿ ಜೀರ್ಣಜ್ವರಗಳನ್ನು ನಿವಾರಣಮಾಡುತ್ತದೆ. ಆಡುಸೋಗೇ ಸೊಪ್ಪಿನ ಹಿಮಕಷಾಯುವು ಕೆಮ್ಮು, ರಕ್ತಪಿತ್ತರೋಗ, ಜ್ವರ ಇವುಗಳನ್ನೆಲ್ಲಾ ಗುಣ ಪಡಿಸುತ್ತದೆ.

ಪ್ರಾತಸ್ಸಶರ್ಕರಃಪೇಯೋಹಿಮೋಧಾನ್ಯಕಸಂಭವಃ ॥ ೭ ॥
ಅಂತರ್ದಾಹಂತಥಾತೃಷ್ಣಾಂಜಯೇತ್ ಸ್ರೋತೋವಿಶೋಧನಃ ॥

ಧಾನ್ಯಕಹಿಮ—ಕೊತ್ತುಂಬರಿಬೀಜವನ್ನು ಚನ್ನಾಗಿ ಹುಡಿಮಾಡಿ ರಾತ್ರಿವೇಳೆ ಅದರಲ್ಲಿ ತಣ್ಣೀರನ್ನು ಬೆರಸಿ ಇಟ್ಟಿದ್ದು ಬೆಳಿಗ್ಯೆ ಹಿಮಕಷಾಯವನ್ನು ಬಗ್ಗಿಸಿಕೊಂಡು ಸಕ್ಕರೆ ಹಾಕಿಕೊಂಡು ಕುಡಿಯುತ್ತ ಬರುವುದರಿಂದ ಅಂತರ್ದಾಹ ಅಂದರೆ ಶರೀರದೊಳಗಣ ಉರಿ, ಬಾಯಾರಿಕೆ, ಇವುಗಳನ್ನು ನಿವಾರಣಮಾಡುವುದಲ್ಲದೆ ಮೂತ್ರಮಾರ್ಗದಲ್ಲಿರುವ ಉರಿ ಮತ್ತು ತಡೆಗಳನ್ನೆಲ್ಲಾ ತಪ್ಪಿಸುತ್ತದೆ.

ಧಾನ್ಯಾಕಧಾತ್ರೀವಾಸಾನಾಂದ್ರಾಕ್ಷಾಪರ್ಪಟಯೋರ್ಹಿಮಃ ॥ ೮ ॥
ರಕ್ತಪಿತ್ತಜ್ವರಂದಾಹಂತೃಷ್ಣಾಂಶೋಷಂಚನಾಶಯೇತ್ ॥

ಕೊತ್ತುಂಬರಿಬೀಜ, ನೆಲ್ಲಿಕಾಯಿ, ಆಡುಸೋಗೆಯ ಸೊಪ್ಪು, ದ್ರಾಕ್ಷಿ, ಪರ್ಪಾಟಕ, ಇವುಗಳ ಹಿಮಕಷಾಯಮಾಡಿ ಕುಡಿಸುವುದರಿಂದ ರಕ್ತಪಿತ್ತರೋಗ, ಜ್ವರ, ವೈಯ್ಯಾರಿ, ಬಾಯಾರಿಕೆ, ಕ್ಷಯ, ಈ ರೋಗಗಳನ್ನು ನಾಶಪಡಿಸುತ್ತದೆ.

ಇಲ್ಲಿಗೆ ನಾಲ್ಕನೆಯ ಅಧ್ಯಾಯ ಸಂಪೂರ್ಣ.

---

## ಐದನೆಯ ಅಧ್ಯಾಯ.

ದ್ರವ್ಯಮಾರ್ದ್ರಂಶಿಲಾಪಿಷ್ಟಂಶುಷ್ಕಂವಾಸಜಲಂಭವೇತ್ ||
ಪ್ರಕ್ಷೇಪಾವಾಪಕಲ್ಕಾಸ್ತೇತನ್ಮಾನಂಕರ್ಷಸಂಮ್ಮಿತಂ || ೧ ||
ಕಲ್ಕೇಮಧುಘೃತಂತೈಲಂದೇಯಂದ್ವಿಗುಣಮಾತ್ರಯಾ ||
ಸಿತಾಗುಡಂಸಮಂದದ್ಯಾದ್ದ್ರವಾದೇಯಾಶ್ಚತುರ್ಗುಣಾಃ || ೨ ||

ಕಲ್ಕನಿರ್ಮಾಣ ಕ್ರಮವನ್ನು ಹೇಳುತ್ತಾನೆ—ಹಸಿಯ ಮೂಲಿಕೆಯನ್ನು ಸಂಗ್ರಹಿಸಿತಂದು ಅರೆದರೂ ಅಥವಾ ಸಿಕ್ಕದಿದ್ದಲ್ಲಿ ಒಣಮೂಲಿಕೆಯನ್ನೆ ತಂದು ನೀರನ್ನು ಹಾಕಿ ಕಲ್ಲಿನ ಮೇಲೆ ಅರದರೂ ಅದಕ್ಕೆ ಕಲ್ಕ, ಪ್ರಕ್ಷೇಪ, ಆವಾಪ ಎಂಬ ಹೆಸರುಗಳಿರುತ್ತವೆ, ಇಂತಹ ಕಲ್ಕವನ್ನು ಹೊಟ್ಟೆಗೆ ಕೊಡುವುದು ಒಂದು ಕರ್ಷಪರಿಮಾಣವೆಂದು ತಿಳಿಯಬೇಕು, ಕಲ್ಕವನ್ನು ಹೊಟ್ಟೆಗೆ ಕೊಡುವಾಗ್ಯೆ ಜೇನುತುಪ್ಪ, ತುಪ್ಪ, ಎಣ್ಣೆ ಇವುಗಳನ್ನು ನೇರಿಸ ಹೇಳಿದ್ದಲ್ಲಿ ಕಲ್ಕದ ದ್ವಿಗುಣದ ಷ್ಟನ್ನು ಸೇರಿಸಬೇಕು, ಸಕ್ಕರ ಮತ್ತು ಬೆಲ್ಲವನ್ನು ಸೇರಿಸಬೇಕಾದರೆ ಕಲ್ಕದಷ್ಟೇ ಸೇರಿಸಬೇಕು, ಯಾವುದಾದರೂ ದ್ರವದ್ರವ್ಯಗಳನ್ನು ಸೇರಿಸ ಹೇಳಿದರೆ ಕಲ್ಕದ ನಾಲ್ಕರಷ್ಟು ನೇರಿಸಬೇಕು.

ತ್ರಿವೃದ್ಧ್ಯಾಪಂಚವೃದ್ಧ್ಯಾವಾಸಪ್ತವೃದ್ಧ್ಯಾಥವಾಕಣಾಃ ||
ಪಿಬೇತ್ಪಿಷ್ಟ್ವಾದಶದಿನಂತಾಂಸ್ತಥೈವಾಪಕರ್ಷಯೇತ್ || ೩ ||
ಏವಂವಿಂಶದ್ದಿನೈಸ್ಸಿದ್ಧಂಪಿಪ್ಪಲೀವರ್ಧಮಾನಕಂ ||
ಅನೇನಪಾಂಡುವಾತಾಸ್ರಕಾಸಶ್ವಾಸಾರುಚಿಜ್ವರಾಃ || ೪ ||
ಉದರಾರ್ಶಃಕ್ಷಯಶ್ಲೇಷ್ಮವಾತಾನಶ್ಯಂತ್ಯುರೋಗ್ರಹಾಃ ||

ವರ್ಧಮಾನ ಪಿಪ್ಪಲೀ ಕಲ್ಕ ಕ್ರಮವನ್ನು ಹೇಳುತ್ತಾನೆ—ಹತ್ತು ದಿವಸಹ ವರಿವಿಗೆ ಇವತ್ತು ಮೂರು, ನಾಳೆ ಆರು, ನಾಡಿದ್ದು ಒಂಬತ್ತು ಈ ರೀತಿಯಾಗಿ ಆಗಲಿ, ಪ್ರತಿನಿತ್ಯವೂ ಐದರಂತೆ ಹೆಚ್ಚಿಸುತ್ತ ಆ ಕ್ರಮದಲ್ಲಿಯಾಗಲಿ, ಪ್ರತಿದಿನವೂ ಏಳರಂತೆ ಹೆಚ್ಚಿಸುವ ಕ್ರಮದಲ್ಲಿಯಾಗಲಿ ಹಿಪ್ಪಲಿಯನ್ನು ಹೆಚ್ಚಿಸುತ್ತ ಹತ್ತು ದಿವಸ ಕಲ್ಕಮಾಡಿ ಕುಡಿಯುತ್ತ ಹೋಗುವುದು, ಹನ್ನೊಂದನೆಯ ದಿವಸದಿಂದ ಮೊದಲು ಯಾವ ಕ್ರಮದಿಂದ ಹೆಚ್ಚಿಸುತ್ತ ಹೋಗಿರುತ್ತಾನೆಯೋ ಅದೇ ಕ್ರಮ

ದಿಂದ ಹತ್ತು ದಿವಸ ತಗ್ಗಿಸುತ್ತ ಬರುವುದು, ಈ ರೀತಿಯಾಗಿ ಆರೋಹಣಾವರೋಹಣ ಕ್ರಮದಿಂದ ಹತ್ತು ದಿವಸ ಮಾಡಿದರೆ ಈ ಸಾಧನಕ್ಕೆ ಪಿಪ್ಪಲೀವರ್ಧಮಾನವೆಂದು ಹೆಸರು. ಈ ರೀತಿಯಾದ ಕ್ರಮದಿಂದ ಸಾಧನೆ ಮಾಡಿದಲ್ಲಿ ಪಾಂಡುರೋಗ, ವಾತರಕ್ತ, ಕೆಮ್ಮು, ಉಬ್ಬಸ, ಅರುಚಿ, ಜ್ವರ, ಉದರಗಳು, ಮೂಲವ್ಯಾಧಿ, ಕ್ಷಯರೋಗ, ಶ್ಲೇಷ್ಮವಾತ, ಉರೋಗ್ರಹವೆಂದರೆ ಎದೆಹಿಡಿಯುವುದು ಇವುಗಳೆಲ್ಲಾ ನಾಶಹೊಂದುತ್ತವೆ.

**ಲೇಪಾನ್ನಿಂಬದಳೈಃಕಲ್ಕೋವ್ರಣಶೋಧನರೋಪಣಃ ॥ ೫ ॥**
**ಭಕ್ಷಣಾಚ್ಛರ್ದಿಕುಷ್ಠಾನಿಪಿತ್ತಶ್ಲೇಷ್ಮಕ್ರಿಮೀನ್ ಜಯೇತ್ ॥**

ಬೇವಿನ ಎಲೆಗಳನ್ನು ಕಲ್ಕಮಾಡಿ ವ್ರಣಗಳಿಗೆ ಸವರುತ್ತ ಬಂದರೆ ವ್ರಣಗಳನ್ನು ಶೋಧನಮಾಡಿ ಅಂದರೆ ಒಳಗಿರುವ ಕೆಟ್ಟುಹೋಗಿರುವ ಭಾಗವನ್ನೆಲ್ಲಾ ಶೋಧನಮಾಡಿ ತೆಗೆದು ವ್ರಣವನ್ನು ಮಾಯಿಸುತ್ತದೆ, ಇದೇ ಕಲ್ಕವನ್ನು ಹೊಟ್ಟೆಗೆ ತೆಗೆದುಕೊಳ್ಳುವುದರಿಂದ ವಮನ, ಕುಷ್ಠರೋಗ, ಪಿತ್ತಶ್ಲೇಷ್ಮಜನ್ಯಗಳಾದ ರೋಗಗಳು, ಕ್ರಿಮಿರೋಗ ಇವುಗಳನ್ನು ಕಡಮೆಮಾಡುತ್ತದೆ

**ಮಹಾನಿಂಬಜಟಾಕಲ್ಕೋಗೃಧ್ರಸೀನಾಶನಃಸ್ಮೃತಃ ॥ ೬ ॥**

ಮಹಾನಿಂಬವೆಂಬ ಬೇವಿನ ಭೇದದ ಮರದ ಬೇರಿನ ಕಲ್ಕಮಾಡಿ ಕುಡಿಯುವುದರಿಂದ ಗೃಧ್ರಸಿ ಎಂಬ ವಾತರೋಗವು ಶಮನವಾಗುತ್ತದೆ.

**ಶುದ್ಧಃಕಲ್ಕೋರಸೋನಸ್ಯತಿಲತೈಲೇನಮಿಶ್ರಿತಃ ॥**
**ವಾತರೋಗಾನ್ ಜಯೇತ್ತೀವ್ರಾನ್ವಿಷಮಜ್ವರನಾಶನಃ ॥ ೭ ॥**

ಬೆಳ್ಳುಳ್ಳಿಯ ಕಲ್ಕಮಾಡಿ ಎಳ್ಳೆಣ್ಣೆಯೊಡನೆ ಕಲಸಿ ಕೊಡುತ್ತ ಬಂದಲ್ಲಿ ಸಮಸ್ತ ವಿಧವಾದ ವಾತರೋಗಗಳನ್ನೂ ಮತ್ತು ವಿಷಮ ಜ್ವರವನ್ನೂ ಗುಣಮಾಡುತ್ತದೆ.

**ಪಕ್ವಕಂದರಸೋನಸ್ಯಗುಳಿಕಾನಿಸ್ತುಷೀಕೃತಾಃ ॥**
**ಪಾಟಯಿತ್ವಾಚಮಧ್ಯಸ್ಥಂದೂರೀಕುರ್ಯಾತ್ತದಂಕುರಂ ॥ ೮ ॥**
**ತದುಗ್ರಗಂಧನಾಶಾಯರಾತ್ರೌತಕ್ರೇವಿನಿಕ್ಷಿಪೇತ್ ॥**
**ಅಪನೀಯಚತನ್ಮಧ್ಯಾಚ್ಛಿಲಾಯಾಂಪೇಷಯೇತ್ತತಃ ॥ ೯ ॥**
**ತನ್ಮಧ್ಯೇಪಂಚಮಾಂಶೇನಚೂರ್ಣಮೇಷಾಂವಿನಿಕ್ಷಿಪೇತ್ ॥**
**ಸೌವರ್ಚಲಂಯವಾನೀಂಚಭರ್ಜಿತಂಹಿಂಗುಸೈಂಧವಂ ॥ ೧೦ ॥**
**ಕಟುತ್ರಿಕಂಜೀರಕಂಚಸಮಭಾಗಾನಿಚೂರ್ಣಯೇತ್ ॥**

ಏಕೀಕೃತ್ಯತತಸ್ಸರ್ವಂಕಲ್ಕಂಕರ್ಷಪ್ರಮಾಣತಃ ॥ ೧೧ ॥
ಖಾದೇದಗ್ನಿಬಲಾಪೇಕ್ಷೀಋತುದೋಷಾದ್ಯಪೇಕ್ಷಯಾ ॥
ಅನುಪಾನಂತತಃಕುರ್ಯಾದೇರಂಡಶೃತಮುಸ್ತಹಂ ॥ ೧೨ ॥
ಸರ್ವಾಂಗೈಕಾಂಗಜಂವಾತಮರ್ದಿತಂಚಾಪತಂತ್ರಕಂ ॥
ಅಪಸ್ಮಾರಮಥೋನ್ಮಾದಮೂರುಸ್ತಂಭಂಚಗೃಧ್ರಸೀಂ ॥ ೧೩ ॥
ಉರಃಪೃಷ್ಠಕಟೀಪಾರ್ಶ್ವಕುಕ್ಷಿಪೀಡಾಂಕ್ರಿಮೀನ್ಜಯೇತ್ ॥
ಅಜೀರ್ಣಮಾತಪಂರೋಷಮತಿನೀರಂಪಯೋಗುಡಂ ॥ ೧೪ ॥
ರಸೋನಮಶ್ನನ್ಪುರುಷಸ್ತ್ಯಜೇದೇತನ್ನಿರಂತರಂ ॥
ಮದ್ಯಂಮಾಂಸಂತಥಾಮ್ಲಂಚರಸಂಸೇವೇತನಿತ್ಯಶಃ ॥ ೧೫ ॥

ಬೆಳ್ಳುಳ್ಳಿಯ ಗೆಡ್ಡೆಯ ಹಿಲಕುಗಳನ್ನು ಚೊಕ್ಕಟವಾಗಿ ಕಸವಿಲ್ಲದಂತೆ ಸುಲದು ಮಧ್ಯದಲ್ಲಿರುವ ಮೊಳಕೆಯನ್ನೂ ತೆಗದುಹಾಕಿ ಅದರಲ್ಲಿರುವ ವಾಸನೆ ಹೋಗುವುದಕ್ಕಾಗಿ ರಾತ್ರಿ ಮಜ್ಜಿಗೆಯಲ್ಲಿ ನೆನೆಸಿರಿಸಿದ್ದು ಬೆಳಿಗ್ಗೆ ಮಜ್ಜಿಗೆಯಿಂದ ತೆಗದು ಕಲ್ಲಿನ ಮೇಲೆ ಹಾಕಿಕೊಂಡು ಚನ್ನಾಗಿ ಅರದು ಅದರ ಜೊತೆಗೆ ಸೌವರ್ಚಲವಣ, ಪೋವಿನಕಾಳು, ತುಪ್ಪದಲ್ಲಿ ಹುರಿದ ಇಂಗು, ಸೈಂಧವಲವಣ, ತ್ರಿಕಟು (ಶುಂಠಿ, ಹಿಪ್ಪಲಿ, ಮೆಣಸು) ಜೀರಿಗೆ ಈ ಪ್ರತಿಯೊಂದು ವಸ್ತುಹನ್ನೂ ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣ ಮಾಡಿದ ಚೂರ್ಣವನ್ನು ಮೇಲಿನ ಬೆಳ್ಳುಳ್ಳಿಯ ಕಲ್ಕದ ಜೊತೆಗೆ ಐದನೆಯ ಭಾಗದಷ್ಟು ಸೇರಿಸಿ ಎಲ್ಲವನ್ನೂ ಕೂಡಿಸಿ ಒಂದೊಂದು ಕರ್ಷದಷ್ಟನ್ನು ಜಠರಾಗ್ನಿ ಬಲ ಮತ್ತು ಕಾಲ ಧರ್ಮವನ್ನು ಸಹ ಪರ್ಯಾಲೋಚಿಸಿ ತಿನ್ನುತ್ತ ಬರಬೇಕು. ಇದಕ್ಕೆ ಅನುಪಾನವಾಗಿ ಹರಳು ಬೇರಿನ ಕಷಾಯವನ್ನು ಪ್ರತಿದಿವಸವೂ ಕುಡಿಯುತ್ತ ಬರಬೇಕು, ಈ ರೀತಿಯಾಗಿ ತಪ್ಪದೆ ನಡೆಯಿಸುತ್ತ ಬಂದರೆ ಸರ್ವಾಂಗವಾತ, ಏಕಾಂಗವಾತ, ಅರ್ದಿತವೆಂಬ ವಾತ, ಅಪತಂತ್ರಕವೆಂಬ ವಾತ, ಅಪಸ್ಮಾರ, ಹುಚ್ಚು, ಊರುಸ್ತಂಭ, ಗೃಧ್ರಸೀವಾತ, ಎದೆನೋವು, ಪೃಷ್ಠದನೋವು, ಸೊಂಟದ ನೋವು, ಪಾರ್ಶ್ವಶೂಲೆ, ಹೊಟ್ಟೆ ನೋವು, ಕ್ರಿಮಿರೋಗ, ಇವುಗಳು ಗುಣಹೊಂದುತ್ತವೆ. ಈ ಬೆಳ್ಳುಳ್ಳಿಯನ್ನು ತಿನ್ನುವವರು ನಡೆಯಿಸಬೇಕಾದ ಪಥ್ಯಗಳೇನಂದರೆ—ಅಜೀರ್ಣವಾಗುವಂತೆ ಭೋಜನಮಾಡಬಾರದು, ಬಿಸಲು ಕಾಯಬಾರದು, ಸಿಟ್ಟುಮಾಡಬಾರದು, ಹೆಚ್ಚಿಗೆ ನೀರು ಕುಡಿಯಬಾರದು, ಹಾಲು ಉಪಯೋಗಿಸಬಾರದು, ಬೆಲ್ಲವನ್ನು ತಿನ್ನಬಾರದು, ಮದ್ಯಮಾಂಸಗಳು, ಹುಳಿ ಇವುಗಳನ್ನು ಉಪಯೋಗಿಸಲು ಅಡ್ಡಿ ಇಲ್ಲ.

ಪಿಪ್ಪಲೀಪಿಪ್ಪಲೀಮೂಲಂಭಲ್ಲಾತಕಫಲಾನಿಚ ॥
ಏತತ್ಕಲ್ಕಶ್ಚಸಕ್ಷೌದ್ರಊರುಸ್ತಂಭನಿವಾರಣಃ ॥ ೧೬ ॥

ಹಿಪ್ಪಲಿ, ಹಿಪ್ಪಲಿಮೋಡಿ, ಗೇರುಬೀಜ ಇವುಗಳ ಕಲ್ಕಮಾಡಿ ಅದರ ಜೊತೆಗೆ ಜೇನುತುಪ್ಪ ಸೇರಿಸಿ ಸೇವನೆಮಾಡುವುದರಿಂದ ಊರುಸ್ತಂಭವೆಂಬ ವಾತ ರೋಗವು ಶಮನವಾಗುತ್ತದೆ.

ವಿಷ್ಣುಕ್ರಾಂತಾಜಟಾಕಲ್ಕಃಸಿತಾಕ್ಷೌದ್ರಘೃತೈರ್ಯುತಃ ||
ಪರಿಣಾಮಭವಂಶೂಲಂನಾಶಯೇತ್ಸಪ್ತಭಿರ್ದಿನೈಃ || ೧೭ ||

ವಿಷ್ಣುಕ್ರಾಂತಿಯ ಗಿಡದ ಬೇರನ್ನು ಚನ್ನಾಗಿ ಅರದು ಕಲ್ಕಮಾಡಿ ಸಕ್ಕರೆ ಮತ್ತು ಜೇನುತುಪ್ಪ ಸೇರಿಸಿ ಏಳು ದಿವಸ ಸಾಧನೆಮಾಡಿ ತೆಗದುಕೊಂಡಲ್ಲಿ ಪರಿಣಾಮ ಶೂಲೆಯು ತನ್ನಂತೆಯೇ ಮಾಯವಾಗಿ ಹೋಗುತ್ತದೆ.

ಶುಂಠೀಕಿಲಗುಡೈಃಕಲ್ಕೋದುಗ್ಧೇನಸಹಯೋಜಿತಃ ||
ಪರಿಣಾಮಭವಂಶೂಲಮಾಮವಾತಂಚನಾಶಯೇತ್ || ೧೮ ||

ಶುಂಠಿ, ಎಳ್ಳು, ಬೆಲ್ಲ ಇವುಗಳನ್ನು ಹಾಲಿನಿಂದರದು ಕಲ್ಕಮಾಡಿ ತೆಗೆದುಕ್ಕೊಳ್ಳುತ್ತ ಬಂದಲ್ಲಿ ಪರಿಣಾಮಶೂಲೆ ಮತ್ತು ಆಮವಾತವೆಂಬ ಒಂದು ಬಗೆಯ ವಾತರೋಗ ಇವುಗಳು ಗುಣವಾಗುತ್ತವೆ.

ಅಪಾಮಾರ್ಗಸ್ಯಬೀಜಾನಾಂಕಲ್ಕಸ್ತಂಡುಲವಾರಿಣಾ ||
ಪೀತೋರಕ್ತಾರ್ಶಸಾಂನಾಶಂಕುರುತೇನಾತ್ರಸಂಶಯಃ || ೧೯ ||

ಉತ್ತರಣೇ ಬೀಜಗಳನ್ನು ತಂದು ಅಕ್ಕಿಯನ್ನು ತೊಳೆದ ನೀರಿನಲ್ಲಿ ಕಲ್ಕಮಾಡಿ ಕುಡಿಯುತ್ತ ಬಂದಲ್ಲಿ ರಕ್ತ ಹೋಗತಕ್ಕ ಮೂಲವ್ಯಾಧಿಯು ಗುಣವಾಗುತ್ತದೆ.

ಬದರೀಮೂಲಕಲ್ಕೇನತಿಲಕಲ್ಕಶ್ಚಯೋಜಿತಃ ||
ಮಧುಕ್ಷೀರಯುತಃಕುರ್ಯಾದ್ರಕ್ತಾತೀಸಾರನಾಶನಂ || ೨೦ ||

ಬೋರೆಯ ಮರದ ಬೇರಿನ ಕಲ್ಕದ ಜೊತೆಗೆ ಎಳ್ಳಿನ ಕಲ್ಕವನ್ನು ಸೇರಿಸಿ ಜೇನುತುಪ್ಪ ಮತ್ತು ಆಡಿನಹಾಲು ಸಹ ಸೇರಿಸಿ ಕುಡಿಯುತ್ತ ಬರೋಣದರಿಂದ ರಕ್ತಾತಿಸಾರವು ಶಮನವಾಗುತ್ತದೆ.

ಕೂಷ್ಮಾಂಡಕರಸೋಪೇತಾಂಲಾಕ್ಷಾಂಕರ್ಷದ್ವಯಂಪಿಬೇತ್ ||
ರಕ್ತಕ್ಷಯಮುರೋಘಾತಂಕ್ಷಯರೋಗಂಚನಾಶಯೇತ್ ||೨೧||

ಬೂದಿಗುಂಬಳಕಾಯಿನ ರಸದಲ್ಲಿ ಎರಡು ಕರ್ಷದಷ್ಟು ಅರಗನ್ನು ಅರದು ಕಲ್ಕಮಾಡಿ ಅದೇ ರಸದಲ್ಲಿಯೇ ಕಲೆಸಿ ಕುಡಿಯುವುದರಿಂದ ಶರೀರದಲ್ಲಿ ರಕ್ತವು

ಕಡಮೆಯಾಗುವುದು, ಎದೆಗೆ ಯಾವುದಾದರೂ ತೊಂದರೆಯಾಗಿ ಆಗುವನೋವು, ಕ್ಷಯರೋಗ ಇವುಗಳು ಗುಣವಾಗುತ್ತವೆ.

ತಂಡುಲೀಯಜಟಾಕಲ್ಕಃಸಕ್ಷೌದ್ರಸ್ಸರಸಾಂಜನಃ ।
ತಂಡುಲೋದಕಸಂಪೀತೋರಕ್ತಪ್ರದರನಾಶನಃ ॥ ೨೨ ॥

ಕಿರಕಸಾಲೇ ಸೊಪ್ಪಿನ ಬೇರಿನ ಕಲ್ಕದ ಜೊತೆಗೆ ಜೇನುತುಪ್ಪವನ್ನೂ ರಸಾಂಜನವೆಂಬ ಮರದರಿಸಿನದ ಕಷಾಯದ ಸತ್ವವನ್ನೂ ಸೇರಿಸಿ ಅಕ್ಕಿಯನ್ನು ತೊಳೆದ ಕಲಗಚ್ಚಿನಲ್ಲಿ ಕುಡಿಯುತ್ತ ಬಂದಲ್ಲಿ ರಕ್ತಪ್ರದರ (ಕೆಂಪುಶೆರಗು)ರೋಗವು ಗುಣವಾಗುತ್ತದೆ

ಅಂಕೋಟಮೂಲಕಲ್ಕಶ್ಚಸಕ್ಷೌದ್ರಸ್ತಂಡುಲಾಂಬುನಾ ॥
ಅತಿಸಾರಹರಃಪ್ರೋಕ್ತಸ್ತಥಾವಿಷಹರಸ್ಮೃತಃ ॥ ೨೩ ॥
ವಂಧ್ಯಾಕರ್ಕೋಟಕೀಮೂಲಂಪಾಟಲಾಯಾಜಟಾಥವಾ ॥
ಘೃತೇನಬಿಲ್ವಮೂಲಂವಾದ್ವಿವಿಧಂನಾಶಯೇದ್ವಿಷಂ ॥ ೨೪ ॥

ಅಂಕೋಲೆಯ ಗಿಡದ ಬೇರನ್ನು ತಂದು ಅಕ್ಕಿಯನ್ನು ತೊಳೆದ ನೀರಿನಿಂದ ಅರದು ಕಲ್ಕಮಾಡಿ ಅಕ್ಕಿಯನ್ನು ತೊಳೆದ ನೀರಿನಲ್ಲಿಯೇ ಕುಡಿದರೆ ಅತಿಸಾರ ವನ್ನೂ ಮತ್ತು ವಿಷದಿಂದ ಉಂಟಾದ ವೇಗವನ್ನೂ ಸಹ ಕಡಮೆ ಮಾಡುತ್ತದೆ. ವಂಧ್ಯಾಕರ್ಕೋಟಕಿ ಎಂದರೆ ಕಹಿಸೌತೇಕಾಯಿನ ಗಿಡದ ಬೇರನ್ನಾಗಲಿ, ಪಾದರಿ ಯ ಬೇರನ್ನಾಗಲಿ, ಬಿಲ್ವದ ಬೇರನ್ನಾಗಲಿ ಅರದು ಕಲ್ಕಮಾಡಿ ತುಪ್ಪವನ್ನು ಸೇರಿಸಿ ಕುಡಿಯುತ್ತ ಬಂದಲ್ಲಿ ಸ್ಥಾವರ ಮತ್ತು ಜಂಗಮವಿಷಗಳೆಂಬ ಎರಡು ವಿಧವಾದ ವಿಷವನ್ನೂ ನಾಶಮಾಡುತ್ತದೆ

ಅಭಯಾಸೈಂಧವಕಣಾಶುಂಠೀಕಲ್ಕಸ್ತ್ರಿದೋಷಹಾ ॥
ಪಥ್ಯಾಸೈಂಧವಶುಂಠೀಭಿಃಕಲ್ಕೋದೀಪನಪಾಚನಃ ॥ ೨೫ ॥

ಅಳಲೇ ಕಾಯಿ, ಸೈಂಧವಲವಣ, ಹಿಪ್ಪಲಿ, ಶುಂಠಿ, ಇವುಗಳ ಕಲ್ಕಮಾಡಿ ಕುಡಿದಲ್ಲಿ ತ್ರಿದೋಷ ಪ್ರಕೋಪವನ್ನು ಕಡಮೆಮಾಡುತ್ತದೆ. ಅಳಲೇಕಾಯಿ, ಸೈಂಧವ ಲವಣ, ಶುಂಠಿ ಇವುಗಳ ಕಲ್ಕಮಾಡಿ ತೆಗದುಕೊಂಡಲ್ಲಿ ದೀಪನ ವಾಗಿಯೂ ಪಾಚನವಾಗಿಯೂ ಇರುತ್ತದೆ, ಅಂದರೆ ಅಜೀರ್ಣವನ್ನು ಕಳೆದು ಹಸಿವು ಹೆಚ್ಚಿಸುತ್ತದೆ.

ತ್ರಿವೃತ್ಪಲಾಶಬೀಜಾನಿಪಾರಸೀಕಯವಾನಿಕಾ ॥
ಕಂಪಿಲ್ಲಕಂವಿಡಂಗಂಚಗುಡಶ್ಚಸಮಭಾಗಿಕಂ ॥ ೨೬ ॥
ತಕ್ರೇಣಕಲ್ಕಮೇತೇಷಾಂಪಿಬೇತ್ಕ್ರಿಮಿಗಣಾಪಹಾಂ ॥

ಲಾಲ್ ತಿಗಡೇ, ಮುತ್ತಗದ ಬೀಜ, ಖುರಾಸಾನಿವೋಮು, ಕಂಪಿಲ್ಲಕವೆಂಬ ವಿರೇಚನದ್ರವ್ಯ, ವಾಯವಿಡಂಗ, ಬಿಲ್ಲ, ಇವುಗಳನ್ನೆಲ್ಲಾ ಸಮವಾಗಿ ಸೇರಿಸಿ ಮಜ್ಜಿಗೆಯಲ್ಲಿ ಕಲ್ಕಮಾಡಿ ಕುಡಿಯುವುದರಿಂದ ಹೊಟ್ಟೆಯಲ್ಲಿರುವ ಹುಳಗಳೆಲ್ಲಾ ಬಿದ್ದು ಹೋಗುವವು.

ನವನೀತತಿಲೈಃಕಲ್ಕೋ ಜೀತಾರಕ್ತಾರ್ಶಸಾಂಸ್ಕೃತಃ ॥ ೨೭ ॥
ನವನೀತಸಿತಾನಾಗಕೇಸರೈಶ್ಚಾಪಿತದ್ವಿಧಃ ॥

ರಕ್ತಮೂಲಕ್ಕೆ ಎಳ್ಳುಕಲ್ಕವನ್ನು ಬೆಣ್ಣೆಯೊಡನೆ ತೆಗದುಕೊಂಡರೂ ನಾಗ ಕೇಸರಿ ಬಿಳೀ ಕಲ್ಲುಸಕ್ಕರೆ ಇವುಗಳನ್ನು ಅದರು ಬೆಣ್ಣೆಯಲ್ಲಿ ತೆಗದುಕೊಂಡರೂ ರಕ್ತಮೂಲವು ಕಡಮೆಯಾಗುತ್ತದೆ.

ಪೀತೋಮಸೂರಯೂಷೇಣಕಲ್ಕಶ್ಶುಂಠೀಕಲಾಟುಜಃ ॥ ೨೮ ॥
ಜಯೇತ್ಸಂಗ್ರಹಣೀಂತದ್ವತ್ತಕ್ರೇಣಬೃಹತೀಭವಃ ॥

ಮಸೂರ ಎಂಬ ಬೇಳೆಯ ಕಷಾಯದಲ್ಲಿ ಶುಂಠಿಯ ಕಲ್ಕವನ್ನು ಮಾಡಿ ಕುಡಿಸಿದರೂ ಹೆಗ್ಗುಳ್ಳದ ಬೇರಿನ ಕಲ್ಕವನ್ನು ಮಜ್ಜಿಗೆಯೊಡನಾಗಲಿ ತೆಗದು ಕೊಂಡಲ್ಲಿ ಸಂಗ್ರಹಣಿ ಎಂಬ ಅತಿಸಾರವು ಗುಣವಾಗುತ್ತದೆ.

ಇಲ್ಲಿಗೆ ಐದನೆಯ ಅಧ್ಯಾಯ ಸಂಪೂರ್ಣ.

---

## ಆರನೆಯ ಅಧ್ಯಾಯ.

ಅತ್ಯಂತಶುಷ್ಕಂಯದ್ದ್ರವ್ಯಂ ಸುಪಿಷ್ಟಂವಸ್ತ್ರಗಾಳಿತಂ ॥
ತಶ್ಯಾಚ್ಚೂರ್ಣಂರಜಃಕ್ಷೋದಸ್ತನ್ಮಾತ್ರಾಕರ್ಷಸಮ್ಮಿತಾ ॥ ೧ ॥

ಮೂಲಿಕಾ ದ್ರವ್ಯಗಳನ್ನು ತಂದು ಚೆನ್ನಾಗಿ ಒಣಗಿಸಿ ಕುಟ್ಟಿ ಪುಡಿಮಾಡಿ ಬಟ್ಟೆಯಲ್ಲಿ ಸಣ್ಣಗೆ ಸೋಸುವುದರಿಂದ ಸಿಕ್ಕತಕ್ಕ ನಯವಾದ ಪುಡಿಗೆ ಚೂರ್ಣ ವೆಂಬದಾಗಿಯೂ, ರಜಃ ಎಂಬದಾಗಿಯೂ, ಕ್ಷೋದವೆಂಬದಾಗಿಯೂ ಹೆಸರುಗಳು. ಅದನ್ನು ಕೊಡುವುದು ಒಂದು ಕರ್ಷಪ್ರಮಾಣವೆಂದು ತಿಳಿಯಬೇಕು.

ಚೂರ್ಣೇಗುಡಸ್ಸಮೋದೇಯಃಶರ್ಕರಾದ್ವಿಗುಣಾಭವೇತ್ ॥
ಚೂರ್ಣೇಷುಭರ್ಜಿತಂಹಿಂಗುದೇಯಂನೋತ್ಕ್ಲೇದಕೃದ್ಭವೇತ್ ॥
ಲಿಹೇಚ್ಚೂರ್ಣಂದ್ರವೈಸ್ಸರ್ವೈರ್ಘೃತಾದ್ಯೈರ್ದ್ವಿಗುಣೋನ್ಮಿತೈಃ ॥
ಪಿಬೇಚ್ಚತುರ್ಗುಣೈರೇವಚೂರ್ಣಮಾಲೋಡಿತಂದ್ರವೈಃ ॥ ೩ ॥

ಚೂರ್ಣಗಳ ಜೊತೆಯಲ್ಲಿ ಬೆಲ್ಲವನ್ನು ಬೆರೆಸಬೇಕಾಗಿ ಯೋಗಗಳಲ್ಲಿ ಹೇಳಿದ್ದರೆ ಚೂರ್ಣವು ಎಷ್ಟಿದೆಯೋ ಅಷ್ಟನ್ನೇ ಬೆರೆಸಬೇಕು. ಸಕ್ಕರೆಯನ್ನು ಬೆರೆಸಬೇಕಾಗಿ ಹೇಳಿದ್ದಲ್ಲಿ ಚೂರ್ಣದ ಎರಡರಷ್ಟು ಬೆರೆಸಬೇಕು. ಚೂರ್ಣಗಳಿಗೆ ಹಿಂಗನ್ನು ಸೇರಿಸಬೇಕಾಗಿದ್ದಲ್ಲಿ ಅದರ ದುರ್ಗಂಧದಿಂದ ವಾಂತಿ ಮತ್ತು ಬಾಯಿ ನೀರು ಸಹಾ ಬಾರದಿರುವುದಕ್ಕಾಗಿ ಹಿಂಗನ್ನು ತುಪ್ಪದಲ್ಲಿ ಹುರಿದೇ ಸೇರಿಸಬೇಕು. ಚೂರ್ಣವನ್ನು ಕಲಸಿ ನೆಕ್ಕಬೇಕಾಗಿ ವೈದ್ಯರು ಹೇಳಿದಲ್ಲಿ ಚೂರ್ಣದ ಎರಡರಷ್ಟು ತುಪ್ಪ ಜೇನುತುಪ್ಪ ಮೊದಲಾದ ದ್ರವದ್ರವ್ಯಗಳೊಡನೆ ಸೇರಿಸಿ ನೆಕ್ಕಬೇಕು. ಕದಡಿಕೊಂಡು ಕುಡಿಯಬೇಕಾಗಿ ವೈದ್ಯರು ಹೇಳಿದಲ್ಲಿ ಚೂರ್ಣದ ನಾಲ್ಕರಷ್ಟು ದ್ರವ ಪದಾರ್ಥದಲ್ಲಿ ಕದಡಿ ಕುಡಿಯಬೇಕು.

ಚೂರ್ಣಾವಲೇಹಗುಟಿಕಾಕಲ್ಕಾನಾಮನುಪಾನಕಂ ॥
ವಾತಪಿತ್ತಕಫಾತಂಕೇತ್ರಿದ್ವ್ಯೇಕಪಲಮಾಹರೇತ್ ॥ ೪ ॥
ಯಥಾತೈಲಂಜಲೇಕ್ಷಿಪ್ತಂಕ್ಷಣೇನೈವಪ್ರಸರ್ಪತಿ ॥
ಅನುಪಾನಬಲಾದಂಗೇತಥಾಸರ್ಪತಿಭೇಷಜಂ ॥ ೫ ॥

ಚೂರ್ಣ, ಲೇಹ, ಗುಳಿಗೆ ಅಂದರೆ ಮಾತ್ರೆ ಇವುಗಳನ್ನು ತೆಗದುಕೊಂಡ ಮೇಲೆ ದೇಹದೊಳಗೆ ಅದು ವ್ಯಾಪಿಸಿ ಕೆಲಸಮಾಡುವುದಕ್ಕಾಗಿ ಅನುಪಾನವೆಂದರೆ ಯಾವುದಾದರೂ ಒಂದು ವಿಧವಾದ ದ್ರವದ್ರವ್ಯವನ್ನು ಕುಡಿಯಬೇಕು. ಅದರಲ್ಲಿಯೂ ವಾತರೋಗದಲ್ಲಿ ಅನುಪಾನವು ಮೂರು ಪಲವೆಂಬದಾಗಿಯೂ, ಪಿತ್ತರೋಗದಲ್ಲಿ ಎರಡು ಪಲವೆಂಬದಾಗಿಯೂ ಶ್ಲೇಷ್ಮ ರೋಗದಲ್ಲಿ ಅನುಪಾನವು ಒಂದೇ ಪಲವೆಂಬದಾಗಿಯೂ ಗೊತ್ತು ಮಾಡಿದ್ದಾರೆ. ಎಣ್ಣೆಯನ್ನು ನೀರಿನ ಮೇಲೆ ಹಾಕಿದರೆ ಹರಡಿಕೊಳ್ಳುವಂತೆ ಸರಿಯಾದಅನುಪಾನದೊಡನೆ ಔಷಧಿಯನ್ನು ಉಪಯೋಗಿಸಿದಲ್ಲಿ ಔಷಧವು ದೇಹದಲ್ಲಿ ಚೆನ್ನಾಗಿ ವ್ಯಾಪಿಸಿ ಫಲಕಾರಿಯಾಗುತ್ತದೆ.

ದ್ರವೇಣಯಾವತಾಸಮ್ಯಕ್ಚೂರ್ಣಂಸರ್ವಂಪ್ಲುತಂಭವೇತ್ ॥
ಭಾವನಾಯಾಃಪ್ರಮಾಣಂತುಚೂರ್ಣೇಪ್ರೋಕ್ತಂಭಿಷಗ್ವರೈಃ ॥

ಯಾವುದಾದರೂ ಔಷಧಗಳ ದ್ರವದಿಂದ ಚೂರ್ಣಕ್ಕೆ ಭಾವನೆ ಕೊಡುವುದು ಅಂದರೆ ಚೂರ್ಣವನ್ನು ನೆನೆಯಿಸುವುದಾದರೆ ಚೂರ್ಣವು ರಸದಲ್ಲಿ ಚನ್ನಾಗಿ ಮುಳುಗುವಷ್ಟು ದ್ರವದ್ರವ್ಯವನ್ನು ಹಾಕಿ ನೆನೆಯಿಸಿ ಭಾವನೆಕೊಡಬೇಕು.

ಆಮಲಂಚಿತ್ರಕಂಪಥ್ಯಾಪಿಪ್ಪಲೀಸೈಂಧವಸ್ತಥಾ ॥
ಚೂರ್ಣಿತೋಽಯಂಗಣೋಜ್ಞೇಯಸ್ಸರ್ವಜ್ವರವಿನಾಶನಃ ॥ ೬ ॥
ಭೇದೀರುಚಿಕರಶ್ಲೇಷ್ಮಜೇತಾದೀಪನಪಾಚನಃ ॥

ಆಮಲಕ್ಯಾದಿ ಚೂರ್ಣವನ್ನು ಹೇಳುತ್ತಾನೆ—ನೆಲ್ಲಿಯಕಾಯಿ, ಚಿತ್ರಮೂಲದ ಬೇರಿನ ಶಿಪ್ಪೆ, ಅಳಲೇಕಾಯಿ, ಸೈಂಧವಲವಣ ಇವುಗಳು ಪ್ರತಿಯೊಂದನ್ನೂ ಸಮಾಂಶ ಸೇರಿಸಿ ಚೂರ್ಣಮಾಡಿ ವಸ್ತ್ರಗಾಳಿತಮಾಡಿ ಇರಿಸಿಕೊಳ್ಳತಕ್ಕದ್ದು. ಈ ಚೂರ್ಣವನ್ನು ಒಂದು ಕರ್ಷ ಪ್ರಮಾಣದಷ್ಟು ಕೊಡುತ್ತ ಬಂದಲ್ಲಿ ಸಮಸ್ತ ಜ್ವರಗಳನ್ನೂ ನಿವಾರಣಮಾಡುವುದಲ್ಲದೆ ಕಾಲಪ್ರವೃತ್ತಿಯನ್ನು ಸರಿಪಡಿಸಿ ನಾಲಿಗೆಗೆ ರುಚಿಯನ್ನು ಹೆಚ್ಚಿಸಿ ಅಜೀರ್ಣವನ್ನು ಹೋಗಲಾಡಿಸಿ ಅಗ್ನಿವೃದ್ಧಿಮಾಡುತ್ತದೆ.

ಮಧುನಾಪಿಪ್ಪಲೀಚೂರ್ಣಂಲಿಹೇತ್‌ಕಾಸಜ್ವರಾಪಹಂ ॥ ೮ ॥
ಹಿಕ್ಕಾಶ್ವಾಸಹರಂಕಂಠ್ಯಂಪ್ಲೀಹಘ್ನಂಬಾಲಕೋಚಿತಂ ॥

ಹಿಪ್ಪಲಿಯೊಂದನ್ನೇ ಚೆನ್ನಾಗಿ ಚೂರ್ಣಿಸಿ ಜೇನುತುಪ್ಪದಲ್ಲಿ ಕಲಸಿ ನೆಕ್ಕುವುದರಿಂದ ಕೆಮ್ಮು, ಜ್ವರ, ಬಿಕ್ಕಳಿಕೆ, ಮೇಲುಬ್ಬಸ, ಮೊದಲಾದವುಗಳನ್ನು ನಿವೃತ್ತಿಮಾಡುತ್ತದೆ, ಗಂಟಲಿನ ಎಲ್ಲಾ ರೋಗಗಳಿಗೂ ಹಿತಕರ, ಮಕ್ಕಳ ಪ್ಲೀಹಾಭಿವೃದ್ಧಿಯನ್ನೂ ನಿವಾರಣ ಮಾಡುವುದಲ್ಲದೆ ಮಕ್ಕಳ ಎಲ್ಲಾ ವಿಧವಾದ ರೋಗಗಳಿಗೂ ಹಿತಕರವಾದದ್ದು.

ಏಕಾಹರೀತಕೀಯೋಜ್ಯಾದ್ವೌಚಯೋಜ್ಯೌವಿಭೀತಕೌ ॥ ೯ ॥
ಚತ್ವಾರ್ಯಾಮಲಕಾನ್ಯೇವಂತ್ರಿಫಲೈಷಾಪ್ರಕೀರ್ತಿತಾ ॥
ತ್ರಿಫಲಾಮೇಹಶೋಥಘ್ನೀನಾಶಯೇದ್ವಿಷಮಜ್ವರಾನ್ ॥ ೧೦ ॥
ದೀಪನೀಶ್ಲೇಷ್ಮಪಿತ್ತಘ್ನೀಕುಷ್ಠಹಂತ್ರೀರಸಾಯನೀ ॥
ಸರ್ಪಿರ್ಮಧುಭ್ಯಾಂಸಂಯುಕ್ತಾಸೈವನೇತ್ರಾಮಯಾನ್
ಜಯೇತ್ ॥ ೧೧ ॥

ತ್ರಿಫಲ ಎಂದರೆ ಆಯುರ್ವೇದ ಶಾಸ್ತ್ರದಲ್ಲಿ ಒಂದು ಅಳಲೇಕಾಯಿ, ಎರಡು ತಾರೇಕಾಯಿ, ನಾಲ್ಕು ನೆಲ್ಲಿಕಾಯಿ ಇಷ್ಟು ಸೇರಿದ್ದಕ್ಕೆ ಹೆಸರು. ಇವರ ಚೂರ್ಣವನ್ನು ಮಾಡಿ ತೆಗೆದುಕೊಂಡಲ್ಲಿ ಮೇಹರೋಗ, ಕೈಕಾಲುಗಳಲ್ಲಿ ಬರುವ ಬಾಕು, ವಿಷಮಜ್ವರ, ಶ್ಲೇಷ್ಮವ್ಯಾಧಿಗಳು, ಪಿತ್ತದ ಕಾಹಿಲೆಗಳು, ಕುಷ್ಠರೋಗ ಇವುಗಳನ್ನು ನಿವಾರಣ ಮಾಡುತ್ತದೆ, ಹಸಿವನ್ನು ಹೆಚ್ಚಿಸುತ್ತದೆ, ಶಕ್ತಿಯನ್ನು ಹೆಚ್ಚಿಸತಕ್ಕ ರಸಾಯನದಂತೆಯೂ ಕೆಲಸಮಾಡುತ್ತದೆ. ತುಪ್ಪ ಮತ್ತು ಜೇನುತುಪ್ಪದೊಡನೆ ಮೇಲೆ ಕಂಡ ತ್ರಿಫಲ ಚೂರ್ಣವನ್ನು ಸೇವಿಸಿದಲ್ಲಿ ಸಮಸ್ತ ವಿಧವಾದ ನೇತ್ರರೋಗಗಳನ್ನೂ ಗುಣಪಡಿಸುತ್ತದೆ.

ಪಿಪ್ಪಲೀಮರಿಚಂಶುಂಠೀತ್ರಿಭಿಸ್ತ್ರ್ಯೂಷಣಮುಚ್ಯತೇ ॥
ದೀಪನಂಶ್ಲೇಷ್ಮಮೇದೋಘ್ನಂಕುಷ್ಠಪೀನಸನಾಶನಂ ॥ ೧೨ ॥
ಜಯೇದರೋಚಕಂಸಾಮಂಮೇಹಗುಲ್ಮಗಳಾಮಯಾನ್ ॥

ಹಿಪ್ಪಲಿ, ಮೆಣಸು, ಶುಂಠಿ ಇವು ಮೂರನ್ನೂ ಸಮವಾದ ಪರಿಮಾಣದಲ್ಲಿ ಕೂಡಿಸಿದರ ಅದಕ್ಕೆ ತ್ರ್ಯೂಷಣವೆಂಬ ಹೆಸರು, ಈ ತ್ರ್ಯೂಷಣ ಚೂರ್ಣವು ಅಗ್ನಿದೀಪಕವಾದದ್ದು ಶ್ಲೇಷ್ಮರೋಗ, ಮೇದೋರೋಗ ಇವುಗಳನ್ನು, ಕುಷ್ಠ ರೋಗ, ಪೀನಸಿ ಎಂಬ ನಾಸಾರೋಗ, ಅಜೀರ್ಣದೊಡನೆ ಕೂಡಿದ ಅರುಚಿರೋಗ ವನ್ನೂ, ಮೇಹರೋಗ, ಗುಲ್ಮರೋಗ, ಕಂಠರೋಗಗಳು ಇವುಗಳನ್ನೆಲ್ಲಾ ಗುಣ ಪಡಿಸುತ್ತದೆ.

ಪಿಪ್ಪಲೀಚವ್ಯವಿಶ್ವಾಹ್ವಪಿಪ್ಪಲೀಮೂಲಚಿತ್ರಕೈಃ ॥ ೧೩ ॥
ಪಂಚಕೋಲಮಿತಿಖ್ಯಾತಂರುಚ್ಯಂದೀಪನಪಾಚನಂ ॥
ಆನಾಹಪ್ಲೀಹಗುಲ್ಮಘ್ನಂಶೂಲಶ್ಲೇಷ್ಮೋದರಾಪಹಂ ॥ ೧೪ ॥

ಹಿಪ್ಪಲಿ, ಹಿಪ್ಪಲಿಯಬೇರು (ಮೋಡಿ), ಮೆಣಸಿನಬಳ್ಳಿ, ಚವ್ಯ ಎಂದು ಅಂಗಡಿಯಲ್ಲಿ ಕೊಡುವ ವಸ್ತು, ಶುಂಠಿ, ಚಿತ್ರಮೂಲದ ಬೇರು ಇವು ಐದನ್ನೂ ಸಮ ಪರಿಮಾಣದಲ್ಲಿ ಸೇರಿಸಿದರೆ ಇದಕ್ಕೆ ಪಂಚಕೋಲವೆಂಬದಾಗಿ ಹೆಸರು. ಈ ಪಂಚಕೋಲ ಚೂರ್ಣವು ನಾಲಿಗೆಗೆ ರುಚಿಯನ್ನು ಕೊಡುತ್ತದೆ. ಅಗ್ನಿದೀಪನ ವಾಗಿ ಅಜೀರ್ಣವನ್ನ ಪಚನಮಾಡುವುದಾಗಿಯೂ, ಹೊಟ್ಟೆಯುಬ್ಬರ, ಪ್ಲೀಹಾಭಿ ವೃದ್ಧಿ, ಗುಲ್ಮ, ಶೂಲೆ, ಶ್ಲೇಷ್ಮವ್ಯಾಧಿಗಳು, ಉದರಗಳು, ಹೊಟ್ಟೆದೊಡ್ಡದಾಗೋಣ ಇವುಗಳನ್ನೆಲ್ಲಾ ಕಡಮೆಮಾಡುತ್ತದೆ.

ತ್ರಿಗಂಧಮೇಲಾತ್ವಕ್ಪತ್ರೈಶ್ಚತುರ್ಜಾತಂಸಕೇಸರೈಃ ॥
ತ್ರಿಗಂಧಂಸಚತುರ್ಜಾತಂರೂಕ್ಷೋಷ್ಣಂಲಘುಪಿತ್ತಕೃತ್ ॥ ೧೫ ॥
ವರ್ಣ್ಯಂರುಚಿಕರಂತೀಕ್ಷ್ಣಂವಿಷಶ್ಲೇಷ್ಮಾಮಯಾನ್ ಜಯೇತ್ ॥

ಯಾಲಕ್ಕಿ, ಲವಂಗಚಕ್ಕೆ, ಪತ್ರೆ ಇವು ಮೂರಕ್ಕೂ ತ್ರಿಗಂಧವೆಂಬದಾಗಿ ಹೆಸರು ಇವುಗಳ ಜೊತೆಗೆ ನಾಗಕೇಸರಿಯನ್ನ ಸೇರಿಸಿದಲ್ಲಿ ಚತುರ್ಜಾತವೆಂಬ ದಾಗಿ ಹೆಸರು. ಈ ತ್ರಿಗಂಧ ಚತುರ್ಜಾತ ಚೂರ್ಣವು ರೂಕ್ಷಸ್ವಭಾವವುಳ್ಳದ್ದು, ಉಷ್ಣಮಾಡತಕ್ಕದ್ದು, ಲಘು ಎಂದರೆ ಜಾಗ್ರತೆಯಾಗಿ ಜೀರ್ಣವಾಗತಕ್ಕದ್ದು, ಪಿತ್ತ ವೃದ್ಧಿಮಾಡತಕ್ಕದ್ದು, ದೇಹಕಾಂತಿ ವೃದ್ಧಿಮಾಡುತ್ತದೆ, ಬಾಯಿಗೆ ರುಚಿ ಯಾಗಿರುತ್ತದೆ, ತೀಕ್ಷ್ಣ ಗುಣವುಳ್ಳದ್ದು, ವಿಷರೋಗ, ಶ್ಲೇಷ್ಮರೋಗಗಳು ಇವು ಗಳನ್ನು ಗೆಲ್ಲುತ್ತದೆ.

ಕಾಕೋಲೀಕ್ಷೀರಕಾಕೋಲೀಜೀವಕರ್ಷಭಕೌತಥಾ ॥ ೧೬ ॥
ಮೇದಾಚಾನ್ಯಾಮಹಾಮೇದಾಜೀವಂತೀಮಧುಕಂತಥಾ ॥
ಮುದ್ಗಪರ್ಣೀಮಾಷಪರ್ಣೀಜೀವನೀಯೋಗಣಸ್ತ್ವಯಂ ॥ ೧೭ ॥
ಜೀವನೀಯಗಣಸ್ಸ್ವಾದುರ್ಗರ್ಭಸಂಧಾನಕೃದ್ಗುರುಃ ॥

ಸ್ತನ್ಯಕೃದ್ವೃಷ್ಯಃ ಶೋವೃಷ್ಯೋಸ್ನಿಗ್ಧಶ್ಶೀತಸ್ತೃಷಾಪಹಃ ॥ ೧೮ ॥
ರಕ್ತಪಿತ್ತಂಕ್ಷಯಂಶೋಷಂಜ್ವರದಾಹಾನಿಲಾನ್‌ಜಯೇತ್ ॥

ಕಾಕೋಲಿ, ಕ್ಷೀರಕಾಕೋಲಿ, ಜೀವಕ, ಋಷಭಕ, ಮೇದ, ಮಹಾಮೇದ, ಹಾಲೇಬಳ್ಳಿ, ಜ್ಯೇಷ್ಠಮಧು, ಕಾಡುಹೆಸರು, ಕಾಡುಉದ್ದು, ಇವುಗಳಿಗೆ ಜೀವನೀಯಗಣವೆಂಬದಾಗಿ ಹೆಸರು. ಇವುಗಳನ್ನು ಸಮಭಾಗ ಕೂಡಿಸಿ ಉಪಯೋಗಿಸಿಕೊಳ್ಳಬೇಕು. ಇದು ಮಧುರ ರಸವುಳ್ಳದ್ದು; ವಂಧ್ಯೆಯರಾದವರಿಗೂ ಕೂಡ ಗರ್ಭಪ್ರದ, ಜಾಗ್ರತೆಯಾಗಿ ಜೀರ್ಣವಾಗುವುದಿಲ್ಲ, ಮೊಲೆಹಾಲನ್ನು ಹೆಚ್ಚಿಸುತ್ತದೆ, ಕೃಷರಾದವರಿಗೆ ಪುಷ್ಟಿಯನ್ನುಂಟುಮಾಡುತ್ತದೆ, ಶುಕ್ರ ವೃದ್ಧಿಮಾಡುತ್ತದೆ, ಶೀತವೀರ್ಯ, ಬಾಯಾರಿಕೆಯನ್ನು ಕಡಮೆಮಾಡುತ್ತದೆ, ರಕ್ತಪಿತ್ತರೋಗವನ್ನೂ, ಕ್ಷಯರೋಗವನ್ನೂ, ಶೋಷರೋಗವನ್ನೂ, ಜ್ವರ, ಮೈಯ್ಯುರಿ, ವಾತವ್ಯಾಧಿಗಳು ಇವುಗಳನ್ನೆಲ್ಲಾ ಕಡಮೆಮಾಡುತ್ತದೆ.

ದ್ವೇಮೇದೇದ್ವೇಚಕಾಕೋಲ್ಯೌಜೀವಕರ್ಷಭಕೌತಥಾ ॥ ೧೯ ॥
ಋದ್ಧೀವೃದ್ಧೀಚತೈಸ್ಸರ್ವೈರಷ್ಟವರ್ಗಉದಾಹೃತಃ ॥
ಅಷ್ಟವರ್ಗೋಬುಧೈಃಪ್ರೋಕ್ತೋಜೀವನೀಯಸಮೋಗುಣೈಃ
॥ ೨೦ ॥

ಮೇದಾ, ಮಹಾಮೇದಾ, ಕಾಕೋಲಿ, ಕ್ಷೀರಕಾಕೋಲಿ, ಜೀವಕ, ಋಷಭಕ, ಋದ್ಧಿ, ವೃದ್ಧಿ ಇವುಗಳೆಂಟೂ ಸ್ವನಾಮ ಪ್ರಸಿದ್ಧಗಳಾದ ಮೂಲಿಕೆಗಳೇ. ಇವುಗಳ ಪರಿಚಯವು ವೈದ್ಯರಿಗೆ ಪುಸ್ತಕದಲ್ಲಿಯೇ. ಇವು ಎಂಟು ಮೂಲಿಕೆಗಳೂ ಕೂಡಿ ಅಷ್ಟವರ್ಗವೆನ್ನಿಸುತ್ತದೆ. ಜೀವನೀಯ ಗಣವು ಎಷ್ಟು ಉಪಯೋಗವೋ ಇದೂ ಅಷ್ಟೇ ಉಪಯೋಗವಾದದ್ದು.

ಸಿಂಧುಸೌವರ್ಚಲಂಚೈವಬಿಡಂಸಾಮುದ್ರಕಂಗಡಂ ॥
ಏಕದ್ವಿತ್ರಿಚತುಷ್ಪಂಚಲವಣಾನಿಕ್ರಮಾದ್ವಿದುಃ ॥ ೨೧ ॥
ಶೇಷುಮುಖ್ಯಂಸೈಂಧವಂಸ್ಯಾದನುಕ್ತೇತತ್ಪ್ರಯೋಜಯೇತ್ ॥
ಸೈಂಧವಾದ್ಯಂರೋಮಕಾಂತಂಜ್ಞೇಯಂಲವಣಪಂಚಕಂ ॥ ೨೨ ॥
ಮಧುರಂಸೃಷ್ಟವಿಣ್ಮೂತ್ರಂಸ್ನಿಗ್ಧಂಸೂಕ್ಷ್ಮಂಬಲಾಪಹಂ ॥
ವೀರ್ಯೋಷ್ಣಂದೀಪನಂತೀಕ್ಷ್ಣಂಕಫಪಿತ್ತವಿವರ್ಧನಂ · ॥ ೨೩ ॥

ಸೈಂಧವಲವಣ, ಸೌವರ್ಚಲವಣ, (ಗಾಜುಪ್ಪು ಎಂದು ವ್ಯವಹಾರವಿದೆ) ಬಿಡಲವಣ, ಸಮುದ್ರಲವಣ, (ನಮ್ಮ ಉಪಯೋಗದಲ್ಲಿರುವ ಉಪ್ಪು), ಗಡಂ ಎಂದರೆ ರೋಮಕವೆಂಬ ಉಪ್ಪು, (ರೋಮದೇಶದ ಲವಣ) ಚೌಳುಪ್ಪೆಂದು ಕೆಲವರು ಹೇಳುತ್ತಾರೆ. ಇವೈದಕ್ಕೂ ಪಂಚಲವಣವೆಂಬದಾಗಿ ಹೆಸರು; ಇವುಗಳ

ಲ್ಲೆಲ್ಲಾ ಸೈಂಧವಲವಣವೇ ಮುಖ್ಯ; ಯಾವ ಲವಣ ಸಿಕ್ಕದಿದ್ದರೂ ಅದಕ್ಕೆ ಬದಲಾಗಿ ಸೈಂಧವಲವಣವನ್ನು ಪ್ರಯೋಗಿಸಬೇಕು. ಇವು ಐದರಲ್ಲಿಯೂ ಮುಖ್ಯವಾಗಿ ಲವಣ ರಸವೇ ತೋರಿಬಂದರೂ ಅನುರಸವು ಮಧುರ ರಸವಾಗಿರುತ್ತದೆ. ಮಲಮೂತ್ರಗಳನ್ನು ಚೆನ್ನಾಗಿ ಹೊರಪಡಿಸಿ ಬಿಡುತ್ತದೆ. ಸ್ನಿಗ್ಧ ಗುಣವುಳ್ಳದ್ದು, ಸೂಕ್ಷ್ಮವಾಗಿ ದೇಹದಲ್ಲೆಲ್ಲಾ ಜಾಗ್ರತೆಯಾಗಿಯೇ ವ್ಯಾಪಿಸುತ್ತದೆ. ಬಿಡದೆ ಉಪಯೋಗಿಸುತ್ತ ಬಂದಲ್ಲಿ ದೇಹಬಲವನ್ನು ಕಡಮೆಮಾಡುತ್ತದೆ. ಉಷ್ಣವೀರ್ಯ, ಜಠರಾಗ್ನಿಗೆ ಚೆನ್ನಾಗಿ ಪಾಟವ ಕೊಡುತ್ತದೆ, ಸ್ವಭಾವತಃ ಉಷ್ಣಕರವಾದದ್ದು; ಕಫ ಮತ್ತು ಪಿತ್ತಗಳನ್ನುಹೆಚ್ಚಿಸುತ್ತದೆ.

ಸ್ವರ್ಜಿಕಾಯಾವಶೂಕಶ್ಚಕ್ಷಾರಯುಗ್ಮಮುದಾಹೃತಂ ॥
ಜ್ಞೇಯಸ್ತಾವಹ್ನಿಸಮೌಕ್ಷಾರೌಸ್ವರ್ಜಿಕಾಯಾವಶೂಕಜಾ ॥ ೨೪ ॥
ಕ್ಷಾರಾಶ್ಚಾನ್ಯೇಪಿಗುಲ್ಮಾರ್ಶೋಗ್ರಹಣೀರುಕ್ಪ್ರದಸ್ಸರಾಃ ॥
ಪಾಚನಾಃಕ್ರಿಮಿಪುಂಸ್ತ್ವಘ್ನಾಃಶರ್ಕರಾಶ್ಮರಿನಾಶನಾಃ ॥ ೨೫ ॥

ಸ್ವರ್ಜಕ್ಷಾರ, ಯವಕ್ಷಾರಗಳೆಂಬದಾಗಿ ಎರಡು ಬಗೆಯ ಕ್ಷಾರಗಳು ವೈದ್ಯರಿಗೆ ಮುಖ್ಯವಾದವುಗಳು. ಇವೆರಡು ಕ್ಷಾರಗಳು ಬೆಂಕಿಗೆ ಸಮಾನವಾದವುಗಳು ಎಂದರೆ ಅಷ್ಟೊಂದು ತೀಕ್ಷ್ಣವಾದವುಗಳೆಂದು ತಾತ್ಪರ್ಯ. ಇವುಗಳಲ್ಲದೆ ಟಂಕಣ, ಅಪಾಮಾರ್ಗ ಮೊದಲಾದ ಕ್ಷಾರಗಳೂ ಇವೆ. ಈ ಕ್ಷಾರಗಳು ಗುಲ್ಮರೋಗ, ಮೂಲವ್ಯಾಧಿ, ಗ್ರಹಣೀರೋಗವೆಂಬ ಭೇದಿ ಇವುಗಳನ್ನು ಕಡಮೆಮಾಡುತ್ತವೆ, ಪಚನ ಶಕ್ತಿಯನ್ನು ವೃದ್ಧಿಮಾಡುತ್ತವೆ, ಕ್ರಿಮಿಗಳನ್ನು ನಾಶಮಾಡುತ್ತವೆ. ಪುಂಸ್ತ್ವಘ್ನವೆಂದರೆ ಜನನೇಂದ್ರಿಯದ ಶಕ್ತಿಯನ್ನು ಕಡಮೆಮಾಡುತ್ತವೆ, ಶರ್ಕರ, ಅಶ್ಮರಿಗಳೆಂಬ ಮೂತ್ರ ಕಲ್ಲುಗಳನ್ನು ಕರಗಿಸುತ್ತವೆ.

ತ್ರಿಫಲಾರಜನೀಯುಗ್ಮಂಕಂಟಕಾರಿಯುಗಂಶಠೀ ॥
ತ್ರಿಕಟುಗ್ರಂಥಿಕಂಮೂರ್ವಾಗುಡೂಚೀದನ್ವಯಾಸಕಃ ॥ ೨೬ ॥
ಕಟುಕಾಪರ್ಪಟೋಮುಸ್ತಂತ್ರಾಯಮಾಣಾಚವಾಲಕಂ ॥
ನಿಂಬಃಪುಷ್ಕರಮೂಲಂಚಮಧುಯಷ್ಟೀಚವತ್ಸಕಂ ॥ ೨೭ ॥
ಯವಾನೀಂದ್ರಯವೋಭಾರ್ಙೀಶಿಗ್ರುಬೀಜಂಸುರಾಷ್ಟ್ರಕಂ ॥
ವಚಾತ್ವಕ್ಪದ್ಮಕೋಶೀರಂಚಂದನಾತಿವಿಷಾಬಲಾಃ ॥ ೨೮ ॥
ಶಾಲಿಪರ್ಣೀಪೃಷ್ಣಿಪರ್ಣೀವಿಡಂಗಂತಗರಂತಥಾ ॥
ಚಿತ್ರಕೋದೇವದಾರುಶ್ಚಚವ್ಯಂಪತ್ರಂಪಟೋಲಜಂ ॥ ೨೯ ॥
ಜೀವಕರ್ಷಭಕೌಚೈವಲವಂಗಂವಂಶರೋಚನಾ ॥
ಪುಂಡರೀಕಂಚಕಾಕೋಲೀಪತ್ರಕಂಜಾತಿಪತ್ರಕಂ ॥ ೩೦ ॥

ತಾಲೀಸಪತ್ರಂಚತಥಾಸಮಭಾಗಾನಿಚೂರ್ಣಯೇತ್ ||
ಸರ್ವಚೂರ್ಣಸ್ಯಚಾರ್ಧಾಂಶಂಕೈರಾತಂನಿಕ್ಷಿಪೇತ್ಸುಧೀಃ || ೩೧ ||
ಏತತ್ಸುದರ್ಶನಂನಾಮಚೂರ್ಣಂದೋಷತ್ರಯಾಪಹಂ ||
ಜ್ವರಾಂಶ್ಚನಿಖಿಲಾನ್‌ಹನ್ಯಾನ್ನಾತ್ರಕಾರ್ಯಾವಿಚಾರಣಾ || ೩೨ ||
ಪೃಥಕ್‌ದ್ವಂದ್ವಾಗಂತುಜಾಂಶ್ಚಧಾತುಸ್ಥಾನ್ವಿಷಮಜ್ವರಾನ್ ||
ಸನ್ನಿಪಾತೋದ್ಭವಾಂಶ್ಚಾಪಿಮಾನಸಾನಪಿನಾಶಯೇತ್ || ೩೩ ||
ಶೀತಜ್ವರೈಕಾಹಿಕಾದೀನ್ಮೋಹಂತಂದ್ರಾಂಭ್ರಮಂತೃಷಾಂ ||
ಶ್ವಾಸಂಕಾಸಂಚಪಾಂಡುಂಚಹೃದ್ರೋಗಂಹಂತಿಕಾಮಲಾಂ ||೩೪||
ತ್ರಿಕಪೃಷ್ಟಕಟೀಜಾನುಪಾರ್ಶ್ವಶೂಲನಿವಾರಣಂ ||
ಶೀತಾಂಬುನಾಪಿಬೇದ್ಧೀಮಾನ್‌ಸರ್ವಜ್ವರನಿವೃತ್ತಯೇ || ೩೫ ||
ಸುದರ್ಶನಂಯಥಾಚಕ್ರಂದಾನವಾನಾಂವಿನಾಶನಂ ||
ತದ್ವಜ್ವರಾಣಾಂಸರ್ವೇಷಾಮಿದಂಚೂರ್ಣಂಪ್ರಣಾಶನಂ || ೩೬ ||

ಸುದರ್ಶನ ಚೂರ್ಣವನ್ನು ಹೇಳುತ್ತಾನೆ. ಅಳಲೆಕಾಯಿ, ತಾರೇಕಾಯಿ, ನೆಲ್ಲಿಯಕಾಯಿ, ಅರಿಸಿನ, ಮರದರಸಿನ, ಹೆಗ್ಗುಳ್ಳ, ಸಲಗುಳ್ಳಿ, ಕಚೋರ, ಶುಂಠಿ, ಹಿಪ್ಪಲಿ, ಮೆಣಸು, ಮೋಡಿ, ಕುರಟಿಗನಬೇರು, ಅಮೃತಬಳ್ಳಿ, ತುರಚೀಬೇರು, ಕಟುಕರೋಹಿಣಿ, ಪರ್ಪಾಟಕ, ಗೇಕಿನಗೆಡ್ಡೆ, ಗಜ್ಜುಗ, ಲಾಮಂಚದ ಬೇರು, ಬೇವಿನಚಕ್ಕೆಯ ವಳನಾರು, ಪುಷ್ಕರಮೂಲ, ಜ್ಯೇಷ್ಠಮಧು, ಕೊಡಸಿನಚಕ್ಕೆ, ಪ್ರೋವು, ಕೊಡಸದಬೀಜ, ಗಂಟುಭಾರಂಗಿ, ನುಗ್ಗೆಯಬೀಜ, ಪಟಿಕ, (ಸೌರಾಷ್ಟ್ರ ದೇಶದ ಮೃತ್ತಿಕೆ ಎಂದು ಕೆಲವರು) ಬಜೆ, ಲವಂಗಪತ್ರೆ, ಪದ್ಮಕಾಷ್ಠ, ಮುಡಿವಾಳ, ಚಂದನ, (ಬಿಳೀಗಂಧ) ಅತಿಬಜೆ, ಕಳ್ಳಂಗೆಡ್ಡೆ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ವಾಯುವಿಡಂಗ, ಗ್ರಂಥಿತಗರ, ಚಿತ್ರಮೂಲ, ದೇವದಾರಿಚಕ್ಕೆ, ಚವ್ಯವೆಂದರ ಕಾಡುಮೆಣಸಿನ ಬಳ್ಳಿ, ಕೈಪಡವಲ, ಜೀವಕ, ಋಷಭಕ, ಲವಂಗ, ಬಿದಿರುಪ್ಪು, ಕಮಲ, ಕಾಕೋಲಿ, ಪತ್ರಕವೆಂದರೆ ಪತ್ರಾಜವೆಂಬ ವಸ್ತು, ಜಾಯಿಪತ್ರೆ, ತಾಳೀ ಸಪತ್ರೆ, ಹಿಂದೆ ಹೇಳಿದ ಸಮಸ್ತ ಪದಾರ್ಥಗಳನ್ನೂ ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣಮಾಡಿ ವಸ್ತ್ರಗಾಳಿತಮಾಡಿ ಇರಿಸಿಕೊಳ್ಳಬೇಕು. ಈ ಚೂರ್ಣವನ್ನು ಇದರಷ್ಟೇ ಚಿರಾಯಿತದ ಚೂರ್ಣದೊಡನೆ ಸೇರಿಸಿದಲ್ಲಿ ಅಲ್ಲಿಗೆ ಸುದರ್ಶನಚೂರ್ಣವು ತಯಾರಾದಂತಾಯಿತು ಈ ಸುದರ್ಶನ ಚೂರ್ಣವು ಮುಖ್ಯವಾಗಿ ಸಮಸ್ತ ವಿಧವಾದ ಜ್ವರಗಳನ್ನೂ ಅಂದರೆ ಪ್ರತ್ಯೇಕವಾಗಿ ಒಂದೊಂದೇ ದೋಷಗಳು ಪ್ರಕುಪಿತವಾಗಿ ಹುಟ್ಟುವ ಜ್ವರ, ಎರಡೆರಡು ದೋಷಗಳು ಪ್ರಕುಪಿತವಾಗಿ ಹುಟ್ಟುವ ಜ್ವರ, ಸನ್ನಿಪಾತಜ್ವರ, ಆಗಂತುಜ್ವರ, ಧಾತ್ವಾಶ್ರಿತಜ್ವರ, ವಿಷಮಜ್ವರ, ಮನೋದೋಷದಿಂದ ಹುಟ್ಟುವ ಜ್ವರ, ಶೀತಜ್ವರ, ಏಕಾಹಿಕ, ದ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕಾದಿ ನಾನಾ ವಿಧಗಳಾದ ಜ್ವರಗಳು, ಅಜ್ಞಾನ, ತೂಕಡಿಕೆ, ಬುದ್ಧಿಭ್ರ

ಮಣಿ, ಬಾಯಾರಿಕೆ, ಕೆಮ್ಮು, ಉಬ್ಬಸ, ಪಾಂಡುರೋಗ, ಹೃದಯರೋಗ, ಕಾಮಾಲೆ, ಸೊಂಟಶೂಲೆ, ಪೃಷ್ಠಭಾಗದಲ್ಲಿ ಬರುವ ಶೂಲೆ, ತೊಡೆಶೂಲೆ, ಪಾರ್ಶ್ವ ಶೂಲೆ, ಇವುಗಳನ್ನೆಲ್ಲಾ ನಿವಾರಣವಾಡುತ್ತದೆ; ಇದನ್ನು ತಣ್ಣೀರಿನಲ್ಲಿ ಕುಡಿಯ ತಕ್ಕದ್ದು. ವಿಷ್ಣುವಿನ ಸುದರ್ಶನ ಚಕ್ರವು ಸಮಸ್ತ ಶತ್ರುಗಳನ್ನೂ ನಾಶವಾಡು ವಂತೆ ಈ ಚೂರ್ಣವು ಸಮಸ್ತ ರೋಗಗಳನ್ನು ವಿಚಾರವಿಲ್ಲದೆ ನಾಶಮಾಡು ವುದರಿಂದ ಇದಕ್ಕೆ ಸುದರ್ಶನ ಚೂರ್ಣವೆಂದು ಹೆಸರು ಕೊಡಲಾಗಿದೆ.

ಕಾಸಶ್ವಾಸಜ್ವರಹರೀಪಿಪ್ಪಲೀತ್ರಿಫಲಾಯುತಾ ||
ಚೂರ್ಣಿತಾಮಧುನಾಲೀಢಾಭೇದಿನೀಜಾಗ್ನಿಬೋಧಿನೀ || ೩೭ ||

ಪಿಪ್ಪಲೀಚೂರ್ಣ, ತ್ರಿಫಲಾಚೂರ್ಣದೊಂದಿಗೆ ಹಿಪ್ಪಲಿಯ ಚೂರ್ಣವನ್ನು ಸೇರಿಸಿ ಜೇನುತುಪ್ಪದಲ್ಲಿ ಕೊಡುತ್ತ ಬಂದರೆ ಕೆಮ್ಮು, ಉಬ್ಬಸ, ಜ್ವರ ಇವು ಗಳನ್ನು ಕಡಮೆವಾಡಿ ಮಲಪ್ರವೃತ್ತಿಯನ್ನು ಸರಾಗವಾಗಿ ವಾಡಿಸಿ ಜಠರಾಗ್ನಿ ಯನ್ನು ದೀಪ್ತವಾಗಿ ಮಾಡಿಸುತ್ತದೆ.

ಕಟ್ಫಲಂಮುಸ್ತಕಂತಿಕ್ತಾಶಠೀಶೃಂಗೀಚಪೌಷ್ಕರಂ ||
ಚೂರ್ಣಮೇಷಾಂಚಮಧುನಾಶೃಂಗಬೇರರಸೇನವಾ || ೩೮ ||
ಲೇಹ್ಯಂಜ್ವರಹರಂಕಂಠ್ಯಂಕಾಸಶ್ವಾಸಾರುಚೀರ್ಜಯೇತ್ ||
ವಾಯುಂಶೂಲಂತಥಾಛರ್ದಿಂಕ್ಷಯಂಚೈವವ್ಯಪೋಹತಿ || ೩೯ ||

ಕಟ್ಫಲಾದಿಚೂರ್ಣ—ಕಾಯಿಫಲಚಕ್ಕೆ, ಭದ್ರಮುಸ್ತೆ, ಕಟುಕರೋಹಿಣಿ, ಕಚೋರ, ಕರ್ಕಟಕಶೃಂಗಿ, ಪುಷ್ಕರಮೂಲ, ಇವುಗಳ ಚೂರ್ಣವನ್ನು ವಾಡಿ ಜೇನುತುಪ್ಪದೊಡನಾಗಲಿ ಹಸೀ ಶುಂಠಿಯ ರಸದೊಡನೆಯಾಗಲಿ ಕಲಸಿ ನೆಕ್ಕವು ದರಿಂದ ಜ್ವರವು ಗುಣವಾಗುತ್ತದೆ, ಗಂಟಲು ರೋಗಗಳಿಗೆಲ್ಲಾ ಹಿತವಾದದ್ದು. ಕೆಮ್ಮು, ಉಬ್ಬಸ, ಅರುಚಿ, ವಾಯುವಿನಿಂದ ಹುಟ್ಟಿದ ಹೊಟ್ಟೆಶೂಲೆ, ವಾಂತಿ, ಕ್ಷಯರೋಗ ಇವುಗಳನ್ನು ಕಡಮೆವಾಡುತ್ತದೆ.

ಕಟ್ಫಲಂಪೌಷ್ಕರಂಶೃಂಗೀಮುಸ್ತಾತ್ರಿಕಟುಕಂಶಠೀ ||
ಸಮಸ್ತಾನ್ಯೇಕಶೋವಾಪಿಸೂಕ್ಷ್ಮಚೂರ್ಣಾನಿಕಾರಯೇತ್ ||೪೦||
ಆದ್ರಕಸ್ವರಸಕ್ಷೌದ್ರೈರ್ಲಿಹ್ಯಾತ್ಕಫವಿನಾಶನಂ ||
ಶೂಲಾನಿಲಾರುಚಿಚ್ಛರ್ದಿಕಾಸಶ್ವಾಸಕ್ಷಯಾಪಹಂ || ೪೧ ||
ಕಟ್ಫಲಂಪೌಷ್ಕರಂಕೃಷ್ಣಾಶೃಂಗೀಚಮಧುನಾಸಹ ||
ಶ್ವಾಸಕಾಸಜ್ವರಹರಃಶ್ರೇಷ್ಠೋ ಲೇಹಃಕಫಾಂತಕಃ || ೪೨ ||

ಬೃಹತ್‌ಕಟ್ಫಲಾದಿಚೂರ್ಣ—ಕಾಯಿಫಲಚಕ್ಕೆ, ಪುಷ್ಕರಮೂಲ, ಕರ್ಕಾಟಕಶೃಂಗಿ, ಭದ್ರಮುಸ್ತೆ, ತ್ರಿಕಟು (ಶುಂಠಿ, ಹಿಪ್ಪಲಿ, ಮೆಣಸು), ಕಚೋರ, ಇವುಗಳೆಲ್ಲವನ್ನೂ ಕೂಡಿಸಿಯಾಗಲಿ ಅಥವಾ ಒಂದೊಂದನ್ನೇ ಆಗಲಿ ಸಣ್ಣನಾಗಿ ಪುಡಿಮಾಡಿ ಕೂಡಿಸಿ ಹಸೀಶುಂಠಿಯ ರಸ, ಜೇನುತುಪ್ಪ ಇವುಗಳೊಡನೆ ಕಲಸಿ ನೆಕ್ಕಿದಲ್ಲಿ ಕಫವು ನಾಶವಾಗುವುದಲ್ಲದೆ ಶೂಲಗಳು, ವಾತವಿಕಾರಗಳು, ಅರುಚಿ, ವಮನ, ಉಬ್ಬಸ, ಕ್ಷಯರೋಗ ಇವುಗಳೆಲ್ಲಾ ಗುಣವಾಗುತ್ತವೆ. ಕಾಯಿಫಲ ಚಕ್ಕೆ, ಪುಷ್ಕರಮೂಲ, ಹಿಪ್ಪಲಿ, ಕರ್ಕಾಟಕಶೃಂಗಿ, ಇವುಗಳ ಚೂರ್ಣವನ್ನು ಜೇನಿನೊಡನೆ ನೆಕ್ಕಿದರೆ ಶ್ವಾಸ, ಕೆಮ್ಮು, ಜ್ವರ ಇವುಗಳನ್ನು ಕಡಮೆಮಾಡಿ ಕಫ ವನ್ನಡಗಿಸುತ್ತದೆ.

**ಶೃಂಗೀಂಪ್ರತಿವಿಷಾಂಕೃಷ್ಣಾಂಚೂರ್ಣಿತಾಂಮಧುನಾಲಿಹೇತ್ ॥**
**ಶಿಶೋಃಕಾಸಜ್ವರಚ್ಛರ್ದಿಶಾಂತ್ಯೈನಾಕೇವಲಾಂವಿಷಾಂ ॥ ೪೩ ॥**

ಶೃಂಗ್ಯಾದಿಚೂರ್ಣ—ಕರ್ಕಾಟಕಶೃಂಗಿ, ಅತಿಬಜೆ, ಹಿಪ್ಪಲಿ, ಇವು ಮೂರ ನ್ನೂ ಸಮಪರಿಮಾಣವಾಗಿ ಕೂಡಿಸಿ ಚೂರ್ಣಮಾಡಿ ಮಕ್ಕಳಿಗೆ ಜೇನುತುಪ್ಪ ದಲ್ಲಿ ನೆಕ್ಕಿಸಿದರೆ ಜ್ವರ, ವಮನ, ಕೆಮ್ಮು ಇವುಗಳೆಲ್ಲಾ ಗುಣವಾಗುತ್ತವೆ. ಅತಿ ಬಜೆಯೊಂದನ್ನೇ ಚೂರ್ಣಿಸಿ ನೆಕ್ಕಿಸಿದರೂ ಮೇಲೆ ಕಂಡ ರೋಗಗಳು ಶಾಂತ ವಾಗುತ್ತವೆ.

**ಯವಕ್ಷಾರವಿಷಾಶೃಂಗೀಮಾಗಧೀಪೌಷ್ಕರೋದ್ಭವಂ ॥**
**ಚೂರ್ಣಂಕ್ಷೌದ್ರಯುತಂಲೀಢಂಪಂಚಕಾಸಾನ್‌ಜಯೇಚ್ಛಿಶೋಃ॥**

ಯವಕ್ಷಾರ, ಅತಿಬಜೆ, ಕರ್ಕಾಟಕಶೃಂಗಿ, ಹಿಪ್ಪಲಿ, ಪುಷ್ಕರಮೂಲ ಇವು ಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣಮಾಡಿ ಜೇನುತುಪ್ಪದಲ್ಲಿ ನೆಕ್ಕಿಸು ವುದರಿಂದ ಮಕ್ಕಳ ಐದು ವಿಧವಾದ ಕೆಮ್ಮನ್ನೂ ಗುಣಪಡಿಸಬಹುದು.

**ಶುಂಠೀಪ್ರತಿವಿಷಾಹಿಂಗುಮುಸ್ತಾಕುಟಜಚಿತ್ರಕೈಃ ॥**
**ಚೂರ್ಣಮುಷ್ಣಾಂಬುನಾಪೀತಮಾಮಾತೀಸಾರನಾಶನಂ ॥ ೪೫ ॥**

ಶುಂಠಿ, ಅತಿಬಜೆ, ಇಂಗು, ಗೇಕಿನಗೆಡ್ಡೆ, ಕೊಡಸದಚಕ್ಕೆ, ಚಿತ್ರಮೂಲದ ಬೇರು, ಇವುಗಳನ್ನು ಸಮಭಾಗ ಕೂಡಿಸಿ ಚೂರ್ಣಮಾಡಿ ಬಿಸಿನೀರಿನಲ್ಲಿ ಕುಡಿಸಿ ದರೆ ಆಮಾವಸ್ಥೆಯಲ್ಲಿರುವ ಅತಿಸಾರ ರೋಗವು ಗುಣಹೊಂದುತ್ತದೆ.

**ಹರೀತಕೀಪ್ರತಿವಿಷಾಸಿಂಧುಸೌವರ್ಚಲಂವಚಾ ॥**
**ಹಿಂಗುಚೇತಿಕೃತಂಚೂರ್ಣಂಪಿಬೇದುಷ್ಣೇನವಾರಿಣಾ ॥ ೪೬ ॥**
**ಆಮಾತಿಸಾರಶಮನಂಗ್ರಾಹ್ಯಗ್ನಿಪ್ರಬೋಧನಂ ॥**

ಅಳಲೆಯ ಕಾಯಿಸಿಪ್ಪೆ, ಅತಿಬಜೆ, ಸೈಂಧವಲವಣ, ಸೌವರ್ಚಲವಣ, ಒಡೆ ಹಿಂಗು ಇವುಗಳನ್ನು ಸಮಭಾಗ ಸೇರಿಸಿ ಚೂರ್ಣಮಾಡಿ ಬಿಸಿನೀರಿನೊಡನೆ ಕುಡಿದರೆ ಆಮಾವಸ್ಥೆಯಲ್ಲಿರುವ ಅತಿಸಾರರೋಗವನ್ನು ಶಮನಮಾಡಿ ಜಠರಾಗ್ನಿಯನ್ನು ಸ್ಫುಟಗೊಳಿಸಿ ಮಲಪ್ರವೃತ್ತಿಯನ್ನು ಬಂಧಿಸುತ್ತದೆ.

ಮುಸ್ತಮಿಂದ್ರಯವಂಬಿಲ್ವಂಲೋಧ್ರಂಮೋಚರಸಂತಥಾ ॥ ೪೭ ॥
ಧಾತಕೀಂಚೂರ್ಣಯೇತ್ತ್ರಕ್ರಗುಡಾಭ್ಯಾಂಪಾಯಯೇತ್ಸುಧೀಃ ॥
ಸರ್ವಾತೀಸಾರಶಮನಂನಿರುಣದ್ಧಿಪ್ರವಾಹಿಕಾಂ ॥ ೪೮ ॥
ಲಘುಗಂಗಾಧರಂಚೂರ್ಣಂನಾಮಸಂಗ್ರಾಹಕಂಪರಂ ॥

ಲಘುಗಂಗಾಧರಚೂರ್ಣ—ಗೇಕಿನಗೆಡ್ಡೆ, ಕೊಡಸದಬೀಜ, ಬಿಲ್ವದಚಕ್ಕೆ, ಲೋಧ್ರದಚಕ್ಕೆ, ಬೂರಗದಮೇಣ, ಧಾತ್ರೀಕುಸುಮ ಇವುಗಳನ್ನು ಸಮಭಾಗವಾಗಿ ಕೂಡಿಸಿ ಚೂರ್ಣಮಾಡಿ ಮಜ್ಜಿಗೆಯನ್ನೂ ಬೆಲ್ಲವನ್ನೂ ಅನುಪಾನವಾಗಿ ಮಾಡಿ ಈ ಚೂರ್ಣವನ್ನು ಕೊಡುವುದರಿಂದ ಸಮಸ್ತ ವಿಧವಾದ ಅತಿಸಾರವನ್ನೂ ಪ್ರವಾಹಿಕ ಎಂಬ ಭೇದಿಯನ್ನೂ ನಿಲ್ಲಿಸಬಹುದು. ಈ ಚೂರ್ಣವು ಉತ್ತಮವಾದ ಸಂಗ್ರಾಹಿ ಅಂದರೆ ಭೇದಿಯನ್ನು ನಿಲ್ಲಿಸುವ ಔಷಧ.

ಮುಸ್ತಾರಲುಕಶುಂಠೀಭಿರ್ಧಾತಕೀಲೋಧ್ರವಾಲಕೈಃ ॥ ೪೯ ॥
ಬಿಲ್ವಮೋಚರಸಾಭ್ಯಾಂಚಪಾಠೇಂದ್ರಯವವತ್ಸಕೈಃ ॥
ಆಮ್ರಬೀಜಂಪ್ರತಿವಿಷಾಲಜ್ಜಾಲುರಿತಿಚೂರ್ಣಿತಂ ॥ ೫೦ ॥
ಕ್ಷೌದ್ರತಂಡುಲಪಾನೀಯೈಃಪೀತ್ವೈರ್ಯಾತಿಪ್ರವಾಹಿಕಾ ॥
ಸರ್ವಾತಿಸಾರಗ್ರಹಣೀಪ್ರಶಮಂಯಾತಿವೇಗತಃ ॥ ೫೧ ॥
ವೃದ್ಧಗಂಗಾಧರಂಚೂರ್ಣಂಸರಿದ್ವೇಗಸ್ಯರೋಧಕಂ ॥

ವೃದ್ಧಗಂಗಾಧರಚೂರ್ಣ—ಗೇಕಿನಗೆಡ್ಡೆ, ಅರಲು ಎಂದರೆ ದೊಡ್ಡ ಮರದ ಚಕ್ಕೆ, ಶುಂಠಿ, ಧಾತಕೀಕುಸುಮ, ಲೋಧ್ರದಚಕ್ಕೆ, ಲಾಮಂಚ, ಬಿಲ್ವದಚಕ್ಕೆ, ಬೂರಗದಮೇಣ, ಅಗಳುಸುಂಟಿ, ಕೊಡಸದಚಕ್ಕೆ, ಕೊಡಸದಬೀಜ, ಆಮ್ರಬೀಜವೆಂದರೆ ಮಾವಿನ ಪಪ್ಪು, ಅತಿಬಜೆ, ಮುಟ್ಟಿದರೆ ಮುನಿಯ (ನಾಚಿಕೆಯ ಗಿಡ) ಇವುಗಳನ್ನು ಸಮಪರಿಮಾಣದಲ್ಲಿ ಬೆರಸಿ ಚೂರ್ಣಮಾಡಿ ವಸ್ತ್ರಗಾಳಿತಮಾಡಿ ಜೇನುತುಪ್ಪದೊಡನೆಯಾಗಲಿ, ಅಕ್ಕಿಯನ್ನು ತೊಳೆದ ನೀರಿನೊಡನೆಯಾಗಲಿ ಸೇವಿಸುವುದರಿಂದ ಪ್ರವಾಹದಂತೆ ಹೋಗುತ್ತಿರುವ ಭೇದಿಯೂ ನಿಲ್ಲುವುದು. ಸಮಸ್ತ ವಿಧವಾದ ಅತಿಸಾರ, ಗ್ರಹಣಿ ಇವುಗಳೆಲ್ಲವೂ ಇದರ ಪ್ರಯೋಗದಿಂದ ಶಾಂತಿಯನ್ನು ಹೊಂದುತ್ತವೆ. ನದೀಪ್ರವಾಹದಂತೆ ವೇಗವುಳ್ಳ ಅತಿಸಾರವನ್ನು ಕೂಡ ನಿಲ್ಲಿಸುತ್ತದೆ.

ಅಜಮೋದಾಮೋಚರಸಂಶೃಂಗಬೇರಂಸಧಾತಕೀಕುಸುಮಂ ೫೨
ಗೋದಧಿಮಥಿತಯುಕ್ತಂಗಂಗಾಮಪಿವಾಹಿನೀಂರುಂಧ್ಯಾತ್ ॥

ಅಜಮೋದಾದಿಚೂರ್ಣ—ಓಮಿನಕಾಳು, ಬೂರಗದಬೇಣ, ಶುಂಠಿ, ಧಾತಕೀಕುಸುಮ ಇವುಗಳನ್ನು ಸಮಭಾಗ ಕೂಡಿಸಿ ಚೂರ್ಣವಾಡಿ ಹಸುವಿನ ಮಜ್ಜಿಗೆಯೊಡನೆ ಕುಡಿಸಿದರೆ ಗಂಗಾಪ್ರವಾಹದಂತೆ ತಡೆಯಿಲ್ಲದೆ ಹೋಗುತ್ತಿರುವ ಭೇದಿಯನ್ನಾದರೂ ನಿಲ್ಲಿಸುತ್ತದೆ.

ತಕ್ರೇಣಯಃಪಿಬೇನ್ನಿತ್ಯಂಚೂರ್ಣಂಮರಿಚಸಂಭವಂ ॥ ೫೩ ॥
ಚಿತ್ರಸೌವರ್ಚಲೋಪೇತಂಗ್ರಹಣೀತಸ್ಯನಶ್ಯತಿ ॥
ಉದರಪ್ಲೀಹಮಂದಾಗ್ನಿಗುಲ್ಮಾರ್ಶೋನಾಶನಂಭವೇತ್ ॥ ೫೪ ॥

ಮರಿಚಾದಿಚೂರ್ಣ—ಮೆಣಸಿನಕಾಳು, ಚಿತ್ರಮೂಲ, ಸೌವರ್ಚಲವಣ, ಇವುಗಳನ್ನು ಸಮಪರಿಮಾಣದಲ್ಲಿ ಕೂಡಿಸಿ ಚೂರ್ಣಮಾಡಿ ಮಜ್ಜಿಗೆಯೊಡನೆ ಕೂಡಿಸಿ ಸೇವನೆಮಾಡಿದಲ್ಲಿ ಗ್ರಹಣೀರೋಗ, ಉದರ, ಪ್ಲೀಹಾಭಿವೃದ್ಧಿ, ಅಗ್ನಿಮಾಂದ್ಯ, ಗುಲ್ಮ, ಮೂಲವ್ಯಾಧಿ, ಇವುಗಳು ನಿವಾರಣೆ ಹೊಂದುತ್ತವೆ.

ಅಷ್ಟೌಭಾಗಾಃಕಪಿತ್ಥಸ್ಯಷಡ್ಭಾಗಾಶರ್ಕರಾಮತಾ ॥
ದಾಡಿಮಂತಿಂತಿಡೀಕಂಚಶ್ರೀಫಲಂಧಾತಕೀತಥಾ ॥ ೫೫ ॥
ಅಜಮೋದಾಪಿಪ್ಪಲೀಚಪ್ರತ್ಯೇಕಂಸ್ಯುಸ್ತ್ರಿಭಾಗಿಕಾಃ ॥
ಮರಿಚಂಜೀರಕಂಧಾನ್ಯಂಗ್ರಂಥಿಕಂವಾಲಕಂತಥಾ ॥ ೫೬ ॥
ಸೌವರ್ಚಲಂಯವಾನೀಚಚತುರ್ಜಾತಂಸಚಿತ್ರಕಂ ॥
ನಾಗರಂಚೈಕಭಾಗಾಸ್ಯುಃ ಪ್ರತ್ಯೇಕಂಸೂಕ್ಷ್ಮಚೂರ್ಣಿತಂ ॥ ೫೭ ॥
ಕಪಿತ್ಥಾಷ್ಟಕಸಂಜ್ಞಂಸ್ಯಾಚ್ಚೂರ್ಣಮೇತದ್ಗಲಾಮಯಾನ್ ॥
ಅತಿಸಾರಂಕ್ಷಯಂಗುಲ್ಮಂಗ್ರಹಣೀಂಚವ್ಯಪೋಹತಿ ॥ ೫೮ ॥

ಕಪಿತ್ಥಾಷ್ಟಕಚೂರ್ಣ, ಎಂಟು ಭಾಗ ಬೇಲದಹಣ್ಣು, ಆರು ಭಾಗ ಸಕ್ಕರೆ, ಹುಳಿದಾಳಿಂಬರ ಶಿಪ್ಪೆ, ಹುಣಸೇಹಣ್ಣು, ಬಿಲ್ವದಹಣ್ಣು, ಧಾತಕೀಕುಸುಮ, ಓಮಿನಕಾಳು, ಹಿಪ್ಪಲಿ, ಇವು ಪ್ರತ್ಯೇಕ ಮೂರು ಮೂರು ಭಾಗ, ಮೆಣಸು, ಜೀರಿಗೆ, ಕೊತ್ತುಂಬರಿಬೀಜ, ಗ್ರಂಥಿತಗರ, ಲಾಮಂಚ, ಸೌವರ್ಚಲವಣ, ಕುರಾಸಾನಿಓಮ, ಚತುರ್ಜಾತ (ಯಾಲಕ್ಕಿ, ಲವಂಗಚಕ್ಕೆ, ಪತ್ರೆ, ನಾಗಕೇಸರಿ), ಚಿತ್ರಮೂಲ, ಶುಂಠಿ, ಇವುಗಳು ಪ್ರತ್ಯೇಕ ಒಂದೊಂದು ಭಾಗ, ಈ ರೀತಿ ಪ್ರತ್ಯೇಕವಾಗಿ ಚೂರ್ಣಮಾಡಿ ಸೇರಿಸಿ ತೆಗದುಕೊಳ್ಳೋಣದರಿಂದ ಕಂಠ

ರೋಗಗಳು, ಅತಿಸಾರ, ಕ್ಷಯ, ಗುಲ್ಮ, ಗ್ರಹಣೀ (ಅತಿಸಾರಭೇದ) ಇವುಗಳನ್ನೆಲ್ಲಾ ನಿವಾರಣೆಮಾಡುತ್ತದೆ.

ದಾಡಿಮೀದ್ವಿಪಲಾಗ್ರಾಹ್ಯಾಖಂಡಾದ್ದಶಪಲಾನಿಚ ॥
ತ್ರಿಗಂಧಸ್ಯಪಲಂಚೈಕಂತ್ರಿಕಟುಸ್ಯಾತ್ಪಲತ್ರಯಂ ॥ ೫೯ ॥
ಏತದೇಕೀಕೃತಂಸರ್ವಂಚೂರ್ಣಂಸ್ಯಾದ್ದಾಡಿಮಾಷ್ಟಕಂ ॥
ರುಚಿಕೃದ್ದೀಪನಂಕಂಠ್ಯಂಗ್ರಾಹಿಕಾಸಜ್ವರಾಪಹಂ ॥ ೬೦ ॥

ದಾಡಿಮಾಷ್ಟಕಚೂರ್ಣ—ಹುಳಿದಾಳಿಂಬರೆಯ ಸಿಪ್ಪೆ ಎರಡುಪಲ, ಕಲ್ಲುಸಕ್ಕರೆ ಹತ್ತು ಪಲ, ತ್ರಿಗಂಧ (ಯಾಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ) ಒಂದು ಪಲ, ಶುಂಠಿ, ಹಿಪ್ಪಲಿ, ಮೆಣಸು, ಪ್ರತ್ಯೇಕ ಒಂದೊಂದು ಪಲ, ಇವುಗಳನ್ನೆಲ್ಲಾ ಕೂಡಿಸಿ ಚೂರ್ಣಿಸಿ ಸೇವಿಸುತ್ತ ಬಂದಲ್ಲಿ ಅನ್ನದಲ್ಲಿ ರುಚಿಯನ್ನು ಹೆಚ್ಚಿಸುತ್ತದೆ, ಜಠರಾಗ್ನಿಯನ್ನು ಹೆಚ್ಚಿಸುತ್ತದೆ, ಗಂಟಲಿಗೆ ಅತ್ಯಂತ ಹಿತಕರವಾದದ್ದು, ಮಲಪ್ರವೃತ್ತಿಯನ್ನು ತಡೆದು ಕೆಮ್ಮಿನೊಡನೆ ಕೂಡಿದ ಜ್ವರವನ್ನು ಸಹ ಕಡಮೆ ಮಾಡುತ್ತದೆ.

ದಾಡಿಮಸ್ಯಪಲಾನ್ಯಷ್ಟೌ ಶರ್ಕರಾಯಾಃಪಲಾಷ್ಟಕಂ ॥
ಪಿಪ್ಪಲೀಪಿಪ್ಪಲೀಮೂಲಂಯವಾನೀಮರಿಚಂತಥಾ ॥ ೬೧ ॥
ಧಾನ್ಯಕಂಜೀರಕಂಶುಂಠೀಪ್ರತ್ಯೇಕಂಪಲಸಮ್ಮಿತಂ ॥
ಕರ್ಷಮಾತ್ರಾತುಗಾಕ್ಷೀರೀತ್ವಕ್ಪತ್ರೈಲಾಶ್ಚಕೇಸರಂ ॥ ೬೨ ॥
ಪ್ರತ್ಯೇಕಂಕೋಲಮಾತ್ರಾಸ್ಸ್ಯುಸ್ತಚ್ಚೂರ್ಣಂದಾಡಿಮಾಷ್ಟಕಂ ॥
ಅತಿಸಾರಂಕ್ಷಯಂಗುಲ್ಮಂಗ್ರಹಣೀಂಚಗಲಗ್ರಹಂ ॥ ೬೩ ॥
ಮಂದಾಗ್ನಿಂಪೀನಸಂಕಾಸಂಚೂರ್ಣಮೇತದ್ವ್ಯಪೋಹತಿ ॥

ಬೃಹದ್ದಾಡಿಮಾಷ್ಟಕಚೂರ್ಣಂ—ಎಂಟು ಪಲ ದಾಳಿಂಬರೆಯ ಸಿಪ್ಪೆ, ಎಂಟು ಪಲ ಸಕ್ಕರೆ, ಹಿಪ್ಪಲಿ, ಮೋಡಿ, ಓಮ, ಮೆಣಸು, ಕೊತ್ತುಂಬರಿಬೀಜ, ಜೀರಿಗೆ, ಶುಂಠಿ, ಇವು ಪ್ರತಿಯೊಂದೂ ಒಂದೊಂದು ಪಲ, ಅರ್ಧ ಪಲ ಬಿದರುಪ್ಪು, ಲವಂಗಪತ್ರೆ, ಯಾಲಕ್ಕಿ, ಜಾಯಿಪತ್ರೆ, ನಾಗಕೇಸರಿ, ಇವು ಪ್ರತಿಯೊಂದೂ ಒಂದೊಂದು ತೊಲ ಎಂದರೆ ಒಂದು ರೂಪಾಯಿ ತೂಕ, ಇಷ್ಟನ್ನೂ ಸೇರಿಸಿ ಚೂರ್ಣಮಾಡಿ ಸೇವಿಸುತ್ತ ಬಂದಲ್ಲಿ ಅತಿಸಾರ, ಕ್ಷಯರೋಗ, ಗುಲ್ಮ, ಗ್ರಹಣಿ, ಗಂಟಲು ಹಿಡಿಯುವುದು, ಅಗ್ನಿಮಾಂದ್ಯ, ನೆಗಡಿ, ಕೆಮ್ಮು ಇವುಗಳು ಗುಣವಾಗುತ್ತವೆ.

ಪಿಪ್ಪಲೀಬೃಹತೀವ್ಯಾಘ್ರೀಯುವಕ್ಷಾರಕಲಿಂಗಕಾಃ ॥ ೬೪ ॥
ಚಿತ್ರಕಂಸಾರಿಬಾಪಾಠಾಶಠೀಲವಣಪಂಚಕಂ ॥
ತಚ್ಚೂರ್ಣಂಪಾಯಯೇದ್ದಧ್ನಾಸುರಯೋಷ್ಣಾಂಬುನಾಪಿವಾ ॥೬೫
ಮಾರುತಗ್ರಹಣೀದೋಷಶಮನಂಪರಮಂಹಿತಂ ॥

ಪಿಪ್ಪಲ್ಯಾದಿಚೂರ್ಣ—ಹಿಪ್ಪಲಿ, ಹೆಗ್ಗುಳ್ಳ, ನೆಲಗುಳ್ಳ, ಯವಕ್ಷಾರ, ಕಲಿಂಗಕವೆಂದರೆ ಕೊಡಸದಬೀಜ, ಚಿತ್ರಮೂಲ, ಸೊಗದೆಯಬೇರು, ಅಗಳುಶುಂಠಿ, ಕಚೋರ, ಐದು ಬಗೆಯ ಲವಣ (ಸೈಂಧವ, ಸೌವರ್ಚ, ಬಿಡ, ಸಮುದ್ರ, ಚವುಳುಪ್ಪು) ಇವುಗಳನ್ನು ಸಮಭಾಗವಾಗಿ ಸೇರಿಸಿ ಚೂರ್ಣಮಾಡಿ ಮೊಸರಿನೊಡನೆಯಾಗಲಿ, ಯಾವುದಾದರೂ ಮದ್ಯದೊಡನಾಗಲಿ, ಬಿಸಿನೀರಿನೊಡನಾಗಲಿ ಕುಡಿಸಿದಲ್ಲಿ ವಾತಪ್ರಕೋಪಜನ್ಯವಾದ ಗ್ರಹಣಿಯು ಶಮನಹೊಂದುತ್ತದೆ.

ಲವಂಗಂಶುದ್ಧಕರ್ಪೂರಮೇಲಾತ್ವಙ್ನಾಗಕೇಸರಂ ॥ ೬೬ ॥
ಜಾತೀಫಲಮುಶೀರಂಚನಾಗರಂಕೃಷ್ಣಜೀರಕಂ ॥
ಕೃಷ್ಣಾಗರುಸ್ತ್ವಗಾಕ್ಷೀರೀಮಾಂಸೀನಿಲೋತ್ಪಲಂಕಣಾ ॥ ೬೭ ॥
ಚಂದನಂತಗರಂವಾಲಂಕಂಕೋಲಂಚೇತಿಚೂರ್ಣಯೇತ್ ॥
ಸಮಭಾಗಾನಿಸರ್ವಾಣಿಸರ್ವೇಭ್ಯೋಧಾಸಿತಾಭವೇತ್ ॥ ೬೮ ॥
ಲವಂಗಾದ್ಯಮಿದಂಚೂರ್ಣಂರಾಜಾರ್ಹಂವಹ್ನಿದೀಪನಂ ॥
ರೋಚನಂತರ್ಪಣಂವೃಷ್ಯಂತ್ರಿದೋಷಘ್ನಂಬಲಪ್ರದಂ ॥ ೬೯ ॥
ಹೃದ್ರೋಗಂಕಂಠರೋಗಂಚಕಾಸಂಹಿಕ್ಕಾಂಚಪೀನಸಂ ॥
ಯಕ್ಷ್ಮಾಣಂತಮಕಂಶ್ವಾಸಮತೀಸಾರಮುರಃಕ್ಷತಂ ॥ ೭೦ ॥
ಪ್ರಮೇಹಾರುಚಿಗುಲ್ಮಾದೀನ್‌ಗ್ರಹಣೀಮಪಿನಾಶಯೇತ್ ॥

ಲವಂಗಾದಿಚೂರ್ಣ—ಲವಂಗ, ಶುದ್ಧವಾದ ಕರ್ಪೂರ, ಯಾಲಕ್ಕಿ, ಲವಂಗಚಕ್ಕೆ, ನಾಗಕೇಸರಿ, ಜಾಯಿಕಾಯಿ, ಲಾಮಂಚ, ಶುಂಠಿ, ಕಪ್ಪುಜೀರಿಗೆ, ಕೃಷ್ಣಾಗರು, ಬಿದರುಪ್ಪು, ಜಟಾಮಾಂಸಿ, ಕಮಲದ ಹುವ್ವು, ಜೀರಿಗೆ, ಶ್ರೀಗಂಧ, ಗ್ರಂಥಿತಗರ, ಮುಡಿವಾಳ, ಕಂಕೋಲ, ಇವುಗಳನ್ನೆಲ್ಲಾ ಸಮಪ್ರಮಾಣದಲ್ಲಿ ಚೂರ್ಣಮಾಡಿ ಚೂರ್ಣದ ಅರ್ಧದಷ್ಟು ಸಕ್ಕರೆಯನ್ನು ಬೆರಸಿ ಸೇವನೆಮಾಡತಕ್ಕದ್ದು. ಇದರಿಂದ ಶರೀರಗತಗಳಾದ ವ್ರಣಗಳು ಮಾಯುತ್ತವೆ, ದೇಹಧಾತುಗಳಿಗೆ ತೃಪ್ತಿಯನ್ನುಂಟುಮಾಡುತ್ತದೆ, ಕಾಮೋದ್ದೀಪಕವಾದದ್ದು, ತ್ರಿದೋಷ ಪ್ರಕೋಪವನ್ನೂ ಶಮನಮಾಡುತ್ತದೆ, ದೇಹಕ್ಕೆ ಬಲವನ್ನುಂಟುಮಾಡುತ್ತದೆ. ಹೃದಯರೋಗಗಳು, ಗಂಟಲಿನ ರೋಗ, ಕೆಮ್ಮು, ಬಿಕ್ಕಳಿಕೆ, ನೆಗಡಿ, ಕ್ಷಯರೋಗ, ತಮಕವೆಂಬ ಶ್ವಾಸರೋಗ, ಅತಿಸಾರ, ಎದೆನೋವು, ಮೇಹರೋಗ ಅರೋಚಕ, ಗುಲ್ಮ, ಗ್ರಹಣಿ ಎಂಬ ಭೇದಿ ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

ಸಕರ್ಪೂರಂಚಕಂಕೋಲಂಜಾತೀಫಲದಲಾಸಮಂ ||
ಲವಂಗನಾಗಮರಿಚಕೃಷ್ಣಾಶುಂಠೀವಿವರ್ಧಿತಂ || ೭೦ ||
ಚೂರ್ಣಂಸಿತಾಸಮಂಗ್ರಾಹ್ಯಂರೋಚನಂಕ್ಷಯಕಾಸನುತ್ ||
ವೈಸ್ವರ್ಯಶ್ವಾಸಗುಲ್ಮಾರ್ಶಃಕಂಠಾಮಯಭಯಾಪಹೃತ್|| ೭೨ ||

ಕರ್ಪೂರಾದಿಚೂರ್ಣ—ಕರ್ಪೂರ, ಕಂಕೋಲವೆಂಬ ಗಂದಿಗೆ ಜಿನಸು, ಜಾಯಿಕಾಯಿ, ಲವಂಗ, ನಾಗಕೇಸರಿ, ಮೆಣಸು, ಹಿಪ್ಪಲಿ, ಶುಂಠಿ, ಇವುಗಳನ್ನು ಸಮಭಾಗ ಸೇರಿಸಿ ಚೂರ್ಣಮಾಡಿ ಚೂರ್ಣದಷ್ಟು ಸಕ್ಕರೆ ಸೇರಿಸಿ ಸೇವಿಸಿದಲ್ಲಿ ಬಾಯಿಗೆ ರುಚಿಯನ್ನುಂಟುಮಾಡುತ್ತದೆ, ಕ್ಷಯರೋಗದ ಕೆಮ್ಮು, ಸ್ವರಭಂಗ, ಉಬ್ಬಸ, ಗುಲ್ಮ, ಮೂಲವ್ಯಾಧಿ, ಗಂಟಲಿನ ವ್ಯಾಧಿ ಇವುಗಳನ್ನೆಲ್ಲಾ ನಿವಾರಣ ಮಾಡುತ್ತದೆ.

ಲವಂಗಜಾತೀಫಲಪಿಪ್ಪಲೀನಾಂಭಾಗಾನ್ಪ್ರಕಲ್ಪ್ಯಾಕ್ಷಸಮಾನ ಮೂಷಾಂ ||
ಪಲಾರ್ಧಮೇಕಂಮರಿಚಸ್ಯದತ್ವಾಪಲಾನಿಚತ್ವಾರಿಮಹೌಷಧಸ್ಯ ||
ಸಿತಾಸಮಂಚೂರ್ಣಮಿದಂಪ್ರಸಹ್ಯರೋಗಾನಿಮಾನಾಶು ಬಲಾನ್ನಿಹಂತಿ ||
ಕಾಸಜ್ವರಾರೋಚಕಗುಲ್ಮಮೇಹಶ್ವಾಸಾಗ್ನಿಮಾಂದ್ಯಂಗ್ರಹಣೀ ವಿಕಾರಾನ್ || ೭೪ ||

ಲಘುಲವಂಗಾದಿಚೂರ್ಣ—ಲವಂಗ, ಜಾಯಿಕಾಯಿ, ಪಿಪ್ಪಲಿ, ಇವುಗಳು ಒಂದು ಕರ್ಷಪ್ರಮಾಣ ಅಂದರೆ ಕಾಲುಪಲ, ಮೆಣಸು ಅರ್ಧಪಲ, ಶುಂಠಿ ನಾಲ್ಕುಪಲ, ಇವಿಷ್ಟನ್ನೂ ಕೂಡಿಸಿ ಸೂಕ್ಷ್ಮವಾದ ಚೂರ್ಣವನ್ನು ಮಾಡಿ ಚೂರ್ಣದಷ್ಟು ಸಕ್ಕರೆಯನ್ನು ಸೇರಿಸಿ ಸೇವಿಸುತ್ತ ಬಂದರೆ ಕೆಮ್ಮು, ಜ್ವರ, ಅರುಚಿ, ಗುಲ್ಮ, ಮೇಹರೋಗ, ಶ್ವಾಸ, ಅಗ್ನಿಮಾಂದ್ಯ, ಗ್ರಹಣೀವಿಕಾರವೆಂದರೆ ಒಂದು ಬಗೆಯ ಭೇದಿ ಇವುಗಳನ್ನೆಲ್ಲಾ ಗುಣಮಾಡುತ್ತದೆ.

ಜಾತೀಫಲಲವಂಗೈಲಾಪತ್ರತ್ವಙ್ನಾಗಕೇಸರೈಃ || ೭೫ ||
ಕರ್ಪೂರಚಂದನತಿಲೈಸ್ತ್ವಕ್ಷೀರೀತಗರಾಮಲೈಃ ||
ತಾಲೀಸಪಿಪ್ಪಲೀಪಥ್ಯಾಸ್ಥೂಲಜೀರಕಚಿತ್ರಕೈಃ || ೭೬ ||
ಶುಂಠೀವಿಡಂಗಮರಿಚೈಃಸಮಭಾಗಾನಿಚೂರ್ಣಿತೈಃ ||
ಯಾವಂತ್ಯೇತಾನಿಸರ್ವಾಣಿಕುರ್ಯಾದ್ಭಂಗಾಂಚತಾವತೀಂ|| ೭೭ ||
ಸರ್ವಚೂರ್ಣಸಮಾದೇಯಾಶರ್ಕರಾಚಭಿಷಗ್ವರೈಃ ||
ಕರ್ಷಮಾತ್ರಂತತಃಖಾದೇನ್ಮಧುನಾಪ್ಲಾವಿತಂಸುಧೀಃ || ೭೮ ||

ಜಾತೀಫಲಾದಿಚೂರ್ಣ—ಜಾಯಿಕಾಯಿ, ಲವಂಗ, ಯಾಲಕ್ಕಿ, ಜಾಯಿಪತ್ರೆ, ಲವಂಗಚಕ್ಕೆ, ನಾಗಕೇಸರಿ, ಕರ್ಪೂರ, ಶ್ರೀಗಂಧ, ಯಳ್ಳು, ಬಿದಿರುಪ್ಪು, ಗ್ರಂಥಿತಗರ, ನೆಲ್ಲಿಕಾಯಿ, ತಾಳೀಸಪತ್ರೆ, ಹಿಪ್ಪಲಿ, ಆಳಲೆಕಾಯಿ, ಜೀರಿಗೆ, ಚಿತ್ರಮೂಲ, ಶುಂಠಿ, ವಾಯುವಿಡಂಗ, ಮೆಣಸು, ಇಷ್ಟು ದಿನಸುಗಳನ್ನೂ ಸಮಪ್ರಮಾಣ ಕೂಡಿಸಿ ಚೂರ್ಣಮಾಡಬೇಕು, ಇವುಗಳ ಚೂರ್ಣದಷ್ಟೇ ಭಂಗೀಸೊಪ್ಪಿನ ಚೂರ್ಣವನ್ನೂ ಕೂಡಿಸಬೇಕು, ಈ ಎಲ್ಲಾ ಕೂಡಿಸಿದರೆ ಎಷ್ಟಾಗುತ್ತದೆಯೋ ಅಷ್ಟು ಸಕ್ಕರೆಯನ್ನು ಸೇರಿಸಬೇಕು, ಈ ರೀತಿಯಾಗಿ ತಯಾರಿಸಿದ ಚೂರ್ಣ ಒಂದು ತೊಲದಷ್ಟನ್ನು ಒಂದು ಸಾರಿಗೆ ಜೇನುತುಪ್ಪದಲ್ಲಿ ಕಲಸಿ ಸೇವಿಸಬೇಕು. ಗ್ರಹಣಿ, ಕೆಮ್ಮು, ಉಬ್ಬಸ, ಅರುಚಿ, ಕ್ಷಯರೋಗ, ವಾತವಿಕಾರಗಳು, ಶ್ಲೇಷ್ಮವಿಕಾರಗಳು, ನೆಗಡಿ ಇವುಗಳೆಲ್ಲಾ ಶಮನಹೊಂದುತ್ತವೆ.

ಮರಿಚಂನಾಗಪುಷ್ಪಾಣಿತಾಲೀಸಂಲವಣಾನಿಚ ॥
ಪ್ರತ್ಯೇಕಮೇಕಭಾಗಾಸ್ಯುಃಪಿಪ್ಪಲೀಮೂಲಚಿತ್ರಕೈಃ ॥ ೭೯ ॥
ತ್ವಕ್ಕಣಾತಿಂತಿಡೀಕಂಚಜೀರಕಂಚದ್ವಿಭಾಗಿಕಂ ॥
ಧಾನ್ಯಾಮ್ಲವೇತಸೌವಿಶ್ವಂಭದ್ರೈಲಾಬದರಾಣಿಚ ॥ ೮೦ ॥
ಅಜಮೋದಾಜಲಧರಃಪ್ರತ್ಯೇಕಂಸ್ಯುಸ್ತ್ರಿಭಾಗಿಕಾಃ ॥
ಸರ್ವೌಷಧಿಚತುರ್ಥಾಂಶಂದಾಡಿಮಸ್ಯಫಲಂಭವೇತ್ ॥ ೮೧ ॥
ದ್ರವ್ಯೇಭ್ಯೋನಿಖಿಲೇಭ್ಯಶ್ಚಸಿತಾದೇಯಾರ್ಧಮಾತ್ರಯಾ ॥
ಮಹಾಖಾಂಡವಸಂಜ್ಞಂಸ್ಯಾಚ್ಚೂರ್ಣಮೇತತ್ಸುರೋಚನಂ ॥೮೨॥
ಅಗ್ನಿದೀಪ್ತಿಕರಂಹೃದ್ಯಂಕಾಸಾತೀಸಾರನಾಶನಂ ॥
ಹೃದ್ರೋಗಕಂಠಜಠರಮುಖರೋಗಪ್ರಣಾಶನಂ ॥ ೮೩ ॥
ವಿಷೂಚಿಕಾಂತಥಾಧ್ಮಾನಮರ್ಶೋಗುಲ್ಮಕ್ರಿಮೀನಪಿ ॥
ಛರ್ದಿಂಪಂಚವಿಧಾಂಶ್ವಾಸಂಚೂರ್ಣಮೇತದ್ವ್ಯಪೋಹತಿ ॥ ೮೪ ॥

ಮಹಾಖಾಂಡವಚೂರ್ಣ—ಮೆಣಸಿನಕಾಳು, ನಾಗಕೇಸರಿ, ತಾಲೀಸಪತ್ರೆ, ಸೈಂಧವಲವಣ, ಇವುಗಳು ಒಂದೊಂದು ತೂಕ, ಹಿಪ್ಪಲಿ, ಮೂಲ ಅಂದರೆ ಮೋಡಿ, ಚಿತ್ರಮೂಲ, ಲವಂಗಚಕ್ಕೆ, ಪಿಪ್ಪಲಿ. ವಾಟೆಹುಳಿ, ಜೀರಿಗೆ ಇವುಗಳು ಎರಡೆರಡು ತೂಕ, ಧನಿಯ, ಆಮ್ಲವೇರಸವೆಂದರೆ ಪುಲ್ಲಪ್ರಬ್ಬಲಿ ಎಂದು ತೆಲಗಿನಲ್ಲಿ ಕರಿಯುವ ವಸ್ತು, ಶುಂಠಿ, ಯಾಲಕ್ಕಿ, ಬೋರೇಹಣ್ಣು, ಮೋವಿನಕಾಳು, ಭದ್ರಮುಸ್ತೆ, ಇವುಗಳು ಪ್ರತಿಯೊಂದೂ ಮೂರು ತೂಕ, ಇವೆಲ್ಲವನ್ನೂ ಸೇರಿಸಿದಲ್ಲಿ ಎಷ್ಟಾಗುತ್ತದೋ ಅದರ ನಾಲ್ಕನೆಯ ಒಂದು ಭಾಗ ಹುಳಿದಾಳಿಂಬರೆಯ ಸಿಪ್ಪೆ, ಇವಿಷ್ಟನ್ನೂ ಚೂರ್ಣಮಾಡಿಕೊಂಡು ಇದರ ಅರ್ಧದಷ್ಟು ಸಕ್ಕರೆಯನ್ನು

ಸೇರಿಸಿ ಇರಿಸಿಕೊಳ್ಳತಕ್ಕದ್ದು, ಇದಕ್ಕೆ ಮಹಾಖಾಂಡವಚೂರ್ಣವೆಂಬದಾಗಿ ಹೆಸರು ಇದು ಜಠರಾಗ್ನಿಯನ್ನು ಸ್ಫುಟಪಡಿಸುತ್ತದೆ, ಕೆಮ್ಮು, ಅತಿಸಾರ, ಹೃದಯ ರೋಗಗಳು, ಕಂಠ ರೋಗಗಳು, ಮುಖ ರೋಗಗಳು, ವಿಸೂಚಿ (ಕಾಲರಾ), ಹೊಟ್ಟೆಯುಬ್ಬರ, ಮೂಲವ್ಯಾಧಿ, ಗುಲ್ಮ, ಕ್ರಿಮಿರೋಗ, ಐದು ವಿಧವಾದ ವಮನ, ಉಬ್ಬಸ ಇವುಗಳನ್ನೆಲ್ಲಾ ಗುಣಪಡಿಸುತ್ತದ.

ಚಿತ್ರಕಂತ್ರಿಫಲಾವ್ಯೋಷಂಜೀರಕಂಹಪುಷಾವಚಾ ॥
ಯವಾನೀಪಿಪ್ಪಲೀಮೂಲಂಶತಪುಷ್ಪಾಜಗಂಧಿಕಾ ॥ ೮೫ ॥
ಅಜಮೋದಾಶಠೀಧಾನ್ಯಂವಿಡಂಗಂಸ್ಥೂಲಜೀರಕಂ ॥
ಹೇಮಾಹ್ವಾಪೌಷ್ಕರಂಮೂಲಂಕ್ಷಾರೌಲವಣಪಂಚಕಂ ॥ ೮೬ ॥
ಕುಷ್ಠಂಚೇತಿಸಮಾಂಶಾನಿವಿಶಾಲಾಸದ್ವಿಭಾಗಿಕಾ ॥
ತ್ರಿವೃತ್ತ್ರಿಭಾಗಾವಿಜ್ಞೇಯಾದಂತ್ಯಾಭಾಗತ್ರಯಂಭವೇತ್ ॥ ೮೭ ॥
ಚತುರ್ಭಾಗಾಸ್ಯಾತ್ಸಾತಲಾಸ್ಯಾತ್ಸ್ವರ್ಣಕ್ಷೀರೀಚಚೂರ್ಣಯೇತ್ ॥
ಪಾಚನಸ್ನೇಹಪಾದ್ಯೈಶ್ಚಸ್ನಿಗ್ಧಕೋಷ್ಠಸ್ಯರೋಗಿಣಃ ॥ ೮೮ ॥
ದದ್ಯಾಚ್ಚೂರ್ಣಂವಿರೇಚನಂಸರ್ವರೋಗಪ್ರಣಾಶನಂ ॥
ಹೃದ್ರೋಗೇಪಾಂಡುರೋಗೇಚಕಾಸೇಶ್ವಾಸೇಭಗಂದರೇ ॥ ೮೯ ॥
ಮಂದಾಗ್ನೌಚಜ್ವರೇಕುಷ್ಠೇಗ್ರಹಣ್ಯಾಂಚಗಲಗ್ರಹೇ ॥
ದದ್ಯಾದ್ಯುಕ್ತ್ಯಾನುಪಾನೇನ ತಥಾ ಧಾನ್ಯರಸಾದಿಭಿಃ ॥ ೯೦ ॥
ಗುಲ್ಮೇಬದರನೀರೇಣವಿಡ್ಭೇದೇದಧಿಮಸ್ತುನಾ ॥
ಉಷ್ಣಾಂಬುಭಿರಜೀರ್ಣೇಚವೃಕ್ಷಾಮ್ಲೈಃಪರಿಕರ್ತಿನಾಂ ॥ ೯೧ ॥
ಉಷ್ಟ್ರೀದುಗ್ಧೇನಸೋದರೇಷುಗಾಢಾತಕ್ರೇಣವಾತಿನಾಂ ॥
ಪ್ರಸನ್ನಯಾವಾತರೋಗೇದಾಡಿಮಾಂಬುಭಿರರ್ಶಸಿ ॥ ೯೨ ॥
ದ್ವಿಟ್ಸಂಧೇಚವಿಷೇದದ್ಯಾದ್ಘೃತೇನವಿಷನಾಶನಂ ॥
ಚೂರ್ಣಂನಾರಾಯಣಂನಾಮದುಷ್ಟರೋಗಗಣಾಪಹಂ ॥ ೯೩ ॥

ನಾರಾಯಣಚೂರ್ಣ— ಚಿತ್ರಮೂಲದಬೇರಿನತೊಪ್ಪೆ, ತ್ರಿಫಲ (ಅಳಲೆಕಾಯಿ, ತಾರೇಕಾಯಿ, ನೆಲ್ಲಿಯಕಾಯಿ), ವ್ಯೋಷ (ಶುಂಠಿ, ಹಿಪ್ಪಲಿ, ಮೆಣಸು), ಜೀರಿಗೆ, ಹಪುಷ ಎಂದರ ನೀರುಪಚ್ಚೆ ಎಂಬ ಮೂಲಿಕ, ಬಜೆ, ಖುರಾಸಾನಿವೋಮ, ವೋಡಿ, ಸದಾಪ, ನಾಯಿತುಳಸಿಬೀಜ, ವೋಮಿನಕಾಳು, ಕಚೋರ, ಕೊತ್ತುಂಬರಿಬೀಜ, ವಾಯುವಿಡಂಗ, ಜೀರಿಗೆ, ಬಜ, ಪುಷ್ಕರಮೂಲ, ಯವಕ್ಷಾರ ಸರ್ಜಕ್ಷಾರ, ಸೈಂಧವಲವಣ, ಸೌವರ್ಚಲವಣ, ಬಿಡಲವಣ, ಸಮುದ್ರಲವಣ, ಚೌಳುಪ್ಪು, ಚಂಗಲಕೋಷ್ಟ ಇವುಗಳು ಪ್ರತಿಯೊಂದೂ ಒಂದೊಂದು ತೂಕ,

ದಾಕ್ಷಮೆಕ್ಕೆಕಾಯಿ ಎರಡುತೂಕ, ಲಾಲ್ ತಿಗಡೆ ಮೂರುತೂಕ, ಜಯಪಾಲದ ಬೀಜ ಮೂರು ತೂಕ, ಮುಂಡಗಳ್ಳಿಯತೊಪ್ಪೆ ನಾಲ್ಕುತೂಕ, ಇವುಗಳೆಲ್ಲವನ್ನೂ ಕೂಡಿಸಿ ಚೂರ್ಣವನ್ನು ಮಾಡಿ ಇರಿಸಿಕೊಳ್ಳುವುದು, ಮೊದಲು ಪಾಚನೌಷಧಗಳು, ಸ್ನೇಹಪಾನ ಮೊದಲಾದವುಗಳನ್ನು ಮಾಡಿಸಿ ಕೋಷ್ಟವು ಸ್ನಿಗ್ಧವಾಗಿರುವಾಗ್ಯೆ ಈ ಚೂರ್ಣವನ್ನು ಭೇದಿಮಾಡಿಸುವುದಕ್ಕಾಗಿ ಯೋಗ್ಯಪ್ರಮಾಣದಲ್ಲಿ ಕೊಡಬೇಕು ಈ ಚೂರ್ಣದಿಂದ ಗುಣವಾಗತಕ್ಕ ರೋಗಗಳು ಯಾವವೆಂದರೆ— ಹೃದಯ ರೋಗ, ಪಾಂಡುರೋಗ, ಕೆಮ್ಮು, ಉಬ್ಬಸ, ಭಗಂದರ, ಅಗ್ನಿಮಾಂದ್ಯ, ಜ್ವರ, ಕುಷ್ಠರೋಗ, ಗ್ರಹಣೀ ಎಂಬ ಅತಿಸಾರ ಗಂಟಲುಬ್ಬಟವೆ ಈ ರೋಗಗಳಲ್ಲಿ ರೋಗಕ್ಕೆ ಯೋಗ್ಯಗಳಾದ ಅನುಪಾನಭೇದದಿಂದ ಕೊಡಬಹುದು. ಹೊಟ್ಟೆಯುಬ್ಬರದಲ್ಲಿ ಯಾವುದಾದರೂ ಮದ್ಯಪಾನದ ಸೇರಿಸಿ ಕೊಡಬೇಕು. ಗುಲ್ಮರೋಗದಲ್ಲಿ ಬೋರೆಬೇರಿನ ಕಷಾಯದೊಡನೆ ಕೊಡುವುದು, ಮಲಪ್ರವೃತ್ತಿ ಹೆಚ್ಚಾಗಿದ್ದಲ್ಲಿ ಮೊಸರಿನ ಮೇಲಿನ ತಿಳಿನೀರಿನೊಡನೆ, ಅಜೀರ್ಣರೋಗದಲ್ಲಿ ಬಿಸಿನೀರಿನೊಡನೆ, ಗುದದ್ವಾರದಲ್ಲಿ ಕತ್ತರಿಯಿಂದ ಕತ್ತರಿಸಿದಂತಾಗುವ ಒಂದು ಬಗೆಯ ರೋಗದಲ್ಲಿ ಹುಣಿಸೆಯ ಹಣ್ಣಿನ ಕಷಾಯದೊಡನೆ, ಉದರದಲ್ಲಿ ಒಂಟೆಯ ಹಾಲಿನೊಡನೆಯಾಗಲಿ ಹಸುವಿನ ಮಜ್ಜಿಗೆಯೊಡನಾಗಲಿ, ವಾತರೋಗಗಳಲ್ಲಿ ಮದ್ಯದೊಡನೆ, ಮೂಲವ್ಯಾಧಿಯಲ್ಲಿ ದಾಳಿಂಬೆಯ ಬೇರಿನ ಕಷಾಯದೊಡನೆ, ಸ್ಥಾವರ ಮತ್ತು ಜಂಗಮ ವಿಷಗಳ ವ್ಯಾಧಿಗಳಿಂದ ಉತ್ಪನ್ನವಾದ ವ್ಯಾಧಿಯಲ್ಲಿ ತುಪ್ಪದೊಡನೆಯೂ ಸೇವಿಸತಕ್ಕದ್ದು ಈ ಚೂರ್ಣಕ್ಕೆ ನಾರಾಯಣ ಚೂರ್ಣವೆಂದು ಹೆಸರು ಅನುಪಾನ ವಿಶೇಷದಿಂದ ಸಮಸ್ತ ರೋಗಗಳ ಮೇಲೆಯೂ ಪ್ರಯೋಗಿಸಬಹುದು.

ಹಪುಷಾತ್ರಿಫಲಾಚವ್ಯತ್ರಾಯಮಾಣಾಕಟುಪಿಪ್ಪಲೀ ॥
ಹೇಮಕ್ಷೀರೀತ್ರಿವೃಚ್ಚವ್ಯಸಾತಲಾಕಟುರೋಹಿಣೀ ॥ ೯೪ ॥
ನೀಲಿನೀಸೈಂಧವಂಕೃಷ್ಣಾಲವಣಂಚೂರ್ಣಯೇತ್ ॥
ಉಷ್ಣೋದಕೇನಮೂತ್ರೇಣದಾಡಿಮತ್ರಿಫಲಾರಸೈಃ ॥ ೯೫ ॥
ತಥಾಮಾಂಸರಸೇನಾಥಯುನಾಯೋನ್ಯಂಪಿಬೇನ್ನರಃ ॥
ಅಜೀರ್ಣೇಪ್ಲೀಹ್ನಿಗುಲ್ಮೇಚಶೋಫಾರ್ಶೋವಿಷಮಾಗ್ನಿಷು ॥ ೯೬ ॥
ಹಲೀಮಕಾಮಲಾಪಾಂಡುಕುಷ್ಠಾಧ್ಮಾನೋದರೇಷ್ವಪಿ ॥

ಹಪುಷಾದಿಚೂರ್ಣ—ಹಪುಷ ಎಂದರೆ ಹಬ್ಬೆಗಿಡವೆಂದು ಹೆಸರು, ಇದು ಹೊಳೆಗಳ ಹತ್ತರ ಇರುತ್ತದೆ, ಇದರ ಎಲೆ ನೇರಿಲ ಎಲೆಯ ಹಾಗಿರುತ್ತದೆ, ಇದರ ಚಕ್ಕೆಗಳು, ತ್ರಿಫಲ ಎಂದರೆ ಅಳಲೆಕಾಯಿ ತಾರೇಕಾಯಿ ನೆಲ್ಲಿಯಕಾಯಿ, ತ್ರಾಯಮಾಣವೆಂದರೆ ಗಜ್ಜುಗ, ಹಿಪ್ಪಲಿ. ಹೇಮಕ್ಷೀರೀ ಎಂಬುವುದೊಂದು ಸ್ವನಾಮ ಪ್ರಸಿದ್ಧವಾದ ಮೂಲಿಕೆ, ಲಾಲ್ ತಿಗಡೆ, ಸಾತಲಾ ಎಂಬ ಮೂಲಿಕೆ, ಕಟುಕ

ರೋಹಿಣಿ, ಬಜೆ, ನೀಲೀಗಿಡದ ಬೇರು, ಸೈಂಧವಲವಣ, ಕಪ್ಪುಲವಣ, ಇವುಗಳ ಲ್ಲವನ್ನೂ ಸಮವಾಗಿ ಸೇರಿಸಿ ಚೂರ್ಣಮಾಡಿ ಬಿಸಿನೀರಿನೊಡನಾಗಲಿ, ಮೂತ್ರ ದೊಡನಾಗಲಿ, ದಾಳಿಂಬರೇ ಹಣ್ಣಿನ ರಸದೊಡನೆಯಾಗಲಿ, ತ್ರಿಫಲಾ ಕಷಾಯ ದೊಂದಿಗಾಗಲಿ, ಯಾವುದಾದರೂ ಮಾಂಸದ ರಸದೊಂದಿಗಾಗಲಿ ಸೂಕ್ತವಾದ ಮತ್ತು ರೋಗಕ್ಕೆ ಯೋಗ್ಯವಾದ ಅನುಪಾನದೊಡನೆ ಈ ಮುಂದೆ ಹೇಳುವ ರೋಗಗಳಿಗೆ ಉಪಯೋಗಿಸಬೇಕು ಅಜೀರ್ಣ, ಪ್ಲೀಹಾಭಿವೃದ್ಧಿ, ಗುಲ್ಮ, ಶೋಭೆ, ಮೂಲವ್ಯಾಧಿ, ವಿಷಮಾಗ್ನಿ, ಹಲೀಮಕವೆಂಬ ಕಾಮಲಾಭೇದ, ಕಾಮಲೆ, ಪಾಂಡುರೋಗ, ಕುಷ್ಠರೋಗ, ಹೊಟ್ಟೆಯುಬ್ಬರಿಸಿಕೊಳ್ಳುವುದು, ಉದರರೋಗಗಳು, ಇವುಗಳೆಲ್ಲದರಲ್ಲಿಯೂ ಈ ಚೂರ್ಣವು ಉಪಯುಕ್ತ ವಾದದ್ದು

ಶುಂಠೀಹರೀತಕೀಕೃಷ್ಣಾತ್ರಿವೃತ್ಸೌವರ್ಚಲಂತಥಾ ॥ ೯೭ ॥
ಸಮಭಾಗಾನಿಸರ್ವಾಣಿ ಸೂಕ್ಷ್ಮಚೂರ್ಣಾನಿಕಾರಯೇತ್ ॥
ಪ್ರೋಕ್ತಂ ಪಂಚಸಮಂ ಚೂರ್ಣಮೇತಚ್ಛೂಲಹರಂಪರಂ ॥ ೯೮ ॥
ಆಧ್ಮಾನಜಠರಾರ್ಶೋಘ್ನಮಾಮವಾತಹರಂಸ್ಮೃತಂ ॥

ಪಂಚಸಮಚೂರ್ಣ—ಶುಂಠಿ, ಅಳಲೀಕಾಯಿ, ಹಿಪ್ಪಲಿ, ತಿಗಡೆ, ಸೌವರ್ಚ ಲವಣ, ಇವೈದನ್ನೂ ಸಮವಾದ ಅಳತೆಯಿಂದ ಕೂಡಿಸಿ ಸೂಕ್ಷ್ಮವಾದ ಪುಡಿ ಮಾಡಿ ವಸ್ತ್ರಗಾಳಿತ ಮಾಡಿಕೊಂಡು ಸೇವಿಸುವುದು. ಶೂಲರೋಗಕ್ಕೆ ಈ ಚೂರ್ಣವು ಅತ್ಯುತ್ತಮ ಗುಣಕರವಾದದ್ದು ಹೊಟ್ಟೆಯುಬ್ಬರ, ಉದರರೋಗ ಗಳು, ಮೂಲವ್ಯಾಧಿ, ಆಮವಾತ ಇವುಗಳನ್ನು ಗುಣಪಡಿಸುತ್ತದೆ.

ಕರ್ಷಮಾತ್ರಾಭವೇತ್ಕೃಷ್ಣಾತ್ರಿವೃತಾಸ್ಯಾತ್ಪಲೋನ್ಮಿತಾ ॥ ೯೯ ॥
ಖಂಡಾತ್ಪಲಂಚನಿಜ್ಞೇಯಂಚೂರ್ಣಮೇಕತ್ರಕಾರಯೇತ್ ॥
ಕರ್ಷೋನ್ಮಿತಂಲಿಹೇದೇತತ್ಕ್ಷೌದ್ರೇಣಾಧ್ಮಾನನಾಶನಂ ॥ ೧೦೦ ॥
ಗಾಢವಿಟ್ಕೋದರಕಫಾನ್ಪಿತ್ತಶೂಲಂಚನಾಶಯೇತ್ ॥

ನಾರಾಚಚೂರ್ಣ—ಕಾಲುಪಲ ಹಿಪ್ಪಲಿ, ಒಂದುಪಲ ತಿಗಡೆ, ಒಂದುಪಲ ಖಂಡ ಸಕ್ಕರೆ, ಇವಿಷ್ಟನ್ನೂ ಸೂಕ್ಷ್ಮವಾದ ಚೂರ್ಣವಾಗಿ ಮಾಡಬೇಕು. ಈ ಚೂರ್ಣದಲ್ಲಿ ಒಂದು ಕರ್ಷಪ್ರಮಾಣದಷ್ಟನ್ನು ಅಂದರೆ ಕಾಲುಪಲವಷ್ಟನ್ನು ಜೇನುತುಪ್ಪದೊಡನೆ ಕಲಸಿ ನೆಕ್ಕಿದರೆ ಹೊಟ್ಟೆಯುಬ್ಬರ, ಮಲವು ಗಟ್ಟಿಯಾಗಿ ಕಲ್ಲಿನಂತಿರುವುದು, ಉದರರೋಗ, ಕಫಾಭಿವೃದ್ಧಿ, ಪಿತ್ತಜನ್ಯವಾದ ಹೊಟ್ಟೆಶೂಲೆ ಇವುಗಳೆಲ್ಲವೂ ನಾಶವಾಗುತ್ತವೆ.

ಲವಣತ್ರಿತಯಂಕ್ಷಾರೌಶತಪುಷ್ಪಾದ್ವಯಂವಚಾ ॥ ೧೦೧ ॥
ಅಜಮೋದಾಜಗಂಧಾಚಹಪುಷಾಜೀರಕದ್ವಯಂ ॥
ಮರಿಚಂಪಿಪ್ಪಲೀಮೂಲಂಪಿಪ್ಪಲೀಗಜಪಿಪ್ಪಲೀ ॥ ೧೦೨ ॥
ಹಿಂಗುಚ್ಛಹಿಂಗುಪತ್ರೀಚರೀಪಾಠೋಪಕುಂಚಿಕಾ ॥
ಶುಂಠೀಚಿತ್ರಕಚವ್ಯಾನಿವಿಡಂಗಂಚಾಮ್ಲವೇತಸಂ ॥ ೧೦೩ ॥
ದಾಡಿಮಂತಿಂತಿಡೀಕಂಚತ್ರಿವೃದ್ದಂತೀಶತಾವರೀ ॥
ಇಂದ್ರವಾರುಣಿಕಾಭಾರ್ಗೀದೇವದಾರುಸುರಾಹ್ವಕಾ ॥ ೧೦೪ ॥
ಕುಸ್ತುಂಬುರುಸ್ತುಂಬುರೂಣಿಪೌಷ್ಕರಂಬದರಾಣಿಚ ॥
ಶಿವಾಚೇತಿಸಮಾಂಶಾನಿಚೂರ್ಣನೈಕತ್ರಕಾರಯೇತ್ ॥ ೧೦೫ ॥
ಭಾವಯೇದಾರ್ದ್ರಕರಸೈರ್ಬೀಜಪೂರರಸೈಸ್ತಥಾ ॥
ತತಶ್ಚೇತ್ಸರ್ಪಿಷಾಜೀರ್ಣಮದ್ಯೇನೋಷ್ಣೋದಕೇನವಾ ॥ ೧೦೬ ॥
ಕೋಲಾಂಭಸಾವಾತಕ್ರೇಣದುಗ್ಧೇನೌಷ್ಣೇನಮಸ್ತುನಾ ॥
ಯಕೃತ್ಪ್ಲೀಹಕಟೀಶೂಲಗುದಕುಕ್ಷಿಹೃದಾಮಯಂ ॥ ೧೦೭ ॥
ಅರ್ಶೋವಿಷ್ಟಂಭಮಂದಾಗ್ನಿಗುಲ್ಮಕ್ರಿಮಿಹೋದರಾಣಿಚ ॥
ಪಿನಾಕಿನಾಶ್ವಾಸಕಾಸಾಂಜಯೇದೇತಾನ್ನಸಂಶಯಃ ॥ ೧೦೮ ॥
ಏಭಿರೇವೌಷಧೈಸ್ಸಮ್ಯಗ್ಘೃತಂವಾಸಾಧಯೇತ್ಸುಧೀಃ ॥

ಲವಣತ್ರಿತಯಾದಿಚೂರ್ಣ—ಸೈಂಧವಲವಣ, ಸೌವರ್ಚಲವಣಂ, ಬಿಡ ಲವಣ, ಯವಕ್ಷಾರ, ಸರ್ಜಕ್ಷಾರ, ಸಬ್ಬಸಿಗೇ ಬೀಜ ಎರಡು ತರಹದ್ದು, ವೋಮ, ಕರಾಸಾನಿವೋಮ, ಹಪುಷಾ ಎಂದರೆ ಹಬ್ಬಿಗಿಡ, ಬಿಳೀಜೀರಿಗೆ, ಕಪ್ಪುಜೀರಿಗೆ, ಮೆಣಸು, ಹಿಪ್ಪಲಿಮೋಡಿ, ಹಿಪ್ಪಲಿ, ದೊಡ್ಡಹಿಪ್ಪಲಿ, ಹಿಂಗು, ಇಂಗಿನ ವಾಸನೆಯಂತೆ ವಾಸನೆಯಿರುವ ಒಂದು ಬಗೆಯ ಎಲೆ, ಕಚೋರ, ಅಗಸುಪಾಂರಿ, ಉಪಕುಂಚಿಕಾ ಎಂದರ ಅದೊಂದು ಬಗೆಯ ಜೀರಿಗೆ, ಶುಂಠಿ, ಚಿತ್ರಮೂಲದ ಬೇರಿನ ತೊಗಟೆ, ಚವ್ಯವೆಂದರೆ ಕಾಡುಮೆಣಸಿನಬಳ್ಳಿ, ವಾಯು ವಿಡಂಗ, ಅಮ್ಲವೇತಸವೆಂದರೆ ಆಂಧ್ರದೇಶದಲ್ಲಿ ಪುಲ್ಲಪ್ರಬ್ಬಲಿ ಎಂದು ಕರೆಯುವ ಗಿಡ ನಮ್ಮಲ್ಲಿರುವ ಪುಳ್ಳಿಂಪುರಚೆಯ ಗಿಡದಂತೆ ಅದೂ ಒಂದು ಬಗೆಯ ಹುಳಿಯಾದ ಗಿಡ, ದಾಳಿಂಬರೆ, ಓಟೆಹುಳಿ, ಲಾಲ್‌ತಿಗಡೆ, ಜಾಪಾಳದಬೀಜ, ಆಷಾಢೀ ಬೇರು, ಇಂದ್ರವಾರುಣಿ ಎಂದರೆ ದಾಸಮಿಕ್ಕೆಕಾಯಿ, ಗಂಟುಪರಂಗಿ, ದೇವದಾರಿ ಚಕ್ಕೆ, ವೋವು, ಕೊತ್ತುಂಬರಿಬೀಜ, ತುಂಬುರುವೆಂಬುವುದೊಂದು ಗಂದಿಗೆ ಜಿನಸು, ಪುಷ್ಕರಮೂಲ, ಬೋರೇಹಣ್ಣು, ಅಳಲೇಕಾಯಿ ಇವುಗಳೆಲ್ಲವನ್ನೂ ಸಮಪ್ರಮಾಣದಲ್ಲಿ ಕೂಡಿಸಿ ಸೂಕ್ಷ್ಮ ಚೂರ್ಣವನ್ನು ಮಾಡಿ ವಸ್ತ್ರಗಾಳಿತ ಮಾಡಿಕೊಂಡು ಆ ಚೂರ್ಣವನ್ನು ಹಸಿಯ ಸುಂಟಿಯ ರಸದಲ್ಲಿ ಮತ್ತು ಮಾದ

ಳದ ಹಣ್ಣಿನ ರಸದಲ್ಲಿ ಸಹ ಕ್ರಮವಾಗಿ ಭಾವನೆಗಳನ್ನು ಕೊಟ್ಟು ಚನ್ನಾಗಿ ಒಣಗಿಸಿ ಗಾಳಿ ಆಡದಂತೆ ಒಂದು ಪಾತ್ರೆಯಲ್ಲಿ ಹಾಕಿ ಮುಚ್ಚಿ ಇರಿಸಿಕೊಳ್ಳುವುದು. ಈ ಚೂರ್ಣವನ್ನು ತುಪ್ಪದೊಡನೆಯಾಗಲಿ, ಹಳೆಯದಾದ ಮದ್ಯದೊಡನೆಯಾಗಲಿ, ಬಿಸಿನೀರಿನೊಡನೆಯಾಗಲಿ, ಬೋರೇಜೀರಿನ ಕಷಾಯದೊಡನೆಯಾಗಲಿ, ಮಜ್ಜಿಗೆಯೊಡನೆಯಾಗಲಿ, ಒಂಟೆಯ ಹಾಲಿನೊಡನೆಯಾಗಲಿ, ಮೊಸರಿನ ನೀರಿನೊಡನೆಯಾಗಲಿ ರೋಗಕ್ಕೆ ಯುಕ್ತವಾದ ಅನುಪಾನದೊಡನೆ ಸೇವಿಸಿದಲ್ಲಿ ಪಸ್ತ್ರಲ್ ಎಂಬ ಅವಯವದ ಶೂಲೆ, ಪೃಷ್ಠಭಾಗದ ಶೂಲೆ, ಸೊಂಟಶೂಲೆ, ಗುದರೋಗಗಳು, ಉದರರೋಗಗಳು, ಎದೆನೋವು, ಮೂಲವ್ಯಾಧಿ, ಮಲಬಂಧ ಅಗ್ನಿಮಾಂದ್ಯ, ಗುಲ್ಮ, ಪ್ಲೀಹಾಭಿವೃದ್ಧಿ, ಮಹೋದರ ಮೊದಲಾದ ಉದರಗಳು, ಬಿಕ್ಕಳಿಕೆ, ಹೊಟ್ಟೆಯುಬ್ಬರ, ಉಬ್ಬಸ, ಕೆಮ್ಮು ಇವುಗಳೆಲ್ಲವನ್ನೂ ಗುಣಮಾಡುತ್ತದೆ. ಮೇಲೆ ಹೇಳಿದ ಔಷಧಗಳನ್ನೇ ಸೇರಿಸಿ ಮುಂದೆ ಹೇಳುವ ಘೃತಪಾಕಕ್ರಮದಲ್ಲಿ ಘೃತವನ್ನು ಪಾಕಮಾಡಿ ಕೊಟ್ಟರೆ ಮೇಲೆ ಹೇಳಿರುವ ರೋಗಗಳನ್ನು ಗುಣಪಡಿಸುತ್ತವೆ.

ತುಂಬುರೂಣಿತ್ರಿಲವಣಂಯವಾನೀಪುಷ್ಕರಾಹ್ವಯಂ ॥ ೧೦೯ ॥
ಯವಕ್ಷಾರಾಭಯಾಹಿಂಗುವಿಡಂಗಾನಿಸಮಾನಿಚ ॥
ತ್ರಿವೃತ್ತ್ರಿಭಾಗಾವಿಜ್ಞೇಯಾಸೂಕ್ಷ್ಮಚೂರ್ಣಾನಿಕಾರಯೇತ್ ೧೧೦
ಪಿಬೇದುಷ್ಣೇನತೋಯೇನಯವಕ್ವಾಥೇನವಾಪಿಬೇತ್ ॥
ಜಯೇತ್ಸರ್ವಾಣಿಶೂಲಾನಿಗುಲ್ಮಾಧ್ಮಾನೋದರಾಣಿಚ ॥ ೧೧೧ ॥

ತುಂಬುರ್ವಾದಿಚೂರ್ಣ — ತುಂಬುರುಎಂಬುವುದೊಂದು ಗಂದಿಗೆ ದಿನಸು, ಸೈಂಧವಲವಣ, ಸೌವರ್ಚಲವಣ, ಬಿಡಲವಣ, ವೋಮ, ಪುಷ್ಕರಮೂಲ, ಯವಕ್ಷಾರ, ಅಳಲೆಕಾಯಿ, ಹಿಂಗು, ವಾಯುವಿಡಂಗ ಇವೆಲ್ಲವೂ ಸಮಭಾಗವಾಗಿ ತ್ರಿವೃತಕ್ಕೆ ಎಲ್ಲಾಇದರ ಮೂರುಭಾಗ ಸೇರಿಸಿ ಇವೆಲ್ಲವನ್ನೂ ಸೂಕ್ಷ್ಮ ಚೂರ್ಣಮಾಡಿ ಬೆಚ್ಚಗಾಗಿರುವ ಬಿಸಿನೀರಿನೊಡನೆಯಾಗಲಿ ಯವಧಾನ್ಯದ ಕಷಾಯದೊಡನೆಯಾಗಲಿ ಕುಡಿದರೆ ಸಮಸ್ತ ವಿಧವಾದ ಹೊಟ್ಟೆಶೂಲೆ, ಗುಲ್ಮ, ಹೊಟ್ಟೆಯುಬ್ಬರ, ಎಲ್ಲಾ ಬಗೆಯ ಉದರಗಳು ಎಲ್ಲವೂ ಗುಣವನ್ನು ಹೊಂದುತ್ತವೆ.

ಚಿತ್ರಕಂನಾಗರಂಹಿಂಗುಪಿಪ್ಪಲೀಪಿಪ್ಪಲೀಜಟಾ ॥
ಚವ್ಯಾಜಮೋದಾಮರಿಚಂಪ್ರತ್ಯೇಕಂಕರ್ಷಸಮ್ಮಿತಂ ॥ ೧೧೨ ॥
ಸ್ವರ್ಜಕಾಚಯವಕ್ಷಾರಃಸಿಂಧುಸೌವರ್ಚಲಂಬಿಡಂ ॥
ಸಾಮುದ್ರಕಂರೋಮಕಂಚಕೋಲಮಾತ್ರಾಣಿಕಾರಯೇತ್ ೧೧೩
ಏಕೀಕೃತ್ಯಾಖಿಲಂಚೂರ್ಣಂಭಾವಯೇನ್ಮಾತುಲಂಗಜೈಃ ॥

**ರಸೈರ್ದಾಡಿಮಜೈರ್ವಾಪಿಶೋಷಯೇದಾತಪೇನಚ ॥ ೧೧೪ ॥**
**ಏತಚ್ಚೂರ್ಣಂಜಯೇದ್ಗುಲ್ಮಂಗ್ರಹಣೀಮಾಮಜಾಂರುಜಂ ॥**
**ಅಗ್ನಿಂಚಕುರುತೇದೀಪ್ತಂರುಚಿಕೃತ್ಕಫನಾಶನಃ ॥ ೧೧೫ ॥**

ಚಿತ್ರಕಾದಿ ಚೂರ್ಣ—ಚಿತ್ರಮೂಲದ ಬೇರಿನತೊಪ್ಪೆ, ಶುಂಠಿ, ಇಂಗು, ಹಿಪ್ಪಲಿ, ಹಿಪ್ಪಲಿಮೋಡಿ, ಚವ್ಯವೆಂದರೆ ಕಾಡುಮೆಣಸಿನಬಳ್ಳಿ, ಪೋಂಸಿನಕಾಳು, ಮೆಣಸಿನಕಾಳು ಇವು ಪ್ರತ್ಯೇಕ ಒಂದೊಂದು ಕರ್ಷಪರಿಮಾಣವೆಂದರೆ ಕಾಲುಪಲ, ಸರ್ಜಕ್ಷಾರ, ಯವಕ್ಷಾರ, ಸೈಂಧವಲವಣ, ಸೌವರ್ಚಲಲವಣ, ಬಿಡಲವಣ, ಸಾಮುದ್ರಲವಣವೆಂದರ ಸಾವು ತನ್ನುವ ಉಪ್ಪು, ರೋಮಕವೆಂದರೆ ರೋಮದೇಶದ ಉಪ್ಪು, ಇವುಗಳು ಒಂದೊಂದು ತೊಲ ಪರಿಮಾಣ ಈ ರೀತಿಯಾಗಿ ಎಲ್ಲಾ ಪದಾರ್ಥಗಳನ್ನೂ ಸೇರಿಸಿ ಚನ್ನಾಗಿ ಚೂರ್ಣಮಾಡಿ ವಸ್ತ್ರಗಾಳಿತಮಾಡಿ ಮಾದಳದ ಹಣ್ಣಿನ ರಸದಲ್ಲಿ, ದಾಳಿಂಬರೇ ಹಣ್ಣಿನ ರಸದಲ್ಲಿ ಭಾವನೆಕೊಟ್ಟು ಚನ್ನಾಗಿ ಒಣಗಿಸಿ ಸೇವಿಸುತ್ತ ಬಂದಲ್ಲಿ ಗುಲ್ಮ, ಗ್ರಹಣಿ ಎಂಬ ಭೇದಿ, ಆಮಜನಿತವಾದ ಉದರರೋಗಗಳು ಇವುಗಳನ್ನು ಗುಣಮಾಡುತ್ತದೆ, ಅಗ್ನಿದೀಪ್ತಿಯನ್ನುಂಟುಮಾಡುತ್ತದೆ, ನಾಲಗೆಗ ರುಚಿಯನ್ನು ಕೊಡುತ್ತದೆ, ಕಫರೋಗಗಳನ್ನು ನಾಶಪಡಿಸುತ್ತದೆ

**ಸೈಂಧವಂಪಿಪ್ಪಲೀಮೂಲಂಪಿಪ್ಪಲೀಚವ್ಯಚಿತ್ರಕಂ ॥**
**ಶುಂಠೀಹರೀತಕೀಚೇತಿಕ್ರಮವೃದ್ಧಾನಿಚೂರ್ಣಯೇತ್ ॥ ೧೧೬ ॥**
**ಬಡವಾನಲನಾಮ್ನೈತಚ್ಚೂರ್ಣಂಸ್ಯಾದಗ್ನಿದೀಪನಂ ॥**

ಬಡವಾನಲಚೂರ್ಣ—ಸೈಂಧವಲವಣ, ಹಿಪ್ಪಲಿಮೋಡಿ, ಹಿಪ್ಪಲಿ, ಚವ್ಯವೆಂದರೆ ಕಾಡುಮೆಣಸಿನಬಳ್ಳಿ, ಚಿತ್ರಮೂಲದ ಬೇರಿನ ತ್ವಕ್ಕು, ಶುಂಠಿ, ಅಳಲೆಕಾಯಿ, ಈ ಪದಾರ್ಥಗಳನ್ನು ಕ್ರಮವಾಗಿ ಒಂದು, ಎರಡು, ಮೂರು ಎಂದರೆ ಸೈಂಧವಲವಣ ಒಂದು, ಹಿಪ್ಪಲಿಮೋಡಿ ಎರಡು, ಹಿಪ್ಪಲಿ ಮೂರು, ಈ ರೀತಿಯಾಗಿ ಏಕೋತ್ತರವೃದ್ಧಿಯಾಗಿ ಸೇರಿಸಿ ಸಣ್ಣನಾದ ಚೂರ್ಣಮಾಡಿ ವಸ್ತ್ರಗಾಳಿತಮಾಡಿಕೊಂಡು ಸೇವಿಸುತ್ತ ಬಂದಲ್ಲಿ ಈ ಚೂರ್ಣವು ಜಠರಾಗ್ನಿಯನ್ನು ಚನ್ನಾಗಿ ದೀಪನಪಡಿಸಿ ಹಸಿವು ಹೆಚ್ಚಿಸುತ್ತದೆ.

**ಅಜಮೋದಾವಿಡಂಗಾನಿಸೈಂಧವಂದೇವದಾರುಚ ॥ ೧೧೭ ॥**
**ಚಿತ್ರಕಃಪಿಪ್ಪಲೀಮೂಲಂಶತಪುಷ್ಪಾಚಪಿಪ್ಪಲೀ ॥**
**ಮರಿಚಂಚೇತಿಕರ್ಷಾಂಶಂಪ್ರತ್ಯೇಕಂಕಾರಯೇದ್ಬುಧಃ ॥ ೧೧೮ ॥**
**ಕರ್ಷಾಸ್ತುಪಂಚಪಥ್ಯಾಯಾದಶಸ್ಯುರ್ವೃದ್ಧದಾರುಕಾತ್ ॥**
**ನಾಗರಾಚ್ಚ ದಶೈವಸ್ಯುಃಸರ್ವಾಣ್ಯೇಕತ್ರಚೂರ್ಣಯೇತ್ ॥ ೧೧೯ ॥**

ಪಿಬೇತ್ ಕೋಷ್ಣಜಲೇನೈನಚೂರ್ಣಂಶ್ವಯಥುನಾಶನಂ ||
ಆಮವಾತರುಜಂಹಂತಿಸಂಧಿಪೀಡಾಂಚಗೃಧ್ರಸೀಂ || ೧೨೦ ||
ಕಟಿಪೃಷ್ಠಗುದಸ್ಥಾಂಚಜಂಘಯೋಶ್ಚರುಜಾಂಜಯೇತ್ ||
ತೂನೀಪ್ರತೂನೀವಿಶ್ವಾಚೀಕಫವಾತಾಮಯಾನ್ಜಯೇತ್ ೧೨೧
ಸಮೇನವಾಗುಡೇನಾಸ್ಯವಟಿಕಾಃಕಾರಯೇದ್ಭಿಷಕ್ ||

ಅಜಮೋದಾದಿಚೂರ್ಣ—ಓಮ, ವಾಯುವಿಡಂಗ, ಸೈಂಧವಲವಣ, ದೇವದಾರೀಚಕ್ಕೆ, ಚಿತ್ರಮೂಲದ ಬೇರಿನಸಿಪ್ಪೆ, ಹಿಪ್ಪಲಿಮೋಡಿ, ಸಬ್ಬಸಿಗೆ ಬೀಜ, ಹಿಪ್ಪಲಿ, ಮೆಣಸು ಇವುಗಳು ಒಂದೊಂದು ಕರ್ಷ ಎಂದರೆ ಕಾಲುಪಲ, ಅಳಲೆಯಕಾಯಿ ಐದು ಕರ್ಷ, ವೃದ್ಧದಾರು ಹತ್ತು ಕರ್ಷ, ಶುಂಠಿ ಹತ್ತು ಕರ್ಷ, ಇವೆಲ್ಲವನ್ನೂ ಕುಟ್ಟಿಸಿ ಸಣ್ಣನಾದ ಚೂರ್ಣವಮಾಡಿ ವಸ್ತ್ರಗಾಳಿತಮಾಡಿ ಇರಿಸಿಕೊಂಡು ಬಿಸಿನೀರಿನ ಅನುಪಾನದೊಡನೆ ಸೇವಿಸುತ್ತ ಬಂದರೆ ಶೋಭೆ, ಆಮವಾತ ಎಂದರೆ ಕೈಕಾಲು ಹಿಡಿಯುವುದು, ಸಂಧಿವಾತ ಅಂದರೆ ಕೀಲುಗಳು ಹಿಡಿದುಕೊಳ್ಳುವುದು, ಗೃಧ್ರಸಿ ಎಂಬ ವಾಯು, ಸೊಂಟ ಹಿಡಿದುಕೊಳ್ಳುವುದು, ಅಂಗಗಳು ನೋಯುವುದು, ಗುದದ್ವಾರದಲ್ಲಿರುವ ವಾತದ ನೋವುಗಳು, ತೊಡೆಗಳಲ್ಲಿ ಕಾಣುವ ವಾತರೋಗದ ನೋವು, ತೂನೀ, ಪ್ರತೂನೀ, ವಿಶ್ವಾಚೀ ಎಂಬ ಹೆಸರಿನ ವಾತರೋಗಗಳು, ಕಫರೋಗಗಳು, ಇನ್ನೂ ಎಲ್ಲಾ ವಿಧವಾದ ವಾತಸಂಬಂಧವಾದ ವಿಕಾರಗಳು ಇವುಗಳಲ್ಲೆಲ್ಲಾ ಗುಣಕಾಣುತ್ತದೆ. ವೈದ್ಯನು ಈ ಚೂರ್ಣಕ್ಕೆ ಬೆಲ್ಲವನ್ನು ಸೇರಿಸಿ ವಟಿಕೆಗಳನ್ನಾದರೂ ಮಾಡಿಸಿಕೊಂಡು ಉಪಯೋಗಿಸಬಹುದು.

ಶುಂಠೀಸೌವರ್ಚಲಂಹಿಂಗುದಾಡಿಮಂಚಾಮ್ಲವೇತಸಂ || ೧೨೨ ||
ಚೂರ್ಣಮುಷ್ಣಾಂಬುನಾಪೇಯಂಶ್ವಾಸಹೃದ್ರೋಗಶಾಂತಯೇ ||

ಶುಂಠ್ಯಾದಿಚೂರ್ಣ—ಶುಂಠಿ, ಸೌವರ್ಚಲವಣ, ಇಂಗು, ದಾಳಿಂಬೆಸಿಪ್ಪೆ, ಅಮ್ಲವೇತಸವೆಂಬ ಹುಳಿ, ಇವುಗಳನ್ನು ಸಮಪ್ರಮಾಣದಲ್ಲಿ ಸೇರಿಸಿ ಸೂಕ್ಷ್ಮಚೂರ್ಣಮಾಡಿ ಬಿಸಿನೀರಿನೊಡನೆ ಸೇವನೆಮಾಡಿದಲ್ಲಿ ಉಬ್ಬಸ, ಹೃದಯರೋಗಗಳು ಶಾಂತವಾಗುತ್ತವೆ.

ಹಿಂಗುಪಾಠಾಭಯಾಧಾನ್ಯಂದಾಡಿಮಂಚಿತ್ರಕಶ್ಯಟೀ || ೧೨೩ ||
ಅಜಮೋದಾತ್ರಿಕಟುಕಂಹಪುಷಾಚಾಮ್ಲವೇತಸಂ ||
ಅಜಗಂಧಾತಿಂತಿಡೀಕಂಜೀರಕಂಪೌಷ್ಕರಂವಚಾ || ೧೨೪ ||
ಚವ್ಯಂಕ್ಷಾರದ್ವಯಂಪಂಚಲವಣಾನಿವಿಚೂರ್ಣಯೇತ್ ||
ಪ್ರಾಗ್ಭೋಜನಸ್ಯಮಧ್ಯೇವಾಚೂರ್ಣಮೇತತ್ಪ್ರಯೋಜಯೇತ್ ೧೨೫
ಪಿಬೇದ್ವಾಜೀರ್ಣಮದ್ಯೇನತಕ್ರೇಣೋಷ್ಣೋದಕೇನವಾ ||

ಮಾಡಿ ಸೇವಿಸೋಣದರಿಂದ ನಾಲಿಗೆಗೆ ರುಚಿ, ಜೀರ್ಣಶಕ್ತಿ ಹೆಚ್ಚುವುದು ಕೆಮ್ಮು, ಉಬ್ಬಸ, ಜ್ವರ, ವಮನ, ಅತಿಸಾರ (ಭೇದಿ) ಶೋಷ, ಹೊಟ್ಟೆಯುಬ್ಬರ, ಪ್ಲೀಹಾಭಿವೃದ್ಧಿ, ಗ್ರಹಣಿ (ಒಂದು ಬಗೆಯ ಭೇದಿ) ಪಾಂಡುರೋಗ ಇವುಗಳನ್ನೆಲ್ಲಾ ಗುಣಪಡಿಸುತ್ತದೆ. ಮೇಲೆ ಹೇಳಿದ ಸಕ್ಕರೆಯ ಪಾಕ ಮಾಡಿರಿಸಿ ಆದರಲ್ಲಿ ಈ ಚೂರ್ಣವನ್ನು ಕೂಡಿಸಿ ಗುಳಿಗೆಗಳನ್ನಾದರೂ ಮಾಡಿರಿಸಿಕೊಳ್ಳಬಹುದು

ಸಿತೋಪಲಾಷೋಡಶಸ್ಯಾದಷ್ಟೌಸ್ಯಾದ್ವಂಶರೋಚನಾ ॥ ೧೩೮ ॥
ಪಿಪ್ಪಲೀಸ್ಯಾಚ್ಚತುಷ್ಕರ್ಷಾಸ್ಯಾದೇಲಾಚದ್ವಿಕಾರ್ಷಿಕೀ ॥
ಏಕಃಕರ್ಷಸ್ತ್ವಚಃಕಾರ್ಯಶ್ಚೂರ್ಣಯೇತ್ಸರ್ವಮೇಕತಃ ॥೧೩೯॥
ಸಿತೋಪಲಾದಿಕಂಚೂರ್ಣಂಮಧುಸರ್ಪಿರ್ಯುತಂಲಿಹೇತ್ ॥
ಶ್ವಾಸಕಾಸಕ್ಷಯಹರಂಹಸ್ತಪಾದಾಂಗದಾಹಜಿತ್ ॥ ೧೪೦ ॥
ಮಂದಾಗ್ನಿಂಸುಪ್ತಜಿಹ್ವತ್ವಂಪಾರ್ಶ್ವಶೂಲಮರೋಚಕಂ ॥
ಜ್ವರಮೂರ್ಧ್ವಗತಂರಕ್ತಂಪಿತ್ತಮಾಶುವ್ಯಪೋಹತಿ ॥ ೧೪೧ ॥

ಸಿತೋಪಲಾದಿಚೂರ್ಣ—ಬಿಳಿಯ ಕಲ್ಲುಸಕ್ಕರೆ ಹದಿನಾರು ಕರ್ಷ, ಬಿದರುಪ್ಪು ಎಂಟು ಕರ್ಷ, ಹಿಪ್ಪಲಿ ನಾಲ್ಕು ಕರ್ಷ, ಯಾಲಕ್ಕಿ ಎರಡು ಕರ್ಷ, ಲವಂಗಚಕ್ಕೆ ಒಂದು ಕರ್ಷ, ಇವೆಲ್ಲವನ್ನೂ ಚನ್ನಾಗಿ ಚೂರ್ಣಮಾಡಿ ವಸ್ತ್ರಗಾಳಿತಮಾಡಿ ಇರಿಸಿಕೊಂಡು ಜೇನುತುಪ್ಪ, ಹಸುವಿನತುಪ್ಪ ಇವುಗಳ ಕೂಡೆ ಸೇರಿಸಿ ತೆಗದುಕೊಳ್ಳೋಣದರಿಂದ ಉಬ್ಬಸ, ಕೆಮ್ಮು, ಕ್ಷಯರೋಗ, ಕೈಯ್ಯಿ, ಕಾಲು, ಮೈಯ್ಯಿ ಇವುಗಳಲ್ಲಿರುವ ಉರಿ, ಅಗ್ನಿಮಾಂದ್ಯ, ಸುಪ್ತಜಿಹ್ವತ್ವವೆಂದರೆ ನಾಲಿಗೆಗೆ ರುಚಿ ತಿಳಿಯದೆ ಹೋಗುವುದು, ಪಕ್ಕಶೂಲೆ, ಅರುಚಿ, ಜ್ವರ, ಊರ್ಧ್ವದ್ವಾರಗಳಲ್ಲಿ ಅಂದರೆ ಮೂಗು ಬಾಯಿಗಳಲ್ಲಿ ರಕ್ತಹೊರಡುವುದು, ಇವುಗಳನ್ನೆಲ್ಲಾ ಜಾಗ್ರತೆಯಾಗಿ ಗುಣಪಡಿಸುತ್ತನೆ.

ಸಾಮುದ್ರಲವಣಂಕಾರ್ಯಮಷ್ಟಕರ್ಷಮಿತಂಬುಧೈಃ ॥
ಪಂಚಸೌವರ್ಚಲಂಗ್ರಾಹ್ಯಂಬಿಡಂಸ್ಯೈಂಧವಧಾನ್ಯಕಾಃ ॥ ೧೪೨ ॥
ಪಿಪ್ಪಲೀಪಿಪ್ಪಲೀಮೂಲಂಕೃಷ್ಣಜೀರಕಪತ್ರಕಂ ॥
ನಾಗಕೇಶರತಾಳೀಸಮಮ್ಲವೇತಸಕಂತಥಾ ॥ ೧೪೩ ॥
ದ್ವಿಕರ್ಷಮಾತ್ರಾಣ್ಯೇತಾನಿಪ್ರತ್ಯೇಕಂಕಾರಯೇದ್ಬುಧಃ ॥
ಮರಿಚಂಜೀರಕಂವಿಶ್ವಮೇಕೈಕಂಕರ್ಷಮಾತ್ರಕಂ ॥ ೧೪೪ ॥
ದಾಡಿಮಂಸ್ಯಾಚ್ಚತುಷ್ಕರ್ಷಂತ್ವಗೇಲೇಚಾರ್ಧಕಾರ್ಷಿಕೇ ॥
ಏತಚ್ಚೂರ್ಣೀಕೃತಂಸರ್ವಂಲವಣಂಭಾಸ್ಕರಾಭಿಧಂ ॥ ೧೪೫ ॥
ಶಾಣಪ್ರಮಾಣಂದೇಯಂತುಮಸ್ತುತಕ್ರಸುರಾಸವೈಃ ॥

ವಾತಶ್ಲೇಷ್ಮಭವಂಗುಲ್ಮಂಪ್ಲೀಹಾನಮುದರಂಕ್ಷಯಂ ॥ ೧೪೭ ॥
ಅರ್ಶಾಂಸಿಗ್ರಹಣೀಂಕುಷ್ಟಂವಿಬಂಧಂಚಭಗಂದರಂ ॥
ಶೋಫಂಶೂಲಂಶ್ವಾಸಕಾಸಾವಾಮವಾತಂಚಹೃದ್ರುಜಂ ॥ ೧೪೭ ॥
ಮಂದಾಗ್ನಿಂನಾಶಯೇದೇತದ್ದೀಪನಂಪಾಚನಂಪರಂ ॥
ಸರ್ವಲೋಕಹಿತಾರ್ಥಾಯಭಾಸ್ಕರೇಣೋದಿತಂಪುರಾ ॥ ೧೪೮ ॥

ಭಾಸ್ಕರಲವಣಚೂರ್ಣ—ಸಮುದ್ರಲವಣ ಅಂದರೆ ನಾವು ಪ್ರತಿದಿವಸವೂ ಉಪಯೋಗಿಸುವ ಉಪ್ಪು ಎಂಟು ತೊಲ, ಸೌವರ್ಚಲವಣ ಐದು ತೊಲ, ಬಿಡ ಲವಣ ಎರಡು ತೊಲ, ಸೈಂಧವ ಲವಣ ಎರಡು ತೊಲ ಕೊತ್ತುಂಬರಿಬೀಜ ಎರಡು ತೊಲ, ಹಿಪ್ಪಲಿ, ಮೋಡಿ, ಕರಿಜೀರಿಗೆ, ಲವಂಗಪತ್ರೆ, ನಾಗಕೇಸರಿ, ತಾಳೀಸಪತ್ರೆ, ಪೋಟಿಹುಳಿ, ಇವು ಪ್ರತ್ಯೇಕ ಎರಡೆರಡು ತೊಲ, ಮೆಣಸು, ಜೀರಿಗೆ, ಶುಂಠಿ, ಇವು ಪ್ರತ್ಯೇಕ ಒಂದೊಂದು ತೊಲ, ದಾಳಿಂಬರೆಶಿಪ್ಪೆ ನಾಲ್ಕು ತೊಲ, ದಾಲಚೀನಿ, ಯಾಲಕ್ಕಿ ಪ್ರತ್ಯೇಕ ಅರ್ಧ ತೂಲ, ಇವುಗಳನ್ನು ಸೇರಿಸಿ ಸಣ್ಣ ಚೂರ್ಣಮಾಡಿ ವಸ್ತ್ರಗಾಳಿತಮಾಡಿ ಇರಿಸಿಕೊಳ್ಳುವುದು, ಇದಕ್ಕೆ ಭಾಸ್ಕರ ಲವಣವೆಂಬದಾಗಿ ಹೆಸರು. ಈ ಚೂರ್ಣವನ್ನು ಒಂದು ಸಾರಿಗೆ ಒಂದು ಶಾಣ ಪ್ರಮಾಣವನ್ನು ಅಂದರೆ ಸುಮಾರು ಅರ್ಧ ತೊಲದಷ್ಟನ್ನು ಮೊಸರಿನ ತಿಳಿನೀರು, ಮಜ್ಜಿಗೆ, ಮದ್ಯ, ಯಾವುದಾದರೂ ಆಸವಾರಿಷ್ಟ ಈ ಅನುಪಾನಗಳಲ್ಲಿ ಕೊಡ ಬೇಕು. ವಾತಗುಲ್ಮ, ಶ್ಲೇಷ್ಮಗುಲ್ಮ, ಪ್ಲೀಹಾಭಿವೃದ್ಧಿ, ಉದರ, ಕ್ಷಯರೋಗ, ಮೂಲವ್ಯಾಧಿ, ಗ್ರಹಣಿ, ಎಂಬ ಭೇದಿ, ಕುಷ್ಟರೋಗ, ಮಲಬಂಧ, ಭಗಂದರ, ಶೋಭೆ, ಶೂಲೆ, ಉಬ್ಬಸ, ಕಮ್ಮು, ಆಮವಾತ, ಎದೆನೋವು, ಅಗ್ನಿಮಾಂದ್ಯ ಈ ರೋಗಗಳನ್ನು ಗುಣಪಡಿಸುತ್ತದೆ, ಜಠರಾಗ್ನಿ ದೀಪಕವಾಗಿಯೂ ಒಳ್ಳೇ ಪಚನ ಶಕ್ತಿಯನ್ನುಂಟುಮಾಡುತ್ತದೆ. ಲೋಕೋಪಕಾರಾರ್ಥವಾಗಿ ಭಾಸ್ಕರರೆಂಬವರು ಇದನ್ನು ಪ್ರಚುರಪಡಿಸಿರುತ್ತಾರೆ.

ಏಲಾಪ್ರಿಯಂಗುಮುಸ್ತಾನಿಕೋಲಮಜ್ಜಾಚಪಿಪ್ಪಲೀ ॥
ಶ್ರೀಚಂದನಂತಥಾಲಾಜಾಲವಂಗಂನಾಗಕೇಸರಂ ॥ ೧೪೯ ॥
ಏತಚ್ಚೂರ್ಣೀಕೃತಂಸರ್ವಂಸಿತಾಕ್ಷೌದ್ರಯುತಂಲಿಹೇತ್ ॥
ವಾತಪಿತ್ತಕಫೋದ್ಭೂತಾಂಛರ್ದಿಂಹಂತ್ಯತಿವೇಗತಃ ॥ ೧೫೦ ॥

ಯಾಲಕ್ಕಿ, ಪ್ರಿಯಂಗು ಎಂದರೆ ಸ್ವನಾಮ ಪ್ರಸಿದ್ಧವಾದ ಮೂಲಿಕೆ, ಭದ್ರ ಮುಸ್ತೆ, ಬೊರೇಬೀಜದೊಳಗಿರುವ ಪಪ್ಪು, ಹಿಪ್ಪಲಿ, ಶ್ರೀಗಂಧ, ಅರಳು, ಲವಂಗ ನಾಗಕೇಸರಿ, ಇವುಗಳನ್ನು ಸಮಭಾಗ ಸೇರಿಸಿ ಸೂಕ್ಷ್ಮಚೂರ್ಣಮಾಡಿ ಸಕ್ಕರೆ ಜೇನುತುಪ್ಪ ಇವುಗಳನ್ನು ಸೇರಿಸಿ ನೆಕ್ಕಿದರೆ ವಾತ, ಪಿತ್ತ, ಕಫ ಈ ದೋಷಗಳು ಪ್ರಕುಪಿತವಾಗಿ ಹುಟ್ಟುವ ವಮನವನ್ನು ನಿಲ್ಲಿಸುತ್ತದೆ

**ವ್ಯಾಘ್ರೀಜೀರಕಧಾತ್ರೀಣಾಂ ಚೂರ್ಣಂ ಮಧುಯುತಂ ಲಿಹೇತ್ ॥**
**ಊರ್ಧ್ವವಾತಮಹಾಶ್ವಾಸತಮಕೈರ್ವಿಮುಚ್ಯತೇ ಕ್ಷಣಾತ್ ॥ ೧೫೧ ॥**

ನೆಲಗುಳ್ಳದ ಬೇರು, ಜೀರಿಗೆ, ನೆಲ್ಲಿಕಾಯಿ ಇವುಗಳನ್ನು ನುಣ್ಣಗೆ ಚೂರ್ಣ ಮಾಡಿ ವಸ್ತ್ರಗಾಳಿತಮಾಡಿ ಜೇನುತುಪ್ಪದಲ್ಲಿ ಕಲಸಿ ನೆಕ್ಕಿಸಿದರೆ ಊರ್ಧ್ವವಾತ ಎಂದರೆ ಮೇಲಕ್ಕೆ ಉಸಿರು ನೇದುವುದು, ಮಹಾಶ್ವಾಸ, ಊರ್ಧ್ವಶ್ವಾಸ ಪ್ರಭೇದವಾದ ಮಹಾಶ್ವಾಸವೆಂಬ ರೋಗವೂ, ತಮಕಶ್ವಾಸವೂ ಒಂದು ಕ್ಷಣ ಮಾತ್ರದಲ್ಲಿ ಗುಣಹೊಂದುತ್ತವೆ.

**ಮೂಲಂ ಪತ್ರಂ ಫಲಂ ಪುಷ್ಪಂ ತ್ವಚಂ ನಿಂಬಾತ್ಸಮಾಹರೇತ್ ॥**
**ಸೂಕ್ಷ್ಮಚೂರ್ಣಮಿದಂ ಕುರ್ಯಾತ್ಪಲಪಂಚದಶೋನ್ಮಿತಂ ॥ ೧೫೨ ॥**
**ಲೋಹಭಸ್ಮಹರೀತಕ್ಯಾ ಚಕ್ರಮರ್ದಕಚಿತ್ರಕೌ ॥**
**ಭಲ್ಲಾತಕಂ ವಿಡಂಗಾನಿ ಶರ್ಕರಾ ತಿಲಕಂ ನಿಶಾ ॥ ೧೫೩ ॥**
**ಪಿಪ್ಪಲೀ ಮರಿಚಂ ಶುಂಠೀ ಬಾಕುಚೀ ಕೃತಮಾಲಕಃ ॥**
**ಗೋಕ್ಷುರಶ್ಚ ಪಲೋನ್ಮಾನಶ್ಚೈಕೈಕಂ ಧಾರಯೇತ್ಸುಧೀಃ ॥ ೧೫೪ ॥**
**ಸರ್ವಮೇಕೀಕೃತಂ ಚೂರ್ಣಂ ಭೃಂಗರಾಜೇನ ಭಾವಯೇತ್ ॥**
**ಅಷ್ಟಭಾಗಾವಶಿಷ್ಟೇನ ಖದಿರಾಸನವಾರಿಣಾ ॥ ೧೫೫ ॥**
**ಭಾವಯಿತ್ವಾ ಚ ಸಂಶೋಷ್ಯ ಕರ್ಷಂ ಪ್ರಾತಸ್ತತಃ ಪಿಬೇತ್ ॥**
**ಖದಿರಾಸನತೋಯೇನ ಸರ್ಪಿಷಾ ಪಯಸಾಥವಾ ॥ ೧೫೬ ॥**
**ಮಾಸೇನ ಸರ್ವಕುಷ್ಠಾನಿ ವಿನಿಹಂತಿ ರಸಾಯನಂ ॥**
**ಪಂಚನಿಂಬಮಿದಂ ಚೂರ್ಣಂ ಸರ್ವರೋಗಪ್ರಣಾಶನಂ ॥ ೧೫೭ ॥**

ಪಂಚನಿಂಬಚೂರ್ಣ—ಬೇವಿನಬೇರು, ಬೇವಿನ ಎಲೆ, ಬೇವಿನಕಾಯಿ, ಬೇವಿನ ಹೂವು, ಬೇವಿನಸಾಸು, ಇವೈದನ್ನೂ ತಂದು ಒಣಗಿಸಿ ಕುಟ್ಟಿ ನುಣ್ಣಗೆ ಚೂರ್ಣ ಮಾಡಿ ಹದಿನೈದು ಪಲದಷ್ಟು ಚೂರ್ಣವನ್ನು ತೂಕಮಾಡಿಟ್ಟುಕೊಳ್ಳುವುದು, ಲೋಹ ಭಸ್ಮ, ಅಳಲೇಕಾಯಿ, ಚಗಟೆಬೀಜ, ಚಿತ್ರಮೂಲದಬೇರು, ಗೇರುಬೀಜ, ವಾಯು ವಿಡಂಗ, ಸಕ್ಕರೆ, ನಲ್ಲೀಕಾಯಿ, ಅರಿಸಿನ, ಹಿಪ್ಪಲಿ, ಮೆಣಸು, ಶುಂಠಿ, ಬಾವಂಚಿ ಬೀಜ, ಕಟೇತೊಪ್ಪು, ನೆಗ್ಗಿಲು, ಈ ಪದಾರ್ಥಗಳು ಪ್ರತಿಯೊಂದೂ ಒಂದೊಂದು ಪಲ ಸೇರಿಸಿ ನುಣ್ಣನೆ ಚೂರ್ಣಮಾಡಿ ಹಿಂದಿನ ಚೂರ್ಣದೊಡನೆ ಬೆರಸಿ ಗರುಗದ ಸೊಪ್ಪಿನ ರಸದಲ್ಲಿ ಭಾವನೆಕೊಡಬೇಕು. ಬಳಿಕ ಗರುಗದ ಸೊಪ್ಪಿನ ರಸದಲ್ಲಿ ಮೇಲಿನ ಚೂರ್ಣವನ್ನು ನೆನಸಿ ಒಂದು ದಿವಸ ಬಿಟ್ಟಿದ್ದು ನೆರಳಲ್ಲಿ ಒಣಗಿಸಬೇಕು, ನಂತರ ಕಗ್ಗಲಿಚಕ್ಕೆ, ಅಸನ ಎಂದರೆ ರಾಳದ ಗಿಡದ ಚಕ್ಕೆ, ಇವುಗಳ ಕಷಾಯಮಾಡಿ ಅಷ್ಟಮಾಂಶ ಕಷಾಯ ಇಳಿಸಿಕೊಂಡು ಅದ

ಮುಸಲೀಕಂದವೆಂದರೆ ನೆಲದೆಂಗಿನ ಗೆಡ್ಡೆಯು ಚೂರ್ಣದ ಜೊತೆಗೆ ಅನ್ನುತಬಳ್ಳಿಯ ಸತ್ವವನ್ನು ನಸುಗುನ್ನಿಯ ಬೀಜದಚೂರ್ಣ, ಆನೆನೆಗ್ಗಲ ಮುಳ್ಳಿನ ಚೂರ್ಣ, ಬೂರಗದ ಮೇಣ, ಸಕ್ಕರೆ, ನೆಲ್ಲಿಕಾಯಿಚೂರ್ಣ ಇವುಗಳನ್ನು ಸೇರಿಸಿ ತುಪ್ಪ ಮತ್ತು ಹಾಲಿನೊಡನೆ ಸೇರಿಸಿ ಕುಡಿಯೋಣದರಿಂದ ಕಾಮವೃದ್ಧಿಯಾಗುತ್ತದೆ ಅಂದರೆ ವೀರ್ಯವೃದ್ಧಿಯಾಗುತ್ತದೆಂಬ ಭಾವ.

ಚಿತ್ರಕಸ್ತ್ರಿಫಲಾಮುಸ್ತಂವಿಡಂಗಂತ್ರ್ಯೂಷಣಾನಿಚ ॥ ೧೬೩ ॥
ಸಮಭಾಗಾನಿಕಾರ್ಯಾಣಿನವಭಾಗಾಹತಾಯಸಃ ॥
ಏತದೇಕೀಕೃತಂಚೂರ್ಣಂಮಧುಸರ್ಪಿರ್ಯುತಂಲಿಹೇತ್ ॥ ೧೬೪ ॥
ಗೋಮೂತ್ರಮಥವಾತಕ್ರಮನುಪಾನೇಪ್ರಶಸ್ಯತೇ ॥
ಪಾಂಡುರೋಗಂಜಯತ್ಯುಗ್ರಂಹೃದ್ರೋಗಂಚಭಗಂದರಂ ॥೧೬೫॥
ಶೋಥಕುಷ್ಠೋದರಾರ್ಶಾಂಸಿಮಂದಾಗ್ನಿಮರುಚಿಂಕ್ರಿಮೀನ್ ॥

ನವಾಯಸಚೂರ್ಣ—ಚಿತ್ರಮೂಲದ ಬೇರು, ತ್ರಿಫಲ, ಭದ್ರಮುಸ್ತೆ, ವಾಯುವಿಡಂಗ, ತ್ರ್ಯೂಷಣ (ಶುಂಠಿ, ಹಿಪ್ಪಲಿ, ಮೆಣಸು) ಇವುಗಳನ್ನು ಸಮಪ್ರಮಾಣ ಸೇರಿಸಿ ಚೂರ್ಣಮಾಡಿಕೊಳ್ಳುವುದು, ಇದರಷ್ಟೇ ಲೋಹಭಸ್ಮವನ್ನು ಸೇರಿಸುವುದು, ಈ ಎರಡನ್ನೂ ಕೂಡಿಸಿ ಜೇನುತುಪ್ಪ ಮತ್ತು ತುಪ್ಪದೊಡನೆ ಕಲಸಿ ನೆಕ್ಕಿಕೊಳ್ಳುವುದು, ನಂತರ ಗೋಮೂತ್ರವನ್ನಾಗಲಿ ಮಜ್ಜಿಗೆಯನ್ನಾಗಲಿ ಅನುಪಾನವಾಗಿ ಕುಡಿಯುವುದು, ಇದರಿಂದ ಬಹು ಭಯಂಕರವಾದ ಪಾಂಡುರೋಗ, ಹೃದಯರೋಗ, ಭಗಂದರವೆಂಬವ್ರಣ, ಶೋಥೆ, ಕುಷ್ಠ, ಉದರರೋಗಗಳು, ಮೂಲವ್ಯಾಧಿ, ಅಗ್ನಿಮಾಂದ್ಯ, ಅರೋಚಕ, ಕ್ರಿಮಿರೋಗಗಳು, ಇವುಗಳೆಲ್ಲವೂ ಗುಣಹೊಂದುತ್ತವೆ.

ಆಕಾರಕರಭಶ್ಶುಂಠೀಕಂಕೋಲಂಕುಂಕುಮಂಕಣಾ ॥ ೧೬೬ ॥
ಜಾತೀಫಲಾಲವಂಗಂಚಚಂದನಂಚೇತಿಕಾರ್ಷಿಕಾನ್ ॥
ಚೂರ್ಣಾನಿಮಾನತಃಕುರ್ಯಾದಹಿಫೇನಂಪಲೋನ್ಮಿತಂ ॥ ೧೬೭ ॥
ಸರ್ವಮೇಕೀಕೃತಂಚೂರ್ಣಂಮಾಷೈಕಂಮಧುನಾಲಿಹೇತ್ ॥
ಶುಕ್ರಸ್ತಂಭಕರಂಚೂರ್ಣಂಪುಂಸಾಮಾನಂದಕಾರಕಂ ॥ ೧೬೮ ॥
ನಾರೀಣಾಂಪ್ರೀತಿಜನನಂಸೇವೇತನಿಶಿಕಾಮುಕಃ ॥

ಆಕಾರಕರಭಾದಿಚೂರ್ಣ—ಅಗಳುಕರೆ, ಶುಂಠಿ, ಕಂಕೋಲವೆಂಬ ಗಂದಿಗೆ ಜಿನಸು, ಕುಂಕುಮಕೇಸರಿ, ಹಿಪ್ಪಲಿ, ಜಾಯಿಕಾಯಿ, ಲವಂಗ, ಚಂದನ ಇವುಗಳು ಒಂದೊಂದೂ ಒಂದೊಂದು ಕರ್ಷಪ್ರಮಾಣ (ಎರಡುತೊಲ) ಸೇರಿಸಿ ಚೂರ್ಣ

ಮಾಡಿಕೊಂಡು ಇದರ ಜೊತೆಗೆ ಅಫೀಮು ಒಂದು ಪಲ (ಮೂರುತೊಲ) ಸೇರಿಸಿ ಎಲ್ಲವನ್ನೂ ಒಂದಾಗಿ ಕೂಡಿಸಿ ಒಂದು ಮಾಷಪ್ರಮಾಣ (ಅರುಗುಲ ಗಂಜಿ ತೂಕ) ಜೇನುತುಪ್ಪದೊಡನೆ ತೆಗದುಕೊಳ್ಳಬೇಕು. ಈ ಚೂರ್ಣವು ವೀರ್ಯ ಸ್ತಂಭಕವಾಗಿ ಪುರುಷರಿಗೆ ಆನಂದ ಜನಕವಾಗಿಯೂ ಸ್ತ್ರೀಯರಿಗೂ ಸಂತೋಷ ಜನಕವಾಗಿರುತ್ತದೆ.

ಇಲ್ಲಿಗೆ ಆರನೆಯ ಅಧ್ಯಾಯ ಸಂಪೂರ್ಣ.



# ಏಳನೆಯ ಅಧ್ಯಾಯ.

ವಟಿಕಾಶ್ಚಾಥಕಥ್ಯಂತೇತನ್ನಾಮಗುಟಿಕಾವಟೀ ||
ಮೋದಕೋವಟಿಕಾಪಿಂಡೀಗುಡೋವರ್ತಿಸ್ತಥೋಚ್ಯತೇ || ೧ ||
ಲೇಹವತ್ಸಾಧ್ಯತೇವಹ್ನೌಗುಡೋವಾಶರ್ಕರಾತಥಾ ||
ಗುಗ್ಗುಲುರ್ವಾಕ್ಷಿಪೇತ್ತತ್ರಚೂರ್ಣಂತನ್ನಿರ್ಮಿತಾವಟೀ || ೨ ||
ಕುರ್ಯಾದವಹ್ನಿಸಿದ್ಧೇನಕ್ವಚಿದ್ಗುಗ್ಗುಲುನಾವಟೀಂ ||
ದ್ರವೇಣಮಧುನಾವಾಪಿಗುಟಿಕಾಂಕಾರಯೇದ್ಬುಧಃ || ೩ ||

ಈ ಅಧ್ಯಾಯದಲ್ಲಿ ಔಷಧರೂಪವಾಗಿ ಉಪಯೋಗಿಸುವ ಗುಳಿಗೆಗಳನ್ನು ನಿರ್ಮಾಣ ಮಾಡುವ ಕ್ರಮವನ್ನು ವಿವರಿಸುತ್ತಾನೆ—ಈ ಗುಳಿಗೆಗೆ ವೈದ್ಯಕ ಪರಿಭಾಷೆಯಲ್ಲಿ ಗುಟಿಕ, ವಟಿ, ಮೋದಕ, ವಟಿಕ, ಪಿಂಡೀ, ಗುಡ, ವರ್ತಿ ಎಂಬ ತಾಗಿ ಅದರ ಉಪಯೋಗವನ್ನನುಸರಿಸಿಯೂ ಅದರ ನಿರ್ಮಾಣ ಕ್ರಮವನ್ನನು ಸರಿಸಿಯೂ ಹೆಸರುಗಳನ್ನು ಕೊಡುತ್ತಾರೆ, ಇವುಗಳನ್ನು ಮಾಡುವ ಕ್ರಮವಾ ದರೂ ಹೇಗಂದರೆ—ಮುಂದೆ ಲೇಹಪ್ರಕರಣದಲ್ಲಿ ಲೇಹಗಳನ್ನು ತಯಾರಿಸುವು ದಕ್ಕೆ ಹೇಳುವಂತೆಯೇ ಬೆಲ್ಲ ಸಕ್ಕರೆ ಇವುಗಳ ಪಾಕವನ್ನಿಟ್ಟು ಪಾಕವು ಸಿದ್ಧವಾದ ಮೇಲೆ ಅದರಲ್ಲಿ ಚೂರ್ಣವನ್ನು ಸೇರಿಸಿಕೊಂಡಾಗಲಿ ಅಥವಾ ಗುಗ್ಗುಳವೆಂಬ ಅಂಟುಪದಾರ್ಥದ ಜೊತೆಯಲ್ಲಿ ಚೂರ್ಣಗಳನ್ನು ಸೇರಿಸಿ ಹದವಾಗುವಂತೆಮಾಡಿ ಯಾಗಲಿ ಗುಳಿಗೆಗಳನ್ನು ಕಟ್ಟಬೇಕು. ಈ ಗುಗ್ಗುಳವೆಂಬ ಅಂಟುಪದಾರ್ಥದ ಜೊತೆಯಲ್ಲಿ ಚೂರ್ಣವನ್ನು ಸೇರಿಸಿ ಗುಳಿಗೆಯಾಗುವಂತೆ ಹದಗೊಳಿಸಲು ಎರಡು ಮಾರ್ಗಗಳುಂಟು, ಮೊದಲನೆಯದು ಬೆಂಕಿಯ ಶಾಖದ ಸಂಪರ್ಕದಿಂದ ಎರಡನೆ ಯದು ಪೂರ್ತಾ ಅಗ್ನಿ ಸಂಪರ್ಕವಿಲ್ಲದಂತೆ, ಕೆಲವು ಸಂದರ್ಭಗಳಲ್ಲಿ ಜೇನು, ತುಪ್ಪ ಮೊದಲಾದವುಗಳನ್ನು ಚೂರ್ಣಕ್ಕೆ ಹಾಕಿ ಕಲಸಿ ಗುಳಿಗೆ ಕಟ್ಟುವುದೂ ಉಂಟು. ಈ ರೀತಿಯಾಗಿ ವೈದ್ಯನು ರೋಗಾನುಗುಣವಾಗಿ ಕಾಲಾನುಗುಣ ವಾಗಿ ಮಾಡಿಕೊಳ್ಳಬೇಕು.

ಮುಳ್ಳು, ಚಿತ್ರಮೂಲ, ಚವ್ಯ ಇವುಗಳು ಪ್ರತಿಯೊಂದೂ ಕರ್ಷ ಪ್ರಮಾಣ ವೆಂದರೆ ಎರಡು ತೊಲ, ಚೂರ್ಣದಗೆಡ್ಡೆ ಎಂಟು ಪಲ ಅಂದರೆ ಇಪ್ಪತ್ತನಾಲ್ಕು ತೊಲ, ವೃದ್ಧದಾರು ಎಂಬ ಮೂಲಿಕೆ ನಾಲ್ಕು ಪಲ ಅಂದರೆ ಹನ್ನೆರಡು ತೊಲ, ನಾಲ್ಕು ಪಲ ಗೇರು, ಇವಿಷ್ಟನ್ನೂ ಸೇರಿಸಿ ಒಂದು ದ್ರೋಣ ಪರಿಮಾಣ ಅಂದರೆ ಒಂದು ಸಾವಿರದ ಇಪ್ಪತ್ತನಾಲ್ಕು ತೊಲ ನೀರಿನಲ್ಲಿ ಕಷಾಯವಿಟ್ಟು ನಾಲ್ಕರಲ್ಲಿ ಒಂದು ಅಂಶ ಕಷಾಯ ಇಳಿಸಿಕೊಂಡು ಹಿಂದೆ ಹೇಳಿದ ಕಷಾಯದ್ರವ್ಯಗಳ ಮೂರರಷ್ಟು ತೂಕ ಬೆಲ್ಲವನ್ನು ಈ ಕಷಾಯದಲ್ಲಿ ಹಾಕಿ ಪುನಶ್ಚ ಕಾಯಿಸು ವುದಕ್ಕೆ ಆರಂಭಿಸಬೇಕು, ಪಾಕಬಂದದ್ದನ್ನು ನೋಡಿಕೊಂಡು ಈ ಕೆಳಗೆ ಹೇಳುವ ಪದಾರ್ಥಗಳ ಚೂರ್ಣವನ್ನು ಅದರಲ್ಲಿ ಹಾಕಬೇಕು, ಪದಾರ್ಥಗಳು ಯಾವು ವೆಂದರೆ—ಚಿತ್ರಮೂಲದ ಬೇರಿನ ತೊಪ್ಪೆ, ತಿಗಡೆ, ಜೇಪಾಲ, ಚವ್ಯ (ಮೆಣಸಿನ ಬಳ್ಳಿ) ಇವು ಮೂರರೂ ಒಂದೊಂದು ಪಲದಷ್ಟು (ಮೂರು ತೊಲ) ತ್ರಿಕಟು (ಶುಂಠಿ, ಹಿಪ್ಪಲಿ, ಮೆಣಸು), ಯಾಲಕ್ಕಿ, ನೆಲ್ಲಿಕಾಯಿ, ತ್ವಕ್ ಎಂಬ ಗಂದಿಗೆ ದಿನಸು, ಈ ದಿನಸುಗಳು ಪ್ರತ್ಯೇಕ ಮೂರು ಮೂರು ಪಲ ಈ ರೀತಿ ಸೇರಿಸಿ ಚೂರ್ಣಮಾಡಿ ಲೇಹದಂತೆ ಪಕ್ವಮಾಡಿ ಇಳಿಸಿಕೊಂಡು ಆರಿದ ಮೇಲೆ ಒಂದು ಪ್ರಸ್ಥ (ಅರುವತ್ತನಾಲ್ಕು ತೊಲ) ಜೇನುತುಪ್ಪವನ್ನು ಅದರಲ್ಲಿ ಹಾಕಿ ಕೂಡಿಸಿ ಇರಿಸಿಕೊಳ್ಳುವುದು, ಇಲ್ಲಿಗೆ ಬಾಹುಶಾಲಗುಡವು ತಯಾರಾದ ಹಾಗಾಯಿತು, ಇದನ್ನು ಅರ್ಶೋರೋಗಗಳು, ಗುಲ್ಮರೋಗ, ವಾತೋದರ, ಆಢ್ಯವಾತ, ನೆಗಡಿ, ಕ್ಷಯರೋಗ ಸಮ್ಬಂಧವಾದ ಪೀನಸ, ಹಲೀಮಕ (ಕಾಮಲೆಯಲ್ಲಿ ಭೇದ) ಪಾಂಡುರೋಗ, ಮೇಹರೋಗ ಇವುಗಳನ್ನು ಗುಣಮಾಡಲು ಸೇವಿಸಬಹುದು. ಉತ್ತಮ ರಸಾಯನವಾಗಿಯೂ ಇದೆ.

ಮರಿಚಂಕರ್ಷಮಾತ್ರಂಸ್ಯಾತ್ಪಿಪ್ಪಲೀಕರ್ಷಸಂಮಿತಾ ॥ ೧೩ ॥
ಅರ್ಧಕರ್ಷೋಯವಕ್ಷಾರಃಕರ್ಷಯುಗ್ಮಂಚದಾಡಿಮಂ ॥
ಏತಚ್ಚೂರ್ಣೀಕೃತಂಯುಂಜ್ಯಾದಷ್ಟಕರ್ಷಗುಡೇನಹಿ ॥ ೧೪ ॥
ಶಾಣಪ್ರಮಾಣಾಂಗುಟಿಕಾಂಕೃತ್ವಾವಕ್ತ್ರೇಣಧಾರಯೇತ್ ॥
ಅಸ್ಯಾಃಪ್ರಭಾವಾತ್ಸರ್ವೇಪಿಕಾಸಾಯಾಂತ್ಯೇವಸಂಕ್ಷಯಂ ॥ ೧೫ ॥
ಗುಡಶುಂಠೀಶಿವಾಮುಸ್ತೈರ್ಗುಟಿಕಾಂಧಾರಯೇನ್ಮುಖೇ ॥
ಶ್ವಾಸಕಾಸೇಷುಸರ್ವೇಷುವಿಭೀತಂವಾಪಿಕೇವಲಂ ॥ ೧೬ ॥

ಮರಿಚಾದಿಗುಟಿಕ—ಮೆಣಸು ಎರಡು ತೊಲ, ಹಿಪ್ಪಲಿ ಎರಡು ತೊಲ, ಒಂದು ತೊಲ ಯವಕ್ಷಾರ, ನಾಲ್ಕು ತೊಲ ದಾಳಿಂಬರೆಯ ಸಿಪ್ಪೆ, ಇವೆಲ್ಲವನ್ನೂ ಚನ್ನಾಗಿ ಚೂರ್ಣಿಸಿ ಹದಿನಾರು ತೊಲ ಬೆಲ್ಲವನ್ನು ಸೇರಿಸಿ, ಅರ್ಧ ತೊಲ ಪರಿ ಮಾಣದ ಗುಳಿಗೆಗಳನ್ನು ಮಾಡಿ ಬಾಯಲ್ಲಿಟ್ಟುಕೊಳ್ಳುವುದು, ಇದರಿಂದ ಎಲ್ಲಾ ಬಗೆಯ ಕೆಮ್ಮುಗಳೂ ನಿವಾರಣೆಯಾಗುತ್ತವೆ.

ಗುಡವಟಿಕ—ಜೆಲ್ಲ, ಶುಂಠಿ, ಆಳಲೇಕಾಯಿ, ಭದ್ರಮುಸ್ತೆ, ಇವೆಲ್ಲವನ್ನೂ ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣಿಸಿ ಗುಳಿಗೆ ಕಟ್ಟಿ ಬಾಯಲ್ಲಿ ಹಾಕಿಕೊಂಡರೂ ಅಥವಾ ತಾರೇಕಾಯಿನ ತೊಪ್ಪೆಯೊಂದನ್ನೇ ಜಗಿದರೂ ಶ್ವಾಸಕಾಸಗಳು ಗುಣವಾಗುತ್ತವೆ.

ಆಮಲಂಕಮಲಂಕುಷ್ಠಂಲಾಜಾಶ್ಚವಟರೋಹಕಃ ॥
ಏತಚ್ಚೂರ್ಣಸ್ಯಮಧುನಾಗುಟಿಕಾಂಧಾರಯೇನ್ಮುಖೇ ॥ ೧೭ ॥
ತೃಷ್ಣಾಂಪ್ರವೃದ್ಧಾಂಹಂತ್ಯೇಷಾಮುಖಶೋಷಂಚದಾರುಣಂ ॥

ನೆಲ್ಲಿಯಕಾಯಿ, ಕಮಲದ ಹುವ್ವು, ಚಂಗಲಕೋಷ್ಟ, ಆಲದ ಮರದ ಕುಡಿ ಇವುಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣಮಾಡಿ ಜೇನು ಸೇರಿಸಿ ಗುಳಿಗೆಮಾಡಿ ಬಾಯಿನಲ್ಲಿರಿಸುವುದರಿಂದ ಬಾಯಾರಿಕೆ, ಬಾಯಿ ಒಣಗಿಹೋಗುವುದು ಇವುಗಳೆಲ್ಲವೂ ಕಡಮೆಯಾಗುತ್ತವೆ.

ವಿಡಂಗಂನಾಗರಂತೃಷ್ಣಾಪಥ್ಯಾಮಲವಿಭೀತಕಂ ॥ ೧೮ ॥
ವಚಾಗುಡೂಚೀಭಲ್ಲಾತಂಸದ್ವಿಷಂಚಾತ್ರಯೋಜಯೇತ್ ॥
ಏತಾನಿಸಮಭಾಗಾನಿಗೋಮೂತ್ರೇಣೈವಪೇಷಯೇತ್ ॥ ೧೯ ॥
ಗುಂಜಾಭಾಗುಟಿಕಾಕಾರ್ಯಾದದ್ಯಾದಾರ್ದ್ರಕಜೈರಸೈಃ ॥
ಏಕಾಮಜೀರ್ಣಗುಲ್ಮೇಷುದ್ವೇವಿಷೂಚ್ಯಾಂಪ್ರದಾಪಯೇತ್ ॥೨೦॥
ತಿಸ್ರಶ್ಚಸರ್ಪದಷ್ಟೇಷುಚತಸ್ರಸ್ಸನ್ನಿಪಾತಿಕೇ ॥
ವಟೀಸಂಜೀವನೀನಾಮ್ನಾಸಂಜೀವಯತಿಮಾನವಂ ॥ ೨೧ ॥

ಸಂಜೀವಿನೀವಟಿ—ವಾಯುವಿಡಂಗ, ಶುಂಠಿ, ಹಿಪ್ಪಲಿ, ಅಳಲೇಕಾಯಿ, ನೆಲ್ಲೀಕಾಯಿ, ತಾರೇಕಾಯಿ, ಬಜೆ, ಅಮೃತಬಳ್ಳಿ, ಗೇರುಬೀಜ, ಶುದ್ಧವಾದ ವಿಷ (ವತ್ಸನಾಭಿ) ಇವುಗಳೆಲ್ಲವನ್ನೂ ಸಮಪ್ರಮಾಣದಲ್ಲಿ ಸೇರಿಸಿ ಗೋಮೂತ್ರದಲ್ಲಿ ಅರೆದು ಗುಲಗಂಜಿಯಷ್ಟು ಪ್ರಮಾಣ ಗುಳಿಗೆಗಳನ್ನು ಮಾಡುವುದು, ಸಿದ್ಧವಾದ ಗುಳಿಗೆಯನ್ನು ಅಜೀರ್ಣ ಮತ್ತು ಗುಲ್ಮರೋಗಗಳಲ್ಲಿ ಹೊತ್ತಿಗೆ ಒಂದನ್ನೂ ವಿಷೂಚಿ ರೋಗದಲ್ಲಿ ಎರಡನ್ನೂ, ನಾಗರಹಾವಿನಿಂದ ಕಡಿಯಲ್ಪಟ್ಟವನಿಗೆ ಮೂರನ್ನೂ, ಸನ್ನಿಪಾತ ಜ್ವರದಲ್ಲಿ ಹೊತ್ತಿಗೆ ನಾಲ್ಕನ್ನೂ ಈ ಪ್ರಕಾರ ಹಸೀ ಶುಂಠಿಯ ರಸದಲ್ಲಿ ಕೊಡಬೇಕು. ಸಂಜೀವನವೆಂಬ ಸಿದ್ಧೌಷಧದಂತೆ ಇದು ರೋಗಗಳನ್ನು ಜಯಿಸುತ್ತದೆ.

ವ್ಯೋಷಾಮ್ಲವೇತಸಂಚವ್ಯಂತಾಲೀಸಂಚಿತ್ರಕಂತಥಾ ॥
ಜೀರಕಂತಿಂತಿಡೀಕಂಚಪ್ರತ್ಯೇಕಂಕರ್ಷಭಾಗಿಕಂ ॥೨೨॥
ತ್ರಿಸುಗಂಧಂತ್ರಿಶಾಣಂಸ್ಯಾದ್ಗುಡಸ್ಯಾತ್ಕರ್ಷವಿಂಶತಿಃ ॥

**ವ್ಯೋಷಾದಿಗುಟಿಕಾಸೇಯಂಪೀನಸಶ್ವಾಸಕಾಸಜಿತ್ ॥ ೨೩ ॥**
**ರುಚಿಸ್ವರಕರೀಖ್ಯಾತಾಪ್ರತಿಶ್ಯಾಯಪ್ರಣಾಶಿನೀ ॥**

ವ್ಯೋಷಾದಿಗುಟಿಕ—ವ್ಯೋಷವೆಂದರೆ ಶುಂಠಿ, ಹಿಪ್ಪಲಿ, ಮೆಣಸು, ಅಮ್ಲವೇತಸವೆಂದರೆ ಪೋಟೀಹುಳಿ, (ಪುಲ್ಲ ಪುಬ್ಬಲಿ) ಚವ್ಯವೆಂದರ ಮೆಣಸಿನಬಳ್ಳಿ, ತಾಳೀಸಪತ್ರೆ, ಚಿತ್ರಮೂಲದ ಬೇರಿನ ತೊಪ್ಪ, ಜೀರಿಗ, ಹುಣಿಸೇಹಣ್ಣು, ಪ್ರತಿಯೊಂದು ಎರಡು ತೂಲವಷ್ಟು, ತ್ರಿಸುಗಂಧ (ಯಾಲಕ್ಕಿ, ಲವಂಗಪತ್ರೆ, ಜಾಯಿಪತ್ರೆ) ಒಂದೂವರೆ ತೊಲ ಇವುಗಳ ಚೂರ್ಣಮಾಡಿ ಚೂರ್ಣದ ಜೊತೆಗೆ ಇಪ್ಪತ್ತು ಕರ್ಷವೆಂದರೆ ನಲವತ್ತು ತೊಲದಷ್ಟು ಬೆಲ್ಲ ಸೇರಿಸಿ ಗುಳಿಗೆಗಳನ್ನು ಮಾಡುವುದು, ಇದರ ಸೇವನೆಯಿಂದ ಪೀನಸ, ಉಬ್ಬಸ, ಕೆಮ್ಮು, ಇವುಗಳು ಗುಣಹೊಂದುತ್ತವೆ, ನಾಲಿಗೆಗೆ ರುಚಿಯನ್ನುಂಟುಮಾಡುತ್ತದೆ, ನೆಗಡಿಯನ್ನು ಹೋಗಲಾಡಿಸುತ್ತದೆ

**ಆಮೇಷುಸಗುಡಾಂಶುಂಠೀಮಜೀರ್ಣೇಗುಡಪಿಪ್ಪಲೀಂ ॥ ೨೪ ॥**
**ಕೃಚ್ಛ್ರೇಜೀರಗುಡಂದದ್ಯಾದರ್ಶಸ್ಸುಸಗುಡಾಭಯಾಂ ॥**

ಗುಡಚತುಷ್ಟಯಯೋಗ—ಆಮದೋಷದಲ್ಲಿ ಶುಂಠಿ ಮತ್ತು ಬೆಲ್ಲವನ್ನು ಕೊಡಬೇಕು. ಅಜೀರ್ಣದೋಷವಲ್ಲಿ ಬೆಲ್ಲವನ್ನೂ ಹಿಪ್ಪಲಿಯನ್ನೂ ಕೊಡಬೇಕು. ಮೂತ್ರ ಹೊಯ್ಯುವುದು ಕಷ್ಟವಾಗಿ ಉರಿಯಾಗುತಿರುವಲ್ಲಿ ಜೀರಿಗೆ ಮತ್ತು ಬೆಲ್ಲವನ್ನು ಕೊಡಬೇಕು ಮೂಲವ್ಯಾಧಿ ಕೆರಳಿದಾಗ ಅಳಲೆಕಾಯಿ ಮತ್ತು ಬೆಲ್ಲವನ್ನು ಕೊಡುವುದು.

**ವೃದ್ಧದಾರುಕಭಲ್ಲಾತಶುಂಠೀಚೂರ್ಣೇನಯೋಜಿತಃ ॥ ೨೫ ॥**
**ಮೋದಕಸ್ಸಗುಡೋಹನ್ಯಾತ್ ಷಡ್ವಿಧಾರ್ಶಃಕೃತಾಂರುಜಂ ॥**

ವೃದ್ಧದಾರುವೆಂಬ ಮೂಲಿಕೆ, ಗೇರುಬೀಜ, ಶುಂಠಿಯ ಹುಡಿ, ಇವುಗಳ ಜೊತೆಗೆ ಬೆಲ್ಲವನ್ನು ಸೇರಿಸಿ ಗುಳಿಗೆಗಳನ್ನು ಮಾಡಿ ತಿನ್ನುವುದರಿಂದ ಮೂಲವ್ಯಾಧಿ ಸಂಬಂಧವಾದ ಸಮಸ್ತ ನೋವನ್ನೂ ನಿವಾರಣವಾಗುತ್ತದೆ.

**ಶುಷ್ಕಸೂರಣಚೂರ್ಣಸ್ಯಭಾಗಾನ್ ದ್ವಾತ್ರಿಂಶದಾಹರೇತ್ ॥ ೨೬ ॥**
**ಭಾಗಾನ್ ಷೋಡಶಚಿತ್ರಸ್ಯಶುಂಠ್ಯಾಭಾಗಚತುಷ್ಟಯಂ ॥**
**ದ್ವೌಭಾಗೌಮರಿಚಸ್ಯಾಪಿಸರ್ವಾಣ್ಯೇಕತ್ರಚೂರ್ಣಯೇತ್ ॥ ೨೭ ॥**
**ಗುಡೇನಪಿಂಡಿಕಾಂಕುರ್ಯಾದರ್ಶಸಾಂನಾಶನೀಂಪರಾಂ ॥**

ಸೂರಣಪಿಂಡಿಯನ್ನು ಹೇಳುತ್ತಾನೆ—ಚೂರ್ಣದ ಗೆಡ್ಡೆಯನ್ನು ಒಣಗಿಸಿ ಅದನ್ನು ಮೂವತ್ತೆರಡು ಭಾಗ ತೆಗದುಕೊಳ್ಳುವುದು, ಚಿತ್ರಮೂಲದ ಹದಿನಾರು

ಭಾಗ, ಶುಂಠಿ ನಾಲ್ಕು ಭಾಗ, ಮೆಣಸು ಎರಡು ಭಾಗ, ಈ ರೀತಿಯಾಗಿ ಸೇರಿಸಿ ಎಲ್ಲವನ್ನೂ ಚೂರ್ಣಮಾಡಿ ತಕ್ಕಷ್ಟು ಅಂದರೆ ಉಕ್ತಪ್ರಮಾಣದಿಂದ ಬೆಲ್ಲವನ್ನು ಸೇರಿಸಿ ವಟಕಗಳನ್ನು ಮಾಡಿ ಸೇವಿಸುತ್ತ ಬರೋಣದರಿಂದ ಸಮಸ್ತ ವಿಧಗಳಾದ ಅರ್ಶೋರೋಗಗಳು ಗುಣಹೊಂದುತ್ತವೆ.

ಸೂರಣೋವೃದ್ಧದಾರುಶ್ಚಭಾಗೈಃಷೋಡಶಭಿಃಪೃಥಕ್ ॥ ೨೮ ॥
ಮುಸಲೀಚಿತ್ರಕೌಜ್ಞೇಯಾವಷ್ಟಭಾಗಮಿತೌಪೃಥಕ್ ॥
ಶಿವಾವಿಭೀತಕೀಧಾತ್ರೀವಿಡಂಗಂನಾಗರಂಕಣಾ ॥ ೨೯ ॥
ಭಲ್ಲಾತಃಪಿಪ್ಪಲೀಮೂಲಂತಾಲೀಸಂಚಪೃಥಕ್‌ಪೃಥಕ್ ॥
ಚತುರ್ಭಾಗಪ್ರಮಾಣಾನಿತ್ವಗೇಲಾಮರಿಚಂತಥಾ ॥ ೩೦ ॥
ದ್ವಿಭಾಗಮಾತ್ರಾಣಿಪೃಥಕ್ತತಸ್ತ್ವೇಕತ್ರಚೂರ್ಣಯೇತ್ ॥
ದ್ವಿಗುಣೇನಗುಡೇನಾಥವಟಿಕಾನ್ಕಾರಯೇದ್ಬುಧಃ ॥ ೩೧ ॥
ಪ್ರಬಲಾಗ್ನಿಕರಾವಿತೇತಥಾಶೋರ್ಣನಾಶನಾಃಪರಾಃ ॥
ಗ್ರಹಣೀಂವಾತಕಫಜಾಂಶ್ವಾಸಂಕಾಸಂಕ್ಷಯಾಮಯಂ ॥ ೩೨ ॥
ಪ್ಲೀಹಾನಂಶ್ಲೀಪದಂಶೋಥಂಪ್ರಮೇಹಂಚಭಗಂದರಂ ॥
ನಿಹನ್ಯುಃಪಲಿತಂವೃಷ್ಯಾಸ್ತಥಾಮೇಧ್ಯಾರಸಾಯನಾಃ ॥ ೩೩ ॥

ಸೂರಣವಟಕ—ಒಣಗಿದ ಚೂರ್ಣದ ಗೆಡ್ಡೆಯ ಚೂರ್ಣ, ಸಮುದ್ರಹಾಲೇ ಬಳ್ಳಿಯ ಚೂರ್ಣ ಇವೆರಡೂ ಹದಿನಾರು ಭಾಗ, ನೆಲದೆಂಗಿನ ಗೆಡ್ಡೆ, ಚಿತ್ರಮೂಲ ಇವುಗಳ ಚೂರ್ಣ ಪ್ರತ್ಯೇಕ ಎಂಟು ಭಾಗ, ಅಳಲೇಕಾಯಿ, ತಾರೇಕಾಯಿ, ನೆಲ್ಲಿಯಕಾಯಿ, ವಾಯವಿಡಂಗ, ಶುಂಠಿ, ಹಿಪ್ಪಲಿ, ಗೇರುಬೀಜ, ಮೋಡಿ, ತಾಳೀ ಸಪತ್ರೆ ಇವು ಪ್ರತಿಯೊಂದೂ ನಾಲ್ಕು ಭಾಗ, ಲವಂಗಪತ್ರೆ, ಯಾಲಕ್ಕಿ, ಮೆಣಸು ಇವು ಪ್ರತಿಯೊಂದೂ ಎರಡೆರಡು ಭಾಗ, ಈ ರೀತಿ ಎಲ್ಲವುಗಳ ಚೂರ್ಣವನ್ನೂ ಕೂಡಿಸಿ ಚೂರ್ಣದ ಎರಡರಷ್ಟು ಬೆಲ್ಲವನ್ನು ಸೇರಿಸಿ ವಟಕಗಳನ್ನು ಮಾಡಿಕೊಳ ತಕ್ಕದ್ದು. ಈ ವಟಕಗಳು ಜಠರಾಗ್ನಿಯನ್ನು ಚನ್ನಾಗಿ ವೃದ್ಧಿಮಾಡುತ್ತವೆ ಮೂಲವ್ಯಾಧಿಯನ್ನು ಗುಣಪಡಿಸುತ್ತವೆ, ಗ್ರಹಣಿ ಎಂಬ ಭೇದಿಯು ವಾತ ಮತ್ತು ಶ್ಲೇಷ್ಮಗಳ ಪ್ರಕೋಪದಿಂದ ಉಂಟಾಗಿದ್ದಲ್ಲಿ ಅದನ್ನೂ, ಉಬ್ಬಸ, ಕೆಮ್ಮು, ಕ್ಷಯರೋಗ, ಪ್ಲೀಹಾಭಿವೃದ್ಧಿ, ಶ್ಲೀಪದವೆಂಬ ಆನೆಕಾಲು, ಶೋಭೆ, ಪ್ರಮೇಹ ಭಗಂದರ, ಅಕಾಲದಲ್ಲಿ ಅಂದರೆ ಬಾಲ್ಯದಲ್ಲಿಯೇ ತಲೆಕೂದಲು ಬೆಳ್ಳಗಾಗುವುದು, ಇವುಗಳನ್ನೆಲ್ಲಾ ಹೋಗಲಾಡಿಸುತ್ತದೆ, ವೀರ್ಯವೃದ್ಧಿಮಾಡುತ್ತದೆ, ಪರಿಶುದ್ಧವಾದ ರಸಾಯನೌಷಧವಾಗಿಯೂ ಇದೆ, ಮೇಧ್ಯವೆಂದರೆ ಮೇಧಾಶಕ್ತಿಯನ್ನೂ ಹೆಚ್ಚಿಸುತ್ತದೆ.

ತ್ರಿಫಲಾತ್ರ್ಯೂಷಣಂಚವ್ಯಂಪಿಪ್ಪಲೀಮೂಲಚಿತ್ರಕೌ ॥
ದಾರುಮಾಕ್ಷಿಕಧಾತುಶ್ಚ ದಾರ್ವೀಮುಸ್ತಂವಿಡಂಗಕಂ ॥ ೩೪ ॥
ಪ್ರತ್ಯೇಕಂಕರ್ಷಮಾತ್ರಾಣಿಸರ್ವದ್ವಿಗುಣಿತಂತಥಾ ॥
ಮಂಡೂರಂಚೂರ್ಣಯೇತ್ ಶುದ್ಧಂಗೋಮೂತ್ರೇಷ್ಟ
ಗುಣೇಕ್ಷಿಪೇತ್ ॥ ೩೫ ॥
ಪಕ್ತ್ವಾಚವಟಿಕಾನ್ ಕೃತ್ವಾದದ್ಯಾತ್ತಕ್ರಾನುಪಾನತಃ ॥
ಕಾಮಲಾಪಾಂಡುಮೇಹಾರ್ಶಶೋಥಕುಷ್ಠಕಫಾಮಯಾನ್ ॥ ೩೬ ॥
ಊರುಸ್ತಂಭಮಜೀರ್ಣಂಚಪ್ಲೀಹಾನಂನಾಶಯೇದಪಿ ॥

ಮಂಡೂರವಟಿಕ–ತ್ರಿಫಲ (ಅಳಲೇಕಾಯಿ, ತಾರೇಕಾಯಿ, ನೆಲ್ಲಿಯಕಾಯಿ) ತ್ರ್ಯೂಷಣ (ಶುಂಠಿ, ಹಿಪ್ಪಲಿ, ಮೆಣಸು), ಕಾಡುಮೆಣಸಿನ ಬಳ್ಳಿ, ಮೋಡಿ, ಚಿತ್ರಮೂಲ, ಮರಅರಿಸಿನ, ಸ್ವರ್ಣಮಾಕ್ಷಿಕಭಸ್ಮ, ದೇವದಾರೀಚಕ್ಕೆ, ಭದ್ರಮುಸ್ತೆ, ವಾಯುವಿಡಂಗ, ಇವು ಪ್ರತಿಯೊಂದೂ ಒಂದೊಂದು ಕರ್ಷ ಪ್ರಮಾಣ ಇವುಗಳ ಎರಡರಷ್ಟು ಶುದ್ಧಿಮಾಡಿದ ಕಿಟ್ಟದ ಚೂರ್ಣವನ್ನು ಎಂಟರಷ್ಟು ಅಂದರೆ ಕಿಟ್ಟದ ಚೂರ್ಣದ ಎಂಟರಷ್ಟು ಗೋಮೂತ್ರದಲ್ಲಿ ಸೇರಿಸಿ ಪಕ್ವವಾಗುವಂತೆ ಮಾಡಿ ವಟಕಗಳನ್ನು ಮಾಡಿ ಇರಿಸಿಕೊಂಡು ಮಜ್ಜಿಗೆಯ ಅನುಪಾನದಲ್ಲಿ ಸೇವಿಸಬೇಕು. ಇದು ಕಾಮಾಲೆ, ಪಾಂಡುರೋಗ, ಮೇಹರೋಗ, ಮೂಲವ್ಯಾಧಿ, ಶೋಭೆ, ಕುಷ್ಠ, ಕಫದ ರೋಗಗಳು, ತೊಡೆ ಹಿಡಿದುಕೊಳ್ಳುವುದು, ಅಜೀರ್ಣ, ಪ್ಲೀಹಾಭಿವೃದ್ಧಿ, ಇವುಗಳನ್ನೆಲ್ಲಾ ಶಮನಮಾಡುತ್ತದೆ.

ಕ್ಷೌದ್ರಾದ್ವಿಗುಣಿತಂಸರ್ಪಿಘೃತಾದ್ವಿಗುಣಪಿಪ್ಪಲೀ ॥ ೩೭ ॥
ಸಿತಾದ್ವಿಗುಣಿತಾತಸ್ಯಾಃ ಕ್ಷೀರಂದೇಯಂಚತುರ್ಗುಣಂ ॥
ಚತುರ್ಜಾತಂಕ್ಷೌದ್ರತುಲ್ಯಂಪಕ್ತ್ವಾಕುರ್ಯಾಚ್ಚಮೋದಕಾನ್ ॥ ೩೮ ॥
ಧಾತುಸ್ಥಾಂಶ್ಚಜ್ವರಾನ್ ಸರ್ವಾನ್ ಶ್ವಾಸಂಕಾಸಂಚಪಾಂಡುತಾಂ ॥
ಧಾತುಕ್ಷಯಂವಹ್ನಿಮಾಂದ್ಯಂಪಿಪ್ಪಲೀಮೋದಕೋಜಯೇತ್ ೩೯

ಪಿಪ್ಪಲೀ ಮೋದಕವನ್ನು ಹೇಳುತ್ತಾನೆ—ಜೇನುತುಪ್ಪವು ಒಂದು ತೂಕವೆಂದು ಭಾವಿಸಿದರೆ ಅದರ ಎರಡರಷ್ಟು ತುಪ್ಪವೂ ತುಪ್ಪದ ಎರಡರಷ್ಟು ಹಿಪ್ಪಲಿಯ ಚೂರ್ಣವೂ, ಹಿಪ್ಪಲೀ ಚೂರ್ಣದ ಎರಡರಷ್ಟು ಸಕ್ಕರೆಯೂ ನಾಲ್ಕರಷ್ಟು ಹಸುವಿನ ಹಾಲೂ, ಜೇನುತುಪ್ಪದಷ್ಟೇ ಚತುರ್ಜಾತಚೂರ್ಣ (ಯಾಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ, ನಾಗಕೇಸರಿ) ಇವುಗಳನ್ನು ಸೇರಿಸಿ ಚೆನ್ನಾಗಿ ಪಕ್ವಮಾಡಿ ಮೋದಕಗಳನ್ನು ಮಾಡಿ ಇರಿಸಿಕೊಳ್ಳುವುದು. ಇದನ್ನು ಸೇವನೆ ಮಾಡೋಣದರಿಂದ ಧಾತುಗತಗಳಾದ ಜ್ವರಗಳು ಉಬ್ಬಸ, ಕೆಮ್ಮು, ಪಾಂಡುರೋಗ, ಧಾತುಕ್ಷಯ, ಅಗ್ನಿಮಾಂದ್ಯ, ಇವುಗಳೆಲ್ಲಾ ಗುಣಹೊಂದುತ್ತವೆ.

ಚಂದ್ರಪ್ರಭಾವಚಾಮುಸ್ತಂಭೂನಿಂಬಾಮೃತದಾರುಕಂ ॥
ಹರಿದ್ರಾತಿವಿಷಾದಾರ್ವೀಪಿಪ್ಪಲೀಮೂಲಚಿತ್ರಕಾ ॥ ೪೦ ॥
ಧಾನ್ಯಕಂತ್ರಿಫಲಾಚವ್ಯಂವಿಡಂಗಂಗಜಪಿಪ್ಪಲೀ ॥
ವ್ಯೋಷಂಮಾಕ್ಷಿಕಧಾತುಶ್ಚದ್ವೌಕ್ಷಾರೌಲವಣತ್ರಯಂ ॥ ೪೧ ॥
ಏತಾನಿಶಾಣಮಾತ್ರಾಣಿಪ್ರತ್ಯೇಕಂಕಾರಯೇದ್ಬುಧಃ ॥
ತ್ರಿವೃದ್ದಂತೀಪತ್ರಕಂಚತ್ವಗೇಲಾವಂಶರೋಚನಾ ॥ ೪೨ ॥
ಪ್ರತ್ಯೇಕಂಕರ್ಷಮಾತ್ರಾಣಿಕುರ್ಯಾದೇತಾನಿಬುದ್ಧಿಮಾನ್ ॥
ದ್ವಿಕರ್ಷಂಹತಲೋಹಂಸ್ಯಾಚ್ಚತುಷ್ಕರ್ಷಾಸಿತಾಭವೇತ್ ॥ ೪೩ ॥
ಶಿಲಾಜತ್ವಷ್ಟಕರ್ಷಂಸ್ಯಾದಷ್ಟೌಕರ್ಷಾಶ್ಚಗುಗ್ಗುಲೋಃ ॥
ಏಭಿರೇಕತ್ರಸಂಕ್ಷುಣ್ಣೈಃಕರ್ತವ್ಯಾಗುಟಿಕಾಶುಭಾ ॥ ೪೪ ॥
ಚಂದ್ರಪ್ರಭೇತಿವಿಖ್ಯಾತಾಸರ್ವರೋಗಪ್ರಣಾಶಿನೀ ॥
ಪ್ರಮೇಹಾನ್ವಿಂಶತಿಂಕೃಚ್ಛ್ರಂಮೂತ್ರಾಘಾತಂತಥಾಶ್ಮರೀಂ ॥ ೪೫ ॥
ವಿಬಂಧಾನಾಹಶೂಲಾನಿಮೇಹನಂಗ್ರಂಥಿಮರ್ಬುದಂ ॥
ಅಂತ್ರವೃದ್ಧಿಂಕಟಿಶೂಲಂಶ್ವಾಸಂಕಾಸಂವಿಚರ್ಚಿಕಾಂ ॥ ೪೬ ॥
ಅಂಡವೃದ್ಧಿಂತಥಾಪಾಂಡುಂಕಾಮಲಾಂಚಹಲೀಮಕಂ ॥
ಕುಷ್ಠಾನ್ಯರ್ಶಾಂಸಿಕಂಡೂಂಚಪ್ಲೀಹೋದರಭಗಂದರಂ ॥ ೪೭ ॥
ದಂತರೋಗಂನೇತ್ರರೋಗಂಸ್ತ್ರೀಣಾಮಾರ್ತವಜಾಂರುಜಂ ॥
ಪುಂಸಾಂಶುಕ್ರಗತಾನ್ ದೋಷಾನ್ ಮಂದಾಗ್ನಿಮರುಚಿಂತಥಾ ॥ ೪೮ ॥
ವಾಯುಂಪಿತ್ತಂಕಫಂಹನ್ಯಾದ್ಬಲ್ಯಾವೃಷ್ಯಾರಸಾಯನೀ ॥
ಚಂದ್ರಪ್ರಭಾಯಾಂಕರ್ಷಸ್ತು ಚತುಶ್ಯಾಣೋವಿಧೀಯತೇ ॥ ೪೯ ॥

ಚಂದ್ರಪ್ರಭಾಗುಟಿಯನ್ನು ಹೇಳುತ್ತಾನೆ—ಚಂದ್ರಪ್ರಭಾ ಎಂದರೆ ಕರ್ಪೂರ, ಬಜೆ, ಭದ್ರಮುಸ್ತೆ, ಚಿರಾಯಿತ, ಅಮೃತಬಳ್ಳಿ, ದೇವದಾರು, ಚಕ್ಕೆ, ಅರಿಸಿನ, ಅತಿಬಜೆ, ಮರಅರಿಸಿನ, ಮೋಡಿ, ಚಿತ್ರಮೂಲ, ಧನಿಯ ತ್ರಿಫಲ (ಅಳಲೇಕಾಯಿ, ತಾರೇಕಾಯಿ, ನೆಲ್ಲಿಯಕಾಯಿ) ಕಾಡುಮೆಣಸಿನಬಳ್ಳಿ, ವಾಯುವಿಡಂಗ. ದೊಡ್ಡ ಹಿಪ್ಪಲಿ, ವ್ಯೋಷವೆಂದರೆ ಶುಂಠಿ, ಹಿಪ್ಪಲಿ, ಮೆಣಸು, ಸ್ವರ್ಣಮಾಕ್ಷಿಕಭಸ್ಮ, ಯವಕ್ಷಾರ, ಸರ್ಜಿಕ್ಷಾರ, ಸೈಂಧವಲವಣ, ಸೌವರ್ಚಲವಣ, ಬಿಡಲವಣ, ಈ ಪದಾರ್ಥಗಳು ಒಂದೊಂದು ಶಾಣಪ್ರಮಾಣ ತಿಗಡೆ, ಜಾಪಾಳ, ಜಾಯಿಪತ್ರೆ, ಲವಂಗಪತ್ರೆ, ಯಾಲಕ್ಕಿ, ಬಿದಿರುಪ್ಪು ಇವುಗಳು ಒಂದೊಂದು ಕರ್ಷಪ್ರಮಾಣ; ಎರಡು ಕರ್ಷ ಲೋಹಭಸ್ಮ, ನಾಲ್ಕು ಕರ್ಷಪ್ರಮಾಣ ಖಂಡಸಕ್ಕರೆ, ಎಂಟು ಕರ್ಷ ಶಿಲಾಜಿತು, ಗುಗ್ಗುಲ ಎಂಟು ಕರ್ಷ, ಈ ಎಲ್ಲಾ ಪದಾರ್ಥಗಳನ್ನೂ

ಚೆನ್ನಾಗಿ ಕುಟ್ಟಿ ಗುಳಿಗೆಗಳನ್ನು ಮಾಡಿ ಇಟ್ಟುಕೊಳ್ಳಬೇಕು. ಇದರ ಸೇವನೆಯಿಂದ ಇಪ್ಪತ್ತು ವಿಧವಾದ ಮೇಹರೋಗ, ಮೂತ್ರಕೃಚ್ಛ್ರ, ಮೂತ್ರಾಘಾತ, ಮೂತ್ರದ್ವಾರದಲ್ಲಿ ಕಲ್ಲು ತಡೆದುಕೊಳ್ಳುವುದು, ಅಧೋವಾತ ಮತ್ತು ಮಲ ಸಹ ತಡೆದುಹೋಗುವುದು, ಹೊಟ್ಟೆಯ ಜ್ವರ, ಹೊಟ್ಟೆಶೂಲೆ, ಮೋಹನವೆಂದರೆ ಶಿಶ್ನಕ್ಕೆ ಸಂಭವಿಸತಕ್ಕ ಉಪದಂಶ ದಿ ಸ್ತ್ರೀರೋಗಗಳು, ಗಂಟುಗಳು, ಅರ್ಬುದವೆಂಬ ಬಾವು, ವೃಷಣದಲ್ಲಿ ಕರುಳು ಇಳಿಯುವುದು, ಸೊಂಟಶೂಲೆ, ಶ್ವಾಸ, ಕೆಮ್ಮು, ಇಸಬು, ತದಡು ಬಾತುಕೊಳ್ಳುವ ವಾಯು, ಪಾಂಡುರೋಗ, ಕಾಮಾಲೆ ರೋಗ, ಹಲೀಮಕವೆಂಬ ಒಂದು ಒಗೆಯ ಕಾಮಾಲೆ, ಕುಷ್ಠರೋಗಗಳು, ಮೂಲವ್ಯಾಧಿ, ಮೈನವೆ. ಪ್ಲೀಹೋದರವೆಂಬ ಉದರ, ಭಗಂದರವೆಂಬ ವ್ರಣ, ದಂತರೋಗಗಳು, ನೇತ್ರರೋಗಗಳು, ಹೆಂಗಸರ ಮುಟ್ಟಿನ ಸಂಬಂಧವಾದ ರೋಗಗಳು, ಶುಕ್ರದೋಷಗಳು, ಅಗ್ನಿಮಾಂದ್ಯ, ಅರುಚಿ, ಇವುಗಳನ್ನೆಲ್ಲಾ ಗುಣಪಡಿಸುತ್ತದೆ. ವಾತ, ಪಿತ್ತ, ಕಫ, ಇವುಗಳ ಪ್ರಕೋಪವನ್ನೂ ಶಮನಮಾಡುತ್ತದೆ, ಶರೀರಕ್ಕೆ ಬಲವನ್ನು ಹೆಚ್ಚಿಸುತ್ತದೆ, ಶುಕ್ರವೃದ್ಧಿ ಮಾಡುತ್ತದೆ, ರಸಾಯನವಾಗಿಯೂ ಇದೆ, ಇದಕ್ಕೆ ಚಂದ್ರಪ್ರಭಾಗುಗ್ಗುಲವೆಂದೂ, ಗುಟಿ ಎಂದೂ ಎರಡು ವಿಧವಾಗಿಯೂ ವ್ಯವಹಾರವಿದೆ.

ಯಮಾನೀ ಜೀರಕಂಧಾನ್ಯಂಮರಿಚಂಗಿರಿಕರ್ಣಿಕಾ ॥
ಅಜಮೋದೋಪಕುಂಚೀಚಚತುಶ್ಶಾಣಾಃಪೃಥಕ್ ಪೃಥಕ್॥ ೫೦ ॥
ಹಿಂಗುಷಟ್ ಶಾಣಿಕಂಕಾರ್ಯಂಕ್ಷಾರೌಲವಣಪಂಚಕಂ ॥
ತ್ರಿವೃಚ್ಚಾಷ್ಟಮಿತೈಶ್ಶಾಣೈಃಪ್ರತ್ಯೇಕಂಕಲ್ಪಯೇತ್ಸುಧೀಃ ॥ ೫೧ ॥
ದಂತೀಶಠೀಪೌಷ್ಕರಂಚವಿಡಂಗಂದಾಡಿಮಂಶಿವಾ ॥
ಚಿತ್ರೋಮ್ಲವೇತಸಃಶುಂಠೀಶಾಣೈರ್ಷೋಡಶಭಿಃಪೃಥಕ್ ॥ ೫೨ ॥
ಬೀಜಪೂರರಸೇನೈಷಾಂಗುಟಿಕಾಂಕ್ಕಾರಯೇದ್ಬುಧಃ ॥
ಘೃತೇನಪಯಸಾಮದ್ಯೈರಮ್ಲೈರುಷ್ಣೋದಕೇನವಾ ॥ ೫೩ ॥
ಪಿಬೇತ್ಕಾಂಕಾಯನಪ್ರೋಕ್ತಾಂಗುಟಿಕಾಂಗುಲ್ಮನಾಶಿನೀಂ ॥
ಮದ್ಯೇನವಾತಿಕಂಗುಲ್ಮಂಗೋಕ್ಷೀರೇಣಚಪೈತ್ತಿಕಂ ॥ ೫೪ ॥
ಮೂತ್ರೇಣಕಫಗುಲ್ಮಂಚದಶಮೂಲೈಸ್ತ್ರಿದೋಷಜಂ ॥
ಉಷ್ಟ್ರೀದುಗ್ಧೇನನಾರೀಣಾಂರಕ್ತಗುಲ್ಮಂವಿನಾಶಯೇತ್ ॥ ೫೫ ॥
ಹೃದ್ರೋಗಂಗ್ರಹಣೀಂಶೂಲಂಕ್ರಿಮೀನರ್ಶಾಂಸಿನಾಶಯೇತ್ ॥

ಕಂಕಾಯನ ಗುಟಿಯನ್ನು ಹೇಳುತ್ತಾನೆ— ವೋಮ, ಜೀರಿಗೆ, ಕೊತ್ತುಂಬರಿ ಮೆಣಸು, ಗಿರಿಕರ್ಣಿಕೇ ಬೇರಿನ ತ್ವಕ್ಕು, ಕುರಾಸಾನಿವೋಮ, ಕರಿಜೀರಿಗೆ, ಇವುಗಳು ಪ್ರತ್ಯೇಕ ನಾಲ್ಕು ನಾಲ್ಕು ಶಾಣ ಪರಿಮಾಣ, ಇಂಗು ಆರುಶಾಣ ಪರಿ

ಮಾಣ, ಯವಕ್ಷಾರ, ಸರ್ಜಕ್ಷಾರ, ಸೈಂಧವಲವಣ, ಸವ್ರ್ಚಲವಣ, ಬಿಡ ಲವಣ, ಸಮುದ್ರಲವಣ, ಚೌಳುಪ್ಪು, ತಿಗಡೆ ಇವುಗಳೆಲ್ಲವೂ ಪ್ರತ್ಯೇಕ ಎಂಟು ಶಾಣ ಪರಿಮಾಣ. ಜಾಪಾಳ, ಕಚೋರ, ಪುಷ್ಕರಮೂಲ, ವಾಯುವಿಡಂಗ, ದಾಳಿಂಬದ ಶಿಪ್ಪೆ, ಅಳಲೇಕಾಯಿ, ಚಿತ್ರಮೂಲ, ವೋಟೆಹುಳಿ, ಶುಂಠಿ ಇವು ಪ್ರತ್ಯೇಕ ಹದಿನಾರು ಶಾಣ, ಇವುಗಳನ್ನು ಸೇರಿಸಿ ಮಾವಲದ ಹಣ್ಣಿನ ರಸದಲ್ಲಿ ಚನ್ನಾಗಿ ಅರದು ಗುಳಿಗೆಗಳನ್ನು ಮಾಡಿಟ್ಟುಕೊಳ್ಳುವುದು. ಈ ಗುಳಿಗೆಗಳನ್ನು ತುಪ್ಪದೊಡನಾಗಲಿ, ಹಾಲಿನೊಡನಾಗಲಿ, ಹುಳಿಯಾದ ಮದ್ಯಗಳೊಡನಾಗಲಿ, ಬಿಸಿನೀರಿನೊಡನಾಗಲಿ ತೆಗದುಕೊಂಡಲ್ಲಿ ಗುಲ್ಮರೋಗವು ಗುಣವಾಗುತ್ತದೆ. ಕಾಂಕಾಯನನೆಂಬ ಋಷಿಯು ತನ್ನ ಅನುಭವಮೂಲಕವಾಗಿ ಹೇಳಿದ್ದರಿಂದ ಇದಕ್ಕೆ ಕಾಂಕಾಯನಗುಟಿಕಾ ಎಂಬದಾಗಿಯೇ ಹೆಸರು ಕೊಟ್ಟಿದ್ದಾರೆ. ಮದ್ಯದೊಡನೆ ಈ ಗುಟಿಕೆಯನ್ನು ಸೇವಿಸಿದರೆ ವಾತಗುಲ್ಮವನ್ನೂ, ಹಸುವಿನ ಹಾಲಿನೊಡನೆ ಪಿತ್ತಗುಲ್ಮವನ್ನೂ, ಮೂತ್ರದೊಡನೆ ಕಫಗುಲ್ಮವನ್ನೂ, ದಶಮೂಲಕಷಾಯದೊಡನೆ ತ್ರಿದೋಷಜನ್ಯಗುಲ್ಮವನ್ನೂ, ವೊಂಟೆಯ ಹಾಲಿನೊಡನೆ ಹೆಂಗಸರಿಗೆ ಬರುವ ರಕ್ತಗುಲ್ಮವನ್ನೂ, ಹೃದಯರೋಗ, ಗ್ರಹಣಿ ಎಂಬ ಭೇದಿ, ಶೂಲೆ, ಕ್ರಿಮಿರೋಗಗಳು, ಮೂಲವ್ಯಾಧಿ, ಈ ರೋಗಗಳನ್ನೂ ಪರಿಹಾರ ಮಾಡುತ್ತದೆ.

ನಾಗರಂಪಿಪ್ಪಲೀಚವ್ಯಂಪಿಪ್ಪಲೀಮೂಲಚಿತ್ರಕೌ ॥ ೫೬ ॥
ಭೃಷ್ಟಂಹಿಂಗ್ವಜಮೋದಾಚಸರ್ಷಪೋಜೀರಕದ್ವಯಂ ॥
ರೇಣುಕೇಂದ್ರಯವಾಪಾಠಾವಿಡಂಗಂಗಜಪಿಪ್ಪಲೀ ॥ ೫೭ ॥
ಕಟುಕಾತಿವಿಷಾಭಾರ್ಗೀವಚಾಮೂರ್ವೇತ್ರಿಭಾಗತಃ ॥
ಪ್ರತ್ಯೇಕಂಶಾಣಕಾನಿಸ್ಯುರ್ದ್ರವ್ಯಾಣೀಮಾನಿವಿಂಶತಿಃ ॥ ೫೮ ॥
ದ್ರವ್ಯೇಭ್ಯಸ್ಸಕಲೇಭ್ಯಶ್ಚತ್ರಿಫಲಾದ್ವಿಗುಣಾಭವೇತ್ ॥
ಏಭಿಶ್ಚೂರ್ಣೀಕೃತೈಸ್ಸರ್ವೈಸ್ಸಮೋದೇಯಶ್ಚಗುಗ್ಗುಲುಃ ॥ ೫೯ ॥
ವಂಗಂರೌಪ್ಯಂಚನಾಗಂಚಲೋಹಸಾರಸ್ತಥಾಭ್ರಕಂ ॥
ಮಂಡೂರಂರಸಸಿಂದೂರಂಪ್ರತ್ಯೇಕಂಪಲಸಮ್ಮಿತಂ ॥ ೬೦ ॥
ಗುಡಪಾಕಸಮಂಕೃತ್ವಾಇಮಂದದ್ಯಾದ್ಯಥೋಚಿತಂ ॥
ಏಕಪಿಂಡಂತತಃಕೃತ್ವಾಧಾರಯೇದ್ಘೃತಭಾಜನೇ ॥ ೬೧ ॥
ಗುಟಿಕಾಶ್ಶಾಣಮಾತ್ರಾಸ್ತುಕೃತ್ವಾಗ್ರಾಹ್ಯಾಯಥೋಚಿತಾಃ ॥
ಗುಗ್ಗುಲುರ್ಯೋಗರಾಜೋಯಂತ್ರಿದೋಷಘ್ನೋರಸಾಯನಃ ॥ ೬೨ ॥
ಮೈಥುನಾಹಾರಪಾನಾನಾಂತ್ಯಾಗೋನೈವಾತ್ರವಿದ್ಯತೇ ॥
ಸರ್ವಾನ್ವಾತಾಮಯಾನ್ಕುಷ್ಠಾನರ್ಶಾಂಸಿಗ್ರಹಣೀಗದಂ ॥ ೬೩ ॥
ಪ್ರಮೇಹಂವಾತರಕ್ತಂಚನಾಭಿಶೂಲಂಭಗಂದರಂ ॥

ಉದಾವರ್ತಂಕ್ಷಯಂಗುಲ್ಮಮಪಸ್ಮಾರಮುರೋಗ್ರಹಂ ॥ ೬೪ ॥
ಮಂದಾಗ್ನಿಂಶ್ವಾಸಕಾಸಂಚನಾಶಯೇದರುಚಿಂತಥಾ ॥
ರೇತೋದೋಷಹರಃಪುಂಸಾಂರಜೋದೋಷಹರಃಸ್ತ್ರಿಯಾಂ॥೬೫॥
ಪುಂಸಾಮಪತ್ಯಜನಕೋವಂಧ್ಯಾನಾಂಗರ್ಭದಸ್ತಥಾ ॥
ರಾಸ್ನಾದಿಕ್ವಾಥಸಂಯುಕ್ತೋವಿವಿಧಂಹಂತಿಮಾರುತಂ ॥ ೬೬ ॥
ಕಾಕೋಲ್ಯಾದಿಶೃತಾತ್ಪಿತ್ತಂಕಫಮಾರಗ್ವಧಾದಿನಾ ॥
ದಾರ್ವೀಶೃತೇನಮೇಹಾಂಶ್ಚಗೋಮೂತ್ರೇಣಚಪಾಂಡುತಾಂ।೬೭।
ಮೇದೋವೃದ್ಧಿಂಚಮಧುನಾಕುಷ್ಠಂನಿಂಬಶೃತೇನಚ ॥
ಛಿನ್ನಾಕ್ವಾಥೇನವಾತಾಸ್ರಂಶೋಥಶೂಲಂಕಣಾಶೃತಾತ್ ॥ ೬೮ ॥
ಪಾಟಲಾಕ್ವಾಥಸಹಿತೋವಿಷಂಮೂಷಕಜಂಜಯೇತ್ ॥
ತ್ರಿಫಲಾಕ್ವಾಥಸಹಿತೋನೇತ್ರಾರ್ತಿಂಹಂತಿದಾರುಣಾಂ ॥ ೬೯ ॥
ಪುನರ್ನವಾದಿಕ್ವಾಥೇನಹನ್ಯಾತ್ಸರ್ವೋದರಾಣ್ಯಪಿ ॥

ಯೋಗರಾಜ ಗುಗ್ಗುಳವನ್ನು ನಿರ್ಮಿಸುವ ಕ್ರಮವೆಂತೆಂದರೆ—ಶುಂಠಿ, ಹಿಪ್ಪಲಿ, ಕಾಡುಪುಣಸಿನ ಬಳ್ಳಿ, ಮೋಡಿ, ಚಿತ್ರಮೂಲ, ತುಪ್ಪದಲ್ಲಿ ಹುರಿದ ಇಂಗು, ಮೋವಿನಕಾಳು, ಸಾಸುವೆ, ಬಿಳೀ ಜೀರಿಗೆ, ಕಪ್ಪು ಜೀರಿಗೆ, ರೇಣುಕ, ಕೊಡಸದ ಬೀಜ, ಅಗುಳುಸುಂಟೆ, ವಾಯುವಿಡಂಗ, ದೊಡ್ಡಹಿಪ್ಪಲಿ, ಕಟು ರೋಹಿಣಿ, ಅತಿಬಜೆ, ಗಂಟುಭರಂಗಿ, ಬಜೆ, ಕುರಟಿಗೆ, ಈ ಇಪ್ಪತ್ತು ಪದಾರ್ಥ ಗಳೂ ಪ್ರತ್ಯೇಕ ಒಂದೊಂದು ಶಾಣ ಪರಿಮಾಣ ಈ ಎಲ್ಲಾ ಪದಾರ್ಥಗಳ ಎರಡ ರಷ್ಟು ತ್ರಿಫಲ (ಅಳಲೆ, ತಾರೆ, ನೆಲ್ಲಿ) ಇವುಗಳನ್ನೆಲ್ಲಾ ಕೂಡಿಸಿ ಕುಟ್ಟಿ ಚೂರ್ಣ ಮಾಡಿ ವಸ್ತ್ರಗಾಳಿತಮಾಡಿಕೊಂಡು ಅದರಷ್ಟೇ ಗುಗ್ಗುಳವನ್ನು ಅದರ ಜೊತೆಗೆ ಸೇರಿಸಬೇಕು. (ವಂಗಭಸ್ಮ, ನಾಗಭಸ್ಮ, ಲೋಹಭಸ್ಮ, ಅಭ್ರಕಭಸ್ಮ, ಕಿಟ್ಟ, ರಸಸಿಂಧೂರ, ಇವುಗಳೆಲ್ಲವನ್ನೂ ಪ್ರತ್ಯೇಕ ಒಂದೊಂದು ಪಲದಷ್ಟನ್ನು ಸೇರಿಸು ವುದು) ವರಳಲ್ಲಿ ಚನ್ನಾಗಿ ಕುಟ್ಟಿ ಒಂದು ಮುದ್ದೆಮಾಡಿಕೊಂಡು ತುಪ್ಪದಲ್ಲಿ ಹಾಕಿ ಇರಿಸಬೇಕು, ಒಂದು ಶಾಣ ಪ್ರಮಾಣ ಗುಳಿಗೆಗಳನ್ನು ಮಾಡಿ ಜೀರ್ಣ ವಾಗುವಷ್ಟು ತೆಗೆದುಕ್ಕೊಳ್ಳುತ್ತ ಬರಬೇಕು, ಇದಕ್ಕೆ ಯೋಗರಾಜಗುಗ್ಗುಳವೆಂದು ಹೆಸರು, ತ್ರಿದೋಷಗಳ ಪ್ರಕೋಪವನ್ನೂ ಶಮನಮಾಡುತ್ತದೆ, ರಸಾಯನವಾಗಿ ರುತ್ತದೆ, ಇದನ್ನು ಸೇವಿಸುವಾಗ್ಯೆ ಸ್ತ್ರೀಸಂಗವಾಗಲಿ ಮದ್ಯ ಮಾಂಸಗಳನ್ನಾಗಲಿ ಬಿಡಬೇಕೆಂಬ ನಿಯಮವಿಲ್ಲ, ಸಮಸ್ತ ವಿಧಗಳಾದ ವಾತರೋಗಗಳನ್ನೂ, ಕುಷ್ಠ ರೋಗಗಳನ್ನೂ, ಮೂಲವ್ಯಾಧಿಗಳನ್ನೂ, ಗ್ರಹಣಿ ಎಂಬ ಭೇದಿಯನ್ನೂ, ಮೇಹ ರೋಗವನ್ನೂ, ವಾತರಕ್ತವೆಂಬ ಒಂದು ಬಗೆಯ ವ್ರಣರೋಗವನ್ನೂ, ಹೊಕ್ಕು

ಳಿನ ಹತ್ತಿರ ಬರುವ ಶೂಲೆಯನ್ನೂ, ಭಗಂದರವೆಂಬ ವ್ರಣವನ್ನೂ, ಉದಾವರ್ತ ವೆಂಬ ವಾತರೋಗವನ್ನೂ, ಕ್ಷಯರೋಗ, ಗುಲ್ಮಗಳು, ಅಪಸ್ಮಾರ, ಹೊಕ್ಕಳಿನ ಹತ್ತಿರ ಹಿಡಿದಂತಾಗುವುದು, ಅಗ್ನಿಮಾಂದ್ಯ, ಉಬ್ಬಸ, ಕೆಮ್ಮು, ಅರುಚಿ, ಇವು ಗಳನ್ನು ಕಡಮೆಮಾಡುತ್ತದೆ, ಪುರುಷರ ಶುಕ್ರದೋಷಗಳನ್ನೂ, ಸ್ತ್ರೀಯರ ರಜೋ ದೋಷಗಳನ್ನೂ ನಾಶಮಾಡಿ ಪುತ್ರಸಂತಾನವುಂಟಾಗಲು ಅವಕಾಶ ಕೊಡುತ್ತದೆ ಬಂಜೆಯರಾದ ಹೆಂಗಸರಿಗೆ ಅತ್ಯುತ್ತಮವಾದದ್ದು, ಬಂಜೆತನವನ್ನು ನಿವಾರಣೆ ಮಾಡುತ್ತದೆ, ಗರ್ಭೋತ್ಪತ್ತಿಗೆ ಸಹಾಯಮಾಡುತ್ತದೆ, ಈ ಗುಳಿಗೆಗಗಳನ್ನು ರಾಸ್ನಾದಿಕ್ವಾಥದ ಜೊತೆಯಲ್ಲಿ ಸೇವಿಸಿದರೆ ಸಮಸ್ತ ವಿಧವಾದ ವಾತವ್ಯಾಧಿ ಗಳನ್ನೂ ಶಮನಪಡಿಸುತ್ತದೆ, ಕಾಕೋಲ್ಯಾದಿಗಣಕ್ವಾಥದೊಡನೆ ಸೇವಿಸಿದರೆ ಪಿತ್ತ ಜನ್ಯವ್ಯಾಧಿಗಳನ್ನೂ, ಆರಗ್ವಧಾದಿಕ್ವಾಥದೊಂದಿಗೆ ಸೇವಿಸಿದಲ್ಲಿ ಶ್ಲೇಷ್ಮವ್ಯಾಧಿ ಗಳೆಲ್ಲವನ್ನೂ, ಅರಿಸಿನದ ಕಷಾಯದೊಡನೆ ಮೇಹರೋಗಗಳನ್ನೂ, ಗೋ ಮೂತ್ರದೊಡನೆ ಪಾಂಡುರೋಗವನ್ನೂ, ಜೇನುತುಪ್ಪದೊಡನೆ ಮೇದೋರೋಗ ವನ್ನೂ (ಬೊಜ್ಜು ಬೆಳೆಯುವುದು) ಬೇವಿನ ಪಟ್ಟೆಯ ಕಷಾಯದೊಡನೆ ಕುಷ್ಠ ಗಳನ್ನೂ, ಅಮೃತಬಳ್ಳಿಯ ಕಷಾಯದೊಡನೆ ವಾತರಕ್ತರೋಗವನ್ನೂ, ದೇಹದ ಯಾವುದಾದರೂ ಭಾಗದಲ್ಲಿ ಉಂಟಾಗುವ ಶೋಭೆಯನ್ನೂ ಮತ್ತು ಶೂಲೆ ಯನ್ನೂ ಕಡಮೆಮಾಡಬೇಕಾದರೆ ಪಿಪ್ಪಲಿಯ ಕಷಾಯದೊಂದಿಗೂ, ಪಾದರಿ ಚಕ್ಕೆಯ ಕಷಾಯದೊಡನೆ ಇಲಿಯ ವಿಷವನ್ನೂ, ತ್ರಿಫಲಾ ಕಷಾಯದೊಡನೆ ನೇತ್ರರೋಗಗಳನ್ನೂ, ಕೊಮ್ಮೆ ಬೇರಿನ ಕಷಾಯದೊಡನೆ ಸಮಸ್ತ ವಿಧವಾದ ಉದರವ್ಯಾಧಿಯನ್ನೂ ಪರಿಹರಿಸುತ್ತದೆ.

ತ್ರಿಫಲಾಯಾಸ್ತ್ರಯಃ ಪ್ರಸ್ಥಾಃ ಪ್ರಸ್ಥೈಕಾಚಾಮೃತಾಭವೇತ್ ॥ ೭೦ ॥
ಸಂಕುಟ್ಯ ಲೋಹಪಾತ್ರೇಣ ಸಾರ್ಧದ್ರೋಣಾಂಬುನಾಪಚೇತ್ ॥
ಜಲಮರ್ಧಶೃತಂಜ್ಞಾತ್ವಾಗೃಹ್ಣೀಯಾದ್ವಸ್ತ್ರಗಾಳಿತಂ ॥ ೭೧ ॥
ತತಃ ಕ್ವಾಥೇ ಕ್ಷಿಪೇತ್ ಶುದ್ಧಂಗುಗ್ಗುಲಂಪ್ರಸ್ಥಸಮ್ಮಿತಂ ॥
ಪುನಃ ಪಚೇದಯಃ ಪಾತ್ರೇದರ್ವ್ಯಾಸಂಘರ್ಷಯೇನ್ಮುಹುಃ ॥ ೭೨ ॥
ಸಾಂದ್ರೀಭೂತಂತತೋಜ್ಞಾತ್ವಾಗುಡಪಾಕಸಮಾಕೃತಿಂ ॥
ಚೂರ್ಣೀಕೃತ್ಯತತಸ್ತತ್ರದ್ರವ್ಯಾಣೀಮಾನಿನಿಕ್ಷಿಪೇತ್ ॥ ೭೩ ॥
ತ್ರಿಫಲಾದ್ವಿಪಲಾಜ್ಞೇಯಾಗುಡೂಚೀಪಲಿಕಾಮತಾ ॥
ಷಡಕ್ಷಂತ್ರ್ಯೂಷಣಂಪ್ರೋಕ್ತಂವಿಡಂಗಾನಾಂಪಲಾರ್ಧಕಂ ॥ ೭೪ ॥
ದಂತೀಕರ್ಷಮಿತಾಕಾರ್ಯಾತ್ರಿವೃತ್ಕರ್ಷಮಿತಾಸ್ಮೃತಾ ॥
ತತಃ ಪಿಂಡೀಕೃತಂಸರ್ವಂಘೃತಪಾತ್ರೇವಿನಿಕ್ಷಿಪೇತ್ ॥ ೭೫ ॥

ಗುಟಿಕಾಶ್ಯಾಣಮಾತ್ರೇಣ ಯುಂಜ್ಯಾದ್ದೋಷಾದ್ಯಪೇಕ್ಷಯಾ ॥
ಅನುಪಾನೇಭಿಷಗ್ದದ್ಯಾತ್ಕೋಷ್ಣಂನೀರಂಪಯೋಥವಾ ॥ ೭೬ ॥
ಮಂಜಿಷ್ಠಾದಿಶೃತಂವಾಪಿಯುಕ್ತ್ಯಾಯುಕ್ತಮಥಾಪರಂ ॥
ಜಯೇತ್ಸರ್ವಾಣಿಕುಷ್ಠಾನಿವಾತರಕ್ತಂತ್ರಿದೋಷಜಂ ॥ ೭೭ ॥
ಸರ್ವವ್ರಣಾನಿಗುಲ್ಮಾನಿಪ್ರಮೇಹಪಿಡಿಕಾಂಸ್ತಥಾ ॥
ಪ್ರಮೇಹೋದರಮಂದಾಗ್ನಿಕಾಸಶ್ವಯಥುಪಾಂಡುಜಾನ್ ॥ ೭೮ ॥
ಹಂತಿಸರ್ವಾನಯಾನ್ನಿತ್ಯಮುಪಯುಕ್ತೋರಸಾಯನಃ ॥
ಕೌಶೇರಕಾಭಿಧಾನೋಯಂಗುಗ್ಗುಲುಃಕಾಂತಿಕಾರಕಃ ॥ ೭೯ ॥
ವಾಸಾದಿನಾನೇತ್ರಗದಾನ್‌ಗುಲ್ಮಾದೀನ್ವರುಣಾದಿನಾ ॥
ಕ್ವಾಥೇನಖದಿರಸ್ಯಾಪಿವ್ರಣಕುಷ್ಠಾನಿನಾಶಯೇತ್ ॥ ೮೦ ॥
ಅಮ್ಲಂತೀಕ್ಷ್ಣಮಜೀರ್ಣಂಚವ್ಯಾಯಾಮಂಶ್ರಮಮಾತಪಂ ॥
ಮದ್ಯಂರೋಷಂತ್ಯಜೇತ್ಸಮ್ಯಗ್ಗುಣಾರ್ಥೀಪುರಸೇವಕಃ ॥ ೮೧ ॥

ಕೌಶೇರಗುಗ್ಗುಳವನ್ನು ನಿರ್ಮಿಸುವ ಕ್ರಮವೆಂತೆಂದರೆ—ತ್ರಿಫಲ (ಅಳಲೆ. ತಾರಿ, ನೆಲ್ಲಿ,) ಮೂರು ಪ್ರಸ್ಥ ಪರಿಮಾಣ, ಒಂದು ಪ್ರಸ್ಥ ಅಮೃತಬಳ್ಳಿ ಇವುಗಳನ್ನು ಚನ್ನಾಗಿ ಕುಟ್ಟಿ ಕಬ್ಬಿಣದ ಪಾತ್ರೆಯಲ್ಲಿ ಒಂದೂವರೆ ದ್ರೋಣ ಪರಿಮಾಣ ನೀರಿನಲ್ಲಿ ಬೇಯಿಸುವುದು, ಮುಕ್ಕಾಲು ದ್ರೋಣ ನೀರು ಉಳಿಯುವಷ್ಟು ಕಷಾಯ ಕಾಯ್ದು ಬತ್ತಿದ ಮೇಲೆ ಬಟ್ಟೆಯಲ್ಲಿ ಶೋಧಿಸಿ ಚರಟವನ್ನೆಲ್ಲಾ ಬಿಸಾಡಿ ಕಷಾಯವನ್ನು ಪುನಃ ಅದೇ ಪಾತ್ರೆಗೆ ಹಾಕಿಕೊಳ್ಳುವುದು, ಆ ಕಷಾಯದಲ್ಲಿ ಒಂದು ಪ್ರಸ್ಥಪರಿಮಾಣ ಗುಗ್ಗುಳವನ್ನು ಸೇರಿಸಿ ಕಬ್ಬಿಣದ ಸೌಟಿನಿಂದಲೇ ತಿರುವುತ್ತ ಕಾಯಿಸುವುದು, ಬೆಲ್ಲದ ಪಾಕದಷ್ಟು ಗಟ್ಟಿಯಾದ ಮೇಲೆ ಮುಂದೆ ಹೇಳುವ ವಸ್ತುಗಳ ಚೂರ್ಣವನ್ನು ಮಾಡಿ ವಸ್ತ್ರಗಾಳಿತಮಾಡಿ ಹಾಕಬೇಕು. ವಸ್ತುಗಳ್ಯಾವುವೆಂದರೆ—ತ್ರಿಫಲ ಎರಡು ಪಲ, ಅಮೃತಬಳ್ಳಿ ಒಂದು ಪಲ, ತ್ರ್ಯೂಷಣ (ಶುಂಠಿ, ಹಿಪ್ಪಲಿ, ಮೆಣಸು) ಆರು ಅಕ್ಷಪರಿಮಾಣ ಅಂದರೆ ಆರು ಕರ್ಷ, ವಾಯುವಿಡಂಗ ಅರ್ಧಪಲ, ಜಾಪಾಳ ಒಂದು ಕರ್ಷ, ತಿಗಡೆ ಒಂದು ಕರ್ಷ ಇವುಗಳನ್ನೆಲ್ಲಾ ಚೂರ್ಣಿಸಿ ಹಾಕಿ ಚನ್ನಾಗಿ ಕೂಡಿಸಿ ಒಂದು ಮುದ್ದೆಯಾಗಿ ಮಾಡಿ ತುಪ್ಪದ ಪಾತ್ರೆಯಲ್ಲಿ ಹಾಕಿ ಇರಿಸಿಕೊಳ್ಳುವುದು, ದೋಷಪ್ರಕೋಪವನ್ನು ಪರ್ಯಾಲೋಚಿಸಿಕೊಂಡು ಒಂದು ಶಾಣ ಪ್ರಮಾಣ ಮೊದಲು ಗುಳಿಗೆಮಾಡಿ ವೈದ್ಯನು ಅನುಭವದಿಂದ ಕೊಡಬೇಕು, ಅನುಪಾನವಾಗಿ ಸಾಮಾನ್ಯತಃ ಬಿಸಿನೀರನ್ನಾಗಲಿ ಸುಖೋಷ್ಣವಾದ ಹಾಲನ್ನಾಗಲಿ ಕೊಡಬೇಕು,ಮಂಜಿಷ್ಠಾದಿ ಕಷಾಯವನ್ನಾಗಲಿ ಅಥವಾ ಯುಕ್ತವಾದ ಇತರ ವಿಧವಾದ ಯಾವ ಅನುಪಾನ

ವನ್ನಾಗಲಿ ವೈದ್ಯರು ಕಲ್ಪಿಸಿಕೊಳ್ಳಬಹುದು, ಇದರಿಂದ ಸಮಸ್ತ ವಿಧಗಳಾದ ಕುಷ್ಟಗಳೂ, ತ್ರಿದೋಷ ಪ್ರಕೋಪಜನ್ಯವಾದ ವಾತರಕ್ತರೋಗವೂ, ಸಮಸ್ತ ವಿಧಗಳಾದ ವ್ರಣಗಳೂ, ಗುಲ್ಮಗಳೂ, ಮೇಹವ್ರಣಗಳು, ಮೇಹರೋಗ, ಉದರ ರೋಗಗಳು, ಅಗ್ನಿಮಾಂದ್ಯ, ಕೆಮ್ಮು, ಶೋಭೆ, ಪಾಂಡುರೋಗ ಇನ್ನೂ ಇಂತಹ ಅನೇಕ ರೋಗಗಳನ್ನು ಗುಣಪಡಿಸುವುದಲ್ಲದೆ ರಸಾಯನವಾಗಿಯೂ ಇರುತ್ತದೆ. ದೇಹಕಾಂತಿಯನ್ನು ಹೆಚ್ಚಿಸುತ್ತದೆ, ವಾಸಾದಿಗಣಕ್ವಾಥದೊಡನೆ ಸೇವಿಸೋಣದ ರಿಂದ ನೇತ್ರರೋಗಗಳನ್ನೂ, ವರುಣಾದಿಗಣಕ್ವಾಥದೊಡನೆ ಗುಲ್ಮಗಳನ್ನೂ, ಜಾಲಿತೊಪ್ಪೆಯ ಕಷಾಯದೊಡನೆ ವ್ರಣಗಳನ್ನು ಮತ್ತು ಕುಷ್ಠರೋಗವನ್ನೂ ಗುಣಪಡಿಸುತ್ತದೆ. ಗುಗ್ಗುಳವನ್ನು ಸೇವಿಸುವಾಗ್ಯೆ ಹುಳಿ ಪದಾರ್ಥಗಳನ್ನೂ ಅಜೀರ್ಣವಾಗುವಂತಹ ಪದಾರ್ಥಗಳನ್ನೂ, ಉಷ್ಣಪದಾರ್ಥಗಳನ್ನೂ, ವ್ಯಾಯಾಮಮಾಡುವುದನ್ನೂ, ಶ್ರಮಪಟ್ಟು ಕೆಲಸಮಾಡುವುದನ್ನೂ, ಬಿಸಿಲಿನಲ್ಲಿ ಸಂಚರಿಸುವುದನ್ನೂ, ಮದ್ಯಪಾನಮಾಡುವುದನ್ನೂ, ಸಿಟ್ಟು ಮಾಡುವುದನ್ನೂ ಬಿಟ್ಟು ಬಿಡಬೇಕು.

> ತ್ರಿಫಲಂತ್ರಿಫಲಾಚೂರ್ಣಂಕೃಷ್ಣಾಚೂರ್ಣಂಪಲೋನ್ಮಿತಂ ॥
> ಗುಗ್ಗುಲುಂಪಾಂಚಪಲಿಕಂಕ್ಷೋದಯೇತ್ಸರ್ವಮೇಕತಃ ॥ ೮೨ ॥
> ತತಸ್ತುಗುಟಿಕಾಂಕೃತ್ವಾಪ್ರಯುಂಜ್ಯಾದ್ವಹ್ನ್ಯಪೇಕ್ಷಯಾ ॥
> ಭಗಂದರಂಗುಲ್ಮಶೋಥಾವಶಾಂಸಿಚವಿನಾಶಯೇತ್ ॥ ೮೩ ॥

ತ್ರಿಫಲಗುಗ್ಗುಲು—ತ್ರಿಫಲಚೂರ್ಣ ಮೂರು ಪಲ ಪ್ರಮಾಣ, ಹಿಪ್ಪಲಿಯ ಚೂರ್ಣ ಒಂದು ಪಲ, ಗುಗ್ಗುಳ ಐದು ಪಲ ಇವಿಷ್ಟನ್ನೂ ಸೇರಿಸಿ ಚನ್ನಾಗಿ ಕುಟ್ಟಿ ತುಪ್ಪವನ್ನೂ ಕೊಂಚ ಸೇರಿಸಿ ಮಿದ್ದು ಗುಳಿಗೆಗಳನ್ನು ಮಾಡಿಕೊಂಡು ಜೀರ್ಣಶಕ್ತಿಯನ್ನು ನೋಡಿಕೊಂಡು ಸೇವಿಸುತ್ತ ಬರುವುದು, ಇದರಿಂದಭ ಗಂದರ, ಗುಲ್ಮ, ಶೋಥ, ಮೂಲವ್ಯಾಧಿ ಇವುಗಳು ಗುಣವಾಗುತ್ತವೆ.

> ಅಷ್ಟಾವಿಂಶತಿಸಂಖ್ಯಾನಿಪಲಾನ್ಯಾನೀಯಗೋಕ್ಷುರಾತ್ ॥
> ವಿಪಚೇತ್ಷಡ್ಗುಣೇನೀರೇಕ್ವಾಥೋಗ್ರಾಹ್ಯೋರ್ಧಶೋಷಿತಃ॥೮೪॥
> ತತಃಪುನಃಪಚೇತ್ತತ್ರಪುರಂಸಪ್ತಪಲಂಕ್ಷಿಪೇತ್ ॥
> ಗುಡಪಾಕಸಮಾಕಾರಂಜ್ಞಾತ್ವಾತತ್ರವಿನಿಕ್ಷಿಪೇತ್ ॥ ೮೫ ॥
> ತ್ರಿಕಟುತ್ರಿಫಲಾಮುಸ್ತಂಚೂರ್ಣಿತಂಪಲಸಪ್ತಕಂ ॥
> ತತಃಪಿಂಡೀಕೃತಸ್ಯಾಸ್ಯಗುಟಿಕಾಮುಖಯೋಜಿತಾ ॥ ೮೬ ॥
> ಹನ್ಯಾತ್ಪ್ರಮೇಹಂಕೃಚ್ಛ್ರಂಚಪ್ರದರಂಮೂತ್ರಘಾತಕಂ ॥
> ವಾತಾಸ್ರಂವಾತರೋಗಾಂಶ್ಚ ಶುಕ್ರದೋಷಂತಥಾಶ್ಮರೀಂ ॥ ೮೭ ॥

ಗೋಕ್ಷುರಾದಿಗುಗ್ಗುಳವನ್ನು ಹೇಳುತ್ತಾನೆ—ಇಪ್ಪತ್ತೆಂಟು ಪಲ ಪರಿಮಾಣ ಆನೆನೆಗ್ಗಲು ಮುಳ್ಳನ್ನು ಆರಿಸಿಕೊಂಡು ತಂದು ಅದರ ಆರರಷ್ಟು ನೀರಿನಲ್ಲಿ ಕಷಾಯವಿಟ್ಟು ಅರ್ಧಭಾಗ ನೀರು ನಿಲ್ಲುವಷ್ಟು ಕಷಾಯವನ್ನು ಮಾಡಿ ಇಳಿಸಿ ಕೊಂಡು ಅದರಲ್ಲಿ ಏಳು ಪಲ ಶುದ್ಧವಾದ ಗುಗ್ಗುಳವನ್ನು ಹಾಕಿ ಮತ್ತೆ ಒಲೆಯ ಮೇಲಿರಿಸಿ ಕಾಯಿಸುವುದಕ್ಕುಪಕ್ರಮಿಸಿ ಪಾಕವು ಬೆಲ್ಲದ ಪಾಕದ ಹದಕ್ಕೆ ಬಂದದ್ದನ್ನು ನೋಡಿ ಅದರಲ್ಲಿ ತ್ರಿಕಟು (ಶುಂಠಿ, ಹಿಪ್ಪಲಿ, ಮೆಣಸು), ತ್ರಿಫಲ (ಅಳಲೆ, ತಾರೆ, ನೆಲ್ಲಿ), ಭದ್ರಮುಷ್ಟೆ, ಈ ಏಳು ಪದಾರ್ಥಗಳನ್ನೂ ಒಂದೊಂದು ಪಲದಷ್ಟು ತೆಗದುಕೊಂಡು ಚೂರ್ಣಮಾಡಿ ಅದರಲ್ಲಿ ಸೇರಿಸಿ ಚನ್ನಾಗಿ ಕೂಡಿಸಿ ಮುದ್ದೆಯಾಗಿ ಮಾಡಿ ಇರಿಸಿಕೊಂಡು ಜೀರ್ಣಬಲವನ್ನು ಪರ್ಯಾಲೋಚಿಸಿಕೊಂಡು ಗುಳಿಗೆಗಳನ್ನು ಮಾಡಿ ಸೇವಿಸುತ್ತ ಬಂದಲ್ಲಿ ಮೇಹರೋಗ, ಮೂತ್ರಕೃಚ್ಛ್ರ, ಅಸೃಗ್ಧರ, ಮೂತ್ರಘಾತ, ವಾತರಕ್ತ, ವಾತರೋಗಗಳು, ಶುಕ್ರದೋಷ, ಅಶ್ಮರಿ (ಎಂದರೆ ಮೂತ್ರದೊಳಗಿನ ಕಲ್ಲು) ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

ತ್ರಿಫಲಾಷ್ಟಪಲಾಕಾರ್ಯಾಭಲ್ಲಾತಂಚಚತುಷ್ಪಲಂ ||
ಬಾಕುಚೀಪಂಚಪಲಿಕಾವಿಡಂಗಾನಾಂಚತುಷ್ಪಲಂ || ೮೮ ||
ಹತಲೋಹಂತ್ರಿವೃಚ್ಚೈವಗುಗ್ಗುಲುಶ್ಚಶಿಲಾಜತು ||
ಏಕೈಕಂಪಲಮಾತ್ರಂಸ್ಯಾತ್ಪಲಾರ್ಧಂಪೌಷ್ಕರಂಭವೇತ್ || ೮೯ ||
ಚಿತ್ರಕಸ್ಯಪಲಾರ್ಧಂಸ್ಯಾದ್ದ್ವಿಶಾಣಂಮರಿಚಂಭವೇತ್ ||
ನಾಗರಂಪಿಪ್ಪಲೀಮುಸ್ತಾತ್ವಗೇಲಾಪತ್ರಕುಂಕುಮಂ || ೯೦ ||
ಶಾಣೋನ್ಮಿತಂಸ್ಯಾದೇಕೈಕಂಚೂರ್ಣಯೇತ್ಸರ್ವಮೇಕತಃ ||
ತತಸ್ತತ್ರಕ್ಷಿಪೇಚ್ಚೂರ್ಣಂಪಕ್ವಖಂಡೇಚತತ್ಸಮೇ || ೯೧ ||
ಮೋದಕಾನ್ಪಲಿಕಾನ್ಕೃತ್ವಾಪ್ರಯುಂಜೀತಯಥೋಚಿತಾನ್ ||
ಹನ್ಯಾತ್ಸರ್ವಾಣಿಕುಷ್ಠಾನಿತ್ರಿದೋಷಪ್ರಭವಾಮಯಾನ್ || ೯೨ ||
ಭಗಂದರಪ್ಲೀಹಗುಲ್ಮಾಂಜಿಹ್ವಾತಾಲುಗಲಾಮಯಾನ್ ||
ಶಿರೋಕ್ಷಿಭ್ರೂಗತಾನ್ರೋಗಾನ್ಹನ್ಯಾತ್ಪೃಷ್ಠಗತಾನಪಿ || ೯೩ ||
ಪ್ರಾಗ್ಭೋಜನಸ್ಯದೇಯಂಸ್ಯಾದಧಃಕಾಯಸ್ಥಿತೇಗದೇ ||
ಭೇಷಜಂಭಕ್ತಮಧ್ಯೇಚರೋಗೇಜಠರಸಂಸ್ಥಿತೇ || ೯೪ ||
ಭೋಜನಸ್ಯೋಪರಿಗ್ರಾಹ್ಯಮೂರ್ಧ್ವಜತ್ರುಗದೇಷುಚ ||

ತ್ರಿಫಲಾ ಮೋದಕವನ್ನು ಹೇಳುತ್ತಾನೆ—ತ್ರಿಫಲ (ಅಳಲೆ, ತಾರೆ, ನೆಲ್ಲಿ) ಎಂಟು ಪಲ, ಗೇರುಹರಳು ನಾಲ್ಕು ಪಲ, ಬಾವಂಚಿಬೀಜ ಐದು ಪಲ, ವಾಯು

ವಿಡಂಗ ನಾಲ್ಕು ಪಲ, ಲೋಹಭಸ್ಮ, ತಿಗಡೆ, ಗುಗ್ಗುಲ, ಶಿಲಾಜತು ಇವು ನಾಲ್ಕೂ ಪ್ರತ್ಯೇಕ ಒಂದೊಂದು ಪಲ, ಪುಷ್ಕರಮೂಲ ಅರ್ಧಪಲ, ಚಿತ್ರಮೂಲ ಅರ್ಧಪಲ, ಎರಡು ಶಾಣ ಪರಿಮಾಣ (ಒಂದು ತೊಲ) ಮೆಣಸು, ಶುಂಠಿ, ಹಿಪ್ಪಲಿ, ಭದ್ರಮುಸ್ತೆ, ಲವಂಗಪತ್ರೆ, ಯಾಲಕ್ಕಿ, ಜಾಯಿಪತ್ರೆ, ಕುಂಕುಮ ಕೇಸರಿ, ಇವು ಏಳೂ ಪ್ರತ್ಯೇಕ ಒಂದೊಂದು ಶಾಣ ಪರಿಮಾಣ, ಈ ರೀತಿ ಮೇಲೆ ಹೇಳಿದ ವಸ್ತುಗಳನ್ನೆಲ್ಲಾ ಕೂಡಿಸಿ ಸಣ್ಣ ಚೂರ್ಣಮಾಡಿ ಚೂರ್ಣದಷ್ಟು ಕಲ್ಲು ಸಕ್ಕರೆಯ ಪಾಕವಿರಿಸಿ ಅದರಲ್ಲಿ ಚೂರ್ಣವನ್ನು ಕೂಡಿಸಿ ಮೋದಕಗಳನ್ನು ಮಾಡಿ ಇರಿಸಿಕೊಂಡು ದೇಶಕಾಲಾನುಗುಣವಾಗಿ ಪ್ರಯೋಗಿಸತಕ್ಕದ್ದು, ಇದರಿಂದ ಸಮಸ್ತ ವಿಧವಾದ ಕುಷ್ಠರೋಗ, ತ್ರಿದೋಷ ಪ್ರಕೋಪಜನಿತಗಳಾದ ರೋಗಗಳು, ಭಗಂದರ, ಪ್ಲೀಹಾಭಿವೃದ್ಧಿ, ಗುಲ್ಮ, ನಾಲಿಗೆ, ದವಡೆ, ಗಂಟಲು ಇವುಗಳಿಗೆ ಸಂಭವಿಸುವ ರೋಗಗಳು, ತಲೆ, ಕಣ್ಣು, ಕಣ್ಣುಹುಬ್ಬು, ಇವುಗಳಿಗೆ ಬರುವ ರೋಗಗಳು, ಪೃಷ್ಠಭಾಗದಲ್ಲಿ ಸಂಭವಿಸಬಹುದಾದ ರೋಗಗಳು ಇವುಗಳನ್ನೆಲ್ಲಾ ನಿವಾರಣ ಮಾಡಬಹುದು. ಶರೀರದ ಕೆಳಭಾಗದಲ್ಲಿರುವ ರೋಗಗಳಿಗಾಗಿ ಕೊಡಬೇಕಾದರೆ ಭೋಜನಕ್ಕೆ ಮೊದಲಿನಲ್ಲಿಯೂ, ಉದರಗತರೋಗಗಳಿಗಾಗಿ ಕೊಡಬೇಕಾದಲ್ಲಿ ಭೋಜನ ಮಧ್ಯದಲ್ಲಿಯೂ ಕಂಠದಿಂದ ಮೇಲ್ಭಾಗದಲ್ಲಿರುವ ರೋಗಗಳಿಗಾಗಿ ಕೊಡಬೇಕಾದರೆ ಭೋಜನಾ ನಂತರದಲ್ಲಿಯೂ ಕೊಡಬೇಕು.

ಕಾಂಚನಾರತ್ವಚೋಗ್ರಾಹ್ಯಂಪಲಾನಾಂದಶಕಂಬುಧೈಃ ॥ ೯೫ ॥
ತ್ರಿಫಲಾಷಟ್ಪಲಾಕಾರ್ಯಾತ್ರಿಕಟುಸ್ಯಾತ್ಪಲತ್ರಯಂ ॥
ಪಲೈಕಂವರುಣಂಕುರ್ಯಾದೇಲಾತ್ವಕ್ಪತ್ರಕಂತಥಾ ॥ ೯೬ ॥
ಏಕೈಕಂಕರ್ಷಮಾತ್ರಂಸ್ಯಾತ್ಸರ್ವಾಣ್ಯೇಕತ್ರಚೂರ್ಣಯೇತ್ ॥
ಯಾವಚ್ಚೂರ್ಣಮಿದಂಸರ್ವಂತಾವನ್ಮಾತ್ರಸ್ತುಗುಗ್ಗುಲುಃ ॥ ೯೭ ॥
ಸಂಕುಟ್ಯಸರ್ವಮೇಕತ್ರಪಿಂಡಂಕೃತ್ವಾಚಧಾರಯೇತ್ ॥
ಗುಟಿಕಾಶ್ಶಾಣಮಾತ್ರೇಣಪ್ರಾತಗ್ರಾರ್ಹ್ಯಾಯಥೋಚಿತಂ ॥೯೮॥
ಗಂಡಮಾಲಾಂಜಯತ್ಯುಗ್ರಾಮುಪಚೀಮರ್ಬುದಾನಿಚ ॥
ಗ್ರಂಥೀನ್ವ್ರಣಾಂಶ್ಚಗುಲ್ಮಾಂಶ್ಚಕುಷ್ಠಾನಿಚಭಗಂದರಂ ॥ ೯೯ ॥
ಪ್ರದೇಯಶ್ಚಾನುಪಾನಾರ್ಥಂಕ್ವಾಥೋಮುಂಡಿತಕಾಭವಃ ॥
ಕ್ವಾಥಃಖದಿರಸಾರಸ್ಯಪಥ್ಯಾಕ್ವಾಥೋಥಕೋಷ್ಣಕಂ ॥ ೧೦೦ ॥

ಕಾಂಚನಾರಗುಗ್ಗುಲವನ್ನು ಹೇಳುತ್ತಾನೆ—ಕಂಚುವಾಳದ ಮರದ ತೊಪ್ಪೆ ಹತ್ತು ಪಲ, ತ್ರಿಫಲ (ಅಳಲೆ, ತಾರೆ, ನೆಲ್ಲಿ) ಆರು ಪಲ, ತ್ರಿಕಟು (ಶುಂಠಿ,

ಹಿಪ್ಪಲಿ, ಮೆಣಸು) ಮೂರು ಪಲ, ವರುಣ ಎಂಬ ಮರದ ತೊಗಟೆ ಒಂದು ಪಲ, ಯಾಲಕ್ಕಿ, ಲವಂಗಪತ್ರೆ, ಜಾಯಿಪತ್ರೆ ಇವು ಮೂರೂ ಒಂದೊಂದು ಕರ್ಷ ಪ್ರಮಾಣ, ಈ ರೀತಿ ಎಲ್ಲವನ್ನೂ ಸೇರಿಸಿ ಸಣ್ಣನಾಗಿ ಚೂರ್ಣಮಾಡಿ ಈ ಚೂರ್ಣ ವೆಷ್ಟಾಗುತ್ತದೋ ಅಷ್ಟು ಗುಗ್ಗುಲವನ್ನು ಸೇರಿಸಿ ಎಲ್ಲವನ್ನೂ ಸೇರಿಸಿ ಕುಟ್ಟಿ ಒಂದು ಮುದ್ದೆಮಾಡಿ ಇರಿಸಿಕೊಂಡು ಒಂದೊಂದು ಶಾಣ ಪ್ರಮಾಣ ಗುಳಿಗೆ ಮಾಡಿ ಬೆಳಿಗ್ಗೆ ಸೇವಿಸುತ್ತ ಬರಬೇಕು, ಇದರಿಂದ ಭಯಂಕರವಾದ ಗಂಡಮಾಲೆ, ಅಪಚಿ ಎಂಬ ವ್ರಣ, ಅರ್ಬುದವೆಂಬ ವ್ರಣ, ಗಂಟುಗಳು, ವ್ರಣಗಳು, ಗುಲ್ಮ ಗಳು, ಕುಷ್ಠರೋಗ, ಭಗಂದರ, ಇವುಗಳು ನಿವಾರಣವಾಗುತ್ತವೆ ಕಾಂಚನಾರ ಗುಗ್ಗುಲವನ್ನು ಸೇವಿಸುವಾಗ್ಯೆ ಅನುಪಾನವಾಗಿ ಅನಂತನ ಗೊಂಡೆಯ ಗಿಡದ ಕಷಾಯ, ಕಾಚಿನ ಕಷಾಯ, ಬಿಸಿಯಾದ ಅಳಲೆಯಕಾಯಿ ಕಷಾಯ ಇವು ಗಳನ್ನು ಕೊಡಬೇಕು.

ನಿಸ್ತುಷಂಮಾಷಚೂರ್ಣಂಸ್ಯಾತ್ತಥಾಗೋಧೂಮಸಂಭವಂ ॥
ನಿಸ್ತುಷಂಯವಚೂರ್ಣಂಚಶಾಲಿತಂಡುಲಜಂತಥಾ ॥ ೧೦೦ ॥
ಸೂಕ್ಷ್ಮಂಚಪಿಪ್ಪಲೀಚೂರ್ಣಂಪಲಿಕಾನ್ಯುಪಕಲ್ಪಯೇತ್ ॥
ತತಏಕೀಕೃತಂಸರ್ವಂಭರ್ಜಯೇದ್ಗೋಘೃತೇನಚ ॥ ೧೦೨ ॥
ಅರ್ಧಮಾತ್ರೇಣಸರ್ವೇಭ್ಯಸ್ತತಃಖಂಡಂಸಮಂಕ್ಷಿಪೇತ್ ॥
ಜಲಂಚದ್ವಿಗುಣಂದತ್ವಾಪಾಚಯೇತಶನೈಶ್ಶನೈಃ ॥ ೧೦೩ ॥
ತತಃಪಕ್ವಂಸಮುದ್ಧೃತ್ಯವೃತ್ತಾನ್ಕುರ್ವೀತಮೋದಕಾನ್ ॥
ಭುಕ್ತ್ವಾರಸಾಯಂಪಲೈಕಂಚಪಿಬೇತ್ಕ್ಷೀರಂಚತುರ್ಗುಣಂ॥೧೦೪॥
ವರ್ಜನೀಯತಾವಿಶೇಷೇಣಕ್ಷಾರಾಮ್ಲದ್ವಿರಸಾವಪಿ ॥
ಕೃತ್ವೈವಂರಮಯೇನ್ನಾರೀರ್ಬಹ್ವೀರ್ನಕ್ಷೀಯತೇನರಃ ॥ ೧೦೫ ॥

ಮಾಷಾದಿ ಮೋದಕವನ್ನು ಹೇಳುತ್ತಾನೆ—ಉದ್ದಿನಕಾಳಿನ ಹೊಟ್ಟನ್ನು ತೆಗೆದು ಅದನ್ನು ಚೂರ್ಣಮಾಡಿಕೊಳ್ಳುವುದು, ಅದರಂತೆಯೇ ಗೋಧಿಯಹಿಟ್ಟು, ಯವವೆಂದು ಕಾಶೀದೇಶದಲ್ಲಿ ಪ್ರಸಿದ್ಧವಾಗಿರುವ ಧಾನ್ಯದ ಚೂರ್ಣ, ಅಕ್ಕಿಯ ಹಿಟ್ಟು, ನಯವಾದ ಹಿಪ್ಪಲಿಯ ಚೂರ್ಣ ಈ ರೀತಿಯಾಗಿ ಹಿಂದೆ ಹೇಳಿದ ಚೂರ್ಣಗಳೆಲ್ಲವನ್ನೂ ಒಂದೊಂದು ಪಲ ಪ್ರಮಾಣ ಕೂಡಿಸಿ ಹಸುವಿನ ತುಪ್ಪ ದಲ್ಲಿ ಚನ್ನಾಗಿ ಹುರಿದು ಈ ಚೂರ್ಣಗಳ ಅರ್ಧದಷ್ಟು ಕಲ್ಲುಸಕ್ಕರೆ ಮತ್ತು ಎರಡರಷ್ಟು ನೀರು ಸಹಾ ಹಾಕಿ ಅಡಿಹತ್ತದಂತೆ ಮೆಲ್ಲಗೆ ದೀಪಾಗ್ನಿಯಿಂದ ಪಕ್ವ ಮಾಡಬೇಕು, ಚನ್ನಾಗಿ ಪಕ್ವವಾದ ಮೇಲೆ ಕೆಳಗಿಳಿಸಿಕೊಂಡು ಒಂದೊಂದು ಪಲ ಪ್ರಮಾಣಕ್ಕೆ ಒಂದೊಂದರಂತೆ ದುಂಡಾದ ಮೋದಕಗಳನ್ನು ಮಾಡಿ ಇರಿಸಿಕೊಂಡು

ಪ್ರತಿ ದಿವಸ ಸಾಯಂಕಾಲ ಒಂದೊಂದು ಮೋದಕವನ್ನು ಭಕ್ಷಿಸಿ ನಾಲ್ಕು ಪಲ ಹಾಲನ್ನು ಕುಡಿಯುತ್ತ ಬರಬೇಕು, ಇದನ್ನು ತಿನ್ನುವಾಗ್ಯೆ ಹುಳಿ ಮತ್ತು ಉಪ್ಪು ತಿನ್ನುವದನ್ನು ಕಡಮೆಮಾಡಬೇಕು, ಈ ರೀತಿ ಮಾಡುತ್ತ ಬಂದರೆ ಶುಕ್ರವೃದ್ಧಿಯಾಗಿ ಅನೇಕ ಜನ ಸ್ತ್ರೀಯರನ್ನು ಸಂತೋಷ ಪಡಿಸುವಷ್ಟು ಶಕ್ತಿ ಬರುತ್ತದೆ.

ಇಲ್ಲಿಗೆ ಏಳನೆಯ ಅಧ್ಯಾಯ ಸಂಪೂರ್ಣ.

---

## ಎಂಟನೆಯ ಅಧ್ಯಾಯ.

ಕ್ವಾಥಾದೀನಾಂಪುನಃಪಾಕಾದ್ಘನತ್ವಂಸಾರಸಕ್ರಿಯಾ ॥
ಸೋವಲೇಹಶ್ಚಲೇಹಸ್ಯಾತ್ತನ್ಮಾತ್ರಾಸ್ಯಾತ್ಪಲೋನ್ಮಿತಾ ॥ ೧ ॥

ಹಿಂದಲ ಅಧ್ಯಾಯದಲ್ಲಿ ಚೂರ್ಣಗಳನ್ನು ಹೇಳಿ ಈ ಅಧ್ಯಾಯದಲ್ಲಿ ಲೇಹ್ಯಗಳನ್ನು ಮಾಡುವ ವಿಷಯವನ್ನು ಪ್ರಾರಂಭಿಸುತ್ತಾನೆ. ಸ್ವರಸ, ಕ್ವಾಥ, ಕಷಾಯಾದಿಗಳನ್ನು ಪುನಶ್ಚ ಘಟ್ಟಿಯಾಗುವವರಿಗೂ ಪಾಕಮಾಡಿದರೆ ಅದಕ್ಕೇನೇ ರಸಕ್ರಿಯೆ ಎಂಬದಾಗಿಯೂ, ಅವಲೇಹವೆಂಬದಾಗಿಯೂ, ಲೇಹವೆಂಬದಾಗಿಯೂ ಹೆಸರುಗಳು, ಇಂತಹ ಲೇಹವನ್ನು ಸೇವನಮಾಡಬೇಕಾದರೆ ಒಂದು ಪಲ ಪರಿಮಾಣವನ್ನು ಸೇವಿಸಬೇಕು.

ಸಿತಾಚತುರ್ಗುಣಾಕಾರ್ಯಾಚೂರ್ಣಾಚ್ಚದ್ವಿಗುಣೋಗುಡಃ ॥
ದ್ರವಂಚತುರ್ಗುಣಂದದ್ಯಾದಿತಿಸರ್ವತ್ರನಿಶ್ಚಯಃ ॥ ೨ ॥

ಲೇಹಪಾಕ ಮಾಡುವಾಗ್ಯೆ ಲೇಹಕ್ಕೆ ಹಾಕತಕ್ಕ ಚೂರ್ಣಗಳ ನಾಲ್ಕರಷ್ಟು ಸಕ್ಕರೆಯನ್ನು ಹಾಕಬೇಕು, ಬೆಲ್ಲವನ್ನು ಹಾಕುವುದಾದರೆ ಎರಡರಷ್ಟು ಹಾಕಬೇಕು, ಯಾವುದಾದರೂ ದ್ರವಪದಾರ್ಥವನ್ನು ಹಾಕುವುದಿದ್ದಲ್ಲಿ ಸೇರಿಸುವ ಚೂರ್ಣದ ನಾಲ್ಕರಷ್ಟು ಸೇರಿಸಬೇಕು, ಇದು ಸಿದ್ಧಾಂತ.

ಸುಪಕ್ವೇತಂತುಮತ್ವಂಸ್ಯಾದವಲೇಹೋಪ್ಸುಮಜ್ಜತಿ ॥
ಖರತ್ವಂಪೀಡಿತೇಮುದ್ರಾಗಂಧವರ್ಣರಸೋದ್ಭವಃ ॥ ೩ ॥

ಲೇಹಪಾಕದ ಲಕ್ಷಣವನ್ನು ಹೇಳುತ್ತಾನೆ—ಲೇಹವು ಚನ್ನಾಗಿ ಪಕ್ವವಾಯಿತೆಂದರೆ ಹಿಡಿದು ಎಳೆದರೆ ದಾರದಂತೆ ಸಾಗಿ ಬರುವುದು, ನೀರಿನಲ್ಲಿ ಒಂದು ಚೂರನ್ನು ಹಾಕಿದಲ್ಲಿ ಮುಳುಗಿಕೊಳ್ಳುವುದು, ಆರಿದ ಹಾಗೆಲ್ಲಾ ಗಟ್ಟಿಯಾಗುವುದು, ಬೆರಳಿನಿಂದ ಹಿಸುಕಿದರೆ ಬೆರಳಿನ ರೇಖೆಗಳೆಲ್ಲಾ ಲೇಹದ ಮೇಲೆ ಕಾಣುವುದು, ಸುವಾಸನೆ, ನೋಡುವುದಕ್ಕೆ ಅಂದವಾದ ಬಣ್ಣ, ಬಾಯಿಗೆ ಹಾಕಿಕೊಂಡರೆ

ಸರಿಯಾದ ರಸ ಇವುಗಳು ಹುಟ್ಟಿಕೊಂಡರೆ ಲೇಹವು ಪಕ್ವವಾಯಿತೆಂದು ತಿಳಿದು ಇಳಿಸಿಕೊಳ್ಳುವುದು

ದುಗ್ಧಮಿಕ್ಷುರಸೋಯೂಷಃ ಪಂಚಮೂಲೀಕಷಾಯಕಂ ॥
ವಾಸಾಕ್ವಾಥೋಯಥಾಯೋಗ್ಯಮನುಪಾನಂಪ್ರಶಸ್ಯತೇ ॥ ೪ ॥

ಲೇಹವನ್ನು ಸೇವಿಸುವ ಕಾಲದಲ್ಲಿ ಸೇವಿಸಬಹುದಾದ ಅನುಪಾನಗಳನ್ನು ಹೇಳುತ್ತಾನೆ—ಲೇಹವನ್ನು ಸೇವಿಸಿದ ಮೇಲೆ ಹಾಲು ಕುಡಿಯಬಹುದು. ಕಬ್ಬಿನ ಹಾಲನ್ನು ಕುಡಿಯಬಹುದು, ಸ್ಥೂಲ ಪಂಚಮೂಲ, ಸೂಕ್ಷ್ಮ ಪಂಚ ಮೂಲ ಇವುಗಳೆರಡರ ಮಧ್ಯೆ ಸಂದರ್ಭಾನುಸಾರವಾಗಿ ಯಾವುದರಿಂದಲಾದರೂ ಸಾಧಿತವಾದ ಯೂಷವೆಂಬ ಒಂದು ಬಗೆಯ ಕಷಾಯವನ್ನಾಗಲಿ ಆಡುಸೋಗೆಯ ಸೊಪ್ಪಿನ ಕ್ವಾಥವನ್ನಾಗಲಿ ದೇಹಾನುಗುಣ ರೋಗಾನುಗುಣವಾಗಿ ಅನುಪಾನ ಗಳನ್ನು ವೈದ್ಯರುಗಳು ಕಲ್ಪಿಸಬಹುದು.

ಕಂಟಕಾರೀತುಲಾಂನೀರದ್ರೋಣೇಪಕ್ತ್ವಾಕಷಾಯಕಂ ॥
ಪಾದಶೇಷಂಗೃಹೀತ್ವಾಚತಸ್ಮಿನ್ ಚೂರ್ಣಾನಿದಾಪಯೇತ್ ॥ ೫ ॥
ಪೃಥಕ್ಪಲಾನಿಚೈತಾನಿಗುಡೂಚೀಚವ್ಯಚಿತ್ರಕಾಃ ॥
ಮುಸ್ತಂಕರ್ಕಟಶೃಂಗೀಚತ್ರ್ಯೂಷಣಂಧನ್ವಯಾಸಕಃ ॥ ೬ ॥
ಭಾರ್ಗೀರಾಸ್ನಾಶಠೀಚೈವಶರ್ಕರಾ ಪಲವಿಂಶತಿಃ ॥
ಪ್ರತ್ಯೇಕಂಚಪಲಾನ್ಯಷ್ಟೌಪ್ರದದ್ಯಾದ್ಘೃತತೈಲಯೋಃ ॥ ೭ ॥
ಪಕ್ತ್ವಾಲೇಹತ್ವಮಾನೀಯಶೀತೇಮಧುಪಲಾಷ್ಟಕಂ ॥
ಚತುಷ್ಪಲಂತುಗಾಕ್ಷೀರ್ಯಾಃಪಿಪ್ಪಲೀನಾಂಚತುಷ್ಪಲಂ ॥ ೮ ॥
ಕ್ಷಿಪ್ತ್ವಾನಿದಧ್ಯಾತ್ಸುದೃಢೇಮೃಣ್ಮಯೇಭಾಜನೇಶುಭೇ ॥
ಲೇಹೋಯಂಹಂತಿಹಿಕ್ಕಾರ್ತಿಶ್ವಾಸಕಾಸಾನಶೇಷತಃ ॥ ೯ ॥

ಕಂಟಕಾರ್ಯವಲೇಹನಿರ್ಮಾಣ ಕ್ರಮವನ್ನು ಹೇಳುತ್ತಾನೆ—ಒಂದುನೂರು ಪಲ ನೆಲಗುಳ್ಳದ ಗಿಡವನ್ನು ಬೇರು ಎಲೆ ಕಾಯಿ ಸಮೇತವಾಗಿ ತಂದು ಒಂದು ದ್ರೋಣ ಎಂದರೆ ನಾಲ್ಕು ಆಢಕ ಪ್ರಮಾಣ ನೀರಿನಲ್ಲಿ ಬೇಯಿಸಿ ನಾಲ್ಕರಲ್ಲಿ ಒಂದು ಪಾಲು ಕಷಾಯ ಇಳಿಸಿ ಶೋಧಿಸಿಕೊಂಡು ಪುನಃ ಆ ಕಷಾಯವನ್ನು ಒಲೆಯ ಮೇಲೆ ಕಾಯುವುದಕ್ಕಿರಿಸುವುದು, ಆ ಕಷಾಯದಲ್ಲಿ ಅಮೃತಬಳ್ಳಿ, ಚವ್ಯ ಎಂದರೆ ಕಾಡುಮೆಣಸಿನ ಬಳ್ಳಿ, ಚಿತ್ರಮೂಲ, ಭದ್ರಮುಷ್ಟಿ, ಕರ್ಕಾಟಕ ಶೃಂಗಿ, ತ್ರ್ಯೂಷಣ (ಶುಂಠಿ, ಹಿಪ್ಪಲಿ, ಮೆಣಸು), ತುಳಚೀಬೇರು, ಗಂಟು ಭಾರಂಗಿ, ಸಣ್ಣರಾಸ್ನೆ, ಕಚೋರ, ಈ ಪದಾರ್ಥಗಳನ್ನು ಪ್ರತ್ಯೇಕ ಒಂದೊಂದು

ಪಲದಂತೆ ಕೂಡಿಸಿ ಸಣ್ಣನಾದ ಚೂರ್ಣಮಾಡಿ ವಸ್ತ್ರಗಾಳಿತ ಮಾಡಿಕೊಂಡು ಸೇರಿಸಿ ಇಪ್ಪತ್ತು ಪಲ ಸಕ್ಕರೆಯನ್ನೂ ಸೇರಿಸಿ ಪಾಕಮಾಡುತ್ತಾ ಪಕ್ವವಾಗುವ ಸ್ಥಿತಿಗೆ ಬಂದಾಗ್ಯೆ ಎಂಟು ಪಲ ಹಸುವಿನ ತುಪ್ಪ ಎಂಟು ಪಲ ಎಳ್ಳೆಣ್ಣೆ ಇವು ಗಳನ್ನು ಸೇರಿಸಿ ಪೂರ್ಣ ಪಕ್ವವಾದ ಮೇಲೆ ಇಳಿಸಿಕೊಂಡು ಆರಿದ ಮೇಲೆ ಎಂಟು ಪಲ ಜೇನುತುಪ್ಪವನ್ನೂ ನಾಲ್ಕು ಪಲ ಬಿದುರುಪ್ಪನ್ನೂ ಸೇರಿಸಿ ಕೂಡಿಸಿ ನಾಲ್ಕು ಪಲ ಹಿಪ್ಪಲಿಯ ಚೂರ್ಣವನ್ನೂ ಸೇರಿಸಿಕೊಂಡು ಮಣ್ಣಿನ ಪಾತ್ರೆಯಲ್ಲಿ ಹಾಕಿ ಇರಿಸಿಕೊಳ್ಳುವುದು, ಈ ಲೇಹದ ಸೇವನೆಯಿಂದ ಬಿಕ್ಕಳಿಕೆ, ಉಬ್ಬಸ ಕೆಮ್ಮು ಮೊದಲಾದವುಗಳು ಶಾಂತವಾಗುತ್ತವೆ.

ಪಾಟಲಾರಣಿಕಾಶ್ಮರ್ಯಬಿಲ್ವಾರಲುಕಗೋಕ್ಷುರಾಃ ||
ಪರ್ಣ್ಯೌಬೃಹತ್ಯೌಪಿಪ್ಪಲ್ಯಃಶೃಂಗೀದ್ರಾಕ್ಷಾಮೃತಾಭಯಾಃ ||೧೦||
ಬಲಾಭೂಮ್ಯಾಮಲೀವಾಸಾಋದ್ಧಿಜೀವಂತಿಕಾಶಠೀ ||
ಜೀವಕರ್ಷಭಕೌಮುಸ್ತಂಪೌಷ್ಕರಂಕಾಕನಾಸಿಕಾ ||೧೧||
ಮುದ್ಗಪರ್ಣೀಮಾಷಪರ್ಣೀವಿದಾರೀಚಪುನರ್ನವಾ ||
ಕಾಕೋಲ್ಯೌಕಮಲಂಮೇದೇಸೂಕ್ಷ್ಮೈಲಾಗುರುಚಂದನಂ ||೧೨||
ಏಕೈಕಂಪಲಸಮ್ಮಾನಂಸ್ಥೂಲಚೂರ್ಣಿತಮೌಷಧಂ ||
ಏಕೀಕೃತ್ಯಮಹತ್ಪಾತ್ರೇಪಂಚಾಮಲಶತಾನಿಚ ||೧೩||
ಪಚೇದ್ದ್ರೋಣಜಲೇಕ್ಷಿಪ್ತ್ವಾಗ್ರಾಹ್ಯಮಷ್ಟಾವಶೇಷಿತಂ ||
ತತಸ್ತಾನ್ಯಾಮಲಾನಿನಿಷ್ಕುಲೀಕೃತ್ಯವಾಸಸಾ ||೧೪||
ದೃಢಹಸ್ತೇನಸಂಪೀಡ್ಯಕ್ಷಿಪ್ತ್ವಾತತ್ರತತೋಘೃತಂ ||
ಪಲಸಪ್ತಮಿತಂತಾನಿಕಿಂಚಿದ್ಭೃಷ್ಟ್ವಾಲ್ಪವಹ್ನಿನಾ ||೧೫||
ತತಸ್ತತ್ರಕ್ಷಿಪೇತ್ಕ್ವಾಥಂಖಂಡಂಚಾರ್ಧತುಲೋನ್ಮಿತಂ ||
ಲೇಹವತ್ಸಾಧಯಿತ್ವಾಚಚೂರ್ಣಾನೀಮಾನಿದಾಪಯೇತ್ ||೧೬||
ಪಿಪ್ಪಲೀದ್ವಿಪಲಾದೇಯಾತುಗಾಕ್ಷೀರೀಚತುಷ್ಪಲಾ ||
ಪ್ರತ್ಯೇಕಂಚತ್ರಿಶಾಣಂಸ್ಯಾತ್ತ್ವಗೇಲಾಪತ್ರಕೇಶರಂ ||೧೭||
ತತಸ್ತ್ವೇಕೀಕೃತಂಸರ್ವಂಕ್ಷಿಪೇತ್ಕ್ಷೌದ್ರಂಚಷಟ್ಪಲಂ ||
ಇತ್ಯೇತಚ್ಚ್ಯವನಪ್ರೋಕ್ತಂಚ್ಯವನಪ್ರಾಶಸಂಜ್ಞಿತಂ ||೧೮||
ಲೇಹಂವಹ್ನಿಬಲಂದೃಷ್ಟ್ವಾಖಾದೇತ್ಕ್ಷೀಣೋರಸಾಯನಂ ||
ಬಾಲವೃದ್ಧಕ್ಷತಕ್ಷೀಣಾನಾರೀಕ್ಷೀಣಾಶ್ಚಶೋಷಿಣಃ ||೧೯||
ಹೃದ್ರೋಗಿಣಃಸ್ವರಕ್ಷೀಣಾಯೇನರಾಸ್ತೇಷುಯುಜ್ಯತೇ ||
ಕಾಸಂಶ್ವಾಸಂಪಿಪಾಸಾಂಚವಾತಾಸ್ರಮುರಸೋಗ್ರಹಂ ||೨೦||

**ವಾತಪಿತ್ತಂಶುಕ್ರದೋಷಂಮೂತ್ರದೋಷಂಚನಾಶಯೇತ್ ॥**
**ಮೇಧಾಂಸ್ಮೃತಿಂಸ್ತ್ರೀಷುಹರ್ಷಂಕಾಂತಿಂವರ್ಣಪ್ರಸನ್ನತಾಂ ।೨೦।**
**ಅಸ್ಯಪ್ರಯೋಗಾದಾಪ್ನೋತಿನರೋಜೀರ್ಣವಿವರ್ಜಿತಃ ॥**

ಚ್ಯವನಪ್ರಾಶ್ಯಾವಲೇಹ್ಯವನ್ನು ಹೇಳುತ್ತಾನೆ—ಪಾದರಿ, ನರುವಲ, ಶಿವನೆ, ಬಿಲ್ವ, ದೊಡ್ಡಮರ, ಇವುಗಳ ಚಕ್ಕೆ, ನೆಗ್ಗಲು, ಶಾಲಿಪರ್ಣಿ, ಪೃಶ್ನಿಪರ್ಣಿ, ಹೆಗ್ಗುಳ್ಳ, ನೆಲಗುಳ್ಳ, ದೊಡ್ಡಹಿಪ್ಪಲಿ, ಸಣ್ಣಹಿಪ್ಪಲಿ, ಕರ್ಕಾಟಕಶೃಂಗಿ, ದ್ರಾಕ್ಷಿ, ಅಮೃತಬಳ್ಳಿ, ಅಳಲೇಕಾಯಿ, ಕಳ್ಳಂಗಡ್ಲೆ, ಕಿರುನೆಲ್ಲಿ, ಆಡುಸೋಗೆ, ಋದ್ಧಿ ಎಂಬ ಮೂಲಿಕೆ, ಜೀವಂತಿಕಾ ಎಂದರೆ ಹಾಲೇಬಳ್ಳಿ, ಕಚೋರ, ಜೀವಕ, ಋಷಭಕ, ಭದ್ರಮುಸ್ತೆ, ಪುಷ್ಕರಮೂಲ, ಕಾಕನಾಸಿಕಾ ಎಂದರೆ ಗಣಿಕೆಯ ಗಿಡದಲ್ಲಿ ಭೇದ, ಕಾಡು ಉದ್ದು, ಕಾಡು ಹೆಸರು, ಹಂದಿಗೆಡ್ಡೆ, ಕೊಮ್ಮೇ ಬೇರು, ಕಾಕೋಲಿ, ಕ್ಷೀರ ಕಾಕೋಲಿ, ತಾವರೆ, ಮೇದಾ, ಮಹಾಮೇದ, ಸಣ್ಣಯಾಲಕ್ಕಿ, ಅಗಿಲುಗಂಧ, ರಕ್ತಚಂದನ, ಈ ಹಿಂದೆ ಹೇಳಿದ ಎಲ್ಲಾ ವಸ್ತುಗಳೂ ಒಂದೊಂದು ಪಲದಷ್ಟು ಕೂಡಿಸಿ ದಪ್ಪನಾದ ಚೂರ್ಣಮಾಡಿ ದೊಡ್ಡ ಪಾತ್ರೆಯಲ್ಲಿ ಹಾಕಿ ಜೊತೆಯಲ್ಲಿ ಐದುನೂರು ನೆಲ್ಲಿಯ ಕಾಯಿಗಳನ್ನೂ ಹಾಕಿ ಒಂದು ದ್ರೋಣ ಪ್ರಮಾಣ ನೀರನ್ನು ಸುರಿದು ಬೇಯಿಸುತ್ತ ಎಂಟನೆಯ ಒಂದು ಭಾಗ ಕಷಾಯವನ್ನು ನಿಲ್ಲಿಸಿಕೊಂಡು ಬಿಂದ ನೆಲ್ಲಿಯಕಾಯಿಗಳನ್ನೆಲ್ಲಾ ಬಟ್ಟೆಯಲ್ಲಿ ಹಾಕಿ ಹಿಂಡಿ ಬೇರೆ ಯಾಗಿರಿಸಿಕೊಂಡು ಕಷಾಯವನ್ನು ಸೋಸಿಕೊಳ್ಳುವುದು, ಬೇರೊಂದು ಪಾತ್ರೆಗೆ ಏಳು ಪಲ ಹಸುವಿನ ತುಪ್ಪವನ್ನು ಹಾಕಿ ಅದರಲ್ಲಿ ಹಿಂಡಿ ಇರಿಸಿಕೊಂಡಿರುವ ನೆಲ್ಲಿಯಕಾಯಿಗಳನ್ನೆಲ್ಲಾ ಹಾಕಿ ದೀಪಾಗ್ನಿಯಿಂದ ಸ್ವಲ್ಪವಾಗಿ ಹುರಿದು ಬೇರೆ ಯಾಗಿ ಶೋಧಿಸಿ ಇರಿಸಿಕೊಂಡಿರುವ ಕಷಾಯವನ್ನು ಆ ಹುರಿದ ನೆಲ್ಲಿಯ ಕಾಯಿನ ಜೊತೆಗೆ ಸುರಿದು ಅದಕ್ಕೆ ಐವತ್ತು ಪಲ ಕಲ್ಲುಸಕ್ಕರೆಯನ್ನು ಸೇರಿಸಿ ಪಕ್ವಮಾಡುತ್ತಾ ಲೇಹ ಪಾಕಕ್ಕೆ ಬಂದ ಮೇಲೆ ಎರಡು ಪಲ ಹಿಪ್ಪಲಿ, ನಾಲ್ಕು ಪಲ ಬಿದರುಪ್ಪು ಇವುಗಳ ಚೂರ್ಣವನ್ನೂ, ಲವಂಗಪಟ್ಟೆ, ಯಾಲಕ್ಕಿ, ತಾಳೀಸ ಪತ್ರೆ, ನಾಗಕೇಸರಿ ಈ ವಸ್ತುಗಳು ಪ್ರತಿಯೊಂದೂ ಮೂರು ಮೂರು ಶಾಣ (ಅಂದರೆ ಪ್ರತ್ಯೇಕ ಒಂದೂವರೆ ತೊಲ) ಸೇರಿಸಿ ಚೂರ್ಣಮಾಡಿ ಆ ಚೂರ್ಣ ವನ್ನೂ ಅದರಲ್ಲಿ ಕಲೆಸಿ ಚನ್ನಾಗಿ ಪಕ್ವಮಾಡಿ ಇಳಿಸಿಕೊಂಡು ಆರಿದ ಮೇಲೆ ಅದರಲ್ಲಿ ಆರು ಪಲ ಜೇನುತುಪ್ಪವನ್ನು ಸೇರಿಸಿಕೊಳ್ಳಬೇಕು, ಹೀಗೆ ಸಿದ್ಧವಾದ ಲೇಹ್ಯಕ್ಕೆ ಚ್ಯವನಪ್ರಾಶವೆಂದು ಹೆಸರು, ಈ ಲೇಹವನ್ನು ಸೇವಿಸಬೇಕಾದಲ್ಲಿ ಜಠರಾಗ್ನಿ ಪಾಟವವನ್ನು ನೋಡಿಕೊಂಡು ಪರಿಮಾಣವನ್ನು ಗೊತ್ತುಮಾಡಿ ಕೊಳ್ಳಬೇಕು. ಕ್ಷಯಿಸಿಹೋದವರು ಅಂದರೆ ಕೃಶರಾದವರು, ಹುಡುಗರು, ಮುದುಕರು, ಅಭಿಘಾತಾದಿಗಳಿಂದ ಕ್ಷೀಣರಾದವರು, ಮಿತಿಮೀರಿ ಸ್ತ್ರೀಸಂಪರ್ಕ

ಮಾಡಿ ಕ್ಷಯಿಸಿಹೋದವರು, ಕ್ಷಯರೋಗಿಗಳು, ಹೃದಯರೋಗ ಉಳ್ಳವರು (ಹೃದಯ ದೌರ್ಬಲ್ಯ) ಸ್ವರಕ್ಷೀಣರು ಅಂದರೆ ಶಕ್ತಿಹೀನರಾಗಿ ಧ್ವನಿ ಕುಗ್ಗಿ ಹೋದವರು ಇಂತವರೆಲ್ಲರೂ ಸೇವಿಸಬಹುದು. ಕೆಮ್ಮು, ಉಬ್ಬಸ, ಅಕಾರಣ ವಾದ ಬಾಯಾರಿಕೆ, ವಾತರಕ್ತ, ಉರೋಗ್ರಹ, ವಾತಪಿತ್ತ, ಶುಕ್ರದೋಷ, ಮೂತ್ರದೋಷಗಳು, ಇವುಗಳನ್ನೆಲ್ಲಾ ನಿವಾರಣ ಮಾಡುತ್ತದೆ; ಬುದ್ಧಿಶಕ್ತಿ, ಜ್ಞಾಪಕಶಕ್ತಿ, ಹೆಂಗಸರ ಸಮಾಗಮ ವಿಷಯದಲ್ಲಿ ಉಲ್ಲಾಸ, ಶರೀರದ ಕಾಂತಿ, ದೇಹವರ್ಣ, ಮನಸ್ಸಿನ ಪ್ರಸನ್ನತೆ ಇವುಗಳನ್ನೆಲ್ಲಾ ಉಂಟುಮಾಡುತ್ತದೆ, ಇದನ್ನು ಸೇವಿಸುತ್ತ ಬಂದಲ್ಲಿ ಸಮಸ್ತ ರೋಗಗಳಿಗೂ ಕಾರಣ ಭೂತವಾದ ಅಜೀರ್ಣ ರೋಗವು ಹತ್ತಿರ ಸೇರುವುದಿಲ್ಲ.

ನಿಷ್ಕುಲೀಕೃತ್ಯಕೂಷ್ಮಾಂಡಖಂಡಾತ್ಪಲಶತಂಪಚೇತ್ ॥ ೨೨ ॥
ನಿಕ್ಷಿಪ್ಯದ್ವಿಗುಣಂನೀರಮರ್ಧಶಿಷ್ಟಂಚಗೃಹ್ಯತೇ ॥
ತಾನಿಕೂಷ್ಮಾಂಡಖಂಡಾನಿಪೀಡಯೇದ್ದೃಢವಾಸಸಾ ॥ ೨೩ ॥
ಆತಪೇಶೋಷಯೇತ್ಕಿಂಚಿಚ್ಛೂಲಾಗ್ರೈರ್ಬಹುಶೋವ್ಯಧೇತ್ ॥
ಕ್ಷಿಪ್ತ್ವಾತಾಮ್ರಕಟಾಹೇಚದದ್ಯಾದಷ್ಟಪಲಂಘೃತಂ ॥ ೨೪ ॥
ತೇನಕಿಂಚಿದ್ಭರ್ಜಯಿತ್ವಾಪೂರ್ವೋಕ್ತಂತಜ್ಜಲಂಕ್ಷಿಪೇತ್ ॥
ಖಂಡಾತ್ಪಲಶತಂದತ್ವಾಸರ್ವಮೇಕತ್ರಪಾಚಯೇತ್ ॥ ೨೫ ॥
ಸುಪಕ್ವೇಪಿಪ್ಪಲೀಶುಂಠೀಜೀರಕಂದ್ವಿಪಲಂಪೃಥಕ್ ॥
ಪೃಥಕ್ಪಲಾರ್ಧಂಧಾನ್ಯಾಕಂಪತ್ರೈಲಾಮರಿಚಂತ್ವಚಂ ॥ ೨೬ ॥
ಚೂರ್ಣೀಕೃತ್ಯಕ್ಷಿಪೇತ್ತತ್ರಘೃತಾರ್ಧಂಕ್ಷೌದ್ರಮಾವಪೇತ್ ॥
ಖಾದೇದಗ್ನಿಬಲಂದೃಷ್ಟ್ವಾರಕ್ತಪಿತ್ತೀಕ್ಷಯೀಜ್ವರೀ ॥ ೨೭ ॥
ಶೋಷತೃಷ್ಣಾವಮಿಚ್ಛರ್ದಿಶ್ವಾಸಕಾಸಕ್ಷತಾತುರಃ ॥
ಕೂಷ್ಮಾಂಡಕಾವಲೇಹೋಯಂಬಾಲವೃದ್ಧೇಷುಯುಜ್ಯತೇ ॥೨೮॥
ಉರಃಸ್ಸಂಧಾನಕೃದ್ವೃಷ್ಯೋಬೃಂಹಣೋಬಲಕೃನ್ಮತಃ ॥

ಕೂಷ್ಮಾಂಡಾವ ಲೇಹವನ್ನು ಹೇಳುತ್ತಾನೆ—ಕೂಷ್ಮಾಂಡವೆಂದರೆ ಬೂದಿ ಕುಂಬಳಕಾಯಿಗೆ ಹೆಸರು, ಸಿಪ್ಪೆಯನ್ನು ತೆಗೆದ ಬೂದಿಕುಂಬಳಕಾಯಿನ ಹೋಳು ನೂರು ಪಲವನ್ನು ಅದರ ಎರಡರಷ್ಟು ನೀರಿನಲ್ಲಿ ಬೇಯುವುದಕ್ಕೆ ಹಾಕಬೇಕು, ಹಾಕಿದ ನೀರು ಅರ್ಧವಾಗುವ ವರಿವಿಗೂ ಬೇಯಿಸುತ್ತಿದ್ದು ಇಳಿಸಿಕೊಂಡು ಆ ಬೆಂದ ಕುಂಬಳಕಾಯಿ ಹೋಳುಗಳನ್ನೆಲ್ಲಾ ಗಟ್ಟಿಯಾದ ಬಟ್ಟೆಯಲ್ಲಿ ಹಾಕಿ ಕೊಂಡು ನೀರನ್ನು ಹಿಂಡಬೇಕು, ಈ ರೀತಿಯಾಗಿ ಹಿಂಡಿದ ಹೋಳುಗಳನ್ನು ಕೊಂಚ ಹೊತ್ತು ಬಿಸಿಲಿನಲ್ಲಿ ಒಣಗಿಸುತ್ತ ಹರಿತವಾದ ಮತ್ತು ಮೊನೆಯಾದ

ಚಾಕಿನಲ್ಲಿ ಚುಚ್ಚುತ್ತಿರಬೇಕು, ಹೀಗೆ ಕೊಂಚ ಹೊತ್ತಾದ ಮೇಲೆ ಒಂದು ತಾಮ್ರದ ಪಾತ್ರೆಯಲ್ಲಿ ಆ ಹೋಳುಗಳನ್ನೆಲ್ಲಾ ಹಾಕಿ ಎಂಟು ಪಲ ಹಸುವಿನ ತುಪ್ಪವನ್ನು ಹಾಕಿ ಆ ಹೋಳುಗಳನ್ನು ಹುರಿದು ಅದರಲ್ಲಿ ಮೇಲೆ ಕಂಡ ಅವನ್ನು ಬೇಯಿಸಿದ ನೀರನ್ನೆಲ್ಲಾ ಸುರಿದು ಬೇಯಿಸುತ್ತ ನೂರು ಪಲ ಕಲ್ಲುಸಕ್ಕರೆಯನ್ನು ಹಾಕಿ ಸುಲಭಾಗ್ನಿಯಿಂದ ಎಲ್ಲವನ್ನೂ ಪಾಕಮಾಡುತ್ತ ಬಂದು ಪಕ್ವಕ್ಕೆ ಬರುವ ಸಮಯದಲ್ಲಿ ಹಿಪ್ಪಲಿ, ಶುಂಠಿ, ಜೀರಿಗೆ, ಇವುಗಳು ಮೂರು ಮೂರು ಪಲವನ್ನೂ ಕೊತ್ತುಂಬರಿಬೀಜ, ತಾಳೀಸಪತ್ರೆ, ಯಾಲಕ್ಕಿ, ಮೆಣಸು, ಲವಂಗಚಕ್ಕೆ ಇವುಗಳು ಪ್ರತ್ಯೇಕ ಒಂದೊಂದರೆ ತೊಲ ಈ ರೀತಿಯಾಗಿ ಸೇರಿಸಿ ಚೂರ್ಣಮಾಡಿ ಅದರಲ್ಲಿ ಹಾಕಿ ಚನ್ನಾಗಿ ಪಕ್ವವಾದ ಮೇಲೆ ಇಳಿಸಿಕೊಂಡು ಆರಿದ ಮೇಲೆ ನಾಲ್ಕು ಪಲ ಜೇನುತುಪ್ಪವನ್ನು ಹಾಕಿ ಕೂಡಿಸಿ ಇರಿಸಿಕೊಳ್ಳುವುದು, ಇಲ್ಲಿಗೆ ಕೂಶ್ಮಾಂಡಾವ ಲೇಹವು ಸಿದ್ಧವಾದ ಹಾಗಾಯಿತು, ಇದನ್ನು ಸೇವಿಸುವ ಪ್ರಮಾಣವು ಸೇವನೆ ಮಾಡುವವನ ಜಠರಾಗ್ನಿ ಪಾಟವವನ್ನು ನೋಡಿ ಗೊತ್ತುಮಾಡಿಕೊಳ್ಳಬೇಕು. ರಕ್ತಪಿತ್ತರೋಗ, ಕ್ಷಯರೋಗ, ಪುರಾಣಜ್ವರ, ಮೈ ಕೈ ಒಣಗಿಕೊಂಡು ಹೋಗುವುದು, ಬಾಯಾರಿಕೆ, ವಮನ (ಬುದ್ಧಿಭ್ರಮ), ವಾಂತಿಯಾಗುವ ಹಾಗಾಗುವುದು, ಉಬ್ಬಸ, ಕೆಮ್ಮು, ಉರಃಕ್ಷತಾದಿಗಳು, ಇವುಗಳೆಲ್ಲಾ ಇದರ ಸೇವನೆಯಿಂದ ಶಮನ ಹೊಂದುತ್ತವೆ, ಬಾಲಕರಿಗೆ ವಯಸ್ಸು ಕಳದು ಹೋದ ಮುದುಕರಿಗೆ ಎಲ್ಲರಿಗೂ ಈ ಲೇಹವು ಸೇವನೆಗೆ ಯೋಗ್ಯವಾದದ್ದು, ಕಷ್ಟಪಟ್ಟು ಕೆಲಸಮಾಡಿ ಎದೆಯ ಬಲ ಕಡಮೆಯಾದವರಿಗೆ ಎದೆಗೆ ಶಕ್ತಿಯನ್ನು ಕೊಡುತ್ತದೆ, ವೀರ್ಯವೃದ್ಧಿ ಮಾಡುತ್ತದೆ, ದೇಹವನ್ನು ರಕ್ತಮಾಂಸಗಳಿಂದ ತುಂಬಿಕೊಳ್ಳುವಂತೆ ಮಾಡುತ್ತದೆ, ಶಕ್ತಿವೃದ್ಧಿಮಾಡುತ್ತದೆ.

**ಯುಕ್ತ್ಯಾಕೂಷ್ಮಾಂಡಖಂಡಸ್ಯಸೂರಣಂವಿಪಚೇತ್ಸುಧೀಃ ॥೨೯॥**
**ಅರ್ಶಸಾಂಮೂಢವಾತಾನಾಂಮಂದಾಗ್ನೀನಾಂಚಯುಜ್ಯತೇ ॥**

ಖಂಡಸೂರಣಾವ ಲೇಹವನ್ನು ಮಾಡುವ ಕ್ರಮವೆಂತೆಂದರೆ—ಹಿಂದೆ ಕೂಷ್ಮಾಂಡಾವ ಲೇಹದಲ್ಲಿ ಹೇಳಿರುವ ಕೂಷ್ಮಾಂಡಕ್ಕೆ ಬದಲಾಗಿ ಸೂರಣವೆಂದರೆ ಚೂರ್ಣಗೆಡ್ಡೆಯ ಹೋಳುಗಳನ್ನುಪಯೋಗಿಸಿಕೊಂಡು ಉಳಿದ ಕ್ರಮವೆಲ್ಲಾ ಕೂಷ್ಮಾಂಡಲೇಹವಂತೆಯೇ ಮಾಡಿ ಅದಕ್ಕೆ ಸೇರಿಸತಕ್ಕ ದಿನಸುಗಳ ಚೂರ್ಣವನ್ನೇ ಇದಕ್ಕೂ ಸೇರಿಸಿ ಪಕ್ವಮಾಡಿಕೊಂಡು ಸೇವಿಸುತ್ತ ಬಂದಲ್ಲಿ ಮೂಲವ್ಯಾಧಿ, ಮೂಢವಾತರೋಗ, ಅಗ್ನಿಮಾಂದ್ಯ ರೋಗದವರು ಇವರುಗಳಿಗೆ ಅನುಕೂಲವಾಗುತ್ತದೆ.

ಹರೀತಕೀಶತಂಭದ್ರಂಯವಾನಾಮಾಢಕಂತಥಾ ॥ ೩೦ ॥
ಪಲಾನಿದಶಮೂಲಸ್ಯವಿಂಶತಿಂಚನಿಯೋಜಯೇತ್ ॥
ಚಿತ್ರಕಃಪಿಪ್ಪಲೀಮೂಲಮಪಾಮಾರ್ಗಶ್ಯಠೀತಥಾ ॥ ೩೧ ॥
ಕಪಿಕಚ್ಛುಶ್ಯಂಖಪುಷ್ಪೀಭಾರ್ಗೀಚಗಜಪಿಪ್ಪಲೀ ॥
ಬಲಾಪುಷ್ಕರಮೂಲಂಚಪೃಥಕ್ದ್ವಿಪಲಮಾತ್ರಯಾ ॥ ೩೨ ॥
ಪಚೇತ್ಪಂಚಾಢಕೇನೀರೇಯವೈಸ್ವಿನ್ನೈಃಶ್ಯತಂನಯೇತ್ ॥
ತಚ್ಚಾಭಯಾಶತಂದದ್ಯಾತ್ಕ್ವಾಥೇತಸ್ಮಿನ್ವಿಚಕ್ಷಣಃ ॥ ೩೩ ॥
ಸರ್ಪಿಸ್ತೈಲಾಷ್ಟಪಲಕಂಕ್ಷಿಪೇದ್ಗುಡತುಲಾಂತಥಾ ॥
ಪಕ್ವಾತ್ವಲೇಹತ್ವಮಾನೀಯಸಿದ್ಧೇಶೀತೇಪೃಥಕ್ಪೃಥಕ್ ॥ ೩೪ ॥
ಕ್ಷೌದ್ರಂಚಪಿಪ್ಪಲೀಚೂರ್ಣಂದದ್ಯಾತ್ಕುಡವಮಾತ್ರಯಾ ॥
ಹರೀತಕೀದ್ವಯಂಖಾದೇತ್ತೇನಲೇಹೇನನಿತ್ಯಶಃ ॥ ೩೫ ॥
ಕ್ಷಯಂಕಾಸಂಜ್ವರಂಶ್ವಾಸಂಹಿಕ್ಕಾಶೋರ್ಶರುಚಿಪೀನಸಾನ್ ॥
ಗ್ರಹಣೀಂನಾಶಯೇದೇಷವಲೀಪಲಿತನಾಶನಃ ॥ ೩೬ ॥
ಬಲವರ್ಣಕರಃಪುಂಸಾಮವಲೇಹೋರಸಾಯನಂ ॥
ವಿಹಿತೋಗಸ್ತ್ಯಮುನಿನಾಸರ್ವರೋಗಪ್ರಣಾಶನಃ ॥ ೩೭ ॥

ಅಗಸ್ತ್ಯಹರೀತಕಿ ಲೇಹ್ಯವನ್ನು ಹೇಳುತ್ತಾನೆ—ಒಂದು ನೂರು ಹೊಸದಾದ ಮತ್ತು ಹುಳುಕಿಲ್ಲದ ಅಳಲೆಕಾಯಿ, ಯವೆ ಎಂದು ಕಾಶೀದೇಶದಲ್ಲಿ ಪ್ರಸಿದ್ಧವಾದ ಧಾನ್ಯ ಅರವತ್ತನಾಲ್ಕು ಪಲ, ದಶಮೂಲ ಇಪ್ಪತ್ತು ಪಲ, ಚಿತ್ರಕ, ಹಿಪ್ಪಲಿ, ಮೋಡಿ, ಉತ್ತರಣೆಯಬೇರು, ಕಚೋರ, ನಸುಗುನ್ನಿ, ಗಿರಿಕರ್ಣಿಕೆಯ ಬೇರು, ಗಂಟುಪರಂಗಿ, ಆನೆಹಿಪ್ಪಲಿ, ಕಳ್ಳಿಗಡ್ಡೆ, ಪುಷ್ಕರಮೂಲ, ಈ ಮೂಲಿಕೆಗಳು ಪ್ರತ್ಯೇಕ ಎರಡೆರಡು ಪಲ ಇವುಗಳನ್ನೆಲ್ಲಾ ಒಂದು ಪಾತ್ರೆಯಲ್ಲಿ ಹಾಕಿ ಐದು ಆಢಕ ಪರಿಮಾಣ ನೀರನ್ನು ಹಾಕಿ ಬೇಯಿಸುತ್ತ ಬಂದು ಯವಧಾನ್ಯವು ಬೆಂದ ಹದವನ್ನು ನೋಡಿ ಕಷಾಯವನ್ನಿಳಿಸಿಕೊಳ್ಳುವುದು, ಅಳಲೇಕಾಯಿಗಳನ್ನು ಬೇರೆಯಾಗಿ ಕೆದರಿಸಿಕೊಂಡು ಆ ಕಷಾಯವನ್ನೆಲ್ಲಾ ಸೋಧಿಸಿ ಪುನಶ್ಚ ಕಾಯುವುದಕ್ಕಿರಿಸಿ ಮೇಲಿನ ಅಳಲೆಯ ಕಾಯಿಗಳನ್ನು ಆ ಕಷಾಯದಲ್ಲಿ ಹಾಕಿ ಹಸುವಿನ ತುಪ್ಪ ಮತ್ತು ಎಳ್ಳೆಣ್ಣೆ ಈ ಎರಡೂ ಕೂಡಿ ಎಂಟು ಪಲ ಅಂದರೆ ಒಂದೊಂದು ನಾಲ್ಕು ಪಲ ಹಾಕಿ ಒಂದುನೂರು ಪಲ ಬೆಲ್ಲವನ್ನೂ ಹಾಕಿ ಪಾಕ ಮಾಡಿ ಚನ್ನಾಗಿ ಪಕ್ವವಾದ ಮೇಲೆ ಇಳಿಸಿಕೊಂಡು ಆರಿದ ಮೇಲೆ ಒಂದೊಂದು ಕುಡವ ಪರಿಮಾಣ (ಹದಿನಾರು ತೊಲ) ಹಿಪ್ಪಲಿಯ ಚೂರ್ಣ ಮತ್ತು ಜೇನು ತುಪ್ಪ ಸಹ ಸೇರಿಸಿದಲ್ಲಿ ಅಗಸ್ತ್ಯಹರೀತಕೀ ಲೇಹ್ಯವು ಸಿದ್ಧವಾದ ಹಾಗಾಯಿತು.

ಈ ಲೇಹ್ಯದಲ್ಲಿ ಪ್ರತಿದಿವಸವೂ ಎರಡು ಅಳಲೇಕಾಯಿನಂತೆ ಸೇವಿಸುತ್ತ ಬರಬೇಕು, ಇದರಿಂದ ಕ್ಷಯ, ಕೆಮ್ಮು, ಜ್ವರ, ಉಬ್ಬಸ, ಬಿಕ್ಕಳಿಕೆ, ಮೂಲವ್ಯಾಧಿ, ಅರುಚಿ, ಪೀನಶಿ, ಭೇದಿ ಇವುಗಳನ್ನು ನಿವಾರಣಮಾಡುತ್ತದೆ, ದೇಹದಲ್ಲಿ ರಕ್ತ ಮಾಂಸಗಳು ಕ್ಷಯಿಸಿಹೋಗಿ ಚರ್ಮವು ಸುಕ್ಕುಬಿದ್ದು ಮುದಿತನದ ಲಕ್ಷಣಗಳು ಕಾಣುತ್ತಿದ್ದಲ್ಲಿ ಅದನ್ನೆಲ್ಲಾ ನಿವಾರಣೆಮಾಡುತ್ತದೆ, ದೇಹದಲ್ಲಿ ಶಕ್ತಿಯನ್ನೂ ಶರೀರದಲ್ಲಿ ಕಾಂತಿಯನ್ನೂ ಹೆಚ್ಚಿಸುತ್ತದೆ. ಅತ್ಯುತ್ತಮವಾದ ರಸಾಯನವಾಗಿರುತ್ತದೆ, ಸಮಸ್ತ ರೋಗಗಳಿಗೂ ಇದನ್ನು ಉಪಯೋಗಿಸಬಹುದು.

ಕುಟಜತ್ವಕ್ತುಲಾಂದ್ರೋಣೇಜಲಸ್ಯವಿಪಚೇತ್ಸುಧೀಃ ||
ಕಷಾಯಂಪಾದಶೇಷಂಚಗೃಹ್ಣೀಯಾದ್ವಸ್ತ್ರಗಾಳಿತಂ || ೩೮ ||
ತ್ರಿಂಶತ್ಪಲಂಗುಡಸ್ಯಾತ್ರದತ್ವಾಚವಿಪಚೇತ್ಪುನಃ ||
ಸಾಂದ್ರತ್ವಮಾಗತಂದೃಷ್ಟ್ವಾಚೂರ್ಣಾನೀಮಾನಿದಾಪಯೇತ್ ೩೯
ರಸಾಂಜನಂಮೋಚರಸಂತ್ರಿಕಟುತ್ರಿಫಲಾಂತಥಾ ||
ಲಜ್ಜಾಲುಂಚಿತ್ರಕಂಪಾಠಾಂಬಿಲ್ವಮಿಂದ್ರಯವಂವಚಾಂ || ೪೦ ||
ಭಲ್ಲಾತಕಂಪ್ರತಿವಿಷಾಂವಿಡಂಗಾನಿಚವಾಲಕಂ ||
ಪ್ರತ್ಯೇಕಂಪಲಸಂಮ್ಮಾನಂಘೃತಸ್ಯಕುಡವಂತಥಾ || ೪೧ ||
ಜಯೇದೇಷೋವಲೇಹಸ್ತುಸರ್ವಾಣ್ಯರ್ಶಾಂಸಿವೇಗತಃ ||
ದುರ್ನಾಮಪ್ರಭವಾನ್ರೋಗಾನತೀಸಾರಮರೋಚಕಂ || ೪೨ ||
ಗ್ರಹಣೀಂಪಾಂಡುರೋಗಂಚರಕ್ತಪಿತ್ತಂಚಕಾಮಲಾಂ ||
ಅಮ್ಲಪಿತ್ತಂತಥಾಶೋಥಂಕಾರ್ಶ್ಯಂಚೈವಪ್ರವಾಹಿಕಾಂ || ೪೩ ||
ಅನುಪಾನೇಪ್ರಯೋಕ್ತವ್ಯಮಾಜಂತಕ್ರಂಪಯೋದಧಿ ||
ಘೃತಂಜಲಂವಾಜೀರ್ಣೇಚಪಥ್ಯಭೋಜೀಭವೇನ್ನರಃ || ೪೪ ||

ಕುಟಜಾವಲೇಹವನ್ನು ಹೇಳುತ್ತಾನೆ—ಕೊಡಸದಚಕ್ಕೆ ನೂರು ಪಲಗಳನ್ನು ಒಂದು ದ್ರೋಣ (ಒಂದು ಸಾವಿರದ ಇಪ್ಪತ್ತನಾಲ್ಕು ತೊಲ) ನೀರಿನಲ್ಲಿ ಬೇಯಿಸಿ ನಾಲ್ಕರಲ್ಲಿ ಒಂದು ಭಾಗ ಕಷಾಯ ಇಳಿಸಿಕೊಂಡು ಸೋಸಿ ಪುನಃ ಕಾಯುವುದಕ್ಕಿರಿಸಿ ಅದರಲ್ಲಿ ಮೂವತ್ತು ಪಲ ಬೆಲ್ಲವನ್ನು ಹಾಕಿ ಕಾಯಿಸುವುದಕ್ಕೆ ಮೊದಲು ಮಾಡಿ ಗಟ್ಟಿಯಾಗುತ್ತ ಬಂದ ಮೇಲೆ ರಸಾಂಜನ, ಬೂರಗದ ಮೇಣ, ತ್ರಿಕಟು, ತ್ರಿಫಲ, ಮುಟ್ಟಿದರೆ ಮುನಿಯ, ಚಿತ್ರಮೂಲ, ಅಗುಳುಶುಂಠಿ, ಬಿಲ್ವದಚಕ್ಕೆ, ಕೊಡಸದ ಬೀಜ, ಬಜೆ, ಗೇರುಬೀಜ, ಅತಿಬಜೆ, ವಾಯವಿಡಂಗ, ಮುಡಿವಾಳ, (ಲಾಮಂಚದ ಜಾತಿ) ಈ ವಸ್ತುಗಳನ್ನು ಒಂದೊಂದು ಪಲದಷ್ಟು ಕೂಡಿಸಿ ಚನ್ನಾಗಿ ಚೂರ್ಣಮಾಡಿ ಅದರಲ್ಲಿ ಹಾಕಿ ಒಂದು ಕುಡವ (ಹದಿನಾರು ತೊಲ)

ತುಪ್ಪವನ್ನೂ ಹಾಕಿ ಕೂಡಿಸುತ್ತ ಚನ್ನಾಗಿ ಪಕ್ವವಾದ ಮೇಲೆ ಇಳಿಸಿಕೊಂಡು ಆರಿದ ಮೇಲೆ ಜೇನುತುಪ್ಪವನ್ನೂ ಒಂದು ಕುಡವ ಪರಿಮಾಣ ಹಾಕಿ ಕೂಡಿಸಿದಲ್ಲಿ ಕುಟಜಾವಲೇಹವು ಸಿದ್ಧವಾದ ಹಾಗಾಯಿತು, ಇದನ್ನು ಸೇವನೆ ಮಾಡುತ್ತ ಬಂದಲ್ಲಿ ಸಮಸ್ತ ವಿಧವಾದ ಮೂಲವ್ಯಾಧಿಗಳು, ಗುಲ್ಮಗಳು, ಉದರಗಳು, ಅತಿಸಾರ, ಅರುಚಿ, ಗ್ರಹಣಿ, ಪಾಂಡುರೋಗ, ರಕ್ತಪಿತ್ತ, ಕಾಮಾಲೆ, ಆಮ್ಲ ಪಿತ್ತ, ಶೋಭೆ, ಶರೀರವು ಕೃಶವಾಗಿ ಹೋಗೋಣ, ಪ್ರವಾಹಿಕ (ಅತಿಸಾರ ಭೇದ) ಈ ರೋಗಗಳೆಲ್ಲಾ ಗುಣವಾಗುತ್ತವೆ. ಈ ಲೇಹ್ಯವನ್ನು ಸೇವಿಸಿದ ನಂತರ ಅನುಪಾನವಾಗಿ ಆಡಿನ ಹಾಲು, ಮೊಸರು, ಮಜ್ಜಿಗೆ, ತುಪ್ಪ, ಉಪಯೋಗಿಸುವುದು, ಸಿಗದಿದ್ದರೆ ನೀರನ್ನೇ ಉಪಯೋಗಿಸಿಕೊಳ್ಳಬಹುದು, ಔಷಧವು ಚನ್ನಾಗಿ ಜೀರ್ಣವಾದ ಮೇಲೆ ಪಥ್ಯವಾದ ಆಹಾರವನ್ನು ಸ್ವೀಕರಿಸಬೇಕು.

ಕುಟಜತ್ವಕ್ತುಲಾಮಾರ್ದ್ರಾಂದ್ರೋಣಸೀರೇವಿಪಾಚಯೇತ್ ॥
ಪಾದಶೇಷಂಶ್ರೃತಂನೀತ್ವಾಚೂರ್ಣಾನ್ಯೇತಾನಿದಾಪಯೇತ್ ॥೪೬॥
ಲಜ್ಜಾಲುಧಾರ್ತಕೀಬಿಲ್ವಂಪಾಠಾಮೋಚರಸಸ್ತಥಾ ॥
ಮುಸ್ತಂಪ್ರತಿವಿಷಾಚ್ಚೈವಪ್ರತ್ಯೇಕಂಸ್ಯಾತ್ಸಲಾಪಲಂ ॥ ೪೭ ॥
ತತಸ್ತುವಿಪಚೇದ್ಭೂಯೋಯಾವದ್ದರ್ವೀಪ್ರಲೇಪನಂ ॥
ಜಲೇನಛಾಗದುಗ್ಧೇನಪೀತೋಮಂಡೇನವಾಜಯೇತ್ ॥ ೪೮ ॥
ಸರ್ವಾತಿಸಾರಾನ್‌ಘೋರಾಂಸ್ತುನಾನಾವರ್ಣಾನ್‌ಸವೇದನಾನ್ ॥
ಅಸೃಗ್ಧರಂಸಮಸ್ತಂಚಸರ್ವಾರ್ಶಾಂಸಿಪ್ರವಾಹಿಕಾಂ ॥ ೪೯ ॥

ಕುಟಜಾಷ್ಟಕಾವಲೇಹ—ಹಸಿಯಾದ ಕೊಡಸದ ಚಕ್ಕೆ ಒಂದು ನೂರು ಪಲವನ್ನು ಒಂದು ದ್ರೋಣ (ಒಂದು ಸಾವಿರದ ಇಪ್ಪತ್ತನಾಲ್ಕು ತೊಲ) ನೀರಿನಲ್ಲಿ ಕಷಾಯ ಕಾಯಿಸಿ ನಾಲ್ಕರಲ್ಲಿ ಒಂದು ಪಾಲು ಕಷಾಯವನ್ನು ನಿಲ್ಲಿಸಿ ಸೋಸಿಕೊಂಡು ಪುನಶ್ಚ ಕಾಯುವುದಕ್ಕಿರಿಸಿ ಮುಟ್ಟಿದರೆ ಮುನಿಯ, ಧಾತಕೀಕುಸುಮ, ಬಿಲ್ವದತೊಪ್ಪೆ, ಅಗಳುಶುಂಠಿ, ಬೂರಗದ ಮೇಣ, ಭದ್ರಮುಸ್ತೆ, ಅತಿಬಜೆ, ಇವು ಪ್ರತಿಯೊಂದನ್ನೂ ಒಂದೊಂದು ಪಲ ಸೇರಿಸಿ ಚೂರ್ಣಮಾಡಿ ಆ ಕಷಾಯದಲ್ಲಿ ಹಾಕಿ ಕಾಯಿಸುತ್ತ ಸವಟಿಗೆ ಹತ್ತುವ ವರಿಗೂ ಕಾಯಿಸಿ ಸವಟಿಗೆ ಹತ್ತಿದ ಹದವನ್ನು ನೋಡಿ ಕೆಳಗಿಳಿಸಿಕೊಳ್ಳುವುದು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಈ ಔಷಧವನ್ನು ಆಡಿನ ಹಾಲಿನೊಡನಾಗಲಿ ನೀರಿನೊಡನಾಗಲಿ ಮೊಸರಿನ ತಿಳಿನೀರಿನೊಡನಾಗಲಿ ಸೇವಿಸಿದರೆ ಭಯಂಕರವಾದ ನಾನಾ ವರ್ಣವಾಗಿ ಹೋಗುತ್ತಿರುವ ವ್ಯಥೆಯಿಂದ ಯುಕ್ತವಾದ ಅತಿಸಾರವನ್ನೂ, ಸಮಸ್ತ ವಿಧವಾದ ಅಸೃಗ್ಧರವೆಂಬ ಸ್ತ್ರೀರೋಗವನ್ನೂ ಮೂಲವ್ಯಾಧಿಯನ್ನು ಪ್ರವಾಹಿಕ ಎಂಬ ಒಂದು ವಿಧವಾದ ಭೇದಿಯನ್ನೂ ನಿಲ್ಲಿಸುತ್ತದೆ.

ಇಲ್ಲಿಗೆ ಎಂಟನೆಯ ಅಧ್ಯಾಯ ಸಂಪೂರ್ಣ.

## ನವಮಾಧ್ಯಾಯ.

ಕಲ್ಕಾಚ್ಚತುರ್ಗುಣೀಕೃತ್ಯಘೃತಂವಾತೈಲಮೇವವಾ ।।
ಚತುರ್ಗುಣೇದ್ರವೇಸಾಧ್ಯಂತಸ್ಯಮಾತ್ರಾಪಲೋನ್ಮಿತಾ ।। ೧ ।।
ನಿಕ್ಷಿಪ್ಯಕ್ವಾಥಯೇತ್ತೋಯಂಕ್ವಾಥ್ಯದ್ರವ್ಯಾಚ್ಚತುರ್ಗುಣಂ ।।
ಪಾದಶಿಷ್ಟಂಗೃಹೀತ್ವಾಚಸ್ನೇಹಂತೇನೈವಸಾಧಯೇತ್ ।। ೨ ।।

ಚೂರ್ಣಗಳನ್ನು ಮತ್ತು ಲೇಹ್ಯಗಳನ್ನು ಸಹ ಹೇಳಿ ಮುಂದೆ ಘೃತಗಳು ತೈಲಗಳು ಇವುಗಳನ್ನು ಮಾಡುವ ಕ್ರಮವನ್ನು ಹೇಳುವುದಕ್ಕಾಗಿ ಸಾಮಾನ್ಯ ಪರಿಭಾಷೆಯನ್ನು ಹೇಳುತ್ತಾನೆ—ಕಲ್ಕದ ಲಕ್ಷಣವನ್ನು ಹಿಂದೆ ಹೇಳಿದೆ, ಅಂತಹ ಕಲ್ಕದ ನಾಲ್ಕರಷ್ಟು ತುಪ್ಪವನ್ನಾಗಲಿ, ತೈಲವೆಂದರೆ ಎಣ್ಣೆಯನ್ನಾಗಲಿ ಕಲ್ಕ ದೊಡನೆ ಸೇರಿಸಿ ಸೇರಿಸಲ್ಪಟ್ಟ ಸ್ನೇಹ (ತೈಲ ಅಥವಾ ಘೃತ)ದ ನಾಲ್ಕರಷ್ಟು ಆಯಾಯ ಪ್ರಕರಣಾನುಸಾರವಾಗಿ ಹೇಳಲ್ಪಡುವ ಹಾಲು ಮೊದಲಾದ ದ್ರವ ಪದಾರ್ಥದೊಡನೆ ಕೂಡಿಸಿ ಕಾಯಿಸುತ್ತ ಸ್ನೇಹವನ್ನು ಸಿದ್ಧಪಡಿಸಿಕೊಳ್ಳಬೇಕು. ಇಂತಹ ಸ್ನೇಹವನ್ನು ರೋಗಾನುಗುಣವಾಗಿ ಪ್ರಯೋಗಿಸುವಾಗ್ಯೆ ಸಾಮಾನ್ಯ ವಾಗಿ ಒಂದು ಪಲ ಪರಿಮಾಣ ಉಪಯೋಗಿಸಬೇಕು. ತೈಲ ಘೃತಾದಿಗಳ ಗೋಸ್ಕರ ಮೊದಲು ಕಷಾಯ ಮಾಡುವಾಗ್ಯೆ ಕಷಾಯಮಾಡತಕ್ಕ ಪದಾರ್ಥದ ನಾಲ್ಕರಷ್ಟು ನೀರನ್ನು ಸೇರಿಸಿ ನಾಲ್ಕರಲ್ಲಿ ಒಂದು ಭಾಗ ಉಳಿಯುವವರಿಗೂ ಕಾಯಿಸಿ ಇಳಿಸಿ ಶೋಧಿಸಿಕೊಂಡು ತೈಲಗಳಿಗೆ ಉಪಯೋಗಿಸಿಕೊಳ್ಳಬೇಕು.

ಚತುರ್ಗುಣಂಮೃದುದ್ರವ್ಯೇಕಠಿನೇಷ್ಟಗುಣಂಜಲಂ ।।
ತಥಾಚಮಧ್ಯಮೇದ್ರವ್ಯೇದದ್ಯಾದಷ್ಟಗುಣಂಪಯಃ ।। ೩ ।।
ಅತ್ಯಂತಕಠಿನೇದ್ರವ್ಯೇನೀರಂಷೋಡಶಿಕಂಮತಂ ।।

ಸ್ನೇಹಸಾಧನ (ತೈಲ ಘೃತಗಳನ್ನು ಮಾಡುವುದು) ಪ್ರಕರಣವಲ್ಲಿ ಕಷಾಯ ಗಳನ್ನು ಮಾಡಿಕೊಳ್ಳಬೇಕಾದ ಸಂದರ್ಭ ಬಂದರೆ ಅದನ್ನು ನಿರ್ಮಾಣ ಮಾಡಿ ಕೊಳ್ಳುವ ಕ್ರಮವನ್ನು ಹೇಳುತ್ತಾನೆ—ಪ್ರಥಮತಃ ಕಷಾಯ ಮಾಡಿಕೊಳ್ಳತಕ್ಕ ಪದಾರ್ಥಗಳನ್ನು ನಾಲ್ಕು ತರಗತಿಯಾಗಿ ವಿಂಗಡಿಸಿಕೊಳ್ಳಬೇಕು—ಮೃದು ಮಧ್ಯಮ, ಕಠಿನ, ಅತ್ಯಂತ ಕಠಿನ ಎಂಬದಾಗಿ—ಮೃದು ದ್ರವ್ಯಕ್ಕೆ ಉದಾಹರಣೆ ಅಮೃತಬಳ್ಳಿ, ಮಧ್ಯಮ ದ್ರವ್ಯಕ್ಕೆ ಆರಗ್ವಧ (ಕಕ್ಕೆ), ಕಠಿನದ್ರವ್ಯಕ್ಕೆ ದಶಮೂಲ, ಅತ್ಯಂತ ಕಠಿನ ದ್ರವ್ಯಕ್ಕೆ ಚಂದನ, ಮೃದು ದ್ರವ್ಯಕಷಾಯ ಮಾಡಲು ನಾಲ್ಕ ರಷ್ಟು ನೀರನ್ನು ಸೇರಿಸಿಕೊಳ್ಳುವುದು, ಮಧ್ಯಮ ಮತ್ತು ಕಠಿನ ದ್ರವ್ಯಗಳಿಗೆ ಎಂಟ ರಷ್ಟು, ಅತ್ಯಂತ ಕಠಿನ ಪದಾರ್ಥಗಳಿಗೆ ಹದಿನಾರರಷ್ಟು, ಈ ರೀತಿ ನೀರನ್ನು ಸೇರಿಸಿ ಕೊಂಡು ಪ್ರಕರಣಾನುರೋಧೇನ ಉಕ್ತ ಪರಿಮಾಣಕ್ಕೆ ಇಳಿಸಿಕೊಳ್ಳುವುದು

**ಕರ್ಷಾದಿತಃಪಲಂಯಾವತ್ ಕ್ಷಿಪೇತ್ ಷೋಡಶಿಕಂಜಲಂ ॥ ೪ ॥**
**ತದೂರ್ಧ್ವಂಕುಡವಂಯಾವದ್ಭವೇದಷ್ಟಗುಣಂಪಯಃ ।।**
**ಪ್ರಸ್ಥಾದಿತಃಕ್ಷಿಪೇನ್ನೀರಂಖಾರೀಯಾವಚ್ಚತುರ್ಗುಣಂ ॥ ೫ ॥**

ಕಷಾಯಮಾಡತಕ್ಕ ಪದಾರ್ಥಗಳ ಪರಿಮಾಣವು ಕರ್ಷದಿಂದ ಪಲದೊಳಗಿದ್ದರೆ ಅಂದರೆ ಕರ್ಷದಿಂದ ಮೊದಲುಮಾಡಿ ಪಲದವರಿಗಿನ ಯಾವ ಅಳತೆಯಲ್ಲಿ ಹೇಳಿದ್ದರೂ ಹದಿನಾರರಷ್ಟು ನೀರನ್ನು ಹಾಕಬೇಕು. ಪಲದಿಂದ ಮುಂದಕ್ಕೆ ಕುಡವವೆಂಬ ಪರಿಮಾಣದ ವರಿವಿಗೂ ಸೇರತಕ್ಕ ಪ್ರಮಾಣದಲ್ಲಿದ್ದರೆ ಎಂಟರಷ್ಟು ನೀರನ್ನೂ, ಪ್ರಸ್ಥದಿಂದ ಖಾರಿ ಎಂಬದರ ವರಿಗಿನ ಪ್ರಮಾಣದಲ್ಲಿದ್ದರೆ ನಾಲ್ಕರಷ್ಟನ್ನೂ ಸೇರಿಸಬೇಕು. ಹಿಂದಲ ಶ್ಲೋಕದಲ್ಲಿ ಕಷಾಯಮಾಡತಕ್ಕ ವಸ್ತುಗಳ ಮೃದುತ್ವಾದಿ ಗುಣಗಳನ್ನು ನೋಡಿ ಜಲಪರಿಮಾಣವನ್ನು ಗೊತ್ತುಮಾಡುವ ವಿಧಾನ. ಈ ಶ್ಲೋಕದಲ್ಲಿ ಪದಾರ್ಥಗಳ ಅಳತೆಯ ಮೇಲೆ ನೀರಿನ ಪರಿಮಾಣವನ್ನು ಗೊತ್ತುಮಾಡುವುದು, ಇವನ್ನು ಅವರವರಿಗೆ ಗುರೂಪದೇಶವಿರುವಂತ ಯಾವ ರೀತಿಯನ್ನಾದರೂ ಅನುಸರಿಸಬಹುದು.

ಅಂಬುಕ್ವಾಥರಸೈರ್ಯತ್ರಪೃಥಕ್ ಸ್ನೇಹಸ್ಯಸಾಧನಂ ।।
ಕಲ್ಕಸ್ಯಾಂಶಾತತ್ರಸ್ಯಾಚ್ಚತುರ್ಥಂಷಷ್ಠಮಷ್ಟಮಂ ॥ ೬ ॥
ದುಗ್ಧೇಪದಧ್ನಿರಸೇತಕ್ರೇಕಲ್ಕೋದೇಯೋಷ್ಟಮಾಂಶಃ ।।
ಕಲ್ಕಸ್ಯಸಮ್ಯಕ್ಪಾಕಾರ್ಥಂತೋಯಮತ್ರಚತುರ್ಗುಣಂ ॥ ೭ ॥

ಸ್ನೇಹಪಾಕವಿಷಯದಲ್ಲಿ ಉಪಯುಕ್ತವಾದ ಪರಿಭಾಷೆಯನ್ನು ಹೇಳುತ್ತಾನೆ—ನೀರು ಒಂದರಿಂದಲಾಗಲಿ ಕಷಾಯ ಒಂದರಿಂದಲೇ ಆಗಲಿ ಅಥವಾ ಯಾವುದಾದರೂ ಸ್ವರಸ ಒಂದರಿಂದಲೇ ಆಗಲಿ ಸ್ನೇಹಪಾಕಮಾಡಬೇಕೆಂದು ಉಕ್ತವಾಗಿದ್ದರೆ ಅಂತಹ ಸಂದರ್ಭದಲ್ಲಿ ಕಲ್ಕವನ್ನು ಸೇರಿಸಬೇಕಾದರೆ ಪಕ್ವವಾಗತಕ್ಕ ಸ್ನೇಹವು ನೀರಿನೊಂದಿಗೆ ಎಂದು ಹೇಳಿದ್ದರೆ ಅಲ್ಲಿ ಸ್ನೇಹದ ನಾಲ್ಕನೆಯ ಭಾಗದಷ್ಟು ಕಲ್ಕವನ್ನೂ, ಕ್ವಾಥದೊಂದಿಗೆ ಎಂದು ಹೇಳಿದ್ದರೆ ಆರನೆಯ ಭಾಗ ಕಲ್ಕವನ್ನೂ, ಸ್ವರಸದೊಡನೆ ಎಂದು ಹೇಳಿದ್ದರೆ ಅಲ್ಲಿ ಎಂಟನೆಯ ಭಾಗ ಕಲ್ಕವನ್ನೂ ಸೇರಿಸಬೇಕು, ಅಂದರೆ ಕ್ರಮವಾಗಿ ಸ್ನೇಹದ ನಾಲ್ಕನೆಯ ಒಂದು ಭಾಗ ಕಲ್ಕದ್ರವ್ಯಗಳಿಂದ ಕಲ್ಕಮಾಡಿ ಆ ಕಲ್ಕವನ್ನು ಮೊದಲನೆಯ ವಿಧಾನಕ್ಕೂ ಇದೇ ರೀತಿಯಾಗಿ ಮೂರು ವಿಧವಾದ ದ್ರವದ್ರವ್ಯಗಳ ಜೊತೆಗೂ ಕಲ್ಕವನ್ನು ಸೇರಿಸಿಕೊಳ್ಳಬೇಕು. ಸ್ನೇಹಪಾಕವನ್ನು ಹಾಲು, ಮೊಸರು, ಮಾಂಸರಸ, ಮಜ್ಜಿಗೆ ಇವುಗಳೊಡನೆ ಮಾಡಬೇಕಾಗಿ ಹೇಳಿದ್ದಲ್ಲಿ ಆಗ್ಯೆ ಸ್ನೇಹದ್ರವ್ಯದ ಪರಿಮಾಣವನ್ನು ನೋಡಿಕೊಂಡು ಅದರ ಎಂಟನೆಯ ಒಂದು ಭಾಗ ಕಲ್ಕದ್ರವ್ಯವನ್ನು ಕಲ್ಕಮಾಡಿ

ಸೇರಿಸಬೇಕು. ಕೆಲವು ಸಂದರ್ಭಗಳಲ್ಲಿ ಕೆಲವು ವಸ್ತುಗಳು ಮತ್ತು ಕಲ್ಕ ದ್ರವ್ಯ ಇವುಗಳಿಂದಲೇ ಸ್ನೇಹವನ್ನು ಸಾಧಿಸಬೇಕಾಗಿ ಉಪದೇಶಿಸುವುದೂ ಉಂಟು. ಹಾಗೆ ಹೇಳಿದ್ದಲ್ಲಿ ಕಲ್ಕವು ಚನ್ನಾಗಿ ಪಕ್ವನಾಗುವುದಕ್ಕಾಗಿ ನಾಲ್ಕರಷ್ಟು ನೀರನ್ನೇ ಸೇರಿಸಿಕೊಳ್ಳಬೇಕು.

ದ್ರವಾಣಿಯತ್ರಸ್ನೇಹೇಷುಪಂಚಾದೀನಿಭವಂತಿಹಿ ॥
ತತ್ರಸ್ನೇಹಸಮಾನ್ಯಾಹುರ್ಯಥಾಪೂರ್ವಂಚತುರ್ಗುಣಂ ॥ ೮ ॥

ಕೆಲವು ಸಂದರ್ಭಗಳಲ್ಲಿ ಸ್ನೇಹಪಾಕ ಮಾಡುವಾಗ್ಯೆ ಐದಾರು ದ್ರವ ಪದಾರ್ಥಗಳನ್ನು ಸೇರಿಸಬೇಕಾಗಿ ಹೇಳುವುದುಂಟು ಅಂತಹ ಸಂದರ್ಭದಲ್ಲಿ ಸೇರಿಸತಕ್ಕ ದ್ರವಪದಾರ್ಥವು ಐದಕ್ಕಿಂತ ಹೆಚ್ಚಿಗೆ ಇದ್ದಲ್ಲಿ ಪ್ರತಿಯೊಂದನ್ನೂ ಪಕ್ವನಾಗತಕ್ಕ ಸ್ನೇಹದಷ್ಟೇ ಸೇರಿಸಿಕೊಳ್ಳಬೇಕು, ಐದಕ್ಕಿಂತ ಕಡಮೆಯಾಗಿರುವಲ್ಲಿ ಮಾತ್ರ ಪಕ್ವವಾಗತಕ್ಕ ಸ್ನೇಹದ ನಾಲ್ಕರಷ್ಟನ್ನು ಸೇರಿಸಿಕೊಳ್ಳಬೇಕು

ದ್ರವ್ಯೇಣಕೇವಲೇನೈವಸ್ನೇಹಪಾಕೋಭವೇದ್ಯದಿ ॥
ತತ್ರಾಂಬುಪಿಷ್ಟಃಕಲ್ಕಸ್ಯಾಜ್ಜಲಂಚಾತ್ರಚತುರ್ಗುಣಂ ॥ ೯ ॥
ಕ್ವಾಥೇನಕೇವಲೇನೈವಪಾಕೋಯತ್ರೇರಿತಃಕ್ವಚಿತ್ ॥
ಕ್ವಾಥ್ಯದ್ರವ್ಯಸ್ಯಕಲ್ಕೋಪಿತತ್ರಸ್ನೇಹೇಪ್ರಯುಜ್ಯತೇ ॥ ೧೦ ॥

ಕೆಲವು ಸಂದರ್ಭದಲ್ಲಿ ಕರಿನ ದ್ರವ್ಯಗಳನ್ನು ಹೇಳಿ ಅವ್ಯರಿಂದಲೇ ಅಂದರೆ ಬೇರೆ ಯಾವ ದ್ರವದ್ರವ್ಯ ಸಂಪರ್ಕವೂ ಇಲ್ಲದಂತೆ ಸ್ನೇಹಪಾಕ ಮಾಡಬೇಕಾಗಿ ಹೇಳಿದರೆ ಆಗ್ಯೆ ಪಕ್ವಮಾಡತಕ್ಕ ಸ್ನೇಹದ್ರವ್ಯದ ನಾಲ್ಕರಷ್ಟು ನೀರಿನಲ್ಲಿ ಅದೇ ದ್ರವ್ಯಗಳ ಕಲ್ಕವನ್ನು ಹಾಡಿ ಅದರಿಂದ ಸ್ನೇಹಪಾಕಮಾಡತಕ್ಕದ್ದು. ಯಾವುದಾದರೂ ಕಷಾಯ ಒಂದರಿಂದಲೇ ಸ್ನೇಹಪಾಕಮಾಡಬೇಕಾಗಿ ಹೇಳಿದಲ್ಲಿ ಅಂತಹ ಸಂದರ್ಭದಲ್ಲಿ ಕಷಾಯವನ್ನೂ ಮತ್ತು ಕಷಾಯಕ್ಕೆ ಹೇಳಿರುವ ದ್ರವ್ಯಗಳ ಕಲ್ಕವನ್ನೂ ಸಹ ಸೇರಿಸಿ ಸ್ನೇಹಪಾಕವನ್ನು ಮಾಡಿಕೊಳ್ಳಬೇಕು.

ಕಲ್ಕಹೀನಸ್ತುಯಃಸ್ನೇಹಸ್ಸಸಾಧ್ಯಃಕೇವಲೇದ್ರವೇ ॥

ಕಲ್ಕ ಸಂಪರ್ಕವಿಲ್ಲದಂತೆ ಸ್ನೇಹವನ್ನು ಮಾಡಬೇಕಾಗಿ ಹೇಳಿದ್ದಲ್ಲಿ ಅಂತಹ ಸಂದರ್ಭದಲ್ಲಿ ಸಾಧನೆ ಮಾಡಬೇಕಾದ ಸ್ನೇಹ ದ್ರವ್ಯದ ನಾಲ್ಕರಷ್ಟು ದ್ರವದ್ರವ್ಯವನ್ನು ಸೇರಿಸಿಕೊಳ್ಳಬೇಕು

ಪುಷ್ಪಕಲ್ಕಸ್ತುಯಃಸ್ನೇಹಸ್ತತ್ರತೋಯಂಚತುರ್ಗುಣಂ ॥ ೧೧ ॥
ಸ್ನೇಹೇಸ್ನೇಹಾಷ್ಟಮಾಂಶಶ್ಚಪುಷ್ಪಕಲ್ಕಃಪ್ರಯುಜ್ಯತೇ ॥

ಪುಷ್ಪಕಲ್ಕವೆಂಬ ಹೆಸರಿನ (ಹುವ್ವುಗಳ ಕಲ್ಕವನ್ನು ಸೇರಿಸಿ ಮಾಡತಕ್ಕ) ಸ್ನೇಹವನ್ನು ನಿರ್ಮಾಣ ಮಾಡಬೇಕಾದರ ಆಗ್ಯೆ ನೀರನ್ನು ಮಾತ್ರ ಸ್ನೇಹದ್ರವ್ಯದ ನಾಲ್ಕರಷ್ಟನ್ನೇ ಸೇರಿಸತಕ್ಕದ್ದು. ಆದರೆ ಹುವ್ವಿನ ಕಲ್ಕಮಾಡುವಾಗ್ಯೆ ಮಾತ್ರ ಕಲ್ಕಕ್ಕೆ ಪಕ್ವವಾಗತಕ್ಕ ಸ್ನೇಹದ ಎಂಟನೆಯ ಒಂದು ಭಾಗದಷ್ಟು ನೀರು ಸೇರಿಸಬೇಕು.

ವರ್ತಿವತ್ ಸ್ನೇಹಕಲ್ಕಸ್ಸ್ಯಾದ್ಯದಾಂಗುಲ್ಯಾವಿಮರ್ದಿತಃ ॥ ೧೨ ॥
ಶಬ್ದಹೀನೋಗ್ನಿನಿಕ್ಷಿಪ್ತಃ ಸ್ನೇಹಸ್ಸಿದ್ಧೋಭವೇತ್ತದಾ ॥
ಯದಾಫೇನೋದ್ಗಮಸ್ತೈಲೇ ಫೇನಶಾಂತಿಶ್ಚ ಸರ್ಪಿಷಿ ॥ ೧೩ ॥
ಗಂಧವರ್ಣರಸೋತ್ಪತ್ತಿಃ ಸ್ನೇಹಸಿದ್ಧಿಸ್ತದಾಭವೇತ್ ॥
ಸ್ನೇಹಪಾಕಸ್ತ್ರಿಧಾಪ್ರೋಕ್ತೋ ಮೃದುರ್ಮಧ್ಯಃ ಖರಸ್ತಥಾ ॥ ೧೪ ॥
ಈಷತ್ಸರಸಕಲ್ಕಸ್ತು ಸ್ನೇಹಪಾಕೋ ಮೃದುರ್ಭವೇತ್ ॥
ಮಧ್ಯಪಾಕಸ್ಯಸಿದ್ಧಿಶ್ಚ ಕಲ್ಕೇನೀರಸಕೋಮಲಃ ॥ ೧೫ ॥
ಈಷತ್ಕಠಿನಕಲ್ಕಶ್ಚ ಸ್ನೇಹಪಾಕೋಭವೇತ್ ಖರಃ ॥
ತದೂರ್ಧ್ವಂ ದಗ್ಧಪಾಕಸ್ಯಾತ್ ದಾಹಕೃನ್ನಿಷ್ಪ್ರಯೋಜನಃ ॥ ೧೬ ॥

ಸ್ನೇಹವು ಸಿದ್ಧವಾಗಿದೆಯೇ ಇಲ್ಲವೇ ಎಂಬ ವಿಷಯದಲ್ಲಿ ಪರೀಕ್ಷೆಯನ್ನು ಹೇಳುತ್ತಾನೆ—ಸ್ನೇಹದ್ರವ್ಯಗಳಿಗೆ ಪಾಕಾರ್ಥವಾಗಿ ಕಲ್ಕದ್ರವವನ್ನು ದ್ರವ್ಯಸಹಿತವಾಗಿ ಸೇರಿರುತ್ತದಷ್ಟೆ, ಸೌಟನಿಂದ ಆ ಮುದ್ದೆಯನ್ನು ಮೇಲೆ ತೆಗದು ಬೆರಳಿನಿಂದ ಹಿಸಿಕಿ ಹೂಸವರೆ ಬತ್ತಿಯಂತಾಗಬೇಕು. ಸಿದ್ಧವಾದ ಸ್ನೇಹವನ್ನು ಸೌಟನಿಂದ ತೆಗದು ಬೆಂಕಿಯಲ್ಲಿ ಸುರಿದರೆ ಯಾವ ಶಬ್ದವೂ ಇಲ್ಲದೆ ಉರಿಯಬೇಕು. ಹೀಗಿದ್ದಲ್ಲಿ ಸ್ನೇಹವು ಸಿದ್ಧವಾಯಿತೆಂದು ತಿಳಯಬೇಕು. ಇನ್ನೊಂದು ವಿಧ ಪರೀಕ್ಷೆ ಹೇಗೆಂದರೆ—ಕಾಯಿಸುತ್ತಿರುವ ತೈಲದಲ್ಲಿ ನೊರೆಬರುವುದು, ಘೃತವಾಗಿದ್ದಲ್ಲಿ ನೂರೆ ಇಂಗುವುದು, ಸುವಾಸನೆ, ಒಳ್ಳೆಯ ಬಣ್ಣ, ಬಾಯಿಗೆ ಹಾಕಿಕೊಂಡರೆ ರುಚಿ, ಇವುಗಳೆಲ್ಲವೂ ಸರಿಯಾಗಿದ್ದಲ್ಲಿ ಸ್ನೇಹವು ಸಿದ್ಧವಾಯಿತೆಂದು ತಿಳಿಯಬೇಕು. ಈ ಸ್ನೇಹಪಾಕ ಕ್ರಮವು ಮೂರು ವಿಧ—ಮೃದು, ಮಧ್ಯ, ಖರ ಎಂಬದಾಗಿ, ಮೃದುಪಾಕವೆಂದರೆ ಕಲ್ಕದಲ್ಲಿ ಇನ್ನೂ ಕೊಂಚ ಮಾತ್ರ ಜಲಾಂಶವಿರುವ ಹಾಗಯೇ ಇಳಿಸಿಕೊಳ್ಳುವುದು, ಮಧ್ಯಪಾಕವೆಂದರೆ ಜಲಾಂಶವೆಲ್ಲಾ ಬತ್ತಿಹೋಗಿ ಕಲ್ಕದ ಮುದ್ದೆಯು ಮಾತ್ರ ಮೃದುವಾಗಿರುವಾಗ್ಯೆ ಇಳಿಸಿಕೊಳ್ಳುವುದು, ಖರಪಾಕವೆಂದರೆ ಮುದ್ದೆಯು ಕೂಡ ಒರಟಾದ ಮೇಲೆ ಇಳಿಸುವುದು, ಇನ್ನೂ ಬೆಂಕಿಯ ಮೇಲೆಯೇ ಬಿಟ್ಟರೆ ಆಗ್ಯೆ ತೈಲವು ಸುಟ್ಟುಹೋಗಿ ದಗ್ಧಪಾಕವೆನ್ನಿಸಿಕೊಳ್ಳುತ್ತದೆ, ದಗ್ಧಪಾಕವಾದರೆ ತೈಲವು ಯಾವ ಕೆಲಸಕ್ಕೂ ಬಾರದೆ ನಿಷ್ಪ್ರಯೋಜನವಾಗಿ ಹೋಗುತ್ತದೆ.

ಆಮಪಾಕಶ್ಚ ನಿರ್ವೀರ್ಯೋವಹ್ನಿಮಾಂದ್ಯಕರೋಗುರುಃ ||
ನಸ್ಯಾರ್ಥಂಸ್ಯಾನ್ಮೃದುಃಪಾಕೋಮಧ್ಯಮಸ್ಸರ್ವಕರ್ಮಸು ||೧೭||
ಅಭ್ಯಂಗಾರ್ಥಂಖರಃಪ್ರೋಕ್ತೋಯುಂಜ್ಯಾದೇವಂಯಥೋಚಿತಂ
ಘೃತತೈಲಗುಡಾದೀಂಶ್ಚ ಸಾಧಯೇನ್ನೈಕವಾಸರೇ || ೧೮ ||
ಪ್ರಕುರ್ವಂತ್ಯುಷಿತಾಹ್ಯೇತೇವಿಶೇಷಾದ್ಗುಣಸಂಚಯಂ ||

ಪಾಕಭೇದದಿಂದ ಸಿದ್ಧವಾದ ಔಷಧ ಮತ್ತು ಅದರ ಉಪಯೋಗಗಳಲ್ಲಿ ಉಂಟಾಗುವ ವ್ಯತ್ಯಾಸವನ್ನು ಹೇಳುತ್ತಾನೆ— ಕಾಯಿಸಿದ ಸ್ನೇಹವು ಆಮಪಾಕವೆಂದರೆ ಅಪಕ್ವವಾದಲ್ಲಿ ನಿರ್ವೀರ್ಯಃ ಅಂದರೆ ಸುಗುಣಗಳನ್ನುಂಟುಮಾಡುವುದಿಲ್ಲ, ಇದು ಸೇವನೆಯಿಂದ ಅಗ್ನಿಮಾಂದ್ಯವನ್ನುಂಟುಮಾಡುತ್ತದೆ. ಮತ್ತು ಗುರುಗುಣವುಳ್ಳದ್ದೂ ಆಗುತ್ತದೆ. ಮೃದುಪಾಕವಲ್ಲಿಯೇ ಇಳಿಸಿದರೆ ನಸ್ಯವೆಂದರೆ ಮೂಗಿನಿಂದ ಸೇದುವುದಕ್ಕೆ ಮಾತ್ರ ಉಪಯೋಗಕ್ಕೆ ಬರುತ್ತವೆ. ಮಧ್ಯಪಾಕವಾಗಿ ಇಳಿಸಿದರೆ ಎಲ್ಲಾ ಕೆಲಸಗಳಿಗೂ ಉಪಯುಕ್ತವಾಗುತ್ತದೆ. ಖರಪಾಕವಾಗಿ ಇಳಿಸಿದಲ್ಲಿ ಅಭ್ಯಂಜನ ಮೊದಲಾಗಿ ಬಾಹ್ಯೋಪಯೋಗಗಳಿಗೆ ಬರುತ್ತದೆ. ಈ ಘೃತ ತೈಲ ಮೊದಲಾದವುಗಳನ್ನು ಅವಸರವಾಗಿ ಒಂದೇ ದಿವಸದಲ್ಲಿ ಮಾಡಿ ಪೂರೈಸಬಾರದು. ನಾವಕಾಶವಾದಷ್ಟೂ ಗುಣದಾಯಕವಾಗುತ್ತವೆ.

ಪಿಪ್ಪಲೀಪಿಪ್ಪಲೀಮೂಲಚವ್ಯಚಿತ್ರಕನಾಗರೈಃ || ೧೯ ||
ಸಸೈಂಧವೈಶ್ಚ ಪಲಿಕೈರ್ಘೃತಪ್ರಸ್ಥಂವಿಪಾಚಯೇತ್ ||
ಕ್ಷೀರಂಚತುರ್ಗುಣಂದತ್ವಾತದ್ಘೃತಂಪ್ಲೀಹನಾಶನಂ || ೨೦ ||
ವಿಷಮಜ್ವರಮಂದಾಗ್ನಿಹರಂರುಚಿಕರಂಪರಂ ||

ಹಿಪ್ಪಲಿ, ಮೋಡಿ, ಚವ್ಯ, (ಎಂದರೆ ಕಾಡುಮೆಣಸಿನ ಬಳ್ಳಿ ಎಂದು ಹೇಳುತ್ತಾರೆ. ಚವ್ಯವೆಂದರೆ ಒಂದು ಬಗೆಯ ಮರವೆಂದೂ ಇದರ ಕಾಯಿಗೇನೇ ಗಜಪಿಪ್ಪಲಿ ಎಂದು ಹೆಸರೆಂಬದಾಗಿಯೂ ಕೆಲವು ವ್ಯಾಖ್ಯಾನದವರು ಹೇಳುತ್ತಾರೆ, ಅವರವರ ಉಪದೇಶ ಮತ್ತು ರೂಢಿಯಂತೆ ಅನುಸರಿಸಬಹುದು.) ಚಿತ್ರಮೂಲ, ಶುಂಠಿ, ಸೈಂಧವಲವಣ, ಇವು ಪ್ರತ್ಯೇಕ ಒಂದೊಂದು ಪಲ, ಇದರೊಡನೆ ಅರವತ್ತನಾಲ್ಕು ಪಲ ಪ್ರಮಾಣ ತುಪ್ಪವನ್ನೂ, ನಾಲ್ಕರಷ್ಟು ಅಂದರೆ ತುಪ್ಪದ ನಾಲ್ಕರಷ್ಟು ಹಾಲನ್ನೂ, ಹಾಲಿನಷ್ಟೇ ನೀರನ್ನೂ ಸೇರಿಸಿ ಘೃತಪಾಕವಿಧಾನದಿಂದ ಘೃತವನ್ನು ಕಾಯಿಸಿಕೊಂಡು ಸೇವಿಸುತ್ತ ಬಂದಲ್ಲಿ ಪ್ಲೀಹಾಭಿವೃದ್ಧಿ, ಅಗ್ನಿಮಾಂದ್ಯ, ವಿಷಮಜ್ವರ, ಇವುಗಳನ್ನು ಗುಣಪಡಿಸಿ ನಾಲಿಗೆಗೆ ರುಚಿಯನ್ನು ಹೆಚ್ಚಿಸುತ್ತದೆ.

ಪಿಪ್ಪಲೀಪಿಪ್ಪಲೀಮೂಲಂಚಿತ್ರಕೋಹಸ್ತಿಪಿಪ್ಪಲೀ ॥ ೨೦ ॥
ಶ್ವದಂಷ್ಟ್ರಾನಾಗರಂಧಾನ್ಯಂಪಾಠಾಬಿಲ್ವಂಯವಾನಿಕಾ ॥
ದ್ರವ್ಯೈಶ್ಚಪಲಿಕೈರೇತೈಶ್ಚತುಷ್ಷಷ್ಟಿಪಲಂಘೃತಂ ॥ ೨೨ ॥
ಘೃತಾಚ್ಚತುರ್ಗುಣಂದೇಯಂಚಾಂಗೇರೀಸ್ವರಸಂಬುಧೈಃ ॥
ಶನೈಶ್ಶನೈರ್ವಿಪಕ್ತವ್ಯಂಚಾಂಗೇರೀಘೃತಮುತ್ತಮಂ ॥ ೨೩ ॥
ತದ್ಘೃತಂಕಫವಾತಘ್ನಂಗ್ರಹಣ್ಯರ್ಶೋವಿಕಾರನುತ್ ॥
ಹಂತ್ಯಾನಾಹಂಗುದಭ್ರಂಶಂಮೂತ್ರಕೃಚ್ಛ್ರಂಪ್ರವಾಹಿಕಾಂ॥೨೪॥

ಚಾಂಗೇರೀಘೃತ:—ಹಿಪ್ಪಲಿ. ಮೋಡಿ, ಚಿತ್ರಮೂಲ, ಆನೆಹಿಪ್ಪಲಿ, ನೆಗ್ಗಲು, ಶುಂಠಿ, ಧನಿಯ, ಅಗಳುಶುಂಠಿ, ಬಿಲ್ವದತಿರುಳು, ತುರುಷ್ಕಪೋವು, ಈ ಪದಾರ್ಥಗಳು ಪ್ರತಿಯೊಂದೂ ಒಂದೊಂದು ಪಲದಷ್ಟು, ಅರವತ್ತನಾಲ್ಕು ಪಲ ತುಪ್ಪ, ತುಪ್ಪದ ನಾಲ್ಕರಷ್ಟು ಪುಲ್ಲಂಬುರುಚೀ ಸೊಪ್ಪಿನ ರಸ ಇವುಗಳನ್ನು ಸೇರಿಸಿ ನಿದಾನವಾಗಿ ಘೃತಪಾಕ ಕ್ರಮದಿಂದ ಪಕ್ವಮಾಡಿಕೊಳ್ಳಬೇಕು, ಈ ಘೃತವನ್ನು ಸೇವಿಸುತ್ತ ಬಂದಲ್ಲಿ ಕಫದೋಷಗಳು, ವಾತದೋಷಗಳು, ಗ್ರಹಣಿ ಎಂಬ ಭೇದಿ, ಮೂಲವ್ಯಾಧಿ, ಹೊಟ್ಟೆಯುಬ್ಬರ, ಆಸನ ಹೊರಬೀಳುವುದು ಅಂದರೆ ಗೂದೆ ಹಾಯುವುದು, ಮೂತ್ರಕೃಚ್ಛ್ರವೆಂದರೆ ಮೂತ್ರಶಿಕ್ಕು, ಪ್ರವಾಹಿಕೆ ಎಂಬ ಭೇದಿ ಇವುಗಳನ್ನು ಗುಣಪಡಿಸುತ್ತದೆ

ಮಸೂರಾಣಾಂಪಲಶತಂನೀರದ್ರೋಣೇವಿಪಾಚಯೇತ್ ॥
ಪಾದಶೇಷಂಶೃತಂನೀತ್ವಾದತ್ವಾಬಿಲ್ವಪಲಾಷ್ಟಕಂ ॥ ೨೫ ॥
ಘೃತಪ್ರಸ್ಥಂಪಚೇತ್ತೇನಸರ್ವಾತೀಸಾರನಾಶನಂ ।
ಗ್ರಹಣೀಂಭಿನ್ನವಿಟ್ಕಂಚನಾಶಯೇಚ್ಚಪ್ರವಾಹಿಕಾಂ ॥ ೨೬ ॥

ಮಸೂರ ಎನ್ನುವುದು ಒಂದು ಬಗೆಯ ದ್ವಿದಳ ಧಾನ್ಯ, ಈ ಧಾನ್ಯವು ಉತ್ತರ ದೇಶದಲ್ಲಿ ಪ್ರಸಿದ್ಧವಾಗಿದೆ. ಕಾನ್‌ಪುರದ ಕಡೆಯಿಂದ ಇಲ್ಲಿಗೆ ಬರುವ ತೊಗರೀಬೇಳೆಯಲ್ಲಿ ಕೆಂಪುವರ್ಣದ ಒಂದು ಬಗೆಯ ಬೇಳೆ ಬರುತ್ತದೆ. ಅದನ್ನೇ "ಮಸೂರದಾಲ್" ಎಂದು ಕರೆಯುತ್ತಾರೆ ಈ ಮಸೂರಧಾನ್ಯ ಒಂದು ನೂರು ಪಲವನ್ನು ಒಂದು ದ್ರೋಣ ಪರಿಮಾಣ ನೀರಿನಲ್ಲಿ (ಒಂದು ಸಾವಿರದ ಇಪ್ಪತ್ತ ನಾಲ್ಕು ತೊಲ) ಪಾಕಮಾಡಬೇಕು, ನಾಲ್ಕರಲ್ಲಿ ಒಂದು ಭಾಗ ಉಳಿಯುವ ವರಿವಿಗೂ ಕಾಯಿಸಿ ಸೋಧಿಸಿ ಇಳಿಸಿಕೊಂಡು ಬಿಲ್ವದಹಣ್ಣಿನ ತಿರುಳು ಎಂಟು ಪಲದಷ್ಟನ್ನು ಬೇರೇ ನೀರಿನಲ್ಲಿ ಕದಡಿ ಕಲ್ಕದಂತೆ ಮಾಡಿ ಮೇಲಿನ ಕಷಾಯದ ಜೊತೆಗೆ ಬೆರಸಿ ಕಾಯಿಸುವುದಕ್ಕಾರಂಭಿಸಿ ಒಂದು ಪ್ರಸ್ಥ ಪರಿಮಾಣ ತುಪ್ಪ

ವನ್ನು ಸೇರಿಸಿ ಘೃತಪಾಕ ಕ್ರಮದಲ್ಲಿ ಪಕ್ವಮಾಡಿ ಇಳಿಸಿಕೊಂಡು ಸೇವಿಸುತ್ತ ಬರುವುದರಿಂದ ಸಮಸ್ತ ವಿಧವಾದ ಅತಿಸಾರ, ಗ್ರಹಣಿ, ಭೇದಿ, ನೀರಾಗಿ ಮಲ ಪ್ರವೃತ್ತಿಯಾಗುವುದು, ಪ್ರವಾಹಿಕ ಎಂಬ ಒಂದು ವಿಧವಾದ ಭೇದಿ, ಇವುಗಳ ನ್ನೆಲ್ಲಾ ನಿವಾರಣ ಮಾಡುತ್ತದೆ.

ಅಶ್ವಗಂಧಾಪಲಶತಂತದರ್ಧಂಗೋಕ್ಷುರಂಸ್ಮೃತಂ
ಶತಾವರೀವಿದಾರೀಚಶಾಲಿಪರ್ಣೀಬಲಾಮೃತಾ ॥ ೨೭ ॥
ಅಶ್ವತ್ಥಸ್ಯಚಶುಂಗಾನಿಪದ್ಮಬೀಜಂಪುನರ್ನವಾ ॥
ಕಾಶ್ಮರ್ಯಾಃ ಫಲಂಚೈವಮಾಷಬೀಜಂತಥೈವಚ ॥ ೨೮ ॥
ಪೃಥಗ್ದಶಪಲಾನ್ಭಾಗಾನ್ ಚತುರ್ದ್ರೋಣೇಂಭಸಿಕ್ಷಿಪೇತ್ ॥
ದ್ರೋಣಶೇಷೇರಸೇತಸ್ಮಿನ್ ಪಚೇಚ್ಚೈವಘೃತಾಢಕಂ ॥ ೨೯ ॥
ಮೃದ್ವೀಕಾಪದ್ಮಕಂಕುಷ್ಠಂಪಿಪ್ಪಲೀರಕ್ತಚಂದನಂ ॥
ಪತ್ರಕಂನಾಗಪುಷ್ಪಂಚಆತ್ಮಗುಪ್ತಾಫಲಂತಥಾ ॥ ೩೦ ॥
ನೀಲೋತ್ಪಲಂಸಾರಿಬೇದ್ವೇಜೀವನೀಯೋಗಣಸ್ತಥಾ ॥
ಪೃಥಕ್ಕರ್ಷಸಮಾನ್ಭಾಗಾನ್ ಶರ್ಕರಾಯಾಃಪಲದ್ವಯಂ ॥ ೩೦ ॥
ರಸಸ್ಯಪೌಂಡ್ರಕೇಕ್ಷೂಣಾಮಾಢಕ್ಕೈಕಂಸಮಾಹರೇತ್ ॥
ಚತುರ್ಗುಣೇನಪಯಸಾಘೃತಸ್ಯಾಪ್ಯಾಢಕಂಪಚೇತ್ ॥ ೩೧ ॥
ಘೃತಮೇತನ್ನಿಹಂತ್ಯಾಶುರಕ್ತಪಿತ್ತಮುರಕ್ಷತಂ ॥
ಹಲೀಮಕಂಪಾಂಡುರೋಗಂವರ್ಣಭೇದಂಸ್ವರಕ್ಷಯಂ ॥ ೩೩ ॥
ಮೂತ್ರಕೃಚ್ಛ್ರಮುರೋದಾಹಂಪಾರ್ಶ್ವಶೂಲಂಚನಾಶಯೇತ್ ॥
ಏತತ್ಸರ್ಪಿಃ ಪ್ರಯೋಕ್ತವ್ಯಂಬಹ್ವಂತಃಪುರವಾಸಿನಾಂ ॥ ೩೪ ॥
ಸ್ತ್ರೀಣಾಂಚೈವಾಪ್ರಜಾನಾಂ ಚದುರ್ಬಲಾನಾಂಚದೇಹಿನಾಂ ॥
ಶ್ರೇಷ್ಠಂಬಲಕರಂವರ್ಣ್ಯಂಹೃದ್ಯಂಪುಷ್ಟಿರಸಾಯನಂ ॥ ೩೫ ॥
ಓಜಸ್ತೇಜಸ್ಕರಂವೃಷ್ಯಮಾಯುಷ್ಯಂಪ್ರಾಣವರ್ಧನಂ ॥
ಸಂವರ್ಧಯತಿಶುಕ್ರಸ್ಯಪುರುಷಂದುರ್ಬಲೇಂದ್ರಿಯಂ ॥ ೩೬ ॥
ಸರ್ವರೋಗವಿನಿರ್ಮುಕ್ತೋಜಾಯತೇಯುಧಾದ್ರುಮಃ ॥
ಕಾಮದೇವಇತಿಖ್ಯಾತಂಸರ್ಪಿರುಕ್ತಂಮಹಾಗುಣಂ ॥ ೩೭ ॥

ಕಾಮದೇವಘೃತ:—ಹಿರೇಮದ್ದಿನ ಬೇರು ನೂರು ತೊಲ, ನೆಗ್ಗಿಲಬೇರು ಐವತ್ತು ತೊಲ, ಆಷಾಡೀಬೇರು, ಹಂದೀಗೆಡ್ಡೆ, ಶಾಲಿಪರ್ಣಿ ಎಂದರೆ ಒಂದೆಲೇ ಹೊನ್ನೆ, ಕಳ್ಳಂಗಡ್ಲೆ, ಅಮೃತಬಳ್ಳಿ, ಅರಳಿಯ ಎಳೇಕುಡಿ, ಕಮಲದ ಬೀಜ, ಕೊಮ್ಮೆಯಬೇರು, ಶಿವನೆಯ ಕಾಯಿಗಳು, ಉದ್ದಿನ ಕಾಳು, ಇವು ಪ್ರತಿಯೊಂದೂ

ಹತ್ತು ಹತ್ತು ಪಲ ಪರಿಮಾಣ, ಈ ರೀತಿ ಸೇರಿಸಿ ನಾಲ್ಕು ದ್ರೋಣ (ನಾಲ್ಕು ಸಾವಿರದ ತೊಂಬತ್ತಾರು ತೊಲ) ನೀರಿನಲ್ಲಿ ಹಾಕಿ ಕಷಾಯವನ್ನಾಡಿ ನಾಲ್ಕರಲ್ಲಿ ಒಂದು ಭಾಗಕ್ಕೆ ಇಳಿಸಿಕೊಂಡು ಆಸರ ಜೊತೆಗೆ ಆಢಕ (ಇನ್ನೂರ ಐವತ್ತಾರು ತೊಲ) ಪ್ರಮಾಣ ತುಪ್ಪವನ್ನು ಬೆರಸಿ, ದ್ರಾಕ್ಷಿ, ಪದ್ಮಕಾಷ್ಠವೆಂಬ ಅಂಗಡಿದಿನಸು, ಚಂಗಲಕೋಷ್ಠ, ಹಿಪ್ಪಲಿ, ರಕ್ತಚಂದನ, ತಮಾಲಪತ್ರೆ, ನಾಗಕೇಸರಿ, ತುರಚಿಯ ಕಾಯಿ, ಸೈದೆಲೆಹುವ್ವು, ಎರಡು ಜಾತಿಯ ಸೊಗದೆಯ ಬೇರುಗಳು, ಜೀವನೀಯ ಗಣದಲ್ಲಿ ಹೇಳಲ್ಪಟ್ಟ ಮೂಲಿಕೆಗಳು, (ಜೀವನೀಯಗಣವೆಂದರೆ—ಹಾಲೇಬಳ್ಳಿ, ಸೂರ್ಯಪರ್ಣಿ ಎಂಬ ಮೂಲಿಕೆ, ಕಾಕೋಲಿ, ಕ್ಷೀರಕಾಕೋಲಿ, ಜೀವಕ, ಋಷಭಕ, ಮೇದಾ, ಮಹಾಮೇದಾ, ಜ್ಯೇಷ್ಠಮಧು) ಇವುಗಳು ಪ್ರತಿಯೊಂದೂ ಒಂದೊಂದು ಕರ್ಷ ಪ್ರಮಾಣ, ಸಕ್ಕರೆ ಎರಡು ಪಲ, ಕಬ್ಬಿನ ಹಾಲು ಎರಡು ಆಢಕ ಪರಿಮಾಣ, ತುಪ್ಪ ಒಂದು ಆಢಕ ಪರಿಮಾಣ, ತುಪ್ಪದ ನಾಲ್ಕರಷ್ಟು ನೀರಿನಲ್ಲಿ ಮೇಲೆ ಹೇಳಿರುವ ಮೂಲಿಕೆಗಳನ್ನೆಲ್ಲಾ ನೆನೆಯಿಸಿ ಅರದು ಕಲ್ಕ ಮಾಡಿ ಕಷಾಯದೊಡನೆ ಸೇರಿಸುವುದು, ಈ ರೀತಿಯಾಗಿ ಪದಾರ್ಥಗಳನ್ನು ಸೇರಿಸಿಕೊಂಡು ಮಂದಾಗ್ನಿಯಿಂದ ಘೃತಪಾಕದ ಹದವನ್ನು ನೋಡಿ ಕಾಯಿಸಿ ಇಳಿಸಿಕೊಳ್ಳತಕ್ಕದ್ದು. ಇದರ ಸೇವನೆಯಿಂದ ರಕ್ತಪಿತ್ತ ಉರಃಕ್ಷತ (ಎದೆಯೊಡೆಯುವುದು) ಹಲೀಮಕವೆಂಬ ಒಂದು ಒಗೆಯ ಕಾಮಾಲೆರೋಗ, ಪಾಂಡುರೋಗ, ವರ್ಣಭೇದವೆಂದರೆ ಶರೀರದ ಬಣ್ಣ ಕೆಟ್ಟುಹೋಗುವುದು, ಧ್ವನಿ ಕುಗ್ಗುವುದು, ಮೂತ್ರಿಸುವುದಕ್ಕೆ ಕಷ್ಟವಾಗುವುದು, ಎದೆಯುರಿ, ಪಕ್ಕಶೂಲೆ, ಇವುಗಳನ್ನೆಲ್ಲಾ ಕಡಮೆಮಾಡುತ್ತದೆ. ಈ ಘೃತವನ್ನು ಬಹಳ ಜನ ಹೆಂಡರಿರುವವರು ಉಪಯೋಗಿಸತಕ್ಕದ್ದು, ಅಂದರೆ ಅತಿಶಯ ಶುಕ್ರವೃದ್ಧಿಯನ್ನೂ ಅನೇಕ ಜನ ಸ್ತ್ರೀಯರನ್ನು ತೃಪ್ತಿಪಡಿಸತಕ್ಕ ಶಕ್ತಿಯನ್ನೂ ಕೊಡುತ್ತದೆಂಬ ಭಾವ. ಮಕ್ಕಳಿಲ್ಲದ ಸ್ತ್ರೀಯರಿಗೂ ಈ ಘೃತವನ್ನು ಕೊಡಬಹುದು, ದುರ್ಬಲರಾದವರಿಗೂ ಉಪಯುಕ್ತವಾದದ್ದು, ದೇಹಬಲ, ಕಾಂತಿ, ಆಯುಸ್ಸು, ಇವುಗಳನ್ನು ಹೆಚ್ಚಿಸಿ ದೇಹಕ್ಕೆ ಪುಷ್ಟಿಯನ್ನುಂಟುಮಾಡಿ ಶುಕ್ರವೃದ್ಧಿ ಮಾಡುತ್ತದೆ. ಇದನ್ನು ಸೇವನೆ ಮಾಡಿದ ಮನುಷ್ಯನು ಸಮಸ್ತ ರೋಗಗಳಿಂದ ಬಿಡುಗಡೆ ಹೊಂದಿ ಕಾಮದೇವನಂತ ರೂಪ ಯೌವ್ವನ ಬಲ ಸಂಪನ್ನನಾಗುತ್ತಾನೆಂಬ ಭಾವದಿಂದ ಇದಕ್ಕೆ ಕಾಮದೇವಘೃತವೆಂದು ಹೆಸರಿಟ್ಟಿದ್ದಾರೆ.

ತ್ರಿಫಲಾದ್ಯೇನಿಶೇಕೌಂತೀಸಾರಿಬೇಶ್ವೇಪ್ರಿಯಂಗುಕಾ ॥
ಶಾಲಿಪರ್ಣೀಪೃಷ್ಟಿಪರ್ಣೀದೇವದಾರ್ವೈಲವಾಲುಕಂ ॥ ೩೮ ॥
ನತಂವಿಶಾಲಾದಂತೀಚಪಾಡಿಮಂನಾಗಕೇಶರಂ ॥
ನೀಲೋತ್ಪಲೈಲಾಮಂಜಿಷ್ಠಾವಿಡಂಗಂಕುಷ್ಠಪದ್ಮಕಂ ॥ ೩೯ ॥

ಜಾತಿಪುಷ್ಪಂಚಂದನಂಚತಾಲೀಸಂಬೃಹತೀತಥಾ ||
ಏಕೈಃಕರ್ಷಸಮೈಃಕಲ್ಕೈಃಜಲಂದತ್ವಾಚತುರ್ಗುಣಂ || ೪೦ ||
ಘೃತಪ್ರಸ್ಥಂಪಚೇದ್ಧೀಮಾನಪಸ್ಮಾರೇಜ್ವರೇಕ್ಷಯೇ ||
ಉನ್ಮಾದೇವಾತರಕ್ತೇಚಕಾಸೇಮಂದಾನಲೇತಥಾ || ೪೧ ||
ಪ್ರತಿಶ್ಯಾಯೇಕಟೀಶೂಲೇತೃತೀಯಕಚತುರ್ಥಕೇ ||
ಮೂತ್ರಕೃಚ್ಛ್ರೇವಿಸರ್ಪೇಚಕಂಡೂಪಾಂಡ್ವಾಮಯೇತಥಾ || ೪೨
ವಿಷದ್ವಯೇಪ್ರಮೇಹೇಷುಸರ್ವಥೈವೋಪಯುಜ್ಯತೇ ||
ವಂಧ್ಯಾನಾಂಪುತ್ರದಾಭೂತಯಕ್ಷರಕ್ಷೋಹರಂಸ್ಮೃತಂ || ೪೩ ||

ಪಾನೀಯಕಲ್ಯಾಣಘೃತ—ತ್ರಿಫಲ (ಅಳಲೆ, ತಾರೆ, ನೆಲ್ಲಿ) ಅರಿಸಿನ, ಮರ ಅರಿಸಿನ, ರೇಣುಕಬೀಜ, ಕಪ್ಪುನೊಗದಯ ಬೇರು, ಬಿಳಿಯನೊಗದೆಯ ಬೇರು, ಪ್ರಿಯಂಗು ಎಂಬ ಸ್ವನಾಮಖ್ಯಾತವಾದ ಮೂಲಿಕೆ, ಒಂದಲೆಹೊನ್ನೆ, ಮೂರೆಲೆ ಹೊನ್ನೆ, ದೇವದಾರೀ ಕೋರಡು, ಸುರಸಾರಿಕಯಬಳ್ಳಿ, ಗ್ರಂಥಿತಗರ, ದಾವು ಮಿಕ್ಕೆಯಕಾಯಿ, ಜಾಪುಪಾಲಬೀಜ, ದಾಳಿಂಬವತಿಪ್ಪೆ, ನಾಗಕೇಸರ, ನೀಲತಾವರ ಯಾಲಕ್ಕಿ, ಮಂಜಿಷ್ಠೆ, ವಾಯುವಿಡಂಗ, ಚಂಗಲಕೋಷ್ಠ, ಪದ್ಮಕವೆಂಬ ಮೂಲಿಕೆ, ಜಾಜಿಪಾಹುವ್ವ, ಚಂದನ, ತಾಲೀಸಪತ್ರೆ, ಹೆಗ್ಗುಳ್ಳ, ಇವುಗಳು ಒಂದೊಂದು ಕರ್ಷ ಪ್ರಮಾಣ ತೆಗೆದುಕೊಂಡು ನಾಲ್ಕು ಪ್ರಸ್ಥ ನೀರಿನೊಡನೆ ಅರದು ಕಲ್ಕನಾಡಿ ಒಂದು ಪ್ರಸ್ಥ ಪರಿಮಾಣ ತುಪ್ಪವನ್ನು ಸೇರಿಸಿ ಘೃತಪಾಕ ರೀತಿಯಿಂದ ಪಕ್ವಮಾಡಿ ಇಳಿಸಿಕೊಳ್ಳತಕ್ಕದ್ದು. ಈ ಘೃತಸೇವನೆಯಿಂದ ಅಪ ಸ್ಮಾರ, ಜ್ವರ, ಕ್ಷಯ, ಹುಚ್ಚು, ವಾತರಕ್ತ, ಕೆಮ್ಮು, ಅಗ್ನಿಮಾಂದ್ಯ, ಪೀನಸ, ಸೊಂಟಶೂಲೆ, ತೃತೀಯಕಜ್ವರ, ಚತುರ್ಥಕಜ್ವರ, ಮೂತ್ರ ಹೊರಡುವುದು ಕಷ್ಟವಾಗುವುದು, ಅಗ್ನಿವಿಸರ್ಪವೆಂಬ ಉರಿಬಕ್ಕೆ, ಮೈನವೆ, ಪಾಂಡುರೋಗ, ಸ್ಥಾವರ ಮತ್ತು ಜಂಗಮ ವಿಷಗಳಿಂದ ಸಂಭವಿಸುವ ರೋಗಗಳು, ಮೇಹ ರೋಗ, ಇವುಗಳೆಲ್ಲವೂ ಗುಣಹೊಂದುತ್ತವೆ ಒಂಜೆಯರಾಗಿರುವ ಹೆಂಗಸರಿಗೆ ಮಕ್ಕಳಾಗುತ್ತದ ಈ ಘೃತ ಸೇವನೆಯಿಂದ ಭೂತಯಕ್ಷಬಾಧೆಗಳು ಸಹಾ ನಿವಾರಣೆಯಾಗುವವು.

ಅಮೃತಾಕ್ವಾಥಕಲ್ಕಾಭ್ಯಾಂಸಕ್ಷೀರಂವಿಪಚೇದ್ಘೃತಂ ||
ವಾತರಕ್ತಂಜಯತ್ಯಾಶುಕುಷ್ಠಂಜಯತಿದುಸ್ತರಂ || ೪೪ ||

ಅಮೃತಾಘೃತ—ಅಮೃತಬಳ್ಳಿಯ ಕಷಾಯ, ಅದರದ್ದೇ ಕಲ್ಕ, ಈ ರೀತಿ ಮಾಡಿ ಸೇರಿಸಿ ಹಾಲನ್ನೂ ಹಾಕಿ ಘೃತವನ್ನು ಪಾಕಮಾಡಿಕೊಳ್ಳುವುದು. ಇದ ರಿಂದ ವಾತರಕ್ತರೋಗ, ಭಯಂಕರವಾದ ಕುಷ್ಠರೋಗ ಇವುಗಳು ಶಾಂತವಾಗು

ತ್ರವೆ. ಇಲ್ಲಿ ಕಷಾಯ ಮತ್ತು ಕಲ್ಕಗಳ ಪ್ರಮಾಣವನ್ನು ಪರಿಭಾಷೆಯನ್ನು ನೋಡಿಕೊಂಡು ಊಹಿಸಿಕೊಳ್ಳತಕ್ಕದ್ದು.

ಸಪ್ತಚ್ಛದಃಪ್ರತಿವಿಷಾಶ್ಯಾಮಾಕಃಕಟುರೋಹಿಣೀ ॥
ಪಾಠಾಮುಸ್ತಮುಶೀರಂಚತ್ರಿಫಲಾಪರ್ಪಟಸ್ತಥಾ ॥ ೪೫ ॥
ಪಟೋಲನಿಂಬಮಂಜಿಷ್ಠಾಃಪಿಪ್ಪಲೀಪದ್ಮಕಂಶಠೀ ॥
ಚಂದನಂಧನ್ವಯಾಸಶ್ಚಪಿಶಾಲೇದ್ವೇನಿಶೇತಥಾ ॥ ೪೬ ॥
ಗುಡೂಚೀಸಾರಿಬೇವ್ವೇಚಮೂರ್ವಾವಾಸಾಶತಾವರೀ ॥
ತ್ರಾಯಂತೀಂದ್ರಯವಾಯಷ್ಟೀಭೂನಿಂಬಶ್ಚಾಕ್ಷಭಾಗಿಕಾಃ ॥ ೪೭ ॥
ಘೃತಂಚತುರ್ಗುಣಂದದ್ಯಾದ್ಘೃತಾದಾಮಲಕೀರಸಃ ॥
ದ್ವಿಗುಣಸ್ಸರ್ಪಿಷಶ್ಚಾತ್ರಜಲಮಷ್ಟಗುಣಂಭವೇತ್ ॥ ೪೮ ॥
ತತ್ಸಿದ್ಧಂಪಾಯಯೇತ್ಸರ್ಪಿರ್ವಾತರಕ್ತೇಷುಸರ್ವಥಾ ॥
ಕುಷ್ಠಾನಿರಕ್ತಪಿತ್ತಂಚರಕ್ತಾರ್ಶಾಂಸಿಚಪಾಂಡುತಾಂ ॥ ೪೯ ॥
ಹೃದ್ರೋಗಗುಲ್ಮವೀಸರ್ಪಪ್ರದರಂಗಂಡಮಾಲಿಕಾಂ ॥
ಕ್ಷುದ್ರರೋಗಾನ್ಜ್ವರಾಂಶ್ಚೈವಮಹಾತಿಕ್ತಮಿದಂಜಯೇತ್ ॥ ೫೦ ॥

ಮಹಾತಿಕ್ತಘೃತ—ಸಪ್ತಪರ್ಣ, ಅತಿಬಜೆ, ಶ್ಯಾಮಾಕಃ ಎಂದರೆ ಸಾವೆ ಎಂದು ಪ್ರಚಾರದಲ್ಲಿರುವ ಧಾನ್ಯ (ವ್ಯಾಖ್ಯಾನದಲ್ಲಿ ಶ್ಯಾಮಾಕವೆಂದರೆ ಕಕ್ಕೆಯ ಕಾಯಿ ಎಂದು ಹೇಳುತ್ತಾರೆ. ಹಾಗೆ ಹೇಳುವುದಾದರೆ ಮೂಲದಲ್ಲಿ ಶ್ಯಾಮಾಕಃ ಎಂಬ ಪದಕ್ಕೆ ಬದಲು ಶಮ್ಯಾಕಃ ಎಂದು ತಿದ್ದಿಕೊಂಡರೆ ಆಗುತ್ತದೆ) ಕಟುಕರೋಹಿಣಿ, ಅಗಸಿಶುಂಠಿ, ಭದ್ರಮುಸ್ತ, ಲಾಮಂಚ, ತ್ರಿಫಲಾ, ಪರ್ಪಾಟಕ, ಕೈಪಡವಲ, ಬೇವಿನತೊಪ್ಪೆ, ಮಂಜಿಷ್ಠೆ, ಹಿಪ್ಪಲಿ, ಪದ್ಮಕ, ಕಚೋರ, ಶ್ರೀಗಂಧ, ತುರಚೆ, ದಾಸಮಿಕ್ಕೆ ಕಾಯಿ, ಹಾವುಮಿಕ್ಕೆ ಕಾಯಿ, ಅರಿಸಿನ, ಮರದರಿಸಿನ, ಅಮೃತಬಳ್ಳಿ, ಸೊಗದೆಬೇರು ಬಿಳಿಯದು ಮತ್ತು ಕರಿಯದು, ಕುರುಟಿಗೆ, ಆಡುಸೋಗೆ, ಹಲವು ಮಕ್ಕಳ ಬೇರು, ಗಜ್ಜುಗ, ಕೊಡಸದ ತೊಪ್ಪು, ಜ್ಯೇಷ್ಠಮಧು, ಚಿರಾಯಿತ ಈ ಮೂಲಿಕೆಗಳು ಪ್ರತಿಯೊಂದೂ ಒಂದೊಂದು ಕರ್ಷಪ್ರಮಾಣ, ಇವುಗಳ ನಾಲ್ಕರಷ್ಟು ತುಪ್ಪ, ತುಪ್ಪದ ಎರಡರಷ್ಟು ನೆಲ್ಲಿಯಕಾಯಿಯ ರಸ, ತುಪ್ಪದ ಎಂಟರಷ್ಟು ನೀರು ಈ ರೀತಿಯಾಗಿ ಪದಾರ್ಥಗಳನ್ನು ಸೇರಿಸಿ ಘೃತಪಾಕ ಕ್ರಮದಲ್ಲಿ ಪಾಕಮಾಡಿಕೊಂಡು ಸೇವಿಸುತ್ತ ಬಂದಲ್ಲಿ ವಾತರಕ್ತ, ಕುಷ್ಠ, ರಕ್ತಪಿತ್ತ, ರಕ್ತಾರ್ಶಸ್ಸು, ಪಾಂಡುರೋಗ, ಹೃದಯರೋಗಗಳು, ಗುಲ್ಮ, ವಿಸರ್ಪ, ಅಸೃಗ್ಧರ, ಗಂಡಮಾಲೆ, ಇನ್ನೂ ನಾನಾ ವಿಧಗಳಾದ ಕ್ಷುದ್ರರೋಗಗಳು, ಜ್ವರಗಳು ಸಹಾ ಇದರಿಂದ ನಿವಾರಣೆಯಾಗುತ್ತವೆ.

ಕಾಸೀಸಂದ್ವೇನಿಶೇಮುಸ್ತಂಹರಿತಾಲಂಮನಶ್ಶಿಲಾಂ ।।
ಕಂಪಿಲ್ಲಕಂಗಂಧಕಂಚವಿಡಂಗಂಗುಗ್ಗುಲುಂತಥಾ ॥ ೫೧ ॥
ಸಿಕ್ಥಕಂಮರಿಚಂಕುಷ್ಠಂತುತ್ಥಕಂಗೌರಸರ್ಷಪಾನ್ ।।
ರಸಾಂಜನಂಚಸಿಂದೂರಂಶ್ರೀವಾಸಂರಕ್ತಚಂದನಂ ॥ ೫೨ ॥
ಇರಿಮೇದಂನಿಂಬಪತ್ರಂಕರಂಜಂಸಾರಿಬಾಂವಚಾಂ ।।
ಮಂಜಿಷ್ಠಾಂಮಧುಕಂಮಾಂಸೀಂಶಿರೀಷಂಲೋಧ್ರಪದ್ಮಕಂ ॥೫೩॥
ಹರೀತಕೀಂಪ್ರಪುನ್ನಾಟಂಚೂರ್ಣಯೇತ್ಕರ್ಷಿಕಾನ್ಪೃಥಕ್ ।।
ತತಸ್ತಚ್ಚೂರ್ಣಮಾಲೋಡ್ಯತ್ರಿಂಶತ್ಪಲಮಿತೇಘೃತೇ ॥ ೫೪ ॥
ಸ್ಥಾಪಯೇತ್ತಾಮ್ರಪಾತ್ರೇಚಘರ್ಮೇಸಪ್ತದಿನಾವಧಿ ।।
ಅಸ್ಯಾಭ್ಯಂಗೇನಕುಷ್ಠಾನಿದದ್ರೂಪಾಮಾವಿಚರ್ಚಿಕಾಃ ॥ ೫೫ ॥
ಶೂಕದೋಷಾವಿಸರ್ಪಾಶ್ಚವಿಸ್ಫೋಟಾವಾತರಕ್ತಜಾಃ ।।
ಶಿರಸ್ಫೋಟೋಪದಂಶಾಶ್ಚನಾಡೀದುಷ್ಟವ್ರಣಾನಿಚ ॥ ೫೬ ॥
ಶೋಥೋಭಗಂದರಶ್ಚೈವಲೂತಾಃಶಾಮ್ಯಂತಿದೇಹಿನಾಂ ।।
ಶೋಧನಂರೋಪಣಂಚೈವಸವರ್ಣಕರಣಂಘೃತಂ ॥ ೫೭ ॥

ಕಾಸೀಸಾದಿಘೃತ—ಅನ್ನಭೇದಿ, ಅರಿಸಿನ, ಮರಅರಿಸಿನ, ಭದ್ರಮುಸ್ತೆ, ಅರಿದಳ, ಮಣಿಶಿಲೆ, ಕಂಪಿಲ್ಲಕವೆಂದರೆ ಸೌರಾಷ್ಟ್ರ ದೇಶದಲ್ಲಿ ಹುಟ್ಟಿದ ಇಟ್ಟಿಗೆಯ ಪುಡಿಯಂತಹ ಒಂದು ಬಗೆಯ ಮಣ್ಣು, ಗಂಧಕ, ವಾಯುವಿಡಂಗ, ಗುಗ್ಗುಳ, ಜೇನುಮೇಣ, ಮೆಣಸು, ಚಂಗಲಕೋಷ್ಟ, ಮೈಲ್‌ತುತ್ತ, ಬಿಳೀಸಾಸುವೆ, ರಸಾಂಜನ, ಚಂದ್ರ, ಧೂಪದ ಎಣ್ಣೆ, ರಕ್ತಚಂದನ, ಜಾಲಿಯತೊಪ್ಪೆ, ಬೇವಿನೆಲೆ, ಹೊಂಗೇಬೀಜ, ಸೊಗದೇಬೇರು, ಬಜೆ, ಮಂಜಿಷ್ಠೆ, ಜ್ಯೇಷ್ಠಮಧು, ಜಟಾಮಾಂಸಿ, ಬಾಗೇತೊಪ್ಪೆ, ಪತಂಗದ ಚಕ್ಕೆ, ಪದ್ಮಕ, ಅಳಲೇಕಾಯಿ, ಚಗಚೇಬೀಜ, ಈ ಪ್ರತಿಯೊಂದು ಪದಾರ್ಥವೂ ಒಂದೊಂದು ಕರ್ಷಪ್ರಮಾಣ ನಯವಾದ ಚೂರ್ಣಮಾಡಿ ಮೂವತ್ತು ಪಲ ಪರಿಮಾಣ ತುಪ್ಪದಲ್ಲಿ ಚನ್ನಾಗಿ ಕದರಿ ತಾಮ್ರದ ಪಾತ್ರೆಯಲ್ಲಿ ಹಾಕಿ ಏಳು ದಿವಸ ಬಿಸಿಲಿನಲ್ಲಿರಿಸಬೇಕು. ನಂತರ ತೆಗದಿರಿಸಿಕೊಂಡರೆ ಅಲ್ಲಿಗೆ ಘೃತವು ಪಕ್ವವಾಗಿ ಸಿದ್ಧವಾಯಿತು ಈ ಘೃತವನ್ನು ಮೈಗೆ ತಿಕ್ಕಿ ಬಿಸನೀರಿನಿಂದ ಅಭ್ಯಂಗಮಾಡಿಕೊಳ್ಳುವುದರಿಂದ ಕುಷ್ಠಗಳು, ದದ್ದುಗಳು, ನವೆ, ತುರಿ, ಶೂಕದೋಷವೆಂದರೆ ಮೇಹಸಂಬಂಧವಾದ ವ್ರಣಗಳು, ವಿಸರ್ಪವೆಂಬ ವ್ರಣಗಳು, ವಾತರಕ್ತರೋಗದ ಬೊಬ್ಬೆಗಳು, ತಲೆಯಲ್ಲಿ ಹುಟ್ಟುವ ಸುಣ್ಣಪರಲೆಬಕ್ಕೆ, ಒಂದು ಬಗೆಯ ಹೆಂಗಸರ ಸಮ್ಭಂಧದಿಂದ ಬರುವ ಹುಣ್ಣು, ನಾರುಹುಣ್ಣು, ಕೆಟ್ಟಗಾಯಗಳು, ಶೋಥೆ, ಭಗಂದರ, ಚಿಬ್ಬು, ಇವುಗಳನ್ನೆಲ್ಲಾ ಶೋಧಿಸಿ ವಾಯಿಸುತ್ತದೆ. ಮತ್ತು ಚರ್ಮದ ವರ್ಣವು ಕೆಟ್ಟುಹೋಗಿದ್ದರೆ ಅದನ್ನು ಮೊದಲಿನ ಬಣ್ಣಕ್ಕೆ ಹೊಂದಿಸುತ್ತದೆ.

ಜಾತೀನಿಂಬಪಟೋಲಂಚದ್ವೇನಿಶೇಕಟುರೋಹಿಣೀ ||
ಮಂಜಿಷ್ಠಾಮಧುಕಂಸಿಕ್ಥಂಕರಂಜೋಶೀರಸಾರಿಬಾಃ || ೫೮ ||
ತುತ್ಥಂಚವಿಪಚೇತ್ಸರ್ಪ್ಯಕ್ಕಲ್ಕೈರೇಭಿರ್ಘ್ರತಂಬುಧಃ ||
ಅಸ್ಯಲೇಪಾದ್ವಿರೋಹಂತಿಸೂಕ್ಷ್ಮನಾಡೀವ್ರಣಾಅಪಿ || ೫೯ ||
ಮರ್ಮಾಶ್ರಿತಾಃಕ್ಲೇದಿನಶ್ಚಗಂಭೀರಾಸ್ಸರುಜೋವ್ರಣಾಃ ||

ಜಾತ್ಯಾದಿಘೃತ—ಜಾಜಿಯ ಸೊಪ್ಪು, ಬೇವಿನ ಸೊಪ್ಪು, ಕೈಪಡವಲದ ಸೊಪ್ಪು, ಅರಿಸಿನ, ಮರಅರಿಸಿನ, ಕಟುಕರೋಹಿಣಿ, ಮಂಜಿಷ್ಠೆ, ಜ್ಯೇಷ್ಠಮಧು, ಜೇನುಮೇಣ, ಹೊಂಗೆಯಬೀಜ, ಲಾಮಂಚ, ಸೊಗದೆಯಬೇರು, ಮೈಲ್‌ತುತ್ಥ, ಇವುಗಳ ಕಲ್ಕವಮಾಡಿಕೊಂಡು ಅದರೊದನೆ ತುಪ್ಪವನ್ನು ಸೇರಿಸಿ ಕಾಯಿಸಿ ಕೊಳ್ಳುವುದು. ಈ ಘೃತವನ್ನು ಹಚ್ಚಿಕೊಳ್ಳೋಣದರಿಂದ ನಾರು ಹುಣ್ಣುಗಳು, ಮರ್ಮಸ್ಥಾನಗತಗಳಾದ ವ್ರಣಗಳು, ನೀರು ಸುರಿಯುವ ಹುಣ್ಣುಗಳು, ಭಯಂಕರಗಳಾದ ಮತ್ತು ನೋವಿನಿಂದ ಕೂಡಿರುವ ವ್ರಣಗಳು ಕೂಡ ಮಾಯುತ್ತವೆ.

ಚಿತ್ರಕಂಶಂಖಿನೀಪಥ್ಯಾಕಂಪಿಲ್ಲಸ್ತ್ರಿವೃತಾಯುಗಂ || ೬೦ ||
ವೃದ್ಧದಾರುಶ್ಚಶಮ್ಯಾಕೋದಂತೀದಂತೀಫಲಂತಥಾ ||
ಕೋಶಾತಕೀದೇವದಾಲೀನೀಲಿನೀಗಿರಿಕರ್ಣಿಕಾ || ೬೧ ||
ಸಾತಲಾಪಿಪ್ಪಲೀಮೂಲಂವಿಡಂಗಂಕಟುಕೀತಥಾ ||
ಹೇಮಕ್ಷೀರೀಚವಿಪಚೇತ್ಕಲ್ಕೈರೇಭಿಃಪಿಚೋನ್ಮಿತೈಃ || ೬೨ ||
ಘೃತಪ್ರಸ್ಥಂಸ್ನುಹಿಕ್ಷೀರಂಷಟ್ಪಲೀತುಪಲದ್ವಯಂ ||
ಅರ್ಕಕ್ಷೀರಸ್ಯಮತಿಮಾಂಸ್ತತ್ಸಿದ್ಧಂಗುಲ್ಮಕುಷ್ಠಹೃತ್ || ೬೩ ||
ಹಂತಿಶೂಲಮುದಾವರ್ತಂಶೋಥಾಧ್ಮಾನಂಭಗಂದರಂ ||
ಶಮಯತ್ಯುದರಾಣ್ಯಷ್ಟೌನಿಪೀತಂಬಿಂದುಸಂಖ್ಯಯಾ || ೬೪ ||
ಗೋದುಗ್ಧೇನೋಷ್ಣದುಗ್ಧೇನಕಾಲತ್ಥೇನಶ್ರುತೇನವಾ ||
ಉಷ್ಣೋದಕೇನವಾಪೀತ್ವಾಬಿಂದುವೇಗೈರ್ವಿರಿಚ್ಯತೇ || ೬೫ ||
ಏತದ್ಬಿಂದುಘೃತಂನಾಮನಾಭಿಲೇಪಾದ್ವಿರಿಚ್ಯತೇ ||

ಷಡ್ಬಿಂದುಘೃತ—ಚಿತ್ರಮೂಲದ ಬೇರಿನತೊಪ್ಪೆ, ಶಂಖಪುಷ್ಪ, ಅಳಲೇಕಾಯಿ, ಸುರಾಷ್ಟ್ರದೇಶದಲ್ಲಿರುವ ಭೇದಿಮಾಡಿಸುವ ಮಣ್ಣು, ಕಪ್ಪು ಮತ್ತು ಬಿಳಿಯ ತಿಗಡೆಗಳು, ವೃದ್ಧದಾರುವೆಂಬ ಅಪರಿಚಿತ ಮೂಲಿಕೆ, ಕಕ್ಕೆಯತೊಪ್ಪೆ, ಜಾಪಾಳದಗಿಡದ ಬೇರು, ಜಾಪಾಳದ ಬೀಜ, ಕಹಿಹೀರೆ, ದೇವದಾಳಿ ಎಂಬ ಮೂಲಿಕೆ, ವಜ್ರನೀಲೀಗಿಡ, ಗಿರಿಕರ್ಣಿಕೆಯ ಬೇರು, ಒಂದು ಬಗೆಯ ಕಳ್ಳಿ,

ಹಿಪ್ಪಲಿಬೇರು, ವಾಯುವಿಡಂಗ, ಕಟುಕರೋಹಿಣಿ, ಹೇಮಕ್ಷೀರಿ ಎಂಬ ಮೂಲಿಕೆ, ಇವುಗಳನ್ನು ಒಂದೊಂದು ಕರ್ಷ ಪ್ರಮಾಣ ಸೇರಿಸಿ ಕಲ್ಕಮಾಡಿ ಒಂದು ಪ್ರಸ್ಥ ಪರಿಮಾಣ ತುಪ್ಪದೊಡನೆ ಸೇರಿಸಿ ಆರುಪಲ ಪರಿಮಾಣ ಕಳ್ಳಿಯ ಹಾಲನ್ನೂ ಎರಡು ಪಲ ಪರಿಮಾಣ ಯಕ್ಕದ ಹಾಲನ್ನೂ ಸೇರಿಸಿ ಘೃತಪಾಕ ಕ್ರಮದಲ್ಲಿ ಕಾಯಿಸಿಕೊಳ್ಳಬೇಕು. ಇದರ ಸೇವನೆಯಿಂದ ಗುಲ್ಮಗಳು, ಕುಷ್ಠರೋಗ, ಶೂಲೆ, ಹದಿಮೂರು ವಿಧವಾದ ಉದಾವರ್ತಗಳು, ಶೋಭೆ, ಹೊಟ್ಟೆಯುಬ್ಬರ, ಭಗಂದರ ವೆಂಬ ವ್ರಣ, ಎಂಟು ವಿಧವಾದ ಉದರಗಳು, ಇವುಗಳೆಲ್ಲವೂ ಗುಣವಾಗುತ್ತವೆ. ಹಸುವಿನ ಹಾಲಿನಲ್ಲಿಯಾಗಲಿ, ಒಂಟೆಯ ಹಾಲಿನಲ್ಲಿಯಾಗಲಿ, ಹುರುಳೀ ಕಾಳಿನ ಕಷಾಯದಲ್ಲಿಯಾಗಲಿ, ಅಥವಾ ಬಿಸಿನೀರಿನಲ್ಲಿಯೇ ಆಗಲಿ ಎಷ್ಟು ತೊಟ್ಟು ಗಳನ್ನು ಹಾಕಿ ಸೇವಿಸಿದರೆ ಅಷ್ಟು ಸಾರಿ ವಿರೇಚನವಾಗುತ್ತದೆ. ಇದಕ್ಕೇನೇ ಬಿಂದು ಘೃತವೆಂದು ಹೆಸರು. ಹೊಕ್ಕುಳಿಗೆ ಇದನ್ನು ಲೇಪವಮಾಡಿದರೂ ಕೂಡ ಸುಕುಮಾರ ಶರೀರಿಗಳಿಗೆ ವಿರೇಚನವಾಗುತ್ತದೆ.

ತ್ರಿಫಲಾಯಾರಸಪ್ರಸ್ಥಂಪ್ರಸ್ಥಂವಾಸಾರಸೋದ್ಭವಂ ॥ ೬೬ ॥
ಭೃಂಗರಾಜರಸಪ್ರಸ್ಥಂಪ್ರಸ್ಥಮಾಜಂಪಯಸ್ಸ್ಮೃತಂ ॥
ದತ್ವಾತತ್ರಘೃತಪ್ರಸ್ಥಂಕಲ್ಕೈಃಕರ್ಷಮಿತೈಃಪೃಥಕ್ ॥ ೬೭ ॥
ತ್ರಿಫಲಾಪಿಪ್ಪಲೀದ್ರಾಕ್ಷಾಚಂದನಂಸೈಂಧವಂಬಲಾ ॥
ಕಾಕೋಲೀಕ್ಷೀರಕಾಕೋಲೀಮೇದಾಮರಿಚನಾಗರಂ ॥ ೬೮ ॥
ಶರ್ಕರಾಪುಂಡರೀಕಂಚಕಮಲಾಚಪುನರ್ನವಾ ॥
ನಿಶಾಯುಗ್ಮಂಚಮಧುಕಂಸರ್ವೈರೇಭಿರ್ವಿಪಾಚಯೇತ್ ॥ ೬೯ ॥
ನಕ್ತಾಂಧ್ಯಂನಕುಲಾಂಧ್ಯಂಚಕಂಡೂಃಪಿಲ್ಲಂತಥೈವಚ ॥
ನೇತ್ರಸ್ರಾವಂಚಪಟಲಂತಿಮಿರಂಕಾಚಕಂಜಯೇತ್ ॥ ೭೦ ॥
ಅನ್ಯೇಪಿಪ್ರಶಮಂಯಾಂತಿನೇತ್ರರೋಗಾಸ್ಸುದಾರುಣಾಃ ॥
ತ್ರೈಫಲಂಘೃತಮೇತದ್ಧಿಪಾನೇನಸ್ಯಾದಿಷೂಚಿತಂ ॥ ೭೧ ॥

ತ್ರಿಫಲಾಘೃತವನ್ನು ಹೇಳುತ್ತಾನೆ—ತ್ರಿಫಲಾಕಷಾಯ ಅರವತ್ತುನಾಲ್ಕು ತೊಲ, ಆಡುಸೋಗೆಯ ಸೊಪ್ಪಿನ ರಸ ಅರವತ್ತನಾಲ್ಕು ತೊಲ, ಗರುಗದ ಸೊಪ್ಪಿನ ರಸವೂ ಅರವತ್ತನಾಲ್ಕು ತೊಲ, ಆಡಿನಹಾಲು ಅರವತ್ತನಾಲ್ಕು ತೊಲ ಇವುಗಳನ್ನೆಲ್ಲಾ ಕೂಡಿಸಿ ಇವುಗಳ ಜೊತೆಗೆ ಒಂದು ಪ್ರಸ್ಥವೆಂದರೆ ಅರವತ್ತು ನಾಲ್ಕು ತೊಲ ತುಪ್ಪವನ್ನೂ ಸೇರಿಸಿ ಪಾಕಮಾಡುವುದು, ಪಾಕಮಾಡುವಾಗ್ಗೆ ತ್ರಿಫಲ (ಅಳಲೆ, ತಾರೆ, ನೆಲ್ಲಿ) ಹಿಪ್ಪಲಿ, ದ್ರಾಕ್ಷಿ, ಶ್ರೀಗಂಧ, ಸೈಂಧವಲವಣ, ಕಳ್ಳಂಗಡ್ಲೆ, ಕಾಕೋಲಿ, ಕ್ಷೀರಕಾಕೋಲಿ, ಮೇದೆ, ಮೆಣಸು, ಶುಂಠಿ, ಸಕ್ಕರೆ,

ಬಿಳೀತಾವರೇ ಹುವ್ವು, ಕೆಂಪುತಾವರೆ, ಕೊಮ್ಮೆಯಬೇರು, ಅರಿಸಿನ, ಮರದರಿಸಿನ, ಯಷ್ಟಿಮಧು, ಈ ಹಿಂದೆ ಹೇಳಿದ ಪ್ರತಿಯೊಂದು ಪದಾರ್ಥಗಳನ್ನೂ ಎರಡೆರಡು ತೊಲ ಸಂಗ್ರಹಿಸಿ ಕಲ್ಕಕ್ರಮದಿಂದ ಕಲ್ಕ ಮಾಡಿಕೊಂಡು ಮೇಲಿನ ದ್ರವದ್ರವ್ಯದೊಡನೆ ಬೆರಸಿ ಘೃತಪಾಕ ಕ್ರಮದಿಂದ ಪಕ್ವಮಾಡಿ ಇರಿಸಿಕೊಳ್ಳುವುದು, ಇದನ್ನು ಪ್ರಮಾಣವರಿತು ಸೇವಿಸುತ್ತ ಬಂದರೆ ನಕ್ತಾಂಧ್ಯ (ಹಗಲು ಕಣ್ಣು ಮಂಜಾಗುವುದು) ನಕುಲಾಂಧ್ಯವೆಂಬ ಒಂದು ಬಗೆಯ ಕಣ್ಣಿನ ಮಂಜು, ಕಣ್ಣಿನ ನವೆ, ಕಣ್ಣಿನಲ್ಲಿ ನೀರು ಸುರಿಯುವುದು, ಪಿಸರು ಕಟ್ಟಿಕೊಳ್ಳುವುದು, ಕಣ್ಣಿನಲ್ಲಿ ಪರೆ ಸುತ್ತಿಕೊಂಡಂತೆ ಕಾಣುವುದು, ಕಣ್ಣಿನಮಬ್ಬು, ಕಣ್ಣಿನಲ್ಲಿ ಗಾಜಿನಂತಹ ಗುಳ್ಳೆ ಬರುವುದು, ಇವುಗಳೆಲ್ಲಾ ನಿವಾರಣೆಯಾಗುತ್ತವೆ, ಅಲ್ಲದೆ ಭಯಂಕರಗಳಾವ ಇನ್ನೂ ನಾನಾ ವಿಧಗಳಾದ ಕಣ್ಣಿನ ರೋಗಗಳೆಲ್ಲವೂ ಶಮನ ಹೊಂದುತ್ತವೆ, ಇದಕ್ಕೆ ತ್ರಿಫಲಾಘೃತವೆಂದು ಹೆಸರು, ಇದು ಹೊಟ್ಟೆಗೆ ಸೇವಿಸುವುದಕ್ಕೂ ನಸ್ಯದಂತೆ ರೋಗಾನುಗುಣವಾಗಿ ಮೂಗಿಗೆ ಏರಿಸುವುದಕ್ಕೂ ಉಪಯೋಗವಾಗುತ್ತದೆ.

ದ್ವೇಹರಿದ್ರೇಸ್ಥಿರಾಮೂರ್ವಾಸಾರಿಬಾಚಂದನದ್ವಯಂ ॥
ಮಧುಪರ್ಣೀಚಮಧುಕಪದ್ಮಕೇಶರಪದ್ಮಕಂ ॥ ೭೨ ॥
ಉತ್ಪಲೋಶೀರಮೇದಾಭಿಸ್ತ್ರಿಫಲಾಪಂಚವಲ್ಕಲೈಃ ॥
ಕಲ್ಕೈಃಕರ್ಷಮಿತೈರೇತೈಃಘೃತಪ್ರಸ್ಥಂವಿಪಾಚಯೇತ್ ॥ ೭೩ ॥
ವಿಸರ್ಪಲೂತಾವಿಸ್ಫೋಟವಿಷಕೀಟವ್ರಣಾಪಹಂ ॥
ಗೌರಾದ್ಯಮಿತಿವಿಖ್ಯಾತಂಸರ್ವವಿಷಹರಂವರಂ ॥ ೭೪ ॥

ಗೌರಾದಿಘೃತವನ್ನು ನಿರ್ಮಿಸುವ ಕ್ರಮವೆಂತೆಂದರೆ—ಅರಿಸಿನ, ಮರಅರಿಸಿನ, ಒಂದೆಲೆಹೊನ್ನೆ, ಕುರಟಿಗೆ, ನೊಗದೆಯಬೇರು, ಶ್ರೀಗಂಧ, ರಕ್ತಚಂದನ ಮಧುಪರ್ಣಿ ಎಂದರೆ ಯಷ್ಟಿಮಧುವಿನ ಜಾತಿಯಲ್ಲಿಯೇ ಒಂದು ಬಗೆಯ ಭೇದ, ಯಷ್ಟಿಮಧು, ತಾವರೆಯ ಕುಸುಮ, ಪದ್ಮಕಾಷ್ಠ, ನೀಲಕಮಲ, ಲಾಮಂಚ, ಮೇದ ತ್ರಿಫಲ, ಪಂಚವಲ್ಕಲವೆಂದರೆ ಆಲ, ಅತ್ತಿ, ಅರಳಿ, ಪ್ಲಕ್ಷವೆಂದರೆ ಬಸರೀಗಿಡವೆನ್ನುತ್ತಾರೆ, ವೇತಸವೆಂದರೆ ನೀರಿನ ಹತ್ತಿರವೇ ಬೆಳೆಯುವ ಒಂದು ಬಗೆಯ ಮರ, ಇವೈದರ ಚಕ್ಕೆಗೆ ಪಂಚವಲ್ಕಲವೆಂದು ವ್ಯವಹಾರ. ಹಿಂದೆ ಹೇಳಿದ ಮೂಲಿಕೆಗಳು ಪ್ರತಿಯೊಂದೂ ಒಂದೊಂದು ಕರ್ಷ ಪ್ರಮಾಣ ಸಂಗ್ರಹಿಸಿ ಕಲ್ಕಮಾಡಿಕೊಂಡು ಅದರೊಂದಿಗೆ ಒಂದು ಪ್ರಸ್ಥ (ಅರವತ್ತನಾಲ್ಕು ತೊಲ) ತುಪ್ಪವನ್ನು ಸೇರಿಸಿ ಘೃತಪಾಕ ಕ್ರಮದಿಂದ ಪಾಕಮಾಡಬೇಕು, ಈ ಘೃತವನ್ನು ಮೇಲೆ ತೊಡೆಯುವುದರಿಂದ ವಿಸರ್ಪ, ಲೂತಿ, ಗುಳ್ಳೆಗಳು, ವಿಷಕ್ರಿಮಿಗಳಿಂದ ಉಂಟಾಗುವ ವ್ರಣಗಳು, ಇವುಗಳನ್ನು ಗುಣಪಡಿಸುವುದಲ್ಲದೆ ವಿಷದೋಷಗಳನ್ನೆಲ್ಲಾ ಕಡಮೆಮಾಡುತ್ತದೆ.

ಬಲಾಮಧುಕರಾಸ್ನಾಭಿರ್ದಶಮೂಲಫಲತ್ರಿಕೈಃ ||
ಪೃಥಕ್ ದ್ವಿಪಲಿಕೈರೇಭಿರ್ದ್ರೋಣನೀರೇಣಪಾಚಯೇತ್ || ೭೫ ||
ಮಯೂರಂಪಕ್ಷಪಿತ್ತಾನ್ತ್ರಯಕೃತ್ಪಾದಾಸ್ಯವರ್ಜಿತಂ ||
ಪಾದಶೇಷಂಶೃತಂನೀತ್ವಾಕ್ಷೀರಂದತ್ವಾಚತತ್ಸಮಂ || ೭೬ ||
ಘೃತಪ್ರಸ್ಥಂಪಚೇತ್ಸಮ್ಯಗ್ಜೀವನೀಯೈಃಪಿಚೂನ್ಮಿತೈಃ ||
ತತ್ಸಿದ್ಧಂಶಿರಸಃಪೀಡಾಂಮನ್ಯಾಪೃಷ್ಠಗ್ರಹಂತಥಾ || ೭೭ ||
ಅರ್ದಿತಂಕರ್ಣನಾಸಾಕ್ಷಜಿಹ್ವಾಗಲರುಜೋಜಯೇತ್ ||
ಪಾನೇನಸ್ಯೇತಥಾಭ್ಯಂಗೇಕರ್ಣಪೂರೇಷುಯುಜ್ಯತೇ || ೭೮ ||
ಹೇಮಂತಕಾಲಶಿಶಿರವಸಂತೇಷುಚಶಸ್ಯತೇ ||

ಮಯೂರಾದಿಘೃತ—ಕಳ್ಳಂಗಡ್ಲೆ, ಜ್ಯೇಷ್ಠಮಧು, ಸಣ್ಣರಾಸ್ನೆ, ದಶಮೂಲವೆಂದರೆ ಬಿಲ್ವ, ನರುವಲ, ಹೆಮ್ಮರ, ಶಿವನೆಮರ, ಪಾದರಿ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಿಲು ಈ ಹತ್ತು, ತ್ರಿಫಲ, ಇವುಗಳು ಪ್ರತ್ಯೇಕ ಎರಡೆರಡು ಪಲದಷ್ಟನ್ನು ಸಂಗ್ರಹಿಸಿ ಒಂದು ದ್ರೋಣ ಪರಿಮಿತವಾದ ಜಲದಲ್ಲಿ ಕಷಾಯವಿಡಬೇಕು. ಒಂದು ನವಿಲನ್ನು ಹಿಡಿದು ತಂದು ಅದರ ರೆಕ್ಕೆಯನ್ನು ಕಿತ್ತುಹಾಕಿ ಹೊಟ್ಟೆಯನ್ನು ಶೀಳಿ ಅದರಲ್ಲಿ ಗೋರೋಚನದಂತಿರುವ ಮಯೂರ ಪಿತ್ತವನ್ನೂ, ಕರುಳನ್ನೂ, ಯಕೃತ್ ಎಂಬ ಅವಯವವನ್ನೂ, ಕಾಲು, ತಲೆ ಇವುಗಳನ್ನೂ ತೆಗೆದು ಹಾಕಿ ಆ ಕಷಾಯದೊಡನೆ ಸೇರಿಸಿ ಒನ್ನಾಗಿ ಬೇಯಿಸಿ ನಾಲ್ಕರಲ್ಲೊಂದು ಭಾಗ ಕಷಾಯವನ್ನಿಳಿಸಿಕೊಂಡು ಕಷಾಯದ ನಾಲ್ಕರಷ್ಟು ಹಾಲನ್ನೂ ಸೇರಿಸಿ ಒಂದು ಪ್ರಸ್ಥಪರಿಮಾಣ ತುಪ್ಪವನ್ನೂ ಸೇರಿಸಿ ಜೀವನೀಯಗಣದಲ್ಲಿ ಹೇಳಿರುವ ಪದಾರ್ಥಗಳನ್ನು ಪ್ರತ್ಯೇಕ ಒಂದೊಂದು ಕರ್ಷದಷ್ಟು ಸೇರಿಸಿ ಕಲ್ಕಮಾಡಿ ಆ ಕಲ್ಕವನ್ನು ಇದರೊಂದಿಗೆ ಕೂಡಿಸಿ ಘೃತ ಪಾಕ ಕ್ರಮದಲ್ಲಿ ಪಕ್ವಮಾಡಿ ಇಳಿಸಿಕೊಳ್ಳತಕ್ಕದ್ದು. ಈ ಘೃತಕ್ಕೆ ಮಯೂರಾದಿ ಘೃತವೆಂದು ಹೆಸರು. ಇದನ್ನು ಹೊಟ್ಟೆಗೆ ತೆಗದುಕೊಳ್ಳಬಹುದು, ನಸ್ಯದಂತೆ ಮೂಗಿಗೆ ನೇದಬಹುದು, ಅಭ್ಯಂಜನ ಮಾಡಬಹುದು, ಕರ್ಣರೋಗಗಳಲ್ಲಿ ಕಿವಿಗೆ ಬಿಡಬಹುದು, ಇದರಿಂದ ಅರ್ದಿತವೆಂಬ ವಾತರೋಗ, ಕರ್ಣವ್ಯಾಧಿಗಳು, ಮೂಗಿಗೆ ಸಂಭವಿಸುವ ವ್ಯಾಧಿಗಳು. ನೇತ್ರವ್ಯಾಧಿಗಳು, ನಾಲಿಗೆಗೆ ಸಂಭವಿಸುವ ವ್ಯಾಧಿಗಳು, ಗಂಟಲಿನ ವ್ಯಾಧಿಗಳು ಇವುಗಳೆಲ್ಲಾ ಗುಣಹೊಂದುತ್ತವೆ. ಕಾಲ ವ್ಯತ್ಯಾಸವಿಲ್ಲದೆ ಹೇಮಂತ, ಶಿಶಿರ, ವಸಂತ, ಮೊದಲಾಗಿ ಎಲ್ಲಾ ಕಾಲಗಳಲ್ಲಿಯೂ ಉಪಯೋಗಿಸಬಹುದು.

ತ್ರಿಫಲಾಮಧುಕಂಕುಷ್ಠಂದ್ವೇನಿಶೇಕಟುರೋಹಿಣೀ ॥ ೭೯ ॥
ವಿಡಂಗಂಪಿಪ್ಪಲೀಮುಸ್ತಂವಿಶಾಲಾಕಟ್ಫಲಂವಚಾ ॥
ದ್ವೇಮೇದೇದ್ವೇಚಕಾಕೋಲ್ಯೌಸಾರಿಬೇದ್ವೇಪ್ರಿಯಂಗುಕಾ ॥ ೮೦ ॥
ಶತಪುಷ್ಪಾಹಿಂಗುರಾಸ್ನಾಚಂದನಂರಕ್ತಚಂದನಂ ॥
ಜಾತೀಪುಷ್ಪಂತುಗಾಕ್ಷೀರೀಕಮಲಂಶರ್ಕರಾತಥಾ ॥ ೮೧ ॥
ಅಜಮೋದಾಚದಂತೀಚಕಲ್ಕೈರೇತೈಶ್ಚ ಕಾರ್ಷಿಕೈಃ ॥
ಜೀವದ್ವತ್ಸೈಕವರ್ಣಾಯಾಘೃತಪ್ರಸ್ಥಂಚಗೋಃಕ್ಷಿಪೇತ್ ॥ ೮೨ ॥
ಚತುರ್ಗುಣೇನಪಯಸಾಪಚೇದಾರಣ್ಯಗೋಮಯೈಃ ॥
ಸುತಿಥೌಪುಷ್ಯನಕ್ಷತ್ರೇಮೃದ್ಭಾಂಡೇತಾಮ್ರಜೇತಥಾ ॥ ೮೩ ॥
ತತಃಪಿಬೇಚ್ಛುಭದಿನೇನಾರೀವಾಪುರುಷೋಥವಾ ॥
ಏತತ್ಸರ್ಪಿರ್ನರಃಪೀತ್ವಾಸ್ತ್ರೀಷುನಿತ್ಯಂವೃಷಾಯತೇ ॥ ೮೪ ॥
ಪುತ್ರಾನುತ್ಪಾದಯೇದ್ಧೀಮಾನ್ವಂಧ್ಯಾಪಿಲಭತೇಸುತಂ ॥
ಅಲ್ಪಾಯುಷಂಯೋಜನಯೇದ್ಯಾಚಸೂತಾಪುನಸ್ಥಿತಾ ॥ ೮೫ ॥
ಪುತ್ರಂಪ್ರಾಪ್ನೋತಿಸಾನಾರೀಬುದ್ಧಿಮಂತಂಶತಾಯುಷಂ ॥
ಏತತ್ಫಲಘೃತಂನಾಮಭಾರದ್ವಾಜೇನಭಾಷಿತಂ ॥ ೮೬ ॥
ಅನುಕ್ತಂಲಕ್ಷ್ಮಣಾಮೂಲಂಕ್ಷಿಪೇತ್ತತ್ರಚಿಕಿತ್ಸಕಃ ॥

ಫಲಘೃತ—ತ್ರಿಫಲ, ಜ್ಯೇಷ್ಠಮಧು, ಚಂಗಲಕೋಷ್ಟ, ಅರಿಸಿನ, ಮರದರಿಸಿನ, ಕಟುಕರೋಹಿಣಿ, ವಾಯುವಿಡಂಗ, ಹಿಪ್ಪಲಿ, ಭದ್ರಮುಸ್ತೆ, ಕಾಡುಕವಡೇಕಾಯಿ, ಕಾಯಿಫಲಚಕ್ಕೆ, ಬಜೆ, ಮೇದಾ, ಮಹಾಮೇದಾ, ಕಾಕೋಲಿ, ಕ್ಷೀರಕಾಕೋಲಿ, ಬಿಳಿನೊಗರಬೇರು ಮತ್ತು ಕಪ್ಪುನೊಗರಬೇರು, ಪ್ರಿಯಂಗು ಎಂಬ ಸ್ವನಾಮ ಪ್ರಸಿದ್ಧವಾದ ಮೂಲಿಕೆ, ಸದಾಪ, ಹಿಂಗು, ಸಣ್ಣರಾಸ್ನ, ಶ್ರೀಗಂಧ, ರಕ್ತಚಂದನ, ಜಾಜಿಯಹುವ್ವು, ಬಿದರುಪ್ಪು, ಕಮಲದ ಹುವ್ವು, ಸಕ್ಕರೆ, ವೋಮಿನಕಾಳು, ಜೇಪಾಳದ ಬೀಜ, ಈ ಪ್ರತಿಯೊಂದು ಪದಾರ್ಥವೂ ಒಂದೊಂದು ಕರ್ಷ (ಎರಡು ತೊಲ)ದಷ್ಟು ಸೇರಿಸಿ ಕಲ್ಕಮಾಡಿಕೊಂಡು ಅದರ ಜೊತೆಗೆ ಒಂದೇ ಬಣ್ಣದ ಎಂದರೆ ಶರೀರದ ಯಾವ ಭಾಗದಲ್ಲಿ ಬೇರೆ ಯಾವ ಬಣ್ಣದ ಗುರ್ತೂ ಇಲ್ಲದೆ ಶರೀರವೆಲ್ಲಾ ಒಂದೇ ಬಣ್ಣವಾಗಿರುವ ಮತ್ತು ಕರು ಬದುಕಿರುವ ಹಸುವಿನ ಬೆಣ್ಣೆಯನ್ನೇ ಸಂಗ್ರಹಿಸಿ ತುಪ್ಪವನ್ನು ಮಾಡಿಕೊಂಡು ಅಂತಹ ತುಪ್ಪ ಒಂದು ಪ್ರಸ್ಥದಷ್ಟನ್ನು ಸೇರಿಸಿ, ಘೃತಪಾಕವಾಗುವುದಕ್ಕಾಗಿ ನಾಲ್ಕರಷ್ಟು ನೀರನ್ನು ಸೇರಿಸಿ, ಒಳ್ಳೆಯ ದಿವಸದಲ್ಲಿ ಪುಷ್ಯನಕ್ಷತ್ರವು ಇರುವಾಗ್ಯೆ ಮಣ್ಣಿನ ಪಾತ್ರೆಯಲ್ಲಿ ಆಗಲಿ ತಾಮ್ರದ ಪಾತ್ರೆಯಲ್ಲಿ ಆಗಲಿ ಕಾಡುಬೆರಣಿಯಿಂದ ಘೃತ ಪಾಕ ಕ್ರಮದಲ್ಲಿ ಪಕ್ವಮಾಡಬೇಕು, ಇಲ್ಲಿಗೆ ಘೃತವು ಸಿದ್ಧವಾದ ಹಾಗಾಯಿತು.

ಜ್ಯೋತಿಷಶಾಸ್ತ್ರದಲ್ಲಿ ಹೇಳಲ್ಪಟ್ಟ ಶುಭವಾದ ದಿವಸದಲ್ಲಿ ಈ ಘೃತವನ್ನು ಹೆಂಗಸರಾಗಲಿ ಗಂಡಸರಾಗಲಿ ಸೇವಿಸುವುದಕ್ಕೆ ಪ್ರಾರಂಭಿಸಬೇಕು. ಈ ಘೃತವನ್ನು ಸೇವನೆಮಾಡೋಣದರಿಂದ ಪುರುಷರಿಗೆ ವೀರ್ಯ ವೃದ್ಧಿಯಾಗಿ ಪ್ರಜೋತ್ಪಾದನ ಸಮರ್ಥರಾಗುತ್ತಾರೆ. ಬಂಜೆಯರಾದ ಸ್ತ್ರೀಯರಿಗೆ ಬಂಜತನ ನಿವಾರಣೆಯಾಗುವುದಲ್ಲದೆ ಮಕ್ಕಳಾಗುವುದಕ್ಕೆ ಪ್ರಾರಂಭವಾಗುತ್ತದೆ ಅಲ್ಪಾಯುಷಿಗಳಾದ ಮಕ್ಕಳನ್ನು ಹೆರುವವರು ಈ ಘೃತವನ್ನು ತೆಗದುಕೊಳ್ಳಲಾರಂಭಿಸಿದಲ್ಲಿ ಈ ಘೃತದ ಗುಣಪ್ರಭಾವಗಳಿಂದ ಮಕ್ಕಳು ದೀರ್ಘಾಯುಗಳಾಗುತ್ತಾರೆ. ಒಂದಾವರ್ತಿ ಮಗುವನ್ನು ಹೆತ್ತು ಕಾರಣವಿಲ್ಲದ ಪುನಃ ಗರ್ಭಿಣಿಯರಾಗುವ ಸ್ವಭಾವವೇ ತಪ್ಪಿಹೋಗಿರುವ ಹೆಂಗಸರು ಕೂಡ ಇದರಿಂದ ಗರ್ಭವತಿಯರಾಗುತ್ತಾರೆ. ಈ ಫಲಘೃತವೆಂಬ ಘೃತದಲ್ಲಿನ ಈ ಇಷ್ಟು ಗುಣಗಳನ್ನೂ ಭಾರದ್ವಾಜರೆಂಬ ಮಹಾತ್ಮರು ಕಂಡುಕೊಂಡು ಪ್ರಕಾಶಿಸಿದ್ದಾರೆ. ಇದನ್ನು ನಿರ್ಮಿಸುವ ಕ್ರಮದಲ್ಲಿ ಹೇಳದೆ ಬಿಟ್ಟುಹೋಗಿರುವ ಲಕ್ಷ್ಮಣಾ ಎಂಬ ಬಿಳಿಯ ನೆಲಗುಳ್ಳದ ಬೇರನ್ನೂ ಮರೆಯದೆ ವೈದ್ಯರೆಲ್ಲರೂ ಸೇರಿಸಬೇಕು.

ತ್ರಿಫಲಾಂದ್ವೇಸಹಚರೇಗುಡೂಚೀಂಸಪುನರ್ನವಾಂ ॥
ಶುಕನಾಸಾಂಹರಿದ್ರೇದ್ವೇರಾಸ್ನಾಂಮೇದಾಂಶತಾವರೀಂ ॥ ೮೭ ॥
ಕಲ್ಕೀಕೃತ್ಯಘೃತಪ್ರಸ್ಥೇಪಚೇತ್‌ಕ್ಷೀರೇಚತುರ್ಗುಣೇ ॥
ತತ್ಸಿದ್ಧಂಪಾಯಯೇನ್ನಾರೀಂಯೋನಿಶೂಲನಿಪೀಡಿತಾಂ ॥ ೮೮ ॥
ಪೀಡಿತಾಚಲಿತಾಯಾಚನಿಸ್ಸೃತಾವಿವೃತಾಚಯಾ ॥
ಪಿತ್ತಯೋನಿಶ್ಚವಿಭ್ರಾಂತಾಷಂಡಯೋನಿಶ್ಚಯಾಸ್ಮೃತಾ ॥ ೮೯ ॥
ಪ್ರಪದ್ಯಂತೇಹಿತಾಃಸ್ವಾನಂಗರ್ಭಂಗೃಹ್ಣಂತಿಚಾಸಕೃತ್ ॥
ಏತತ್ಫಲಘೃತಂನಾಮಯೋನಿದೋಷಹರಂಪರಂ ॥ ೯೦ ॥

ಇದೊಂದು ವಿಧವಾದ ಫಲಘೃತ—ತ್ರಿಫಲ (ಅಳಲೆ, ತಾರೆ, ನೆಲ್ಲಿ) ಸಹಚರದ್ವಯವೆಂದರೆ ಎರಡು ಬಗೆಯ ಗೋರಂಟಿಯ ಗಿಡ, ಅಮೃತಬಳ್ಳಿ, ಕೊಮ್ಮೆಯ ಬೇರು, ಶಿವನೆಯ ತೊಪ್ಪೆ, ಅರಿಸಿನ, ಮರದಅರಿಸಿನ, ಸಣ್ಣರಾಸ್ನ, ಮೇದ, ಹಲವು ಮಕ್ಕಳ ಬೇರು, ಇಷ್ಟು ಮೂಲಿಕೆಗಳನ್ನು ಸಂಗ್ರಹಿಸಿಕೊಂಡು ಕಲ್ಕಮಾಡಿಕೊಂಡು ಅದರ ಜೊತೆಗೆ ಒಂದು ಪ್ರಸ್ಥ ತುಪ್ಪವನ್ನು ಸೇರಿಸಿ ಚತುರ್ಗುಣಕ್ಷೀರವನ್ನೂ ಸೇರಿಸಿ ಘೃತಪಾಕ ಕ್ರಮದಲ್ಲಿ ಪಕ್ವಮಾಡಿಕೊಳ್ಳಬೇಕು. ಈ ರೀತಿಯಾಗಿ ಪಕ್ವಮಾಡಿಕೊಂಡ ಘೃತವು ಸಮಸ್ತ ಯೋನಿದೋಷಗಳನ್ನೂ ಅಂದರೆ ಯೋನಿಶೂಲ, ಗರ್ಭಗ್ರಹಣಮಾಡದಿರೋಣ, ಷಂಡತ್ವ ಇವುಗಳನ್ನೆಲ್ಲಾ ನಿವಾರಣಮಾಡುವುದಲ್ಲದೆ ಗರ್ಭಿಣಿಯರಾಗುವಂತೆಯೂ ಮಾಡಿಸುತ್ತದೆ, ಮುಖ್ಯವಾಗಿ ಸ್ತ್ರೀಯರ ಯೋನಿರೋಗಗಳಲ್ಲಿ ಈ ಘೃತವು ಅತಿ ಪ್ರಶಸ್ತವಾದದ್ದು.

ವೃಷನಿಂಬಾಮೃತಾವ್ಯಾಘ್ರೀಪಟೋಲಾನಾಂಶೃತೇನಚ ॥
ಕಲ್ಕೇನಪಕ್ವಂಸರ್ಪಿಸ್ತುನಿಹನ್ಯಾದ್ವಿಷಮಜ್ವರಾನ್ ॥ ೯೦ ॥
ಪಾಂಡುಂಕುಷ್ಠಂವಿಸರ್ಪಂಚಕೃಮೀನರ್ಶಾಂಸಿನಾಶಯೇತ್ ॥

ಪಂಚತಿಕ್ತಘೃತ—ಆಡುಸೋಗೆಸೊಪ್ಪು, ಬೇವಿನಪಟ್ಟೆ, ಅಮೃತಬಳ್ಳಿ, ನೆಲಗುಳ್ಳ, ಕೈಪಡವಲ, ಇವುಗಳ ಕಷಾಯ ಮತ್ತು ಇವುಗಳ ಕಲ್ಕವನ್ನೇ ಮಾಡಿಕೊಂಡು ಯುಕ್ತಪ್ರಮಾಣದಲ್ಲಿ ತುಪ್ಪವನ್ನು ಸೇರಿಸಿ ಘೃತಪಾಕ ಕ್ರಮದಲ್ಲಿ ಪಾಕಮಾಡಿಕೊಂಡು ಸೇವಿಸೋಣದರಿಂದ ವಿಷಮ ಜ್ವರಗಳು, ಪಾಂಡುರೋಗ, ಕುಷ್ಠರೋಗ, ವಿಸರ್ಪ, ಕೃಮಿರೋಗಗಳು, ಮೂಲವ್ಯಾಧಿ ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

ಇಲ್ಲಿಗೆ ಘೃತಪ್ರಕರಣ ಸಂಪೂರ್ಣ.

---

## ತೈಲಪ್ರಕರಣ.

ಲಾಕ್ಷಾಢಕಂಕ್ವಾಥಯಿತ್ವಾಜಲಸ್ಯಚತುರಾಢಕೈಃ ॥ ॥ ೯೨ ॥
ಚತುರ್ಥಾಂಶಂಶೃತಂನೀತ್ವಾತೈಲಪ್ರಸ್ಥೇವಿನಿಕ್ಷಿಪೇತ್ ॥
ಮಸ್ತ್ವಾಢಕಂಚಗೋದಧ್ನಸ್ತತ್ರೈವವಿನಿಯೋಜಯೇತ್ ॥ ೯೩ ॥
ಶತಪುಷ್ಪಾಪುಶ್ವಗಂಧಾಂಹರಿದ್ರಾಂದೇವದಾರುಚ ॥
ಕಟುಕೀರೇಣುಕಾಂಮೂರ್ವಾಂಕುಷ್ಠಂಚಮಧುಯಷ್ಟಿಕಾಂ ॥ ೯೪ ॥
ಚಂದನಂಮುಸ್ತಕಂರಾಸ್ನಾಂಪೃಥಕ್ಕರ್ಷಪ್ರಮಾಣತಃ ॥
ಚೂರ್ಣಯೇತ್ತತ್ರನಿಕ್ಷಿಪ್ಯಸಾಧಯೇನ್ಮೃದುವಹ್ನಿನಾ ॥ ೯೫ ॥
ಅಸ್ಯಾಭ್ಯಂಗಾತ್ಪ್ರಶಾಮ್ಯಂತಿಸರ್ವೇಪಿವಿಷಮಜ್ವರಾಃ ॥
ಕಾಸಶ್ವಾಸಪ್ರತಿಶ್ಯಾಯತ್ರಿಕಪೃಷ್ಠಗ್ರಹಾಸ್ತಥಾ ॥ ೯೬ ॥
ವಾತಂಪಿತ್ತಮಪಸ್ಮಾರಮುನ್ಮಾದಂಯಕ್ಷರಾಕ್ಷಸಾನ್ ॥
ಕಂಡೂಂಶೂಲಂಚದೌರ್ಗಂಧ್ಯಂಗಾತ್ರಾಣಾಂಸ್ಫುರಣಂ
ಜಯೇತ್ ॥ ೯೭ ॥
ಪುಷ್ಪಗರ್ಭಾಭವೇದಸ್ಯಗರ್ಭಿಣ್ಯಾಭ್ಯಂಗತೋಭೃಶಂ ॥

ಲಾಕ್ಷಾದಿತೈಲ—ಒಳ್ಳೆಯ ಅವಲಕ್ಕಿ ಅರಗು ಇನ್ನೂರ ಐವತ್ತಾರು ತೊಲದಷ್ಟನ್ನು ತಂದು ಅದರ ನಾಲ್ಕರಷ್ಟು ನೀರನ್ನು ಹಾಕಿ ಕಷಾಯಮಾಡಿ ಬತ್ತುವವರಿಗೂ ಕಾಯಿಸಿ ನಾಲ್ಕರಲ್ಲಿ ಒಂದು ಭಾಗಕ್ಕೆ ಇಳಿಸಿಕೊಂಡು ಅದರ ಜೊತೆಗೆ ಅರವತ್ತನಾಲ್ಕು ತೊಲ ಎಳ್ಳೆಣ್ಣೆಯನ್ನು ಸೇರಿಸಿ ಇನ್ನೂರ ಐವತ್ತಾರು ತೊಲ

ಹಸುವಿನ ಮೊಸರಿನ ಮೇಲಿನ ತಿಳಿನೀರನ್ನೇ ಸೇರಿಸಿ ಕಾಯಿಸುವುದಕ್ಕಿಡುವುದು. ಸದಾಪ, ಅಶ್ವಗಂಧಿ, ಅರಿಸಿನ, ದೇವದಾರು, ಕಟುಕರೋಹಿಣಿ, ರೇಣುಕಬೀಜ, ಕುರುಟಿಗ, ಚಂಗಲಕೋಷ್ಠ, ಜ್ಯೇಷ್ಠಮಧು, ಶ್ರೀಗಂಧ, ಭದ್ರಮುಸ್ತೆ, ಸಣ್ಣ ರಾಸ್ಮೆ ಇವುಗಳು ಪ್ರತ್ಯೇಕ ಎರಡೆರಡು ತೊಲದಷ್ಟು ಸಂಗ್ರಹಿಸಿ ಚೂರ್ಣಮಾಡಿ ಆ ಚೂರ್ಣವನ್ನು ಕಾಯುತ್ತಿರುವುದರಲ್ಲಿ ಸುರಿದು ಮೃದ್ವಗ್ನಿಯಿಂದ ಕಾಯಿಸಿ ತೈಲಪಾಕ ಕ್ರಮದಿಂದ ಪಕ್ವಮಾಡಿ ಇರಿಸಿಕೊಳ್ಳುವುದು ಈ ತೈಲವನ್ನು ಹಚ್ಚಿ ಕೊಂಡು ಸ್ನಾನಮಾಡೋಣದರಿಂದ ಸಮಸ್ತ ವಿಧಗಳಾದ ವಿಷಮಜ್ವರಗಳು, ಕೆಮ್ಮು, ಉಬ್ಬಸ, ನೆಗಡಿ, ಬೆನ್ನುಹಿಡಿಯುವುದು, ಪೃಷ್ಠಭಾಗ ಹಿಡಿದುಕೊಳ್ಳು ವುದು, ಸೊಂಟ ಹಿಡಿದುಕೊಳ್ಳುವುದು, ವಾತವ್ಯಾಧಿಗಳು, ಪಿತ್ತಸಮ್ಮಂಧವಾದ ವ್ಯಾಧಿಗಳು, ಅಪಸ್ಮಾರ, ಹುಚ್ಚು, ಯಕ್ಷಗ್ರಹಾದಿಗ್ರಹಪೀಡೆ, ಮೈನವೆ, ಶೂಲೆ, ಮೈಯ್ಯೆಲ್ಲಾ ದುರ್ವಾಸನೆ ಬರುವುದು, ಆಗಾಗ್ಯೆ ಮೈಆದುರುವುದು ಇವುಗಳೆಲ್ಲಾ ನಿವಾರಣವಾಗುತ್ತವೆ, ಗರ್ಭಿಣಿಯರಾದವರು ಈ ತೈಲವನ್ನು ಸವರಿಕೊಂಡು ಅಭ್ಯಂಗಮಾಡುತ್ತ ಬಂದರೆ ಗರ್ಭವು ಪುಷ್ಟಿಯಾಗಿ ಬೆಳೆಯುತ್ತಹೋಗುತ್ತದೆ. 'ತ್ರಿಕಪೃಷ್ಠಗ್ರಹಾಃ' ಎಂದರ ತೃತೀಯಕಜ್ವರ ಭೇದವಾಗಿ ಕೆಲವರಅಭಿಪ್ರಾಯ.

ಮೂರ್ವಾಲಾಕ್ಷಾಹರಿದ್ರೇದ್ವೇಮಂಜಿಷ್ಠಾಸೇಂದ್ರವಾರುಣೀ ॥ ೯೮ ॥
ಬೃಹತೀಸ್ಯೆಂಧವಂಕುಷ್ಠಂರಾಸ್ನಾಮಾಂಸೀಶತಾವರೀ ॥
ಆರನಾಳಾಢಕೇತತ್ರತ್ಯೆಲಪ್ರಸ್ಥಂವಿಪಾಚಯೇತ್ ॥ ೯೯ ॥
ತೈಲಮಂಗಾರಕಂನಾಮಸರ್ವಜ್ವರವಿಮೋಕ್ಷಣಂ ॥

ಅಂಗಾರಕ ತೈಲ—ಕುರಟಿಗ, ಅರಗು, ಅರಿಸಿನ ಮರಅರಿಸಿನ, ಮಂಜಿಷ್ಠೆ, ಕಾಡುಕವಡೇಕಾಯಿ, ಹಗ್ಗುಳ್ಳ, ಸೈಂಧವಲವಣ, ಚಂಗಲಕೋಷ್ಠ ಸಣ್ಣರಾಸ್ಮೆ, ಜಟಾಮಾಂಸಿ, ಆಷಾಢೀಬೇರು, ಈ ಮೂಲಿಕೆಗಳ ಕಲ್ಕ ಮತ್ತು ಕಷಾಯಗಳನ್ನು ವಿಧಿಯಂತೆ ಮಾಡಿಕೊಂಡು ಒಂದು ಆಢಕ ಅಂದರೆ ಇನ್ನೂರೈವತ್ತಾರು ತೊಲ ದಷ್ಟು ಅನ್ನದ ಮೇಲಿನ ಹುಳಿ ನೀರನ್ನೂ ಸೇರಿಸಿ ಅರವತ್ತನಾಲ್ಕು ತೊಲ ಎಳ್ಳೆಣ್ಣೆಯನ್ನು ಸೇರಿಸಿಕೊಂಡು ಮಂದಾಗ್ನಿಯಿಂದ ಪಕ್ವಮಾಡಿ ತೈಲಪಾಕವಾಗಿ ಕಾಯಿಸಿ ಇಳಿಸಿಕೊಳ್ಳುವುದು, ಈ ತೈಲಾಭ್ಯಂಗದಿಂದ ಸಮಸ್ತ ವಿಧವಾದ ಜ್ವರ ಗಳೂ ಶಮನಹೊಂದುತ್ತವೆ.

**ಅಶ್ವಗಂಧಾಂಬಲಾಂಬಿಲ್ವಂಪಾಟಲಾಂಬೃಹತೀದ್ವಯಂ ॥ ೧೦೦ ॥**
**ಶ್ವದಂಷ್ಟ್ರಾತಿಬಲಾನಿಂಬಂಶ್ಯೋನಾಕಂಚಪುನರ್ನವಾಂ ॥**
**ಪ್ರಸಾರಿಣೀಮಗ್ನಿಮಂಥಂಕುರ್ಯಾದ್ದಶಪಲಂಭಿಷಕ್ ॥ ೧೦೧ ॥**
**ಚತುರ್ದ್ರೋಣೇಜಲೇಪಕ್ತ್ವಾಪಾದಶೇಷಂಶೃತಂನಯೇತ್ ॥**

ತೈಲಾಢಕೇನಸಂಯೋಜ್ಯ ಶತಾವರ್ಯ್ಯಾರಸಾಢಕಂ ॥ ೧೦೨ ॥
ಕ್ಷಿಪೇತ್ತತ್ರ ಚಗೋಕ್ಷೀರಂತೈಲಾತ್ತಸ್ಮಾಚ್ಚತುರ್ಗುಣಂ ॥
ಶನೈರ್ವಿಪಾಚಯೇದೇಭಿಃಕಲ್ಕೈಃದ್ವಿಪಲಿಕೈಃಪೃಥಕ್ ॥ ೧೦೩ ॥
ಕುಷ್ಠೈಲಾಚಂದನಬಲಾಮಾಂಸೀಶೈಲೇಯಸೈಂಧವೈಃ ॥
ಅಶ್ವಗಂಧಾವಚಾರಾಸ್ನಾಶತಪುಷ್ಪೇಂದ್ರದಾರುಭಿಃ ॥ ೧೦೪ ॥
ಪರ್ಣೀಚತುಷ್ಟಯೇನೈವತಗರೇಣಚಸಾಧಯೇತ್ ॥
ತತ್ತೈಲಂನಾವನೇಭ್ಯಂಗೇಪಾನೇಬಸ್ತೌಚಯೋಜಯೇತ್ ॥೧೦೫॥
ಪಕ್ಷಾಘಾತಂಹನುಸ್ತಂಭಂಮನ್ಯಾಸ್ತಂಭಂಗಲಗ್ರಹಂ ॥
ಖಲ್ಲತ್ವಂಬಧಿರತ್ವಂಚಗತಿಭಂಗಂಕಟಿಗ್ರಹಂ ॥ ೧೦೬ ॥
ಗಾತ್ರಶೋಷೇಂದ್ರಿಯಧ್ವಂಸಾವಸೃಕ್‌ಶುಕ್ರಜ್ವರಕ್ಷಯಾನ್ ॥
ಅಂತ್ರವೃದ್ಧಿಂಕುರಂಡಂಚದಂತರೋಗಂಶಿರೋಗ್ರಹಂ ॥ ೧೦೭ ॥
ಪಾರ್ಶ್ವಶೂಲಂಚಪಾಂಗುಲ್ಯಂಬುದ್ಧಿಹಾನಿಂಚಗೃಧ್ರಸೀಂ ॥
ಅನ್ಯಾಂಶ್ಚವಿಷಮಾನ್ವಾತಾನ್‌ಜಯೇತ್ಸರ್ವಾಂಗಸಂಶ್ರಯಾನ್ ॥
ಅಸ್ಯಪ್ರಭಾವಾದ್ವಂಧ್ಯಾಪಿನಾರೀಪುತ್ರಂಪ್ರಸೂಯತೇ ॥
ಮರ್ತ್ಯೋಗಜೋವಾತುರಗೋತೈಲಾದಸ್ಮಾತ್ಸುಖೀಭವೇತ್೧೦೮
ಯಥಾನಾರಾಯಣೋದೇವೋದುಷ್ಟದೈತ್ಯವಿನಾಶನಃ ॥
ತಥೈವವಾತರೋಗಾಣಾಂನಾಶನಂತೈಲಮುತ್ತಮಂ ॥ ೧೧೦ ॥

ನಾರಾಯಣತೈಲವನ್ನು ಹೇಳುತ್ತಾನೆ—ಅಶ್ವಗಂಧಿಯ ಬೇರು, ಕಳ್ಳಂಗಡ್ಲೆ, ಬಿಲ್ವದ ಬೇರು, ಪಾದರಿಯ ಚಕ್ಕೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಲು, ಅತಿಬಲಾ ಎಂದರೆ ಕಳ್ಳಂಗಡ್ಲೆಯಲ್ಲಿಯೇ ಒಂದು ವಿಧ, ಬೇವಿನಚಕ್ಕೆ, ಶಿವನೆಯ ತೊಪ್ಪೆ, ಕೊಮ್ಮೆಯ ಬೇರು, ಸಾರಣೆಯಗಿಡ, ನರುವಲತೊಪ್ಪೆ, (ನೆಲ್ಲಿಯಲ್ಲಿ ಭೇದ) ಇವುಗಳು ಪ್ರತಿಯೊಂದೂ ಪತ್ತು ಪಲದಷ್ಟು ಸೇರಿಸಿ (ಒಂದು ಸಾವಿರದ ಇಪ್ಪತ್ತನಾಲ್ಕು ತೊಲಕ್ಕೆ ಒಂದು ದ್ರೋಣವೆಂದು ಹೆಸರು) ನಾಲ್ಕು ದ್ರೋಣ ನೀರಿನಲ್ಲಿ ಕಷಾಯವಿಟ್ಟು ಕಾಯಿಸಿ ಒಂದು ದ್ರೋಣಕ್ಕೆ ಇಳಿಸಿಕೊಂಡು ಆದರ ಜೊತೆಗೆ ಒಂದು ಆಢಕ (ಇನ್ನೂರೈವತ್ತಾರು ತೊಲ) ಎಳ್ಳೆಣ್ಣೆಯನ್ನು ಸೇರಿಸಿ ಅಷ್ಟೇ ಶತಾವರೀಬೇರಿನ ರಸವನ್ನೂ ಸೇರಿಸಿ ಎಣ್ಣೆಯ ನಾಲ್ಕರಷ್ಟು ಹಸುವಿನ ಹಾಲನ್ನೂ ಸೇರಿಸಿ ಮತ್ತೆ ಕಾಯುವುದಕ್ಕಿರಿಸಬೇಕು. ಚಂಗಲಕೋಷ್ಟ, ಯಾಲಕ್ಕಿ, ಶ್ರೀಗಂಧ, ಕಳ್ಳಂಗಡ್ಲೆ, ಜಟಾಮಾಂಸಿ, ಶೈಲೇಯವೆಂದರೆ ಶಿಲಾಪುಷ್ಪ, ಸೈಂಧವಲವಣ, ಹಿರೀಮದ್ದಿನಬೇರು, ಬಜೆ, ಸಣ್ಣರಾಸ್ನೆ, ಸದಾಪೆ, ದೇವದಾರಿಚಕ್ಕೆ, ಒಂದೆಲೆ ಹೊನ್ನೆ, ಮೂರೆಲೆಹೊನ್ನೆ, ಕಾಡು ಹೆಸರು, ಕಾಡು ಉದ್ದು, ಗ್ರಂಥಿತಗರ, ಇವು

ಗಳು ಪ್ರತಿಯೊಂದೂ ಎರಡೆರಡು ಪಲದಷ್ಟು ಸಂಗ್ರಹಿಸಿ ಕಲ್ಕಮಾಡಿಕೊಂಡು ಆ ಕಲ್ಕವನ್ನೂ ಕಾಯಿಸುತ್ತಿರುವುದರೊಡನೆ ಸೇರಿಸಿ ಮಂದಾಗ್ನಿಯಿಂದ ತೈಲಪಾಕ ಕ್ರಮದಲ್ಲಿ ಕಾಯಿಸಿ ಇರಿಸಿಕೊಳ್ಳುವುದು. ಈ ತೈಲವು ಅಭ್ಯಂಗಕ್ಕೂ ನಸ್ಯದಂತೆ ಮೂಗಿನಿಂದ ಸೇದುವುದಕ್ಕೂ ಹೊಟ್ಟೆಗೆ ತೆಗೆದುಕೊಳ್ಳುವುದಕ್ಕೂ ಗುದದ್ವಾರ ದಿಂದ ಬಸ್ತಿ (ಎನಿಮಾ) ಕೊಡುವುದಕ್ಕೂ ಉಪಯೋಗವಾಗುತ್ತದೆ. ಈ ತೈಲ ದಿಂದ ಪಕ್ಷವಾಯು, ಹನುಸ್ತಂಭ, ಮನ್ಯಾಸ್ತಂಭ, ಗಳಗ್ರಹ, ಖಲ್ಲತ್ವಗಳೆಂಬ ರೋಗಪ್ರಕರಣದಲ್ಲಿ ಹೇಳಿರುವ ವಾತರೋಗಗಳು, ಕಿವಿ ಕೇಳದೆ ಹೋಗು ವುದು, ನಡೆಯುವುದಕ್ಕಾಗದಿರೋಣ, ಕಟಿಗ್ರಹವೆಂದರೆ ಸೊಂಟಹಿಡಿಯೋಣ, ದೇಹವೆಲ್ಲಾ ಒಣಗಿ ಸಣ್ಣನಾಗುತ್ತ ಬರುವುದು, ಇಂದ್ರಿಯಧ್ವಂಸವೆಂದರೆ ವಾಯುರೋಗದಿಂದುಂಟಾದ ಇಂದ್ರಿಯಗಳು ಕೆಡೋಣ, ರಕ್ತವು ಕ್ಷಯಿಸುತ್ತಿ ರೋಣ, ಶುಕ್ರವು ಕ್ಷಯಿಸೋಣ, ಜ್ವರ, ಕ್ಷಯರೋಗ, ಅಂತ್ರವೃದ್ಧಿ ಎಂಬ ವೃಷಣವಾಯು. ಹಲ್ಲಿನ ರೋಗಗಳು, ತಲೆಹಿಡಿದುಕೊಳ್ಳುವುದು, ಪಕ್ಕಶೂಲೆ, ವಾಯುಹಿಡಿದು ಕುಂಟನಾಗುವುದು, ಬುದ್ಧಿ ಕೆಟ್ಟುಹೋಗುವುದು, ಗೃಧ್ರಸಿ ಎಂಬ ವಾತರೋಗ, ಇವುಗಳಲ್ಲದೆ ಸಮಸ್ತ ಅವಯವಗಳಲ್ಲಿಯೂ ಸಂಭವಿಸುವ ಎಲ್ಲಾ ಬಗೆಯ ವಾತರೋಗಗಳೂ ಗುಣವಾಗುತ್ತವೆ. ವಾತವ್ಯಾಧಿಗಳಿಂದ ಬಂಜೆಯ ರಾಗಿರುವ ಹೆಂಗಸರುಗಳು ಈ ತೈಲವನ್ನುಪಯೋಗಿಸುತ್ತ ಬಂದಲ್ಲಿ ಖಂಡಿತ ವಾಗಿಯೂ ಗರ್ಭವತಿಯರಾಗುತ್ತಾರೆ. ಈ ತೈಲವು ಮನುಷ್ಯರಿಗೆ ಮಾತ್ರವಲ್ಲದೆ ಆನೆ ಕುದುರೆಗಳ ವೈದ್ಯದಲ್ಲಿ ನೋವು ಬಂದರೂ ಅವುಗಳಿಗೂ ಉಪಯೋಗಿಸಲು ಬರುತ್ತದೆ ವಿಷ್ಣುವು ದೈತ್ಯರಿಗೆಲ್ಲಾ ಹೇಗೆ ನಾಶಕನೋ ಹಾಗೆಯೇ ಈ ತೈಲವು ಎಲ್ಲಾ ವಾತರೋಗಗಳನ್ನೂ ನಾಶಮಾಡುತ್ತದೆ

ವಾರುಣ್ಯಾಉತ್ತರಂಮೂಲಂಕುಟ್ಟಿತಂತುಪಲತ್ರಯಂ ॥
ಪಲದ್ವಾದಶಕಂತೈಲಂಕ್ಷಣಂವಹ್ನಾವಿಪಾಚಿತಂ ॥ ೧೧೧ ॥
ನಿಷ್ಕತ್ರಯಂಭಕ್ತಯುಕ್ತಂಸೇವೇತಾಸ್ಮಾದ್ವಿನಶ್ಯತಿ ॥
ಹಸ್ತಕಂಪಶ್ಶಿರಃಕಂಪಃಕಂಪೋಮನ್ಯಾಶಿರಾಭವಃ ॥ ೧೧೨ ॥

ವಾರುಣೀತೈಲ—(ಇದು ಪ್ರಕ್ಷಿಪ್ತ) ಇಂದ್ರವಾರುಣಿ ಎಂದರೆ ಕಾಡುಕವಡೇ ಕಾಯಿನ ಗಿಡದ ಉತ್ತರ ದಿಕ್ಕಿಗೆ ಹರಿದಿರುವ ಬೇರು ಮೂರು ಪಲವನ್ನು ಕುಟ್ಟಿ ಹನ್ನೆರಡು ಪಲ ಎಳ್ಳಿನೆಣ್ಣೆಗೆ ಹಾಕಿ ಒಂದು ಕ್ಷಣಮಾತ್ರ ಹೊತ್ತು ಕಾಯಿಸಿ ಮೂರು ನಿಷ್ಕ ಅಂದರೆ ಸುಮಾರು ಒಂದುವರೆ ತೊಲದಷ್ಟು ಊಟಮಾಡುವಾಗ್ಗೆ ಅನ್ನದ ಜೊತೆಯಲ್ಲಿ ಸೇರಿಸಿ ಊಟಮಾಡುತ್ತ ಬಂದರೆ ಕೈನಡುಗುವುದು, ತಲೆ ನಡುಗುವುದು, ಮನ್ಯ ಎಂಬ ಮರ್ಮಸ್ಥಾನದಲ್ಲಿ ಬರುವ ನರಗಳ ನಡತ ಸಹ ಗುಣವಾಗುತ್ತದೆ.

ಬಲಾಮೂಲಕಷಾಯೇಣದಶಮೂಲಶೃತೇನಚ ॥
ಕುಳತ್ಥಯವಕೋಲಾನಾಂಕ್ವಾಥೇನಪಯಸಾತಥಾ ॥ ೧೧೩ ॥
ಅಷ್ಟಾಷ್ಟಭಾಗಯುಕ್ತೇನಭಾಗನೇಕಂಚತೈಲತಃ ॥
ಗಣೇನಜೀವನೀಯೇನಶತಾವರ್ಯೇಂದ್ರದಾರುಣಾ ॥ ೧೧೪ ॥
ಮಂಜಿಷ್ಠಾಕುಷ್ಠಶೈಲೇಯತಗರಾಗರುಸೈಂಧವೈಃ ॥
ವಚಾಪುನರ್ನವಾಮಾಂಸೀಸಾರಿಬಾದ್ವಯಪತ್ರಕೈಃ ॥ ೧೧೫ ॥
ಶತಪುಷ್ಪಾಶ್ವಗಂಧಾಭ್ಯಾಮೇಲಯಾಚವಿಪಾಚಯೇತ್ ॥
ಗರ್ಭಾರ್ಥಿನೀನಾಂನಾರೀಣಾಂನರಾಣಾಂಕ್ಷೀಣರೇತಸಾಂ ॥ ೧೧೬ ॥
ವ್ಯಾಯಾಮಕ್ಷೀಣಗಾತ್ರಾಣಾಂಸೂತಿಕಾನಾಂಚಯುಜ್ಯತೇ ॥
ರಾಜಯೋಗ್ಯಮಿದಂತೈಲಂಸುಖಿನಾಂಚವಿಶೇಷತಃ ॥ ೧೧೭ ॥
ಬಲಾತೈಲಮಿತಿಖ್ಯಾತಂಸರ್ವವಾತಾಮಯಾಪಹಂ ॥

ಬಲಾ ಎಂದರೆ ಕಳ್ಳಂಗಡಲೆಯ ಬೇರಿನ ಕಷಾಯ ಮತ್ತು ದಶಮೂಲ (ಬಿಲ್ವ, ನರುವಲ, ಶಿವನೆ, ಪಾದರಿ, ದೊಡ್ಡಮರ ಇವುಗಳ ಚಕ್ಕೆ, ಒಂದಲೆ ಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಲು) ಕಷಾಯ, ಹುರಳಿ, ಯವಧಾನ್ಯ, ಬೋರೆಯಹಣ್ಣು ಇವುಗಳ ಕಷಾಯ ಹಾಲು ಇವುಗಳನ್ನೆಲ್ಲಾ ಸಮಪ್ರಮಾಣದಲ್ಲಿ ಸೇರಿಸಿ ಇವುಗಳ ಎಂಟನೆಯ ಭಾಗದಷ್ಟು ಎಳ್ಳಿನೆಣ್ಣೆಯನ್ನು ಬೆರಸಿ ಕಾಯಿಸುವುದಕ್ಕಿಡುವುದು. ಜೀವಕ, ಋಷಭಕ, ಮೇದ, ಮಹಾಮೇದ, ಕಾಕೋಲಿ, ಕ್ಷೀರಕಾಕೋಲಿ, ಶಾಲಿಪರ್ಣಿ (ಒಂದೆಲೆಹೊನ್ನೆ) ಮೂರೆಲೆಹೊನ್ನೆ, ಕಾಡು ಉದ್ದು, ಕಾಡುಹೆಸರು, ಜೀವಂತಿ (ಹಾಲೆಯ ಬಳ್ಳಿ) ಶತಾವರಿ (ಆಷಾಢಿ) ದೇವದಾರೀಚಕ್ಕೆ, ಮಂಜಿಷ್ಠೆ, ಚಂಗಲಕೋಷ್ಠ, ಶಿಲಾಪುಷ್ಪ, ಗ್ರಂಥಿತಗರ, ಅಗಿಲುಗಂಧ, ಸೈಂಧವಲವಣ, ಬಜೆ, ಕೊಮ್ಮೆಯ ಬೇರು, ಜಟಾಮಾಂಸಿ, ಕಪ್ಪು ಮತ್ತು ಬಿಳಿಯ ಸೋಗದೇಬೇರು, ತಮಾಲಪತ್ರ, ಸದಾಪ, ಹಿರೇಮದ್ದು, ಯಾಲಕ್ಕಿ ಈ ಪದಾರ್ಥಗಳನ್ನು ಜಲದಲ್ಲಿ ಕಲ್ಕಮಾಡಿ ಅದರಲ್ಲಿ ಸೇರಿಸಿ ತೈಲಪಾಕ ಕ್ರಮದಲ್ಲಿ ಮೃದ್ವಗ್ನಿಯಿಂದ ಪಕ್ವಮಾಡಿ ಇರಿಸಿಕೊಳ್ಳುವುದು, ಇಲ್ಲಿಗೆ ಬಲಾದಿ ತೈಲವು ಸಿದ್ಧವಾದ ಹಾಗಾಯಿತು. ಈ ತೈಲವು ಬಂಜೆಯರಾಗಿ ಅಥವಾ ಗರ್ಭ ದಲ್ಲಿ ದೋಷವು ಸೇರಿ ಗರ್ಭವು ನಿಲ್ಲದ ಹಂಗಸರಿಗೂ, ಶುಕ್ರಧಾತು ಕ್ಷಯಿಸಿ ಹೋಗಿ ಗರ್ಭಾಧಾನ ಮಾಡಲಾರದ ಗಂಡಸರಿಗೂ, ಶಕ್ತಿಮೀರಿ ಕೆಲಸಮಾಡಿ ಕ್ಷಯಿಸಿಹೋದವರಿಗೂ, ಪ್ರಸವಿಸಿದ ಸ್ತ್ರೀಯರಿಗೂ ಉಪಯೋಗಿಸಲು ಬರುತ್ತದೆ. ಈ ತೈಲವು ರಾಜಯೋಗ್ಯವಾದದು, ವಿಶೇಷ ಸುಖವಾಗಿರುವವರಿಗೂ ಯೋಗ್ಯ ವಾದದ್ದು, ಬಲಾದಿತೈಲವೆಂದು ಇದಕ್ಕೆ ಹೆಸರು. ಸಮಸ್ತ ವಿಧವಾದ ವಾತ

ರೋಗವನ್ನೂ ನಿವಾರಣ ಮಾಡುತ್ತದೆ, ಗ್ರಂಥಾಂತರದಲ್ಲಿ ಇದನ್ನೇ ದಶಪಾಕ ಬಲಾತೈಲವೆಂದು ವ್ಯವಹರಿಸುತ್ತಾರೆ. ಇದರ ಕ್ರಮವೆಂತೆಂದರೆ—ಮೊದಲು ಕಬ್ಬಂಗಡ್ಲೆಯ ಬೇರಿನ ಕಷಾಯ ಒಂದರೊಡನೆಯೇ ತೈಲವನ್ನು ಕಾಯಿಸುವುದು, ನಂತರ ದಶಮೂಲ ಕಷಾಯದೊಡನೆ ಅದೇ ತೈಲವನ್ನೇ ಎರಡನೆಯ ಪಾಕ ಮಾಡುವುದು, ಆ ನಂತರ ಹುರಳಿಯ ಕಷಾಯದೊಡನೊಂದು, ಯವಕಷಾಯ ದೊಡನೊಂದು, ಬೋರೆಯ ಹಣ್ಣಿನ ಕಷಾಯದೊಡನೊಂದು, ಈ ರೀತಿಯಾಗಿ ಮೂರು ಪಾಕಮಾಡಿಕೊಂಡು ಹಾಲಿನೊಡನೊಂದು ಸಾರಿ ಪಾಕಮಾಡುವುದು, ಇಲ್ಲಿಗೆ ಆರು ಪಾಕವಾಯಿತು. ಜೀವನೀಯಗಣ ಕಷಾಯದೊಡನೊಂದು, ಅಷಾಢೀ ಬೇರಿನ ರಸದೊಡನೊಂದು, ದೇವದಾರೀಚಕ್ಕೆಯ ಕಷಾಯದೊಡ ನೊಂದು, ಅಲ್ಲಿಂದ ಮುಂದಕ್ಕೆ ಹೇಳಿರುವ ಪದಾರ್ಥಗಳ ಕಲ್ಕದಿಂದ ಒಂದು, ಈ ರೀತಿ ಮಾಡಿದ್ದನ್ನೇ ಹತ್ತು ಸಾರಿ ಪಾಕಮಾಡುತ್ತ ಹೋಗುವುದು, ಇದರಿಂದ ತೈಲವು ಗುಣದಲ್ಲಿ ಉತ್ತಮವಾಗುತ್ತದೆಂದು ಕೆಲವರು ಹೇಳುತ್ತಾರೆ, ಮತ್ತೆ ಕೆಲವರು ದಗ್ಧಪಾಕವಾಗಿ ತೈಲವೇ ಹಾಳಾಗುತ್ತದೆನ್ನುತ್ತಾರೆ. ಅಂತೂ ಇದೆಲ್ಲಾ ವ್ಯಾಖ್ಯಾನದಲ್ಲಿರುವ ವಿಷಯ

ಪ್ರಸಾರಿಣೀಪಲಶತಂಜಲದ್ರೋಣೇನಪಾಚಯೇತ್ ॥ ೧೧೮ ॥
ಪಾದಶಿಷ್ಟಶ್ಶೃತೋಗ್ರಾಹ್ಯಸ್ತೈಲಂದಧಿಚತತ್ಸಮಂ ॥
ಕಾಂಜಿಕಂಚಸಮಂತೈಲಾತ್ ಕ್ಷೀರಂತೈಲಾಚ್ಚತುರ್ಗುಣಂ ॥ ೧೧೯ ॥
ತೈಲಾತ್ತಥಾಷ್ಟಮಾಂಶೇನಸರ್ವಕಲ್ಕಾನಿಯೋಜಯೇತ್ ॥
ಮಧುಕಂಪಿಪ್ಪಲೀಮೂಲಂಚಿತ್ರಕಸ್ಸೈಂಧವಂವಚಾ ॥ ೧೨೦ ॥
ಪ್ರಸಾರಿಣೀದೇವದಾರುರಾಸ್ನಾಚಗಜಪಿಪ್ಪಲೀ ॥
ಭಲ್ಲಾತಶ್ಶತಪುಷ್ಪಾಚಮಾಂಸೀಚೈಭಿರ್ವಿಪಾಚಯೇತ್ ॥ ೧೨೧ ॥
ಏತತ್ತೈಲವರಂಪಕ್ವಂವಾತಶ್ಲೇಷ್ಮಾಮಯಾನ್ ಜಯೇತ್ ॥
ಕೌಬ್ಜ್ಯಂಪಂಗುತ್ವಖಂಜತ್ವೇಗೃಧ್ರಸೀಮರ್ದಿತಂತಥಾ ॥ ೧೨೨ ॥
ಹನುಪೃಷ್ಠಶಿರೋಗ್ರೀವಾಕಟಿಸ್ತಂಭಂಚನಾಶಯೇತ್ ॥
ಅನ್ಯಾಂಶ್ಚವಿಷಮಾನ್ವಾತಾನ್ ಸರ್ವಾನಾಶುವ್ಯಪೋಹತಿ ॥ ೧೨೩ ॥

ಪ್ರಸಾರಿಣೀ ತೈಲವನ್ನು ಹೇಳುತ್ತಾನೆ—ಪ್ರಸಾರಿಣಿ ಎಂದರೆ ಸಾರಣೆಬಳ್ಳಿ ಎಂದು ಬಯಲುಸೀಮೆಯಲ್ಲಿ ಕರೆಯುತ್ತಾರೆ. ಈ ಬಳ್ಳಿ ನೂರು ಪಲದಷ್ಟನ್ನು ಒಂದು ದ್ರೋಣ ಪರಿಮಾಣ ಜಲದಲ್ಲಿ ಕಷಾಯ ಕಾಯಿಸಿ ನಾಲ್ಕರಲ್ಲಿ ಒಂದು ಪಾಲು ಕಷಾಯ ಉಳಿಯುವಂತೆ ಇಳಿಸಿಕೊಳ್ಳುವುದು, ಆ ಕಷಾಯಕ್ಕೆ ಅದರಷ್ಟೇ ಎಳ್ಳೆಣ್ಣೆ, ಹಸುವಿನ ಮೊಸರು, ಕಾಂಜಿಕವೆಂದರೆ ಯಾವದಾದರೂ ಧಾನ್ಯವನ್ನು

ಬೇಯಿಸಿ ಆ ಕಷಾಯವನ್ನು ಕೆಲವು ದಿವಸ ಮುಚ್ಚಿಟ್ಟಿಸಿದರೆ ಹುಳಿಯಾಗುತ್ತದೆ, ಆ ಹುಳಿನೀರಿಗೆ ಹೆಸರು. ಇಂತಹ ಹುಳಿನೀರನ್ನೂ ಮೊಸರಿನಷ್ಟೇ ಸೇರಿಸಬೇಕು, ಹಸುವಿನ ಹಾಲು ಮಾತ್ರ ತೈಲದ ನಾಲ್ಕರಷ್ಟು, ಇವುಗಳನ್ನೆಲ್ಲಾ ಕಾಯುವುದಕ್ಕೆರಿಸಿ, ಜ್ಯೇಷ್ಠಮಧು, ಹಿಪ್ಪಲಿಸೋಡಿ, ಚಿತ್ರಮೂಲದ ಬೇರು, ಸೈಂಧವಲವಣ, ಬಜೆ ಸಾರಣೆಯ ಬಳ್ಳಿ, ದೇವದಾರೀಚಕ್ಕೆ, ಸಣ್ಣರಾಸ್ನೆ, ಗಜಪಿಪ್ಪಲಿ ಎಂದರೆ ದೊಡ್ಡ ಹಿಪ್ಪಲಿ, ಗೇರುಬೀಜ, ಸದಾಪೆ, ಜಟಾಮಾಂಸಿ, ಈ ಪದಾರ್ಥಗಳಿಗೆ ಎಣ್ಣೆಯ ಎಂಟನೆಯ ಭಾಗದಷ್ಟು ನೀರನ್ನು ಹಾಕಿ ಕಲ್ಕಮಾಡಿ ಆ ಕಲ್ಕವನ್ನು ಇದರೊಂದಿಗೆ ಸೇರಿಸಿ ಮಂದಾಗ್ನಿಯಿಂದ ಪಕ್ವಮಾಡಿ ತೈಲದ ಹದದಲ್ಲಿ ಇಳಿಸಿಕೊಳ್ಳುವುದು, ಈ ತೈಲವು ವಾತರೋಗಗಳನ್ನು ಮತ್ತು ಶ್ಲೇಷ್ಮರೋಗಗಳನ್ನೂ ಕುಬ್ಜತ್ವ (ಗುಜ್ಜಾರಿಯಾಗುವುದು) ಕುಂಟನಾಗುವುದು, ಹೆಳವನಾಗುವುದು, ಗೃಧ್ರಸಿ ಎಂಬ ವಾಯು, ಅರ್ದಿತವೆಂಬ ವಾತವ್ಯಾಧಿ, ಹನುಸ್ತಂಭ, ಪೃಷ್ಠಭಾಗವು ಹಿಡಿದುಕೊಳ್ಳುವುದು, ಅಲ್ಲಾಡದಂತೆ ತಲೆಯೇ ನಿಂತುಹೋಗುವುದು, ಕತ್ತು ನಿಂತುಹೋಗುವುದು, ಸೊಂಟ ಹಿಡಿದುಕೊಳ್ಳುವುದು, ಇಂತಹ ವಾತರೋಗಗಳನ್ನೂ ಇನ್ನೂ ಭಯಂಕರಗಳಾದ ಅನೇಕ ವಿಧ ವಾತರೋಗಗಳನ್ನೂ ಬಹಳ ಜಾಗ್ರತೆಯಾಗಿಯೇ ಗುಣಪಡಿಸುತ್ತದೆ

ಮಾಷಾಯುವಾತಸೀಕ್ಷ್ನದ್ರಾಮುರ್ಕಟೀಚಕುರಂಟಕಃ ॥
ಗೋಕಂಟಿಷ್ಟುಂಟುಕಶ್ಚ್ಯೈಷಾಂಕುಯರ್ಾತ್ಸಪ್ತಪಲಂಪೃಥಕ್ ೧೨೪
ಚತುರ್ಗುಣಾಂಬುನಾಪಕ್ತ್ವಾಪಾದಶೇಷಂಶೃತಂನಯೇತ್ ॥
ಕಾರ್ಪಾಸಾಸ್ಥೀನಿಬದರಂಶಣಬೀಜಂಕುಳುತ್ಥಕಂ ॥ ೧೨೫ ॥
ಪೃಥಕ್ಚತುರ್ದಶಪಲಂಚತುರ್ಗುಣಜಲೇಪಚೇತ್ ॥
ಚತುರ್ಥಾಂಶಾವಶಿಷ್ಟಂಚಗೃಹ್ಣೀಯಾತ್ಕ್ವಾಥಮುತ್ತಮಂ ೧೨೬
ಪ್ರಸ್ಥೈಕಂಛಾಗಮಾಂಸಸ್ಯಚತುಷ್ಟಷ್ಟಿಪಲೇಜಲೇ ॥
ನಿಕ್ಷಿಪ್ಯಪಾಚಯೇದ್ಧೀಮಾನ್ಪಾದಶೇಷಂಶೃತಂನಯೇತ್ ॥ ೧೨೭ ॥
ತೈಲಪ್ರಸ್ಥೇತತಸ್ಸರ್ವಾನ್ಕ್ವಾಥಾನೇತಾನ್ವಿನಿಕ್ಷಿಪೇತ್ ॥
ಕಲ್ಕೈರೇಭಿಶ್ಚವಿಪಚೇದಮೃತಾಕುಷ್ಠನಾಗರೈಃ ॥ ೧೨೮ ॥
ರಾಸ್ನಾಪುನರ್ನವೈರಂಡೈಃಪಿಪ್ಪಲ್ಯಾಶತಪುಷ್ಪಯಾ ॥
ಬಲಾಪ್ರಸಾರಿಣೀಭ್ಯಾಂಚಮಾಂಸ್ಯಾಕಟುಕಯಾತಥಾ ॥ ೧೨೯ ॥
ಪೃಥಗರ್ಧಪಲೈರೇತೈಃಸಾಧಯೇನ್ಮೃದುವಹ್ನಿನಾ ॥
ಹನ್ಯಾತ್ತೈಲಮಿದಂಶೀಘ್ರಂಗ್ರೀವಾಸ್ತಂಭಾಪಬಾಹುಕೌ ॥ ೧೩೦ ॥
ಅರ್ಧಾಂಗಶೋಷಮಾಕ್ಷೇಪಮೂರುಸ್ತಂಭಾಪತಾನಕೌ ॥

**ಶಾಖಾಕಂಪಂಶಿರಃಕಂಪಂವಿಶ್ವಾಚೀಮರ್ದಿತಂತಥಾ ॥ ೧೩೧ ॥**
**ಮಾಷಾದಿಕಮಿದಂತೈಲಂಸರ್ವವಾತವಿಕಾರನುತ್ ॥**

ಮಾಷಾದಿತೈಲ—ಉದ್ದಿನಕಾಳು, ಯವ ಎಂಬ ಒಂದು ಬಗೆಯ ಧಾನ್ಯ, ಅಗಸೆಯ ಬೀಜ, ನೆಲಗುಳ್ಳದಬೇರು, ಸಸುಗುಸ್ಸಿಯ ಬೀಜ, ಗೋರಂಟಿಯಗಿಡ, ನೆಗ್ಗಲು, ದೊಡ್ಡಮರದ ಚಕ್ಕೆ, ಇವುಗಳ ಪ್ರತಿಯೊಂದನ್ನೂ ಏಳು ಪಲದಷ್ಟು ಕೂಡಿಸಿ ಕೂಡಿದ್ದರ ನಾಲ್ಕರಷ್ಟು ನೀರಿನಲ್ಲಿ ಕಷಾಯವಿಟ್ಟು ನಾಲ್ಕರಲ್ಲೊಂದು ಭಾಗ ಕಷಾಯ ಉಳಿಯುವಂತೆ ಕಾಯಿಸಿ ಇಳಿಸಿಕೊಳ್ಳುವುದು ಹತ್ತಿಯ ಬೀಜ, ಬೋರೆಯ ಬೀಜ, ಶಣಬಿನ ಬೀಜ, ಹುರುಳಿಯ ಕಾಳು ಇವು ಪ್ರತಿಯೊಂದೂ ಹದಿನಾಲ್ಕು ಪಲದಷ್ಟು ಸಂಗ್ರಹಿಸಿ ಮೇಲಿನಂತೆಯೇ ಚತುರ್ಗುಣ ಜಲದಲ್ಲಿ ಕಷಾಯಮಾಡಿ ನಾಲ್ಕರಲ್ಲೊಂದು ಭಾಗ ಕಷಾಯವಿಳಿಸಿಕೊಳ್ಳುವುದು. ಆಡಿನ ಮಾಂಸ ಹದಿನಾಲ್ಕು ಪಲದಷ್ಟನ್ನು ಐವತ್ತನಾಲ್ಕು ಪಲ ನೀರಿನಲ್ಲಿ ಕಷಾಯ ವಿಟ್ಟು ನಾಲ್ಕರಲ್ಲೊಂದು ಭಾಗ ಕಷಾಯವಿಳಿಸಿಕೊಳ್ಳುವುದು, ಈ ಮೂರು ಬಗೆಯ ಕಷಾಯಗಳನ್ನೂ ಒಂದು ಪ್ರಸ್ಥ (ಅರವತ್ತನಾಲ್ಕು ತೊಲ) ಎಳ್ಳೆಣ್ಣೆಗೆ ಕೂಡಿಸಿ ಕಾಯಿಸುವುದಕ್ಕಿರಿಸಿ ಅಮೃತಬಳ್ಳಿ, ಬಂಗಲಕೋಷ್ಟ, ಶುಂಠಿ, ಸಣ್ಣ ರಾಸ್ನೆ, ಕೊಸ್ಟ್ರಯ ಬೇರು, ಹರಳು ಬೇರು, ಹಿಪ್ಪಲಿ, ಸದಾಪ, ಕಪ್ಪುಂಗಡ್ಡೆ, ಸಾರಣೆಯ ಗಿಡ, ಜಟಾಮಾಂಸಿ, ಕಟುಕರೋಹಿಣಿ, ಈ ವಸ್ತುಗಳು ಪ್ರತಿ ಯೊಂದನ್ನೂ ಅರ್ಧ ಪಲದಷ್ಟನ್ನು ಕೂಡಿಸಿ ಕಲ್ಕಮಾಡಿ ಕಾಯಿಸುತ್ತಿರುವುದ ರೊಡನೆ ಕೂಡಿಸಿ ಮೃದುವಾದ ಉರಿಯಿಂದ ತೈಲಪಾಕ ಕ್ರಮದಂತೆ ಪಕ್ವಮಾಡಿ ಇರಿಸಿಕೊಳ್ಳುವುದು. ಈ ತೈಲವು ಗ್ರೀವಾಸ್ತಂಭವೆಂದರೆ ಕತ್ತು ಹಿಡಿದುಕೊಳ್ಳು ವುದು, ಅವಬಾಹುಕವೆಂಬ ತೋಳು ಹಿಡಿದುಕೊಳ್ಳುವ ವಾಯು, ಅರ್ಧಾಂಗ ಶೋಷವೆಂದರೆ ದೇಹದ ಒಂದು ಭಾಗ ಶೋಷಿಸಿಹೋಗುವುದು, ಆಕ್ಷೇಪಕವೆಂಬ ವಾತರೋಗ, ಊರುಸ್ತಂಭವೆಂಬ ವಾಯು, ಅಪತಾನಕವೆಂಬ ವಾತ, ತಲೆ ನಡುಗುವುದು, ಕೈಕಾಲುಗಳು ನಡುಗುವದು, ವಿಶ್ವಾಚಿ ಎಂಬ ವಾಯು, ಅರ್ದಿತ, ಮೊದಲಾದ ವಾತವಿಕಾರಗಳನ್ನೆಲ್ಲಾ ನಾಶಮಾಡುತ್ತದೆ. ಇದಕ್ಕೆ ಮಾಷಾದಿ ತೈಲವೆಂದು ಹೆಸರು

**ಶತಾವರೀಬಲಾಯುಗ್ಮಂಪಞ್ಚಗಂಧರ್ವಹಸ್ತಕಃ ॥ ೧೩೨ ॥**
**ಅಶ್ವಗಂಧಾಶ್ವದಂಷ್ಟ್ರಾಚಬಿಲ್ವಃಕಾಶಃಕುರಂಟಕಃ ॥**
**ಏತಾನ್ ಸಾರ್ಧಪಲಾನ್ಭಾಗಾನ್ಕಲ್ಕಯೇಚ್ಚವಿಪಾಚಯೇತ್ ॥೧೩೩॥**
**ಚತುರ್ಗುಣೇನನೀರೇಣಪಾದಶೇಷಂಶೃತಂನಯೇತ್ ॥**
**ನಿಯೋಜ್ಯತೈಲಪ್ರಸ್ಥೇಚಕ್ಷೀರಪ್ರಸ್ಥಂವಿನಿಕ್ಷಿಪೇತ್ ॥ ೧೩೪ ॥**

ಶತಾವರೀರಸಪ್ರಸ್ಥಂಜಲಪ್ರಸ್ಥಂಚಯೋಜಯೇತ್ ॥
ಶತಾವರೀದೇವದಾರುಮಾಂಸೀತಗರಚಂದನಂ ॥ ೧೩೫ ॥
ಶತಪುಷ್ಪಾಬಲಾಕುಷ್ಠಮೇಲಾಶೈಲೇಯಮುತ್ಪಲಂ ॥
ಋದ್ಧಿರ್ಮೇದಾಚಮಧುಕಂಕಾಕೋಲೀಜೀವಕಸ್ತಥಾ ॥ ೧೩೬ ॥
ಏಷಾಂಕರ್ಷಸಮೈಃಕಲ್ಕೈಸ್ತೈಲಂಗೋಮಯವಹ್ನಿನಾ ॥
ಪಚೇತ್ತನ್ಮೂರ್ಧತೈಲೇನನರಸ್ತ್ರೀಷುವೃಷಾಯತೇ ॥ ೧೩೭ ॥
ನಾರೀಚಲಭತೇಪುತ್ರಂಯೋನಿಶೂಲಂಚನಶ್ಯತಿ ॥
ಅಂಗಶೂಲಂಶಿರಶ್ಶೂಲಂಕಾಮಲಾಂಪಾಂಡುತಾಂಗರಂ ॥ ೧೩೮ ॥
ಗೃಧ್ರಸೀಪ್ಲೀಹಶೋಷಾಂಶ್ಚಮೇಹಾನ್‌ದಂಡಾಪತಾನಕಂ ॥
ಸದಾಹಂವಾತರಕ್ತಂಚವಾತಪಿತ್ತಗದಾರ್ದಿತಂ ॥ ೧೩೯ ॥
ಅಸೃಗ್ದರಂತಥಾಧ್ಮಾನಂರಕ್ತಪಿತ್ತಂಚನಶ್ಯತಿ ॥
ಶತಾವರೀತೈಲಮಿದಂಕ್ಶಷ್ಣಾತ್ರೇಯೇಣಭಾಷಿತಂ ॥ ೧೪೦ ॥
ಓಂನಾರಾಯಣೀಯೇಸ್ವಾಹಾ ॥
ಉತ್ತರಾಭಿಮುಖೋಭೂತ್ವಾಖನೇತ್ಸ್ವದಿರಶಂಕುನಾ ॥
ಓಂಸರ್ವವ್ಯಾಧಿನಾಶಿನ್ಯೈಸ್ವಾಹಾ ॥
ಇತ್ಯುತ್ಪಾಟನಮಂತ್ರಃ ॥
ಕುಮಾರೀಜೀವನೀಯೇಸ್ವಾಹಾ । ಇತಿಪಾನಮಂತ್ರಃ ॥

ಶತಾವರೀ ತೈಲ—ಆಷಾಢಿಯ ಬೇರು, ಬಲಾಯುಗ್ಮವೆಂದರೆ ಎರಡು ಬಗೆಯ ಕಳ್ಳಂಗಡಲೆಯ ಸಮೂಲ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹರಳು ಬೇರು, ಅಶ್ವಗಂಧಿಯಬೇರು, ನೆಗ್ಗಿಲು, ಬಿಲ್ಪಪತ್ರೆಬೇರು, ಕಾಶವೆಂದರೆ ಕಬ್ಬಿನಂತೆಯೇ ಇರುವ ಸೂಜಿಕಬ್ಬು ಎಂಬುವದು, (ಮೈಸೂರು ಡಿಸ್ಟ್ರಿಕ್ಟಿನಲ್ಲಿ ವಿಶೇಷವಾಗಿರುತ್ತದೆ) ಗೋರಂಟೆಯ ಗಿಡ, ಇವು ಪ್ರತಿಯೊಂದೂ ಒಂದೂವರೆ ಪಲದಷ್ಟು ಸೇರಿಸಿ ನೀರಿದ್ದರ ನಾಲ್ಕರಷ್ಟು ನೀರಿನಲ್ಲಿ ಕಷಾಯವಿರಿಸಿ ನಾಲ್ಕರಲ್ಲೊಂದು ಪಾಲು ಉಳಿಯುವ ವರಿಗೂ ಕಾಯಿಸಿ ಶೋಧಿಸಿಕೊಂಡು ಅದರ ಜೊತೆಗೆ ಒಂದು ಪ್ರಸ್ಥ ಎಳ್ಳೆಣ್ಣೆ, ಒಂದು ಪ್ರಸ್ಥ ಹಾಲು, ಒಂದು ಪ್ರಸ್ಥ ಆಷಾಢೀಬೇರಿನ ರಸ, ಒಂದು ಪ್ರಸ್ಥ ನೀರು ಇವುಗಳಲ್ಲನ್ನೂ ಸೇರಿಸಿ ಕಾಯಿಸುತ್ತ ಆಷಾಢೀಬೇರು, ದೇವದಾರೀಚಕ್ಕೆ, ಜಟಾಮಾಂಸಿ, ಗ್ರಂಥಿತಗರ, ಶ್ರೀಗಂಧ, ಸದಾಪ, ಕಳ್ಳಂಗಡ್ಲೆ, ಚಂಗಲಕೋಷ್ಠ, ಯಾಲಕ್ಕಿ, ಶಿಲಾಪುಷ್ಪ, ಕಮಲ, ಋದ್ಧಿ, ಮೇದ, ಜ್ಯೇಷ್ಠ ಮಧು, ಕಾಕೋಲಿ. ಜೀವಕ, ಇವುಗಳು ಪ್ರತ್ಯೇಕ ಒಂದೊಂದು ಕರ್ಷದಷ್ಟು ಸಂಗ್ರಹಿಸಿ ಕಲ್ಕಮಾಡಿ ತೈಲದೊಟ್ಟಿಗೆ ಸೇರಿಸಿ ಕಾಡುಬೆರಣಿಯಿಂದ ಮೃದ್ವಗ್ನಿ

ಯಲ್ಲಿ ಪಕ್ವಮಾಡಿ ಇಳಿಸಿಕೊಳ್ಳುವುದು, ಇಲ್ಲಿಗೆ ಶತಾವರೀ ತೈಲವು ಸಿದ್ಧವಾದ ಹಾಗಾಯಿತು. ಈ ತೈಲವನ್ನು ತಲೆಗೆ ಹಚ್ಚಿಕೊಂಡು ಅಭ್ಯಂಜನಮಾಡಿ ಕೊಳ್ಳುವುದರಿಂದ ಪುರುಷರಿಗೆ ವೀರ್ಯವೃದ್ಧಿಯಾಗುತ್ತದೆ, ಸ್ತ್ರೀಯರು ಪುತ್ರವತಿಯ ರಾಗುತ್ತಾರೆ, ಸ್ತ್ರೀಯರ ಯೋನಿಶೂಲವು ಇದರಿಂದ ನಿವಾರಣವಾಗುತ್ತದೆ, ಮೈ ವಡತ, ತಲೆವಡತ, ಕಾಮಾಲೆರೋಗ, ಪಾಂಡುರೋಗ, ಗೃಧ್ರಸಿ ಎಂಬ ವಾತ ರೋಗ, ಪ್ಲೀಹಾಭಿವೃದ್ಧಿ, ಶೋಷ, ಮೇಹರೋಗ, ದಂಡಾಪತಾನಕವೆಂಬ ವಾತ ರೋಗ, ಮೈಯ್ಯುರಿಯಿಂದ ಕೂಡಿದ ವಾತರಕ್ತರೋಗ, ವಾತಪಿತ್ತರೋಗ, ಅರ್ದಿತವೆಂಬ ವಾಯು, ಪ್ರದರ, ಹೊಟ್ಟೆಯುಬ್ಬರ, ರಕ್ತಪಿತ್ತ, ಈ ರೋಗಗಳೆಲ್ಲಾ ಗುಣವಾಗುತ್ತವೆ, ಇದಕ್ಕೆ ಶತಾವರೀ ತೈಲವೆಂದು ಹೆಸರು ಕೃಷ್ಣಾತ್ರೇಯ ರೆಂಬವರು ಇದನ್ನು ಹೇಳಿದರು "ಓಂ ನಾರಾಯಣೀಯೇಸ್ವಾಹಾ । ಓಂ ಸರ್ವ ವ್ಯಾಧಿನಾಶಿನ್ಯೈಸ್ವಾಹಾ" ಎಂಬ ಮಂತ್ರಗಳಿಂದ ಉತ್ತರ ಮುಖವಾಗಿ ಕಗ್ಗ ಲಿಯ ಗೂಟದಿಂದ ಬಗೆದು ಈ ಮೂಲಿಕೆಯನ್ನು ಕೀಳುವುದು, ಬಂಜೆಯರಾದ ವರು "ಓಂ ಕುಮಾರಜೀವನೀಯೇಸ್ವಾಹಾ" ಎಂಬ ಮಂತ್ರದಿಂದ ಈ ತೈಲ ವನ್ನು ಕುಡಿಯಬೇಕು.

ಕಾಸೀಸಂಲಾಂಗಲೀಕುಷ್ಠಂಶುಂಠೀಕೃಷ್ಣಾಚಸೈಂಧವಂ ॥ ೧೪೧ ॥
ಮನಶ್ಶಿಲಾಶ್ವಮಾರಶ್ಚವಿಡಂಗಂಚಿತ್ರಕೋದ್ರುಮಃ ॥
ದಂತೀಕೋಶಾತಕೀಬೀಜಂಹೇಮಾಹ್ವಾಹರಿತಾಲಕಂ ॥ ೧೪೨ ॥
ಕಲ್ಕೈಃಕರ್ಷಮಿತೈರೇತೈಸ್ತೈಲಪ್ರಸ್ಥಂವಿಪಾಚಯೇತ್ ॥
ಸ್ನುಹ್ಯರ್ಕಪಯಸೀದದ್ಯಾತ್ಪೃಥಗ್ದ್ವಿಪಲಸಂಮಿತೇ ॥ ೧೪೩ ॥
ಚತುರ್ಗುಣಂಗವಾಂಮೂತ್ರಂದತ್ವಾಸಮ್ಯಕ್ಪ್ರಸಾಧಯೇತ್ ॥
ಕಥಿತಂಖರನಾದೇನತೈಲಮರ್ಶೋವಿನಾಶನಂ ॥ ೧೪೪ ॥
ಕ್ಷಾರವತ್ಪಾತಯತ್ಯೇತದರ್ಶಾಂಸ್ಯಭ್ಯಂಗತೋಭೃಶಂ ॥
ವಲೀಂನದೂಷಯತ್ಯೇತತ್‌ಕ್ಷಾರಕರ್ಮಕರಂಸ್ಮೃತಂ ॥ ೧೪೫ ॥

ಕಾಸೀಸಾದಿತೈಲ—ಕಾಸೀಸವೆಂದರೆ ಅನ್ನಭೇದಿ, ಲಾಂಗಲಿ ಎಂದರೆ ಕೋಳಿ ಕುಕ್ಕನ ಗೆಡ್ಡೆ, (ವಿಷ) ಚಂಗಲಕೋಷ್ಟ, ಶುಂಠಿ, ಹಿಪ್ಪಲಿ, ಸೈಂಧವಲವಣ, ಮಣಿಶಿಲೆ, ಕಣಿಗಲಬೇರು, ವಾಯುವಿಡಂಗ, ಚಿತ್ರಮೂಲ, ಕೊಡಸದಚಕ್ಕೆ, ಜಾಪಾಳದಬೀಜ, ಕಹಿಹೀರೆಯಬೀಜ, ಸ್ವರ್ಣಕ್ಷೀರೀ ಎಂಬ ಸ್ನುಹೀಕಳ್ಳಿಯ ಭೇದ, ಅರಿದಳ, ಇವು ಪ್ರತಿಯೊಂದೂ ಒಂದೊಂದು ಕರ್ಷದಷ್ಟು ಸೇರಿಸಿ ಕಲ್ಕ ಮಾಡಿ ಒಂದು ಪ್ರಸ್ಥ ತೈಲದ (ಎಳ್ಳೆಣ್ಣೆ) ಜೊತೆಗೆ ಬೆರಸಿ ಎರಡು ಪಲ ಕಳ್ಳಿಯ ಹಾಲು ಎರಡು ಪಲ ಯಕ್ಕದ ಹಾಲು ಇವುಗಳನ್ನು ಸೇರಿಸಿ ಎಣ್ಣೆಯ ನಾಲ್ಕರಷ್ಟು

ಗೋಮೂತ್ರವನ್ನೂ ಸೇರಿಸಿ ಕಾಯಿಸಿ ಇರಿಸಿಕೊಳ್ಳುವುದು. ಈ ತೈಲವು ಖರನಾದನೆಂಬ ಮಹಾತ್ಮನಿಂದ ತನ್ನ ಹೆಸರಿನ ವೈದ್ಯಕಸಂಹಿತೆಯಲ್ಲಿ ಮೂಲವ್ಯಾಧಿ ರೋಗ ನಾಶಕವೆಂದು ಹೇಳಲ್ಪಟ್ಟಿದೆ ಮೂಲವ್ಯಾಧಿಯ ಮೊಳೆಗಳನ್ನು ಸವರಿದ ಮಾತ್ರದಿಂದಲೇ ಕೆಳಕ್ಕೆ ಕೆಡವುತ್ತದೆ, ಆದರೆ ಗುದದ್ವಾರದಲ್ಲಿ ಗಾಯ ಮೊದಲಾದ ಯಾವ ತೊಂದರೆಯೂ ಮಾಡದೆ ಕ್ಷಾರವು ಮಾಡುವ ಕೆಲಸವನ್ನು ಮಾಡುತ್ತದೆ.

ಮಂಜಿಷ್ಠಾಸಾರಿಬಾಸರ್ಜಯಷ್ಟೀಸಿಕ್ಥೈಃಪಲೋನ್ಮಿತೈಃ ॥
ಪಿಂಡಾಖ್ಯಂಸಾಧಯೇತ್ತೈಲಮಭ್ಯಂಗಾದ್ವಾತರಕ್ತನುತ್ ॥೧೪೬॥

ಪಿಂಡತೈಲ—ಮಂಜಿಷ್ಠೆ, ಬಿಳಿ ಮತ್ತು ಕಪ್ಪು ಸೊಗದೆಯಬೇರು, ರಾಳ, ಜ್ಯೇಷ್ಟಮಧು, ಜೇನುಮೇಣ, ಈ ದ್ರವ್ಯಗಳನ್ನು ತಕ್ಕಷ್ಟು ಸೇರಿಸಿ ಕಲ್ಕವಮಾಡಿ ಹರಳೆಣ್ಣೆಯೊಡನೆ ಬೆರಸಿ ತೈಲಪಾಕ ಕ್ರಮದಲ್ಲಿ ಕಾಯಿಸಿ ಪಕ್ವವಾದ ಮೇಲೆ ಇಳಿಸಿ ಇರಿಸಿಕೊಂಡು ಅಭ್ಯಂಗಮಾಡಿಕೊಳ್ಳೋಣದರಿಂದ ವಾತರಕ್ತವೆಂಬ ಒಂದು ಬಗೆಯ ರೋಗ (ತಾಳಕಜ್ಜಿಯಂತೆ) ವು ಗುಣಪಡುತ್ತದೆ.

ಅರ್ಕಪತ್ರರಸೇಪಕ್ವಂಹರಿದ್ರಾಕಲ್ಕಸಂಯುತಂ ॥
ನಾಶಯೇತ್ಸಾರ್ಷಪಂತೈಲಂಪಾಮಾಂಕಚ್ಛೂಂವಿಚರ್ಚಿಕಾಂ ೧೪೭

ಅರ್ಕತೈಲ—ಯಕ್ಕದ ಎಲೆಯ ರಸ, ಅರಿಸಿನದ ಕಲ್ಕ, ಇವುಗಳನ್ನು ಸಾಸುವೆಯ ಎಣ್ಣೆಯೊಂದಿಗೆ ಸೇರಿಸಿ ಚನ್ನಾಗಿ ಕಾಯಿಸಿ ಹಚ್ಚುವುದರಿಂದ ಮೈನವೆ, ತುರಿ, ಕಜ್ಜಿ, ಮೊದಲಾದ ಚರ್ಮರೋಗಗಳಲ್ಲವೂ ಗುಣವಾಗುತ್ತವೆ.

ಮರಿಚಂಹರಿತಾಳಂಚತ್ರಿವೃತಂರಕ್ತಚಂದನಂ ॥
ಮುಸ್ತಂಮನಶ್ಶಿಲಾಮಾಂಸೀದ್ವೇನಿಶೇದೇವದಾರುಚ ॥೧೪೮॥
ವಿಶಾಲಾಕರವೀರಂಚಕುಷ್ಠಮರ್ಕಪಯಸ್ತಥಾ ॥
ತಥೈವಗೋಮಯರಸಂಕುರ್ಯಾತ್ಕರ್ಷಮಿತಾನ್ಪೃಥಕ್ ॥೧೪೯॥
ವಿಷಂಚಾರ್ಧಪಲಂದೇಯಂಪ್ರಸ್ಥಂಚಕಟುತೈಲಕಂ ॥
ಗೋಮೂತ್ರಂದ್ವಿಗುಣಂದದ್ಯಾಜ್ಜಲಂಚದ್ವಿಗುಣಂಭವೇತ್॥೧೫೦॥
ಮರಿಚಾದ್ಯಮಿದಂತೈಲಂಸಿದ್ಧಂಕುಷ್ಠವ್ರಣಾಪಹಂ ॥
ಜಯೇತ್ಕುಷ್ಠಾನಿಸರ್ವಾಣಿಪುಂಡರೀಕಂವಿಚರ್ಚಿಕಾಂ ॥೧೫೧॥
ಪಾಮಾಂಶ್ವಿತ್ರಾಣಿರಕ್ತಂಚಕಂಡೂಂಕಚ್ಛೂಂಪ್ರಣಾಶಯೇತ್ ॥

ಮರಿಚಾದಿತೈಲ—ಮೆಣಸು, ಅರಿದಳ, ತಿಗಡೆ, ಕೆಂಪುಚಂದನ, ಭದ್ರಮುಸೆ ಮಣಿಶಿಲೆ, ಜಟಾಮಾಂಸಿ, ಅರಿಸಿನ, ಮರಅರಿಸಿನ, ದೇವದಾರು, ಕಾಡು

ಕವಡೆಯಕಾಯಿ, ಕಣಿಗಲಬೇರು, ಚಂಗಲಕೋಷ್ಟ, ಯಕ್ಕದ ಹಾಲು, ಸಗಣಿಯನ್ನು ಬಟ್ಟೆಯಲ್ಲಿ ಹಾಕಿ ಹಿಂಡಿದ ನೀರು, ಇವುಗಳು ಪ್ರತ್ಯೇಕ ಒಂದೊಂದು ಕರ್ಷ ಪರಿಮಾಣ, ವತ್ಸನಾಭಿ ಅಥವಾ ಲಾಂಗಲ ಎಂಬ ವಿಷವರ್ಗಕ್ಕೆ ಸೇರಿದ ಮೂಲಿಕೆ ಅರ್ಧಪಲ, ಒಂದು ಪ್ರಸ್ಥ ಸಾಸುವೆಯ ಎಣ್ಣೆ, ಎಣ್ಣೆಯ ಎರಡರಷ್ಟು ಗಂಜಳ, ಗಂಜಳದಷ್ಟು ನೀರು, ಇವುಗಳನ್ನೆಲ್ಲಾ ಒಟ್ಟುಗೂಡಿಸಿ ತೈಲಪಾಕ ವಿಧಾನದಿಂದ ಪಕ್ವಮಾಡಿ ಹಚ್ಚಿಸುತ್ತ ಬಂದಲ್ಲಿ ಪುಂಡರೀಕ ಮೊದಲಾದ ಎಲ್ಲಾ ಕುಷ್ಠರೋಗಗಳು, ನವೆ, ಕಜ್ಜಿ, ತುರಿ, ಚಿತ್ರವೆಂದರೆ ಬಿಳೀ ತೊನ್ನು ಇವುಗಳೆಲ್ಲವೂ ಗುಣವಾಗುತ್ತವೆ.

ತ್ರಿಫಲಾರಿಷ್ಟಭೂನಿಂಬಂದ್ವೇನಿಶೇರಕ್ತಚಂದನಂ ॥ ೧೫೨ ॥
ಏತೈಸ್ಸಿದ್ಧಮರೂಂಷೀಣಾಂತ್ಯೈಲಮಭ್ಯಂಜನೇಹಿತಂ ॥

ತ್ರಿಫಲಾದಿತ್ಯೈಲ—ತ್ರಿಫಲ, ಬೇವಿನಚಕ್ಕೆ, ಚಿರಾಯಿತ, ಅರಿಸಿನ, ಮರಅರಿಸಿನ, ರಕ್ತಚಂದನ ಇವುಗಳ ಕಲ್ಕವನ್ನು ಮಾಡಿ ತಯಾರಿಸಿದ ತೈಲವು ಅರುಂಷಿಕ ಎಂಬ ಚರ್ಮರೋಗದಲ್ಲಿ ಅಭ್ಯಂಗಕ್ಕೆ ಅತ್ಯುಪಯುಕ್ತವಾದದ್ದು. ಕಷಾಯವನ್ನು ಹೇಳಲಿಲ್ಲವಾದ್ದರಿಂದ ಇಂತಹ ಸ್ಥಳದಲ್ಲಿ ಚನ್ನಾಗಿ ಪಕ್ವವಾಗುವುದಕ್ಕಾಗಿ ತೈಲದ ನಾಲ್ಕರಷ್ಟು ನೀರನ್ನೂ ಹಾಕಬೇಕು.

ಭಾವಯೇನ್ನಿಂಬಬೀಜಾನಿಭೃಂಗರಾಜರಸೇನಹಿ ॥ ೧೫೩ ॥
ತಥಾಸನಸ್ಯತೋಯೇನತತ್ತೈಲಂಪಂತಿನಸ್ಯತಃ ॥
ಅಕಾಲಪಲಿತಂಸದ್ಯಃಪುಂಸಾಂದುಗ್ಧಾನ್ನಭೋಜಿನಾಂ ॥ ೧೫೪ ॥

ಬೇವಿನ ಬೀಜಗಳನ್ನಾರಿಸಿ ತಂದು ಗರುಗದ ಸೊಪ್ಪಿನ ರಸದಲ್ಲಿ ಭಾವನೆ ಕೊಟ್ಟು, ನಂತರ ಅಸನವೆಂದರೆ ಒಂದು ಜಾತಿಯ ರಾಳದ ಗಿಡದ ಚಕ್ಕೆಯ ಕಷಾಯವಮಾಡಿ ಅದರಲ್ಲಿಯೂ ಭಾವನೆಕೊಟ್ಟು, ಆ ಮೇಲೆ ಆ ಬೀಜಗಳನ್ನೊಣಗಿಸಿ ಗಾಣಕ್ಕೆ ಕೊಟ್ಟು ತೈಲವನ್ನು ತೆಗೆದು ಆ ತೈಲವನ್ನು ನಸ್ಯದಂತೆ ಪ್ರತಿ ದಿವಸವೂ ಮೂಗಿಗೆ ಸೇದುತ್ತ ಹಾಲನ್ನ ಭೋಜನ ಮಾಡುತ್ತ ಬಂದಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಕೂದಲು ಬೆಳ್ಳಗಾದ ಅಕಾಲ ನರೆಯು ಗುಣವಾಗಿ ಪುನಃ ಕೂದಲುಗಳು ಕಪ್ಪಾಗುತ್ತವೆ.

ಯಷ್ಟೀಮಧುಕಕ್ಷಾರಾಭ್ಯಾಂನವಧಾತ್ರೀಫಲೈಶ್ಶೃತಂ ॥
ತೈಲಂನಸ್ಯಕೃತಂಕುರ್ಯಾತ್ ಕೇಶಶ್ಮಶ್ರೂಣಿಸಂಘಶಃ ॥ ೧೫೫ ॥

ಯಷ್ಟಿಮಧುತೈಲ—ಜ್ಯೇಷ್ಟಮಧು, ಯವಕ್ಷಾರ, ಹೊಸ ನೆಲ್ಲಿಯಕಾಯಿ ರಸ, ಅಂದರೆ ಹೊಸದಾದ ನೆಲ್ಲಿಯಕಾಯಿನ ರಸವನ್ನು ಎಣ್ಣೆಯ ನಾಲ್ಕರಷ್ಟು

ಕಾಯಲಿರಿಸಿ ಅದಕ್ಕೆ ಎಣ್ಣೆಯನ್ನು ಸೇರಿಸಿ ಜ್ಯೇಷ್ಠಮಧು ಮತ್ತು ಯವಕ್ಷಾರಗಳ ಕಲ್ಕವನ್ನೂ ಸೇರಿಸಿ ತೈಲವನ್ನು ಪಕ್ವಮಾಡಿಕೊಂಡು ನಸ್ಯದಂತೆ ಸೇದುತ್ತ ಬಂದರೆ ಕೂದಲು ಮತ್ತು ಮೀಸೆಗಳು ಬಹಳ ಚನ್ನಾಗಿ ಬೆಳೆಯುತ್ತವೆ.

ಕರಂಜಶ್ಚಿತ್ರಕೋಜಾತೀಕರವೀರಶ್ಚಪಾಚಿತಂ ||
ತೈಲಮೇಭಿರ್ದ್ರುತಂಹನ್ಯಾದಭ್ಯಂಗಾದಿಂದ್ರಲುಪ್ತಕಂ || ೧೫೬ ||

ಹೊಂಗೆಯ ಬೀಜ, ಚಿತ್ರಮೂಲದ ಬೇರು, ಜಾಜಿಯಸೊಪ್ಪು, ಕಣಗಲ ಬೇರು, ಇವುಗಳ ಕಲ್ಕವನ್ನು ಮಾಡಿ ತೈಲದೊಡನೆ ಸೇರಿಸಿ ನೀರನ್ನೂ ಸೇರಿಸಿ ಪಕ್ವಮಾಡಿ ಇಳಿಸಿಕೊಂಡು ತಲೆಗೆ ಹಚ್ಚಿ ಸ್ನಾನಮಾಡುತ್ತ ಬಂದರೆ ಇಂದ್ರಲುಪ್ತ ವೆಂಬ ಕೂದಲು ಉದರುವರೋಗವು ನಿವಾರಣೆಯಾಗುತ್ತದೆ.

ನೀಲಿಕಾಕೇತಕೀಕಂದಂಭೃಂಗರಾಜಃಕುರಂಟಕಃ ||
ತಥಾರ್ಜುನಸ್ಯಪುಷ್ಪಾಣಿಬೀಜಕಾತ್ಕುಸುಮಾನ್ಯಪಿ || ೧೫೭ ||
ಕೃಷ್ಣಾಸ್ತಿಲಾಶ್ಚತಗರಂಸಮೂಲಂಕಮಲಂತಥಾ ||
ಅಯೋರಜಃಪ್ರಿಯಂಗುಶ್ಚದಾಡಿಮತ್ವಗ್ಗುಡೂಚಿಕಾ || ೧೫೮ ||
ತ್ರಿಫಲಾಪದ್ಮಪಂಕಶ್ಚಕಲ್ಕೈರೇಭಿಃಪೃಥಕ್ಪೃಥಕ್ ||
ಕರ್ಷಮಾತ್ರೈಃಪಚೇತ್ತೈಲಂತ್ರಿಫಲಾಕ್ವಾಥಸಂಯುತಂ || ೧೫೯ ||
ಭೃಂಗರಾಜರಸೇನೈವಸಿದ್ಧಂಕೇಶಸ್ಥಿರೀಕೃತಂ ||
ಅಕಾಲಪಲಿತಂಹಂತಿದಾರುಣಂಚೋಪಜಿಹ್ವಿಕಾಂ || ೧೬೦ ||

ವಜ್ರನೀಲಿಗಿಡದ ಎಲೆಗಳು, ಕೇದಿಗೇಗೆಡ್ಡೆ, ಗರಗದಸೊಪ್ಪು, ಗೋರಂಟೆ ಯಸೊಪ್ಪು, ಮತ್ತಿಯಹೂವು, ಮಾದಳದಹೂವು, ಕರಿಯಎಳ್ಳು, ಗ್ರಂಥಿತಗರ ಕಮಲದಗಡ್ಡೆ ಮತ್ತು ಹುವ್ವು, ಕಬ್ಬಿಣದ ಪುಡಿ, ಪ್ರಿಯಂಗು ಎಂಬ ಮೂಲಿ ಕೆಯ ಫಲಗಳು, ದಾಳಿಂಬದಚಕ್ಕೆ, ಅಮೃತಬಳ್ಳಿ, ತ್ರಿಫಲ, ತಾವರೆಯ ಗೆಡ್ಡೆಯ ಬುಡದಲ್ಲಿರುವ ಮಣ್ಣು, ಇವು ಪ್ರತಿಯೊಂದೂ ಒಂದೊಂದು ಕರ್ಷದಷ್ಟು ಸಂಗ್ರ ಹಿಸಿ ಕಲ್ಕಮಾಡಿ ತ್ರಿಫಲಾ ಕಷಾಯವನ್ನೂ ಸೇರಿಸಿ ಗರುಗದಸೊಪ್ಪಿನ ಸ್ವರಸ ವನ್ನೂ ಸೇರಿಸಿ ಇವುಗಳ ಜೊತೆಯಲ್ಲಿ ಎಣ್ಣೆಯನ್ನು ಸೇರಿಸಿ ಪಕ್ವವಾಗಿ ಕಾಯಿಸಿ ಕೊಂಡು ತಲೆಗೆ ಹಚ್ಚುತ್ತ ಬಂದಲ್ಲಿ ಕೂದಲು ಉದುರುವುದು ನಿಂತುಹೋಗಿ ಕೂದಲು ಬೆಳ್ಳಗಾಗುವುದೂ ನಿಲ್ಲುತ್ತದೆ.

ಭೃಂಗರಾಜರಸೇನೈವಲೋಹಕಿಟ್ಟಂಫಲತ್ರಿಕಂ ||
ಸಾರಿಬಾಂಚಪಚೇತ್ಕಲ್ಕೈಸ್ತೈಲಂದಾರುಣನಾಶನಂ || ೧೬೧ ||
ಅಕಾಲಪಲಿತಂಕಂಡೂಮಿಂದ್ರಲುಪ್ತಂಚನಾಶಯೇತ್ ||

ಭೃಂಗರಾಜತೈಲ—ಗರುಗದ ಸೊಪ್ಪಿನ ರಸ, ಕಬ್ಬಿಣದ ಕಿಟ್ಟ, ತ್ರಿಫಲ, ಸೊಗದೇಬೇರು, ಇವುಗಳ ಕಲ್ಕ ಮತ್ತು ಎಳ್ಳೆಣ್ಣೆ ಇವು ಮೂರನ್ನೂ ಕೂಡಿಸಿ ಚನ್ನಾಗಿ ಕಾಯಿಸಿಕೊಂಡು ತಲೆಗೆ ಹತ್ತಿಸುತ್ತ ಬಂದರೆ ತಲೆಯ ಕೂದಲು ಬೆಳ್ಳಗಾಗುವುದು, ಕೂದಲು ಉದುರುವುದು, ತಲೆಯಲ್ಲಿ ನವೆ ಇವುಗಳೆಲ್ಲಾ ಗುಣವಾಗುತ್ತವೆ

ಇರಿಮೇದತ್ವಚಂಕ್ಷುಣ್ಣಾಂಪಚೇತ್ ಶತಪಲೋನ್ಮಿತಾಂ ॥ ೧೬೨ ॥
ಜಲದ್ರೋಣೇತತಃಕ್ವಾಥಂಗೃಹ್ಣೀಯಾತ್ಪಾದಶೇಷಿತಂ ॥
ತೈಲಸ್ಯಾರ್ಧಾಢಕಂದತ್ವಾಕಲ್ಕೈಃಕರ್ಷಮಿತೈಃಪಚೇತ್ ॥ ೧೬೩ ॥
ಇರಿಮೇದಲವಂಗಾಭ್ಯಾಂಗೈರಿಕಾಗರುಪದ್ಮಕೈಃ ॥
ಮಂಜಿಷ್ಠಾಲೋಧ್ರಮಧುಕೈರ್ಲಾಕ್ಷಾನ್ಯಗ್ರೋಧಮುಸ್ತಕೈಃ ॥
ತ್ವಗ್ಜಾತೀಫಲಕರ್ಪೂರಕಂಕೋಲಖದಿರೈಸ್ತಥಾ ॥
ಪತಂಗಧಾತಕೀಪುಷ್ಪಸೂಕ್ಷ್ಮೈಲಾನಾಗಕೇಶರಂ ॥ ೧೬೪ ॥
ಕಟ್ಫಲೇನಚಸಂಸಿದ್ಧಂತೈಲಂಮುಖರುಜಂಜಯೇತ್ ॥
ಪ್ರದುಷ್ಟಮಾಂಸಂಪಲಿತಂಶೀರ್ಣದಂತಂಚಸೌಷಿರಂ ॥ ೧೬೫ ॥
ಶ್ಯಾವದಂತಂಪ್ರಹರ್ಷಂಚವಿದ್ರಧಿಂಕ್ರಿಮಿದಂತಕಂ ॥
ದಂತಸ್ಫುರಣದೌರ್ಗಂಧ್ಯಂಜಿಹ್ವಾತಾಲ್ವೋಷ್ಠಜಾಂರುಜಾಂ।೧೬೬।

ಇರಿಮೇದಾದಿ ತೈಲ—ದಂತರೋಗ, ಮುಖರೋಗಗಳಿಗೆ, ಇರಿಮೇದವೆಂದರೆ ದುರ್ಗಂಧಯುಕ್ತವಾದ ಕಗ್ಗಲಿಗಿಡ, ಅವರ ಚಕ್ಕೆ ಒಂದು ನೂರು ಪಲದಷ್ಟನ್ನು ಒಂದು ದ್ರೋಣ ಪರಿಮಾಣ ನೀರಿನಲ್ಲಿ ಕಷಾಯ ಕಾಯಿಸಿ ನಾಲ್ಕರಲ್ಲೊಂದು ಭಾಗ ಕಷಾಯವಿಳಿಸಿಕೊಂಡು ಅದರ ಜೊತೆಗೆ ನೂರಇಪ್ಪತ್ತೆಂಟು ತೊಲ ಎಳ್ಳೆಣ್ಣೆಯನ್ನು ಸೇರಿಸಿ ಮತ್ತೆ ಕಾಯುವುದಕ್ಕಿರಿಸುವುದು, ದುರ್ವಾಸನೆಯ ಕಗ್ಗಲಿಗಿಡದ ತೊಪ್ಪೆ ಲವಂಗ, ಕಾವಿಯಕಲ್ಲು, (ಗೈರಿಕಧಾತು) ಅಗಿಲುಗಂಧ, ಪದ್ಮಕಾಷ್ಠ, ಮಂಜಿಷ್ಠ, ಪತಂಗದಚಕ್ಕೆ, ಜ್ಯೇಷ್ಠಮಧು, ಅರಗು, ಆಲದತೊಪ್ಪೆ, ಭದ್ರಮುಸ್ತೆ, ಲವಂಗಪತ್ರೆ, ಜಾಯಿಕಾಯಿ, ಕರ್ಪೂರ, ಗಂಧಮೆಣಸು, ಕಾಚು, ಕೆಂಪುಗಂಧ, ಧಾತ್ರೀಕುಸುಮ, ಸಣ್ಣಏಲಕ್ಕಿ, ನಾಗಕೇಸರಿ, ಕಾಯಿಫಲದಚಕ್ಕೆ. ಈ ದಿನಸುಗಳು ಪ್ರತಿಯೊಂದನ್ನೂ ಒಂದೊಂದು ಕರ್ಷ ಪ್ರಮಾಣದಷ್ಟು ಕೂಡಿಸಿ ಕಲ್ಕಮಾಡಿ ಕಾಯುತ್ತಿರುವ ತೈಲದೊಡನೆ ಸೇರಿಸಿ ತೈಲಪಾಕಕ್ರಮದಿಂದ ಪಕ್ವಮಾಡಿ ಇರಿಸಿಕೊಳ್ಳುವುದು ಈ ತೈಲವನ್ನು ಎಲ್ಲಾ ಮುಖರೋಗಗಳಿಗೂ ಉಪಯೋಗಿಸಬಹುದು, ಬಾಯೊಳಗೆ ವಸಡಿನ ಮಾಂಸ ಕೆಟ್ಟುಹೋಗಿರುವುದು, ಹಲ್ಲು ಅಲ್ಲಾಡುವುದು, ಹುಳುಹತ್ತಿ ಹಲ್ಲು ಕೊರೆದು ಹೋಗಿರುವುದು, ಹಲ್ಲಿನ

ಬಣ್ಣ ಕೆಟ್ಟುಹೋಗಿರುವುದು, ಹಲ್ಲು ಚುಯ್‌ಗುಟ್ಟುವುದು (ದಂತಹರ್ಷ), ವಸಡಿನ ಮೇಲೆ ಏಳತಕ್ಕ ದಂತದ ಹುಣ್ಣು, ಹಲ್ಲಿನಲ್ಲಿ ಹುಳಸೇರಿ ತೊಂದರೆ ಪಡಿಸುವುದು, ಬಾಯಿನಲ್ಲಿ ಹಲ್ಲಿನಲ್ಲಿ ಸಹಾ ದುರ್ವಾಸನೆ ಬರುವುದು, ನಾಲಿಗೆ, ದವಡೆ, ತುಟಿ, ಇವುಗಳಲ್ಲಿ ಸಂಭವಿಸುವ ವ್ರಣಗಳು ಇವುಗಳೆಲ್ಲಾ ಈ ತೈಲವನ್ನು ಹಚ್ಚೋಣದರಿಂದ ನಿವಾರಣೆಯಾಗುತ್ತವೆ.

ಜಾತೀನಿಂಬಪಟೋಲಾನಾಂನಕ್ತಮಾಲಸ್ಯಪಲ್ಲವಾಃ ॥
ಸಿಕ್ಥಂಸಮಧುಕಂಕುಷ್ಠಂದ್ವೇನಿಶೇಕಟುರೋಹಿಣೀ ॥ ೧೬೮ ॥
ಮಂಜಿಷ್ಠಾಪದ್ಮಕಂಲೋಧ್ರಮುಭಯಾನೀಲಮುತ್ಪಲಂ ॥
ತುತ್ಥಕಂಸಾರಿಬಾಬೀಜಂನಕ್ತಮಾಲಸ್ಯದಾಪಯೇತ್ ॥ ೧೬೯ ॥
ಏತಾನಿಸಮಭಾಗಾನಿಪಿಷ್ಟ್ವಾತೈಲಂವಿಪಾಚಯೇತ್ ॥
ನಾಡೀವ್ರಣೇಸಮುತ್ಪನ್ನೇಸ್ಫೋಟಿಕೇಕಚ್ಛರೋಗಿಷು ॥ ೧೭೦ ॥
ಸದ್ಯಶ್ಶಸ್ತ್ರಪ್ರಹಾರೇಷುದಗ್ಧವಿದ್ಧೇಷುಚೈವಹಿ ॥
ನಖದಂತಕ್ಷತೇದೇಹೇವ್ರಣೇದುಷ್ಟೇಪ್ರಶಸ್ಯತೇ ॥ ೧೭೧ ॥

ಜಾತ್ಯಾದಿತೈಲ—ಜಾಯಿಕಾಯಿ, ಬೇವಿನತೊಪ್ಪೆ ಕೈಪಡವಲ, ಹೊಂಗೆಯ ಚಿಗರು, ಜೇನುಮೇಣ, ಜೇನುತುಪ್ಪ, ಕಂಕುಷ್ಠ, ಅರಿಸಿನ, ಮರದರಿಸಿನ, ಕಟುಕರೋಹಿಣಿ, ಮಂಜಿಷ್ಠೆ, ಪದ್ಮಕಾಷ್ಠ, ಪತಂಗದಚಕ್ಕೆ, ಅಳಲೆಯಕಾಯಿ, ನೀಲವರ್ಣದ ತಾವರೆ, ಮೈಲುತುತ್ತ, ನಾಗದೆಯಬೇರು, ಹೊಂಗೆಯಬೀಜ, ಇವುಗಳೆಲ್ಲವನ್ನೂ ಸಮಪ್ರಮಾಣದಲ್ಲಿ ಸೇರಿಸಿ ಚನ್ನಾಗಿ ಅರದು ಎಣ್ಣೆಯಲ್ಲಿ ಕದರಿ ಕಾಯಿಸಬೇಕು ಈ ರೀತಿಯಾಗಿ ಕಾಯಿಸಿದ ತೈಲವು ನಾಡಿಹುಣ್ಣುಗಳು, ಬೊಕ್ಕೆಗಳು, ಇಸಬವೆಂಬ ಚರ್ಮರೋಗ, ಆಯುಧಗಳ ಪೆಟ್ಟಿನಿಂದ ಆದ ಗಾಯ, ಸುಟ್ಟ ಗಾಯಗಳು, ಆಕಸ್ಮಿಕವಾದ ಪೆಟ್ಟು, ಉಗುರುಗಾಯ, ಹಲ್ಲಿನಿಂದಾದ ಗಾಯ, ಇನ್ನೂ ಅಸಹ್ಯಕರಗವಾದ ಎಲ್ಲಾ ಬಗೆಯ ಗಾಯಗಳು ಇವುಗಳಲ್ಲಿ ಉಪಯೋಗವಾಗುತ್ತದ

ಹಿಂಗುತುಂಬುರುಶುಂಠೀಭಿಃಕಟುತೈಲಂವಿಪಾಚಯೇತ್ ॥
ತಸ್ಯಪೂರಣಮಾತ್ರೇಣಕರ್ಣಶೂಲಂಪ್ರಣಶ್ಯತಿ ॥ ೧೭೨ ॥

ಹಿಂಗ್ವಾದಿತೈಲ—ಇಂಗು, ತುಂಬುರವೆಂಬದಾಗಿ ಸ್ವನಾಮ ಪ್ರಸಿದ್ಧವಾದ ಮೂಲಿಕೆ, ಶುಂಠಿ, ಈ ವಸ್ತುಗಳು ಪ್ರತಿಯೊಂದನ್ನೂ ಸಮಪ್ರಮಾಣದಲ್ಲಿ ಸೇರಿಸಿ ಆಡಿನ ಮೂತ್ರದಲ್ಲಿ ಕಲ್ಕಮಾಡಿಕೊಂಡು, ಕಟುತೈಲವೆಂದರೆ ಸಾಸುವೆಯ ಎಣ್ಣೆಯೊಡನೆ ಕೂಡಿಸಿ ತೈಲವನ್ನು ಕಾಯಿಸಿ ಇರಿಸಿಕೊಂಡು, ಆ ತೈಲವನ್ನು

ನಿಯಮಿತವಾದ ಹೊತ್ತಿನವರೆಗೆ ಕಿವಿಯಲ್ಲಿ ತುಂಬಿ ನಿಲ್ಲಿಸಿಕೊಳ್ಳೋಣದರಿಂದ ಕಿವಿ ಇರತ ಕಿವಿಶೂಲೆ ಇವುಗಳೆಲ್ಲವೂ ಗುಣವಾಗುತ್ತವೆ.

**ಬಾಲಬಿಲ್ವಾನಿಗೋಮೂತ್ರೇಪಿಷ್ಟ್ವಾತೈಲಂವಿಪಾಚಯೇತ್ ॥**
**ಸಾಜಕ್ಷೀರಂಚನೀರಂಚಬಾಧಿರ್ಯಂಹಂತಿಪೂರಣಾತ್ ॥ ೧೭೩ ॥**

ಬಿಲ್ವಾದಿತೈಲ—ಎಳೆಯವಾದ ಬಿಲ್ವದ ಕಾಯಿಗಳನ್ನು ಗೋಮೂತ್ರದಲ್ಲಿ ಅರದು ಎಣ್ಣೆಯಲ್ಲಿ ಕದಡಿ ಆಡಿನ ಹಾಲನ್ನೂ ತೈಲಪಾಕಕ್ಕೆ ಸಾಕಾಗುವಷ್ಟು ನೀರನ್ನೂ ಸೇರಿಸಿ ಪಕ್ವಮಾಡಿ ಇರಿಸಿಕೊಂಡು ಕಿವಿಗೆ ಹಾಕುತ್ತ ಬರುವುದರಿಂದ ಕಿವಿ ಕೇಳದಿರೋಣವು ಗುಣವಾಗುತ್ತದೆ, ಇಲ್ಲಿಯೂ ಸಾಸುವೆಯ ಎಣ್ಣೆಯನ್ನೇ ಉಪಯೋಗಿಸಬೇಕು.

**ಬಾಲಮೂಲಕಶುಂಗಾನಾಂಕ್ಷಾರಃಕ್ಷಾರಯುಗಂತಥಾ ॥**
**ಲವಣಾನಿಚಪಂಚೈವಹಿಂಗುಶಿಗ್ರುಮಹೌಷಧಂ ॥ ೧೭೪ ॥**
**ದೇವದಾರುವಚಾಕುಷ್ಠಂಶತಪುಷ್ಪಾರಸಾಂಜನಂ ॥**
**ಗ್ರಂಥಿಕಂಭದ್ರಮುಸ್ತಂಚಕಲ್ಕೈಃಕರ್ಷಮಿತೈಃಪೃಥಕ್ ॥ ೧೭೫ ॥**
**ತೈಲಪ್ರಸ್ಥಂಚವಿಪಚೇತ್ಕದಳೀಬೀಜಪೂರಯೋಃ ॥**
**ರಸಾಭ್ಯಾಂಮಧುಸೂಕ್ತೇನಚಾತುರ್ಗುಣ್ಯಮಿತೇನಚ ॥ ೧೭೬ ॥**
**ಪೂಯಸ್ರಾವಂಕರ್ಣನಾದಂಶೂಲಂಬಧಿರತಾಂಕ್ರಿಮೀನ್ ॥**
**ಅನ್ಯಾಂಶ್ಚಕರ್ಣಜಾನ್ರೋಗಾನ್ಮುಖರೋಗಾಂಶ್ಚನಾಶಯೇತ್ ॥ ೧೭೭ ॥**

ಕ್ಷಾರತೈಲ—ಎಳೆಯದಾದ ಮೂಲಂಗಿಯನ್ನು ತಂದು ಅದರಿಂದ ತಯಾರು ಮಾಡಿಕೊಂಡ ಕ್ಷಾರ, ಯವಕ್ಷಾರ, ಸರ್ಜಕ್ಷಾರ, ಪಂಚಲವಣಗಳು, (ಸೈಂಧವ, ಸೌವರ್ಚ, ಬಿಡ, ಸಮುದ್ರ, ಚೌಳುಪ್ಪು) ಇಂಗು, ನುಗ್ಗೆಯಬೇರಿನ ರಸ, ಶುಂಠಿ, ದೇವದಾರೀಚಕ್ಕೆ, ಬಜೆ, ಚಂಗಲಕೋಷ್ಠ, ಸಬಸಿಗೆ, ರಸಾಂಜನ, ಗ್ರಂಥಿತಗರ, ಭದ್ರಮುಸ್ತೆ, ಇವು ಪ್ರತಿಯೊಂದನ್ನೂ ಒಂದೊಂದು ಕರ್ಷ ಪರಿಮಾಣ ಸೇರಿಸಿ ಕಲ್ಕ ಮಾಡಿಕೊಂಡು ಹದಿನಾರು ಪಲ ಸಾಸುವೆಯ ಎಣ್ಣೆಯಲ್ಲಿ ಸೇರಿಸಿ ಕದರಿ, ಎಣ್ಣೆಯ ನಾಲ್ಕರಷ್ಟು ಬಾಳೆಯಗಿಡದ ರಸ, ಮಾದಳದ ಹಣ್ಣಿನ ರಸ, ಮುಂದಿನ ಶ್ಲೋಕಗಳಲ್ಲಿ ಹೇಳಲ್ಪಡುವ ಮಧುಶುಕ್ತವೆಂಬ ದ್ರವ ಇವುಗಳನ್ನು ಕೂಡಿಸಿ ತೈಲವನ್ನು ಪಕ್ವವಾಗಿ ಕಾಯಿಸಿ ಇರಿಸಿಕೊಳ್ಳುವುದು. ಈ ತೈಲವನ್ನು ಕಿವಿಯಲ್ಲಿ ಸುರಿಯೋಣದರಿಂದ ಕಿವಿಯಲ್ಲಿ ಕೀವು ಸೋರುವುದು, ಯಾವಾಗ್ಯೂ ಕಿವಿಯಲ್ಲಿ ಭೋರೆಂಬ ಶಬ್ದವಾಗುತ್ತಿರುವುದು, ಕಿವಿಶೂಲೆ, ಕಿವಡು, ಕಿವಿಯಲ್ಲಿ ಕ್ರಿಮಿಗಳು ಸೇರಿ ತೊಂದರೆ ಪಡಿಸುವುದು, ಇನ್ನೂ ನಾನಾ ವಿಧಗಳಾದ ಕರ್ಣರೋಗಗಳು ಮುಖರೋಗಗಳು ಇವುಗಳೆಲ್ಲವನ್ನೂ ಗುಣಪಡಿಸಬಹುದು.

**ಜಂಬೀರಾಣಾಂಫಲರಸಃಪ್ರಸ್ಥೈಕಃಕುಡವೋನ್ಮಿತಂ ॥**
**ಮಾಕ್ಷಿಕಂತತ್ರದಾತವ್ಯಂಪಲ್ಯೈಕಾಪಿಪ್ಪಲೀಸ್ಮೃತಾ ॥ ೧೭೮ ॥**
**ಏತದೇಕೀಕೃತಂಸರ್ವಂಮೃದ್ಭಾಂಡೇ ನಿಧಾಪಯೇತ್ ॥**
**ವಚಾಂಭೋಮಧುಸಂಯುಕ್ತಂಶೃಂ ಬೇರಗುಡಾನ್ವಿತಂ ॥ ೧೭೯ ॥**
**ಧಾನ್ಯರಾಶಿತ್ರಿರಾತ್ರಿಸ್ಥಂಮಧುಶುಕ್ತ ದಾಹೃತಂ ॥**

ಮಧುಶುಕ್ತ ಲಕ್ಷಣವನ್ನು ಹೇಳುತ್ತಾನೆ—ನಿಂಬೆಯ ಹುಳಿ ಅರವತ್ತು ನಾಲ್ಕು ತೊಲ, ಹದಿನಾರು ತೊಲ ಜೇನುತುಪ್ಪ, ಒಂದು ಪಲವೆಂದರೆ ನಾಲ್ಕು ತೊಲ ಹಿಪ್ಪಲಿಯ ಚೂರ್ಣ, ಇವೆಲ್ಲವನ್ನೂ ಒಂದು ಮಣ್ಣಿನ ಮಡಕೆಯಲ್ಲಿ ಕೂಡಿಸಿ ಅದರಲ್ಲಿ ಹಸಿಯ ಬಜೆಯ ರಸ, ಜೇನು ತುಪ್ಪ, ಹಸೀ ಸುಂಟಿಯ ರಸ, ಬೆಲ್ಲ ಇವುಗಳನ್ನೂ ಸೇರಿಸಿ ಧಾನ್ಯದ ರಾಶಿಯಲ್ಲಿ ಮೂರು ದಿವಸ ಹೂಳಿ ಇರಿಸಿದ್ದಲ್ಲಿ ಅಲ್ಲಿಗೆ ಮಧುಶುಕ್ತವು ತಯಾರಾದ ಹಾಗಾಯಿತು

**ಪಾಠಾದ್ವೇಚನಿಶೇಮೂರ್ವಾಪಿಪ್ಪಲೀ ಜಾತಿಪಲ್ಲವೈಃ ॥ ೧೮೦ ॥**
**ದಂತ್ಯಾಚತೈಲಂಸಂಸಿದ್ಧಂನಸ್ಯಂಸ್ಯಾತ್ ಪೂತಿಪೀನಸೇ ॥**

ಪಾಠಾದಿತೈಲ—ಅಗುಳು ಸುಂಟಿ, ಅರಿಶಿನ, ಮರಅರಿಸಿನ, ಕುರಟಿಗನ ಬೇರು, ಹಿಪ್ಪಲಿ, ಜಾಜಿಯ ಚಿಗುರಿನ ರಸ, ನೇಪಾಳದ ಬೀಜ, ಇವುಗಳ ಕಲ್ಕವನ್ನು ಮಾಡಿ ಎಣ್ಣೆಯೊಡನೆ ಸೇರಿಸಿ ಕಾಯಿಸಿ ಮೂಗಿಗೆ ಒಂದೊಂದು ತೊಟ್ಟು ಬಿಡುತ್ತ ಬರೋಣದರಿಂದ ಪೀನಸರೋಗವು ಪರಿಹಾರವಾಗುವುದು.

**ವ್ಯಾಘ್ರೀದಂತೀವಚಾಶಿಗ್ರುತುಲಸೀವ್ಯೋಷಸೈಂಧವೈಃ ॥ ೧೮೧ ॥**
**ಕಫಸ್ಯಪಾಚನಂತೈಲಂಪೂತಿನಾಸಾಗದಾಪಹಂ ॥**

ವ್ಯಾಘ್ರೀತೈಲ— ನೆಲಗುಳ್ಳದ ಬೇರು, ನೇಪಾಳದ ಬೀಜ, ಬಜೆ, ನುಗ್ಗೆಯ ತೊಪ್ಪೆ, ತುಲಸಿ, ವ್ಯೋಷ, (ಶುಂಠಿ, ಹಿಪ್ಪಲಿ, ಮೆಣಸು) ಸೈಂಧವಲವಣ, ಇವುಗಳ ಕಲ್ಕಮಾಡಿ ತೈಲದೊಡನೆ ಕೂಡಿಸಿ ಪಕ್ವಮಾಡಿ ಮೂಗಿಗೆ ಬಿಡುತ್ತ ಬಂದಲ್ಲಿ ಮೂಗಿನಲ್ಲಿ ಸೇರಿರುವ ಸಿಂಬಳವನ್ನು ಹೊರಗೆಡಹಿ ಮೂಗಿನಲ್ಲಿ ನೀರು ಸುರಿಯುವುದು, ದುರ್ವಾಸನೆ ಬರುವುದು ಇವುಗಳನ್ನೆಲ್ಲಾ ನಿಲ್ಲಿಸುತ್ತವೆ.

**ಕುಷ್ಮಂಬಿಲ್ವಕಣಾಶುಂಠೀದ್ರಾಕ್ಷಾಕ ಕಷಾಯವತ್ ॥ ೧೮೨ ॥**
**ಸಾಧಿತಂತೈಲಮಾಜ್ಯಂವಾನಸ್ಯಾತ್ ಘುನಾಶನಂ ॥**

ಕುಷ್ಠಾದಿತೈಲ—ಚಂಗಲಕೋಷ್ಠ, ಬಿಲ್ವಕಾಯಿ, ಹಿಪ್ಪಲಿ, ಶುಂಠಿ, ದ್ರಾಕ್ಷಿ ಇವುಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ಕಷಾಯ ಮಾಡಿಕೊಂಡು

ಆದರೊಡನೆ ತೈಲವನ್ನು ಸೇರಿಸಿ ಇದೇ ಜಿನಸುಗಳ ಕಲ್ಕವನ್ನೂ ಮಾಡಿ ಕೂಡಿಸಿ ತೈಲವನ್ನು ಪಕ್ವವಾಗಿ ಕಾಯಿಸಿಕೊಂಡು ಮೂಗಿಗೆ ಬಿಟ್ಟುಕೊಂಡಲ್ಲಿ ಶೀನು ಬರುವುದು ನಿಲ್ಲುತ್ತದೆ. ಮೇಲೆ ಹೇಳಿದ ರೀತಿಯಲ್ಲಿ ತುಪ್ಪವನ್ನಾದರೂ ತಯಾರಿಸಿಕೊಂಡು ಮೂಗಿಗೆ ಬಿಟ್ಟುಕೊಳ್ಳಬಹುದು

ಗೃಹಧೂಮಕಣಾದಾರುಕ್ಷಾರನಕ್ತಾಹ್ವಸೈಂಧವೈಃ ॥ ೧೮೩ ॥
ಸಿದ್ಧಂಶಿಖರಿಬೀಜೈಶ್ಚತೈಲಂನಾಸಾರ್ಶಸಾಂಹಿತಂ ॥

ಗೃಹಧೂಮತೈಲ—ಇಸ್ಪಿಗ, ಹಿಪ್ಪಲಿ, ದೇವದಾರಿಯಚಕ್ಕೆ, ಯವಕ್ಷಾರ, ಹೊಂಗೆಯ ಬೀಜ, ಸೈಂಧವಲವಣ, ಉತ್ತರಣೆಯಬೀಜ ಇವುಗಳು ಪ್ರತಿಯೊಂದೂ ಸಮಾಂಶ ಸಂಗ್ರಹಿಸಿ ಕಲ್ಕಮಾಡಿ ಎಣ್ಣೆಯ ಜೊತೆಗೆ ಸೇರಿಸಿ ಪಕ್ವವಾಗುವಂತೆ ಕಾಯಿಸಿ ಮೂಗಿಗೆ ಬಿಡುತ್ತ ಬಂದಲ್ಲಿ ಮೂಗಿನಲ್ಲಿ ಬರತಕ್ಕ ಮೂಲವ್ಯಾಧಿಯ ಮೊಳೆಯಂತಹ ಮೊಳೆಯು ಗುಣವಾಗುತ್ತದೆ, ಇದಕ್ಕೆ ನಾಸಾರ್ಶಸ್ಸು ಎಂಬ ಹೆಸರು

ವಜ್ರೀಕ್ಷೀರಂರವಿಕ್ಷೀರಂದ್ರವಂಧತ್ತೂರಚಿತ್ರಜಂ ॥ ೧೮೪ ॥
ಮಹಿಷೀವಿಡ್ಭವಂದ್ರಾವಂಸರ್ವಾಂಶಂತಿಲತೈಲಕಂ ॥
ಪಚೇತ್ತೈಲಾವಶೇಷಂಚಗೋಮೂತ್ರೇಥಚತುರ್ಗುಣೇ ॥ ೧೮೫ ॥
ತೈಲಾವಶೇಷಂಪಕ್ತ್ವಾಚತತ್ತೈಲಂಪ್ರಸ್ಥಮಾತ್ರಕಂ ॥
ಗಂಧಕಾಗ್ನಿಶಿಲಾತಾಲಂವಿಡಂಗಾತಿವಿಷಾವಿಷಂ ॥ ೧೮೬ ॥
ತಿಕ್ತಕೋಶಾತಕೀಕುಷ್ಠವಚಾಮಾಂಸೀಕಟುತ್ರಯಂ ॥
ಹರಿದ್ರಾದಾರುಚಯಷ್ಟ್ಯಾಹ್ವಂಸ್ಪರ್ಜಿಕಾಕ್ಷಾರಜೀರಕಂ ॥ ೧೮೭ ॥
ದೇವದಾರುಚಕರ್ಷಾಂಶಂಚೂರ್ಣಂತೈಲೇವಿನಿಕ್ಷಿಪೇತ್ ॥
ವಜ್ರತೈಲಮಿದಂಖ್ಯಾತಮಭ್ಯಂಗಾತ್ಸರ್ವಕುಷ್ಠನುತ್ ॥ ೧೮೮ ॥

ವಜ್ರತೈಲ—ಕಳ್ಳಿಯಹಾಲು, ಯಕ್ಕದ ಹಾಲು, ಉಮ್ಮತ್ತದ ಸೊಪ್ಪಿನ ರಸ, ಚಿತ್ರಮೂಲದ ರಸ, ಎಮ್ಮೆಯ ಸಗಣಿಯ ರಸ, ಇವುಗಳನ್ನು ಸಮಪ್ರಮಾಣದಿಂದ ಕೂಡಿಸುವದು, ಇವೆಲ್ಲಾ ಕೂಡಿದರೆ ಎಷ್ಟಾಗುತ್ತದೋ ಅಷ್ಟು ಎಳ್ಳೆಣ್ಣೆಯನ್ನೂ ಕೂಡಿಸುವುದು, ಇದರ ನಾಲ್ಕರಷ್ಟು ಗೋಮೂತ್ರವನ್ನು ಸಹ ಸೇರಿಸಿ ಪಕ್ವಮಾಡುವುದು, ತೈಲವು ಪಕ್ವವಾದ ಮೇಲೆ ಇಳಿಸಿಕೊಂಡು ಒಂದು ಪ್ರಸ್ಥ ಪರಿಮಾಣ ತೈಲದಲ್ಲಿ ಗಂಧಕ, ಚಿತ್ರಮೂಲ, ಮಣಿಶಿಲೆ, ಅರಿದಳ, ವಾಯುವಿಡಂಗ, ಅತಿಬಜೆ, ವತ್ಸನಾಭಿ, ಕಹಿಹೀರೆ, ಚಂಗಲಕೋಷ್ಟ, ಬಜೆ, ಜಟಾಮಾಂಸಿ, ತ್ರಿಕಟು (ಶುಂಠಿ, ಹಿಪ್ಪಲಿ, ಮೆಣಸು) ಅರಿಸಿನ, ಜ್ಯೇಷ್ಟಮಧು, ಸರ್ಜ

ಕ್ಷಾರ, ಕಾಳುಜೀರಿಗೆ, ಇವೆಲ್ಲವನ್ನೂ ಒಂದೊಂದು ಕರ್ಷ ಪ್ರಮಾಣ ಸೇರಿಸಿ ಚೂರ್ಣಮಾಡಿ ಆ ತೈಲದಲ್ಲಿ ಸೇರಿಸಿ ಕಲಸಿ ಇರಿಸಿಕೊಳ್ಳತಕ್ಕದ್ದು. ಇದಕ್ಕೆ ವಜ್ರತೈಲವೆಂದು ಹೆಸರು. ಈ ತೈಲದಿಂದ ಅಭ್ಯಂಗ ಮಾಡಿಕೊಂಡರೆ ಸಮಸ್ತವಾದ ಕುಷ್ಟರೋಗಗಳೂ ನಾಶವಾಗುತ್ತವೆ.

ಕರವೀರಶಿಖಾದಂತೀತ್ರಿವೃತ್ಕೋಶಾತಕೀಫಲಂ ॥
ರಂಭಾಕ್ಷಾರೋದಕೇತೈಲಂಪ್ರಶಸ್ತಂಲೋಮಶಾತನಂ ॥ ೧೮೯ ॥

ಕರವೀರತೈಲ—ಕಣಿಗಲಗಿಡದ ಕುಡಿ, ಜಾಪಾಳ, ತಿಗಡೆ, ಕಹಿಹೀರೇಕಾಯಿ, ಇವುಗಳನ್ನು ಕದಳೀ ಕ್ಷಾರದ ನೀರಿನಲ್ಲಿ ಕಲ್ಕಮಾಡಿ ಎಣ್ಣೆಯೊಡನೆ ಸೇರಿಸಿ ಕಾಯಿಸಿ ಹಚ್ಚುತ್ತ ಬಂದರೆ ಅಪಾಯವಿಲ್ಲವಂತೆ ಕೂದಲು ಉದುರಿ ಹೋಗುತ್ತದೆ.

ಚಂದನಾಂಬುನಖೈರ್ಯಷ್ಟ್ಯಾಂಯುಷ್ಟೀಶೈಲೇಯಪದ್ಮಕಂ ॥
ಮಂಜಿಷ್ಠಾಸರಳಂದಾರುಸೇವ್ಯೈಲಂಪೂತಿಕೇಸರಂ ॥ ೧೯೦ ॥
ಪತ್ರಕೈಲಂಮುರಾಮಾಂಸೀಕಂಕೋಲಂವನಿತಾಂಬುದಂ ॥
ಹರಿದ್ರಾಸಾರಿಬಾತಿಕ್ತಾಲವಂಗಾಗರುಕುಂಕುಮಂ ॥ ೧೯೧ ॥
ತ್ವಗ್ರೇಣುನಳಿಕಾಚೇತಿತೈಲಂಮಸ್ತುಚತುರ್ಗುಣಂ ॥
ಲಾಕ್ಷಾರಸಸಮಂಸಿದ್ಧಂಗ್ರಹಘ್ನಂಬಲವರ್ಧನಂ ॥ ೧೯೨ ॥
ಅಪಸ್ಮಾರಜ್ವರೋನ್ಮಾದಕೃತ್ಯಾಲಕ್ಷ್ಮೀವಿನಾಶನಂ ॥
ಆಯುಃಪುಷ್ಟಿಕರಂಚೈವವಶೀಕರಣಮುತ್ತಮಂ ॥ ೧೯೩ ॥
ವಿಶೇಷಾತ್ಕ್ಷಯರೋಗಘ್ನಂರಕ್ತಪಿತ್ತಹರಂಪರಂ ॥

ಚಂದನಾದಿತೈಲ—ಶ್ರೀಗಂಧ, ಭದ್ರಮುಸ್ತೆ, ನಖವೆಂಬ ಸುಗಂಧದ್ರವ್ಯ, ಜ್ಯೇಷ್ಟಮಧು, ಶಿಲಾಪುಷ್ಪ, ಪದ್ಮಕಾಷ್ಠ, ಮಂಜಿಷ್ಠೆ ಧೂಪ, ದೇವದಾರುಚಕ್ಕೆ, ಲಾಮಂಚ, ಯಾಲಕ್ಕಿ, ಪೂತಿಕೇಸರವೆಂದರೆ ಪುನಗು, ತಮಾಲಪತ್ರೆ, ದೊಡ್ಡ ಯಾಲಕ್ಕಿ, ಮುರಾ ಎಂಬ ಸುಗಂಧ ದ್ರವ್ಯ, ಜಟಾಮಾಂಸಿ, ಗಂಧಮೆಣಸು, ಪ್ರಿಯಂಗು ಎಂಬ ಸ್ವನಾಮಪ್ರಸಿದ್ಧವಾದ ವಸ್ತು, ಅಂಬುದವೆಂದರೆ ಅಶ್ಮಂತಕವೆಂಬ ಲೋಕನಾಮ ಪ್ರಸಿದ್ಧವಾದ ವಸ್ತು, ಅರಿಸಿನ, ಸೊಗದೆಯ ಬೇರು, ಕಟುಕರೋಹಿಣಿ, ಲವಂಗ, ಅಗಿಲುಗಂಧ, ಕುಂಕುಮಕೇಸರಿ, ಲವಂಗಚಕ್ಕೆ, ರೇಣುಕ, ಬಿಳಿಯಕಮಲ, ಈ ವಸ್ತುಗಳೆಲ್ಲವನ್ನೂ ಸಮಪರಿಮಾಣದಲ್ಲಿ ಸೇರಿಸಿ ಕಲ್ಕಮಾಡಿಕೊಂಡು, ಅವಲಕ್ಕಿ ಅರಗಿನ ಕಷಾಯ ಮಾಡಿಕೊಂಡು ಇವುಗಳನ್ನು ಎಣ್ಣೆಯೊಡನೆ ಸೇರಿಸಿ ನಾಲ್ಕರಷ್ಟು ಮೊಸರಿನ ತಿಳಿನೀರನ್ನೂ ಕೂಡಿಸಿ ಸುಪಕ್ವ

ವಾಗಿ ಕಾಯಿಸಿ ಇರಿಸಿಕೊಳ್ಳುವುದು, ಇದನ್ನು ಹಚ್ಚಿ ಅಭ್ಯಂಗಮಾಡಿಕೊಳ್ಳುವುದರಿಂದ ಗ್ರಹಬಾಧೆ ನಿವೃತ್ತಿಯಾಗುವುದು, ದೇಹಕ್ಕೆ ಶಕ್ತಿಕೊಡುವದು, ಅಪಸ್ಮಾರ, ಜ್ವರ, ಹುಚ್ಚು, ಮೊದಲಾದ ಅಮಂಗಲರೋಗಗಳೆಲ್ಲಾ ನಿವೃತ್ತಿಯಾಗಿ ಆಯುಸ್ಸು ವೃದ್ಧಿಯಾಗುತ್ತದೆ, ಕ್ಷಯರೋಗಿಗಳಿಗೆ ಅತ್ಯಂತ ಹಿತಕರವಾದದ್ದು, ರಕ್ತಪಿತ್ತರೋಗಿಗಳಿಗೂ ಬಹಳ ಪ್ರಯೋಜನಕರವಾದದ್ದು

ವಚಾಂಶಠೀಂಹರಿದ್ರೇದ್ವೇದೇವದಾರುಮಹೌಷಧೀ ॥ ೧೯೪ ॥
ಹರೀತಕೀಮತಿವಿಷಾಮುಸ್ತಕೇಂದ್ರ್ಯಯವಾನ್ ಸಮಾನ್ ॥
ಏತಾನ್ ದಶಪಲಾನ್ಭಾಗಾಂಶ್ಚತುರ್ದ್ರೋಣೇಂಭಸಃಪಚೇತ್ ೧೯೫
ಚಕ್ರಮರ್ದರಸೈಸ್ತೈಲಂಕಟುಕಂಮೃದುನಾಗ್ನಿನಾ ॥
ಪಾದಶೇಷೇವಿನಿಕ್ಷಿಪ್ಯಸಿಂದೂರಮವತಾರಯೇತ್ ॥ ೧೯೬ ॥
ಏತತ್ತೈಲಂನಿಹಂತ್ಯಾಶುಗಂಡಮಾಲಾಂಸುದಾರುಣಾಂ ॥

ವಚಾತೈಲ—ಬಜೆ, ಕಚೋರ, ಅರಿಸಿನ, ಮರಅರಿಸಿನ, ದೇವದಾರೀಚಕ್ಕೆ, ಶುಂಠಿ, ಅಳಲೆಯಕಾಯಿ, ಅತಿಬಜೆ, ಭದ್ರಮುಸ್ತೆ, ಕೊಡಸದ ಬೀಜ, ಇವು ಪ್ರತಿಯೊಂದು ಹತ್ತು ಪಲದಂತೆ ಸೇರಿಸಿ ನಾಲ್ಕು ದ್ರೋಣದಷ್ಟು ನೀರಿನಲ್ಲಿ ಕಷಾಯವಿಟ್ಟು, ನಾಲ್ಕರಲ್ಲಿ ಒಂದು ಕಷಾಯ ಇಳಿಸಿ ಅದರ ಜೊತೆಗೆ ಚಗಚೆಯ ಸೊಪ್ಪಿನ ರಸವನ್ನೂ ಸಾಸುವೆಯ ಎಣ್ಣೆಯನ್ನೂ ಸೇರಿಸಿ ಪುನಃ ಕಾಯಿಸುತ್ತ ನೀರೆಲ್ಲ ಇಂಗುತ್ತ ಬಂದ ಮೇಲೆ ಚಂದ್ರವನ್ನು ಸೇರಿಸಿ ಕಲಕಿ ಇಳಿಸಿಕೊಳ್ಳಬೇಕು, ಈ ತೈಲವನ್ನು ಹಚ್ಚುತ್ತ ಬಂದರೆ ಗಂಡಮಾಲೆಯು ಗುಣಹೊಂದುತ್ತವೆ.

ನಿರ್ಗುಂಡೀಸ್ವರಸೇತೈಲಂಲಾಂಗಲೀಮೂಲಕಲ್ಕಿತಂ ॥
ತೈಲಂನಸ್ಯಾನ್ನಿಹಂತ್ಯಾಶುಗಂಡಮಾಲಾಂಸುದಾರುಣಾಂ ॥ ೧೯೭ ॥

ಕರಿಯಾಲಕ್ಕಿಯ ಸೊಪ್ಪಿನ ರಸದಲ್ಲಿ ಕೋಳಿಕುಕ್ಕಿನ ಬೇರನ್ನು ಅರದು ಕಲ್ಕಮಾಡಿ ಎಳ್ಳಿನೆಣ್ಣೆಯೊಡನೆ ಕೂಡಿಸಿ ನಸ್ಯರೂಪವಾಗಿ ಮೂಗಿನಿಂದ ಸೇದಿಸೋಣದರಿಂದ ಭಯಂಕರವಾದ ಗಂಡಮಾಲೆಯು ಗುಣವಾಗುತ್ತದೆ.

ಧತ್ತೂರರಸಮಾದಾಯಹಯಮಾರಾಂತಿಕಾರಸಂ ॥
ಭೃಂಗರಾಜರಸಶ್ಚೈವಸಾರಿಣೀನಿಂಬಪತ್ರಕಂ ॥ ೧೯೮ ॥
ಶೋಭಾಂಜನಶ್ಚಿತ್ರಕಶ್ಚಅಶ್ವಗಂಧಾಪ್ರಸಾರಿಣೀ ॥
ಶಿರೀಷಃಕುಟಜೋನಂತಾಶಾಲ್ಮಲೀನಕ್ತಪತ್ರಕಂ ॥ ೧೯೯ ॥
ರವಿಪ್ರಿಯೋಮಹಾನಿಂಬೋಡಿಂಡಿಘೋಷಾಮಹೇರಣಾ ॥

ಬಲಾಜ್ಯೋತಿಷ್ಮತೀಚೈವಶ್ಯಾಮಾಕಶ್ಚಕ್ರಮರ್ದಕಃ ॥ ೨೦೦ ॥
ಏತೈಸ್ತ್ರುರಸಮಾದಾಯತೈಲತುಲ್ಯಂತುದೀಯತೇ ॥
ದೇವದಾರುಹರಿದ್ರೇದ್ವೇಮಾಂಸೀಕುಷ್ಠಂಸಚಂದನಂ ॥ ೨೦೧ ॥
ಮರಿಚಂತ್ರಿವೃತಾದಂತೀಹರಿತಾಲಂಮನಶ್ಶಿಲಾ ॥
ಕಂಪಿಲ್ಲಕೋಗಂಧಕಶ್ಚಖದಿರಃಪಿಪ್ಪಲಿರ್ವಚಾ ॥ ೨೦೨ ॥
ರಸಾಂಜನಂಚಸಿಂದೂರಂಶ್ರೀವಾಸೋರಕ್ತಚಂದನಂ ॥
ಇರಿಮೇದಸ್ತಥಾತುಂಬೀಮಂಜಿಷ್ಠಾಸಿಂದುವಾರಕಃ ॥ ೨೦೩ ॥
ಕರವೀರಜಟಾರಾಸ್ನಾವಿಶ್ವಾಶ್ರೇಷ್ಠಾಚಪೌಷ್ಕರಂ ॥
ಶಠೀತಾಲೀಸಪತ್ರಂಚಪ್ರಿಯಂಗೂರೇಣುಕಾತಥಾ ॥ ೨೦೪ ॥
ಚತುರ್ಜಾತಕಮಂಜೀರಂಕಂಕೋಲಂಜಾತಿಪತ್ರಿಕಾ ॥
ಜ್ಯೋತಿಷ್ಮತೀಚಪಲಿಕಾನ್ಯೇಷಸ್ಯದ್ವಿಪಲಂಭವೇತ್ ॥ ೨೦೫ ॥
ಆಢಕಂಕಟುತೈಲಸ್ಯಗೋಮೂತ್ರಂಚಚತುರ್ಗುಣಂ ॥
ಮೃತ್ಪಾತ್ರೇಲೋಹಪಾತ್ರೇಚಶನೈರ್ಮೃದ್ವಗ್ನಿನಾಪಚೇತ್ ॥ ೨೦೬ ॥
ಮಜ್ಜಾಶ್ರಿತಂತ್ವಗ್ಗತಂಚವಾತಂಚಾಸ್ಥಿಗತಂತಥಾ ॥
ಊರುಗ್ರಹಂಚಾಢ್ಯವಾತಂಕೃಚ್ಛ್ರಂದಂಡಾಪತಾನಕಂ ॥ ೨೦೭ ॥
ಕುಬ್ಜತ್ವಂಚಾಥಶೋಥಂಚಪಕ್ಷಾಘಾತಂತಥಾರ್ದಿತಂ ॥
ಹನುಸ್ತಂಭಂಶಿರಃಕಂಪಂಮೂರ್ಛಿತಂದೃಷ್ಟಿವಿಭ್ರಮಂ ॥ ೨೦೮ ॥
ಅಪಸ್ಮಾರಂತಥೋನ್ಮಾದಂತಥಾಚೈವಾಪತತ್ರಕಂ ॥
ಆಕ್ಷೇಪಕಂಚಾಸ್ಥಿಭಗ್ನಂಸಂಧಿಭಗ್ನಂಚನಾಶಯೇತ್ ॥ ೨೦೯ ॥

ಧತ್ತೂರತೈಲ—ಉಮ್ಮತ್ತದ ಸೊಪ್ಪಿನ ರಸ, ಕಣಿಗಲಬೇರಿನ ಕಷಾಯ ರಸ, ಗರುಗದ ಸೊಪ್ಪಿನ ರಸ, ಸಾರಿಣೀಬಳ್ಳಿಯ ರಸ, ಬೇವಿನ ಸೊಪ್ಪಿನ ರಸ, ಶೋಭಾಂಜನ (ನುಗ್ಗೆಯ ಚಕ್ಕೆಯ ಸತ್ವ) ಚಿತ್ರಮೂಲದ ರಸ, ಅಶ್ವಗಂಧಿಯ ರಸ, ಪ್ರಸಾರಿಣಿಯ ರಸ, ಬಾಗೆಯ ರಸ, ಕೊಡಸದ ಚಕ್ಕೆಯ ರಸ, ತುರಚಿಯ ಬೇರಿನ ರಸ, ಬೂರಗದ ಚಕ್ಕೆಯ ರಸ, ಹೊಂಗೆಯ ಸೊಪ್ಪಿನ ರಸ, ಕೆಂಪು ತಾವರೆಯ ರಸ, ಹೆಬ್ಬೇವಿನ ರಸ, ಕೆಂಪು ಹರಳು ರಸ, ಸಲ್ಲಕಿ ಎಂಬ ವೃಷದ ರಸ, ಕಳ್ಳಂಗಡಲೆಯ ರಸ, ಗಂಗುಂಗೆಯ ರಸ, ಸಾವೇರಸ ಚಗಟೆಯ ರಸ, ಇವುಗಳ ರಸವನ್ನು ಒಂದೊಂದು ಆಢಕ ಪರಿಮಾಣ ತೆಗೆದು ಅಷ್ಟೇ ಕಟು ತೈಲ ಅಂದರೆ ಸಾಸುವೆಯ ಎಣ್ಣೆಯನ್ನು ಸೇರಿಸಿ, ದೇವದಾರಿ, ಅರಿಸಿನ, ಮರಅರಿಸಿನ, ಜಟಾಮಾಂಸಿ, ಚಂಗಲಕೋಷ್ಟ, ಚಂದನ, ಮೆಣಸು, ಶಿಗಡೇಬೇರು, ಜಾಪಾಳದ ಬೀಜ, ಅರಿದಳ, ಮಣಿಶಿಲೆ, ಕಂಪಿಲ್ಲಕ,

ಗಂಧಕ, ಜಾಲಿಯಚಕ್ಕೆ, ಹಿಪ್ಪಲಿ, ಬಜೆ, ರಸಾಂಜನವೆಂದರೆ ದೇವದಾರಿಯ ಚಕ್ಕೆಯ ರಸಕ್ರಿಯೆ, ಚಂದ್ರ, ರಾಳ, ರಕ್ತಚಂದನ, ದುರ್ವಾಸನೆ ಜಾಲಿಚಕ್ಕೆ, ಕೈಸೋರೆ, ಮಂಜಿಷ್ಠೆ, ಲಕ್ಕಿಸೊಪ್ಪು, ಕಣಿಗಲ ಬೇರು, ಸಣ್ಣರಾಸ್ನೆ, ಅತಿಬಜೆ, ಶ್ರೇಷ್ಠಾ ಎಂಬ ಮೂಲಿಕೆ, ಪುಷ್ಕರಮೂಲ, ಕಚೋರ, ತಾಳೀಸಪತ್ರೆ, ಪ್ರಿಯಂಗು ಎಂದು ಸ್ವನಾಮ ಪ್ರಸಿದ್ಧವಾದ ಮೂಲಿಕೆ, ರೇಣುಕಬೀಜ, ಚತುರ್ಜಾತಕ (ಯಾಲಕ್ಕಿ, ಲವಂಗಪತ್ರೆ, ಜಾಪತ್ರೆ, ನಾಗಕೇಸರಿ) ಮಂಜೀರವೆಂಬ ಅಪ್ರಸಿದ್ಧ ವಸ್ತು, ಗಂಧಮೆಣಸು, ಜಾತಿಪತ್ರೆ, ಗಂಗುಂಗೆ, ಇವುಗಳು ಪ್ರತ್ಯೇಕ ಒಂದೊಂದು ಪಲ, ವತ್ಸನಾಭಿ ಎರಡು ಪಲ, ಈ ಮೂಲಿಕೆಗಳನ್ನು ಸಂಗ್ರಹಿಸಿ ತೈಲದ ನಾಲ್ಕರಷ್ಟು ಗೋಮೂತ್ರದಲ್ಲಿ ಕಲ್ಕಮಾಡಿ ಬೆರಸಿ ಮಣ್ಣಿನ ಪಾತ್ರೆಯಲ್ಲಿ ಮಂದಾಗ್ನಿಯಿಂದ ಪಕ್ವಮಾಡಿ ತೈಲಪಾಕ ನೋಡಿ ಇಳಿಸಿಕೊಳ್ಳುವುದು. ಈ ತೈಲವನ್ನು ಮೇಲೆ ಹಚ್ಚಿ ಸವರುತ್ತ ಬರುವುದರಿಂದ ಸಮಸ್ತ ವಾತರೋಗಗಳು ಅಂದರೆ ಸೊಂಟಹಿಡಿಯುವುದು, ಅಢ್ಯವಾತವೆಂಬುವುದು, ದಂಡಾಪತಾನಕವೆಂದರೆ ಕೈಕಾಲು ಶಡತುಕೊಳ್ಳುವುದು, ವಾಯುಹಿಡಿದು ಗುಜ್ಜನಾಗುವುದು, ಶೋಭೆ, ಪಾರ್ಶ್ವವಾಯು, ಅರ್ದಿತವಾತ, ದವಡೆಹಿಡಿಯುವುದು, ತಲೆ ನಡುಗುವುದು, ಮೂರ್ಛೆ ಬರುವುದು, ದೃಷ್ಟಿಮಾಂದ್ಯ, ಅಪಸ್ಮಾರ, ಹುಚ್ಚು, ಅಕ್ಷೇಪಕವಾತ, ಎಲುಬುಮುರಿಯುವುದು, ಕೀಲುಗಳಲ್ಲಿ ಸಂಭವಿಸುವ ಸಮಸ್ತ ವಿಧವಾದ ನೋವು ಇವುಗಳನ್ನೆಲ್ಲಾ ಗುಣಪಡಿಸಿಕೊಳ್ಳಬಹುದು.

ಇಲ್ಲಿಗೆ ಒಂಭತ್ತನೆಯ ಅಧ್ಯಾಯ ಸಂಪೂರ್ಣ.

---

## ಹತ್ತನೆಯ ಅಧ್ಯಾಯ.

**ದ್ರವೇಷುಚಿರಕಾಲಸ್ಥಂದ್ರವ್ಯಂಯತ್ಸಂಧಿತಂಭವೇತ್ ॥**
**ಆಸವಾರಿಷ್ಟಭೇದೈಸ್ತುಪ್ರೋಚ್ಯತೇಭೇಷಜೋಚಿತಂ ॥ ೧ ॥**

ಆಸವ, ಅರಿಷ್ಟ, ಎಂಬುವು ಮದ್ಯದ ಭೇದಗಳು, ಔಷಧ ದ್ರವ್ಯಗಳಿಂದಲೇ ಇವುಗಳನ್ನು ನಿರ್ಮಿಸಿಕೊಂಡು ಔಷಧವಾಗಿ ಉಪಯೋಗಿಸುವುದು ಆಯುರ್ವೇದ ಶಾಸ್ತ್ರದಲ್ಲಿ ಅನಾದಿಕಾಲದಿಂದಲೂ ಇದೆ, ಆಯುರ್ವೇದ ಶಾಸ್ತ್ರದಲ್ಲಿ ಮದ್ಯಮಾಂಸಗಳ ಪ್ರಯೋಗವಿಲ್ಲವೇ ಇಲ್ಲವೆಂದು ವಾದಿಸುವವರು ಈ ವಿಷಯಗಳನ್ನು ಗಮನಿಸಬೇಕು, ದ್ರವಪದಾರ್ಥಗಳಲ್ಲಿ ಅಂದರೆ ನೀರು ಅಥವಾ ಯಾವುದಾದರೂ ಕಷಾಯಗಳು ಇಂತವುಗಳಲ್ಲಿ ಮೂಲಿಕೆಗಳು, ಗಂದಿಗೆ ಜಿನಸುಗಳು ಮೊದಲಾದವುಗಳನ್ನು ಹಾಕಿ ಕೆಲವು ದಿವಸ ಕೊಳೆಯುವುದಕ್ಕಿರಿಸಿ ಅಷ್ಟು ದಿವಸ ಕಳೆದ ಮೇಲೆ ಶೋಧಿಸಿಕೊಂಡು ಆ ಔಷಧಸಾರಗಳಿಂದ ಕೂಡಿದ ದ್ರವವನ್ನು ಶೀಸೆ

ಗಳಿಂದ ತುಂಬಿ ಇರಿಸಿಕೊಂಡು ಔಷಧವಾಗಿ ಉಪಯೋಗಿಸಬಹುದು, ಇದು ಆಸವ, ಅರಿಷ್ಟ, ಎಂಬದಾಗಿ ಎರಡು ವಿಧವಾಗಿರುತ್ತದೆ.

**ಯದಪಕ್ವೌಷಧಾಂಬುಭ್ಯಾಂಸಿದ್ಧಂಮದ್ಯಂಸಆಸವಃ ॥**
**ಅರಿಷ್ಟಃಕ್ವಾಥಸಿದ್ಧಸ್ಯಾತ್ತಯೋರ್ಮಾನಂಜಲೋನ್ಮಿತಂ ॥ ೨ ॥**

ಆಸವ, ಮತ್ತು ಅರಿಷ್ಟಗಳ ಲಕ್ಷಣವನ್ನು ಹೇಳುತ್ತಾನೆ—ನೀರಿನಲ್ಲಿ ಯಾವ ರೀತಿಯಿಂದಲೂ ಅಗ್ನಿಸಂಪರ್ಕದಿಂದ ಪಕ್ವವಾಗದ ಮೂಲಿಕೆಗಳನ್ನು ಹಾಕಿ ಕೆಲವು ದಿವಸ ಕೊಳೆಯಿಸಿ ತಯಾರುಮಾಡಿಕೊಂಡ ಮದ್ಯಕ್ಕೆ ಆಸವವೆಂಬ ದಾಗಿಯೂ, ಕೆಲವು ಮೂಲಿಕೆಗಳ ಕಷಾಯಮಾಡಿ ಆ ಕಷಾಯದಲ್ಲಿ ಕೆಲವು ಮೂಲಿಕೆಗಳನ್ನು ಹಾಕಿ ಕೊಳೆಯಲಿಟ್ಟು ಕ್ಲ್ಪಪ್ತವಾದ ದಿವಸ ಕಳದ ಮೇಲೆ ತೆಗೆದುಕೊಂಡರೆ ಅದಕ್ಕೆ ಅರಿಷ್ಟವೆಂಬದಾಗಿಯೂ ಹೆಸರು, ಇದನ್ನು ಸೇವನೆ ಮಾಡತಕ್ಕ ಪ್ರಮಾಣವೆಷ್ಟು ಎಂದರೆ "ಜಲೋನ್ಮಿತಂ" ಪ್ರತಿ ದಿವಸವೂ ನೀರು ಕುಡಿಯುವಾಗ್ಯೆ ಒಂದು ಸಾರಿಗೆ ಎಷ್ಟು ಕುಡಿಯಬೇಕಾಗಿ ಹೇಳುತ್ತದೆಯೋ ಅಷ್ಟ ಮಾತ್ರವೇ ಕುಡಿಯಬೇಕು

**ಅನುಕ್ತಮಾನಾರಿಷ್ಟೇಷುದ್ರವದ್ರೋಣೇತುಲಾಂಗುಡಂ ॥**
**ಕ್ಷೌದ್ರಂಕ್ಷಿಪೇದ್ಗುಡಾದರ್ಧಂಪ್ರಕ್ಷೇಪಂದಶಮಾಂಶಕಂ ॥ ೩ ॥**

ಯಾವುದಾದರೂ ಆಸವಾರಿಷ್ಟಗಳನ್ನು ಹೇಳುವಾಗ್ಯೆ ಪದಾರ್ಥಗಳ ಹೆಸರನ್ನು ಮಾತ್ರ ಹೇಳಿ ಅದರ ಅಳತೆಯನ್ನು ಹೇಳದಿದ್ದರೆ ಅಂತಹ ಸಂದರ್ಭದಲ್ಲಿ ದ್ರವಪದಾರ್ಥವು ಒಂದು ದ್ರೋಣದಷ್ಟಿದ್ದರೆ ಬೆಲ್ಲ ಒಂದು ನೂರು ಪಲ, ಬೆಲ್ಲದಲ್ಲಿ ಅರ್ಧ ಜೇನುತುಪ್ಪ, ಬೇರೆಯಾಗಿ ಹಾಕತಕ್ಕ ವಸ್ತುಗಳೆನಾದರೂ ಉಳದಿದ್ದರೆ ಅವೆಲ್ಲಾ ಬೆಲ್ಲದ ಹತ್ತನೆಯ ಒಂದಂಶ ಈ ರೀತಿಯಾಗಿ ಸೇರಿಸತಕ್ಕದ್ದು.

**ಜ್ಞೇಯಶ್ಶೀತರಸಸ್ಸೀಧುರಪಕ್ವಮಧುರದ್ರವೈಃ ॥**
**ಪರಿಪಕ್ವಾನ್ನಸಂಧಾನಸಮುತ್ಪನ್ನಾಂಸುರಾಂಜಗುಃ ॥ ೪ ॥**
**ಸಿದ್ಧಃಪಕ್ವರಸಸ್ಸೀಧುಸ್ಸಂಪಕ್ವಮಧುರದ್ರವೈಃ ॥**

ಮದ್ಯಪ್ರಕರಣವನ್ನು ಹೇಳುತ್ತಿರುವುದರಿಂದ ಮದ್ಯಭೇದಗಳನ್ನು ಹೇಳುತ್ತಾನೆ—ಸೀಧು ಎಂಬ ಮದ್ಯವು ಎರಡು ವಿಧ, ಕಾಯಿಸದಿರುವ ಕಬ್ಬಿನ ಹಾಲು ಮೊದಲಾದ ಮಧುರ ರಸವುಳ್ಳ ದ್ರವದ್ರವ್ಯಗಳಿಂದ ಸಾಧಿಸಲ್ಪಟ್ಟದ್ದು ಒಂದು ಬಗೆ, ಇದಕ್ಕೆ ಶೀತರಸವೆಂದು ಹೆಸರು, ಇನ್ನೊಂದು ಬಗೆಯು ಸೀಧು ಎಂಬುವುದು ಕಾಯಿಸಲ್ಪಟ್ಟ ಕಬ್ಬಿನಹಾಲು ಇಂತಹ ಮಧುರದ್ರವ್ಯಗಳಿಂದ ಸಾಧಿಸಲ್ಪಟ್ಟದ್ದು

ಇದಕ್ಕೆ ಪಕ್ವರಸವೆಂದು ಹೆಸರು, ಚನ್ನಾಗಿ ಪಕ್ವಮಾಡಲ್ಪಟ್ಟ ಅನ್ನ ಮೊದಲಾದ ವುಗಳ ಹುಳಿನೀರಿನಿಂದ ಮಾಡಲ್ಪಟ್ಟ ಮಾದಕದ್ರವ್ಯಕ್ಕೆ ಸುರಾ ಎಂಬದಾಗಿ ಹೆಸರು.

ಸುರಾಮಂಡಃಪ್ರಸನ್ನಾಸ್ಯಾತ್ತತಃಕಾದಂಬರೀಘನಃ ॥ ೫ ॥
ತದಧೋಜಗಲೋಜ್ಞೇಯೋಮೇದಕೋಜಗಲಾದ್ಘನಃ ॥
ವಕ್ಕಸೋಹೃತಸಾರಸ್ಸ್ಯಾತ್ಸುರಾಬೀಜಂಚಕಿಣ್ವಕಂ ॥ ೬ ॥

ಸುರಾ ಎಂಬ ಮದ್ಯದ ಮೇಲುಭಾಗದಲ್ಲಿರುವ ತಿಳಿಯಾದ ಭಾಗಕ್ಕೆ ಪ್ರಸನ್ನಾ ಎಂಬದಾಗಿಯೂ ಅಡಿಯಲ್ಲಿರುವ ಘನವಾದ ಭಾಗಕ್ಕೆ ಕಾದಂಬರಿ ಎಂಬ ದಾಗಿಯೂ, ಅದಕ್ಕಿಂತಲೂ ಮಂದವಾದ ಭಾಗಕ್ಕೆ ಜಗಲವೆಂಬದಾಗಿಯೂ, ಅದಕ್ಕಿಂತಲೂ ಮಂದವಾದ ಭಾಗಕ್ಕೆ ಮೇದಕವೆಂಬದಾಗಿಯೂ, ಕಡಾ ಕೊನೆ ಯಲ್ಲಿ ಉಳಿಯುವ ಸಾರರಹಿತವಾದ ಚರಟಕ್ಕೆ ವಕ್ಕಸವೆಂಬದಾಗಿಯೂ, ಮಾದ ಕತ್ವವನ್ನು ಹುಟ್ಟಿಸತಕ್ಕ ಭಾಗಕ್ಕೆ ಕಿಣ್ವಕವೆಂಬದಾಗಿಯೂ ಹೆಸರು, ಈ ಭೇದ ಗಳನ್ನೆಲ್ಲಾ ಮದ್ಯನಿರ್ಮಾಣಕಲೆಯಲ್ಲಿ ನುರಿತವರಿಂದ ಅನುಭವ ಮಾಡಿ ಕೊಳ್ಳಬೇಕು

ಯತ್ತಾಲಖರ್ಜೂರರಸೈಸ್ಸಂಧಿತಾಸಾಹಿವಾರುಣೀ ॥

ತಾಳೆಯ ಮರ ಮತ್ತು ಖರ್ಜೂರದ ಮರ ಇವುಗಳಿಂದ ಇಳಿಸಲ್ಪಟ್ಟ ಮದ್ಯದೊಡನೆ ಸೇರಿಸಿ ತಯಾರಿಸಲ್ಪಟ್ಟ ಮದ್ಯವಿಶೇಷಕ್ಕೆ ವಾರುಣೀ ಎಂಬದಾಗಿ ಹೆಸರು.

ಕಂದಮೂಲಫಲಾದೀನಿಸಸ್ನೇಹಲವಣಾನಿಚ ॥ ೭ ॥
ಯತ್ರದ್ರವೇಭಿಷೂಯಂತೇತಚ್ಛುಕ್ತಮಭಿಧೀಯತೇ ॥
ವಿನಷ್ಟಮಮ್ಲತಾಂಯಾತಂಮದ್ಯಂವಾಮಧುರದ್ರವಂ ॥ ೮ ॥
ವಿನಷ್ಟಸ್ಸಂಧಿತೋಯಸ್ತುತಚ್ಚುಕ್ರಮಭಿಧೀಯತೇ ॥
ಗುಡಾಂಬುನಾಸತೈಲೇನಕಂದಮೂಲಫಲೈಸ್ತಥಾ ॥ ೯ ॥
ಸಂಧಿತಂಚಾಮ್ಲತಾಂಯಾತಂಗುಡಶುಕ್ತಂತದುಚ್ಯತೇ ॥

ಗೆಡ್ಡೆಗೆಣಸುಗಳು, ಮೂಲಂಗಿ ಮೊದಲಾದವುಗಳು, ಬಾಳೇಹಣ್ಣು ಮೊದ ಲಾದ ಹಣ್ಣುಗಳು ಇವುಗಳನ್ನು ಲವಣಗಳು, ಎಣ್ಣೆಗಳು ಇವುಗಳನ್ನು ಯಾವು ದಾದರೂ ದ್ರವದ್ರವ್ಯದೊಡನೆ ಸೇರಿಸಿ ಕೆಲವು ದಿವಸವೋ ಕೆಲವು ಕಾಲವೋ ಇರಿಸಿದ್ದು ಮಾದಕಗುಣವುಂಟಾಗುವಂತೆ ತಯಾರಿಸುವಲ್ಲಿ ಶುಕ್ತವೆನ್ನಿಸಿಕೊಳ್ಳು ತ್ತದೆ, ಮದ್ಯವನ್ನಾಗಲೀ ಮಧುರರಸವುಳ್ಳ ಕಬ್ಬಿನಹಾಲು ಮೊದಲಾದ ಯಾವು

ದಾದರೂ ದ್ರವದ್ರವ್ಯವನ್ನಾಗಲಿ ಮಡಿಕೆಯಲ್ಲಿ ಹಾಕಿ ಧಾನ್ಯರಾಶಿಯಲ್ಲಿರಿಸಿ ಹುಳಿಯಾಗುವಂತೆ ಮಾಡಿ ಸ್ವರಸವನ್ನು ಕೆಡಿಸಿದರೆ ಅದಕ್ಕೆ ಚುಕ್ರವೆಂಬ ಹೆಸರು. ಪಾನಕವನ್ನು ಮಾಡಿ ಅದಕ್ಕೆ ಎಳ್ಳಿನ ಎಣ್ಣೆಯನ್ನು ಬೆರಸಿ ಗೆಡ್ಡೆಗೆಣಸುಗಳನ್ನಾಗಲೀ ಯಾವುವಾದರೂ ಫಲಗಳನ್ನಾಗಲೀ ಸೇರಿಸಿ ಮದ್ಯಗುಣಗಳುಂಟಾಗುವಂತೆ ಮಾಡಿದಲ್ಲಿ ಅದಕ್ಕೆ ಗುಡಶುಕ್ತವೆಂದು ಹೆಸರು.

ಏವಮೇವೇಕ್ಷುಶುಕ್ತಂಸ್ಯಾನ್ಮೃದ್ವೀಕಾಸಂಭವಂತಥಾ ॥ ೧೦ ॥

ಹಿಂದೆ ಹೇಳಿದ ಕ್ರಮದಲ್ಲಿಯೇ ಕಬ್ಬಿನ ಹಾಲಿನಿಂದ ತಯಾರಿಸಿದ್ದು ಇಕ್ಷುಶುಕ್ತವೆನ್ನಿಸಿಕೊಳ್ಳುತ್ತದೆ, ದ್ರಾಕ್ಷೀಹಣ್ಣಿನ ಕಷಾಯದಿಂದ ತಯಾರಿಸಲ್ಪಟ್ಟರೆ ಮೃದ್ವೀಕಾಶುಕ್ತವೆನ್ನಿಸಿಕೊಳ್ಳುತ್ತದೆ

ತುಷಾಂಬುಸಂಧಿತಂಜ್ಞೇಯಮಾಮೈರ್ವಿದಳಿತೈರ್ಯವೈಃ ॥
ಯವೈಸ್ತುನಿಸ್ತುಷೈಃಪಕ್ವೈಸ್ಸೌವೀರಂಸಂಧಿತಂಭವೇತ್ ॥ ೧೧ ॥

ಯವ ಎಂಬ ಧಾನ್ಯವನ್ನು ಸುಚ್ಚಾಗುವಂತೆ ಒಡೆದು ನೀರಿನಲ್ಲಿ ಹಾಕಿ ಇರಿಸಿದ್ದು ಹುಳಿಬರುವಂತೆ ಮಾಡಿದರೆ ಅದಕ್ಕೆ ತುಷಾಂಬು ಎಂದು ಹೆಸರು. ಯವಧಾನ್ಯವನ್ನೇ ಹೊಟ್ಟಿಲ್ಲದಂತೆ ಮಾಡಿ ಪಕ್ವಮಾಡಿ ನೀರಿನೊಡನೆ ಸೇರಿಸಿ ಹುಳಿ ಬರುವಂತೆ ಮಾಡಿ ತಯಾರಿಸಿದ್ದಕ್ಕೆ ಸೌವೀರವೆಂದು ಹೆಸರು.

ಕುಲ್ಮಾಷಧಾನ್ಯಮಂಡಾದಿಸಂಧಿತಂಕಾಂಜಿಕಂವಿದುಃ ॥

ಕುಲ್ಮಾಷವೆಂದರೆ ಒಂದು ಬಗೆಯ ಉದ್ದಿನಕಾಳು, ಭತ್ತ ಮೊದಲಾದ ಧಾನ್ಯಗಳು, ಇವುಗಳನ್ನು ನೀರಿನಲ್ಲಿ ಕುದಿಸಿ, ಆ ಕುದಿಸಿದ್ದರಲ್ಲಿ ಮದ್ಯಗುಣವು ಬರುವಂತೆ ನಿಲ್ಲಿಸಿ ತಯಾರಿಸಿದ್ದಕ್ಕೆ ಕಾಂಜಿಕವೆಂದು ಹೆಸರು.

ಸಂಡಾಕೀಸಂಧಿತಾಜ್ಞೇಯಾಮೂಲಕೈಸ್ಸರ್ಷಪಾದಿಭಿಃ ॥ ೧೨ ॥

ಮೂಲಂಗಿ, ಸಾಸುವೆಕಾಳು ಮೊದಲಾದ ವಸ್ತುಗಳನ್ನು ಯಾವುದಾದರೂ ದ್ರವಪದಾರ್ಥದಲ್ಲಿ ಸೇರಿಸಿ ಮದ್ಯದ ಗುಣಗಳು ಅವರಲ್ಲಿ ಬರುವಂತೆ ಮಾಡಿ ತಯಾರಿಸಿದಲ್ಲಿ ಅದಕ್ಕೆ ಸಂಡಾಕಿ ಎಂದು ಹೆಸರು, ಇವುಗಳೆಲ್ಲಾ ಮದ್ಯಪ್ರಭೇದಗಳೇ ಎಂದು ತಿಳಿಯಬೇಕು.

ಉಶೀರಂವಾಲಕಂಪದ್ಮಂಕಾಶ್ಮರೀಂನೀಲಮುತ್ಪಲಂ ॥
ಪ್ರಿಯಂಗುಂಪದ್ಮಕಂಲೋಧ್ರಂಮಂಜಿಷ್ಠಾಂಧನ್ವಯಾಸಕಂ।೧೩।

ಪಾಠಾಂಕಿರಾತತಿಕ್ತಂಚನ್ಯಗ್ರೋಧೋದುಂಬರಂಶಠೀಂ ॥
ಪರ್ಪಟಂಪುಂಡರೀಕಂಚಪಟೋಲಂಕಾಂಚನಾರಕಂ ॥ ೧೪ ॥
ಜಂಬೂಶಾಲ್ಮಲಿನಿರ್ಯಾಸಂಪ್ರತ್ಯೇಕಂಪಲಸಮ್ಮಿತಾನ್ ॥
ಭಾಗಾನ್ ಸುಚೂರ್ಣಿತಾನ್ ಕೃತ್ವಾದ್ರಾಕ್ಷಾಯಾಃಪಲವಿಂಶತಿಂ ॥ ೧೫ ॥
ಧಾತಕೀಂಷೋಡಶಪಲಾಂಜಲದ್ರೋಣದ್ವಯೇಕ್ಷಿಪೇತ್ ॥
ಶರ್ಕರಾಯಾಸ್ತುಲಾಂದತ್ವಾಕ್ಷೌದ್ರಸ್ಯೈಕತುಲಾಂತಥಾ ॥ ೧೬ ॥
ಮಾಸೈಕಂಸ್ಥಾಪಯೇದ್ಭಾಂಡೇಮಾಂಸೀಮರಿಚಧೂಪಿತೇ ॥
ಉಶೀರಾಸವಇತ್ಯೇಷರಕ್ತಪಿತ್ತವಿನಾಶನಃ ॥ ೧೭ ॥
ಪಾಂಡುಕುಷ್ಠಪ್ರಮೇಹಾರ್ಶಃಕ್ರಿಮಿಶೋಥಹರಸ್ತಥಾ ॥

ಉಶೀರಾಸವವನ್ನು ಹೇಳುತ್ತಾನೆ—ಲಾಮಂಚ, ಮುಡಿವಾಳ, ತಾವರೆ, ಶಿವನೆಯ ತೊಪ್ಪೆ, ನೀಲವರ್ಣದ ತಾವರೆ, ಪ್ರಿಯಂಗು ಎಂಬ ಸ್ವನಾಮ ಪ್ರಸಿದ್ಧವಾದ ಮೂಲಿಕೆ, ಪದ್ಮಕಾಷ್ಠ, ಲೋಧ್ರದ ಚಕ್ಕೆ, ಮಂಜಿಷ್ಠೆ, ತುರಚಿಯ ಬೇರು, ಅಗಳುಶುಂಠಿ, ಚಿರಾಯಿತ, ಆಲದ ಚಕ್ಕೆ, ಕಚೋರ, ಪರ್ಪಾಟಕ, ಬಿಳೀ ತಾವರೆಯ ಹುವ್ವು, ಕೈಪಡವಲ, ಕಂಚುವಾಳದ ಚಕ್ಕೆ, ನೇರಲಬೀಜ ಅಥವಾ ಮೇಣ, ಬೂರಗದ ಬಂಕೆ, ಇವು ಪ್ರತಿಯೊಂದೂ ಒಂದೊಂದು ಪಲದಷ್ಟು ಸಂಗ್ರಹಿಸಿ ಚನ್ನಾಗಿ ಚೂರ್ಣಮಾಡಿಕೊಂಡು ಇಪ್ಪತ್ತು ಪಲದಷ್ಟು ದ್ರಾಕ್ಷಿಯ ಹಣ್ಣು, ಧಾತ್ರೀಕುಸುಮ ಪದಿನಾರು ಪಲ ಈ ರೀತಿ ಎಲ್ಲಾ ವಸ್ತುಗಳನ್ನೂ ಎರಡು ದ್ರೋಣ ಪರಿಮಾಣ ನೀರಿನಲ್ಲಿ ನೆನೆಹಾಕಿ ಆದರಲ್ಲಿ ಸಕ್ಕರೆ ನೂರು ಪಲದಷ್ಟು ಸೇರಿಸಿ ಜೇನುತುಪ್ಪವನ್ನೂ ಸೇರಿಸಿ ಒಂದು ಮಣ್ಣಿನ ಮಡಿಕೆಯಲ್ಲಿ ಹಾಕಿ ಗಾಳಿಯಾಡದಂತೆ ಬಾಯಿ ಬಂದೂಬಸ್ತು ಮಾಡಿ ಒಂದು ತಿಂಗಳು ಇರಿಸಬೇಕು. ಇದನ್ನು ತುಂಬುವುದಕ್ಕೆ ಉಪಯೋಗಿಸುವ ಹೊಸ ಮಡಿಕೆಗೆ ಜಟಾಮಾಂಸಿ, ಮೆಣಸಿನಕಾಳು ಇವುಗಳ ಹೊಗೆಯನ್ನು ಹಾಕಬೇಕು, ಒಂದು ತಿಂಗಳು ಕಳದ ಮೇಲೆ ತೆಗದು ಸೋಸಿ ಸೀಸೆಗಳಲ್ಲಿ ಭದ್ರಪಡಿಸಬೇಕು, ಇದಕ್ಕೆ ಉಶೀರಾಸವವೆಂಬದಾಗಿ ಹೆಸರು, ಇದನ್ನು ಸೇವಿಸುವುದರಿಂದ ರಕ್ತಪಿತ್ತರೋಗ, ಪಾಂಡುರೋಗ, ಕುಷ್ಠರೋಗ, ಸಮಸ್ತ ಕ್ರಿಮಿವ್ಯಾಧಿಗಳು, ಮೇಹರೋಗ, ಮೂಲವ್ಯಾಧಿ, ಶೋಥ ಈ ರೋಗಗಳು ಶಮನವಾಗುತ್ತವೆ

ಸುಪಕ್ವರಸಸಂಶುದ್ಧಂಕುಮಾರ್ಯಾಃಪತ್ರಮಾಹರೇತ್ ॥ ೧೮ ॥
ಯತ್ನೇನರಸಮಾದಾಯಪಾತ್ರೇಪಾಷಾಣಮ್ಮಣ್ಮಯೇ ॥
ದ್ರೋಣೇಗುಡತುಲಾಂದತ್ವಾಘೃತಭಾಂಡೇನಿಧಾಪಯೇತ್ ॥ ೧೯ ॥

ಮಾಕ್ಷಿಕಂಪಕ್ವಲೋಹಂಚತಸ್ಮಿನ್ನರ್ಧತುಲಾಂಕ್ಷಿಪೇತ್ ॥
ಕಟುತ್ರಿಕಂಲವಂಗಂಚಚಾತುರ್ಜಾತಕಮೇವಚ ॥ ೨೦ ॥
ಚಿತ್ರಕಂಪಿಪ್ಪಲೀಮೂಲಂವಿಡಂಗಂಗಜಪಿಪ್ಪಲೀ ॥
ಚವಿಕಂಹಪುಷಾಧಾನ್ಯಂಕ್ರಮುಕಂಕಟುರೋಹಿಣೀ ॥ ೨೧ ॥
ಮುಸ್ತಾತ್ರಿಫಲತ್ರಿಕಂರಾಸ್ನಾದೇವದಾರುನಿಶಾದ್ವಯಂ ॥
ಮೂರ್ವಾಮಧುರಸಾದಂತೀಮೂಲಂಪುಷ್ಕರಸಂಭವಂ ॥ ೨೨ ॥
ಬಲಾಚಾತಿಬಲಾಚೈವಕಪಿಕಚ್ಛತ್ರಿಕಂಟಕಂ ॥
ಶತಪುಷ್ಪಾಹಿಂಗುಪತ್ರೀಆಕಲ್ಲಕಮುಟಿಂಗಣಂ ॥ ೨೩ ॥
ಪುನರ್ನವಾದ್ವಯಂಲೋಧ್ರಂಧಾತುಮಾಕ್ಷಿಕಮೇವಚ ॥
ಏಷಾಂಚಾರ್ಧಪಲಂದತ್ವಾಧಾತಕ್ಯಾಸ್ತುಪಲಾಷ್ಟಕಂ ॥ ೨೪ ॥
ಪಲಂಚಾರ್ಧಪಲಂಚೈವಪಲದ್ವಯಮುದಾಹೃತಂ ॥
ವಪುರ್ವಯಃಪ್ರಮಾಣೇನಬಲವರ್ಣಾಗ್ನಿದೀಪನಂ ॥ ೨೫ ॥
ಬೃಹ್ಮಣಂರೋಚನಂವೃಷ್ಯಂಪಂಕ್ತಿಶೂಲನಿವಾರಣಂ ॥
ಅಷ್ಟಾವುದರಜಾನ್ರೋಗಾನ್ ಕ್ಷಯಮುಗ್ರಂಚನಾಶಯೇತ್ ॥ ೨೬ ॥
ವಿಂಶತಿಂಮೇಹಜಾನ್ರೋಗಾನುದಾವರ್ತಮಪಸ್ಮೃತಿಂ ॥
ಮೂತ್ರಕೃಚ್ಛ್ರಮಪಸ್ಮಾರಂಶುಕ್ರದೋಷಂತಥಾಶ್ಮರೀಂ ॥ ೨೭ ॥
ಕ್ರಿಮಿಜಂರಕ್ತಪಿತ್ತಂಚನಾಶಯೇತ್ತುನಸಂಶಯಃ ॥

ಕುಮಾರ್ಯಾಸವವನ್ನು ಹೇಳುತ್ತಾನೆ—ಚನ್ನಾಗಿ ಬಲಿತು ಪಕ್ವವಾಗಿರುವ ಮತ್ತು ಶುದ್ಧವಾದ ಸ್ಥಳದಲ್ಲಿರುವ ಲೋಳಿಸರದ ಪಟ್ಟೆಗಳನ್ನು ತಂದು ಪ್ರಯತ್ನ ಪೂರ್ವಕವಾಗಿ ರಸವನ್ನು ತೆಗೆಯಬೇಕು, ಒಂದು ದ್ರೋಣ ಪರಿಮಾಣ ಆ ರಸವನ್ನು ತುಪ್ಪವನ್ನು ಸವರಿದ ಮಣ್ಣಿನ ಪಾತ್ರೆಯಲ್ಲಾಗಲಿ ಕಲ್ಲಿನ ಪಾತ್ರೆಯಲ್ಲಾಗಲಿ ಸುರಿದು ಅದರಲ್ಲಿ ಒಂದು ನೂರು ಪಲದಷ್ಟು ಬೆಲ್ಲವನ್ನು ಹಾಕಿ ಆ ರಸದಲ್ಲಿ ತ್ರಿಕಟುಕ (ಶುಂಠಿ, ಹಿಪ್ಪಲಿ, ಮೆಣಸು) ಲವಂಗ ಚತುರ್ಜಾತಕ (ಯಾಲಕ್ಕಿ, ಲವಂಗಪಟ್ಟೆ, ಜಾಯಿಪತ್ರೆ, ನಾಗಕೇಸರಿ) ಚಿತ್ರಮೂಲ, ಹಿಪ್ಪಲಿ. ಮೋಡಿ, ವಾಯುವಿಡಂಗ, ದೊಡ್ಡಹಿಪ್ಪಲಿ, ಚವ್ಯ, ಹಪುಷ ಎಂಬ ಮೂಲಿಕೆ, (ಹಬ್ಬೆಯ ಗಿಡವೆಂದು ಹೇಳುತ್ತಾರೆ) ಕೊತ್ತುಂಬರಿಯ ಬೀಜ, ಕಟುಕರೋಹಿಣಿ, ಭದ್ರಮುಷ್ಟಿ, ತ್ರಿಫಲ (ಅಳಲೆಯ ಕಾಯಿ, ತಾರೇಕಾಯಿ, ನೆಲ್ಲಿಯಕಾಯಿ) ಸಣ್ಣರಾಸ್ಮೆ, ದೇವದಾರೀಚಕ್ಕೆ, ಅರಿಸಿನ, ಮರದರಿಸಿನ, ಕುರಟಿಗ, ತೇಜಸ್ವಿನೀ ಎಂಬ ಮೂಲಿಕೆ, ಜಾಪಾಳ, ಪುಷ್ಕರಮೂಲ, ಕಳ್ಳಂಗಡ್ಲೆ, ಬೋಳಂಗಡ್ಲೆ, ತುರಚೆ, ನೆಗ್ಗಿಲು, ಸದಾಪ, ಹಿಂಗುಪತ್ರಿ ಎಂಬ ಮೂಲಿಕೆ, ಆಕಳುಕರೆ, ಆಕಲ್ಲಕ, ಉಟಿಂ

ಕಣ, ಇವು ಅಪರಿಚಿತ ಮೂಲಿಕೆಗಳು, ಬಿಳೀಕೊಮ್ಮೆಯ ಬೇರು, ಕೆಂಪು ಛಾಯೆಯ ಕೊಮ್ಮೆಯ ಬೇರು, ಸತ್ತಂಗದಚಕ್ಕೆ, ಧಾತುಮಾಕ್ಷಿಕ, ಹಿಂದೆ ಹೇಳಿದ ಮೂಲಿಕೆಗಳು ಪ್ರತಿಯೊಂದನ್ನೂ ಅರ್ಧ ಪಲದಷ್ಟು ಸಂಗ್ರಹಿಸಿ ಚೂರ್ಣಮಾಡಿ ಮೇಲೆ ಹೇಳಿದ ರಸದೊಡನೆ ಸೇರಿಸುವುದು. ಮಾಕ್ಷಿಕಧಾತು ಸುಟ್ಟು ಪಕ್ವವಾದ ಕಬ್ಬಿಣ ಇವು ಪ್ರತಿಯೊಂದೂ ಅರ್ಧ ತೊಲೆ ಅಂದರೆ ಐವತ್ತು ತೊಲೆ ಪುಟ್ಟ ಸೇರಿಸುವುದು, ಎಂಟು ಪಲ ಧಾತ್ರೀಕುಸುಮವನ್ನು ಸೇರಿಸಿ ಬಾಯಿಗೆ ಸರಿಯಾದ ಮುಚ್ಚಳವನ್ನು ಮುಚ್ಚಿ ಮಣ್ಣಾಗು ಹರಿಗೆ ಅಂದರೆ ಒಂದು ಗಳಿಗೆ ಕಡಮೆ ಇಲ್ಲದಂತೆ ಇರಿಸಿದ್ದು ನಂತರ ತೆಗೆದು ಪ್ರತಿ ಸಮವರ ಪರಿಮಾಣವನ್ನನು ಸರಿಸಿ ಅರ್ಧ ಪಲ, ಒಂದು ಪಲ, ಎರಡು ಪಲ, ಈ ರೀತಿ ಸೇವಿಸುತ್ತ ಬಂದಲ್ಲಿ ಶಕ್ತಿಯನ್ನು ವೃದ್ಧಿ ಮಾಡುತ್ತದೆ, ದೇಹದ ಕಾಂತಿಯನ್ನು ಹೆಚ್ಚಿಸುತ್ತದೆ, ಜಠರಾಗ್ನಿ ಪಾಟವವನ್ನು ಹೆಚ್ಚಿಸುತ್ತದೆ, ರಕ್ತಮಾಂಸಗಳನ್ನು ವೃದ್ಧಿಪಡಿಸುತ್ತದೆ, ಆಹಾರದಲ್ಲಿ ರುಚಿಯನ್ನು ಹೆಚ್ಚಿಸುತ್ತದೆ, ವೀರ್ಯವೃದ್ಧಿಯನ್ನು ಮಾಡುತ್ತದೆ, ಪರಿಣಾಮಶೂಲೆಯನ್ನು ನಿವಾರಣ ಮಾಡುತ್ತದೆ. ಎಂಟು ವಿಧವಾದ ಉದರರೋಗವನ್ನೂ, ಭಯಂಕರವಾದ ಕ್ಷಯರೋಗವನ್ನೂ, ಇಪ್ಪತ್ತು ವಿಧವಾದ ಮೇಹರೋಗವನ್ನೂ, ಉದಾವರ್ತವೆಂಬ ವಾತರೋಗವನ್ನೂ, ಅಪಸ್ಮಾರ ರೋಗವನ್ನೂ, ಮೂತ್ರಿಸುವುದಕ್ಕೆ ಕಷ್ಟವಾಗೋಣವನ್ನೂ, ಶುಕ್ಲದೋಷಗಳನ್ನೂ, ಮೂತ್ರದಲ್ಲಿ ಕಲ್ಲು ಕಾಣಿಸಿಕೊಳ್ಳುವುದನ್ನೂ, ಕ್ರಿಮಿರೋಗವು, ರಕ್ತಪಿತ್ತ ರೋಗ ಇವುಗಳನ್ನೆಲ್ಲಾ ಸಂಶಯವಿಲ್ಲದೆ ಗುಣಪಡಿಸುತ್ತದೆ.

## ಪಿಪ್ಪಲ್ಯಾಸವ.

ಪಿಪ್ಪಲೀಮರಿಚಂಚವ್ಯಂಹರಿದ್ರಾಚಿತ್ರಕೋಘನ ॥ ೨೮ ॥
ವಿಡಂಗಂಕ್ರಮುಕೋಲೋಧ್ರಃಪಾಠಾಧಾತ್ರ್ಯೇಲವಾಲುಕಂ ॥
ಉಶೀರಂಚಂದನಂಕುಷ್ಠಂಲವಂಗಂತಗರಂತಥಾ ॥ ೨೯ ॥
ಮಾಂಸೀತ್ವಗೇಲಾಪತ್ರಂಚಪ್ರಿಯಂಗುರ್ನಾಗಕೇಸರಂ ॥
ಏಷಾಮರ್ಧಪಲಾನ್ಭಾಗಾನ್ಸೂಕ್ಷ್ಮಚೂರ್ಣೀಕೃತಾನ್ಶುಭಾನ್ ೩೦
ಜಲದ್ರೋಣದ್ವಯೇಕ್ಷಿಪ್ತ್ವಾದದ್ಯಾದ್ಗುಡತುಲಾತ್ರಯಂ ॥
ಪಲಾನಿದಶಧಾತಕ್ಯಾದ್ರಾಕ್ಷಾಷಷ್ಟಿಪಲಾಭವೇತ್ ॥ ೩೧ ॥
ಏತಾನ್ಯೇಕತ್ರಸಂಯೋಜ್ಯಮೃದ್ಭಾಂಡೇಚವಿನಿಕ್ಷಿಪೇತ್ ॥
ಜ್ಞಾತ್ವಾಗತರಸಂತಸ್ಯಪಾಯಯೇದಗ್ನ್ಯಪೇಕ್ಷಂ ॥ ೩೨ ॥
ಕ್ಷಯಂಗುಲ್ಮೋದರಂಕಾರ್ಶ್ಯಂಗ್ರಹಣೀಂಪಾಂಡುತಾಂಗದಂ ॥
ಅರ್ಶಾಂಸಿನಾಶಯೇತ್‌ಶೀಘ್ರಂಪಿಪ್ಪಲ್ಯಾದ್ಯಾಸವಸ್ತ್ವಯಂ ॥೩೩॥

ಹಿಪ್ಪಲಿ, ಮೆಣಸು, ಮೆಣಸಿನಬಳ್ಳಿ, ಅಿಸಿನ, ಚಿತ್ರಮೂಲ, ಭದ್ರಮುಸ್ತೆ, ವಾಯುವಿಡಂಗ, ಅಡಿಕೆ, ಲೋಧ್ರದಚಕ್ಕೆ, ಆಗಳುರಿ, ನೆಲ್ಲಿಯಕಾಯಿ, ಸುರಸುರಿಕೆ, ಲಾಮುಂಚ, ಚಂದನ, ಚಂಗಲಕೋಷ್ಟ, ಲವಂಗ, ಗ್ರಂಧಿಗರ, ಜಟಾಮಾಂಸಿ, ಲವಂಗಪಟ್ಟೆ, ಯಾಲಕ್ಕಿ, ಜಾಯಿಪತ್ರೆ, ನಾಗಕೇಸರ, ಈ ದಿನಸುಗಳು ಪ್ರತಿಯೊಂದೂ ಅರ್ಧ ಪಲದಷ್ಟು ಸಂಗ್ರಹಿಸಿ ಸಣ್ಣಗೆ ಪುಡಿಗುಟ್ಟಿ ಎರಡು ದ್ರೋಣ ಪರಿಮಾಣ ನೀರಿನಲ್ಲಿ ಹಾಕಿ ಮೂರುನೂರು ಪಲ ಬೆಲ್ಲವನ್ನೂ ಹಾಕಿ ಹತ್ತು ಪಲ ಧಾತ್ರೀಕುಸುಮವನ್ನೂ ಅದರಲ್ಲಿ ಹಾಕಿ ಅರವತ್ತು ಪಲ ದ್ರಾಕ್ಷಿಯಹಣ್ಣನ್ನೂ ಹಾಕಿ ಆ ಮಣ್ಣಿನ ಪಾತ್ರೆಗೆ ಬಾಯಿಮುಚ್ಚಿ ಉಸಿರಾಡದಂತೆ ಚೀಲಮಾಡಿ, ಸುಪಕ್ವವಾಗ ವವರಿವಿಗೂ ಅದರಲ್ಲಿರಿಸಿದ್ದು ಪಕ್ವವಾದ ಮೇಲೆ ಶೋಧಿಸಿ ಭದ್ರಪಡಿಸಿಕೊಳ್ಳುವುದು, ಜೀರ್ಣಶಕ್ತಿಯನ್ನು ನೋಡಿಕೊಂಡು ಪರಿಮಾಣವನ್ನು ನಿಶ್ಚಯಿಸಿಕೊಳ್ಳಬೇಕು. ಇದನ್ನು ಸೇವಿಸೋಣದರಿಂದ ಕ್ಷಯರೋಗ, ಗುಲ್ಮಗಳು, ಉದರ, ಕಾರ್ಶ್ಯ ಎಂದರೆ ಮನುಷ್ಯನು ದಿನೇ ದಿನೇ ಒತ್ತಿಕೊಂಡು ಬಡವಾಗುತ್ತ ಬರುವುದು, ಗ್ರಹಣಿರೋಗ, ಪಾಂಡುರೋಗ, ವಾತಲವ್ಯಾಧಿ, ಇವುಗಳನ್ನೆಲ್ಲಾ ಜಾಗ್ರತೆಯಾಗಿ ಗುಣಪಡಿಸುತ್ತದೆ.

### ಲೋಹಾಸವ.

ಲೋಹಚೂರ್ಣಂತ್ರಿಕಟುಕಂತ್ರಿಫಲಾಂಚಯಮಾನಿಕಾಂ ॥
ವಿಡಂಗಂಮುಸ್ತಕಂಚಿತ್ರಂಚತುಸ್ಸಂಖ್ಯಾಪಲಂಪೃಥಕ್ ॥ ೩೪ ॥
ಧಾತಕೀಕುಸುಮಾನಾಂತುಪ್ರಕ್ಷಿಪೇತ್ಪಲವಿಂಶತಿಂ ॥
ಚೂರ್ಣೀಕೃತ್ಯತತಃಕ್ಷೌದ್ರಂಚತುಷ್ಷಷ್ಟಿಪಲಂಕ್ಷಿಪೇತ್ ॥ ೩೫ ॥
ದದ್ಯಾದ್ಗುಡತುಲಾಂತತ್ರಜಲದ್ರೋಣದ್ವಯಂತಥಾ ॥
ಘೃತಭಾಂಡೇವಿನಿಕ್ಷಿಪ್ಯನಿದಧ್ಯಾನ್ಮಾಸಮಾತ್ರಕಂ ॥ ೩೬ ॥
ಲೋಹಾಸವಮಮುಂಮರ್ತ್ಯಃಪಿಬೇದ್ವಹ್ನಿಕರಂಪರಂ ॥
ಪಾಂಡುಶ್ವಯಥುಗುಲ್ಮಾನಿಜಠರಾಣ್ಯರ್ಶಸಾಂರುಜಂ ॥ ೩೭ ॥
ಕುಷ್ಠಂಪ್ಲೀಹಾಮಯಂಕಂಡೂಂಕಾಸಂಶ್ವಾಸಂಭಗಂದರಂ ॥
ಅರೋಚಕಂಚಗ್ರಹಣೀಂಹೃದ್ರೋಗಂಚವಿನಾಶಯೇತ್ ॥ ೩೮ ॥

ಕಬ್ಬಿಣದ ಪುಡಿ, ಶುಂಠಿ, ಹಿಪ್ಪಲಿ, ಮೆಣಸು, ಅಳಲೆಕಾಯಿ, ತಾರೆಕಾಯಿ, ನೆಲ್ಲಿಯಕಾಯಿ, ವೋಮ, ವಾಯವಿಡಂಗ, ಭದ್ರಮುಸ್ತೆ, ಚಿತ್ರಮೂಲ, ಇವು ಪ್ರತಿಯೊಂದೂ ನಾಲ್ಕು ಪಲ ಪರಿಮಾಣ, ಇವುಗಳನ್ನು ಚನ್ನಾಗಿ ಚೂರ್ಣಮಾಡಿ ಒಂದು ಮಣ್ಣಿನ ಭಾಂಡದಲ್ಲಿ ಹಾಕಿ ಅದರಲ್ಲಿ ಎರಡು ದ್ರೋಣ ಪರಿಮಾಣ ನೀರನ್ನು ಸುರಿದು, ಇಪ್ಪತ್ತು ಪಲ ಧಾತ್ರೀಕುಸುಮವನ್ನು ಹಾಕಿ, ಜೇನುತುಪ್ಪ

ಅರವತ್ತನಾಲ್ಕು ಪಲದಷ್ಟನ್ನು ಅದರಲ್ಲಿ ಹಾಕಿ, ಬೆಲ್ಲ ಒಂದುನೂರು ಪಲದಷ್ಟನ್ನು ಹಾಕಿ ಆ ಭಾಂಡಕ್ಕೆ ಸೀಲುಮಾಡಿ ಒಂದು ತಿಂಗಳು ಪರಿಯಂತರ ಇರಿಸಿರುವುದು, ಒಂದು ತಿಂಗಳಾದ ಮೇಲೆ ಚನ್ನಾಗಿ ಪಕ್ವವಾದದ್ದನ್ನು ಸೋಸಿ ಶೋಧಿಸಿ ಇರಿಸಿಕೊಂಡು ಪ್ರಮಾಣಕ್ಕೆ ಸರಿಯಾಗಿ ಕುಡಿಯುತ್ತ ಬಂದರೆ ಜಠರಾಗ್ನಿಯನ್ನು ವೃದ್ಧಿಪಡಿಸುತ್ತದೆ, ಪಾಂಡುರೋಗ, ಶೋಭೆ, ಗುಲ್ಮ, ಉದರಗಳು, ಮೂಲವ್ಯಾಧಿ, ಕುಷ್ಠರೋಗ, ಪ್ಲೀಹಾಭಿವೃದ್ಧಿ, ಮೈನವೆ, ಕೆಮ್ಮು, ಉಬ್ಬಸ, ಭಗಂದರವೆಂಬ ವ್ರಣ, ಅರುಚಿ, ಗ್ರಹಣೀ ಎಂಬ ಭೇದಿ, ಹೃದಯರೋಗ ಇವುಗಳನ್ನೆಲ್ಲಾ ಗುಣಪಡಿಸುತ್ತದೆ

## ಮೃದ್ವೀಕಾರಿಷ್ಟ.

ಮೃದ್ವೀಕಾಯಾಃಪಲಶತಂಚತುರ್ದ್ರೋಣೇಂಭಸಃಪಚೇತ್ ॥
ದ್ರೋಣಶೇಷೇಸುಶೀತೇಚಪೂತೇತಸ್ಮಿನ್‌ಪ್ರದಾಪಯೇತ್ ॥ ೩೯ ॥
ತುಲೇದ್ವೇಕ್ಷೌದ್ರಖಂಡಾಭ್ಯಾಂಧಾತಕ್ಯಾಃಪ್ರಸ್ಥಮೇವಚ ॥
ಕಂಕೋಲಕಂಲವಂಗಂಚಪಲಂಜಾತ್ಯಾಸ್ತಥೈವಚ ॥ ೪೦ ॥
ಪಲಾಂಶಕಂಚಮರಿಚತ್ವಗೇಲಾಪತ್ರಕೇಸರಂ ॥
ಪಿಪ್ಪಲೀಚಿತ್ರಕಂಚವ್ಯಂಪಿಪ್ಪಲೀಮೂಲರೇಣುಕೇ ॥ ೪೧ ॥
ಘೃತಭಾಂಡೇವಿನಿಕ್ಷಿಪ್ಯಚಂದನಾಗರುಧೂಪಿತೇ ॥
ಕರ್ಪೂರವಾಸಿತೋಹ್ಯೇಷಗ್ರಹಣ್ಯಾದೀಪನಃಪರಃ ॥ ೪೨ ॥
ಅರ್ಶಸಾಂನಾಶನೇಶ್ರೇಷ್ಠಉದಾವರ್ತಸ್ಯಗುಲ್ಮನುತ್ ॥
ಜಠರಕ್ರಿಮಿಕುಷ್ಠಾನಿವ್ರಣಾನಿವಿವಿಧಾನಿಚ ॥ ೪೩ ॥
ಅಕ್ಷಿರೋಗಶಿರೋರೋಗಗಳರೋಗಾಂಶ್ಚನಾಶಯೇತ್ ॥

ಒಂದುನೂರು ಪಲ ದ್ರಾಕ್ಷಿಯ ಹಣ್ಣುಗಳನ್ನು ನಾಲ್ಕು ದ್ರೋಣ ಪರಿಮಾಣ ನೀರಿನಲ್ಲಿ ಹಾಕಿ ಕಾಯಿಸುತ್ತ ಆ ನೀರೆಲ್ಲ ಬತ್ತಿ ಒಂದು ದ್ರೋಣ ನಿಲ್ಲುವ ವರಿವಿಗೂ ಕಾಯಿಸುವುದು, ಒಂದು ದ್ರೋಣದಷ್ಟಕ್ಕೆ ನಿಂತ ಮೇಲೆ ಕೆಳಗೆ ಇಳಿಸಿ ಚನ್ನಾಗಿ ಆರಿದ ಮೇಲೆ ಶೋಧಿಸಿ ಆ ಕಷಾಯವನ್ನು ಒಂದು ತುಪ್ಪ ಹಾಕಿದ ಮಡಕೆಯಲ್ಲಿ ಹಾಕಿ ಅದರಲ್ಲಿ ಒಂದುನೂರು ಪಲ ಜೇನುತುಪ್ಪ, ಒಂದುನೂರು ಪಲ ಖಂಡಸಕ್ಕರೆ ಇವೆರಡನ್ನೂ ಹಾಕಿ ಅರವತ್ತನಾಲ್ಕು ತೊಲ ಧಾತ್ರೀಕುಸುಮವನ್ನೂ ಹಾಕಿ ಗಂಧಮೆಣಸು, ಲವಂಗ, ಜಾಯಿಕಾಯಿ, ಮೆಣಸು, ಲವಂಗಪಟ್ಟೆ, ಯಾಲಕ್ಕಿ, ಜಾಪತ್ರಿ, ನಾಗಕೇಸರಿ, ಹಿಪ್ಪಲಿ, ಚಿತ್ರಮೂಲ, ಮೆಣಸಿನಬಳ್ಳಿ, ಹಿಪ್ಪಲಿಮೋಡಿ, ರೇಣುಕ, ಇವು ಪ್ರತಿಯೊಂದೂ ಒಂದೊಂದು ಪಲದಷ್ಟು ಸಂಗ್ರಹಿಸಿ ಚೂರ್ಣಮಾಡಿ ಕಷಾಯವಿರುವ ಭಾಂಡದಲ್ಲಿ ಹಾಕಬೇಕು, ಇದೆಲಾ

ಹಾಕುವುದಕ್ಕೆ ಪೂರ್ವ ಭಾಂಡಕ್ಕೆ ಗಂಧದ ಹೊಗೆ ಹಾಕಿರಬೇಕು, ಚೂರ್ಣಗಳನ್ನು ಹಾಕಿ ಬಾಯಿಗೆ ಸರಿಯಾದ ಮುಚ್ಚಳ ಮುಚ್ಚಿ ಬಂದುಮಾಡಿ ಪಕ್ವವಾಗುವವರಿಗೆ ಇರಿಸಿದ್ದು ನಂತರ ಶೋಧಿಸಿಕೊಂಡು ಸುವಾಸನೆಗಾಗಿ ಪಚ್ಚಕರ್ಪೂರವನ್ನು ಸೇರಿಸತಕ್ಕದ್ದು, ಇದರ ಸೇವನೆಯಿಂದ ಜಠರಾಗ್ನಿ ವೃದ್ಧಿಯಾಗುತ್ತದೆ, ಮೂಲವ್ಯಾಧಿಗೆ ಅತ್ಯುತ್ತಮವಾದದ್ದು, ಉದಾವರ್ತ, ಗುಲ್ಮಗಳು, ಉದರಗಳು, ಕ್ರಿಮಿರೋಗ, ಕುಷ್ಠರೋಗ, ಅನೇಕ ವಿಧಗಳಾದ ವ್ರಣಗಳು, ನೇತ್ರರೋಗಗಳು, ಶಿರೋರೋಗಗಳು, ಕಂಠರೋಗಗಳು ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

## ಕುಟಜಾರಿಷ್ಟ.

ತುಲಾಂಕುಟಜಮೂಲಸ್ಯಮೃದ್ವೀಕಾರ್ಧತುಲಾಂತಥಾ ॥ ೪೪ ॥
ಮಧೂಕಪುಷ್ಪಕಾಶ್ಮರ್ಯಭಾಗಾನ್ ದಶಪಲೋನ್ಮಿತಾನ್ ॥
ಚತುರ್ದ್ರೋಣೇಂಭಸಃಪಕ್ತ್ವಾಕ್ವಾಥೇದ್ರೋಣಾವಶೇಷಿತೇ ॥೪೫॥
ಧಾತಕ್ಯಾವಿಂಶತಿಪಲಂಗುಡಸ್ಯಚತುಲಾಂಕ್ಷಿಪೇತ್ ॥
ಮಾಸಮಾತ್ರಂಸ್ಥಿತೋಭಾಂಡೇಕುಟಜಾರಿಷ್ಟಸಂಜ್ಞಿತಂ ॥ ೪೬ ॥
ಜ್ವರಾನ್ಪ್ರಶಮಯೇತ್ಸರ್ವಾನ್ಕುರ್ಯಾತ್ತೀಕ್ಷ್ಣಂಧನಂಜಯಂ ॥

ಒಂದುನೂರು ಪಲ ಕೊಡಸದ ಬೇರು, ಐವತ್ತು ಪಲ ದ್ರಾಕ್ಷಿಹಣ್ಣು, ಇಪ್ಪೆಯಹುವ್ವು ಶಿವನೆಯಹಣ್ಣು ಇವೆರಡೂ ಪ್ರತ್ಯೇಕ ಹತ್ತು ಪಲ, ಇವಿಷ್ಟನ್ನೂ ನಾಲ್ಕು ದ್ರೋಣದಷ್ಟು ನೀರಿನಲ್ಲಿ ಕಷಾಯಮಾಡಿಟ್ಟು ಕಾಯಿಸಿ ಒಂದು ದ್ರೋಣದಷ್ಟು ನಿಲ್ಲಿಸಿಕೊಂಡು ಅದರಲ್ಲಿ ಬೆಲ್ಲ ಒಂದುನೂರು ಪಲ, ಧಾತ್ರೀಕುಸುಮ ಇಪ್ಪತ್ತು ಪಲ ಇಷ್ಟನ್ನೂ ಸೇರಿಸಿ ಮಣ್ಣಿನ ಮಡಿಕೆಯಲ್ಲಿ ಒಂದು ತಿಂಗಳವರಿಗೂ ಉಪದ್ರವಿಲ್ಲದಂತೆ ಮುಚ್ಚಿ ಇರಿಸಿದ್ದು ನಂತರ ತೆಗದುಕೊಂಡು ಶೋಧಿಸಿ ಉಪಯೋಗಿಸತಕ್ಕದ್ದು. ಇದರಿಂದ ಸಮಸ್ತ ವಿಧವಾದ ಜ್ವರಗಳೂ ಶಮನವಾಗಿ ಜಠರಾಗ್ನಿಪಾಟವು ವಿಶೇಷ ಚನ್ನಾಗುತ್ತದೆ

## ವಿಡಂಗಾರಿಷ್ಟ.

ವಿಡಂಗಂಗ್ರಂಥಿಕಂರಾಸ್ನಾಕುಟಜತ್ವಕ್ಫಲಾನಿಚ ॥ ೪೭ ॥
ಪಾಠೈಲಾವಾಲುಕಂಧಾತ್ರೀಭಾಗಾನ್ಪಂಚಪಲಾನ್ಪೃಥಕ್ ॥
ಅಷ್ಟದ್ರೋಣೇಂಭಸಃಪಕ್ತ್ವಾಕುರ್ಯಾದ್ದ್ರೋಣಾವಶೇಷಿತಂ ॥೪೮॥
ಪೂತೇಶೀತೇಕ್ಷಿಪೇತ್ತತ್ರಕ್ಷೌದ್ರಂಪಲಶತತ್ರಯಂ ॥
ಧಾತಕೀಂವಿಂಶತಿಪಲಾಂತ್ರಿಜಾತಂದ್ವಿಪಲಂತಥಾ ॥ ೪೯ ॥

ಪ್ರಿಯಂಗುಕಾಂಚನಾರಾಣಾಂಸಲೋಧ್ರಾಣಾಂಪಲಂಪಲಂ ॥
ವ್ಯೋಷಸ್ಯಚಪಲಾನ್ಯಷ್ಟೌಚೂರ್ಣೀಕೃತ್ಯಪ್ರದಾಪಯೇತ್ ॥ ೫೦ ॥
ಘೃತಭಾಂಡೇವಿನಿಕ್ಷಿಪ್ಯಮಾಸಮೇಕಂನಿಧಾಪಯೇತ್ ॥
ತತಃಪಿಬೇದ್ಯಥಾಹರ್ಂತುಜಯೇದ್ವಿದ್ರಧಿಮುತ್ಥಿತಾಂ ॥ ೫೧ ॥
ಊರುಸ್ತಂಭಾಶ್ಮರೀಮೇಹಾನ್ಪ್ರತ್ಯಷ್ಠೀಲಾಭಗಂದರಾನ್ ॥
ಗಂಡಮಾಲಾಂಹನುಸ್ತಂಭಂವಿಡಂಗಾರಿಷ್ಟಸಂಜ್ಞಕಃ ॥ ೫೨ ॥

ವಾಯುವಿಡಂಗ, ಗ್ರಂಥಿತಗರ, ಸಣ್ಣರಾಸ್ನೆ, ಕೊಡಸದ ಚಕ್ಕೆ ಮತ್ತು ಕಾಯಿಗಳು, ಅಗಸುಶುಂಠಿ, ಸುರಸುರಿಕೆ, ನೆಲ್ಲಿಯುಕಾಯಿ, ಇವು ಪ್ರತಿಯೊಂದೂ ಐವ್ವೈದು ಪಲವಷ್ಟು ಸೇರಿಸಿ ಎಂಟು ದ್ರೋಣ ಪರಿಮಾಣ ನೀರಿನಲ್ಲಿ ಕಷಾಯ ವಿಟ್ಟು ಒಂದು ದ್ರೋಣವಾಗುವವರಿವಿಗೂ ಕಾಯಿಸಿ ಇಳಿಸಿ ಆರಿದ ಮೇಲೆ ಶೋಧಿಸಿಕೊಂಡು ತುಪ್ಪವನ್ನು ಬಳಸಿದ ಮಡಿಕೆಯಲ್ಲಿ ಹಾಕಿ ಅವರ ಜೊತೆಗೆ ಮುನ್ನೂರು ಪಲ ಜೇನುತುಪ್ಪವನ್ನು ಬೆರಸಿ, ಇಪ್ಪತ್ತು ಪಲ ಧಾತ್ರೀಕುಸುಮ, ತ್ರಿಜಾತಕ (ಯಾಲಕ್ಕಿ, ಲವಂಗಚಕ್ಕೆ, ಜಾಪತ್ರಿ) ಎರಡು ಪಲ, ಪ್ರಿಯಂಗು ಎಂಬ ಸ್ವನಾಮ ಪ್ರಖ್ಯಾತವಾದ ಮೂಲಿಕೆ, ಕಂಚುವಾಳದಚಕ್ಕೆ, ಪತಂಗದಚಕ್ಕೆ, ಇವು ಮೂರೂ ಪ್ರತ್ಯೇಕ ಒಂದೊಂದು ಪಲ, ವ್ಯೋಷ ಎಂದರೆ ಶುಂಠಿ, ಹಿಪ್ಪಲಿ, ಮೆಣಸು, ಇವು ಎಂಟು ಪಲ, ಇವೆಲ್ಲವನ್ನೂ ಸಣ್ಣ ಚೂರ್ಣಮಾಡಿ ಆ ಮಡಿಕೆ ಯಲ್ಲಿ ಹಾಕಿ ಬಾಯಿಗೆ ಮುಚ್ಚಳವನ್ನು ಹಾಕಿ ಒಂದು ತಿಂಗಳು ಪರ್ಯಂತ ಉಸಿ ರಾಡದಂತೆ ಇರಿಸಿದ್ದು ನಂತರ ಶೋಧಿಸಿಕೊಂಡು ಪ್ರಮಾಣವರಿತು ಕುಡಿಯುತ್ತ ಬಂದಲ್ಲಿ ವಿದ್ರಧಿ ಎಂಬ ಬಾವು, ಮೊಣಕಾಲು ಹಿಡಿಯುವುದು, ಮೂತ್ರದ್ವಾರದಲ್ಲಿ ಕಲ್ಲು ಬರುವುದು, ಮೇಹರೋಗ, ಭಗಂದರವೆಂಬ ವ್ರಣ, ಗಂಡಮಾಲೆ, ದವಡೆ ಹಿಡಿಯುವುದು ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

## ದೇವದಾರ್ವ್ಯಾದ್ಯರಿಷ್ಟ.

ತುಲಾರ್ಧಂದೇವದಾರೋಸ್ಸ್ಯಾದ್ವಾಸಾಚಪಲವಿಂಶತಿಃ ॥
ಮಂಜಿಷ್ಠೇಂದ್ರಯವಾದಂತೀತಗರಂರಜನೀದ್ವಯಂ ॥ ೫೩ ॥
ರಾಸ್ನಾಕ್ರಿಮಿಘ್ನಂಮುಸ್ತಂಚಶಿರೀಷಂಖದಿರಾರ್ಜುನಾ ॥
ಭಾಗಾನ್ ದಶಪಲಾನ್ ದದ್ಯಾದ್ಯವಾನ್ಯಾವತ್ಸಕಸ್ಯಚ ॥ ೫೪ ॥
ಚಂದನಸ್ಯಗುಡೂಚ್ಯಾಶ್ಚರೋಹಿಣ್ಯಾಶ್ಚಿತ್ರಕಸ್ಯಚ ॥
ಭಾಗಾನಷ್ಟಪಲಾನೇತಾನಷ್ಟದ್ರೋಣೇಂಭಸಃಪಚೇತ್ ॥ ೫೫ ॥
ದ್ರೋಣಶೇಷೇಕಷಾಯೇಚಪೂತೇಶೀತೇಪ್ರದಾಪಯೇತ್ ॥

ಧಾತಕ್ಯಾಃ ಷೋಡಶಪಲಂ ಮಾಕ್ಷಿಕಸ್ಯ ತುಲಾತ್ರಯಂ ॥ ೫೬ ॥
ವ್ಯೋಷಸ್ಯ ದ್ವಿಪಲಂ ದದ್ಯಾತ್ ತ್ರಿಜಾತಸ್ಯ ಚತುಷ್ಪಲಂ ॥
ಚತುಷ್ಪಲಂ ಪ್ರಿಯಂಗೋಶ್ಚ ದ್ವಿಪಲಂ ನಾಗಕೇಶರಂ ॥ ೫೭ ॥
ಸರ್ವಾಣ್ಯೇತಾನಿ ಸಂಚೂರ್ಣ್ಯ ಘೃತಭಾಂಡೇ ನಿಧಾಪಯೇತ್ ॥
ಮಾಸಾದೂರ್ಧ್ವಂ ಪಿಬೇದೇನಂ ಪ್ರಮೇಹಂ ಹಂತಿ ದುರ್ಜಯಂ ॥ ೫೮ ॥
ವಾತರೋಗಾನ್ ಗ್ರಹಣ್ಯರ್ಶೋಮೂತ್ರಕೃಚ್ಛ್ರಾಣಿ ನಾಶಯೇತ್ ॥
ದೇವದಾರ್ವ್ಯಾದಿಕೋರಿಷ್ಟಃ ಕಂಡೂಕುಷ್ಠವಿನಾಶನಃ ॥ ೫೯ ॥

ದೇವದಾರೀಚಕ್ಕೆ ಐವತ್ತು ಪಲ, ಆಡುಸೋಗೆಯ ಸೊಪ್ಪು ಇಪ್ಪತ್ತು ಪಲ, ಮಂಜಿಷ್ಠೆ, ಕೊಡಸದ ಬೀಜ, ಜಾಸಾಳದ ಬೀಜ, ಗ್ರಂಧಿತಗರ, ಅರಿಸಿನ, ಮರದರಿಸಿನ, ಸಣ್ಣರಾಷ್ಮೆ, ವಾಯುವಿಡಂಗ, ಭದ್ರಮುಸ್ತೆ, ಬಾಗೆಯತೊಪ್ಪೆ, ಕಗ್ಗಲಿಯ ತೊಪ್ಪೆ, ಮತ್ತಿಯಚಕ್ಕೆ, ಇವು ಪ್ರತಿಯೊಂದೂ ಹತ್ತು ಪಲ ಪರಿಮಾಣ, ಪೋವಿನಕಾಳು. ಕೊಡಸದಚಕ್ಕೆ, ಚಂದನ, ಅಮೃತಬಳ್ಳಿ, ಕಟುಕರೋಹಿಣಿ, ಚಿತ್ರಮೂಲದ ಬೇರು, ಇವು ಪ್ರತಿಯೊಂದೂ ಎಂಟೆಂಟು ಪಲ, ಇವೆಲ್ಲವನ್ನೂ ಸೇರಿಸಿ ಎಂಟು ದ್ರೋಣ ಪರಿಮಾಣ ನೀರಿನಲ್ಲಿ ಕಷಾಯಮಾಡಿ ಒಂದು ದ್ರೋಣದಷ್ಟು ಕಷಾಯವನ್ನುಳಿಸಿಕೊಂಡು ಸೋಸಿ ಆರಿದ ಮೇಲೆ ಆ ಕಷಾಯವನ್ನು ತುಪ್ಪ ಬಳಸಿದ ಮಡಕೆಯಲ್ಲಿ ಹಾಕಿ ಅದರಲ್ಲಿ ಧಾತ್ರೀಕುಸುಮ ಹದಿನಾರುಪಲ, ಜೇನುತುಪ್ಪ ಇನ್ನೂರು ಪಲ, ವ್ಯೋಷ (ಶುಂಠಿ, ಹಿಪ್ಪಲಿ, ಮೆಣಸು) ಎರಡು ಪಲ, ತ್ರಿಜಾತ (ಯಾಲಕ್ಕಿ, ಲವಂಗಪಟ್ಟೆ, ಜಾತಿಪತ್ರೆ) ನಾಲ್ಕು ಪಲ, ಪ್ರಿಯಂಗು ಎಂಬ ಸ್ವನಾಮಪ್ರಸಿದ್ಧವಾದ ಮೂಲಿಕೆ ನಾಲ್ಕು ಪಲ, ನಾಗಕೇಸರಿ ಎರಡು ಪಲ ಇವೆಲ್ಲವನ್ನೂ ಚನ್ನಾಗಿ ಚೂರ್ಣಿಸಿ ಆ ಕಷಾಯದೊಡನೆ ಸೇರಿಸಿ ಒಂದು ತಿಂಗಳವರಿಗೂ ಗಾಳಿ ಆಡದಂತೆ ಇರಿಸಿದ್ದು ನಂತರ ಸೇವನಮಾಡುತ್ತ ಬಂದರೆ ಎಂತಹ ಕಠಿನತಮವಾದ ಮೇಹರೋಗವಾದರೂ ಗುಣಕ್ಕೆ ಬರುತ್ತದೆ. ವಾತವ್ಯಾಧಿಗಳು, ಗ್ರಹಣಿ ಎಂಬ ಭೇದಿ, ಮೂಲವ್ಯಾಧಿ, ಮೂತ್ರಕೃಚ್ಛ್ರ ಎಂದರೆ ಮೂತ್ರಿಸುವುದು ಕಷ್ಟವಾಗೋಣ, ಮೈನವೆ, ಕುಷ್ಠರೋಗ ಇವುಗಳೆಲ್ಲವೂ ನಿವಾರಣೆಯಾಗುತ್ತವೆ.

## ಖದಿರಾರಿಷ್ಟ.

ಖದಿರಸ್ಯ ತುಲಾರ್ಧಂ ತು ದೇವದಾರು ಚ ತತ್ಸಮಂ ॥
ಬಾಕುಚೀದ್ವಾದಶಪಲಾ ದಾರ್ವೀಸ್ಯಾತ್ಪಲವಿಂಶತಿಃ ॥ ೬೦ ॥
ತ್ರಿಫಲಾ ವಿಂಶತಿಪಲಾ ಹ್ಯಷ್ಟದ್ರೋಣೇಂಭಸಃ ಪಚೇತ್ ॥
ಕಷಾಯೇ ದ್ರೋಣಶೇಷೇ ಚ ಪೂತೇ ಶೀತೇ ವಿನಿಕ್ಷಿಪೇತ್ ॥ ೬೧ ॥
ತುಲಾದ್ವಯಂ ಮಾಕ್ಷಿಕಸ್ಯ ತುಲೈಕಾ ಶರ್ಕರಾ ಮತಾ ॥

ಧಾತಕ್ಯಾವಿಂಶತಿಪಲಂಕಂಕೋಲಂನಾಗಕೇಸರಂ ॥ ೬೨ ॥
ಜಾತೀಫಲಂಲವಂಗ್ಯೆಲಾತ್ವಕ್ಪತ್ರಾಣಿಪೃಥಕ್ಪೃಥಕ್ ॥
ಪಲೋನ್ಮಿತಾನಿಕೃಷ್ಣಾಯಾದದ್ಯಾತ್ಪಲಚತುಷ್ಟಯಂ ॥ ೬೩ ॥
ಘೃತಭಾಂಡೇವಿನಿಕ್ಷಿಪ್ಯಮಾಸಾದೂರ್ಧ್ವಂಪಿಬೇನ್ನರಃ ॥
ಮಹಾಕುಷ್ಠಾನಿಹೃದ್ರೋಗಂಪಾಂಡುರೋಗಾರ್ಬುದೇತಥಾ॥೬೪॥
ಗುಲ್ಮಂಗ್ರಂಥಿಂಕ್ರಿಮೀನ್ ಕಾಸಂಶ್ವಾಸಂಪ್ಲೀಹೋದರಂಜಯೇತ್
ವಿಷಮೈಖದಿರಾರಿಷ್ಟಸ್ಸರ್ವಕುಷ್ಠನಿವಾರಣಃ ॥ ೬೫ ॥

ಕಗ್ಗಲಿಯಪಟ್ಟೆ ಐವತ್ತು ಪಲ, ದೇವದಾರೀಚಕ್ಕೆ ಐವತ್ತು ಪಲ, ಬಾವಂಚಿ ಬೀಜ ಹನ್ನೆರಡು ಪಲ, ಮರಅರಿಸಿನ ಇಪ್ಪತ್ತು ಪಲ, ತ್ರಿಫಲ (ಅಳಲೆ, ತಾರೆ, ನೆಲ್ಲಿ) ಇಪ್ಪತ್ತು ಪಲ, ಇವೆಲ್ಲವನ್ನೂ ಎಂಟು ದ್ರೋಣ ಪರಿಮಿತವಾದ ನೀರಿನಲ್ಲಿ ಕಷಾಯಮಾಡಿ ಒಂದು ದ್ರೋಣದಷ್ಟು ಇಳಿಸಿಕೊಂಡು ಶೋಧಿಸಿ ತುಪ್ಪವನ್ನು ಬಳಸಿದ ಗುಡಾಣದಲ್ಲಿ ಆ ಕಷಾಯವನ್ನು ಹಾಕಿ ಅದರಲ್ಲಿ ಇನ್ನೂರು ಪಲ ಜೇನು ತುಪ್ಪವನ್ನು ಬೆರಸಿ ನೂರು ಪಲ ಸಕ್ಕರೆಯನ್ನೂ ಸೇರಿಸಿ, ಧಾತ್ರೀಕುಸುಮ ಇಪ್ಪತ್ತುಪಲ, ಗಂಧಮೆಣಸು, ನಾಗಕೇಸರಿ, ಜಾಯಿಕಾಯಿ, ಲವಂಗ, ಯಾಲಕ್ಕಿ, ಲವಂಗಪಟ್ಟೆ, ಜಾಪತ್ರಿ ಇವು ಪ್ರತಿಯೊಂದೂ ಒಂದೊಂದು ಪಲ ಹಿಪ್ಪಲಿ ನಾಲ್ಕು ಪಲ, ಇವೆಲ್ಲವನ್ನೂ ಚನ್ನಾಗಿ ಚೂರ್ಣಮಾಡಿ ಅದರಲ್ಲಿ ಹಾಕಿ ಒಂದು ತಿಂಗಳು ಕಳೆಯುವವರಿಗೂ ಉಸಿರಾಡದಂತೆ ಇರಿಸಿದ್ದು ನಂತರ ಶೋಧಿಸಿ ಕೊಂಡು ಸೇವಿಸುತ್ತ ಬಂದಲ್ಲಿ ಮಹಾಕುಷ್ಠಗಳು, ಹೃದಯರೋಗ, ಪಾಂಡು ರೋಗ, ಅರ್ಬುದವೆಂಬ ವ್ರಣರೋಗ, ಗುಲ್ಮರೋಗ, ಗ್ರಂಥಿಗಳು, ಕ್ರಿಮಿಗಳು, ಕೆಮ್ಮಲು, ಉಬ್ಬಸ, ಪ್ಲೀಹೋದರ, ಸಮಸ್ತ ವಿಧವಾದ ಕುಷ್ಠಗಳು ಇವುಗಳ ನ್ನೆಲ್ಲಾ ನಿವಾರಣಮಾಡುತ್ತದೆ, ಇದಕ್ಕೆ ಖದಿರಾರಿಷ್ಟವೆಂಬದಾಗಿ ಹೆಸರು.

## ಬಬ್ಬೂಲಾರಿಷ್ಟ.

ತುಲಾದ್ವಯಂತುಬಬ್ಬೂಲ್ಯಾಕ್ಷತುರ್ದ್ರೋಣೇಜಲೇಪಚೇತ್ ॥
ದ್ರೋಣಶೇಷೇರಸೇಶೀತೇಗುಡಸ್ಯಚತುಲಾಂಕ್ಷಿಪೇತ್ ॥ ೬೬ ॥
ಧಾತಕೀಂಷೋಡಶಪಲಾಂಕೃಷ್ಣಾಂಚದ್ವಿಪಲಾಂತಥಾ ॥
ಜಾತೀಫಲಾನಿಕಂಕೋಲಮೇಲಾತ್ವಕ್ಪತ್ರಕೇಶರಂ ॥ ೬೭ ॥
ಲವಂಗಂಮರಿಚಂಚೈವಪಲಿಕಾನ್ಯುಪಕಲ್ಪಯೇತ್ ॥
ಮಾಸಂಭಾಂಡೇಸ್ಥಿತಸ್ತ್ವೇಷಬಬ್ಬೂಲಾರಿಷ್ಟಕೋಜಯೇತ್ ॥೬೮॥
ಕ್ಷಯಂಕುಷ್ಠಮತೀಸಾರಂಪ್ರಮೇಹಶ್ವಾಸಕಾಸಕಂ ॥

ಗೊಬ್ಬಳಿಯ ಪಟ್ಟೆ ಇನ್ನೂರು ಪಲವನ್ನು ನಾಲ್ಕು ದ್ರೋಣ ಪರಿಮಾಣ ನೀರಿನಲ್ಲಿ ಕಷಾಯವಿಟ್ಟು ಕಾಯಿಸಿ ಒಂದು ದ್ರೋಣದಷ್ಟುಳಿಸಿ ತಣ್ಣಗಾದ ಮೇಲೆ ಅದನ್ನು ಒಂದು ಮಡಿಕೆಗೆ ಸುರಿದು ಅದರಲ್ಲಿ ನೂರು ಪಲ ಬೆಲ್ಲವನ್ನು ಹಾಕಿ, ಧಾತ್ರೀಕುಸುಮ ಹದಿನಾರು ಪಲ, ಹಿಪ್ಪಲಿ ಎರಡು ಪಲ, ಜಾಯಿಕಾಯಿ, ಗಂಧಮೆಣಸು, ಯಾಲಕ್ಕಿ, ಲವಂಗಪಟ್ಟೆ, ಜಾಪತ್ರಿ, ನಾಗಕೇಸರಿ, ಲವಂಗ, ಮೆಣಸು, ಪ್ರತಿಯೊಂದೂ ಒಂದೊಂದು ಪಲದಷ್ಟು ಸೇರಿಸಿ ಚನ್ನಾಗಿ ಚೂರ್ಣ ಮಾಡಿ ಆ ಕಷಾಯದಲ್ಲಿ ಸೇರಿಸಿ ಒಂದು ತಿಂಗಳು ಉಸಿರಾಡದಂತೆ ಇರಿಸಿದ್ದು ನಂತರ ಶೋಧಿಸಿ ಸೇವಿಸುವುದು, ಈ ಬಬ್ಬೂಲಾರಿಷ್ಟ ಸೇವನೆಯಿಂದ ಕ್ಷಯರೋಗ, ಕುಷ್ಠರೋಗ, ಅತಿಸಾರ, ಮೇಹರೋಗ, ಶ್ವಾಸ, ಕಾಸ ಇವುಗಳೆಲ್ಲವೂ ಗುಣ ಹೊಂದುತ್ತವೆ.

### ದ್ರಾಕ್ಷಾರಿಷ್ಟ.

ದ್ರಾಕ್ಷಾತುಲಾರ್ಧಂದ್ವಿದ್ರೋಣೇಜಲಸ್ಯವಿಪಚೇತ್ಸುಧೀಃ ॥ ೬೯ ॥
ಪಾದಶೇಷೇಕಷಾಯೇಚಪೂತೇಶೀತೇವಿನಿಕ್ಷಿಪೇತ್ ॥
ಗುಡಸ್ಯದ್ವಿತುಲಾಂತತ್ರತ್ವಗೇಲಾಪತ್ರಕೇಶರಂ ॥ ೭೦ ॥
ಪ್ರಿಯಂಗುಮರಿಚಂಕೃಷ್ಣಾವಿಡಂಗಂಚೇತಿಚೂರ್ಣಯೇತ್ ॥
ಪೃಥಕ್‌ಪಲೋನ್ಮಿತೈರ್ಭಾಗೈಸ್ತತೋಭಾಂಡೇನಿಧಾಪಯೇತ್ ೭೦
ಸಮಂತತೋಘೃಟ್ಟೆಯಿತ್ವಾಪಿಬೇಜ್ಜಾತರಸಂತತಃ ॥
ಉರಃಕ್ಷತಂಕ್ಷಯಂಹಂತಿಕಾಸಶ್ವಾಸಗಳಾಮಯಾನ್ ॥ ೭೨ ॥
ದ್ರಾಕ್ಷಾರಿಷ್ಟಾಹ್ವಯಃಪ್ರೋಕ್ತೋಬಲಕೃನ್ಮಲಶೋಧನಃ ॥

ಐವತ್ತು ಪಲ ದ್ರಾಕ್ಷಿಯಹಣ್ಣನ್ನು ಎರಡು ದ್ರೋಣ ಪರಿಮಿತವಾದ ನೀರಿನಲ್ಲಿ ಕಷಾಯವಿಟ್ಟು ನಾಲ್ಕರಲ್ಲಿ ಒಂದು ಭಾಗ ಅಂದರೆ ಅರ್ಧ ದ್ರೋಣವಾಗುವ ವರಿವಿಗೂ ಕಾಯಿಸಿ ನಂತರ ಶೋಧಿಸಿಕೊಂಡು ತಣ್ಣಗಾದ ಮೇಲೆ ಅವರಲ್ಲಿ ಬೆಲ್ಲ ಇನ್ನೂರು ಪಲವನ್ನು ಸೇರಿಸಿ ಲವಂಗಪಟ್ಟೆ, ಯಾಲಕ್ಕಿ, ಜಾತಿಪತ್ರೆ, ನಾಗ ಕೇಸರಿ, ಪ್ರಿಯಂಗು ಎಂಬ ಸ್ವನಾಮ ಪ್ರಸಿದ್ಧವಾದ ವಸ್ತು, ಮೆಣಸು, ಹಿಪ್ಪಲಿ, ವಾಯುವಿಡಂಗ ಇವುಗಳನ್ನು ಚೂರ್ಣಮಾಡಿ ಒಂದೊಂದು ಪಲದಷ್ಟು ಪುಡಿಯನ್ನು ಆ ಕಷಾಯದಲ್ಲಿ ಹಾಕಿ ಈ ಕಷಾಯವೆಲ್ಲವನ್ನೂ ಒಂದು ಭಾಂಡದಲ್ಲಿ ಹಾಕಿ ಒಂದು ತಿಂಗಳಿಗೆ ಕಡಿಮೆಯಿಲ್ಲವಷ್ಟು ದಿವಸ ಇರಿಸಿದ್ದು ಚನ್ನಾಗಿ ಪಕ್ವವಾದದ್ದು ನೋಡಿಕೊಂಡು ಶೋಧಿಸಿ ತೆಗೆದುಕೊಳ್ಳತಕ್ಕದ್ದು. ಇದರ ಸೇವನೆಯಿಂದ ಎದೆನೋವು, ಕ್ಷಯರೋಗ, ಕೆಮ್ಮು, ಉಬ್ಬಸ, ಕಂಠರೋಗಗಳು, ಇವುಗಳೆಲ್ಲವೂ ಗುಣಹೊಂದುತ್ತವೆ. ಇದು ಬಲವರ್ಧಕವೂ ಮಲಶೋಧಕವೂ ಆಗಿರುತ್ತದೆ.

## ರೋಹಿತಕಾರಿಷ್ಟ.

ರೋಹೀತಕಕತುಲಾಮೇಕಾಂಚತುರ್ದ್ರೋಣೇಜಲೇಪಚೇತ್ ॥೭೩॥
ಪಾದಶೇಷೇರಸೇಶೀತೇಪೂತೇಪಲಶತದ್ವಯಂ ॥
ದದ್ಯಾದ್ಗುಡಸ್ಯಧಾತಕ್ಯಾಃಪಲಷೋಡಶಿಕಂಮತಂ ॥ ೭೪ ॥
ಪಂಚಕೋಲಂತ್ರಿಜಾತಂಚತ್ರಿಫಲಾಂಚವಿನಿಕ್ಷಿಪೇತ್ ॥
ಚೂರ್ಣಯಿತ್ವಾಪಲಾಂಶೇನತತೋಭಾಂಡೇನಿಧಾಪಯೇತ್ ॥೭೫॥
ಮಾಸಾದೂರ್ಧ್ವಂಚಪಿಬತಾಂಗುದಜಾಯಾಂತಿಸಂಕ್ಷಯಂ ॥
ಗ್ರಹಣೀಪಾಂಡುಹೃದ್ರೋಗಪ್ಲೀಹಗುಲ್ಮೋದರಾಣಿಚ ॥ ೭೬ ॥
ಕುಷ್ಠಶೋಫಾರುಚಿಹರೋರೋಹಿತಾರಿಷ್ಟಸಂಜ್ಞಕಃ ॥

ರೋಹಿತಕ ವೆಂದರೆ ಮುಳ್ಳುಮುತ್ತುಗದ ಗಿಡ, ಅದರ ತೊಪ್ಪೆ ಒಂದು ನೂರು ಪಲದಷ್ಟನ್ನು ನಾಲ್ಕು ದ್ರೋಣದಷ್ಟು ನೀರಿನಲ್ಲಿ ಕಷಾಯಮಾಡಿ ನಾಲ್ಕರಲ್ಲೊಂದು ಭಾಗ ಕಷಾಯವಿಳಿಸಿ ಸೋಸಿಕೊಂಡು ಅದರಲ್ಲಿ ಎರಡುನೂರು ಪಲ ಬೆಲ್ಲ, ಹದಿನಾರು ಪಲ ಧಾತ್ರೀಕುಸುಮ, ಹಿಪ್ಪಲಿ, ಹಿಪ್ಪಲಿಮೋಡಿ, ಮೆಣಸಿನಬಳ್ಳಿ, ಚಿತ್ರಮೂಲ, ಶುಂಠಿ, ಯಾಲಕ್ಕಿ, ಲವಂಗಪಟ್ಟೆ, ಜಾಪತ್ರಿ, ಅಳಲೆಯಕಾಯಿ, ತಾರೇಕಾಯಿ, ನೆಲ್ಲಿಯಕಾಯಿ, ಈ ದಿನಸುಗಳು ಒಂದೊಂದು ಪಲದಷ್ಟನ್ನು ಚೂರ್ಣಿಸಿ ಆ ಭಾಂಡದಲ್ಲಿ ಹಾಕಿ ಒಂದು ತಿಂಗಳು ಪರ್ಯಂತ ಉಸಿರಾಡದಂತೆ ಮುಚ್ಚಿ ಇರಿಸಿದ್ದು ನಂತರ ತೆಗೆದು ಶೋಧಿಸಿಕೊಂಡು ಸೇವನೆ ಮಾಡುತ್ತ ಬಂದಲ್ಲಿ ಮೂಲವ್ಯಾಧಿಯ ಮೊಳೆಗಳು ನಾಶವಾಗುತ್ತವೆ. ಗ್ರಹಣಿ ಎಂಬ ಭೇದಿ, ಪಾಂಡುರೋಗ, ಹೃದಯರೋಗ, ಪ್ಲೀಹಾಭಿವೃದ್ಧಿ ಎಂದರೆ ಗೆಡ್ಡೆ, ಮಹೋದರಾದಿ ಉದರರೋಗಗಳು, ಗುಲ್ಮರೋಗ, ಕುಷ್ಠರೋಗ, ಶೋಭೆ, ಅರೋಚಕರೋಗ, ಇವುಗಳೆಲ್ಲಾ ಗುಣಹೊಂದುತ್ತವೆ.

## ದಶಮೂಲಾರಿಷ್ಟ.

ಪರ್ಣ್ಯಾಬೃಹತ್ಯಾಗೋಕಂಟೋಬಿಲ್ವೋಗ್ನಿಮಥನೋರಲುಃ ।೭೭।
ಪಾಟಲಾಕಾಶ್ಮರೀಚೇತಿದಶಮೂಲಮಿಹೋಚ್ಯತೇ ॥
ದಶಮೂಲಾನಿಕುರ್ವೀತಭಾಗೈಃಪಂಚಪಲೈಃಪೃಥಕ್ ॥ ೭೮ ॥
ಪಂಚವಿಂಶತ್ಪಲಂಕುರ್ಯಾಚ್ಚಿತ್ರಕಂಪೌಷ್ಕರಂತಥಾ ॥
ಕುರ್ಯಾದ್ವಿಂಶತ್ಪಲಂಲೋಧ್ರಗುಡೂಚೀತತ್ಸಮಾಭವೇತ್ ॥೭೯॥
ಪಲೈಃಷೋಡಶಭಿರ್ಧಾತ್ರೀರವಿಸಂಖ್ಯೈರ್ದುರಾಲಭಾ ॥
ಖದಿರೋಬೀಜಸಾರಶ್ಚಪಥ್ಯಾಚೇತಿಪೃಥಕ್ಪಲೈಃ ॥ ೮೦ ॥

ಅಷ್ಟಭಿರ್ಗಣಿತೈಃಕುಷ್ಠಂಮಂಜಿಷ್ಠಾದೇವದಾರುಚ ॥
ವಿಡಂಗಂಮಧುಕಂಭಾರ್ಗೀಕಪಿತ್ಥೋಕ್ಷಃಪುನರ್ನವಾ ॥ ೮೧ ॥
ಚವ್ಯಂಮಾಂಸೀಪ್ರಿಯಂಗುಶ್ಚಸಾರಿಬಾಕೃಷ್ಣಜೀರಕಂ ॥
ತ್ರಿವೃತಾರೇಣುಕಂರಾಸ್ನಾಪಿಪ್ಪಲೀಕ್ರಮುಕಃಶಠೀ ॥ ೮೨ ॥
ಹರಿದ್ರಾಶತಪುಷ್ಪಾಚಪದ್ಮಕಂನಾಗಕೇಸರಂ ॥
ಮುಸ್ತಮಿಂದ್ರಯವಶ್ಯಂಠೀಜೀವಕರ್ಷಭಕೌತಥಾ ॥ ೮೩ ॥
ಮೇದಾಚಾನ್ಯಾಮಹಾಮೇದಾಕಾಕೋಲ್ಯಾಋದ್ಧಿವೃದ್ಧಿಕೇ ॥
ಕುರ್ಯಾತ್ಪೃಥಗ್ದ್ವಿಪಲಿಕಾನ್ಪಚೇದಷ್ಟಗುಣೇಜಲೇ ॥ ೮೪ ॥
ಚತುರ್ಥಾಂಶಂಶೃತಂನೀತ್ವಾಮೃದ್ಭಾಂಡೇಸನ್ನಿಧಾಪಯೇತ್ ॥
ತತಷ್ಷಷ್ಟಿಪಲಾಂದ್ರಾಕ್ಷಾಂಪಚೇನ್ನೀರೇಚತುರ್ಗುಣೇ ॥ ೮೫ ॥
ತ್ರಿಪಾದಶೇಷಂಶೀತಂಚಪೂರ್ವಕ್ವಾಥೇಶೃತಂಕ್ಷಿಪೇತ್ ॥
ದ್ವಾತ್ರಿಂಶತ್ಪಲಿಕಂಕ್ಷೌದ್ರಂದದ್ಯಾದ್ಗುಡಚತುಶ್ಶತಂ ॥ ೮೬ ॥
ತ್ರಿಂಶತ್ಪಲಾನಿಧಾತಕ್ಯಾಃಕಂಕೋಲಂಜಲಚಂದನಂ ॥
ಜಾತೀಫಲಂಲವಂಗಂಚತ್ವಗೇಲಾಪತ್ರಕೇಶರಂ ॥ ೮೭ ॥
ಪಿಪ್ಪಲೀಚೇತಿಸಂಚೂರ್ಣ್ಯಭಾಗೈರ್ದ್ವಿಪಲಿಕೈಃಪೃಥಕ್ ॥
ಶಾಣಮಾತ್ರಾಂಚಕಸ್ತೂರೀಂಸರ್ವಮೇಕತ್ರನಿಕ್ಷಿಪೇತ್ ॥ ೮೮ ॥
ಭೂಮೌನಿಖಾತಯೇದ್ಭಾಂಡಂತತೋಜಾತರಸಂಪಿಬೇತ್ ॥
ಕತಕಸ್ಯಫಲಂಕ್ಷಿಪ್ತ್ವಾರಸಂನಿರ್ಮಲತಾಂನಯೇತ್ ॥ ೮೯ ॥
ಗ್ರಹಣೀಮರುಚಿಂಶ್ವಾಸಂಕಾಸಂಗುಲ್ಮಂಭಗಂದರಂ ॥
ವಾತವ್ಯಾಧಿಂಕ್ಷಯಂಛರ್ದಿಂಪಾಂಡುರೋಗಂಚಕಾಮಲಾಂ ॥೯೦॥
ಕುಷ್ಠಾನ್ಯರ್ಶಾಂಸಿಮೇಹಾಂಶ್ಚಮಂದಾಗ್ನಿಮುದರಾಣಿಚ ॥
ಶರ್ಕರಾಮಶ್ಮರೀಂಮೂತ್ರಕೃಚ್ಛ್ರಂಧಾತುಕ್ಷಯಂಜಯೇತ್ ೯೧
ಕೃಶಾನಾಂಪುಷ್ಟಿಜನನೋವಂಧ್ಯಾನಾಂಗರ್ಭದಃಪರಃ ॥
ಅರಿಷ್ಟೋದಶಮೂಲಾಖ್ಯಸ್ತೇಜಶ್ಯುಕ್ರಬಲಪ್ರದಃ ॥ ೯೨ ॥

ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಿಲು, ಬಿಲ್ವ, ನರುವಲ, ಹೆಮ್ಮರ, ಪಾದರಿ, ಶಿವನೆ, ಈ ಹತ್ತು ಮೂಲಿಕೆಗಳಿಗೂ ದಶಮೂಲ ವೆಂದು ಹೆಸರು, ಮೇಲೆ ಹೇಳಿದ ದಶಮೂಲಗಳೂ ಪ್ರತ್ಯೇಕವಾಗಿ ಐದೈದು ಪಲ, ಚಿತ್ರಮೂಲ ಇಪ್ಪತ್ತೈದು ಪಲ, ಪುಷ್ಕರಮೂಲ ಇಪ್ಪತ್ತೈದು ಪಲ, ಪತಂಗದಪಟ್ಟೆ ಇಪ್ಪತ್ತು ಪಲ, ಅಮೃತಬಳ್ಳಿ ಇಪ್ಪತ್ತು ಪಲ, ಧಾತ್ರೀಕುಸುಮ ಹದಿನಾರು ಪಲ, ತುರಚೆ ಹನ್ನೆರಡು ಪಲ, ಖದಿರಸಾರವೆಂದರೆ ಕಾಚು, ವಿಜಯಸಾರವೆಂದರೆ

ಒಂದು ಬಗೆಯ ವೃಕ್ಷನಿರ್ಯಾಸ, ಅಳಲೆಯಕಾಯಿ ಇವು ಮೂರೂ ಪ್ರತಿಯೊಂದೂ ಎಂಟೆಂಟು ಪಲ, ಚಂಗಲಕೋಷ್ಟ, ಮಂಜಿಷ್ಠೆ, ದೇವದಾರೀಚಕ್ಕೆ, ವಾಯ ವಿಡಂಗ, ಜ್ಯೇಷ್ಟಮಧು, ಗಂಟುಪರಂಗಿ, ಬೇಲ, ತಾರೆಯಕಾಯಿ, ಕೊಮ್ಮೆಯ ಬೇರು, ಕಾಡುಮೆಣಸಿನಬಳ್ಳಿ, ಜಟಾಮಾಂಸಿ, ಪ್ರಿಯಂಗು ಎಂಬ ಸ್ವನಾಮ ಪ್ರಸಿದ್ಧವಾದ ಮೂಲಿಕೆ, ಸೊಗದೆಯಬೇರು, ಕರೀಜೀರಿಗೆ, ತಿಗಡೆ, ರೇಣುಕಬೀಜ, ಸಣ್ಣರಾಸ್ನೆ, ಹಿಪ್ಪಲಿ, ಅಡಿಕೆ, ಕಚೋರ, ಅರಿಸಿನ, ಸಬ್ಬಸಿಗೆ, ಪದ್ಮಕಾಷ್ಠ, ನಾಗಕೇಸರಿ, ಭದ್ರಮುಸ್ತೆ, ಕೊಡಸದಬೀಜ, ಶುಂಠಿ, ಜೀವಕ, ಋಷಭಕ, ಮೇದಾ, ಮಹಾಮೇದಾ, ಕಾಕೋಲಿ, ಕ್ಷೀರಕಾಕೋಲಿ ಎಂಬ ಮಲೆಯಾಳದವರಿಗೆ ಗೊತ್ತಿರುವ ಮೂಲಿಕೆಗಳು, ಋದ್ಧಿ, ವೃದ್ಧಿ, ಇವುಗಳೂ ಹಿಂದೆ ಹೇಳಿದಂತವು ಗಳೇ, ಈ ಮೂಲಿಕೆಗಳೆಲ್ಲವೂ ಪ್ರತ್ಯೇಕ ಎರಡೆರಡು ಪಲ, ಈ ರೀತಿ ಎಲ್ಲವನ್ನೂ ಕೂಡಿಸಿ ಎಂಟರಷ್ಟು ನೀರಿನಲ್ಲಿ ಕಷಾಯಮಾಡಿ ನಾಲ್ಕರಲ್ಲೊಂದು ಭಾಗ ಕಷಾಯವಿಳಿಸಿಕೊಂಡು ಮಣ್ಣಿನ ಮಡಿಕೆಯಲ್ಲಿ ಹಾಕುವುದು, ಅರುವತ್ತು ಪಲ ದ್ರಾಕ್ಷಿಯನ್ನು ನಾಲ್ಕರಷ್ಟು ನೀರಿನಲ್ಲಿ ಬೇಯಿಸಿ ಒಂದು ಭಾಗ ನೀರು ಬತ್ತಿಹೋಗಿ ಮೂರು ಭಾಗ ಉಳಿದಿರುವಾಗ್ಯೆ ಇಳಿಸಿಕೊಂಡು ಆರಿದ ಮೇಲೆ ಮೊದಲು ಕಷಾಯ ಸುರಿದಿರುವುದರ ಜೊತೆಗೆನೇ ಇದನ್ನು ಸುರಿಯುವುದು, ಅದರ ಜೊತೆಗೆ ಮೂವತ್ತೆರಡು ಪಲ ಜೇನುತುಪ್ಪವನ್ನು ನಾಲ್ಕುನೂರು ಪಲ ಬೆಲ್ಲ ವನ್ನೂ ಧಾತ್ರೀಕುಸುಮ ಮೂವತ್ತು ಪಲವನ್ನೂ ನೇರಿಸುವುದು, ಗಂಧಮೆಣಸು, ಭದ್ರಮುಸ್ತೆ, ಶ್ರೀಗಂಧ, ಜಾಯಿಕಾಯಿ, ಲವಂಗ, ಲವಂಗಪತ್ರೆ, ಯಾಲಕ್ಕಿ, ನಾಗಕೇಸರಿ, ಹಿಪ್ಪಲಿ, ಇವು ಪ್ರತಿಯೊಂದೂ ಎರಡೆರಡು ಪಲದಷ್ಟು ಚೂರ್ಣಿಸಿ ಅದರಲ್ಲಿ ಸೇರಿಸಬೇಕು, ಒಂದು ಶಾಣ ಪರಿಮಾಣ ಕಸ್ತೂರಿಯನ್ನೂ ಅದರಲ್ಲಿ ಹಾಕಿ ಭಾಂಡದ ಬಾಯಿಮುಚ್ಚಿ ಭಾಂಡವನ್ನು ನೆಲದಲ್ಲಿ ಗುಂಡಿ ತೆಗೆದು ಹೂಳಿ ಚನ್ನಾಗಿ ಪಕ್ವವಾದ ಮೇಲೆ ತೆಗೆದು ಶೋಧಿಸಿ ಗಾಳಿಯಾಡದಂತೆ ಭದ್ರಪಡಿಸಿ ಇರಿಸಿಕೊಳ್ಳುವುದು. ಇದಕ್ಕೆ ದಶಮೂಲಾರಿಷ್ಟವೆಂದು ಹೆಸರು, ಸ್ವಚ್ಛವಾಗಿಲ್ಲ ದಿದ್ದರೆ ಚಿಲ್ಲದ ಬೀಜದ ಪುಡಿಯನ್ನು ಹಾಕಿ ಅರಿಷ್ಟವನ್ನು ಸ್ವಚ್ಛಪಡಿಸಿಕೊಳ್ಳ ಬೇಕು. ಇದನ್ನು ಸೇವಿಸುತ್ತ ಬಂದರೆ ಗ್ರಹಣಿ ಎಂಬ ಭೇದಿ, ಅರುಚಿ, ಉಬ್ಬಸ, ಕೆಮ್ಮಲು, ಗುಲ್ಮ, ಭಗಂದರವೆಂಬ ವ್ರಣ, ಸಮಸ್ತ ವಾತರೋಗಗಳು, ಕ್ಷಯ ರೋಗ, ವಾಂತಿ, ಪಾಂಡುರೋಗ, ಕಾಮಲಾರೋಗ, ಕುಷ್ಠರೋಗ, ಮೂಲ ವ್ಯಾಧಿ, ಮೇಹರೋಗ, ಅಗ್ನಿಮಾಂದ್ಯ, ಉದರರೋಗಗಳು, ಮೂತ್ರದಲ್ಲಿ ನುಚ್ಚುಕಲ್ಲು ಸೇರುವುದು, ಅಶ್ಮರಿ ಎಂಬ ಮೂತ್ರಮಾರ್ಗದಲ್ಲಿ ಕಲ್ಲು ಸೇರುವುದು, ಮೂತ್ರಕೃಚ್ಛ್ರ, ಧಾತುಕ್ಷಯ, ಇವುಗಳನ್ನೆಲ್ಲ ಗುಣಪಡಿಸಿಕೊಳ್ಳಬಹುದು, ಕೃಶ ರಾದವರಿಗೆ ಒಳ್ಳೆಯ ಪುಷ್ಟಿಯನ್ನುಂಟುಮಾಡುತ್ತದೆ, ಬಂಜೆಯರಿಗೆ ಗರ್ಭ ವನ್ನುಂಟುಮಾಡುತ್ತದೆ, ದೇಹಕಾಂತಿಯನ್ನು ಹೆಚ್ಚುಮಾಡುವುದಲ್ಲದೆ ಶುಕ್ರವೃದ್ಧಿ ಯನ್ನು ಉಂಟುಮಾಡುತ್ತದೆ

ಇಲ್ಲಿಗೆ ಹತ್ತನೆಯ ಅಧ್ಯಾಯ ಸಂಪೂರ್ಣ.

# ಹನ್ನೊಂದನೆಯ ಅಧ್ಯಾಯ.

ಸ್ವರ್ಣತಾರಾರತಾಮ್ರಾಣಿನಾಗವಂಗೌಚತೀಕ್ಷ್ಣಕಂ ॥
ಧಾತವಸ್ಸಪ್ತವಿಜ್ಞೇಯಾಸ್ತತಸ್ತಾನ್‌ಶೋಧಯೇದ್ಬುಧಃ ॥ ೧ ॥

ಈ ವರಿಗೂ ಮೂಲಿಕಾವೈದ್ಯವನ್ನು ಹೇಳಿ ಮುಂದೆ ಧಾತುವೈದ್ಯವನ್ನು ಹೇಳುತ್ತಾನೆ—ಬಂಗಾರ, ಬೆಳ್ಳಿ, ಹಿತ್ತಾಳೆ, ತಾಮ್ರ, ತವರ, ಸೀಸ, ಕಬ್ಬಿಣ ಈ ಏಳಕ್ಕೂ ವೈದ್ಯಶಾಸ್ತ್ರದಲ್ಲಿ ಲೋಹಗಳೆಂಬದಾಗಿ ಹೆಸರು. ಈ ಲೋಹಗಳಲ್ಲಿ ಕೆಲವು ದೋಷಮಿಶ್ರಿತಗಳಾಗಿಯೂ ಮತ್ತೆ ಕೆಲವು ವಿಷಮಿಶ್ರಿತಗಳಾಗಿಯೂ ಇರುವುದರಿಂದ ಇವುಗಳನ್ನು ಔಷಧವಾಗಿ ಉಪಯೋಗಿಸಬೇಕಾದ ಸಂದರ್ಭದಲ್ಲಿ ಶೋಧನಮಾಡುವುದು ಆವಶ್ಯಕ.

ಸ್ವರ್ಣತಾರಾರತಾಮ್ರಾಯಃಪತ್ರಾಣ್ಯಗ್ನೌಪ್ರತಾಪಯೇತ್ ॥
ನಿಷಿಂಚೇತ್ತಪ್ತತಪ್ತಾನಿತೈಲೇತಕ್ರೇಚಕಾಂಜಿಕೇ ॥ ೨ ॥
ಗೋಮೂತ್ರೇಚಕುಲತ್ಥಾನಾಂಕಷಾಯೇಚತ್ರಿಧಾತ್ರಿಧಾ ॥
ಏವಂಸ್ವರ್ಣಾದಿಲೋಹಾನಾಂವಿಶುದ್ಧಿಸ್ಸಂಪ್ರಜಾಯತೇ ॥ ೩ ॥
ನಾಗವಂಗೌಪ್ರತಪ್ತೌಚಗಾಲಿತೌತಾನಿಷಿಂಚಯೇತ್ ॥
ತ್ರಿಧಾತ್ರಿಧಾವಿಶುದ್ಧಿಸ್ಸ್ಯಾದ್ರವಿದುಗ್ಧೇನಚತ್ರಿಧಾ ॥ ೪ ॥

ಧಾತುಗಳ ಸಾಮಾನ್ಯ ಶೋಧನ ಕ್ರಮವನ್ನು ಹೇಳುತ್ತಾನೆ—ಬಂಗಾರ, ಬೆಳ್ಳಿ, ಹಿತ್ತಾಳೆ, ತ್ರಾಮ, ಕಬ್ಬಿಣ, ಇವುಗಳನ್ನು ತೆಳುವಾದ ತಗಡು ಮಾಡಿಕೊಂಡು ಚನ್ನಾಗಿ ಬೆಂಕಿಯಲ್ಲಿ ಕಾಯಿಸಿ ಎಳ್ಳಿನಎಣ್ಣೆ, ಮಜ್ಜಿಗೆ, ಅನ್ನದ ಹುಳಿನೀರು, ಗೋಮೂತ್ರ, ಹುರುಳಿಯಕಟ್ಟು, ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಮೂರು ಮೂರು ಬಾರಿ ಹಾಕಬೇಕು, ಪ್ರತಿಯೊಂದು ಸಾರಿಯೂ ಚನ್ನಾಗಿ ಕಾಯಿಸುತ್ತಲೇ ಇರಬೇಕು, ಈ ರೀತಿ ಮಾಡುತ್ತ ಬಂದರೆ ಈ ಲೋಹಗಳು ಶುದ್ಧವಾಗುತ್ತವೆ. ಸೀಸ, ತವರ ಈ ಎರಡನ್ನೂ ಕಾಯಿಸಿ ಕರಗಿಸಿ ಮೂರು ಮೂರು ಸಾರಿ ಹಿಂದೆ ಹೇಳಿದ ಎಣ್ಣೆ ಮೊದಲಾದ ದ್ರವದ್ರವ್ಯಗಳಿಗೆ ಸುರಿಯುವುದು, ಅಲ್ಲದೆ ಕರಗಿಸಿ ಯಕ್ಕದ ಹಾಲಿಗೂ ಮೂರು ಸಾರಿ ಸುರಿಯುವುದು, ಈ ರೀತಿ ಸುರಿಯುವ ಕ್ರಮ ಪೂರೈಸಿದರೆ ಈ ಎರಡು ಲೋಹಗಳೂ ಶುದ್ಧವಾಗುತ್ತವೆ.

ಸ್ವರ್ಣಾಚ್ಚದ್ವಿಗುಣಂಸೂತಮಮ್ಲೇನಸಹಮರ್ದಯೇತ್ ॥
ತದ್ಗೋಲಕಸಮಂಗಂಧಂನಿದಧ್ಯಾದಧರೋತ್ತರಂ ॥ ೫ ॥
ಗೋಲಕಂಚತತೋರುಂಧ್ಯಾಚ್ಛರಾವದೃಢಸಂಪುಟೇ ॥
ತ್ರಿಂಶದ್ವನೋಪಲೈರ್ದದ್ಯಾತ್ಪುಟಾನ್ಯೇವಂಚತುರ್ದಶ ॥ ೬ ॥
ನಿರುತ್ಥಂಜಾಯತೇಭಸ್ಮಗಂಧೋದೇಯಃಪುನಃಪುನಃ ॥

ಇನ್ನು ಸುವರ್ಣಮಾರಣ ಕ್ರಮವನ್ನು ಹೇಳುತ್ತಾನೆ—ಶುದ್ಧವಾದ ಬಂಗಾರವನ್ನು ಉಜ್ಜಿ ರವೆಗಳಾಗಿ ಮಾಡಿಕೊಂಡು ಬಂಗಾರದ ಎರಡರಷ್ಟು ಶುದ್ಧವಾದ ರಸವನ್ನು ಸೇರಿಸಿ ಹುಳಿಯನ್ನು ಅಂದರೆ ನಿಂಬೆ, ಹೇರಳೆ ಇತ್ಯಾದಿ ಹುಳಿಗಳನ್ನು ಸೇರಿಸಿ ಅರೆದು ಗೋಲಿಮಾಡಬೇಕು, ಆ ಗೋಲಿಯ ತೂಕದಷ್ಟೇ ಶುದ್ಧವಾದ ಗಂಧಕವನ್ನು ತೆಗೆದುಕೊಂಡು ಒಂದು ಶ್ರಾವೆಯಲ್ಲಿ ಅರ್ಧ ತಳಕ್ಕೆ ಹಾಕಿ ಅದರ ಮೇಲೆ ಆ ಗೋಲಿಯನ್ನಿರಿಸಿ ಮೇಲೆ ಉಳಿದ ಅರ್ಧ ಗಂಧಕವನ್ನು ಹಾಕಿ ಮೇಲೆ ಮತ್ತೊಂದು ಶ್ರಾವೆಯನ್ನು ಮುಚ್ಚಿ ಸಂದುಬಿಡದಂತೆ ಚೀಲಮಾಡಿ ಮೂವತ್ತು ಕಾಡುಬೆರಣಿಯನ್ನು ಕೆಳಗೆ ಮೇಲೆ ಸಹಾ ಇಟ್ಟು ಪುಟಹಾಕಬೇಕು, ಈ ರೀತಿ ಹದಿನಾಲ್ಕು ಸಾರಿ ಪುಟವನ್ನು ಹಾಕತಕ್ಕದ್ದು. ಪ್ರತಿಯೊಂದು ಸಾರಿಯೂ ರಸ ಮತ್ತು ಬಂಗಾರಮಿಶ್ರಿತವಾದ ಗೋಲಿಯನ್ನು ಹುಳಿಯೊಡನೆ ಅರೆದು ಹೊಸದಾಗಿ ಮಾಡುತ್ತಲೇ ಇರಬೇಕು, ಆದರೆ ರಸವನ್ನು ಸೇರಿಸಬೇಕಾಗಿಲ್ಲ, ಗಂಧಕವನ್ನು ಮಾತ್ರ ಪ್ರತಿಸಾರಿಯೂ ಹೊಸಹೊಸದಾಗಿ ಹಾಕುತ್ತಲೇ ಇರಬೇಕು, ಈ ರೀತಿ ಕೆಲವರ ಸಂಪ್ರದಾಯ, ಕೆಲವರು ಗೋಲಿಕಟ್ಟುವಾಗ್ಯೆ ಕೊಂಚ ಗಂಧಕವನ್ನೂ ಸೇರಿಸಲೇ ಬೇಕೆಂದು ಹೇಳುತ್ತಾರೆ.

ಕಾಂಚನೇಗಾಲಿತೇನಾಗಂಷೋಡಶಾಂಶೇನನಿಕ್ಷಿಪೇತ್ ॥ ೭ ॥
ಚೂರ್ಣಯಿತ್ವಾತಥಾಮ್ಲೇನಘೃಷ್ಟ್ವಾಕೃತ್ವಾಚಗೋಲಕಂ ॥
ಗೋಲಕೇನಸಮಾಗಂಧಂದತ್ವಾಚೈವಾಧರೋತ್ತರಂ ॥ ೮ ॥
ಶರಾವಸಂಪುಟೇಧೃತ್ವಾಪುಟೇತ್ರಿಂಶದ್ವನೋಪಲೈಃ ॥
ಏವಂಸಪ್ತಪುಟೈರ್ಹೇಮನಿರುತ್ಥಂಭಸ್ಮಜಾಯತೇ ॥ ೯ ॥

ಶುದ್ಧವಾದ ಬಂಗಾರವನ್ನು ಕರಗಿಸಿ ಕರಗಿದ ಬಂಗಾರದಲ್ಲಿ ಬಂಗಾರದ ಹದಿನಾರನೆಯ ಒಂದಂಶದಷ್ಟು ಸೀಸವನ್ನು ಶುದ್ಧಿಮಾಡಿ ಸೇರಿಸಬೇಕು, ಈ ರೀತಿ ಸೇರಿಸಿದ ಮೇಲೆ ಅವೆರಡನ್ನೂ ರವೆಮಾಡಿಕೊಂಡು ಅಮ್ಲವೆಂದರೆ ಯಾವುದಾದರೂ ಹುಳಿ ರಸದೊಡನೆ ಸೇರಿಸಿ ಮರ್ದನ ಮಾಡಿ ಉಂಡೆಯನ್ನು ಕಟ್ಟಬೇಕು, ಆ ಉಂಡೆಯನ್ನು ಶ್ರಾವೆಯಲ್ಲಿರಿಸಿ ಉಂಡೆಯಷ್ಟೇ ಗಂಧಕವನ್ನು ಕೆಳಗೂ ಮತ್ತು ಮೇಲೂ ಹಾಕಿ ಶ್ರಾವೆಯನ್ನು ಮುಚ್ಚಿ ಚೀಲಮಾಡಿ ಮೂವತ್ತು ಕಾಡುಬೆರಣಿಯಿಂದ ಪುಟಹಾಕಬೇಕು, ಈ ರೀತಿ ಏಳುಬಾರಿ ಮಾಡಿದರೆ ಬಂಗಾರವು ಶುದ್ಧವಾದ ಭಸ್ಮವಾಗುತ್ತದೆ.

ಕಾಂಚನಾರರಸೈರ್ಘೃಷ್ಟ್ವಾಸಮಸೂತಕಗಂಧಯೋಃ ॥
ಕಜ್ಜಲ್ಯಾಹೇಮಪತ್ರಾಣಿಲೇಪಯೇತ್ಸಮಮಾತ್ರಯಾ ॥ ೧೦ ॥
ಕಾಂಚನಾರತ್ವಚಃಕಲ್ಕೈರ್ಮೂಷಾಯುಗ್ಮಂಪ್ರಕಲ್ಪಯೇತ್ ॥

ಧೃತ್ವಾತತ್ಸಂಪುಟೇಗೋಲಂಮ್ಲ ನ್ಮೂಷಾಸಂಪುಟೇಪಚೇತ್ ॥೧೧॥
ನಿಧಾಯಸಂಧಿರೋಧಂಚಕೃತ್ವಾಸಂಶೋಷ್ಯಕೋಕಿಲೈಃ
ವಹ್ನಿಂಖರತರಂಕುರ್ಯಾದೇವಂದದ್ಯಾತ್ಪುಟತ್ರಯಂ ॥ ೧೨ ॥
ನಿರುತ್ಥಂಜಾಯತೇಭಸ್ಮ ಸರ್ವಕಾರ್ಯೇಷುಯೋಜಯೇತ್ ॥
ಕಾಂಚನಾರಪ್ರಕಾರೇಣಲಾಂಗಲೀಹಂತಿಕಾಂಚನಂ ॥ ೧೩ ॥
ಜ್ವಾಲಾಮುಖೀತಥಾಹನ್ಯಾತ್ತಥಾಹಂತಿಮನಶ್ಶಿಲಾ ॥

ಶುದ್ಧವಾದ ಪಾದರಸ ಮತ್ತು ಶುದ್ಧವಾದ ಗಂಧಕ ಇವೆರಡನ್ನೂ ಸಮ ಪ್ರಮಾಣದಲ್ಲಿ ಕೂಡಿಸಿ ಅರದು ಕಜ್ಜಲಿಯನ್ನು ಮಾಡಿಕೊಂಡು ಆ ಕಜ್ಜಲಿಯನ್ನು ಕಂಚಿವಾಳದ ಪಟ್ಟೆಯ ರಸದಲ್ಲಿ ಅರದು ಅದರಿಂದ ಶುದ್ಧಿಮಾಡಿದ ಬಂಗಾರದ ತಗಡಿನ ಎರಡು ಭಾಗಕ್ಕೂ ಲೇಪಕೊಡಬೇಕು, ಲೇಪಿಸತಕ್ಕ ಕಜ್ಜಲಿಯು ಬಂಗಾರ ದಷ್ಟೇ ಇರಬೇಕು, ಕಂಚುವಾಳದ ತೊಪ್ಪೆಯನ್ನು ಚನ್ನಾಗಿ ನಯವಾಗಿ ಅರದು ಮೇಲೆ ಹೇಳಿದ ಬಂಗಾರದ ತಗಡನ್ನು ಕೂರಿಸುವಂತಹ ಎರಡು ಮೂಸೆಗಳನ್ನು ಮಾಡಿ ಒಣಗಿಸಿಕೊಂಡು ಆ ಮೂಸೆ ಒಂದರಲ್ಲಿ ಈ ಬಂಗಾರದ ತಗಡನ್ನಿರಿಸಿ ಮೇಲೆ ಮತ್ತೊಂದನ್ನು ಮುಚ್ಚಿ ಇದೆಲ್ಲವನ್ನೂ ಒಂದು ಮಣ್ಣಿನ ಶ್ರಾವೆಯಲ್ಲಿರಿಸಿ ಮೇಲೆ ಮತ್ತೊಂದು ಶ್ರಾವೆಯನ್ನು ಮುಚ್ಚಿ ಚೀಲ ಮಣ್ಣು ಮಾಡಿ ಒಣಗಿಸಬೇಕು. ಈ ರೀತಿ ಚನ್ನಾಗಿ ಒಣಗಿದ ಮೇಲೆ ಕಾಡು ಬೆರಣಿಯನ್ನು ಪಟ್ಟಿ ಗಾಢಾಗ್ನಿಯಿಂದ ಪುಟಹಾಕಬೇಕು, ಈ ರೀತಿ ಮೂರು ಪುಟವನ್ನು ಹಾಕೋಣದರಿಂದ ಸಮಸ್ತ ಕಾರ್ಯಗಳಿಗೂ ಉಪಯೋಗಿಯಾದ ಬಂಗಾರದ ಭಸ್ಮವಾಗುತ್ತದೆ ಈ ಕಂಚುವಾಳದ ಪಟ್ಟೆಯನ್ನು ಉಪಯೋಗಿಸಿದಂತೆಯೇ ಲಾಂಗಲಿ ಎಂದರೆ ಕೋಳಿಕುಟುಕನ ಗೆಡ್ಡೆ ಯನ್ನು ಮತ್ತು ಜ್ವಾಲಾಮುಖಿ ಎಂಬ ಮೂಲಿಕೆಯನ್ನು ನಹ ಉಪಯೋಗಿಸಿ ಸುವರ್ಣಭಸ್ಮವಾಡಬಹುದು, ಮಣಿಶಿಲೆಯನ್ನೂ ಯುಕ್ತಿಯಿಂದ ಉಪಯೋಗಿಸಿ ಬಂಗಾರವನ್ನು ಮಾರಣಮಾಡಬಹುದು.

ಶಿಲಾಸಿಂದೂರಯೋಶ್ಚೂರ್ಣಂಸಮಯೋರರ್ಕದುಗ್ಧಕೈಃ ॥ ೧೪ ॥
ಸಪ್ತೈವಭಾವನಾದದ್ಯಾಚ್ಛೋಷಯೇಚ್ಚಪುನಃಪುನಃ ॥
ತತಸ್ತುಗಾಲಿತೇಹೇಮ್ನಿಕಲ್ಕೋದಶಾಂಶಕೋದೀಯತೇಸಮಃ ॥ ೧೫ ॥
ಪುನರ್ಧಮೇದತಿತರಾಂಯಥಾಕಲ್ಕೋವಿಲೀಯತೇ ॥
ಏವಂವೇಲಾತ್ರಯಂದದ್ಯಾತ್ಕಲ್ಕಂಹೇಮಮೃತಿರ್ಭವೇತ್॥ ೧೬ ॥

ಸುವರ್ಣಮಾರಣವನ್ನು ಪ್ರಕಾರಾಂತರದಿಂದ ಹೇಳುತ್ತಾನೆ—ಶುದ್ಧವಾದ ಮಣಿಶಿಲೆ, ಶುದ್ಧವಾದ ರಸಸಿಂದೂರ ಇವೆರಡನ್ನೂ ಸಮಪರಿಮಾಣವಾಗಿ ಕೂಡಿಸಿ ಅವೆರಡನ್ನೂ ಒಂದು ಪಾತ್ರೆಯಲ್ಲಿ ಹಾಕಿ ಮುಳುಗುವಷ್ಟು ಯಕ್ಕದ ಹಾಲನ್ನು

ಆದರ ಮೇಲೆ ಸುರಿಯಬೇಕು, ಅದೆಲ್ಲಾ ಆರುವ ವರಿವಿಗೂ ಸುಮ್ಮನಿದ್ದು ಮತ್ತೆ ಯಕ್ಕದ ಹಾಲನ್ನು ಸುರಿಯಬೇಕು, ಈ ರೀತಿ ಏಳು ಸಾರಿ ಭಾವನೆಯನ್ನು ಕೊಟ್ಟು ನಂತರ ಆ ಮಿಶ್ರಣವನ್ನು ಯಕ್ಕದ ಹಾಲಿನಿಂದಲೇ ಅರೆದು ಕಲ್ಕಮಾಡಿ ಕೊಳ್ಳಬೇಕು, ಶುದ್ಧವಾದ ಬಂಗಾರವನ್ನು ಕರಗಿಸಿ ಕರಗಿದ ಬಂಗಾರದಲ್ಲಿ ಈ ಕಲ್ಕ ಬಂಗಾರದಷ್ಟನ್ನೇ ಬೆರೆಸಬೇಕು, ಬೆರೆಸಿ ಊದುತ್ತಲೇ ಬಂದರೆ ಕಲ್ಕವು ಆದರೊಡನೆ ಸೇರಿಹೋಗುತ್ತದೆ, ಮತ್ತೆ ಕಲ್ಕವನ್ನು ಸೇರಿಸಬೇಕು. ಈ ರೀತಿ ಮೂರು ಭಾರಿ ಮಾಡಿದರೆ ಬಂಗಾರವು ಸತ್ತುಹೋಗಿ ಒಳ್ಳೆಯ ಭಸ್ಮವಾಗುತ್ತದೆ.

ಪಾರಾವತಮಲ್ತೈರ್ಲಿಂಪೇದಥವಾಕುಕ್ಕುಟೋದ್ಭವೈಃ ॥
ಹೇಮಪತ್ರಾಣಿತೇಷಾಂಚಪ್ರದದ್ಯಾದಂತರಾಂತರಂ ॥ ೧೭ ॥
ಗಂಧಚೂರ್ಣಂಸಮಂದತ್ವಾಶರಾವಯುಗಸಂಪುಟೇ ॥
ಪ್ರದದ್ಯಾತ್ಕುಕ್ಕುಟಪುಟಂಪಂಚಭಿರ್ಗೋರ್ಮಯೋಪಲೈಃ ॥ ೧೮ ॥
ಏವಂನವಪುಟಾನ್ದದ್ಯಾದ್ದಶಮಂಚಮಹಾಪುಟಂ ॥
ತ್ರಿಂಶದ್ವನೋಪಲೈರ್ದೇಯಂಜಾಯತೇಹೇಮಭಸ್ಮಕಂ ॥ ೧೯ ॥
ಸುವರ್ಣಂಚಭವೇತ್ಸ್ವಾದುತಿಕ್ತಂಸ್ನಿಗ್ಧಂಹಿಮಂಗುರು ॥
ಬುದ್ಧಿವಿದ್ಯಾಸ್ಮೃತಿಕರಂವಿಷಹಾರಂರಸಾಯನಂ ॥ ೨೦ ॥

ಇನ್ನೊಂದು ವಿಧವಾಗಿ ಬಂಗಾರದಿಂದ ಭಸ್ಮವನ್ನು ಮಾಡುವ ಕ್ರಮವನ್ನು ಹೇಳುತ್ತಾನೆ– –ಪಾರಿವಾಳದ ಹಕ್ಕಿಯ ಪಾಯಿಖಾನೆ, ಕೋಳಿಯ ಪಾಯಿಖಾನೆ ಇವುಗಳಿಂದ ಶುದ್ಧವಾದ ಬಂಗಾರದ ತಗಡಿನ ಎರಡು ಕಡೆಯಲ್ಲಿಯೂ ಲೇಪ ಕೊಡಬೇಕು, ಶುದ್ಧವಾದ ಗಂಧಕವನ್ನು ಚೂರ್ಣಮಾಡಿ ಶರಾವಯಲ್ಲಿ ಕೆಳ ಭಾಗಕ್ಕೆ ಕೊಂಚ ಹಾಕಿ ಅದರ ಮೇಲೆ, ಮೇಲೆ ಹೇಳಿದ ತಗಡನ್ನಿರಿಸಿ ಮೇಲೆಯೂ ಗಂಧಕದ ಪುಡಿಯನ್ನು ಹಾಕಬೇಕು, ಮೇಲೆ ಮತ್ತೊಂದು ಶ್ರಾವೆ ಯನ್ನು ಮುಚ್ಚಿ ಚನ್ನಾಗಿ ಚಿಲಮಣ್ಣುಮಾಡಿ ಐದು ಬೆರಣಿಗಳಲ್ಲಿ ಕುಕ್ಕುಟಪುಟ ವನ್ನು ಕೊಡಬೇಕು, ಪ್ರತಿಸಾರಿಯೂ ಬಂಗಾರದ ತೂಕವಷ್ಟೇ ಗಂಧಕದ ಹುಡಿ ಯನ್ನು ಹಾಕಬೇಕು, ಈ ರೀತಿ ಒಂಬತ್ತು ಸಾರಿ ಪುಟಕೊಟ್ಟು ಹತ್ತನೆಯ ಸಾರಿ ಗಜಪುಟವನ್ನು ಹಾಕಬೇಕು, ಈ ರೀತಿಯಾಗಿ ಮಾಡಿದರೆ ಬಂಗಾರವು ಸ್ವಚ್ಛವಾಗಿ ಭಸ್ಮವಾಗುತ್ತದೆ. ಬಂಗಾರದ ಭಸ್ಮದ ಗುಣಗಳು—ಇದು ಮಧುರ ಮತ್ತು ಕಹಿರುಚಿ, ಸ್ವಲ್ಪ ಜಿಡ್ಡು, ಶೀತವೀರ್ಯ, ಗುರುಗುಣವುಳ್ಳದ್ದು, ಬುದ್ಧಿಶಕ್ತಿ ಯನ್ನು ಹೆಚ್ಚಿಸುತ್ತದೆ, ವಿದ್ಯೆಯಲ್ಲಿ ಆಸಕ್ತಿಯನ್ನು ಉಂಟುಮಾಡುತ್ತದೆ, ಜ್ಞಾಪಕಶಕ್ತಿಯನ್ನು ವೃದ್ಧಿಮಾಡುತ್ತದೆ, ವಿಷದೋಷಗಳನ್ನೆಲ್ಲಾ ನಿವಾರಣೆ ಮಾಡುತ್ತದೆ, ರಸಾಯನವೆಂದರೆ ವೃದ್ಧಾಪ್ಯ ಸಮ್ಮಂಧವಾದ ಅಶಕ್ತಿಗಳನ್ನೆಲ್ಲಾ ನಿವಾರಣೆಮಾಡುತ್ತದೆ.

ಭಾಗೈಕಂತಾಳಕಂಮೃದ್ವರ್ಗಂಜಂಬ್ವೀನಾಮ್ಲೀನಕೇನಚಿತ್ ॥
ತೇನಭಾಗತ್ರಯಂತಾರಪತ್ರಾಣಿಪರಿಲೇಪಯೇತ್ ॥ ೨೧ ॥
ಧೃತ್ವಾಮೂಷಾಪುಟೇರುಧ್ವಾಪುಟೇತ್ರಿಂಶದ್ವನೋಪಲೈಃ ॥
ಸಮುದ್ಧೃತ್ಯಪುನಸ್ತಾಲಂದತ್ವಾರುದ್ಧ್ವಾಪುಟೇಪಚೇತ್ ॥ ೨೨ ॥
ಏವಂಚತುರ್ದಶಪುಟೈಸ್ತಾರಂಭಸ್ಮಪ್ರಜಾಯತೇ ॥

ಸುವರ್ಣಭಸ್ಮವನ್ನು ಹೇಳಿ ರಜತಭಸ್ಮವನ್ನು ಹೇಳುತ್ತಾನೆ—ಬೆಳ್ಳಿಯನ್ನು ಶುದ್ಧಿಮಾಡಿಕೊಂಡು ತೆಳುವಾದ ತಗಡಾಗಿ ಮಾಡಿಕೊಳ್ಳಬೇಕು, ಭಸ್ಮಮಾಡಬೇಕಾದ ಬೆಳ್ಳಿಯ ತೂಕದಲ್ಲಿ ನಾಲ್ಕರಲ್ಲೊಂದು ಭಾಗ ಶುದ್ಧವಾದ ಅರಿದಳವನ್ನು ತೆಗೆದುಕೊಂಡು ನಿಂಬೆಯ ಹುಳಿಯಲ್ಲಿ ಚನ್ನಾಗಿ ಅರೆದು ಅದನ್ನು ಬೆಳ್ಳಿಯ ತಗಡಿಗೆ ಚನ್ನಾಗಿ ಲೇಪಮಾಡಬೇಕು, ಹೀಗೆ ಮಾಡಿ ಮೂಸೆಯಲ್ಲಿರಿಸಿ ಮೇಲೆ ಮುಚ್ಚಿ ಚೀಲಮಾಡಿ ಮೂವತ್ತು ಕಾಡುಬೆರಣಿಯಿಂದ ಪುಟಹಾಕಬೇಕು, ಮತ್ತೆ ತೆಗೆದುಕೊಂಡು ಇದೇ ಕ್ರಮವನ್ನೇ ಮಾಡಬೇಕು, ಈ ರೀತಿ ಮಾಡುತ್ತ ಬಂದಲ್ಲಿ ಹದಿನಾಲ್ಕು ಪುಟ ಹಾಕುವಾಗ್ಯೆ ಬೆಳ್ಳಿಯು ಭಸ್ಮನಾಗಿ ಹೋಗುತ್ತದೆ

ಸ್ನುಹೀಕ್ಷೀರೇಣಸಂಪಿಷ್ಟಂಮಾಕ್ಷಿಕಂತೇನಲೇಪಯೇತ್ ॥ ೨೩ ॥
ತಾಲಕಸ್ಯಪ್ರಕಾರೇಣತಾರಪತ್ರಾಣಿಬುದ್ಧಿಮಾನ್ ॥
ಪುಟೇಚ್ಚತುರ್ದಶಪುಟೈಸ್ತಾರಂಭಸ್ಮಪ್ರಜಾಯತೇ ॥ ೨೪ ॥

ಬೆಳ್ಳಿಯಭಸ್ಮ ಮಾಡತಕ್ಕ ಮತ್ತೊಂದು ವಿಧಾನವನ್ನು ಹೇಳುತ್ತಾನೆ—ಮಾಕ್ಷಿಕಧಾತುವನ್ನು ಚನ್ನಾಗಿ ಶೋಧಿಸಿಕೊಂಡು ಕಳ್ಳಿಯ ಹಾಲಿನಿಂದ ಅರೆದು ಶುದ್ಧವಾದ ಬೆಳ್ಳಿಯ ತಗಡಿಗೆ ಹಿಂದೆ ಹೇಳಿದಂತೆ ಲೇಪಹಾಕಿ, ಅರಿದಳವನ್ನು ಲೇಪಹಾಕಿ ಮಾಡುವಂತೆಯೇ ಮಾಡಿ ಹದಿನಾಲ್ಕು ಸಾರಿ ಪುಟಹಾಕಿದಲ್ಲಿ ಭಸ್ಮವಾಗುತ್ತದೆ.

ಅರ್ಕಕ್ಷೀರೇಣಸಂಪಿಷ್ಟೋಗಂಧಕಸ್ತೇನಲೇಪಯೇತ್ ॥
ಸಮೇನಾರಸ್ಯಪತ್ರಾಣಿಶುದ್ಧಾನ್ಯಮ್ಲದ್ರವೈರ್ಮುಹುಃ ॥ ೨೫ ॥
ತತೋಮೂಷಾಪುಟೇಧೃತ್ವಾಪುಟೇದ್ಗಜಪುಟೇನಚ ॥
ಏವಂಪುಟದ್ವಯೇನೈವಭಸ್ಮಾರಂಭವತಿಧ್ರುವಂ ॥ ೨೬ ॥
ಆರಪತ್ರಾಂಸ್ತುಮುಷ್ಯೇವಂಭಸ್ಮತಾಂಯಾತಿನಿಶ್ಚಿತಂ ॥

ಹಿತ್ತಾಳಿಯಭಸ್ಮ ಮಾಡುವ ವಿಧಾನವನ್ನು ಹೇಳುತ್ತಾನೆ—ಹಿತ್ತಾಳೆಯ ತೆಳುವಾದ ತಗಡುಗಳನ್ನು ಮಾಡಿ ಅದನ್ನು ಹುಳಿರಸಗಳಲ್ಲಿ ಅಂದರೆ ನಿಂಬೆಯ ಹುಳಿ ಮೊದಲಾದವುಗಳಲ್ಲಿ ಚನ್ನಾಗಿ ಶುದ್ಧಿಮಾಡಿ ಅದರಷ್ಟೇ ತೂಕ ಗಂಧಕವನ್ನು

ತೆಗೆದುಕೊಂಡು ಯಕ್ಕದ ಹಾಲಿನಿಂದರಸು ಹಿತ್ತಾಳೆಯ ತಗಡಿನ ಉಭಯ ಭಾಗಗಳಿಗೂ ಲೇಪಮಾಡಿ ಮೂಸೆಯಲ್ಲಿಟ್ಟು ಮುಚ್ಚಿ ಸೀಲುಮಾಡಿ ಗಜಪುಟದಲ್ಲಿ ಪಕ್ವಮಾಡಬೇಕು, ಈ ರೀತಿ ಎರಡು ಪುಟ ಕೊಡುವಷ್ಟರಲ್ಲಿಯೇ ಹಿತ್ತಾಳೆಯು ಚೊಕ್ಕ ಭಸ್ಮವಾಗುತ್ತದೆ, ಇದರಂತೆ ಕಂಚನ್ನು ಕೂಡಾ ಎರಡೇ ಪುಟದಲ್ಲಿ ಇದೇ ವಿಧಾನದಿಂದ ಭಸ್ಮಮಾಡಿ ಬಿಡಹುದು.

ಅರ್ಕಕ್ಷೀರವದಾಜಂಸ್ಯಾತ್ ಕ್ಷೀರನಿರ್ಗುಂಡಿಕಾತಥಾ ॥ ೨೭ ॥
ತಾಮ್ರರೀತಿಧ್ವನಿವಧೇಸಮಗಂಧಕಯೋಗತಃ

ತಾಮ್ರ, ಹಿತ್ತಾಳೆ, ಕಂಚು ಇವುಗಳನ್ನು ಮಾರಣಮಾಡುವುದಕ್ಕೆ ಯಕ್ಕದ ಹಾಲಿನಂತೆ ಗಂಧಕವನ್ನು ಆಡಿನಹಾಲು, ಲಕ್ಕಿಸೊಪ್ಪಿನ ರಸ ಇವುಗಳಿಂದ ಅರದು ಲೇಪಮಾಡಿದರೂ ಆಗಬಹುದು.

ಸೂಕ್ಷ್ಮಾನಿತಾಮ್ರಪತ್ರಾಣಿಕೃತ್ವಾಸಂಸ್ವೇದಯೇದ್ಬುಧಃ ॥ ೨೮ ॥
ವಾಸರತ್ರಯಮಮ್ಲೇನತತಃಖಲ್ವೇವಿನಿಕ್ಷಿಪೇತ್ ॥
ಪಾದಾಂಶಂಸೂತಕಂದತ್ವಾಯಾಮಮಮ್ಲೇನಮರ್ದಯೇತ್ । ೨೯ ।
ತತಉದ್ಧೃತ್ಯಪತ್ರಾಣಿಲೇಪಯೇದ್ದ್ವಿಗುಣೇನಚ ॥
ಗಂಧಕೇನಾಮ್ಲಘಷ್ಟೇನತಸ್ಯಕುರ್ಯಾಚ್ಚಗೋಳಕಂ ॥ ೩೦ ॥
ತತಃಪಿಷ್ಟ್ವಾಚಮೀನಾಕ್ಷೀಂಚಾಂಗೇರೀಂಪಾಪುನರ್ನವಾಂ ॥
ತತ್ಕಲ್ಕೇನಬಹಿರ್ಗೋಲಂಲೇಪಯೇದಂಗುಲೋನ್ಮಿತಂ ॥ ೩೧ ॥
ಧೃತ್ವಾತದ್ಗೋಲಕಂಭಾಂಡೇಶರಾವೇಣಚರೋಧಯೇತ್ ॥
ವಾಲುಕಾಭಿಃಪ್ರಪೂರ್ಯಾಥವಿಭೂತಿಲವಣಾಂಬುಭಿಃ ॥ ೩೨ ॥
ದತ್ವಾಭಾಂಡಮುಖೇಮುದ್ರಾಂತತಶ್ಚುಲ್ಲ್ಯಾಂನಿಪಾಚಯೇತ್ ॥
ಕ್ರಮವೃದ್ಧ್ಯಾಗ್ನಿನಾಸಮ್ಯಗ್ಯಾವದ್ಯಾಮಚತುಷ್ಟಯಂ ॥ ೩೩ ॥
ಸ್ವಾಂಗಶೀತಲಮುದ್ಧೃತ್ಯಮರ್ದಯೇತ್ಶೂರಣದ್ರವೈಃ ॥
ದಿನೈಕಂಗೋಲಕಂಕುರ್ಯಾದರ್ಧಗಂಧೇನಲೇಪಯೇತ್ ॥ ೩೪ ॥
ಸಪ್ಯತೇನತತೋಮೂಷಾಂಪುಟೇಗಜಪುಟೇಪಚೇತ್ ॥
ಸ್ವಾಂಗಶೀತಂಸಮುದ್ಧೃತ್ಯಮೃತಂತಾಮ್ರಂಶುಭಂಭವೇತ್ ॥೩೫॥
ವಾಂತಿಂಭ್ರಾಂತಿಂಕ್ಲಮಂಮೂರ್ಚ್ಛಾಂನಕರೋತಿಕದಾಚನ ॥

ತಾಮ್ರಭಸ್ಮ ಮಾಡುವ ಕ್ರಮವನ್ನು ಹೇಳುತ್ತಾನೆ—ಶುದ್ಧವಾದ ತಾಮ್ರವನ್ನು ಬಹಳ ತೆಳುವಾದ ರೇಕುಗಳಾಗಿ ಮಾಡಿ ಮೂರು ದಿವಸಗಳು ಯಾವುದಾದರೂ ಹುಳಿಯಾದ ದ್ರವದಲ್ಲಿ ತೂಗಗಟ್ಟಿ ದೋಲಾಯಂತ್ರಕ್ರಮದಲ್ಲಿ ಪಕ್ವ

ಮಾಡಬೇಕು, ಮೂರು ದಿವಸವಾದ ಮೇಲೆ ಅದೆಲ್ಲವನ್ನೂ ತೆಗದುಕೊಂಡು ಕಲ್ಲುಬತ್ತಿನಲ್ಲಿ ಹಾಕಿ ತಾಮ್ರದ ನಾಲ್ಕರಲ್ಲಿ ಒಂದು ಭಾಗ ಶುದ್ಧವಾದ ರಸವನ್ನೂ ಹಾಕಿ ನಿಂಬೇ ಹುಳಿಯಂತಹ ಹುಳಿರಸದೊಡನೆ ಒಂದು ಯಾಮ ಪರ್ಯಂತ ಚನ್ನಾಗಿ ಅರೆಯಬೇಕು, ಈ ರೀತಿ ಅರದು ನಂತರ ಆ ತಾಮ್ರದ ತಗಡುಗಳನ್ನು ತೆಗೆದುಕೊಂಡು ಅದರ ತೂಕದ ಎರಡರಷ್ಟು ಗಂಧಕವನ್ನು ಹುಳಿರಸದಲ್ಲಿ ಅರದು ತಾಮ್ರದ ತಗಡಿಗೆ ಎರಡು ಕಡೆಯೂ ಲೇಪಹಾಕಬೇಕು, ನಂತರ ಆ ತಾಮ್ರದ ತಗಡನ್ನು ಉಂಡೆಯಾಗಿ ಮಾಡಬೇಕು, ನಂತರ ಹೊನಗೊನ್ನೆ ಸೊಪ್ಪನ್ನಾಗಲಿ ಪುಳ್ಳಂಬುರುಚೆಯಸೊಪ್ಪನ್ನಾಗಲಿ ಕೊಮ್ಮೆಯಸೊಪ್ಪನ್ನಾಗಲಿ ಇವು ಮೂರನ್ನೂ ಸೇರಿಸಿಯೇ ಆಗಲಿ ಅರದು ಆ ತಾಮ್ರದ ತಗಡಿನ ಮೇಲುಭಾಗದಲ್ಲಿ ಒಂದು ಅಂಗುಲ ದಪ್ಪವಾಗಿ ಮೆತ್ತಬೇಕು, ಈ ರೀತಿಯಾಗಿ ಮಾಡಿದ ಉಂಡೆಯನ್ನು ಮಡಕೆಯಲ್ಲಿರಿಸಿ ಆ ಮಡಕೆಯನ್ನು ಮರಳಿನಿಂದ ತುಂಬಿಸಿ ಅದರ ಮೇಲೆ ಸರಿಯಾದ ಮುಚ್ಚಳವನ್ನು ಮುಚ್ಚಿ ಸಂದಿಲ್ಲದ ಹಾಗೆ ಬೂದಿ ಉಪ್ಪು ನೀರು ಇವುಗಳಿಂದ ಲೇಪ ಹಾಕಿ ಒಲೆಯ ಮೇಲೆ ಏರಿಸಬೇಕು, ಉರಿಯನ್ನು ಹಾಕುವುದಕ್ಕೆ ಪ್ರಾರಂಭಮಾಡಿದಾಗ್ಯೆ ಮೊದಲು ದೀಪಾಗ್ನಿಯಿಂದಲೂ ಕ್ರಮವಾಗಿ ಧೃಡಾಗ್ನಿ ಗಾಢಾಗ್ನಿಗಳಿಂದಲೂ ನಾಲ್ಕು ಯಾಮ ಪರ್ಯಂತರ ಅವಿಚ್ಛಿನ್ನವಾಗಿ ಉರಿಯನ್ನು ಹಾಕಬೇಕು, ನಂತರ ಉರಿಯನ್ನು ತೆಗೆದು ತಣ್ಣಗಾಗುವವರಿವಿಗೂ ಹಾಗೆಯೇ ಬಿಟ್ಟಿದ್ದು ನಂತರ ತೆಗೆದುಕೊಂಡು ಚೂರ್ಣಗಡ್ಡೆಯ ರಸದಿಂದ ಒಂದು ದಿವಸ ಅರದು ಉಂಡೆಯಾಗಿ ಮಾಡಿ ತಾಮ್ರದ ಅರ್ಧದಷ್ಟು ಗಂಧಕವನ್ನು ತುಪ್ಪದಿಂದ ಅರದು ಆ ತಾಮ್ರದ ಉಂಡೆಗೆ ಎರಡು ಭಾಗಕ್ಕೂ ಲೇಪಹಾಕಿ ಮೂಸೆಯಲ್ಲಿರಿಸಿ ಮೇಲೆ ಮೂಸೆಯನ್ನು ಮುಚ್ಚಿ ಸೀಲವಮಾಡಿ ಗಜಪುಟದಲ್ಲಿ ಪುಟಹಾಕಬೇಕು, ನಂತರ ಆರಿದ ಮೇಲೆ ತೆಗೆದುಕೊಂಡಲ್ಲಿ ತಾಮ್ರವು ಪೂರ್ಣ ಸತ್ತುಹೋಗಿ ಭಸ್ಮವಾಗಿರುತ್ತದೆ, ವಾಂತಿ, ಭ್ರಾಂತಿ, ಮೂರ್ಛೆ, ಆಯಾಸ ಮೊದಲಾದ ಯಾವ ದೋಷಗಳೂ ಈ ಭಸ್ಮದಿಂದ ಉಂಟಾಗುವುದಿಲ್ಲ.

ತಾಂಬೂಲೀರಸಸಂಪಿಷ್ಟಶಿಲಾಲೇಪಾತ್ಪುನಃಪುನಃ ॥ ೩೬ ॥
ದ್ವಾತ್ರಿಂಶದ್ಭಿಃಪುಟೈರ್ನಾಗೋನಿರುದ್ಧೋಯಾತಿಭಸ್ಮತಾಂ ॥

ಸೀಸವಭಸ್ಮ ಮಾಡುವ ಕ್ರಮವನ್ನು ಹೇಳುತ್ತಾನೆ—ವೀಳ್ಯದೆಲೆಯ ರಸದಲ್ಲಿ ಸೀಸವ ನಾಲ್ಕರಲ್ಲೊಂದು ಪಾಲು ಮಣಿಶಿಲೆಯನ್ನು ಅರದು ಸೀಸಕ್ಕೆ ಹಚ್ಚಿ ಪುಟಹಾಕುವುದು, ಈ ರೀತಿ ಮೂವತ್ತೆರಡು ಪುಟಗಳನ್ನು ಹಾಕಿದರೆ ಸೀಸವು ಶುದ್ಧವಾದ ಭಸ್ಮವಾಗುತ್ತದೆ.

ಅಶ್ವತ್ಥಚಿಂಚಾತ್ವಕ್ಚೂರ್ಣಂಚತುರ್ಥಾಂಶೇನನಿಕ್ಷಿಪೇತ್ ॥ ೩೭ ॥
ಮೃತ್ಪಾತ್ರೇದ್ರಾವಿತೇನಾಗೇಲೋಹದರ್ವ್ಯಾಪ್ರಚಾಲಯೇತ್ ॥

ಯಾಮೈಕೇನಭವೇದ್ಭಸ್ಮತತ್ತುಲ್ಯಾಂಚಮನಶ್ಶಿಲಾಂ ॥ ೩೮ ॥
ಕಾಂಜಿಕೇನದ್ವಯಂಪಿಷ್ಟ್ವಾಪಚೇದ್ಗಾಢಪುಟೇನಚ ॥
ಸ್ವಾಂಗಶೀತಂಪುನಃಪಿಷ್ಟ್ವಾಶಿಲಯಾಕಾಂಜಿಕೇನಚ ॥ ೩೯ ॥
ಪುನಃಪುಟೇಚ್ಛರಾವಾಭ್ಯಾಂಏವಂಷಷ್ಟಿಪುಟೈರ್ಮೃತಿಃ ॥

ಸೀಸಭಸ್ಮ ಮಾಡುವ ಬೇರೊಂದು ವಿಧಾನವನ್ನು ಹೇಳುತ್ತಾನೆ—ಮಣ್ಣಿನ ಮಡಕೆಯಲ್ಲಿ ಶುದ್ಧವಾದ ಸೀಸವನ್ನು ಕರಗಿಸಿ ಅದರ ಜೊತೆಗೆ ಅರಳಿಯಚಕ್ಕೆ ಹುಣಸೆಯಚಕ್ಕೆ ಇವುಗಳ ಬೂದಿಯನ್ನು ಸೀಸದ ನಾಲ್ಕರಲ್ಲೊಂದು ಪಾಲು ಸೇರಿಸಿ ಒಂದು ಯಾಮ ಪರ್ಯಂತ ಕಬ್ಬಿಣದ ಸೌಟಿನಿಂದ ಹುರಿಯುತ್ತ ಬಂದರೆ ಸೀಸವು ಬೂದಿಯಾಗುತ್ತದೆ, ಆ ಬೂದಿಯಷ್ಟೇ ಶುದ್ಧವಾದ ಮಣಿಶಿಲೆಯನ್ನು ಸೇರಿಸಿ ಕಾಂಜಿಕವೆಂದರೆ ಅನ್ನದ ಹುಳಿನೀರಿನಿಂದ ಅರೆದು ಶರಾವೆಯಲ್ಲಿಟ್ಟು ಪುಟ ಹಾಕಬೇಕು, ಚನ್ನಾಗಿ ಆರಿದ ಮೇಲೆ ತಗೆದುಕೊಂಡು ಮತ್ತೆ ಇದೇ ರೀತಿ ಮಾಡಬೇಕು, ಅಂದರೆ ಮಣಿಶಿಲೆಯನ್ನು ಸೇರಿಸಿ ಕಾಂಜಿಕವೆಂಬ ಹುಳಿಯಿಂದರೆದು ಪುಟಕೊಡಬೇಕು, ಹೀಗೆ ಮಾಡುತ್ತ ಬಂದರೆ ಅರವತ್ತು ಪುಟಗಳಿಗೆ ಸೀಸವು ಪೂರ್ಣ ಸತ್ತು ಹೋಗಿ ಭಸ್ಮವಾಗುತ್ತದೆ.

ಮೃತ್ಪಾತ್ರೇದ್ರಾವಿತೇವಂಗೇಚಿಂಚಾಶ್ವತ್ಥತ್ವಚೋರಜಃ ॥ ೪೦ ॥
ಕ್ಷಿಪ್ತ್ವಾಕ್ಷಿಪ್ತ್ವಾಚತುರ್ಥಾಂಶಮಯೋದರ್ವ್ಯಾಪ್ರಚಾಲಯೇತ್।
ತತೋದ್ವಿಯಾಮಮಾತ್ರೇಣವಂಗಭಸ್ಮಪ್ರಜಾಯತೇ ॥ ೪೧ ॥
ಅಥಭಸ್ಮಸಮಂತಾಲಂಕ್ಷಿಪ್ತ್ವಾಮ್ಲೇನಪ್ರಮರ್ದಯೇತ್ ॥
ತತೋಗಜಪುಟೇಪಕ್ತ್ವಾಪುನರಮ್ಲೇನಮರ್ದಯೇತ್ ॥ ೪೨ ॥
ತಾಲೇನದಶಮಾಂಶೇನಯಾಮಮೇಕಂತತಃಪುಟೇತ್ ॥
ಏವಂದಶಪುಟೈಃಪಕ್ವೋವಂಗಸ್ಸಂಮ್ರಿಯತೇಧ್ರುವಂ ॥ ೪೩ ॥

ತವರವನ್ನು ಭಸ್ಮಮಾಡುವ ಕ್ರಮವನ್ನು ಹೇಳುತ್ತಾನೆ—ಶುದ್ಧಿಮಾಡಿದ ತವರವನ್ನು ಮಣ್ಣಿನ ಪಾತ್ರೆಯಲ್ಲಿ ಕರಗಿಸಬೇಕು, ಅದರಲ್ಲಿ ಅರಳಿ ಮತ್ತು ಹುಣಸೆಯ ಚಕ್ಕೆಯ ಬೂದಿಯನ್ನು ತವರದ ನಾಲ್ಕರಲ್ಲೊಂದು ಪಾಲಿನಷ್ಟು ಹಾಕಿ ಕಬ್ಬಿಣದ ಸೌಟಿನಿಂದ ಹುರಿಯುತ್ತಿರಬೇಕು, ಈ ರೀತಿ ಎರಡು ಯಾಮ ಮಾಡಿದಲ್ಲಿ ತವರವು ಬೂದಿಯಾಗುತ್ತದೆ, ಆ ಬೂದಿಯಷ್ಟು ಶುದ್ಧವಾದ ತಾಳಕ ವನ್ನು ಸೇರಿಸಿ ಯಾವುದಾದರೂ ಹುಳಿಯಿಂದರದು ಶರಾವೆಯಲ್ಲಿರಿಸಿ ಗಜಪುಟ ದಿಂದ ಪಕ್ವಮಾಡಬೇಕು, ಆರಿದ ಮೇಲೆ ತೆಗದುಕೊಂಡು ವಂಗದ ಹತ್ತ ರಲ್ಲೊಂದು ಪಾಲು ತಾಳಕವನ್ನು ಸೇರಿಸಿ ಹುಳಿಯಿಂದ ಒಂದು ಯಾಮ ಅರದು ಪುಟಕೊಡಬೇಕು, ಈ ಕ್ರಮದಿಂದ ಹತ್ತು ಪುಟವನ್ನು ಹಾಕಿದರೆ ತವರವು ಚನ್ನಾಗಿ ಸತ್ತು ಶುದ್ಧವಾದ ಭಸ್ಮವಾಗುತ್ತದೆ.

ಶುದ್ಧಂಲೋಹಭವಂಚೂರ್ಣಂಪಾತಾಳಗರುಡೀರಸೈಃ ॥
ಮರ್ದಯಿತ್ವಾಪುಟೇದ್ವಹ್ನೌದದ್ಯಾದೇವಂಪುಟತ್ರಯಂ ॥ ೪೪ ॥
ಪುಟತ್ರಯಂಕುಮಾರ್ಯಾಶ್ಚಕುಠಾರಕುಲುತ್ಥರಸೈಃ ॥
ಪುಟಷಟ್ಕಂತತೋದದ್ಯಾದೇವಂತೀಕ್ಷ್ಣಮೃತಿರ್ಭವೇತ್ ॥ ೪೫ ॥

ಶುದ್ಧಿಮಾಡಿದ ಕಬ್ಬಿಣದ ಪುಡಿಯನ್ನು ಪಾತಾಳಗರುಡನಸೊಪ್ಪಿನ ರಸದಲ್ಲ ರದು ಬಿಲ್ಲೆಗಳಾಗಿ ಮಾಡಿ ಶ್ರಾವೆಯಲ್ಲಿರಿಸಿ ಗಜಪುಟಕೊಡಬೇಕು, ಈ ಕ್ರಮ ದಿಂದ ಮೂರು ಪುಟಕೊಟ್ಟು ನಂತರ ಲೋಳಿಸರದ ರಸದಲ್ಲಿ ಅರದು ಬಿಲ್ಲೆಮಾಡಿ ಮೂರು ಪುಟಕೊಡಬೇಕು, ಕೊಡಸದಚಕ್ಕೆಯ ರಸದಲ್ಲಿ ಆರು ಪುಟಕೊಡಬೇಕು, ಈ ರೀತಿಯಾಗಿ ಹನ್ನೆರಡು ಪುಟಕೊಟ್ಟು ಪೂರೈಸಿದರೆ ಕಬ್ಬಿಣವು ಭಸ್ಮವಾಗು ತ್ತದೆ, ಈ ಕಬ್ಬಿಣವು ಹದಿನೆಂಟು ತರವಾಗಿರುತ್ತದೆಂದು ನಾಗಾರ್ಜುನನೆಂಬ ಸಿದ್ಧನ ಅಭಿಪ್ರಾಯ. ಕೆಲವರು ಶ್ರೇಷ್ಠವಾದ ಓಷಧೋಪಯುಕ್ತವಾದ ಲೋಹವು ಎಂಟೇ ವಿಧವೆನ್ನುತ್ತಾರೆ, "ಕಿಟ್ಟಾದ್ದಶಗುಣಂಮುಂಡಂಮುಂಡಾತ್ತೀ ಕ್ಷ್ಣಂಶತೋನ್ಮಿತಂ ॥ ತೀಕ್ಷ್ಣಾಲ್ಲಕ್ಷಗುಣಂಕಾಂತಂಭಕ್ಷಣಾತ್ಕುರುತೇಗುಣಂ ॥" ಎಂಬದಾಗಿ ಲೋಹಗಳ ನಡುವೆ ಕಾಂತವೆಂದರೆ ಸೂಜಿಗಲ್ಲು ಎಂದು ವ್ಯವಹಾರ ದಲ್ಲಿರುವ ಒಂದು ಜಗೆಯ ಲೋಹವು ಔಷಧಮಾಡಿಕೊಂಡು ಸೇವಿಸುವುದಕ್ಕೆ ಅತ್ಯುತ್ತಮವೆಂದು ಸಿದ್ಧರ ಅಭಿಪ್ರಾಯ.

ಕ್ಷಿಪೇದ್ದ್ವಾದಶಮಾಂಶೇನದರದಂತೀಕ್ಷ್ಣಚೂರ್ಣತಃ ॥
ಮರ್ದಯೇತ್ಕನ್ಯಕಾದ್ರಾವೈರ್ಯಾಮಯುಗ್ಮಂತತಃಪುಟೇತ್ ೪೬
ಏವಂಸಪ್ತಪುಟೈರ್ಮೃತ್ಯುಂಲೋಹಚೂರ್ಣಮವಾಪ್ನುಯಾತ್ ॥
ರಸೈಃಕುಠಾರಚ್ಛಿನ್ನಾಯಾಃಪಾತಾಳಗರುಡೀರಸೈಃ ॥ ೪೭ ॥
ಸ್ತನ್ಯೇನಚಾರ್ಕದುಗ್ಧೇನತೀಕ್ಷ್ಣಸ್ಯೈವಂಮೃತಿರ್ಭವೇತ್ ॥

ಇನ್ನೊಂದು ವಿಧದಿಂದ ಲೋಹಭಸ್ಮಮಾಡುವ ಕ್ರಮವನ್ನು ತಿಳಿಸು ತ್ತಾನೆ—ಕಬ್ಬಿಣದ ಪುಡಿಯ ಹತ್ತರಲ್ಲಿ ಒಂದು ಅಂಶ ಇಂಗಲೀಕವನ್ನು ಸೇರಿಸಿ ಲೋಳಿಸರದ ರಸದಿಂದ ಎರಡು ಝಾಮ ಚನ್ನಾಗಿ ಅರದು ಬಿಲ್ಲೆಮಾಡಿ ಗಜಪುಟ ಕೊಡುವುದು, ಈ ರೀತಿ ಏಳಾವರ್ತಿಮಾಡಿದರೆ ಲೋಹಚೂರ್ಣವು ಸತ್ತುಹೋಗಿ ಭಸ್ಮವಾಗುತ್ತದೆ, ಇದೇ ರೀತಿಯಾಗಿ ಇಂಗಲೀಕವನ್ನು ಸೇರಿಸಿ ಕೊಡಸದ ತೊಪ್ಪೆಯ ರಸ, ಪಾತಾಳಗರುಡನ ಸೊಪ್ಪಿನ ರಸ, ಮೊಲೆಹಾಲು, ಯಕ್ಕದ ಹಾಲು ಇವುಗಳಿಂದ ಅರದು ಕ್ರಮವಾಗಿ ಏಳು ಪುಟಕೊಟ್ಟರೂ ಲೋಹ ಚೂರ್ಣವು ಸತ್ತುಹೋಗಿ ಭಸ್ಮವಾಗುತ್ತದೆ.

**ಸೂತಕಾದ್ದ್ವಿಗುಣಂಗಂಧಂದತ್ವಾಕುರ್ಯಾಚ್ಚಕಜ್ಜಲೀಂ ॥ ೪೮ ॥**
**ದ್ವಯೋಸ್ಸಮಂಲೋಹಚೂರ್ಣಂಮರ್ದಯೇತ್ಕನ್ಯಕಾದ್ರವೈಃ ॥**
**ಯಾಮಯುಗ್ಮಂತತಃಪಿಂಡಂಕೃತ್ವಾತಾಮ್ರಸ್ಯಪಾತ್ರಕೇ ॥ ೪೯ ॥**
**ಘರ್ಮೇಧೃತ್ವಾಖುಬೂಕಸ್ಯಪತ್ರೈರಾಚ್ಛಾದಯೇದ್ಬುಧಃ ॥**
**ಯಾಮಾರ್ಧೇನೋಷ್ಣತಾಂಭೂಯಾದ್ಧಾನ್ಯರಾಶೌನ್ಯಸೇತ್ತತಃ ॥ ೫೦ ॥**
**ದತ್ವೋಪರಿಶರಾವಂತುತ್ರಿದಿನಾಂತೇಸಮುದ್ಧರೇತ್ ॥**
**ಪಿಷ್ಟ್ವಾಚಗಾಲಯೇದ್ವಸ್ತ್ರಾದೇವಂವಾರಿತರಂಭವೇತ್ ॥ ೫೧ ॥**
**ಏವಂಸರ್ವಾಣಿಲೋಹಾನಿಸ್ವರ್ಣಾದೀನ್ಯಪಿಮಾರಯೇತ್ ॥**
**ಶಿಲಾಗಂಧಾರ್ಕದುಗ್ಧಾಕ್ತಾಸ್ಸ್ವರ್ಣಾದ್ಯಾಸ್ಸರ್ವಧಾತವಃ ॥ ೫೨ ॥**
**ಮ್ರಿಯಂತೇದ್ವಾದಶಪುಟೈಸ್ಸತ್ಯಂಗುರುವಚೋಯಥಾ ॥**

ಪಾದರಸದ ಜೊತೆಗೆ ಎರಡರಷ್ಟು ಗಂಧಕವನ್ನು ಸೇರಿಸಿ ಅರೆದು ಕಜ್ಜಲಿಯನ್ನು ಮಾಡಿಕೊಳ್ಳಬೇಕು. ಲೋಹಚೂರ್ಣ ಮತ್ತು ಈ ಕಜ್ಜಲಿ ಎರಡನ್ನೂ ಸಮವಾಗಿ ಸೇರಿಸಿ ಲೋಳೆಸರದ ರಸದಲ್ಲಿ ಎರಡು ಝಾವ ಅರೆದು ಒಂದು ಉಂಡೆಯನ್ನು ಮಾಡಬೇಕು, ಈ ಉಂಡೆಯನ್ನು ತಾಮ್ರದ ಪಾತ್ರೆಯಲ್ಲಿರಿಸಿ ಹರಳೆಲೆಯನ್ನು ಅದರ ಮೇಲೆ ಮುಚ್ಚಬೇಕು, ಅರ್ಧ ಝಾವ ಹಾಗೆಯೇ ಬಿಸಲಲ್ಲಿ ಬಿಟ್ಟದ್ದು ನಂತರ ತೆಗೆದುಕೊಂಡು ಅದರ ಮೇಲೆ ಶರಾವೆಯನ್ನು ಮುಚ್ಚಿ ಧಾನ್ಯದ ರಾಶಿಯಲ್ಲಿ ಹೂಳಿ ಮೂರು ದಿವಸ ಬಿಟ್ಟಿದ್ದು ಹೊರಕ್ಕೆ ತೆಗೆದು ಚನ್ನಾಗಿ ಅರೆದು ವಸ್ತ್ರಗಾಲಿತಮಾಡಿದಲ್ಲಿ ಲೋಹವು ಸೇವನಯೋಗ್ಯವಾಗಿ ನೀರಿನ ಮೇಲೆ ತೇಲುತ್ತದೆ, ಇದೇ ರೀತಿಯಿಂದ ಭಂಗಾರ ಮೊದಲಾದ ಸಮಸ್ತ ಲೋಹಗಳನ್ನೂ ಮಾರಣಮಾಡಬಹುದು ಮಣಿಶಿಲೆ, ಗಂಧಕ, ಯಕ್ಕದ ಹಾಲು, ಇವುಗಳನ್ನು ಅರೆದು ಲೇಪಹಾಕಿ ಹನ್ನೆರಡು ಪುಟಹಾಕೋಣದರಿಂದ ಬಂಗಾರ ಮೊದಲಾದ ಸಮಸ್ತ ಧಾತುಗಳೂ ಸತ್ತುಹೋಗುತ್ತವೆ, ಈ ವಿಷಯವನ್ನು ಗುರುವಾಕ್ಯದಂತೆ ಸತ್ಯವೆಂದು ನಂಬಬಹುದು.

**ಮಾಕ್ಷಿಕಂತುತ್ಥಕಾಭ್ರೌಚನೀಲಾಂಜನಶಿಲಾಲಕಾಃ ॥ ೫೩ ॥**
**ರಸಕಶ್ಚೇತಿವಿಜ್ಞೇಯಾಏತೇಸಪ್ತೋಪಧಾತವಃ ॥**

ಧಾತುಗಳ ಮಾರಣ ಕ್ರಮವನ್ನು ಹೇಳಿ ಉಪಧಾತು ಮಾರಣ ಪ್ರಕರಣವನ್ನಾರಂಭಿಸುತ್ತಾನೆ—ಮಾಕ್ಷಿಕ, ತುತ್ಥ, ಅಭ್ರಕ, ನೀಲಾಂಜನ, ಮಣಿಶಿಲೆ, ತಾಳಕ, ರಸಕ, ಇವು ಏಳಕ್ಕೂ ಉಪಧಾತುಗಳೆಂದು ಹೆಸರು ಮಾಕ್ಷಿಕವೆಂದರೆ ಒಂದು ಬಗೆಯ ಕಗ್ಗಲ್ಲು, ಇದರಲ್ಲಿ ವೈತುಂಬ ಬಂಗಾರದ ಗೆರೆಗಳಿರುತ್ತವೆ,

ಬ್ರಾಹ್ಮಣರ ಮನೆಯಲ್ಲಿ ದೇವರ ಪೂಜೆಯ ಪೆಟ್ಟಿನಲ್ಲಿ ಇಂತಹ ಕಲ್ಲನ್ನಿಟ್ಟು ಕೊಂಡು ಅಂಬಿಕಾ ಎಂದು ಕರೆಯುತ್ತಿರುತ್ತಾರೆ, ತುತ್ಥವು ಪ್ರಸಿದ್ಧವಾಗಿ ಎಲ್ಲರಿಗೂ ಗೊತ್ತಿರುತ್ತದೆ, ಅಭ್ರಕವೆಂದರೆ ಕಾಗೆಯ ಬಂಗಾರ, ನಿಲಾಂಜನವೆಂದರೆ ಒಂದು ಬಗೆಯ ಕಬ್ಬಿಣದ ಕಲ್ಲು, ಕುಟ್ಟಿಪುವರ್ಮಾ ಎಂಬ ಕಣ್ಣಿನ ಕಪ್ಪನ್ನು ಮಾಡಲು ಉಪಯೋಗಿಸುತ್ತಾರೆ. ಮಣಿಶಿಲೆ ಅಂಗಡಿಯಲ್ಲಿ ಸಿಗುತ್ತದೆ, ಕಜ್ಜಿಯ ಔಷಧಕ್ಕೆ ತರುತ್ತಾರೆ. ಅರಿದಳ ಗಣಪತಿ ಬಣ್ಣಕ್ಕೆ ಭಾಗವತರ ಆಟದಲ್ಲಿ ಮುಖಕ್ಕೆ ಬಳಿದು ಕೊಳ್ಳುವುದಕ್ಕೆ ಸಹ ತರುತ್ತಾರೆ. ರಸಕವೆಂದರೆ ಕಪರಿ ಎಂಬ ಕರೆಯುತ್ತಾರೆ, ಅಂಗಡಿಯಲ್ಲಿ ಸಿಕ್ಕುತ್ತದೆ, ಪಿಂಗಾಣಿಯ ಬಿಳೀಪಾತ್ರೆಯ ವಡಕಿನ ಹಾಗಿರುತ್ತದೆ.

ಮಾಕ್ಷಿಕಸ್ಯತ್ರಯೋಭಾಗಾಭಾಗೈಕಂಸ್ಯೆಂಧವಸ್ಯಚ ॥ ೫೪ ॥
ಮಾತುಲುಂಗದ್ರವೈರ್ವಾಧಜಂಬೀರೋತ್ಥದ್ರವೈಃಪಚೇತ್ ॥
ಚಾಲಯೋಲ್ಲೋಹಜೇಪಾತ್ರೇಯಾವತ್ಪಾತ್ರಂತುಲೋಹಿತಂ ।೫೫।
ಭವೇತ್ತತಸ್ತುಸಂಶುದ್ಧಿಂಸ್ವರ್ಣಮಾಕ್ಷಿಕಮೃಚ್ಛತಿ ॥
ಕುಳುತ್ಥಸ್ಯಕಷಾಯೇಣಘೃಷ್ಟ್ಯಾತೈಲೇನವಾಪುಟೇತ್ ॥ ೫೬ ॥
ತಕ್ರೇಣವಾಜಮೂತ್ರೇಣಮ್ರಿಯತೇಸ್ವರ್ಣಮಾಕ್ಷಿಕಂ ॥
ಕರ್ಕೋಟೀಮೇಷಶೃಂಗ್ಯುತ್ಥೈರ್ದ್ರವೈರ್ಜಂಬೀರಜೈರ್ದಿನಂ ॥ ೫೭ ॥
ಭಾವಯೇದಾತಪೇತೀವ್ರೇವಿಮಲಾಶುದ್ಧ್ಯತಿಧ್ರುವಂ ॥

ಮಾಕ್ಷಿಕಧಾತುವು ಸ್ವರ್ಣಮಾಕ್ಷಿಕ, ತಾರಮಾಕ್ಷಿಕ ಎಂಬದಾಗಿ ಎರಡು ವಿಧ, ಸ್ವರ್ಣಮಾಕ್ಷಿಕ ಮೂರು ಭಾಗ, ಒಂದು ಭಾಗ ಸೈಂಧವಲವಣ, ಇವು ಗಳನ್ನು ಒಂದು ಕಬ್ಬಿಣದ ಪಾತ್ರೆಯಲ್ಲಿ ಹಾಕಿ ಅದಕ್ಕೆ ಮಾದಳದ ಹಣ್ಣಿನ ರಸ ವನ್ನಾಗಲಿ ನಿಂಬೆಯ ಹಣ್ಣಿನ ರಸವನ್ನಾಗಲಿ ಸುರಿದು ಒಲೆಯ ಮೇಲಿಟ್ಟು ಉರಿಸುತ್ತ ಸೌಟಿನಿಂದ ಕೆದಕಬೇಕು, ಪಾತ್ರೆಯು ರಕ್ತವರ್ಣವಾಗುವ ವರಿವಿಗೂ ಈ ರೀತಿಯಾಗಿ ಮಾಡುತ್ತಿರಬೇಕು, ಅಷ್ಟಾದ ಮೇಲೆ ಮಾಕ್ಷಿಕಧಾತುವು ಶುದ್ಧ ವಾಯಿತೆಂದು ತಾತ್ಪರ್ಯ, ಶುದ್ಧವಾದ ಮಾಕ್ಷಿಕಧಾತುವನ್ನು ಹುರಳಿಯಕಟ್ಟಿನಲ್ಲಿ ಯಾಗಲಿ ಎಳ್ಳೆಣ್ಣೆಯಲ್ಲಿಯಾಗಲಿ, ಮಜ್ಜಿಗೆ ಆಡಿನಮೂತ್ರ ಇವುಗಳಿಂದ ಲಾಗಲಿ ಅರದು ಪುಟಹಾಕಿದರೆ ಸ್ವರ್ಣಮಾಕ್ಷಿಕಧಾತುವು ಸತ್ತು ಬೂದಿಯಾಗು ತ್ತದೆ. ತಾರಮಾಕ್ಷಿಕವೆಂಬುವುದು ಕರ್ಕೋಟಿ ಎಂದರೆ ಕಹಿಸೌತೇಕಾಯಿನ ರಸ ದಲ್ಲಿಯಾಗಲಿ ಕರ್ಕಟಕಶೃಂಗಿ ಎಂಬ ಮೂಲಿಕೆಯ ರಸದಲ್ಲಿಯಾಗಲಿ ಒಂದು ದಿನ ನಿಂಬೆ ಹಣ್ಣಿನ ರಸದಲ್ಲಿಯಾಗಲಿ ಅರದು ಬಿಸಲಿನಲ್ಲಿ ಒಣಗಿಸಿ ಭಾವನೆ ಕೊಡುವುದರಿಂದ ಶುದ್ಧಿಯಾಗುತ್ತದೆ.

**ವಿಷ್ಠಯಾಮರ್ದಯೇತ್ತುತ್ಥಂಮಾರ್ಜಾರಕಕಪೋತಯೋಃ ॥೫೮॥**
**ದಶಾಂಶಂಟಂಕಣಂದತ್ವಾಪಚೇನ್ಮೃದುಪುಟೇನತು ॥**
**ಪುಟಂದಧ್ನಾಪುಟಂಕ್ಷೌದ್ರೈರ್ದೇಯಂತುತ್ಥವಿಶುದ್ಧಯೇ ॥ ೫೯ ॥**

ತುತ್ಥದ ಜೊತೆಗೆ ಬೆಕ್ಕಿನ ಅಥವಾ ಪಾರಿವಾಳದಹಕ್ಕಿಯ ಮಲವನ್ನು ಸೇರಿಸಿ ತುತ್ಥದ ಹತ್ತನೆಯ ಒಂದು ಪಾಲು ಬಿಳಿಗಾರವನ್ನು ಸಹಾ ಸೇರಿಸಿ ಚನ್ನಾಗಿ ಅರದು ಮೃದ್ವಗ್ನಿಯಿಂದ ಒಂದು ಪುಟಕೊಡಬೇಕು, ನಂತರ ಮೊಸರಿನಲ್ಲರದು ಪುಟಕೊಡಬೇಕು, ನಂತರದಲ್ಲಿ ಜೇನಿನಲ್ಲರದು ಪುಟಕೊಡಬೇಕು, ಈ ರೀತಿಯಾಗಿ ಮೂರು ಪುಟವನ್ನು ಕೊಟ್ಟಲ್ಲಿ ತುತ್ಥವು ಶುದ್ಧವಾಗುತ್ತದೆ.

**ಕೃಷ್ಣಾಭ್ರಕಂಧಮೇದ್ವಹ್ನೌತತಃಕ್ಷೀರೇವಿನಿಕ್ಷಿಪೇತ್ ॥**
**ಭಿನ್ನಪತ್ರಂತುತತ್ಕೃತ್ವಾತಂಡುಲೀಯಾಮ್ಲಯೋರ್ದ್ರವೈಃ ॥೬೦॥**
**ಭಾವಯೇದಷ್ಟಯಾಮಂತದೇವಂಶುದ್ಧ್ಯತಿಚಾಭ್ರಕಂ ॥**

ಅಭ್ರಕವು ಎರಡು ವಿಧ—ಕೃಷ್ಣಾಭ್ರಕ, ಶ್ವೇತಾಭ್ರಕ ಎಂಬದಾಗಿ, ಕೃಷ್ಣಾಭ್ರಕವೇ ಔಷಧಕ್ಕೆ ಉಪಯುಕ್ತವಾದದ್ದು, ಈ ಅಭ್ರಕವನ್ನು ಬೆಂಕಿಯಲ್ಲಿ ಕಾಯಿಸಿ ಹಾಲಿಗೆ ಹಾಕಬೇಕು, ನಂತರ ಅದರ ಹಾಳೆಗಳನ್ನು ಮಾಡಿ ಕಿರುಕಸಾಲೆ ಸೊಪ್ಪಿನ ರಸ ಯಾವುದಾದರೂ ಹುಳಿ ಇವು ಪ್ರತಿಯೊಂದರಲ್ಲಿಯೂ ಹಾಕಿ ಎಂಟು ಯಾಮ ಪರ್ಯಂತ ಭಾವನಕೊಡಬೇಕು, ಈ ರೀತಿಯಾಗಿ ಮಾಡಿದರೆ ಅಭ್ರಕವು ಶುದ್ಧವಾಗುತ್ತದೆ

**ಕೃತ್ವಾಧಾನ್ಯಾಭ್ರಕಂತತ್ತುಶೋಷಯಿತ್ವಾಥಮರ್ದಯೇತ್ ।೬೧।**
**ಅರ್ಕಕ್ಷೀರೈರ್ದಿನಂಖಲ್ವೇಚಕ್ರಾಕಾರಂಚಕಾರಯೇತ್ ॥**
**ವೇಷ್ಟಯೇದರ್ಕಪತ್ರೈಶ್ಚಸಮ್ಯಗ್ಗಜಪುಟೇಪಚೇತ್ ॥ ೬೨ ॥**
**ಪುನರ್ಮರ್ದ್ಯಂಪುನಃಪಾಚ್ಯಂಸಪ್ತವಾರಂಪ್ರಯತ್ನತಃ ॥**
**ತತೋವಟಜಟಾಕ್ವಾಥೈಸ್ತದ್ವದ್ದೇಯಂಪುಟತ್ರಯಂ ॥ ೬೩ ॥**
**ಮ್ರಿಯತೇನಾತ್ರಸಂದೇಹಃಸರ್ವಯೋಗೇಷುಯೋಜಯೇತ್ ॥**
**ತುಲ್ಯಂಘೃತಂಮೃತಾಭ್ರೇಣಲೋಹಪಾತ್ರೇವಿಪಾಚಯೇತ್ ।೬೪।**
**ಘೃತೇಜೀರ್ಣೇತದಭ್ರಂತುಸರ್ವಯೋಗೇಷುಯೋಜಯೇತ್ ॥**
**ಮೃತಂತ್ವಭ್ರಂಹರೇನ್ಮೃತ್ಯುಂಜರಾಪಲಿತನಾಶನಂ ॥ ೬೫ ॥**
**ಅನುಪಾನೈಶ್ಚಸಂಯುಕ್ತಂತತ್ತದ್ರೋಗಹರಂಪರಂ ॥**

ಅಭ್ರಕಮಾರಣ ಕ್ರಮವನ್ನು ಹೇಳುತ್ತಾನೆ—ಅಭ್ರಕವನ್ನು ಹಿಂದೆ ಹೇಳಿದ ಪ್ರಕಾರದಿಂದ ಶುದ್ಧಿಮಾಡಿಕೊಂಡು ನಂತರ ಧಾನ್ಯಾಭ್ರಕವನ್ನಾಗಿ ಮಾಡಿಕೊಳ್ಳಬೇಕು, ಧಾನ್ಯಾಭ್ರಕಮಾಡಿಕೊಳ್ಳುವ ಕ್ರಮವೆಂತೆಂದರೆ—"ಬಧ್ವಾಧಾನ್ಯಯುತೇವಸ್ತ್ರೇಮರ್ದಯೇತ್ಕಾಂಜಿಕೈಸ್ಸಹ॥ ಆದಾಯಾಧೋಗತಂಶುದ್ಧಂಶುಷ್ಕಂ ಧಾನ್ಯಾಭ್ರಕಂಭವೇತ್ ॥" ಎಂದರೆ ಅಭ್ರಕದ ರೇಕುಗಳನ್ನು ಭತ್ತದ ಕಾಳಿನ ಜೊತೆಯಲ್ಲಿ ಒಂದು ದೃಢವಾದ ಬಟ್ಟೆಯಲ್ಲಿ ಕಟ್ಟಿ ಕಾಂಜಿಕವೆಂಬ ಅನ್ನದ ಹುಳಿನೀರಿನಲ್ಲಿ ಹಿಡಿದುಕೊಂಡು ಕೈಯ್ಯಿಂದ ಹಿಸುಕುತ್ತಬರಬೇಕು, ಹೀಗೆ ಮಾಡುವುದರಿಂದ ಭತ್ತದೊಡನೆ ತಿಕ್ಕಲ್ಪಟ್ಟ ಅಭ್ರಕದ ರೇಕುಗಳು ಸಣ್ಣ ರವೆಯಾಗಿ ಆ ಹುಳಿನೀರಿಗೆ ಬಂದು ಸೇರುತ್ತದೆ, ನಂತರ ಆ ಹುಳಿನೀರಿನ ತಿಳಿಯನ್ನೆಲ್ಲಾ ಚಲ್ಲಿ ತಳದಲ್ಲಿ ನಿಲ್ಲುವ ಅಭ್ರಕದ ರವೆಯನ್ನು ಒಣಗಿಸಿದಲ್ಲಿ ಅದೇ ಧಾನ್ಯಾಭ್ರಕವೆನ್ನಿಸಿಕೊಳ್ಳುತ್ತದೆ, ಈ ರೀತಿ ಧಾನ್ಯಾಭ್ರಕಮಾಡಿ ಒಣಗಿಸಿ ಆ ಪುಡಿಯನ್ನು ಕಲ್ಲುಪತ್ತಿನಲ್ಲಿ ಹಾಕಿ ಎಕ್ಕದ ಹಾಲನ್ನು ಹಾಕಿಕೊಂಡು ಒಂದು ದಿವಸ ಚನ್ನಾಗಿ ಅರದು ಚಕ್ರದಂತೆ ದುಂಡಾದ ಬಿಲ್ಲೆಗಳನ್ನು ಮಾಡುವುದು, ನಂತರ ಎಕ್ಕದೆಲೆಯಲ್ಲಿ ಸುತ್ತಿ ಗಜಪುಟದಲ್ಲಿ ಪಕ್ವಮಾಡಬೇಕು, ಈ ಕ್ರಮದಿಂದ ಏಳುಸಾರಿ ಅರೆದು ಏಳುಸಾರಿ ಪಕ್ವಮಾಡಬೇಕು, ಇದಾದ ಮೇಲೆ ಆಲದ ಬೇರಿನ ಕಷಾಯದಲ್ಲರದು ಮೂರು ಬಾರಿ ಪುಟಕೊಡಬೇಕು, ಈ ರೀತಿ ಹತ್ತು ಪುಟ ಕೊಟ್ಟಲ್ಲಿ ಅಭ್ರಕವು ಸತ್ತು ಔಷಧಕ್ಕೆ ಉಪಯೋಗವಾಗುವ ಸ್ಥಿತಿಗೆ ಬರುತ್ತದೆ, ಈ ರೀತಿ ಸತ್ತುಹೋದ ಅಭ್ರಕವ ಸಮತೂಕ ಹಸುವಿನ ತುಪ್ಪವನ್ನು ಸೇರಿಸಿ ಕಬ್ಬಿಣದ ಬಾಣಲೆಯಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಹುರಿಯುತ್ತಲಿರಬೇಕು, ಹಾಕಿದ ತುಪ್ಪವೆಲ್ಲವೂ ಆ ಅಭ್ರಕದಲ್ಲಿ ಜೀರ್ಣವಾಗುವ ವರಿವಿಗೂ ಹಾಗೆ ಮಾಡಿ ನಂತರ ಇಳಿಸಿಕೊಂಡು ಔಷಧವಾಗಿ ಉಪಯೋಗಿಸಬಹುದು, ಈ ಅಭ್ರಕಭಸ್ಮದ ಗುಣಗಳು—ಈ ಅಭ್ರಕವನ್ನು ವಿಧಿಗನುಸಾರವಾಗಿ ಸೇವಿಸುತ್ತ ಬಂದಲ್ಲಿ ಮುಪ್ಪನ್ನು ಮತ್ತು ಮುಪ್ಪಿನಿಂದ ಸಂಭವಿಸಬಹುದಾದ ಕೂದಲು ಬೆಳ್ಳಗಾಗೋಣವನ್ನೂ, ಅನುಪಾನಭೇದದಿಂದ ನಾನಾ ರೋಗಗಳನ್ನೂ ನಿವಾರಣೆ ಮಾಡಿಕೊಳ್ಳಬಹುದು.

ಶುದ್ಧಂಧಾನ್ಯಾಭ್ರಕಂಮುಸ್ತಶುಂಠೀಷಡ್ಭಾಗಯೋಜಿತಂ ॥ ೬೬ ॥
ಮರ್ದಯೇತ್ಕಾಂಜಿಕೇನೈವದಿನಂಚಿತ್ರಕಜೈರಸೈಃ ॥
ತತೋಗಜಪುಟಂದದ್ಯಾತ್ತಸ್ಮಾದುದ್ಧೃತ್ಯಮರ್ದಯೇತ್ ॥ ೬೭ ॥
ತ್ರಿಫಲಾವಾರಿಣಾತದ್ವತ್ಪುಟೇದೇವಂಪುಟೈಸ್ತ್ರಿಭಿಃ ॥
ಬಲಾಗೋಮೂತ್ರಮುಸಲೀತುಲಸೀಸೂರಣದ್ರವೈಃ ॥ ೬೮ ॥
ಮರ್ದಿತಂಪುಟಿತಂವಹ್ನೌತ್ರಿತ್ರಿವೇಲಂವ್ರಜೇನ್ಮೃತಿಂ ॥

ಹಿಂದೆ ಹೇಳಿದಂತೆ ಶುದ್ಧವಾದ ಧಾನ್ಯಾಭ್ರಕದ ಆರುಲ್ಲೊಂದು ಪಾಲು ಭದ್ರಮುಸ್ತೆ, ಶುಂಠಿ ಇವುಗಳನ್ನು ಸೇರಿಸಿ ಕಾಂಜಿಕವೆಂಬ ಅನ್ನದ ಹುಳಿನೀರನ್ನು ಹಾಕಿಕೊಂಡು ಒಂದು ದಿವಸ ಅರೆಯಬೇಕು, ಚಿತ್ರಮೂಲದ ರಸದಿಂದ ಒಂದು ದಿವಸ ಅರೆಯಬೇಕು, ಈ ರೀತಿ ಮಾಡಿ ಬಿಲ್ಲೆಯನ್ನು ಕಟ್ಟಿ ಗಜಪುಟಹಾಕಬೇಕು. ಆರಿದ ಮೇಲೆ ಪುನಃ ತ್ರಿಫಲಾಕಷಾಯದಿಂದ ಅರೆದು ಮೂರು ಪುಟಗಳನ್ನು ಕೊಡಬೇಕು. ಪ್ರತಿಸಾರಿಯೂ ಅರೆಯುತ್ತಲೇ ಇರಬೇಕು, ನಂತರ ಕಳ್ಳಿಂಗಡ್ಡೆ ಸೊಪ್ಪಿನ ರಸ, ಗೋಮೂತ್ರ, ಹಂದಿಗೆಡ್ಡೆರಸ, ತುಲಸೀರಸ, ಚೂರ್ಣದಗೆಡ್ಡೆಯ ರಸ. ಈ ರಸಗಳಿಂದ ಪ್ರತ್ಯೇಕ ಮೂರು ಮೂರು ಸಾರಿ ಅರೆದು ಮೂರು ಮೂರು ಸಾರಿ ಪುಟಹಾಕಿದಲ್ಲಿ ಅಭ್ರಕವು ಸತ್ತು ಭಸ್ಮವಾಗುತ್ತದೆ.

ಧಾನ್ಯಾಭ್ರಕಸ್ಯಭಾಗೈಕಂದ್ವೌಭಾಗೌಟಂಕಣಸ್ಯಚ ॥ ೬೯ ॥
ಪಿಷ್ಟ್ವಾತದಂಧಮೂಷಾಯಾಂರುಧ್ವಾತೀವ್ರಾಗ್ನಿನಾಪಚೇತ್ ॥
ಸ್ವಭಾವಶೀತಲಂಚೂರ್ಣಂಸರ್ವಯೋಗೇಷುಯೋಜಯೇತ್ ೭೦

ಒಂದು ಭಾಗ ಧಾನ್ಯಾಭ್ರಕದ ಚೂರ್ಣ, ಎರಡು ಭಾಗ ಬಿಳಿಗಾರ ಇವೆರಡನ್ನೂ ಸೇರಿಸಿ ಅರೆದು ಮೂಸೆಯಲ್ಲಿ ತುಂಬಿ ಮೇಲೆ ಮುಚ್ಚಿ ಸೀಲುಮಾಡಿ ಗಾಢಾಗ್ನಿಯಲ್ಲಿ ಪಕ್ವಮಾಡಬೇಕು, ನಂತರ ಸ್ವಾಂಗಶೀತಲವಾಗುವವರಿವಿಗೂ ಬಿಟ್ಟಿದ್ದು ತೆಗದುಕೊಂಡು ಆ ಚೂರ್ಣವನ್ನು ಅಭ್ರಕಭಸ್ಮವನ್ನುಪಯೋಗಿಸುವ ಸಂದರ್ಭಗಳಲ್ಲೆಲ್ಲಾ ಉಪಯೋಗಿಸಬಹುದು.

ನೀಲಾಂಜನಂಚೂರ್ಣಯಿತ್ವಾಜಂಬೀರದ್ರವಭಾವಿತಂ ॥
ದಿನೈಕಮಾತಪೇಶುದ್ಧಂಭವೇತ್ಕಾರ್ಯೇಷುಯೋಜಯೇತ್॥೭೧॥
ಏವಂಗೈರಿಕಕಾಸೀಸಟಂಕಣಾನಿವರಾಟಿಕಾ ॥
ಶೌರೀಶಂಖಾಚಕಂಕುಷ್ಠಂಶುದ್ಧಿಮಾಯಾತಿನಿಶ್ಚಿತಂ ॥ ೭೨ ॥

ನೀಲಾಂಜನ ಶೋಧನ ಪ್ರಕ್ರಿಯೆ –ನೀಲಾಂಜನವನ್ನು ಕಟ್ಟಿ ಪುಡಿಮಾಡಿ ನಿಂಬೆಯಹಣ್ಣಿನ ರಸದಲ್ಲಿ ಒಂದು ದಿವಸ ಭಾವನೆ ಕೊಟ್ಟು, ಬಿಸಿಲಿನಲ್ಲಿ ಒಣಗಿಸಿದಲ್ಲಿ ಶುದ್ಧವಾಗುತ್ತದೆ, ಸಮಸ್ತ ಕಾರ್ಯಗಳಲ್ಲಿಯೂ ಇದನ್ನು ನಿರ್ಭೀತಿಯಿಂದ ಉಪಯೋಗಿಸಬಹುದು ಇದೇ ರೀತಿಯಲ್ಲಿ ಗೈರಿಕ (ಕಾವಿಯ ಕಲ್ಲು), ಕಾಸೀಸ (ಅನ್ನಭೇದಿ) ಟಂಕಣ (ಬಿಳಿಗಾರ) ವರಾಟಿಕ (ಕವಡೆ) ಶೌರೀ (ಒಂದು ಬಗೆಯ ಸುರಾಷ್ಟ್ರದೇಶದ ಮಣ್ಣು) ಶಂಖ, ಕಂಕುಷ್ಠವೆಂಬ ಒಂದು ಬಗೆಯ ಉಪವಿಷ ಇವುಗಳು ಕೂಡ ಶುದ್ಧಿಯಾಗುತ್ತವೆ.

ಪಚೇತ್ಸಪ್ತಹಮ್ ಜಾಮೂತ್ರೇ ದೋಲಾಯಂತ್ರೇ ಮನಶ್ಶಿಲಾಂ ॥
ಭಾವಯೇತ್ಸಪ್ತಧಾಪಿತ್ತೈರಜಾಯಾಶ್ಶುದ್ಧಿಮೃಚ್ಛತಿ ॥ ೭೩ ॥

ಮಣಿಶಿಲೆಯನ್ನು ತಂದು ಮಣ್ಣಿನ ಮಡಕೆಯಲ್ಲಿ ತೂಗಗಟ್ಟಿ ಆದರತುಂಬಾ ಆಡಿನ ಮೂತ್ರವನ್ನು ಸುರಿದು ಒಲೆಯ ಮೇಲಿರಿಸಿ ಮೂರು ದಿವಸ ಅವಿಚ್ಛಿನ್ನವಾಗಿ ಉರಿಸಿ ಪಕ್ವಮಾಡಿ ನಂತರ ಆಜಪಿತ್ತದಿಂದ ಏಳುಸಾರಿ ಭಾವನೆಕೊಟ್ಟಲ್ಲಿ ಮಣಿಶಿಲೆಯು ಶುದ್ಧವಾಗುತ್ತದೆ.

ತಾಲಕಂ ಕಣಶಃ ಕೃತ್ವಾ ಸಚೂರ್ಣಂ ಕಾಂಜಿಕೇ ಕ್ಷಿಪೇತ್ ॥
ದೋಲಾಯಂತ್ರೇಣ ಯಾಮೈಕಂ ತತಃ ಕೂಷ್ಮಾಂಡಜೈರ್ದ್ರವೈಃ
॥ ೭೪ ॥

ತಿಲತೈಲೇ ಪಚೇದ್ಯಾಮಂ ಯಾಮಂ ಚ ತ್ರಿಫಲಾಜಲೈಃ ॥
ಏವಂ ಯಂತ್ರೇ ಚತುರ್ಯಾಮಂ ಪಾಚ್ಯಂ ಶುದ್ಧ್ಯತಿ ತಾಲಕಂ ॥೭೫॥

ಅರಿದಳವನ್ನು ಸಣ್ಣ ಪುಡಿಮಾಡಿ ಆ ಪುಡಿಯನ್ನು ಹುಳಿನೀರಿನಲ್ಲಿ ಹಾಕಬೇಕು, ಅಂದರೆ ತಾಳಕದ ತುಣುಕುಗಳನ್ನು ಬಟ್ಟೆಯಲ್ಲಿ ಕಟ್ಟಿ ಒಂದು ಮಡಕೆಯಲ್ಲಿ ಅನ್ನದ ಹುಳಿನೀರನ್ನು ಹಾಕಿ ಈ ಅರಿವೆಯ ಗಂಟನ್ನು ಅದರಲ್ಲಿ ತೂಗಗಟ್ಟಿ ಡೋಲಾಯಂತ್ರ ಕ್ರಮದಿಂದ ಒಂದು ಯಾಮ ಪಕ್ವಮಾಡಬೇಕು, ನಂತರ ಬೂದಿಗುಂಬಳಕಾಯಿನ ರಸದಲ್ಲಿ, ಎಳ್ಳೆಣ್ಣೆಯಲ್ಲಿ, ತ್ರಿಫಲಾ ಕಷಾಯದಲ್ಲಿ ಈ ರೀತಿ ಪ್ರತಿಯೊಂದರಲ್ಲಿಯೂ ಒಂದೊಂದು ಯಾಮ ಡೋಲಾಯಂತ್ರ ವಿಧಾನದಿಂದ ಪಕ್ವಮಾಡಬೇಕು, ಈ ರೀತಿ ಬೇರೆ ಬೇರೆ ದ್ರವಗಳಿಂದ ನಾಲ್ಕು ಯಾಮ ಪಕ್ವಮಾಡಿದಲ್ಲಿ ತಾಳಕವು ಶುದ್ಧವಾಗಿ ಔಷಧೋಪಯುಕ್ತವಾಗುತ್ತದೆ.

ನರಮೂತ್ರೈಶ್ಚ ಗೋಮೂತ್ರೈಸ್ಸಪ್ತಾಹಂ ರಸಕಂ ಪಚೇತ್ ॥
ದೋಲಾಯಂತ್ರೇಣ ಶುದ್ಧಿಸ್ಸ್ಯಾತ್ತತಃ ಕಾರ್ಯೇಷು ಯೋಜಯೇತ್
॥ ೭೬ ॥

ರಸಕವೆಂಬ ಕಫರೀತುತ್ಥವನ್ನು ಒಂದು ಮಡಕೆಯಲ್ಲಿ ಬಟ್ಟೆಯಿಂದ ತೂಗಗಟ್ಟಿ ಮನುಷ್ಯಮೂತ್ರವನ್ನಾಗಲಿ ಗೋಮೂತ್ರವನ್ನಾಗಲಿ ಆ ಮಡಕೆಯಲ್ಲಿ ಹಾಕಿ ಏಳು ದಿವಸ ಹಗಲು ರಾತ್ರೆ ಒಲೆಯನ್ನುರಿಸಿ ಡೋಲಾಯಂತ್ರ ಕ್ರಮದಲ್ಲಿ ಪಾಕಮಾಡಿದಲ್ಲಿ ಔಷಧಕ್ಕೆ ಉಪಯೋಗಿಸಬಹುದಾದಷ್ಟು ಮಟ್ಟಿಗೆ ಶುದ್ಧವಾಗುತ್ತದೆ.

ಲಾಕ್ಷಾ ವಿನಾಪಯಶ್ಶಾಗಂ ಟಂಕಣಂ ಮೃಗಶೃಂಗಕಂ ॥
ಕಿಣ್ವಾಕಂ ಸರ್ಷಪಾಶ್ಶಿಗ್ರುರ್ಗುಂಜೋರ್ಣಾ ಗುಡಸೈಂಧವಾಃ ॥೭೭॥
ಯವಾಸ್ತಿಕ್ತಾಘೃತಂ ಕ್ಷೌದ್ರಂ ಯಥಾಲಾಭಂ ವಿಚೂರ್ಣಯೇತ್ ॥
ಏಭಿರ್ವಿಮಿಶ್ರಿತಾಸ್ಸರ್ವೇ ಧಾತವೋ ಗಾಢವಹ್ನಿನಾ ॥ ೭೮ ॥
ಮೂಷಾಧ್ಮಾತಾಃ ಪ್ರಜಾಯಂತೇ ಮುಕ್ತಸತ್ವಾ ನ ಸಂಶಯಃ ॥

ಹಿಂದೆ ಹೇಳಿದ ಧಾತೂಪಧಾತುಗಳ ಸತ್ವಪಾಚನ ಕ್ರಮವನ್ನು ಹೇಳುತ್ತಾನೆ—ಅರಗು, ಹೊನಗೊನೆಸೊಪ್ಪು, ಆಡಿನಹಾಲು, ಬಿಳಿಗಾರ, ಶೃಂಗ, ಹಿಂಡಿ, ಸಾಸುವೆ, ನುಗ್ಗೆಯ ತೊಪ್ಪೆ, ಗುಲಗಂಜ, ಕುರಿಯಕಾಲುಗಟೆ, ಬೆಲ್ಲ, ಸೈಂಧವಲವಣ, ಯವೆ, ಕಟುಕರೋಹಿಣಿ, ತುಪ್ಪ, ಜೇನುತುಪ್ಪ, ಇವುಗಳಲ್ಲಿ ಸಿಕ್ಕಬಹುದಾದವನ್ನು ಸೇರಿಸಿ ಚೂರ್ಣವಾಡಿ ಅವುಗಳ ಜೊತೆಯಲ್ಲಿ ಧಾತುಗಳನ್ನಾಗಲಿ ಉಪಧಾತುಗಳನ್ನಾಗಲಿ ಸೇರಿಸಿ ಅಕ್ಕಸಾಲಿಗರ ಮನೆಯಲ್ಲಿ ಬಂಗಾರ ಬೆಳ್ಳಿಗಳನ್ನು ಕರಗಿಸಲು ಮಾಡಿಇಟ್ಟುಕೊಂಡಿರತಕ್ಕಂತಹ ಮೂಸೆಗಳಲ್ಲಿ ತುಂಬಿ ಮುಚ್ಚಿ ಸೀಲುಮಾಡಿ ಗಾಢಾಗ್ನಿಯಿಂದ ಪಕ್ವಮಾಡಿದಲ್ಲಿ ಸತ್ವವು ಅಡಿಯಲ್ಲಿ ನಿಲ್ಲುತ್ತದೆ, ಈ ಸತ್ವಪಾಚನ ಕ್ರಮವನ್ನು ನೋಡಿ ತಿಳಿದುಕೊಳ್ಳತಕ್ಕದ್ದು.

ಕುಳುತ್ಥಕೋದ್ರವಕ್ವಾಥೇ ದೋಲಾಯಂತ್ರೇ ವಿಪಾಚಯೇತ್ ॥ ೭೯ ॥
ವ್ಯಾಘ್ರೀಕಂದಗತಂ ವಜ್ರಂ ತ್ರಿದಿನಂ ತದ್ವಿಶುದ್ಧ್ಯತಿ ॥
ತಪ್ತಂ ತಪ್ತಂ ತು ತದ್ವಜ್ರಂ ಖರಮೂತ್ರೈರ್ನಿಷೇಚಯೇತ್ ॥ ೮೦ ॥
ಪುನಸ್ತಪ್ತಂ ಪುನಸ್ಸೇಚ್ಯಮೇವಂ ಕುರ್ಯಾತ್ ತ್ರಿಸಪ್ತಧಾ ॥
ಮತ್ಕುಣೈಸ್ತಾಲಕಂ ಪಿಷ್ಟ್ವಾ ಯಾವದ್ಭವತಿ ಗೋಲಕಂ ॥ ೮೧ ॥
ತದ್ಗೋಲೇ ನಿಹಿತಂ ವಜ್ರಂ ತದ್ಗೋಲಂ ವಹ್ನಿನಾ ಧಮೇತ್ ॥
ಸಿಂಚಯೇದಶ್ವಮೂತ್ರೇಣ ತದ್ಗೋಲೇ ಚ ಕ್ಷಿಪೇತ್ಪುನಃ ॥ ೮೨ ॥
ರುದ್ಧ್ವಾ ಧ್ಮಾತಂ ಪುನಸ್ಸೇಚ್ಯಮೇವಂ ಕುರ್ಯಾತ್ ತ್ರಿಸಪ್ತಧಾ ॥
ಏವಂ ಚ ಮ್ರಿಯತೇ ವಜ್ರಂ ಚೂರ್ಣಂ ಸರ್ವತ್ರ ಯೋಜಯೇತ್ ೮೩

ಧಾತುಶೋಧನ ಮಾರಣಗಳನ್ನು ಹೇಳಿ ರತ್ನಶೋಧನ ಮಾರಣ ಕ್ರಮಗಳನ್ನು ಹೇಳುತ್ತಾನೆ—ವಜ್ರವು ನಾಲ್ಕು ವಿಧ—ಬ್ರಹ್ಮ, ಕ್ಷತ್ರಿಯ ವೈಶ್ಯ, ಶೂದ್ರ ಎಂಬದಾಗಿ. ಔಷಧ ಶಾಸ್ತ್ರದಲ್ಲಿ ಈ ನಾಲ್ಕು ಜಾತಿಗೂ ಗುಣಗಳನ್ನೂ ಉಪಯೋಗವನ್ನೂ ಹೇಳಿದ್ದಾರೆ, ವ್ಯಾಘ್ರೀಕಂದವೆಂಬುವುದೊಂದು ಬಗೆಯ ಗೆಡ್ಡೆ, ಈ ಗೆಡ್ಡೆಯಲ್ಲಿ ವಜ್ರವನ್ನಿರಿಸಿ ಹುರಳಿಯ ಕಷಾಯವನ್ನಾಗಲಿ, ಕೋದ್ರವವೆಂಬ ಧಾನ್ಯದ ಕಷಾಯ (ಹಾರಕವೆಂದು ಲೋಕದಲ್ಲಿ ವಾಡಿಕೆಯಾಗಿರುವ ಧಾನ್ಯವೆಂದು ಕೆಲವರ ಅಭಿಪ್ರಾಯ)ವನ್ನಾಗಲಿ ಒಂದು ಮಡಿಕೆಯಲ್ಲಿ ಹಾಕಿ ಆ ಮಡಿಕೆಯಲ್ಲಿ ಈ ಗೆಡ್ಡೆಯನ್ನು ತೂಗಗಟ್ಟಿ ದೋಲಾಯಂತ್ರ ಕ್ರಮದಲ್ಲಿ ಮೂರು ದಿವಸ ಬೆಂಕಿಯ ಮೇಲಿರಿಸಿ ಪಾಕಮಾಡಬೇಕು. ಈ ರೀತಿ ಪಾಕಮಾಡಿದರೆ ವಜ್ರವು ಶುದ್ಧವಾಗುತ್ತದೆ, ನಂತರ ವಜ್ರವನ್ನು ಚನ್ನಾಗಿ ಕಾಯಿಸುವುದು, ಕಾದದ್ದನ್ನು ಕತ್ತೆಯ ಮೂತ್ರದಲ್ಲಿ ಹಾಕುವುದು, ಈ ರೀತಿಯಾಗಿ ಇಪ್ಪತ್ತೊಂದು ಸಾರಿ ಮಾಡಬೇಕು, ನಂತರ ಶುದ್ಧವಾದ ತಾಲಕವನ್ನು ಖಲ್ವದಲ್ಲಿ ಹಾಕಿ ಅದರ

ಜೊತೆಗೆ ಗೋಡೆಯ ಮೇಲೆ ಓಡಾಡುವ ತಿಗಣೆ ಎಂಬ ಒಂದು ಬಗೆಯ ಕ್ರಿಮಿಗಳನ್ನು ಹಾಕಿ ಅರೆಯುವುದು, ತಾಳಕವು ನೆನೆದು ಉಂಡೆಗೆ ಬರುವ ವರಿವಿಗೂ ತಿಗಣೆಗಳನ್ನು ಹಿಡಿದು ಹಾಕುತ್ತಲೇ ಇರಬೇಕು, ಆ ತಾಳಕವನ್ನು ಗೋಲಿಕಟ್ಟಿ ಅದರಲ್ಲಿ ವಜ್ರವನ್ನಿರಿಸಿ ಅದನ್ನು ಮೂಸೆಯಲ್ಲಿಟ್ಟು ಬೆಂಕಿಯಿಂದ ಊದಬೇಕು, ಚನ್ನಾಗಿ ಕಾದಮೇಲೆ ಕುದುರೆಯ ಮೂತ್ರವನ್ನು ಅದರ ಮೇಲೆ ಸುರಿಯಬೇಕು, ಪುನಃ ಮೂಸೆಯಲ್ಲಿರಿಸಿ ಕಾಯಿಸಿ ಮೇಲೆ ಹೇಳಿದಂತೆಯೇ ಮಾಡಬೇಕು, ಈ ರೀತಿಯಾಗಿ ಇಪ್ಪತ್ತೊಂದು ಸಾರಿ ಮಾಡಿದಲ್ಲಿ ವಜ್ರವು ಸತ್ತುಹೋಗುತ್ತದೆ, ನಂತರ ಚೂರ್ಣಮಾಡಿ ಔಷಧವಾಗಿ ಉಪಯೋಗಿಸಬಹುದು

ಹಿಂಗುಸೈಂಧವಸಂಯುಕ್ತೇಕ್ವಾಥೇಕೌಲುತ್ಥಜೇಕ್ಷಿಪೇತ್ ॥
ತಪ್ತಂತಪ್ತಂಪುನರ್ವಜ್ರಂಭೂಯಾಚ್ಚೂರ್ಣಂತ್ರಿಸಪ್ತಧಾ ॥೮೪॥

ಹುರುಳಿಯ ಕಾಳಿನ ಕಷಾಯವನ್ನು ಮಾಡಿ ಅದರಲ್ಲಿ ಇಂಗು, ಸೈಂಧವ ಲವಣ ಇವುಗಳನ್ನು ಹಾಕಿ ವಜ್ರವನ್ನು ಬೆಂಕಿಯಲ್ಲಿ ಕಾಯಿಸಿ ಕಾಯಿಸಿ ಇಪ್ಪತ್ತೊಂದು ಬಾರಿ ಆ ಕಷಾಯದಲ್ಲಿ ಹಾಕುತ್ತಿದ್ದಲ್ಲಿ ವಜ್ರವು ಶುದ್ಧವಾಗಿ ಚೂರ್ಣವಾಗುತ್ತದೆ.

ಮಂಡೂಕಂಕಾಂಸ್ಯಜೇಪಾತ್ರೇನಿಗೃಹ್ಯಸ್ಥಾಪಯೇತ್ಸುಧೀಃ ॥
ಸಭೀತೋಮೂತ್ರಯೇತ್ತತ್ರತನ್ಮೂತ್ರೇವಜ್ರಮಾವಪೇತ್ ॥೮೫॥
ತಪ್ತಂತಪ್ತಂಚಬಹುಧಾವಜ್ರಸ್ಯೈವಂಮೃತಿರ್ಭವೇತ್ ॥

ಕಪ್ಪೆಯನ್ನು ಹಿಡಿದು ಒಂದು ಕಂಚಿನ ಪಾತ್ರೆಯಲ್ಲಿ ಮುಚ್ಚಿಡಬೇಕು, ಈ ರೀತಿ ಮಾಡಿದಲ್ಲಿ ಕಪ್ಪೆಯು ಹೆದರಿ ಆ ಪಾತ್ರೆಯಲ್ಲಿಯೇ ಮೂತ್ರವಿಸರ್ಜನೆ ಮಾಡುತ್ತದೆ, ವಜ್ರವನ್ನು ಬೆಂಕಿಯಲ್ಲಿ ಕಾಯಿಸಿ ಆ ಮೂತ್ರದಲ್ಲಿ ಅದ್ದುತ್ತ ಬಂದಲ್ಲಿ ವಜ್ರವು ಸತ್ತು ಚೂರ್ಣವಾಗುತ್ತದೆ.

ವೈಕ್ರಾಂತಂವಜ್ರವತ್‌ಶೋಧ್ಯಂನೀಲಂವಾಲೋಹಿತಂತಥಾ ॥೮೬॥
ಹಯಮೂತ್ರೇಣತಸ್ಸೇಚ್ಯಂತಪ್ತಂತಪ್ತಂದ್ವಿಸಪ್ತಧಾ ॥
ತತಸ್ತುಮೋಷಧುಗ್ಧಸ್ಯಪಂಚಾಂಗೇಗೋಲಕಂಕ್ಷಿಪೇತ್ ॥ ೮೭ ॥
ಪುಟೇನ್ಮೂಷಾಪುಟೇರುದ್ಧ್ವಾಕುರ್ಯಾದೇವಂಚಸಪ್ತಧಾ ॥
ವೈಕ್ರಾಂತಂಭಸ್ಮತಾಂಯಾತಿವಜ್ರಸ್ಥಾನೇನಿಯೋಜಯೇತ್ ॥೮೮॥

ವೈಕ್ರಾಂತವೆಂಬುವುದೊಂದು ವಜ್ರದ ಜಾತಿಯ ಕಲ್ಲು ಇದನ್ನು ವಜ್ರವನ್ನು ಶುದ್ಧಿಮಾಡುವಂತೆಯೇ ಶುದ್ಧಿಮಾಡಬೇಕು, ಈ ವೈಕ್ರಾಂತದ ಕಲ್ಲು

ಕೊಂಚ ನೀಲವರ್ಣವಾಗಿಯೂ ಕೊಂಚ ಕೆಂಪು ಬಣ್ಣವಾಗಿಯೂ ಎರಡು ಬಗೆಯಲ್ಲಿರುತ್ತದೆ ವೈಕ್ರಾಂತದ ಕಲ್ಲನ್ನು ಕಾಯಿಸಿ ಕಾಯಿಸಿ ಹದಿನಾಲ್ಕು ಸಾರಿ ಕುದುರೆಯ ಮೂತ್ರದಲ್ಲಿ ಹಾಕಬೇಕು. ನಂತರ ಮೇಷದುಗ್ಧೀ ಎಂಬ ಮೂಲಿಕೆಯ ಪಂಚಾಂಗ (ತ್ವಕ್ಕು, ಪತ್ರ, ಪುಷ್ಪ, ಫಲ, ಮೂಲ) ವನ್ನು ತಂದು ಚನ್ನಾಗಿ ಅರೆದು ಅದರ ಮುಷ್ಟದಲ್ಲಿ ಈ ವೈಕ್ರಾಂತವನ್ನಿರಿಸಿ ದುಂಡಾಗಿ ಉಂಡೆಮಾಡಿ ಮೂಸೆಯಲ್ಲಿರಿಸಿ ಪುಟಹಾಕಬೇಕು, ಈ ರೀತಿಯಾಗಿ ಏಳು ಬಾರಿ ಪುಟಕೊಟ್ಟಲ್ಲಿ ವೈಕ್ರಾಂತವು ಭಸ್ಮವಾಗುತ್ತದೆ, ಈ ವೈಕ್ರಾಂತ ಭಸ್ಮವನ್ನು ವಜ್ರಭಸ್ಮಕ್ಕೆ ಬದಲಾಗಿ ಉಪಯೋಗಿಸಬಹುದು, ಮೇಷದುಗ್ಧೀ ಎಂಬ ಮೂಲಿಕೆಯು ಅಪ್ರಸಿದ್ಧವಾಗಿದೆ, ಈ ಲೇಖಕರ ಲೋಪದಿಂದಲೇ ಕೆಲವರು "ಲತಾಸೂತ್ತರವಾರುಣ್ಯಾ" ಎಂಬದಾಗಿ ಮೂಲಶ್ಲೋಕವನ್ನೇ ತಿದ್ದಿಹಾಕಿ ಉತ್ತರವಾರುಣಿ ಎಂಬ ಪದಕ್ಕೆ ದಾಸವಿಕ್ಕೆ ಕಾಯಿನ ಜಾತಿಯಲ್ಲಿ ಚಿಕ್ಕ ಜಾತಿ ಎಂಬದಾಗಿ ಅರ್ಥವಾಡುತ್ತಾರೆ.

ಸ್ವೇದಯೇದ್ದೋಲಿಕಾಯಂತ್ರೇ ಜಯಂತ್ಯಾಸ್ಸ್ವರಸೇನ ಚ ॥
ಮಣಿಮುಕ್ತಾಪ್ರವಾಳಾನಿ ಯಾಮೈಕಂ ಶೋಧನಂ ಭವೇತ್ ॥ ೮೯ ॥
ಕುಮಾರ್ಯಾಸ್ತಂಡುಲೀಯೋನಸ್ತನ್ಯೇನ ಚ ನಿಷೇಚಯೇತ್ ॥
ಪ್ರತ್ಯೇಕಂ ಸಪ್ತವೇಲಂ ಚ ತಪ್ತತಪ್ತಾನಿ ಕೃತ್ಸ್ನಶಃ ॥ ೯೦ ॥
ಮೌಕ್ತಿಕಾನಿ ಪ್ರವಾಳಾನಿ ತಥಾ ರತ್ನಾನ್ಯಶೇಷತಃ ॥
ಕ್ಷಣಾದ್ವಿವಿಧವರ್ಣಾನಿ ಮ್ರಿಯಂತೇ ನಾತ್ರ ಸಂಶಯಃ ॥ ೯೧ ॥
ಉಕ್ತಮಾಕ್ಷಿಕವನ್ಮುಕ್ತಾಪ್ರವಾಳಾನಿ ಚ ಮಾರಯೇತ್ ॥
ವಜ್ರವತ್ಸರ್ವರತ್ನಾನಿ ಶೋಧಯೇನ್ಮಾರಯೇತ್ತಥಾ ॥ ೯೨ ॥

ಜಯಂತಿ ಎಂದರೆ ಕಲ್ಲಂಗಡಲೆಯಲ್ಲಿ ಒಂದು ವಿಧ. ಹಸಿಯ ಅರಿಸಿನ ಇದರ ರಸವನ್ನು ಒಂದು ಮಡಿಕೆಯಲ್ಲಿ ಹಾಕಿ ಅದರಲ್ಲಿ ಮಣಿಗಳು, ಮುತ್ತು, ಹವಳ ಇವುಗಳನ್ನೆಲ್ಲಾ ಒಂದು ಬಟ್ಟೆಯಿಂದ ತಗಗಟ್ಟಿ ಒಲೆಯ ಮೇಲಿರಿಸಿ ಒಂದು ಯಾಮ ಪರ್ಯಂತ ಕೆಳಗೆ ಉರಿ ಹಾಕಿ ದೋಲಾಯಂತ್ರ ಕ್ರಮದಿಂದ ಪಕ್ವ ಮಾಡಬೇಕು. ಈ ರೀತಿ ಪಾಕದ ಮೇಲೆ ಲೋಣಸರದ ರಸ, ಕಿರುಕಸಾಲೇ ಸೊಪ್ಪಿನ ರಸ, ಹಸುವಿನ ಹಾಲು ಇವುಗಳನ್ನು ಪ್ರತ್ಯೇಕ ಒಂದೊಂದು ಪಾತ್ರೆಯಲ್ಲಿ ಸಂಗ್ರಹಿಸಿ ಮೇಲೆ ಹೇಳಿದಂತೆ ಶುದ್ಧವಾದ ರತ್ನಾದಿಗಳನ್ನು ಬೆಂಕಿಯಲ್ಲಿ ಕಾಯಿಸಿ ಕಾದಕ್ಕೂರ ಮೇಲೆ ಮೇಲೆ ಹೇಳಿದ ಪ್ರತಿಯೊಂದು ರಸವನ್ನೂ ಏಳೇಳು ಬಾರಿ ಸುರಿಯಬೇಕು ಈ ರೀತಿಯಾಗಿ ಮಾಡುವುದರಿಂದ ನಾನಾ ವರ್ಣಗಳಾದ ರತ್ನಗಳ ಕಲ್ಮಷವೆಲ್ಲಾ ಹೋಗುವುದು. ಮಾಕ್ಷಿಕ ಧಾತುವನ್ನು ಮಾರಣಮಾಡಲು ಹೇಳಿರುವ ಕ್ರಮದಿಂದಲೇ ಪಚ್ಚೆಗಳನ್ನು ಮಾರಣ ಮಾಡಬೇಕು ಸಮಸ್ತ ರತ್ನಗಳನ್ನೂ ವಜ್ರದಂತೆಯೇ ಶೋಧನಮಾಡಬೇಕು, ವಜ್ರದಂತೆಯೇ ಮಾರಣವೂ ಮಾಡಬೇಕು.

ಶಿಲಾಜತುಸಮಾನೀಯಗ್ರೀಷ್ಮತಪ್ತಶಿಲಾಚ್ಯುತಂ ॥
ಗೋದುಗ್ಧೈಸ್ತ್ರಿಫಲಾಕ್ವಾಥೈರ್ಭೃಂಗದ್ರಾವೈಶ್ಚಮರ್ದಯೇತ್ ೯೩
ಆತಪೇದಿನಮೇಕೈಕಂತತ್ ಶುದ್ಧಂಶುದ್ಧತಾಂವ್ರಜೇತ್ ॥

ಶಿಲಾಜತು ಶುದ್ಧಿಮಾಡುವ ಕ್ರಮವನ್ನು ಹೇಳುತ್ತಾನೆ—ಶಿಲಾಜತು ಎಂದರೆ ಪರ್ವತ ಪ್ರಾಂತ್ಯದಲ್ಲಿರುವ ದೊಡ್ಡದೊಡ್ಡ ಬಂಡೆಗಳಲ್ಲಿ ಸೇರಿಕೊಂಡಿರುವ ಧಾತುಭಾಗಗಳು, ಬಿಸಿಲುಕಾಲದಲ್ಲಿ ಬಿಸಿಲಿನಿಂದ ಕರಗಿ ಒಂದು ಬಗೆಯ ಅಂಟಾದ ಮತ್ತು ಮಂದವಾದ ಕಪ್ಪುಬಣ್ಣದ ದ್ರವವಾಗಿ ಸೋರಬೀಳುತ್ತವೆ, ಇದನ್ನು ಸಂಗ್ರಹಿಸಿ ಕಾಡುಜನರು ಅಂಗಡಿಗಳಿಗೆ ತಂದು ಮಾರುತ್ತಾರೆ, ಇದನ್ನು ಶಿಲಾಜತು ಎಂದೂ ಕಲ್ಮದವೆಂದೂ ಕರೆಯುವುದು ವಾಡಿಕೆಯಾಗಿದೆ, ಇದರಲ್ಲಿ ಗಂಜಲದ ವಾಸನೆ ಇರುವುದರಿಂದ ಇದನ್ನು ಗೋಮೂತ್ರಶಿಲಾಜತು ಎಂಬದಾಗಿಯೂ ವ್ಯವಹರಿಸುತ್ತಾರೆ, ಔಷಧಕ್ಕಾಗಿ ಇದನ್ನು ಉಪಯೋಗಿಸಬೇಕಾದಲ್ಲಿ ಶುದ್ಧಿಪಡಿಸಬೇಕು, ಶುದ್ಧಿಪಡಿಸುವ ಕ್ರಮ ಹೇಗೆಂದರೆ—ಶಿಲಾಜತುವನ್ನು ತಂದು ಕಲ್ವದಲ್ಲಿ ಹಾಕಿ, ಹಸುವಿನ ಹಾಲಿನಿಂದಲೂ, ತ್ರಿಫಲ ಕಷಾಯದಿಂದಲೂ, ಗರುಗದ ಸೊಪ್ಪಿನ ರಸದಿಂದಲೂ, ಪ್ರತಿಯೊಂದರಿಂದಲೂ ಒಂದೊಂದು ದಿನ ಅರೆಯುವುದು, ಬಿಸಿಲಿನಲ್ಲಿ ಒಣಗಿಸುವುದು. ಈ ರೀತಿಯಾಗಿ ಮಾಡುತ್ತ ಬಂದಲ್ಲಿ ಶಿಲಾಧಾತುವು ಶುದ್ಧವಾಗಿ ಔಷಧೋಪಯೋಗಿಯಾಗುತ್ತದೆ.

ಮುಖ್ಯಾಂಶಿಲಾಜತುಶಿಲಾಂಸೂಕ್ಷ್ಮಖಂಡಪ್ರಕಲ್ಪಿತಾಂ ॥ ೯೪ ॥
ನಿಕ್ಷಿಪ್ಯಾತ್ಯುಷ್ಣಪಾನೀಯೇಯಾಮೈಕಂಸ್ಥಾಪಯೇತ್ಸುಧೀಃ ॥
ಮರ್ದಯಿತ್ವಾತತೋನೀರಂಗೃಹ್ಣೀಯಾದ್ವಸ್ತ್ರಗಾಲಿತಂ ॥ ೯೫ ॥
ಸ್ಥಾಪಯಿತ್ವಾಚಮೃತ್ಪಾತ್ರೇಧಾರಯೇದಾತಪೇಬುಧಃ ॥
ಉಪರಿಸ್ಥಂಘನಂಯತ್ ಸ್ಯಾತ್ತತ್ ಕ್ಷಿಪೇದನ್ಯಪಾತ್ರಕೇ ॥ ೯೬ ॥
ಧಾರಯೇದಾತಪೇತಸ್ಮಾದುಪರಿಸ್ಥಘನಂನಯೇತ್ ॥
ಏವಂಪುನಃಪುನರ್ನೀತ್ವಾದ್ವಿಮಾಸಾಭ್ಯಾಂಶಿಲಾಜತು ॥ ೯೭ ॥
ಭೂಯಾತ್ಕಾರ್ಯಕ್ಷಮಂವಹ್ನೌಕ್ಷಿಪ್ತಂಲಿಂಗೋಪಮಂಭವೇತ್
ನಿರ್ಧೂಮಂಚತತಶ್ಶುದ್ಧಂಸರ್ವಕರ್ಮಸುಯೋಜಯೇತ್ ॥೯೮॥
ಅಧಸ್ಥಿತಂಚಯತ್ ಶೇಷಂತಸ್ಮಿನ್ನೀರಂವಿನಿಕ್ಷಿಪೇತ್ ॥
ವಿಮರ್ದ್ಯಧಾರಯೇದ್ಘರ್ಮೇಪೂರ್ವವಚ್ಚೈವತನ್ನಯೇತ್ ॥ ೯೯ ॥

ಇನ್ನೊಂದು ವಿಧವಾಗಿ ಶುದ್ಧ ಶಿಲಾಜತು ಸಂಪಾದನಾ ಕ್ರಮವನ್ನು ಹೇಳುತ್ತಾನೆ—ಶಿಲಾಜತು ಸಿಕ್ಕತಕ್ಕ ಮುಖ್ಯವಾದ ಕಲ್ಲನ್ನೇ ತಂದು ಚನ್ನಾಗಿ

ಕುಟ್ಟಿ ಪುಡಿಮಾಡಿ ಚನ್ನಾಗಿ ಕಾದು ಮರಳುತ್ತಿರುವ ನೀರಿನಲ್ಲಿ ಕದಡಬೇಕು. ಕೊಂಚ ಹೊತ್ತು ಬಿಟ್ಟಿದ್ದು ನೀರಿನಲ್ಲಿರುವ ಪುಡಿಯನ್ನು ಕೈಯಿಂದ ಚನ್ನಾಗಿ ಹಿಸುಕಿ ನಂತರ ಬಟ್ಟೆಯಿಂದ ಬೇರೆ ಪಾತ್ರೆಗೆ ಶೋಧಿಸಿಕೊಳ್ಳಬೇಕು, ಆ ನೀರನ್ನು ಮಣ್ಣಿನ ಪಾತ್ರೆಯಲ್ಲಿ ಹಾಕಿ ಆ ನೀರಿನ ಪಾತ್ರೆಯನ್ನು ಕಾಯುತ್ತಿರುವ ಬಿಸಿಲಿನಲ್ಲಿ ಇರಿಸಬೇಕು, ಹೀಗೆಮಾಡಿದಲ್ಲಿ ಮೇಲೆ ಹೆಪ್ಪು ಕಟ್ಟಿಕೊಳ್ಳುತ್ತದೆ, ಆ ಹೆಪ್ಪನ್ನು ತೆಗದು ಬೇರೆ ಪಾತ್ರೆಯಲ್ಲಿ ಹಾಕಿಕೊಳ್ಳಬೇಕು, ಆ ಹೆಪ್ಪಿಗೆ ಬೇರೇ ಬಿಸಿಯಾಗಿ ಮರಳುವ ನೀರನ್ನು ಸುರಿಯಬೇಕು, ನಂತರ ಕೈಯ್ಯಿಂದ ಚನ್ನಾಗಿ ಹಿಸುಕಿ ಬಿಸಿಲಲ್ಲಿರಿಸಬೇಕು, ಮೇಲೆ ಹೆಪ್ಪುಕಟ್ಟಿಕೊಳ್ಳುತ್ತದೆ ಅದನ್ನು ತೆಗೆದು ಮತ್ತೆ ಇದೇ ಕ್ರಮವನ್ನನುಸರಿಸಬೇಕು, ಹೀಗೆ ಎರಡು ತಿಂಗಳು ಮಾಡೋಣ ದರಿಂದ ಒಳ್ಳೆಯ ದಾದ ಮತ್ತು ಉತ್ಕೃಷ್ಟವಾದ ಶಿಲಾಜತುವನ್ನು ಸಂಗ್ರಹಿಸ ಬಹುದು, ಈ ರೀತಿಯಾಗಿ ಸಂಗ್ರಹಿಸಲ್ಪಟ್ಟ ಶಿಲಾಜತುವು ಸಮಸ್ತ ರೋಗ ಗಳನ್ನೂ ಪರಿಹರಿಸತಕ್ಕ ಶಕ್ತಿಯುಳ್ಳದ್ದಾಗಿಯೂ ಬೆಂಕಿಯಲ್ಲಿ ಹಾಕಿದರೆ ಹೊಗೆ ಇಲ್ಲದ್ದಾಗಿಯೂ ಆಗುತ್ತದೆ, ಇದನ್ನು ಸಮಸ್ತ ಔಷಧಗಳಿಗೂ ಉಪಯೋಗಿಸ ಬಹುದು, ಮೊದಲಿನ ಪಾತ್ರೆಯ ತಳಭಾಗದಲ್ಲಿ ಉಳಿದ ಚರಟಕ್ಕೆ ಮತ್ತೆ ಬಿಸಿ ನೀರನ್ನು ಸುರಿದು ಈ ಕ್ರಮದಿಂದಲೇ ಶಿಲಾಜತುವನ್ನು ತೆಗೆಯಬಹುದು.

ಅಕ್ಷಾಂಗಾರೈರ್ಧಮೇತ್ಕಿಟ್ಟಂಲೋಹಜಂತದ್ಗವಾಂಜಲೈಃ ॥
ಸೇಚಯೇತ್ತಪ್ತತಪ್ತಂಚಸಪ್ತವಾರಂಪುನಃಪುನಃ ॥ ೧೦೦ ॥
ಚೂರ್ಣಯಿತ್ವಾತತಃಕ್ವಾಥೈರ್ದ್ವಿಗುಣೈಸ್ತ್ರಿಫಲಾಭವೈಃ ॥
ಆಲೋಡ್ಯಭರ್ಜಯೇದ್ವಹ್ನೌಮಂಡೂರಂಜಾಯತೇವರಂ ॥೧೦೧॥

ಮಂಡೂರವನ್ನು ಮಾಡುವ ಕ್ರಮವನ್ನು ಹೇಳುತ್ತಾನೆ—ನೂರು ವರುಷ ಕ್ಕಿಂತ ಹಿಂದಿನ ಕಬ್ಬಿಣದ ಕಿಟ್ಟವನ್ನು ಕುಲುಮೆಯಲ್ಲಿ ಹಾಕಿ ತಾರೇ ಇದ್ದಿಲನ್ನು ಹಾಕಿ ಚನ್ನಾಗಿ ಕಾಯಿಸಬೇಕು, ಕಾದಿದ್ದರ ಮೇಲೆ ಗೋಮೂತ್ರವನ್ನು ಸುರಿಯ ಬೇಕು, ಈ ರೀತಿ ಏಳು ಸಾರಿ ಮಾಡಿ ನಂತರ ಆ ಕಿಟ್ಟವನ್ನು ನಯ್ಣಗೆ ಚೂರ್ಣ ಮಾಡಿ ಅದನ್ನು ಒಂದು ಪಾತ್ರೆಯಲ್ಲಿ ಹಾಕಿ ಅದರ ಎರಡರಷ್ಟು ತ್ರಿಫಲಾಕಷಾಯ ವನ್ನು ಹಾಕಿ ಒಲೆಯ ಮೇಲಿಟ್ಟು ಕಷಾಯವೆಲ್ಲವೂ ಇಂಗುವ ತನಕ ಹುರಿಯ ಬೇಕು, ಇಷ್ಟುಮಾಡಿದರೆ ಉತ್ತಮವಾದ ಮಂಡೂರವು ಸಿದ್ಧವಾಗುತ್ತದೆ.

ಕ್ಷೀರವೃಕ್ಷಸ್ಯಕಾಷ್ಠಾನಿಶುಷ್ಕಾಣ್ಯಗ್ನೌಪ್ರತಾಪಯೇತ್ ॥
ನೀತ್ವಾತದ್ಭಸ್ಮಮೃತ್ಪಾತ್ರೇಕ್ಷಿಪ್ತ್ವಾನೀರೇಚತುರ್ಗುಣೇ ॥ ೧೦೨ ॥
ವಿಮರ್ದ್ಯಧಾರಯೇದ್ರಾತ್ರೌಪ್ರಾತರಚ್ಛಂಜಲಂನಯೇತ್ ॥

ತನ್ನೀರಂಕ್ವಾಥಯೇದ್ವಹ್ನೌಯಾವತ್ಸರ್ವಂವಿಶುಷ್ಯತಿ ॥ ೧೦೩ ॥
ತತಃಪಾತ್ರಾತ್ಸಮುಲ್ಲಿಖ್ಯಕ್ಷಾರೋಗ್ರಾಹ್ಯಸ್ಸಿತಪ್ರಭಃ ॥
ಚೂರ್ಣಾಭಃಪ್ರತಿಸಾರ್ಯಸ್ಯಾತ್ಪೇಯಸ್ಯಾತ್ಕ್ವಾಥವತ್ಸ್ಥಿತಃ
॥ ೧೦೪ ॥
ಇತಿಕ್ಷಾರದ್ವಯಂಧೀಮಾನ್ಯುಕ್ತಕಾರ್ಯೇಷುಯೋಜಯೇತ್ ॥

ಕ್ಷಾರವೆಂಬ ಔಷಧ ವಿಶೇಷವನ್ನು ಕಲ್ಪಿಸುವ ಕ್ರಮವನ್ನು ಹೇಳುತ್ತಾನೆ—ಹಾಲು ಬರುವ ಮರಗಳ ಸೌದೆಯನ್ನು ಕಡಿದು ಒಣಗಿಸಿ ಅದನ್ನು ಬೆಂಕಿಯಿಂದ ಸುಟ್ಟು ಬೂದಿಮಾಡಿಕೊಳ್ಳಬೇಕು, ಆ ಬೂದಿಯನ್ನು ಒಂದು ಮಣ್ಣಿನ ಪಾತ್ರೆಯಲ್ಲಿ ಹಾಕಿ ಆ ಬೂದಿಯ ನಾಲ್ಕರಷ್ಟು ನೀರನ್ನು ಹಾಕಿ ಬೂದಿಯನ್ನೆಲ್ಲಾ ಕೈಯಿಂದ ಹಿಸಿಕಿ ಕದರಬೇಕು, ಈ ರೀತಿ ರಾತ್ರಿ ಬಿಟ್ಟಿದ್ದು ಬೆಳಿಗ್ಗೆ ಆ ತಿಳಿಯಾದ ನೀರನ್ನು ಒಂದು ಪಾತ್ರೆಗೆ ಬಸಿದುಕೊಂಡು ಬೆಂಕಿಯ ಮೇಲಿರಿಸಿ ಕಾಯಿಸುವುದಕ್ಕೆ ಪ್ರಾರಂಭಿಸಿ ನೀರೆಲ್ಲವೂ ಬತ್ತಿಹೋದ ಮೇಲೆ ಪಾತ್ರೆಯ ತಳದಲ್ಲಿ ಹತ್ತಿಕೊಂಡಿರುವುದನ್ನು ಚೆನ್ನಾಗಿ ಕೆರೆದು ಗೋರಿ ತೆಗೆದು ಒಂದು ಗಾಜಿನ ಪಾತ್ರೆಯಲ್ಲಿ ಹಾಕಿ ಇರಿಸಿಕೊಳ್ಳಬೇಕು, ಕೆಲವು ಕ್ಷಾರಗಳ ನೀರು ಪೂರಾ ಬತ್ತಿಹೋಗದೇ ಕ್ಷಾರವು ಒಂದು ಬಗೆಯ ಗೊಜ್ಜಿನಂತಾಗುತ್ತದೆ, ಇದನ್ನಾದರೂ ಒಂದು ಗಾಜಿನ ಪಾತ್ರೆಯಲ್ಲಿ ಹಾಕಿ ಭದ್ರಪಡಿಸಿರಿಸಿಕೊಳ್ಳುವುದು, ಚೂರ್ಣದಂತಿರುವ ಕ್ಷಾರವನ್ನು ಚರ್ಮರೋಗಾದಿಗಳಿಗೆ ಬಹಿಲೇಪನವಾಗಿಯೂ ಗೊಜ್ಜಿನಂತೆ ಉಳಿಯುವ ಕ್ಷಾರವನ್ನು ಗುಲ್ಮಾದಿರೋಗಗಳಲ್ಲಿ ಪಾನಮಾಡುವುದಕ್ಕೂ ಉಪಯೋಗಿಸಿಕೊಳ್ಳಬೇಕು, ಈ ರೀತಿಯಾಗಿ ಕ್ಷಾರಗಳನ್ನು ಬುದ್ಧಿವಂತಿಕೆಯಿಂದ ತಯಾರಿಸಿ ಯುಕ್ತಗಳಾದ ಕಾರ್ಯಗಳಿಗೆ ಉಪಯೋಗಿಸಿಕೊಳ್ಳಬೇಕು.

ಇಲ್ಲಿಗೆ ಹನ್ನೊಂದನೆಯ ಅಧ್ಯಾಯ ಸಂಪೂರ್ಣ.

---

## ಹನ್ನೆರಡನೆಯ ಅಧ್ಯಾಯ.

ಪಾರದಸ್ಸರ್ವರೋಗಾಣಾಂಜೇತಾಪುಷ್ಟಿಕರಸ್ಮೃತಃ ॥
ಸುದಿನೇಸಾಧಿತಃಕುರ್ಯಾತ್ಸಂಸಿದ್ಧಿಂದೇಹಲೋಹಯೋಃ ॥ ೧ ॥

ರಸಪ್ರಕರಣವನ್ನು ಆರಂಭಿಸುತ್ತಾನೆ—ರಸವೆಂದರೆ ಪಾದರಸ ಆಯುರ್ವೇದ ಶಾಸ್ತ್ರದಲ್ಲಿ ಈ ಪಾದರಸವನ್ನು ಸರಿಯಾದ ಕ್ರಮದಿಂದ ಶೋಧಿಸಿ ಔಷಧವಾಗಿ ಉಪಯೋಗಿಸಿದಲ್ಲಿ ರೋಗಗಳನ್ನು ಜಯಪ್ರದಮಾಡುವುದಲ್ಲದೆ ಅನೇಕ ವಿಧಗಳಾದ ಸಿದ್ಧಿಗಳನ್ನು ಕೂಡ ಸಂಪಾದಿಸಬಹುದೆಂದು ಹೇಳುತ್ತಾರೆ.

ಪಾದರಸದ ಮಹಿಮೆಯನ್ನು ರಸಶಾಸ್ತ್ರಗಳಲ್ಲಿ ಬಹಳವಾಗಿ ಹೊಗಳಿದ್ದಾರೆ, ಇಲ್ಲಿಯೂ ರಸವಿಷಯವನ್ನು ಸಂಕ್ಷೇಪವಾಗಿ ಹೇಳುತ್ತಾನೆ—ಪಾದರಸವನ್ನು ಸರಿಯಾದ ದಿವಸ ಘಳಿಗೆಗಳಲ್ಲಿ ಶುದ್ಧಿಮಾಡಿ ಔಷಧವಾಗಿ ಮಾಡಿದಲ್ಲಿ ಅನುಪಾನ ಭೇದದಿಂದ ಸಮಸ್ತ ರೋಗಗಳನ್ನೂ ಗೆಲ್ಲುತ್ತದೆ, ಶರೀರಕ್ಕೆ ಪುಷ್ಟಿಯನ್ನೂ ಉಂಟುಮಾಡುತ್ತದೆ, ದೇಹಸಿದ್ಧಿಯನ್ನುಂಟುಮಾಡಿ ಜರಾಮರಣಗಳ ಭಯವಿಲ್ಲದಂತೆ ಮಾಡುತ್ತದೆ. ಲೋಹವೆಂದರೆ ಬಂಗಾರದ ಸಂಸ್ಕಾರದ ವಿಷಯದಲ್ಲಿಯೂ ಅನೇಕ ವಿಧವಾಗಿ ಸಹಕರಿಸುತ್ತದೆ.

ರಸೇಂದ್ರಃ ಪಾರದಸ್ಸೂತೋಹರಜಸ್ಸೂತಕೋರಸಃ ॥
ಬುಧೈಸ್ತಸ್ಯೇತಿನಾಮಾನಿಜ್ಞೇಯಾನಿರಸಕರ್ಮಸು ॥ ೨ ॥

ಈ ಪಾದರಸವನ್ನು ರಸಶಾಸ್ತ್ರ ಪ್ರಕರಣದಲ್ಲಿ ರಸೇಂದ್ರ, ಪಾರದ, ಸೂತ, ಹರಜ, ಸೂತಕ, ರಸ ಎಂಬ ಹೆಸರುಗಳಿಂದ ಕರೆಯುವುದು ರೂಢಿಯಾಗಿರುತ್ತದೆ.

ತಾಮ್ರತಾರಾರನಾಗಾಶ್ಚಹೇಮವಂಗೌಚತೀಕ್ಷ್ಣಕಂ ॥
ಕಾಂಸ್ಯಕಂಕಾಂತಲೋಹಂಚಧಾತವೊನವಯೇಸ್ಮೃತಾಃ ॥ ೩ ॥
ಸೂರ್ಯಾದೀನಾಂಗ್ರಹಾಣಾಂತೇಕಥಿತಾನಾಮಭಿಃಕ್ರಮಾತ್ ॥

ಲೋಹಗಳ ನಡುವೆ ತಾಮ್ರವು ಸೂರ್ಯನಿಗೂ, ಬೆಳ್ಳಿಯು ಚಂದ್ರನಿಗೂ, ಹಿತ್ತಾಳೆ ಅಂಗಾರಕನಿಗೂ, ಸೀಸವು ಬುಧನಿಗೂ, ಬಂಗಾರವು ಗುರುವಿಗೂ, ತವರವು ಶುಕ್ರನಿಗೂ, ಉಕ್ಕು ಶನಿಗೂ, ಕಂಚು ರಾಹುವಿಗೂ, ಕಾಂತಲೋಹವೆಂದರೆ ಸೂಜಿಕಲ್ಲು ಕೇತುವಿಗೂ ಸಂಬಂಧಪಟ್ಟ ಲೋಹಗಳೆಂದೂ ಈ ಲೋಹಗಳನ್ನು ಆಯಾ ಗ್ರಹಗಳ ಹೆಸರಿನಿಂದಲೇ ಕರೆಯುವುದೂ ರೂಢಿಯಾಗಿರುತ್ತಲಿರುವುದಾಗಿ ಹಾಡಿಕೆಯಾಗಿದೆ

ರಾಜೀರಸೇನಮೂಷಾಯಾಂರಸಂಕ್ಷಿಪ್ತ್ವಾವಿಬಂಧಯೇತ್ ॥ ೪ ॥
ವಸ್ತ್ರೇಣದೋಲಿಕಾಯಂತ್ರೇಸ್ವೇದಯೇತ್ಕಾಂಜಿಕೈಸ್ತ್ರ್ಯಹಂ ॥
ದಿನೈಕಂಮರ್ದಯೇತ್ತಪ್ತಂಕುಮಾರೀಸಂಭವೈರ್ದ್ರವೈಃ ॥ ೫ ॥
ತಥಾಚಿತ್ರಕಜೈಃಕ್ವಾಥೈರ್ಮರ್ದಯೇದೇಕವಾಸರಂ ॥
ಕಾಕಮಾಚೀರಸೈಸ್ತದ್ವದ್ದಿನಮೇಕಂಚಮರ್ದಯೇತ್ ॥ ೬ ॥
ತ್ರಿಫಲಾಯಾಸ್ತಥಾಕ್ವಾಥೈರಸೋಮರ್ದ್ಯಃಪ್ರಯತ್ನತಃ ॥
ತತಸ್ತೇಭ್ಯಃಪೃಥಕ್ಕುರ್ಯಾತ್ತಪ್ತಂಪ್ರಕ್ಷಾಳ್ಯಕಾಂಜಿಕೈಃ ॥ ೭ ॥
ತತಃಕ್ಷಿಪ್ತ್ವಾರಸಂಖಲ್ವೇರಸಾದರ್ಧಂಚಸೈಂಧವಂ ॥

ಮರ್ದಯೇನ್ನಿಂಬುಕರಸೈರ್ದಿನಮೇಕಮನಾರತಂ ॥ ೮ ॥
ತತೋರಾಜೀರಸೋನರ್ಧಮುಖ್ಯಶ್ಚನವಸಾದರಃ ॥
ಪಿತ್ತೈರಸಸನ್ಯಸ್ತದ್ವತ್ಸ್ವೇದೋಮರ್ದ್ಯಸ್ತುಷಾಂಬುನಾ ॥ ೯ ॥
ತತಸ್ಸಂಶೋಷ್ಯಚಕ್ರಾಭಂಕೃತ್ವಾಲಿಪ್ತ್ವಾಚಹಿಂಗುನಾ ॥
ದ್ವಿಸ್ಥಾಲೀಸಂಪುಟೇಧೃತ್ವಾಪೂರಯೇಲ್ಲವಣೇನಚ ॥ ೧೦ ॥
ಅಧಸ್ಥಾಲೀಂತತೋಮುದ್ರಾಂದದ್ಯಾದ್ದೃಢತರಾಂಬುಧಃ ॥
ವಿಶೋಷ್ಯಾಗ್ನಿಂವಿಧಾಯಾಧೋನಿಷಿಂಚೇದಂಬುನೋಪರಿ ॥ ೧೧ ॥
ತತಸ್ತುಕುರ್ಯಾತ್ತೀವ್ರಾಗ್ನಿಂತದಧಃಪ್ರಹರತ್ರಯಂ ॥
ಏವಂನಿಪಾತಯೇದೂರ್ಧ್ವಂರಸೋದೋಷವಿವರ್ಜಿತಃ ॥ ೧೨ ॥
ಅಥೋರ್ಧ್ವಶಿರಸೀಮಧ್ಯೇಲಗ್ನೋಗ್ರಾಹ್ಯೋರಸೋತ್ತಮಃ ॥

ಪಾದರಸವನ್ನು ಶೋಧನೆ ಮಾಡತಕ್ಕ ಕ್ರಮವನ್ನು ಹೇಳುತ್ತಾನೆ—ಸ್ವೇದನ ವೆಂಬ ರಸಸಂಸ್ಕಾರವನ್ನು ಮಾಡುವುದು ಹೇಗೆಂದರೆ—ಸಾಸುವೆ ಮತ್ತು ಬೆಳ್ಳುಳ್ಳಿ ಇವುಗಳನ್ನು ಅರೆದು ಅದರಲ್ಲಿ ಎರಡು ಮೂಸೆಗಳನ್ನು ಮಾಡಿ ಅದರಲ್ಲಿ ಒಂದರಲ್ಲಿ ರಸವನ್ನು ಹಾಕಿ ಮತ್ತೊಂದನ್ನು ಮೇಲೆ ಮುಚ್ಚಿ ಬಟ್ಟೆಯಲ್ಲಿ ಚನ್ನಾಗಿ ಸುತ್ತಿ ಸೀಲುಮಾಡಿ ಒಂದು ಮಡಕೆಯಲ್ಲಿ ಅರ್ಧದವರೆಗೂ ಅನ್ನದ ಹುಳಿನೀರನ್ನು ಸುರಿದು ಅದರಲ್ಲಿ ಈ ಗಂಟನ್ನು ತೂಗಗಟ್ಟಿ ಮೂರು ದಿವಸ ಹಗಲುರಾತ್ರಿ ಉರಿ ಹಾಕುತ್ತಿರಬೇಕು, ನಂತರ ತೆಗೆದುಕೊಂಡು ಆ ರಸವನ್ನು ಕಲ್ಲುಪತ್ತಿನಲ್ಲಿ ಹಾಕಿ ಒಂದು ದಿವಸ ಲೋಳಿಸರದ ರಸದಲ್ಲಿ ಅರೆಯಬೇಕು, ಚಿತ್ರಮೂಲದ ಕಷಾಯ ದಲ್ಲೊಂದು ದಿನ ಅರೆಯಬೇಕು, ಕೆಂಪುಗಣಿಕೆಯ ಸೊಪ್ಪಿನ ರಸದಿಂದ ಒಂದು ದಿವಸ ಅರೆಯಬೇಕು, ಕೊನೆಯಲ್ಲಿ ತ್ರಿಫಲಾಕಷಾಯವನ್ನು ಸೇರಿಸಿ ಒಂದು ದಿವಸ ಅರದು ಆ ಮೇಲೆ ಆ ರಸವನ್ನು ಅನ್ನದ ಹುಳಿನೀರಿನಿಂದ ತೊಳೆದು ಬೇರೆ ಮಾಡಿ ತೆಗದುಕೊಳ್ಳಬೇಕು, ಇಲ್ಲಿಗೆ ಸ್ವೇದನವೆಂಬ ಕರ್ಮವು ಪೂರೈಸಿದ ಹಾಗಾಯಿತು. ಮುಂದೆ ಮರ್ದನವೆಂಬ ಸಂಸ್ಕಾರವನ್ನು ಮಾಡತಕ್ಕ ಕ್ರಮವನ್ನು ಹೇಳುತ್ತಾನೆ— ನಂತರ ಸ್ವೇದನಸಂಸ್ಕಾರಮಾಡಿದ ರಸವನ್ನು ತೆಗದುಕೊಂಡು ಖಲ್ವದಲ್ಲಿ ಹಾಕಿ ರಸದ ಅರ್ಧದಷ್ಟು ಸೈಂಧವಲವಣವನ್ನು ಸೇರಿಸಿ ನಿಂಬೇಹುಳಿಯನ್ನು ಹಾಕಿ ಕೊಂಡು ಒಂದು ದಿವಸವೆಲ್ಲಾ ಅರೆಯಬೇಕು, ಇಲ್ಲಿಗೆ ಮರ್ದನವೆಂಬ ಸಂಸ್ಕಾರವು ಮುಗಿಯಿತು. ಮರ್ದನಸಂಸ್ಕಾರವು ಮುಗಿದ ಮೇಲೆ ಸಾಸಿವೆಯ ಕಾಳು, ಬೆಳ್ಳುಳ್ಳಿ, ಶುದ್ಧವಾದ ನವಸಾಗರ ಇವು ಮೂರು ಸೇರಿ ರಸದಷ್ಟನ್ನು ರಸದೊಂದಿಗೆ ಸೇರಿಸಿ ಕಾಂಜಿಕವೆಂಬ ಹುಳಿನೀರನ್ನು ಹಾಕಿಕೊಂಡು ಚನ್ನಾಗಿ ಅರೆಯಬೇಕು, ಚನ್ನಾಗಿ ಅರದು ಚಕ್ರಾಕಾರವಾದ ಬಿಲ್ಲೆಗಳನ್ನು ಮಾಡಿ ಬಿಸಿಲಲ್ಲಿ ಒಣಗಿಸಿ ಆ ಬಿಲ್ಲೆಯ ಮೇಲ್ಭಾಗಕ್ಕೆ ಇಂಗನ್ನರದು ಲೇಪಹಾಕಿ ಸಣ್ಣ ಶ್ರಾವೆಯಲ್ಲಿ ಉಪ್ಪನ್ನು

ಹಾಕಿ ಅದರ ಮೇಲೆ ಈ ಬಿಲ್ಲೆಯನ್ನಿರಿಸಿ ಮೇಲೆ ಮತ್ತೆ ಉಪ್ಪನ್ನು ತುಂಬಿ ಅದರ ಮೇಲೆ ಶ್ರಾವೆಯನ್ನು ಮುಚ್ಚಿ ಚನ್ನಾಗಿ ಜೇಡಿಮಣ್ಣು ಮಾಡಿ ಚನ್ನಾಗಿ ಒಣಗಿಸ ಬೇಕು, ಒಣಗಿದ ಮೇಲೆ ಆ ಶ್ರಾವೆಯನ್ನು ಒಲೆಯ ಮೇಲಿರಿಸಿ ಕೆಳಗೆ ಉರಿ ಹಾಕುತ್ತ ಮೂರು ಯಾಮ ಪರ್ಯಂತರ ಉರಿಯಿಸಬೇಕು, ಹೀಗೆ ಉರಿಯಿಸು ವಾಗ್ಯೆ ಮೇಲಿನ ಶ್ರಾವೆಯ ಮೇಲೆ ಆಗಾಗ್ಯೆ ತಣ್ಣೀರನ್ನು ಹಾಕುತ್ತಿರಬೇಕು, ನಂತರ ಉರಿಯನ್ನು ತೆಗೆದು ಆರಿದ ಮೇಲೆ ಮೇಲಿನ ಶ್ರಾವೆಯ ತಳದಲ್ಲಿ ಪತಂಗಿಸಿ ಮೆತ್ತಿಕೊಂಡಿರುವ ರಸವನ್ನು ಕೆರದು ತೆಗದುಕೊಳ್ಳಬೇಕು, ಈ ಕ್ರಮಕ್ಕೆ ಊರ್ಧ್ವಪಾತನಕ್ರಮವೆಂದು ಹೆಸರು, ಇದು ಶುದ್ಧವಾದ ಮತ್ತು ಉತ್ತಮ ವಾದ ರಸವೆಂದು ಶಾಸ್ತ್ರಕಾರರ ಅಭಿಪ್ರಾಯ

ಲೋಹಪಾತ್ರೇವಿನಿಕ್ಷಿಪ್ಯಘೃತಮಗ್ನೌಪ್ರತಾಪಯೇತ್ ॥ ೧೩ ॥
ತಪ್ತೇಘೃತೇತತ್ಸಮಾನಂಕ್ಷಿಪೇದ್ಗಂಧಕಜಂರಜಃ ॥
ವಿದ್ರುತಂಗಂಧಕಂಜ್ಞಾತ್ವಾದುಗ್ಧಮಧ್ಯೇವಿನಿಕ್ಷಿಪೇತ್ ॥ ೧೪ ॥
ಏವಂಗಂಧಕಶುದ್ಧಿಸ್ಸ್ಯಾತ್ಸರ್ವಕಾರ್ಯೇಷುಯೋಜಯೇತ್ ॥

ಗಂಧಕವನ್ನು ತಂದು ಸಣ್ಣನಾಗಿ ಪುಡಿಮಾಡಿ ಇರಿಸಿಕೊಳ್ಳಬೇಕು, ತುಪ್ಪ ವನ್ನು ಕಬ್ಬಿಣದ ಬಾಣಲೆಗೆ ಹಾಕಿ ಕಾಯಿಸಬೇಕು, ತುಪ್ಪವು ಕಾದ ಮೇಲೆ ಆ ತುಪ್ಪದಷ್ಟೇ ತೂಕ ಗಂಧಕದ ಪುಡಿಯನ್ನು ಆ ಕಾಯ್ದ ತುಪ್ಪದಲ್ಲಿ ಸುರಿಯ ಬೇಕು, ಗಂಧಕವು ಕರಗಿ ತುಪ್ಪದೊಡನೆ ಸೇರಿಕೊಳ್ಳುತ್ತದೆ, ಆ ತುಪ್ಪವನ್ನು ಒಂದು ಪಾತ್ರೆಯಲ್ಲಿ ಹಸುವಿನ ಹಾಲನ್ನಿರಿಸಿಕೊಂಡಿದ್ದು ಅದರಲ್ಲಿ ಸುರಿಯಬೇಕು, ಈ ರೀತಿ ಮಾಡಿದಲ್ಲಿ ಗಂಧಕವು ಶುದ್ಧವಾಗುತ್ತದೆ, ಗಂಧಕವನ್ನು ಈ ರೀತಿಯಾಗಿ ಶುದ್ಧಿಮಾಡಿಕೊಂಡು ನಂತರ ಔಷಧಗಳಿಗೆ ಉಪಯೋಗಿಸಬಹುದು, ರಸಾಯ ನೌಷಧಗಳಿಗೆ ಒಳಕ್ಕೆ ಸೇವಿಸಬೇಕು, ಹಳದಿಯ ಬಣ್ಣದ ಗಂಧಕವನ್ನು ಸಂಗ್ರಹಿಸಿ ಶುದ್ಧಿಮಾಡಿ ತೆಗದುಕೊಳ್ಳಬೇಕು.

ಮೇಷೀಕ್ಷೀರೇಣದರದಮಮ್ಲವರ್ಗೈಶ್ಚಭಾವಿತಂ ॥ ೧೫ ॥
ಸಪ್ತವಾರಂಪ್ರಯತ್ನೇನಶುದ್ಧಿಮಾಯಾತಿನಿಶ್ಚಿತಂ ॥

ಇಂಗಲೀಕವನ್ನು ಶೋಧನ ಮಾಡತಕ್ಕ ಕ್ರಮ—ಹಂಸಪಾದ ಇಂಗಲೀಕ ವನ್ನು ತಂದು ಕುರಿಯ ಹಾಲಿನಲ್ಲಿಯೂ ನಿಂಬೆಯಹುಳಿ ಮೊದಲಾದ ಹುಳಿ ಗಳಲ್ಲಿಯೂ ಏಳು ಬಾರಿ ಭಾವನೆಕೊಟ್ಟಲ್ಲಿ ಇಂಗಲೀಕವು ಶುದ್ಧವಾಗುತ್ತದೆಂಬ ಅಭಿಪ್ರಾಯ.

ನಿಂಬೂರಸ್ಯೈರ್ನಿಂಬಪತ್ರರಸ್ಯೈರ್ವಾಯಾಮಮಾತ್ರಕಂ ॥ ೧೬ ॥
ಪಿಷ್ಟ್ವಾ ದರದಮೂರ್ಧ್ವಂಚಪಾತಯೇತ್ಸೂತಯುಕ್ತಿತಃ ॥
ತತಶ್ಶುದ್ಧರಸಂತಸ್ಮಾನ್ನೀತ್ವಾಕಾರ್ಯೇಷುಯೋಜಯೇತ್ ॥೧೭॥

ಇಂಗಲೀಕವನ್ನು ನಿಂಬೆಯ ಹಣ್ಣಿನ ರಸದಲ್ಲಿಯಾಗಲಿ ಬೇವಿನಸೊಪ್ಪಿನ ರಸದಲ್ಲಿಯಾಗಲಿ ಒಂದು ಯಾಮ ಪರ್ಯಂತ ಅರದು ಒಂದು ಮಡಿಕೆಯಲ್ಲಿ ಹಾಕಿ ಮೇಲೆ ಮತ್ತೊಂದು ಮಡಕೆಯನ್ನು ಮುಚ್ಚಿ ಸಂದಿಬಿಡದಂತೆ ಚೀಲಮಣ್ಣುಮಾಡಿ ಒಣಗಿಸಿ ಬೆಂಕಿಯ ಮೇಲಿರಿಸಿ ಉರಿಹಾಕುತ್ತಾ ಮೇಲಿನ ಮಡಿಕೆಯ ಮೇಲೆ ನೀರು ಸುರಿಯುತ್ತ ಬಂದಲ್ಲಿ ಮೇಲಿನ ಮಡಿಕೆಯ ತಳಭಾಗದಲ್ಲಿ ರಸವು ಪತಂಗಿಸಿ ಹತ್ತಿಕೊಂಡಿರುತ್ತದೆ, ಅದು ಶುದ್ಧವಾದ ರಸ, ಅದನ್ನು ಕೆರದು ತೆಗದಿರಿಸಿಕೊಂಡು ಎಲ್ಲಾ ಔಷಧಗಳಿಗೂ ಉಪಯೋಗಿಸಬಹುದು.

ಕಾಲಕೂಟೋವತ್ಸನಾಭಃಶೃಂಗಕಶ್ಚಪ್ರದೀಪಕಃ ॥
ಹಾಲಾಹಲೋಬ್ರಹ್ಮಪುತ್ರೋಹಾರಿದ್ರಸ್ಸಕ್ತುಕಸ್ತಥಾ ॥ ೧೮ ॥
ಸೌರಾಷ್ಟ್ರಿಕಇತಿಪ್ರೋಕ್ತಾವಿಷಭೇದಾಅಮೀನವ ॥
ಅರ್ಕಸೇಹುಂಡಧತ್ತೂರಲಾಂಗಲೀಕರವೀರಕಂ ॥ ೧೯ ॥
ಗುಂಜಾಹಿಫೇನಾವಿತ್ಯೇತಾಸ್ಸಪ್ತೋಪವಿಷಜಾತಯಃ ॥
ಏತೈರ್ವಿಮರ್ದಿತಸ್ಸೂತಃಛಿನ್ನಪಕ್ಷಃಪ್ರಜಾಯತೇ ॥ ೨೦ ॥
ಮುಖಂಚಜಾಯತೇತಸ್ಯಧಾತೂಂಶ್ಚಗ್ರಸತೇಕ್ಷಣಾತ್ ॥

ಹಿಂದಿನ ಶ್ಲೋಕದಲ್ಲಿ ಶುದ್ಧವಾದ ರಸವನ್ನು ಸಂಗ್ರಹಿಸತಕ್ಕ ಕ್ರಮವನ್ನು ಹೇಳಿ ಮುಖಕರಣವೆಂಬ ಒಂದು ಸಂಸ್ಕಾರವನ್ನು ಹೇಳುತ್ತಾನೆ—ಸಾಮಾನ್ಯತಃ ರಸವು ಯಾವ ಲೋಹದೊಡನೆಯೂ ಜಾಗ್ರತೆಯಾಗಿ ಕೂಡಿಕೊಳ್ಳುವುದಿಲ್ಲ ವೆಂಬುವುದು ಆಯುರ್ವೇದ ರಸಶಾಸ್ತ್ರದ ಅಭಿಪ್ರಾಯ, ಆದರೆ ಈ ಮುಖಕರಣ ವೆಂಬ ಸಂಸ್ಕಾರವು ನಡೆಯಿತೆಂದರೆ ರಸವು ಯಾವ ಧಾತುವಿನೊಡನೆಯಾದರೂ ಸುಲಭವಾಗಿ ಸೇರಿಕೊಂಡು ಔಷಧರೂಪವಾದ ಪರಿಣಾಮ ಹೊಂದಲು ಸುಲಭ ವಾಗುತ್ತದೆ, ಕಾಲಕೂಟ, ವತ್ಸನಾಭ, ಶೃಂಗಕ ಪ್ರದೀಪಕ, ಹಾಲಾಹಲ, ಬ್ರಹ್ಮಪುತ್ರ, ಹಾರಿದ್ರ, ಸಕ್ತುಕ, ಸೌರಾಷ್ಟ್ರಿಕ, ಇವು ಒಂಭತ್ತು ಆಯುರ್ವೇದ ಔಷಧಶಾಸ್ತ್ರದಲ್ಲಿ ಪ್ರಸಿದ್ಧಗಳಾದ ವಿಷಗಳು, ಇವುಗಳಲ್ಲಿ ವತ್ಸನಾಭವೆಂಬ ವಿಷ ವೊಂದು ಮಾತ್ರ ಆಯುರ್ವೇದ ವೈದ್ಯ ಪ್ರಪಂಚದಲ್ಲಿ ಬಳಿಕೆಯಲ್ಲಿದೆ, ಬಾಕಿ ಯಾದವುಗಳು ವಿರಳ. ಯಕ್ಕ, ಕಳ್ಳಿ, ಉಮ್ಮತ್ತ, ಕೋಳಿಕುಟುಕನ ಗೆಡ್ಡೆ, ಕಣಿಗಲ, ಗುಲಗಂಜಿ, ಅಫೀಮು, ಈ ಏಳು ಉಪವಿಷಗಳು, ಹಿಂದೆ

ಹೇಳಿದ ವಿಷಗಳಷ್ಟು ವೇಗವಾದವುಗಳಲ್ಲ, ಹಿಂದೆ ಹೇಳಿದ ವಿಷ ಮತ್ತು ಉಪವಿಷಗಳನ್ನು ಶಾಸ್ತ್ರೋಕ್ತ ಕ್ರಮದಿಂದ ಶುದ್ಧಿಮಾಡಿಕೊಂಡು ರಸದ ಹದಿನಾರನೆಯ ಒಂದು ಭಾಗವನ್ನು ರಸದೊಡನೆ ಸೇರಿಸಿ ಏಳು ದಿವಸ ಚನ್ನಾಗಿ ಮರ್ದಿಸುವುದು, ನಂತರ ತೊಳೆಯುವುದು ಈ ರೀತಿ ಮಾಡೋಣದರಿಂದ ರಸಕ್ಕೆ ಇತರ ಧಾತುಗಳೊಡನೆ ಶೀಘ್ರವಾಗಿ ಕಲೆಯುವ ಗುಣವು ಉಂಟಾಗುತ್ತದೆ.

ಅಥವಾಕಟುಕಕ್ಷಾರೌರಾಜೀಲವಣಪಂಚಕಂ ॥ ೨೧ ॥
ರಸೋನೋನವಸಾರಶ್ಚಶಿಗ್ರುಶ್ಚೈಕತ್ರಚೂರ್ಣಿತೈಃ ॥
ಸಮಾಂಶೈಃಪಾರದಾದೇತೈರ್ಜಂಬೀರೇಣದ್ರವೇಣವಾ ॥ ೨೨ ॥
ನಿಂಬುತೋಯೈಃಕಾಂಜಿಕೈರ್ವಾಸೋಷ್ಣೇಖಲ್ವೇವಿಮರ್ದಯೇತ್
ಅಹೋರಾತ್ರತ್ರಯೇಣಸ್ಯಾದ್ರಸೇಧಾತುಚರಂಮುಖಂ ॥ ೨೩ ॥

ಹಿಂದೆ ಹೇಳಿದ ಕ್ರಮವಲ್ಲದೆ ಬೇರೇ ಕ್ರಮದಿಂದಲೂ ರಸಕ್ಕೆ ಮುಖವನ್ನು ಉಂಟುಮಾಡಬಹುದು—ತ್ರಿಕಟುಕ (ಶುಂಠಿ, ಹಿಪ್ಪಲಿ, ಮೆಣಸು) ಯವಕ್ಷಾರ, ಸರ್ಜಕ್ಷಾರ, ಸಾಸುವೆ, ಐದು ಬಗೆಯ ಲವಣಗಳು, ಬೆಳ್ಳುಳ್ಳಿ, ನವಸಾಗರ, ಶೋಭಾಂಜನ ಇವು ಪ್ರತಿಯೊಂದನ್ನೂ ಸಮಾಂಶ ಸೇರಿಸಿ ಚೂರ್ಣಮಾಡಿ ರಸದಷ್ಟು ಸೇರಿಸಿ ಕಲ್ವದಲ್ಲಿ ಹಾಕಿ ಕಲ್ವದ ತಳದಲ್ಲಿ ಬೆಂಕಿಯ ಕೆಂಡವನ್ನು ಸುರಿದು ಅದರ ಮೇಲೆ ಕಲ್ವವನ್ನಿರಿಸಿಕೊಂಡು ಅದರಲ್ಲಿ ನಿಂಬೆಯಹಣ್ಣಿನ ರಸವಾಗಲಿ, ಬೇವಿನಸೊಪ್ಪಿನ ರಸವಾಗಲಿ, ಕಾಂಜಿಕವೆಂಬ ಹುಳಿನೀರಾಗಲಿ ಹಾಕಿಕೊಂಡು ಮೂರು ದಿವಸ ಹಗಲು ರಾತ್ರಿ ಅರೆದು ತೆಗೆದು ತೊಳದರೆ ರಸಕ್ಕೆ ಧಾತುಗಳನ್ನು ಗ್ರಹಿಸತಕ್ಕ ಶಕ್ತಿಯು ಬರುತ್ತದೆ

ಅಥವಾಬಿಂದುಲೀಕೀಟೈಃರಸೋಮರ್ದ್ಯಸ್ತ್ರಿವಾಸರಂ ॥
ಲವಣಾಮ್ಲೈರ್ಮುಖಂತಸ್ಯಜಾಯತೇಧಾತುಘಸ್ಮರಂ ॥ ೨೪ ॥

ಬಿಂದುಲೀಕೀಟವೆಂಬ ಒಂದು ಬಗೆಯ ಹುಳ (ಉಚ್ಚೀಮಲ್ಲಿ ಹುಳವೆನ್ನುತ್ತಾರೆ) ಐದು ಬಗೆಯ ಲವಣಗಳು, ನಿಂಬೆಯ ಹುಳಿ ಮೊದಲಾದ ಹುಳಿಗಳು ಇವುಗಳನ್ನು ಒಟ್ಟುಗೂಡಿಸಿ ಮೂರು ದಿವಸ ರಸವನ್ನು ಅರೆದು ತೊಳೆದರೆ ರಸಕ್ಕೆ ಧಾತುಗ್ರಹಣಶಕ್ತಿಯು ಬರುತ್ತದೆ

ಅಥಕಚ್ಛಪಯಂತ್ರೇಣಗಂಧಜಾರಣಮುಚ್ಯತೇ ॥
ಮೃತ್ಕುಂಡೇನಿಕ್ಷಿಪೇತ್ತೋಯಂತನ್ಮಧ್ಯೇಚಶರಾವಕಂ ॥ ೨೫ ॥
ಮಹಾಕುಂಡಪಿಧಾನಾಭಂಮಧ್ಯೇಮೇಖಲಯಾಯುತಂ ॥

ಲಿಪ್ತ್ವಾ ಚ ಮೇಖಲಾಮಧ್ಯಂ ಚೂರ್ಣೇನಾತ್ರ ರಸಂ ಕ್ಷಿಪೇತ್ ॥ ೨೬ ॥
ರಸಸ್ಯೋಪರಿ ಗಂಧಸ್ಯ ರಜೋ ದದ್ಯಾತ್ಸಮಾಂಶಕಂ ॥
ತತೋಪರಿ ಶರಾವಂ ಚ ಭಸ್ಮಮುದ್ರಾಂ ಪ್ರದಾಪಯೇತ್ ॥ ೨೭ ॥
ತಸ್ಯೋಪರಿ ಪುಟಂ ದದ್ಯಾಚ್ಚತುರ್ಭಿರ್ಗೋಮಯೋಪಲೈಃ ॥
ಏವಂ ಪುನಃ ಪುನರ್ಗಂಧಂ ಷಡ್ಗುಣಂ ಜಾರಯೇದ್ಬುಧಃ ॥ ೨೮ ॥
ಗಂಧೇ ಜೀರ್ಣೇ ಭವೇತ್ಸೂತಸ್ತೀಕ್ಷ್ಣಾಗ್ನಿಸ್ಸರ್ವಕರ್ಮಸು ॥

ರಸದೊಡನೆ ಗಂಧಕಜಾರಣ ಮಾಡತಕ್ಕ ಕ್ರಮವನ್ನು ಹೇಳುತ್ತಾನೆ— ಗಂಧಕಜಾರಣವೆಂದರೆ ಗಂಧಕವು ಜೀರ್ಣವಾಗಿ ರಸದೊಡನೆ ಬೆರತು ಕಾಣದಂತಾಗುವುದು, ಇದನ್ನು ಮಾಡತಕ್ಕ ಕ್ರಮ ಹೇಗಂದರೆ—ಇದಕ್ಕಾಗಿ ಕಚ್ಛಪ ಯಂತ್ರವೆಂಬ ಒಂದು ಸಾಧನವನ್ನು ನಿರ್ಮಿಸಿಕೊಳ್ಳಬೇಕು, ಈ ಕಚ್ಛಪ ಯಂತ್ರದ ಕ್ರಮವು ಅಂಗಡಿಗಳಲ್ಲಿ ಕಡುಬನ್ನು ಮಾಡುವ ಕಳಸಿಗೆಯಂತ ಎಂದು ಕೊಂಚ ಮನಸ್ಸಿನಲ್ಲಿ ಊಹಿಸಿಕೊಳ್ಳಬಹುದು, ಆದರ ಕಡುಬುಮಾಡಲು ಕಳಸಿಗೆಯನ್ನು ಒಲೆಯ ಮೇಲಿಟ್ಟು ಕೆಳಗೆ ಉರಿಹಾಕುತ್ತಾರ, ಗಂಧಕಜಾರಣದಲ್ಲಿ ಪಾತ್ರೆಯನ್ನು ಗುಂಡಿಯಲ್ಲಿರಿಸಿ ಬೂದಿಯನ್ನು ಮುಚ್ಚಿ ಮೇಲೆ ಕಾಡುಬೆರಣಿಯಿಂದುರಿಸುತ್ತಾರೆ, ಈ ಕ್ರಮ ಹೇಗಂದರ—ನೆಲದಲ್ಲಿ ಗುಂಡಿಯನ್ನು ತೋಡಿ ಅದರಲ್ಲಿ ಒಂದು ಮಣ್ಣಿನ ಬಾಯಿ ಅಗಲವಾದ ಪಾತ್ರೆಯನ್ನಿರಿಸಿ ಅದರ ಅರ್ಧದವರಿವಿಗೆ ನೀರನ್ನು ಸುರಿಯುವುದು, ನಂತರ ಆ ಪಾತ್ರೆಯಲ್ಲಿ ಕಡ್ಡಿಗಳನ್ನಿರಿಸಿ ಅಂದರೆ ತಿಕ್ಕಡಿಯಂತೆ ನೀರಿನ ಮೇಲ ಅಡ್ಡಡ್ಡಲಾಗಿ ಕಡ್ಡಿಗಳನ್ನು ನಿಲ್ಲಿಸಿ ಆ ಕಡ್ಡಿಯ ಮೇಲೆ ಸುಣ್ಣವನ್ನು ಬಳಿದು ಒಂದು ಶ್ರಾವೆಯನ್ನಿರಿಸಿ ಅದರಲ್ಲಿ ರಸವನ್ನು ಹಾಕಿ ಆ ರಸದ ಮೇಲೆ ರಸದ ತೂಕದಷ್ಟೇ ಗಂಧಕದ ಶುದ್ಧವಾದ ಹುಡಿಯನ್ನು ಸುರಿಯಬೇಕು, ನಂತರ ಸಂದುಬಿಡದಂತೆ ಉಕ್ಕಂದವಾದ ಒಂದು ಮಣ್ಣಿನ ಪಾತ್ರೆಯನ್ನು ಅದರ ಮೇಲೆ ಮುಚ್ಚಿ ಉಸಿರಾಡದಂತ ತುಂಬಾ ಬೂದಿಯನ್ನು ಮುಚ್ಚಬೇಕು, ಅದರ ಮೇಲೆ ನಾಲ್ಕು ಕಾಡುಬೆರಣಿಯನ್ನಿಟ್ಟು ಬೆಂಕಿಯನ್ನು ಹಾಕಬೇಕು, ಅಂದರೆ ಹೆಚ್ಚಿಗೆ ಬೆರಣಿಯನ್ನು ಹಾಕದೆ ಶಾಖಹತ್ತುವಷ್ಟು ಮಾತ್ರ ಬೆಂಕಿಯನ್ನು ಹಾಕಬೇಕು, ಇಷ್ಟುಮಾಡಿದಲ್ಲಿ ಒಂದು ಬಾರಿ ಗಂಧಕವನ್ನು ರಸದೊಡನೆ ಸೇರಿಸಿ ಜಾರಣಮಾಡಿಸಿದಂತಾಯಿತು, ಇದೇ ಕ್ರಮದಿಂದ ಆರು ಸಾರಿ ಮಾಡಿದಲ್ಲಿ ರಸದಲ್ಲಿ ಷಡ್ಗುಣ ಗಂಧಕವನ್ನು ಜಾರಣಮಾಡಿಸಿದಂತಾಗುತ್ತದೆ, ಈ ರೀತಿ ಆರು ಸಾರಿ ಗಂಧಕವನ್ನು ಜಾರಣಮಾಡಿಸಿದ ರಸವು ಬೆಂಕಿಯಂತೆ ಅತಿ ಶೀಘ್ರವಾಗಿ ರೋಗಜಯ ಮೊದಲಾದ ಸಮಸ್ತ ಕೆಲಸಗಳನ್ನೂ ಮಾಡುತ್ತದೆ.

ಧೂಮಸಾರಂರಸಂತೋರೀಂಗಂಧಕಂನವಸಾಗರಂ ॥ ೨೯ ॥
ಯಾಮೈಕಂಮರ್ದಯೇದಮ್ಲೈರ್ಭಾಗಂಕೃತ್ವಾಸಮಾಂಶಕಂ ॥
ಕಾಚಕುಪ್ಯಾಂವಿನಿಕ್ಷಿಪ್ಯತಾಂಚಮೃದ್ವಸ್ತ್ರಮುದ್ರಯಾ ॥ ೩೦ ॥
ವಿಲಿಪ್ಯಪರಿತೋವಕ್ತ್ರೇಮುದ್ರಾಂದತ್ವಾಚಶೋಷಯೇತ್ ॥
ಅಧಸ್ಸಚ್ಛಿದ್ರಪಿಠರೀಮಧ್ಯೇಕೂಪೀಂನಿವೇಶಯೇತ್ ॥ ೩೧ ॥
ಪಿಠರೀಂವಾಲುಕಾಪೂರೈರ್ಭೃತ್ವಾಚಾಕೂಪಿಕಾಗಳಂ ॥
ನಿವೇಶ್ಯಚುಲ್ಯಾಂತದಧಃಕುರ್ಯಾದ್ವಹ್ನಿಂಶನೈಶ್ಶನೈಃ ॥ ೩೨ ॥
ತಸ್ಮಾದಪ್ಯಧಿಕಂಕಿಂಚಿತ್ಪಾವಕಂಜ್ವಲಯೇತ್ಕ್ರಮಾತ್ ॥
ಏವಂದ್ವಾದಶಭಿರ್ಯಾಮೈರ್ಮ್ರಿಯತೇಸೂತಕೋತ್ತಮಃ ॥ ೩೩ ॥
ಸ್ಫೋಟಯೇತ್ಸ್ವಾಂಗಶೀತಂತಮೂರ್ಧ್ವಗಂಗಂಧಕಂತ್ಯಜೇತ್ ॥
ಅಧಸ್ಥಂಮೃತಸೂತಂಚಸರ್ವಕರ್ಮಸುಯೋಜಯೇತ್ ॥ ೩೪ ॥

ರಸಮಾರಣವನ್ನು ತಿಳಿಸುತ್ತಾನೆ—ಧೂಮಸಾರವೆಂದರೆ ಅಡಿಗೆಯ ಒಲೆಯ ಮೇಲೆ ಹೊಗೆಯಾಡುವ ಪ್ರದೇಶದಲ್ಲಿ ಕಟ್ಟಿರುವ ಇಬ್ಬಣ, ಪಾದರಸ, ಪಟಿಕಾರ, ಶುದ್ಧವಾದ ಗಂಧಕ, ನವಸಾಗರ, ಇವು ಪ್ರತಿಯೊಂದನ್ನೂ ಸಮಪ್ರಮಾಣದಲ್ಲಿ ಪ್ರತ್ಯೇಕವಾಗಿ ಸಂಗ್ರಹಿಸಿ ಪ್ರತಿಯೊಂದನ್ನೂ ಒಂದೊಂದು ಸಾರಿ ರಸದೊಡನೆ ಸೇರಿಸಿ ಒಂದೊಂದು ಝಾಮ ಪರ್ಯಂತ ನಿಂಬೇಹುಳಿ ಮೊದಲಾದ ಹುಳಿಗಳಿಂದ ಅರೆಯಬೇಕು, ಚರಮ ಆದ ನಂತರ ಆ ಮಿಶ್ರಣವನ್ನು ಗಾಜಿನ ಕುಪ್ಪಿಗೆಗೆ ತುಂಬಬೇಕು, ತುಂಬುವ ಮೊದಲೇ ಆ ಗಾಜಿನ ಕುಪ್ಪಿಗೆಯ ಹೊರಮೈಗೆಲ್ಲಾ ತೆಳುವಾದ ಬಟ್ಟೆಯನ್ನು ಸಮನಾಗಿ ಸುತ್ತಿ ಮೇಲೆ ಜೇಡಿಮಣ್ಣನ್ನು ಸವರಿ ಒಣಗಿಸಿ ಈ ರೀತಿಯಾಗಿ ಐದಾರು ಕವಚಗಳನ್ನು ತೊಡಿಸಿರಬೇಕು, ಈ ಮಿಶ್ರಣವನ್ನು ತುಂಬಿದ ಮೇಲೆ ಬಾಯಿಗೆ ಬಿರಡೆಯನ್ನು ಹಾಕಿ ಅದಕ್ಕೂ ಮಣ್ಣನ್ನು ಮೆತ್ತಿ ಒಣಗಿಸಬಡಬೇಕು, ಇಷ್ಟಾದ ಮೇಲೆ ಒಂದು ಮಣ್ಣಿನ ಮಡಿಕೆಯನ್ನು ತಂದು ಅದರ ತಳದಲ್ಲಿ ಮೂರು ನಾಲ್ಕು ತೂತುಗಳನ್ನು ಕಿರುಬೆರಳು ಹಿಡಿಸುವಷ್ಟು ಮಾಡಿ ಅದರಲ್ಲಿ ಈ ಕುಪ್ಪಿಗೆಯನ್ನಿರಿಸಿ ಕುಪ್ಪಿಗೆಯ ಕಂಠದ ಪರಿವಿಗೂ ಮರಳನ್ನು ತುಂಬಬೇಕು, ಇದಕ್ಕೆ ವಾಲುಕಾಯಂತ್ರವೆಂಬದಾಗಿ ಹೆಸರು, ಈ ರೀತಿಮಾಡಿ ಆ ಮಡಕೆಯನ್ನು ಒಲೆಯ ಮೇಲೆ ಏರಿಸಿ ಕೆಳಗೆ ಉರಿಹಾಕಲು ಪ್ರಾರಂಭಿಸಬೇಕು, ಉರಿಯನ್ನು ಮೊದಲು ಸೂಕ್ಷ್ಮಾಗ್ನಿಯಾಗಿಯೂ ಕ್ರಮೇಣ ಬಲವಾಗಿಯೂ ಹಾಕುತ್ತ ಬರಬೇಕು, ಈ ರೀತಿ ಹನ್ನೆರಡು ಝಾಮ ಉರಿಸಿದಲ್ಲಿ ರಸವು ಸತ್ತುಹೋಗುತ್ತದೆ, ಹನ್ನೆರಡು ಯಾಮ ಕಳೆದ ಮೇಲೆ ಉರಿಯನ್ನು ತೆಗೆದುಹಾಕಿ ಚೆನ್ನಾಗಿ ಆರುವವರಿವಿಗೂ ಬಿಟ್ಟದ್ದು ನಂತರ ಕುಪ್ಪಿಗೆಯನ್ನು

ತೆಗೆದುಕೊಂಡು ಒಡೆಯಬೇಕು, ಕಂಠದ ಹತ್ತಿರ ಕಟ್ಟಿಕೊಂಡಿರುವ ಗಂಧಕವನ್ನೆಲ್ಲಾ ಬಿಟ್ಟು ಕೆಳಭಾಗದಲ್ಲಿರುವ ಸತ್ತುಹೋಗಿರುವ ಪಾದರಸವನ್ನು ಸಮಸ್ತ ಕೆಲಸಗಳಿಗೂ ಉಪಯೋಗಿಸಿಕೊಳ್ಳುವುದು.

ಅಪಾಮಾರ್ಗಸ್ಯಬೀಜಾನಾಂಮೂಷಾಯುಗ್ಮಂಪ್ರಕಲ್ಪಯೇತ್ ॥
ತತ್ಸಂಪುಟೇನ್ಯಸೇತ್ಸೂತಂಮಲಯೂದುಗ್ಧಮಿಶ್ರಿತಂ ॥ ೩೫ ॥
ದ್ರೋಣಪುಷ್ಪೀಪ್ರಸೂನಾನಿವಿಡಂಗಮಿರಿಮೇದಕಂ ॥
ಏತಚ್ಚೂರ್ಣಮಧೋರ್ಧ್ವಂಚದತ್ವಾಮುದ್ರಾಂಪ್ರದೀಯತೇ ॥ ೩೬ ॥
ತಂಗೋಲಂಸಂಧಯೇತ್ಸಮ್ಯಕ್ ಮೃನ್ಮೂಷಾಸಂಪುಟೇಸುಧೀಃ ॥
ಮುದ್ರಾಂದತ್ವಾಶೋಷಯಿತ್ವಾತತೋಗಜಪುಟೇಪಚೇತ್ ॥ ೩೭ ॥
ಏವಮೇಕಪುಟೇನೈವಜಾಯತೇಭಸ್ಮಸೂತಕಂ ॥

ಮತ್ತೊಂದು ಕ್ರಮದಿಂದ ರಸಮಾರಣವನ್ನು ಹೇಳುತ್ತಾನೆ—ಉತ್ತರಣೆಯ ಬೀಜಗಳನ್ನು ತಂದು ಚೆನ್ನಾಗಿ ನೀರುಹಾಕಿ ಅರೆದು ಎರಡು ಮೂಸೆಗಳನ್ನು ಮಾಡುವುದು, ಭಸ್ಮ ಮಾಡಬೇಕಾದ ಶುದ್ಧವಾದ ರಸದ ಜೊತೆಗೆ "ಮಲಯೂದುಗ್ಧ" ಎಂದರೆ ಕಾಡುಅತ್ತಿಯ ಹಾಲನ್ನು ಬೆರಸಿ ಅದನ್ನು ಆ ಮೂಸೆಯಲ್ಲಿ ಹಾಕಬೇಕು. ತುಂಬೆಯ ಹವ್ವು, ವಾಯುವಿಡಂಗ, ದುರ್ವಾಸನೆಯ ಜಾಲಿಯ ಪಟ್ಟೆ, ಇವುಗಳನ್ನು ಸಮಾಂಶ ಕೂಡಿಸಿ ಚೂರ್ಣಮಾಡಿ ರಸದ ಮೇಲೆ ಮತ್ತು ಕೆಳಗೆ ಸಹಾ ಮುಚ್ಚಬೇಕು, ಈ ರೀತಿಮಾಡಿ ಉತ್ತರಣೆಯ ಬೀಜದ ಮತ್ತೊಂದು ಮೂಸೆಯನ್ನು ಸಂದಿಲ್ಲದಂತೆ ಮಾಡಿ ಅದನ್ನು ಒಂದು ಮಣ್ಣಿನ ಶ್ರಾವೆಯಲ್ಲಿರಿಸಿ ಮೇಲೆ ಒಂದು ಶ್ರಾವೆಯನ್ನು ಮುಚ್ಚಿ ಉಸಿರು ಹೋಗದಂತೆ ಸೀಲುಮಣ್ಣುಮಾಡಿ ಚೆನ್ನಾಗಿ ಒಣಗಿಸಿ ಗಜಪುಟದಲ್ಲಿ ಪಕ್ವಮಾಡಿದರೆ ಒಂದೇ ಪುಟದಲ್ಲಿಯೇ ರಸವು ಭಸ್ಮವಾಗಿ ಹೋಗುತ್ತದೆ.

ಕಾಷ್ಠೋದುಂಬರಿಕಾದುಗ್ಧೈರಸಂಕಿಂಚಿದ್ವಿಮರ್ದಯೇತ್ ॥ ೩೮ ॥
ತದ್ದುಗ್ಧಪೃಷ್ಟಹಿಂಗೋಶ್ಚಮೂಷಾಯುಗ್ಮಂಪ್ರಕಲ್ಪಯೇತ್ ॥
ಕ್ಷಿಪ್ತ್ವಾತತ್ಸಂಪುಟೇಸೂತಂತತ್ರಮುದ್ರಾಂಪ್ರದಾಪಯೇತ್ ॥ ೩೯ ॥
ಧೃತ್ವಾತಂಗೋಲಕಂಪ್ರಾಜ್ಞೋಮೃನ್ಮೂಷಾಸಂಪುಟೇಧಿಕೇ ॥
ಪಚೇನ್ಮೃದುಪುಟೇನೈವಸೂತಕೋಯಾತಿಭಸ್ಮತಾಂ ॥ ೪೦ ॥

ಇನ್ನೊಂದು ವಿಧವಾದ ರಸಮಾರಣ ಕ್ರಮವನ್ನು ಹೇಳುತ್ತಾನೆ—ಭಸ್ಮ ಮಾಡಬೇಕಾದ ರಸವನ್ನು ಕಾಡುಅತ್ತಿಯ ಹಾಲಿನ ರಸದೊಡನೆ ಕೊಂಚ ಖಲ್ವದಲ್ಲಿ ಹಾಕಿ ಅರೆಯಬೇಕು, ಅದೇ ಹಾಲಿನಿಂದ ಇಂಗನ್ನೂ ಅರದು

ಎರಡು ಮೂಸೆಗಳನ್ನು ಮಾಡಿ ಒಂದರಲ್ಲಿ ರಸವನ್ನು ಹಾಕಿ ಮತ್ತೊಂದನ್ನು ಮೇಲೆ ಮುಚ್ಚಿ ಸಂದಿಲ್ಲದಂತೆ ಭದ್ರಪಡಿಸಿ ಆದನ್ನು ಒಂದು ಮಣ್ಣಿನ ಶ್ರಾವೆಯಲ್ಲಿರಿಸಿ ಮೇಲೆ ಮತ್ತೊಂದು ಶ್ರಾವೆಯನ್ನು ಮುಚ್ಚಿ ಉಸಿರುಹೋಗದಂತೆ ಸೀಲುಮಾಡಿ ಒಣಗಿಸಿ ಸಾಮಾನ್ಯವಾದ ಪುಟವನ್ನು ಹಾಕಿದರೂ ರಸವು ಭಸ್ಮವಾಗುತ್ತದೆ.

ನಾಗವಲ್ಲೀರಸೈರ್ಘೃಷ್ಟಃ ಕರ್ಕೋಟೀಕಂದಗರ್ಭಿತಃ ॥
ಮೃನ್ಮೂಷಾಸಂಪುಟೇಪಕ್ತ್ವಾ ಸೂತೋಯಾತ್ಯೇವಭಸ್ಮತಾಂ ೪೧

ರಸವನ್ನು ವೀಳ್ಯದೆಲೆ ರಸದೊಡನೆ ಅರದು, ನೆಲಗುಂಬಳದ ಗೆಡ್ಡೆಯನ್ನು ತಂದು ಅದರಲ್ಲಿ ರಂಧ್ರಮಾಡಿ ಅದರಲ್ಲಿ ಈ ರಸವನ್ನಿರಿಸಿ ಆ ಗೆಡ್ಡೆಯನ್ನು ಮಣ್ಣಿನ ಶ್ರಾವೆಯಲ್ಲಿರಿಸಿ ಮೇಲೊಂದು ಶ್ರಾವೆಯನ್ನು ಮುಚ್ಚಿ ಸಂದಿಲ್ಲದಂತೆ ಸೀಲುಮಾಡಿ ಪುಟಹಾಕಿದರೆ ಪಾದರಸವು ಭಸ್ಮವಾಗುತ್ತದೆ.

ಖಂಡಿತಂಮೃಗಶೃಂಗಂಚಜ್ವಾಲಾಮುಖ್ಯಾರಸೈಸ್ಸಮಂ ॥
ರುಧ್ವಾಭಾಂಡೇಪಚೇಚ್ಚುಲ್ಯಾಂಯಾಮಯುಗ್ಮಂತತೋನಯೇತ್ ॥ ೪೨ ॥
ಅಷ್ಟಾಂಶಂತ್ರಿಕಟುಂದದ್ಯಾನ್ನಿಷ್ಕಮಾತ್ರಂಚಭಕ್ಷಯೇತ್ ॥
ನಾಗವಲ್ಲೀರಸೈಸ್ಸಾರ್ಧಂವಾತಪಿತ್ತಜ್ವರಾಪಹಂ ॥ ೪೩ ॥
ಅಯಂಜ್ವರಾಂಕುಶೋನಾಮರಸಸ್ಸರ್ವಜ್ವರಾಪಹಃ ॥
ಏಕಾಹಿಕಂದ್ವ್ಯಾಹಿಕಂಚತ್ರ್ಯಾಹಿಕಂವಾನಸಂಶಯಃ ॥ ೪೪ ॥

ಜ್ವರಾಂಕುಶವನ್ನು ಹೇಳುತ್ತಾನೆ—ಸಾರಗದ ಕೊಂಬನ್ನು ತಂದು ಚನ್ನಾಗಿ ಕುಟ್ಟಿ ಪುಡಿಮಾಡಿ ಜ್ವಾಲಾಮುಖಿ ಅಂದರೆ ಕನ್ನಡದಲ್ಲಿ ನಮವಲು ಎಂದು ಹೇಳಿಸಿಕೊಳುವ ಗಿಡದ ಸೊಪ್ಪಿನ ರಸದೊಡನೆ ಸೇರಿಸಿ ಮಣ್ಣಿನ ಭಾಂಡದಲ್ಲಿ ಹಾಕಿ ಮೇಲೆ ಮುಚ್ಚಿ ಎರಡು ಯಾಮ ಪರ್ಯಂತ ಗಾಢಾಗ್ನಿಯಿಂದ ಪಕ್ವಮಾಡಬೇಕು ನಂತರ ಕೆಳಗಿಳಿಸಿಕೊಂಡು ಶೃಂಗದ ತೂಕದ ಅಷ್ಟಮಾಂಶ ತ್ರಿಕಟು (ಶುಂಠಿ, ಹಿಪ್ಪಲಿ, ಮೆಣಸು) ಪುಡಿಮಾಡಿ ಅದರೊಂದಿಗೆ ಸೇರಿಸಿ ಇರಿಸಿಕೊಳ್ಳುವುದು, ಇಲ್ಲಿಗೆ ಜ್ವರಾಂಕುಶವು ನಿರ್ಮಾಣವಾದ ಹಾಗಾಯಿತು. ಇದನ್ನು ಕೊಡತಕ್ಕ ಪ್ರಮಾಣ ಒಂದು ನಿಷ್ಕ, ಅಂದರೆ ಪರಿಮಾಣವನ್ನು ಅನುಭವದ ಮೇಲೆಯೇ ಗೊತ್ತು ಮಾಡಿಕೊಳ್ಳಬೇಕು. ಒಂದು ಗ್ರೇನಿನ ಲಾಗಾಯಿತು ವಯೋಮಾನದಿಂದ ಐದು ಗ್ರೈನಿನ ವರಿಗೂ ಕೊಡುವುದು ರೂಢಿ ಇದೆ. ವೀಳ್ಯದೆಲೆಯ ರಸದ ಅನುಪಾನದಲ್ಲಿ ಕೊಡೋಣದರಿಂದ ವಾತಪಿತ್ತಜ್ವರವನ್ನು ನಿವಾರಣ ಮಾಡುತ್ತದೆ, ಸಮಸ್ತ ವಿಧವಾದ ಜ್ವರಗಳ ಮೇಲೆಯೂ ಅನುಪಾನ ಭೇದದಿಂದ

ಪ್ರಯೋಗಿಸಲಿಕ್ಕೆ ಬರುತ್ತದೆ. ಪ್ರತಿ ದಿವಸವೂ ಬರುವುದು, ಎರಡು ದಿವಸಕ್ಕೊಮ್ಮೆ ಬರುವುದು, ಮೂರು ದಿವಸಕ್ಕೆ ಒಂದು ಸಾರಿ ಬರುವುದು ಇಂತಹ ಜ್ವರಗಳನ್ನೆಲ್ಲಾ ನಿಲ್ಲಿಸುತ್ತದೆ

> **ಪಾರದಂರಸಕಂತಾಲತುತ್ಥಂಟಂಕಣಗಂಧಕೇ ॥**
> **ಸರ್ವಮೇತತ್ಸಮಂಶುದ್ಧಂಕಾರವಲ್ಲೀರಸೈರ್ದಿನಂ ॥ ೪೫ ॥**
> **ಮರ್ದಯೇಲ್ಲೇಪಯೇತ್ತೇನತಾಮ್ರಪಾತ್ರೋದರಂಭಿಷಕ್ ॥**
> **ಅಂಗುಲ್ಯರ್ಧಪ್ರಮಾಣೇನತತೋರುಧ್ವಾಚತನ್ಮುಖಂ ॥ ೪೬ ॥**
> **ಪಚೇತ್ತಂವಾಲುಕಾಯಂತ್ರೇಕ್ಷಿಪ್ತ್ವಾಧಾನ್ಯಾನಿತನ್ಮುಖೇ ॥**
> **ಯದಾಸ್ಫುಟಂತಿಧಾನ್ಯಾನಿತದಾಸಿದ್ಧಂವಿನಿರ್ದಿಶೇತ್ ॥ ೪೭ ॥**
> **ತತೋನಯೇತ್ಸ್ವಾಂಗಶೀತಂತಾಮ್ರಪಾತ್ರೋದರಾದ್ಭಿಷಕ್ ॥**
> **ರಸಂಜ್ವರಾರಿನಾಮಾನಂವಿಚೂರ್ಣ್ಯಮರಿಚೈಸ್ಸಮಂ ॥ ೪೮ ॥**
> **ಮಾಷೈಕಂಪರ್ಣಖಂಡೇನಭಕ್ಷಯೇನ್ನಾಶಯೇಜ್ವರಂ ॥**
> **ತ್ರಿದಿನೈರ್ವಿಷಮಂತೀವ್ರಂಏಕದ್ವಿತ್ರಿಚತುರ್ಥಕಂ ॥ ೪೯ ॥**

ಜ್ವರಾರಿ ರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸ, ಶುದ್ಧವಾದ ಕಪರೀ ತುತ್ಥ, ಶುದ್ಧವಾದ ತಾಳಕ, ಶುದ್ಧವಾದ ಬಿಳಿಗಾರ, ಶುದ್ಧವಾದ ಗಂಧಕ ಇವೆಲ್ಲವನ್ನೂ ಸಮವಾದ ಪ್ರಮಾಣದಲ್ಲಿ ಕೂಡಿಸಿ ಹಾಗಲನೊಪ್ಪಿನ ರಸದಲ್ಲಿ ಒಂದು ದಿವಸ ಅರೆಯಬೇಕು, ಚನ್ನಾಗಿ ಅರೆದ ನಂತರ ತಾಮ್ರದ ಪಾತ್ರೆಯ ತಳಕ್ಕೆ ಅದನ್ನು ಅರ್ಧ ಅಂಗುಲದಷ್ಟು ದಪ್ಪವಾಗಿ ಮೆತ್ತಬೇಕು, ನಂತರ ಆ ತಾಮ್ರ ಪಾತ್ರದ ಬಾಯನ್ನು ಚನ್ನಾಗಿ ಗಾಸರಾಡದಂತೆ ಮುಚ್ಚಿ ಚೀಲಮಣ್ಣು ಮಾಡಿ ವಾಲುಕಾಯಂತ್ರವೆಂದರೆ ಒಂದು ಭಾಂಡದಲ್ಲಿ ತುಂಬಾ ಮರಳನ್ನು ತುಂಬಿ ಅದರಲ್ಲಿ ಈ ತಾಮ್ರದ ಪಾತ್ರೆಯನ್ನು ಹೂಳಿ ಈ ತಾಮ್ರದ ಪಾತ್ರೆಯ ಬಾಯಿನ ಮೇಲೆ ಒಂದು ಹಿಡಿ ಭತ್ತದ ಕಾಳನ್ನಿರಿಸಿ ವಾಲುಕ ಯಂತ್ರವನ್ನು ಒಲೆಯ ಮೇಲಿರಿಸಿ ತಳದಲ್ಲಿ ಉರಿಸುವುದಕ್ಕೆ ಆರಂಭಮಾಡಬೇಕು. ಮೇಲಿರಿಸಿರುವ ಭತ್ತಗಳೆಲ್ಲಾ ಸಿಡಿದು ಅರಳಾಯಿತೆಂದರೆ ಅಲ್ಲಿಗೆ ಒಳಗಿರುವ ಔಷಧವು ಪಕ್ವವಾಯಿತೆಂದು ಭಾವಿಸಿಕೊಳ್ಳಬಹುದು, ನಂತರ ಉರಿಯನ್ನು ನಿಲ್ಲಿಸಿ ಪಾತ್ರವು ತಣ್ಣಗಾಗುವ ವರೆಗೂ ಬಿಟ್ಟಿರುವರು, ತಣ್ಣಗಾದ ನಂತರ ತಾಮ್ರದ ಪಾತ್ರದ ಬಾಯನ್ನು ಬಿಚ್ಚಿ ಔಷಧವನ್ನು ಈಚೆಗೆ ಸುರಿದುಕೊಳ್ಳುವುದು, ಅದನ್ನು ಸಮ ಪ್ರಮಾಣ ಮೆಣಸಿನ ಕಾಳಿನೊಂದಿಗೆ ಚನ್ನಾಗಿ ಚೂರ್ಣಮಾಡಿ ಇರಿಸಿಕೊಂಡು ವಯೋನುಗುಣವಾಗಿ ಒಂದೆರಡು ಗ್ರೇನಿನಷ್ಟನ್ನು ವೀಳ್ಯದೆಲೆಯಲ್ಲಿರಿಸಿ ಸೇವಿಸಬೇಕು, ಈ ರೀತಿಯಾಗಿ ಸೇವಿಸಿದಲ್ಲಿ ಮೂರು ದಿವಸದೊಳಗಾಗಿ ವಿಷಮ ಜ್ವರವನ್ನೂ ಪ್ರತಿದಿವಸವೂ ಬರುವ ಜ್ವರ, ಎರಡು ದಿವಸದ್ದು, ಮೂರು ದಿವಸದ್ದು ಈ ಜ್ವರಗಳು ಎಷ್ಟೇ ಭಯಂಕರವಾಗಿರಲಿ ನಿಲ್ಲಿಸುತ್ತದೆ.

ತಾಳಕಂತುತ್ಥಕಂತಾಮ್ರಂರಸಂಗಂಧಂಮನಶ್ಶಿಲಾಂ ॥
ಕರ್ಷಕರ್ಷಂಪ್ರಯೋಕ್ತವ್ಯಂಮರ್ದಯೇತ್ತ್ರಿಫಲಾಂಬುಭಿಃ ॥೫೦॥
ಗೋಲಂನ್ಯಸೇತ್ಸಂಪುಟಕೇಪುಟಂದದ್ಯಾತ್ತ್ರಯತ್ನತಃ ॥
ತತೋನೀತ್ವಾರ್ಕದುಗ್ಧೇನವಜ್ರೀದುಗ್ಧೇನಸಪ್ತಧಾ ॥ ೫೧ ॥
ಕ್ವಾಥೇನದಂತ್ಯಾಶ್ಯ್ಯಾಮಾಯಾಭಾವಯೇತ್ಸಪ್ತಧಾಪುನಃ ॥
ಮಾಷಮಾತ್ರಂರಸಂದಿವ್ಯಂಪಂಚಾಶನ್ಮರಿಚೈರ್ಯುತಂ ॥ ೫೨ ॥
ಗುಡಂಗದ್ಯಾಣಕಂಚೈವತುಲಸೀದಲಯುಗ್ಮಕಂ ॥
ಭಕ್ಷಯೇತ್ತ್ರಿದಿನಂಭಕ್ತ್ಯಾಶೀತಾರಿರ್ದುರ್ಲಭಃಪರಃ ॥ ೫೩ ॥
ಪಥ್ಯಂದುಗ್ಧೋದನಂದೇಯಂವಿಷಮಂಶೀತಪೂರ್ವಕಂ ॥
ದಾಹಪೂರ್ವಂಹರತ್ಯಾಶುತೃತೀಯಕಚತುರ್ಥಕೌ ॥ ೫೪ ॥
ದ್ವ್ಯಾಹಿಕಂಸತತಂಚೈವನ್ಯವರ್ಣ್ಯಂಚನಿಯಚ್ಛತಿ ॥

ಶೀತಜ್ವರಾರಿ ರಸ—ಶುದ್ಧವಾದ ತಾಳಕ, ಶುದ್ಧವಾದ ತುತ್ಥ, ಶುದ್ಧವಾದ ತಾಮ್ರಭಸ್ಮ, ಶುದ್ಧವಾದ ಪಾದರಸ, ಶುದ್ಧವಾದ ಗಂಧಕ, ಶುದ್ಧವಾದ ಮಣಿಶಿಲೆ ಇವು ಪ್ರತಿಯೊಂದನ್ನೂ ಸಮಪರಿಮಾಣದಲ್ಲಿ ಕೂಡಿಸಿ ತ್ರಿಫಲಾ ಕಷಾಯದಿಂದ ಚನ್ನಾಗಿ ಅರೆದು ಒಂದು ಉಂಡೆಯಾಗಿ ಮಾಡಬೇಕು. ಆ ಉಂಡೆಯನ್ನು ಮಣ್ಣಿನ ಶರಾವೆಯಲ್ಲಿರಿಸಿ ಉಸಿರಾಡದಂತೆ ಚನ್ನಾಗಿ ಸೀಲುಮಾಡಿ ಪುಟಹಾಕಬೇಕು, ಪುಟಹಾಕಿಯಾದ ಮೇಲೆ ಈಜಿಗೆ ತೆಗೆದುಕೊಂಡು ಯಕ್ಕದ ಹಾಲಿನಲ್ಲಿಯೂ ಕಳ್ಳಿಯ ಹಾಲಿನಲ್ಲಿಯೂ ಜಾಪಾಳದ ಕಷಾಯದಲ್ಲಿಯೂ, ತಿಗಡೆಯ ಕಷಾಯದಲ್ಲಿಯೂ ಏಳೇಳು ಸಾರಿ ಭಾವನೆ ಕೊಡಬೇಕು ಈ ರೀತಿಯಲ್ಲಿ ಸಿದ್ಧವಾದ ರಸವನ್ನು ಒಂದು ಮಾಷ ಪರಿಮಾಣದಷ್ಟನ್ನು ಐವತ್ತು ಮೆಣಸಿನ ಕಾಳಿನೊಡನೆ ಒಂದು ಗದ್ಯಾಣ ಪ್ರಮಾಣ ಬೆಲ್ಲ, ಎರಡು ತುಲಸೀದಳ ಇವುಗಳನ್ನು ಸೇರಿಸಿ ಈ ಪ್ರಮಾಣದಲ್ಲಿ ಮೂರು ದಿವಸ ಭಕ್ತಿಯಿಂದ ಸೇವನಮಾಡಬೇಕು, ಹಾಲು ಅನ್ನವನ್ನು ಭೋಜನಮಾಡಬೇಕು. ಇದರ ಸೇವನದಿಂದ ವಿಷಮಜ್ವರ, ಶೀತಪೂರ್ವಕಜ್ವರವೆಂದರೆ ಛಳಿ ಬಂದು ಜ್ವರಬರುವುದು, ದಾಹಪೂರ್ವಕ ಜ್ವರವೆಂದರೆ ವೈಯ್ಯಾರಿ ಬಹಳವಾಗಿದ್ದು ಜ್ವರಬರುವುದು, ಮೂರು ದಿವಸದ ಜ್ವರ, ನಾಲ್ಕು ದಿವಸದ ಜ್ವರ, ಎರಡರ ಬಾರಿ, ಪ್ರತಿದಿನವೂ ಹಗಲು ಮತ್ತು ರಾತ್ರಿಗಳಲ್ಲಿ ಬರುವ ಜ್ವರ, ಇವುಗಳನ್ನೆಲ್ಲಾ ಗೆಲ್ಲುತ್ತದಲ್ಲದೆ ಜ್ವರಾದಿಗಳು ಬಂದು ಮನುಷ್ಯನು ರೂಪು ಕೆಟ್ಟು ಹೋಗಿರುವುದನ್ನು ಸಹ ಕಡಮೆಮಾಡುತ್ತದೆ.

ಭಾಗೈಕಂಸ್ಯಾದ್ರಸಾಚ್ಛುದ್ಧಾದ್ವೈಲೇಯಃ ಪಿಪ್ಪಲೀ ಶಿವಾ ॥ ೫೫ ॥
ಆಕಾರಕರಭೋಗಂಧಃ ಕಟುತೈಲೇನಶೋಧಿತಃ ॥
ಫಲಾನಿ ಚೇಂದ್ರವಾರುಣ್ಯಾಶ್ಚತುರ್ಭಾಗಮಿತಾಅಮೀ ॥ ೫೬ ॥
ಏಕತ್ರಮರ್ದಯೇಚ್ಚೂರ್ಣಮಿಂದ್ರವಾರುಣಿಕಾರಸೈಃ ॥
ಮಾಷೋನ್ಮಿತಾಂ ಗುಟೀಂ ಕೃತ್ವಾದದ್ಯಾತ್ಸರ್ವಜ್ವರೇ ಬುಧಃ ॥೫೭॥
ಛಿನ್ನಾರಸಾನುಪಾನೇನ ಜ್ವರಘ್ನೀ ಗುಟಿಕಾ ಮತಾ ॥

ಜ್ವರಘ್ನ ಗುಟಿಯನ್ನು ಹೇಳುತ್ತಾನೆ—ಶುದ್ಧಮಾಡಿದ ಪಾದರಸ ಒಂದು ಭಾಗ, ಶುದ್ಧಮಾಡಿದ ಬಾಣಂತಿಬೊಳ, ಹಿಪ್ಪಲಿ, ಅಳಲೆಯ ಕಾಯಿ, ಆಕಳಕರೆ, ಸಾಸುವೆಯ ಎಣ್ಣೆಯಂತಹ ಕಟುತೈಲದಿಂದ ಶೋಧಿತವಾದ ಗಂಧಕ, ಕಾಡು ಕವಡೆಯ ಕಾಯಿ, ಈ ಪದಾರ್ಥಗಳು ಪ್ರತಿಯೊಂದೂ ರಸದ ನಾಲ್ಕರಷ್ಟು, ಇವೆಲ್ಲವನ್ನೂ ಸೇರಿಸಿ ಸಣ್ಣ ಪುಡಿಮಾಡಿ ಕಾಡುಕವಡೆಯಕಾಯಿನ ರಸದಲ್ಲಿಯೇ ಅರೆದು ಎರಡಾಣೆಯ ತೂಕದ ಒಂದೊಂದು ಮಾತ್ರೆಗಳನ್ನು ಮಾಡಿ ಇರಿಸಿ ಕೊಂಡು ಸಮಸ್ತ ವಿಧವಾದ ಜ್ವರಗಳಲ್ಲಿಯೂ ಅಮೃತಬಳ್ಳಿಯ ರಸದ ಅನುಪಾನ ದಲ್ಲಿ ಕೊಡುವುದರಿಂದ ಜ್ವರಗಳನ್ನೆಲ್ಲಾ ಗುಣಪಡಿಸುತ್ತದೆ.

ಶುದ್ಧೋ ಬುಭುಕ್ಷಿತಸ್ಸೂತೋ ಭಾಗದ್ವಯಮಿತೋ ಭವೇತ್ ॥೫೮॥
ತಥಾ ಗಂಧಸ್ಯ ಭಾಗೌ ದ್ವೌ ಕುರ್ಯಾತ್ಕಜ್ಜಲಿಕಾಂ ತಯೋಃ ॥
ಸೂತಾಚ್ಚತುರ್ಗುಣೇಷ್ವೇವ ಕಪರ್ದೇಷು ವಿನಿಕ್ಷಿಪೇತ್ ॥ ೫೯ ॥
ಭಾಗೈಕಂ ಟಂಕಣಂ ದತ್ವಾ ಗೋಕ್ಷೀರೇಣ ವಿಮರ್ದಯೇತ್ ॥
ತಥಾ ಶಂಖಸ್ಯ ಖಂಡಾನಾಂ ಭಾಗಾನಷ್ಟೌ ಪ್ರಕಲ್ಪಯೇತ್ ॥ ೬೦ ॥
ಕ್ಷಿಪೇತ್ಸರ್ವಂ ಪುಟಸ್ಯಾಂತಶ್ಚೂರ್ಣಲಿಪ್ತಶರಾವಯೋಃ ॥
ಗರ್ತೇ ಹಸ್ತೋನ್ಮಿತೇ ಧೃತ್ವಾ ಪುಟೇದ್ಗಜಪುಟೇನ ಚ ॥ ೬೧ ॥
ಸ್ವಾಂಗಶೀತಂ ಸಮುದ್ಧೃತ್ಯ ಪಿಷ್ಟ್ವಾ ತತ್ಸರ್ವಮೇಕತಃ ॥
ಷಡ್ಗುಂಜಾಸಮ್ಮಿತಂ ಚೂರ್ಣಮೇಕೋನತ್ರಿಂಶದೂಷಣೈಃ ॥೬೨॥
ಘೃತೇನ ವಾತಜೇ ದದ್ಯಾನ್ನವನೀತೇನ ಪಿತ್ತಜೇ ॥
ಕ್ಷೌದ್ರೇಣ ಶ್ಲೇಷ್ಮಜೇ ದದ್ಯಾದತೀಸಾರೇ ಕ್ಷಯೇ ತಥಾ ॥ ೬೩ ॥
ಅರುಚೌ ಗ್ರಹಣೀರೋಗೇ ಕಾರ್ಶ್ಯೇ ಮಂದಾನಲೇ ತಥಾ ॥
ಕಾಸಶ್ವಾಸೇಷು ಗುಲ್ಮೇಷು ಲೋಕನಾಥರಸೋ ಹಿತಃ ॥ ೬೪ ॥
ತಸ್ಯೋಪರಿ ಘೃತಾನ್ನಂ ಚ ಭುಂಜೀತ ಕವಳತ್ರಯಂ ॥
ಮಂಚೇ ಕ್ಷಣೈಕಮುತ್ತಾನಶ್ಶಯೀತಾನುಪಧಾನಕೇ ॥ ೬೫ ॥

ಅನಮ್ಲಮನ್ನಂಸಘೃತಂಭುಂಜೀತಮಧುರಂದಧಿ ॥
ಪ್ರಾಯೇಣಜಾಂಗಲಂಮಾಂಸಂಪ್ರದೇಯಂಘೃತಪಾಚಿತಂ ॥ ೧೬ ॥
ಸುದುಗ್ಧಭಕ್ತಂದದ್ಯಾಚ್ಚಜಾತೇಗ್ನೌಸಾಂಧ್ಯಭೋಜನೇ ॥
ಸಘೃತಾನ್ಮುದ್ಗವಟಕಾನ್ ವ್ಯಂಜನೇಷ್ವವಚಾರಯೇತ್ ॥ ೧೭ ॥
ತಿಲಾಮಲಕಕಲ್ಕೇನಸ್ನಾಪಯೇತ್ಸರ್ಪಿಷಾಥವಾ ॥
ಅಭ್ಯಂಜಯೇತ್ಸರ್ಪಿಷಾಚಸ್ನಾನಂಕೋಷ್ಣೋದಕೇನಚ ॥ ೧೮ ॥
ಕ್ವಚಿತ್ತೈಲಂನಗೃಹ್ಣೀಯಾನ್ನಬಿಲ್ವಂಕಾರವೇಲ್ಲಕಂ ॥
ವಾರ್ತಾಕಂಶಫರೀಂಚಿಂಚಾಂತ್ಯಜೇದ್ವ್ಯಾಯಾಮಮೈಥುನೇ।೧೯।
ಮದ್ಯಂಸಂಧಾನಕಂಹಿಂಗುಶುಂಠೀಮಾಷಾನ್ಮಸೂರಕಾನ್ ॥
ಕೂಷ್ಮಾಂಡಂರಾಜಿಕಾಂಕೋಪಂಕಾಂಜಿಕಂಚೈವವರ್ಜಯೇತ್ ॥ ೨೦ ॥
ತ್ಯಜೇದಯುಕ್ತನಿದ್ರಾಂಚಕಾಂಸ್ಯಪಾತ್ರೇಚಭೋಜನಂ ॥
ಕಕಾರಾದಿಯುತಂಸರ್ವಂತ್ಯಜೇಚ್ಛಾಕಫಲಾದಿಕಂ ॥ ೨೧ ॥
ಪಥ್ಯೋಯಂಲೋಕನಾಥಸ್ತುಶುಭನಕ್ಷತ್ರವಾಸರೇ ॥
ಪೂರ್ಣತಿಥೌಸಿತೇಪಕ್ಷೇಜಾತೇಚಂದ್ರಬಲೇತಥಾ ॥ ೨೨ ॥
ಪೂಜಯಿತ್ವಾಲೋಕನಾಥಂಕುಮಾರೀಂಭೋಜಯೇತ್ತತಃ ॥
ದಾನಂದತ್ವಾದ್ವಿಘಟಿಕಾಮಧ್ಯೇಗ್ರಾಹ್ಯೋರಸೋತ್ತಮಃ ॥ ೨೩ ॥
ರಸಾಚ್ಚೇಜ್ಜಾಯತೇತಾಪಸ್ತಗಾಶರ್ಕರಯಾಯುತಂ ॥
ಸತ್ವಂಗುಡೂಚ್ಯಾಗೃಹ್ಣೀಯಾದ್ವಂಶರೋಚನಯಾಯುತಂ ॥೨೪॥
ಖರ್ಜೂರಂದಾಡಿಮಂದ್ರಾಕ್ಷಾಮಿಕ್ಷುಖಂಡಾನಿಚಾರಯೇತ್ ॥
ಅರುಚೌನಿಸ್ತುಷಂಧಾನ್ಯಂಘೃತಭೃಷ್ಟಂಸಶರ್ಕರಂ ॥ ೨೫ ॥
ದದ್ಯಾತ್ತಥಾಜ್ವರೇಧಾನ್ಯಗುಡೂಚೀಕ್ವಾಥಮಾಹರೇತ್ ॥
ಉಶೀರವಾಸಕಕ್ವಾಥಂದದ್ಯಾತ್ಸಮಧುಶರ್ಕರಂ ॥ ೨೬ ॥
ರಕ್ತಪಿತ್ತೇಕಫೇಶ್ವಾಸೇಕಾಸೇಚಸ್ವರಸಂಕ್ಷಯೇ ॥
ಅಗ್ನಿಭ್ರಷ್ಟಜಯಾಚೂರ್ಣಂಮಧುನಾನಿಶಿದೀಯತೇ ॥ ೨೭ ॥
ನಿದ್ರಾನಾಶೇತಿಸಾರೇಚಗ್ರಹಣ್ಯಾಂಮಂದಪಾವಕೇ ॥
ಸೌವರ್ಚಲಾಭಯಾಕೃಷ್ಣಾಚೂರ್ಣಮುಷ್ಣೋದಕೈಃಪಿಬೇತ್ ೨೮
ಶೂಲೇಜೀರ್ಣೇತಥಾಕೃಷ್ಣಾಮಧುಯುಕ್ತಾಜ್ವರೇಹಿತಾ ॥
ಪ್ಲೀಹೋದರೇವಾತರಕ್ತೇಛರ್ದ್ಯಾಂಚೈವಗುದಾಂಕುರೇ ॥ ೨೯ ॥
ನಾಸಿಕಾದಿಷುರಕ್ತೇಷುರಸಂದಾಡಿಮಪುಷ್ಪಜಂ ॥

**ದೂರ್ವಾಯಾಸ್ಸ್ವರಸಂನಸ್ಯೇಪ್ರದದ್ಯಾತ್ ಶರ್ಕರಾಯುತಂ ॥ ೮೦ ॥**
**ಕೋಲಮಜ್ಜಾಕಣಾಬರ್ಹಿಪಕ್ಷಭಸ್ಮಸಶರ್ಕರಂ ॥**
**ಮಧುನಾಲೇಹಯೇಚ್ಛರ್ದಿಹಿಕ್ಕಾಕೋಪೋಪಶಾಂತಯೇ ॥ ೮೧ ॥**
**ವಿಧಿರೇಷನಿಯೋಜ್ಯಸ್ತುಸರ್ವಸ್ಮಿನ್ ಪೋಟ್ಟಲೀರಸೇ ॥**
**ಮೃಗಾಂಕೇಹೇಮಗರ್ಭೇಚಮೌಕ್ತಿಕಾಖ್ಯೇಪರೇಷುಚ ॥ ೮೨ ॥**
**ಇತ್ಯಯಂಲೋಕನಾಥಾಖ್ಯೋರಸಸ್ಸರ್ವರುಜೋಜಯೇತ್ ॥**

ಲೋಕನಾಥರಸನಿರ್ಮಾಣ ಕ್ರಮವನ್ನು ಹೇಳುತ್ತಾನೆ—ಶುದ್ಧವಾದ ಪಾದರಸ ಎರಡು ಭಾಗ, ಗಂಧಕ ಎರಡು ಭಾಗ, ಇವೆರಡನ್ನೂ ಸೇರಿಸಿ ಚನ್ನಾಗಿ ಅರೆದರೆ ಕಪ್ಪಾಗೆ ಮಶಿಯಂತಹ ಹುಡಿಯಾಗುತ್ತದೆ, ಇದಕ್ಕೇನೇ ಕಜ್ಜಲಿ ಎಂದು ಹೆಸರು. ಈ ರೀತಿ ಕಜ್ಜಲಿಯನ್ನು ನಿರ್ಮಿಸಿಕೊಂಡು ಈ ಕಜ್ಜಲಿಯಲ್ಲಿ ಸೇರಿರುವ ರಸದ ನಾಲ್ಕರಷ್ಟು ತೂಕವುಳ್ಳ ಕವಡೆಯನ್ನು ಸಂಪಾದಿಸಿ ಅದರಲ್ಲಿ ಈ ಕಜ್ಜಲಿಯನ್ನು ತುಂಬಬೇಕು, ರಸದ ಅರ್ಧದಷ್ಟು ಟಂಕಣಕ್ಷಾರವನ್ನು ಹಸುವಿನ ಹಾಲಿನಲ್ಲಿ ಅರದು ಕಜ್ಜಲಿಯನ್ನು ತುಂಬಿರುವ ಕವಡೆಯ ಬಾಯಿಗೆ ಮುಚ್ಚಬೇಕು, ರಸದ ಎಂಟರಷ್ಟು ಶುದ್ಧವಾದ ಶಂಖದ ಚೂರುಗಳನ್ನೂ ಸಿದ್ಧಪಡಿಸಿ ಇರಿಸಿಕೊಳ್ಳಬೇಕು, ಈ ರೀತಿ ಸಾಮಗ್ರಿಗಳು ಸಿದ್ಧವಾದ ಮೇಲೆ ಒಂದು ಶ್ರಾವಯ ಒಳಭಾಗಕ್ಕೆ ಒಳ್ಳೆಯದಾದ ಕಪ್ಪೆಯಚಿಪ್ಪಿನ ಸುಣ್ಣವನ್ನು ಚನ್ನಾಗಿ ಬಳಿದು ಅದರಲ್ಲಿ ಈ ಕವಡೆಯನ್ನು ಮತ್ತು ಶಂಖದ ಚೂರುಗಳನ್ನೂ ತುಂಬಿ ಮೇಲೊಂದು ಶ್ರಾವೆಯನ್ನು ಸಂದು ಬಿಡದಂತೆ ಮುಚ್ಚಿ ಚೀಲ ಮಣ್ಣು ಮಾಡಿ ಗಜಪುಟದಲ್ಲಿ ಪಕ್ವಮಾಡಬೇಕು, ಇದಕ್ಕಾಗಿ ಗುಂಡಿಯನ್ನು ಮಾಡಬೇಕಾದರೆ ಒಂದು ತೋಳಿನಷ್ಟುದ್ದ ಗುಂಡಿಯನ್ನು ಮಾಡಬೇಕು, ಪುಟಹಾಕಿದ ಮೇಲೆ ಆರಿ ತಣ್ಣಗಾಗುವ ವರಿವಿಗೂ ಅಲ್ಲಿಯೇ ಬಿಟ್ಟಿದ್ದು ನಂತರ ಈಚೆಗೆ ತೆಗೆದು ಆ ಶ್ರಾವೆಯಲ್ಲಿರುವುದನ್ನೆಲ್ಲ ಒಂದುಗೂಡಿಸಿ ಚನ್ನಾಗಿ ಮತ್ತೆ ಅರೆಯಬೇಕು, ಇಲ್ಲಿಗೆ ಲೋಕನಾಥರಸವು ಸಿದ್ಧವಾದ ಹಾಗಾಯಿತು ಇದನ್ನು ಆರುಗುಲಗಂಜಿಯ ಪ್ರಮಾಣದಷ್ಟನ್ನೂ ಇಪ್ಪತ್ತೊಂಭತ್ತು ಮೆಣಸಿನಕಾಳನ್ನೂ ಸಹ ಒಟ್ಟಿಗೆ ಸೇವಿಸಬಹುದು, ವಾತಪ್ರಕೋಪದಿಂದ ಹುಟ್ಟಿದ ರೋಗಗಳಲ್ಲಿ ತುಪ್ಪದ ಅನುಪಾನದೊಂದಿಗೂ, ಪಿತ್ತಪ್ರಕೋಪಜನ್ಯಗಳಾದ ರೋಗಗಳಲ್ಲಿ ಬೆಣ್ಣೆಯ ಅನುಪಾನದೊಂದಿಗೂ, ಶ್ಲೇಷ್ಮಪ್ರಕೋಪಜನ್ಯ ವ್ಯಾಧಿಗಳಲ್ಲಿ ಜೇನುತುಪ್ಪದ ಅನುಪಾನದೊಂದಿಗೂ ಮತ್ತು ಅತಿಸಾರ, ಕ್ಷಯರೋಗ, ಅರೋಚಕರೋಗ, ಗ್ರಹಣಿ ಎಂಬ ಒಂದು ಬಗೆಯ ಭೇದಿರೋಗ, ಕಾರ್ಶ್ಯರೋಗವೆಂದರೆ ದಿನಂಪ್ರತಿ ಸಣ್ಣನಾಗಿ ಹೋಗುವ ರೋಗ, ಅಗ್ನಿಮಾಂದ್ಯ, ಕೆಮ್ಮಲು, ಉಬ್ಬಸ, ಗುಲ್ಮರೋಗ, ಈ ರೋಗಗಳಲ್ಲೆಲ್ಲಾ ಲೋಕನಾಥರಸವನ್ನು ನಿರ್ಭಯವಾಗಿ ಉಪಯೋಗಿಸಬಹುದು.

ಈ ಔಷಧವನ್ನು ತೆಗದುಕೊಂಡ ಒಡನೆಯೇ ಮೂರು ತುತ್ತಿನಷ್ಟು ತುಪ್ಪ ಮತ್ತು ಅನ್ನವನ್ನು ತಿಂದು ಮಂಚದ ಮೇಲೆ ಊರ್ಧ್ವಮುಖವಾಗಿ ಮಲಗಿಕೊಂಡು ಒಂದು ಕ್ಷಣ ಹಾಗೆಯೇ ಇರಬೇಕು, ತಲೆದಿಂಬನ್ನು ಉಪಯೋಗಿಸಬಾರದು, ಈ ರಸವನ್ನು ಸೇವಿಸುವವರು ಹುಳಿಯನ್ನು ಸೇವಿಸಬಾರದು, ತುಪ್ಪ ಸಕ್ಕರೆ ಇವುಗಳೊಂದಿಗೇನೇ ಅನ್ನವನ್ನು ಊಟಮಾಡಬೇಕು, ಆದರೆ ಸಿಹಿಯಾದ ಮೊಸರನ್ನು ಊಟವಾಡಬಹುದು, ಕಾಡುಮೃಗಗಳ ಮಾಂಸವನ್ನು ತುಪ್ಪದೊಂದಿಗೆ ಪಕ್ವಮಾಡಿ ತಿನ್ನಬಹುದು, ಚನ್ನಾಗಿ ಜಠರಾಗ್ನಿಪಾಟವ ಉಂಟಾದ ಮೇಲೆ ಸಾಯಂಕಾಲದ ಊಟದಲ್ಲಿ ಹಾಲುಅನ್ನವನ್ನು ಉಪಯೋಗಿಸಬಹುದು. ಸಂಜಿಕೊಳ್ಳುವುದಕ್ಕೆ ತುಪ್ಪದಲ್ಲಿ ಮಾಡಿದ ಹೆಸರುವಡೆಗಳನ್ನು ಉಪಯೋಗಿಸಬಹುದು, ಎಳ್ಳು ಮತ್ತು ನೆಲ್ಲಿಯ ಒಣಕಾಯಿ ಇವುಗಳನ್ನು ಅರದು ತಲೆಗೆ ತಿಕ್ಕಿಕೊಂಡಾಗಲಿ ತುಪ್ಪವನ್ನು ತಲೆಗೆ ತಿಕ್ಕಿಕೊಂಡಾಗಲಿ ಬಿಸಿನೀರು ಸ್ನಾನವನ್ನು ಅಭ್ಯಂಜನಸ್ನಾನವನ್ನು ಸದಾ ಮಾಡಬೇಕು. ಎಣ್ಣೆ, ಬಿಲ್ವದಕಾಯಿ, ಹಾಗಲಕಾಯಿ, ಬದನೆಯಕಾಯಿ, ವಿನಾನು ಹುಣಿಸೆಯಹುಳಿ, ಹೆಚ್ಚಿಗೆ ವ್ಯಾಯಾಮ, ಸ್ತ್ರೀಸಂಗ, ಮದ್ಯ, ಇಂಗು, ಶುಂಠಿ, ಉದ್ದು, ಮಸೂರ ಎಂಬ ಒಂದು ಬಗೆಯ ತೊಗರಿಯ ಬೇಳೆ, ಕುಂಬಳಕಾಯಿ, ಸಾಸುವೆ, ಶಿಟ್ಟುಮಾಡುವುದು, ಕಾಂಜಿಕವೆಂಬ ಹುಳ್ಳದ ಗಂಜಿ ನೀರು ಇವುಗಳನ್ನೆಲ್ಲಾ ಪೂರ್ತಿ ಬಿಟ್ಟುಬಿಡಬೇಕು, ಹಗಲು ನಿದ್ರೆಯನ್ನೂ ಕಂಚಿನ ಪಾತ್ರೆಯಲ್ಲಿ ಭೋಜನಮಾಡುವುದನ್ನೂ ಸಹ ಬಿಡಬೇಕು. ಕ ಎಂಬ ಅಕ್ಷರದಿಂದ ಮೊದಲಾಗುವ ಎಲ್ಲಾ ತರ್ಕಾರಿಗಳು ಹಣ್ಣುಗಳು ಇವುಗಳನ್ನು ಬಿಡಬೇಕು, ಈ ರೀತಿಯಾದ ಪಥ್ಯವನ್ನು ನಡೆಯಿಸುತ್ತ ಶುಭನಕ್ಷತ್ರ ಶುಭವಾರಗಳಲ್ಲಿ ಇಷ್ಟದೇವತಾಪೂಜೆ ಮಾಡಿ ದಾನಾದಿಗಳನ್ನೂ ಬ್ರಾಹ್ಮಣಭೋಜನವನ್ನೂ ಮಾಡಿಸಿ ಬೆಳಗಿನ ಎರಡು ಗಳಿಗೆಯೊಳಗಾಗಿ ಈ ರಸವನ್ನು ಉಷ್ಣವಿಧಾದೊಡನೆ ಸೇವಿಸಬೇಕು. ಜ್ಯೋತಿಷ ಶಾಸ್ತ್ರದಲ್ಲಿ ಹೇಳಿರುವಂತೆ ತನಗೆ ತಾರಾಚಂದ್ರ ಬಲಗಳು ಅನುಕೂಲವಾಗಿರುವ ಶುಕ್ಲಪಕ್ಷದಲ್ಲಿಯೇ ಒಂದು ದಿವಸವನ್ನು ಚುನಾಯಿಸಿಕೊಳ್ಳಬೇಕು, ಈ ರಸಸೇವನೆಯಿಂದ ದೇಹದಲ್ಲಿ ತಾಪವುಂಟಾಗುವುದಾದರೆ ಅಮೃತಬಳ್ಳಿಯ ಸತ್ವ, ವಂಶರೋಚನ, ಸಕ್ಕರೆ ಇವುಗಳನ್ನು ಕೂಡಿಸಿ ಸೇವಿಸಬೇಕು. ಖರ್ಜೂರದ ಹಣ್ಣು, ದ್ರಾಕ್ಷಿ, ದಾಳಿಂಬರದ ಹಣ್ಣು, ಕಬ್ಬು, ಇವುಗಳನ್ನು ತಿನ್ನಬಹುದು, ಬಾಯಿರುಚಿ ಸರಿಯಾಗುವುದಕ್ಕಾಗಿ ಕೊತ್ತುಂಬರಿ ಬೀಜವನ್ನು ತುಪ್ಪದಲ್ಲಿ ಹುರಿದು ಚನ್ನಾಗಿ ಪುಡಿಮಾಡಿ ಸಕ್ಕರೆ ಬೆರಸಿ ಕೊಡಬಹುದು, ಜ್ವರನಿವೃತ್ತಿಗಾಗಿ ಕೊತ್ತುಂಬರಿಬೀಜ, ಅಮೃತಬಳ್ಳಿ, ಇವುಗಳ ಕಷಾಯವನ್ನೋ, ಲಾಮಂಚ, ಆಡುಸೋಗೆ ಇವುಗಳ ಕಷಾಯವನ್ನೋ ಜೇನು ತುಪ್ಪ ಮತ್ತು ಸಕ್ಕರೆಯೊಡನೆ ಸೇರಿಸಿ ಕೊಡಬಹುದು. ರಕ್ತಪಿತ್ತವೆಂದರೆ ಯಾವುದಾದರೂ ದ್ವಾರಗಳಿಂದ ರಕ್ತವು ಹೊರಬೀಳುತ್ತಿದ್ದಲ್ಲಿ, ಕಫ ಹೆಚ್ಚಾಗಿದ್ದಲ್ಲಿ,

ಶ್ವಾಸರೋಗ, ನಿದ್ರೆಬಾರದಿರುವುದು, ಭೇದಿ ಇರುವುದು, ಗ್ರಹಣಿ, ಅಗ್ನಿಮಾಂದ್ಯ ಇವುಗಳಿದ್ದರೆ ಭಂಗಿಯ ಸೊಪ್ಪನ್ನು ಚನ್ನಾಗಿ ಹುರಿದು ಪುಡಿಮಾಡಿ ಯುಕ್ತ ಪ್ರಮಾಣದಲ್ಲಿ ರಾತ್ರಿಹೊತ್ತು ಕೊಡಬಹುದು. ಅಜೀರ್ಣದ ಹೊಟ್ಟೆಶೂಲೆ ಯಿದ್ದರೆ ಸೌವರ್ಚಲವಣ, ಅಳಲೇಕಾಯಿ, ಹಿಪ್ಪಲಿ ಇವುಗಳ ಚೂರ್ಣವನ್ನು ಬಿಸಿನೀರಿನೊಂದಿಗೆ ಕೊಡಬೇಕು, ಜ್ವರವಿದ್ದರೆ ಜೇನುತುಪ್ಪದೊಡನೆ ಹಿಪ್ಪಲಿಯ ಚೂರ್ಣವನ್ನು ಕೊಡಬೇಕು ಪ್ಲಿಹಾಭಿವೃದ್ಧಿಯಿಂದ ಸಂಭವಿಸುವ ಉದರ ರೋಗ, ವಾತರಕ್ತ, ವಮನ, ಮೂಲವ್ಯಾಧಿ, ಇವುಗಳಲ್ಲಿಯೂ ಹಿಪ್ಪಲಿಯ ಚೂರ್ಣವೇ ಹಿತಕರವಾದದ್ದು, ಮೂಗಿನಲ್ಲಿ ರಕ್ತ ಬರುತ್ತಿದ್ದರೆ ದಾಳಿಂಬರೀ ಹುವ್ವಿನ ರಸ, ಗರಿಕೆಯಹುಲ್ಲಿನ ರಸ, ಇವುಗಳ ಜೊತೆಗೆ ಸಕ್ಕರೆಯನ್ನು ಸೇರಿಸಿ ನಸ್ಯಮಾಡಿಸಬೇಕು. ಬೋರೆಯ ಪಪ್ಪು, ಹಿಪ್ಪಲಿ, ನವಿಲುಗರಿಯ ಬೂದಿ, ಇವುಗಳ ಜೊತೆಗೆ ಸಕ್ಕರೆಯನ್ನು ಬೆರಸಿ ವಾಂತಿ ಬಿಕ್ಕಳಿಕೆ ಇದ್ದಲ್ಲಿ ಜೇನುತುಪ್ಪ ದಲ್ಲಿ ಕಲೆಸಿ ನೆಕ್ಕಿಸಬೇಕು ಇದೇ ಕ್ರಮವನ್ನೇ ಮೃಗಾಂಕಪೋಟಲಿ ರಸ, ಹೇಮಗರ್ಭಪೋಟಲಿ ರಸ, ಮೌಕ್ತಿಕರಸ, ಮೊದಲಾದ ರಸಗಳನ್ನು ಸೇವಿಸುವಾಗ್ಯೆ ಅನುಸರಿಸಬೇಕು, ಈ ಕ್ರಮದಲ್ಲಿ ಲೋಕನಾಥರಸವನ್ನು ಸೇವಿಸಿದರೆ ಸಮಸ್ತ ರೋಗಗಳನ್ನೂ ಗುಣಪಡಿಸಿಕೊಳ್ಳಬಹುದು.

ವರಾಟಭಸ್ಮ ಮಂಡೂರಂ ಚೂರ್ಣಯಿತ್ವಾಘೃತೇಪಚೇತ್ ॥ ೮೩ ॥
ತತ್ಸಮಂಮರಿಚಂಚೂರ್ಣಂನಾಗವಲ್ಯಾವಿಭಾವಿತಂ ॥
ತಚ್ಚೂರ್ಣಂಮಧುನಾಲೇಹ್ಯಮಥವಾನವನೀತಕೈಃ ॥ ೮೪ ॥
ಮಾಷಮಾತ್ರಂಕ್ಷಯಂಹಂತಿಯಾಮೋಯಾಮೋಚಭಕ್ಷಿತಂ ॥
ಲೋಕನಾಥರಸೋಹ್ಯೇಷಮಂಡಲಾದ್ರಾಜಯಕ್ಷ್ಮನುತ್ ॥ ೮೫ ॥

ಇನ್ನೊಂದು ಪ್ರಕಾರವಾಗಿ ಲೋಕನಾಥರಸವನ್ನು ನಿರ್ಮಿಸುವ ಕ್ರಮವನ್ನು ಹೇಳುತ್ತಾನೆ—ಕವಡೆಯ ಭಸ್ಮ ಮಂಡೂರಭಸ್ಮ, ಇವೆರಡನ್ನೂ ಸಮಪರಿ ಮಾಣದಲ್ಲಿ ಸೇರಿಸಿ ತುಪ್ಪದಲ್ಲಿ ಚನ್ನಾಗಿ ಪಕ್ವಮಾಡಬೇಕು, ಇದರಷ್ಟೇ ಮೆಣ ಸಿನ ಕಾಳಿನ ಚೂರ್ಣವನ್ನು ಇದರೊಂದಿಗೆ ಸೇರಿಸಿ ವೀಳ್ಯದೆಲೆಯ ರಸದಲ್ಲಿ ಭಾವನೆಕೊಡಬೇಕು, ಈ ರೀತಿ ಸಿದ್ಧವಾದ ಚೂರ್ಣವನ್ನು ಜೇನಿನೊಡನಾಗಲಿ ಬೆಣ್ಣೆಯೊಡನಾಗಲಿ ಒಂದು ಮಾಷ ಪರಿಮಾಣದಷ್ಟನ್ನು ಒಂದು ಮಂಡಲಕಾಲ ಬಿಡದೆ ಸೇವಿಸಬೇಕು ಅವಶ್ಯಕವಿದ್ದಂತೆ ಪ್ರತಿದಿವಸವೂ ಎಷ್ಟು ಸಾರಿಯಾದರೂ ಸೇವಿಸಬಹುದು, ಈ ಕ್ರಮದಿಂದ ಸೇವಿಸಿದರ ಕ್ಷಯರೋಗವನ್ನು ಸಹ ಗೆಲ್ಲಬಹುದು.

ಭೂರ್ಜಪತ್ರಸಮಪತ್ರಾಣಿಹೇಮ್ನಸ್ಸೂಕ್ಷ್ಮಾಣಿಕಾರಯೇತ್ ॥
ತುಲ್ಯಾನಿತಾನಿಸೂತೇನಖಲ್ವೇಕ್ಷಿಪ್ತ್ವಾವಿಮರ್ದಯೇತ್ ॥ ೮೬ ॥
ಕಾಂಚನಾರರಸೇನೈವಜ್ವಾಲಾಮುಖ್ಯಾರಸೇನಚ ॥
ಲಾಂಗಲ್ಯಾವಾರಸೈಸ್ತ್ವಾವದ್ಯಾವದ್ಭವತಿಪಿಷ್ಟಿಕಾ ॥ ೮೭ ॥
ತತೋಹೇಮ್ನಶ್ಚತುರ್ಥಾಂಶಂಟಂಕಣಂತತ್ರನಿಕ್ಷಿಪೇತ್ ॥
ಪಿಷ್ಟಮೌಕ್ತಿಕಚೂರ್ಣಂಚಹೇಮದ್ವಿಗುಣಮಾವಪೇತ್ ॥ ೮೮ ॥
ತೇಷುಸರ್ವಸಮಂಗಂಧಂಕ್ಷಿಪ್ತ್ವಾಚೈಕತ್ರಮರ್ದಯೇತ್ ॥
ತೇಷಾಂಕೃತ್ವಾತತೋಗೋಳಂವಾಸೋಭಿಃಪರಿವೇಷ್ಟಯೇತ್ ।೮೯।
ಪಶ್ಚಾನ್ಮೃದಾವೇಷ್ಟಯಿತ್ವಾಶೋಷಯಿತ್ವಾಚಧಾರಯೇತ್ ॥
ಶರಾವಸಂಪುಟೇಸ್ಥಾಪ್ಯಂತಸ್ತತ್ರಮುದ್ರಾಂಪ್ರದಾಪಯೇತ್ ॥ ೯೦ ॥
ಲವಣಾಪೂರಿತೇಭಾಂಡೇಧಾರಯೇತ್ತಂಚಸಂಪುಟಂ ॥
ಮುದ್ರಾಂದತ್ವಾಶೋಷಯಿತ್ವಾಬಹುಭಿರ್ಗೋಮಯೈಃಪುಟೇತ್ ॥ ೯೧ ॥
ತತಶ್ಶೀತೇಸಮಾಹೃತ್ಯಗಂಧಂಸೂತಸಮಂಕ್ಷಿಪೇತ್ ॥
ಘೃಷ್ಟ್ವಾಚಪೂರ್ವವತ್ ಖಲ್ವೇಪುಟೇದ್ಗಜಪುಟೇನಚ ॥ ೯೨ ॥
ಸ್ವಾಂಗಶೀತಂತತೋನೀತ್ವಾಗುಂಜಾಯುಗ್ಮಂಪ್ರಯೋಜಯೇತ್
ಅಷ್ಟಭಿರ್ಮರಿಚೈರ್ಯುಕ್ತಃಕಣಾಂ ... ಯುತೋಥವಾ ॥ ೯೩ ॥
ವಿಲೋಕ್ಯದೇಯೋದೋಷಾದೀನ್ ಕೈಕಾರಸರಕ್ತಿಕಾ ॥
ಸರ್ಪಿಷಾಮಧುನಾವಾಪಿದದ್ಯಾದ್ದೋಷಾದ್ಯಪೇಕ್ಷಯಾ ॥ ೯೪ ॥
ಲೋಕನಾಥಸಮಂ ಪಥ್ಯಂ ಕುರ್ಯಾತ್ ಸ್ವಸ್ಥಮನಾಶ್ಶುಚಿಃ ॥
ಶ್ಲೇಷ್ಮಾಣಂಗ್ರಹಣೀಂಕಾಸಂಶ್ವಾಸಂಕ್ಷಯಮರೋಚಕಂ ॥ ೯೫ ॥
ಮೃಗಾಂಕೋಯಂರಸೋಹನ್ಯಾತ್ಕೃಶತ್ವಂಬಲಹೀನತಾಂ ॥

ಮೃಗಾಂಕಪೋಟಲಿ ರಸವನ್ನು ನಿರ್ಮಿಸುವ ಕ್ರಮವನ್ನು ಹೇಳುತ್ತಾನೆ— ಬಂಗಾರವನ್ನು ಪ್ರಮಾಣಕ್ಕೆ ಚನ್ನಾಗಿ ಶುದ್ಧಿಮಾಡಿ ಬಹಳ ತೆಳ್ಳಗೆ ಅಂದರೆ ಬುಜ ಪತ್ರೆಯ ಹಾಗೆ ತಗಡನ್ನು ಮಾಡಿಸುವುದು ಆ ತಗಡುಗಳನ್ನು ಮತ್ತು ಅದರಷ್ಟೇ ಗಂಧಕವನ್ನು ಸೇರಿಸಿ ಕಲಬತ್ತಿನಲ್ಲಿ ಕಂಚಿವಾಳದ ರಸದಲ್ಲಿಯಾಗಲಿ ಜ್ವಾಲಾ ಮುಖಿ ಎಂಬ ಮೂಲಿಕೆಯ ರಸದೊಡನಾಗಲೀ ಲಾಂಗಲಿ ಅಂದರೆ ಕೋಳಿಕುಕ್ಕಿನ ಗೆಡ್ಡೆಯ ರಸದಲ್ಲಿಯಾಗಲಿ ಚನ್ನಾಗಿ ಹಿಟ್ಟಿನಂತಾಗುವ ವರೆಗೂ ಅರೆಯಬೇಕು, ನಂತರ ಅದರಲ್ಲಿ ಬಂಗಾರದ ನಾಲ್ಕನೆಯ ಒಂದಂಶದಷ್ಟು ಶುದ್ಧವಾದ ಟಂಕಣ ಕ್ಷಾರವನ್ನು ಬಂಗಾರದ ಎರಡರಷ್ಟು ಶುದ್ಧವಾದ ಮುತ್ತಿನ ಚೂರ್ಣವನ್ನೂ

ಇವೆಲ್ಲವೂ ಕೂಡಿದರೆ ಎಷ್ಟಾಗುತ್ತದೋ ಅಷ್ಟು ಗಂಧಕವನ್ನೂ ಸೇರಿಸಿ ಒಂದು ಮಾಡಿ ಅರೆಯಬೇಕು, ಚನ್ನಾಗಿ ಅರೆದು ಒಂದು ಉಂಡೆಯನ್ನು ಮಾಡಿ ಒಣಗಿಸಿ ಅದರ ಮೇಲೆ ಬಟ್ಟೆಯನ್ನು ಸುತ್ತಬೇಕು, ಆ ಬಟ್ಟೆಯ ಮೇಲೆ ಜೇಡಿಮಣ್ಣನ್ನು ಸವರಿ ಚನ್ನಾಗಿ ಒಣಗಿಸಿ ಇರಿಸಿಕೊಳ್ಳಬೇಕು. ಈ ಉಂಡೆಯನ್ನು ಒಂದು ಶ್ರಾವೆಯಲ್ಲಿರಿಸಿ ಮೇಲೆ ಒಂದು ಸಣ್ಣ ಶ್ರಾವೆಯನ್ನು ಮುಚ್ಚಿ ಸೀಲುಮಾಡಬೇಕು ಅಂದರೆ ಜೇಡಿಮಣ್ಣಿನಿಂದ ಉಸಿರಾಡದಂತೆ ಮೆತ್ತಬೇಕು. ಒಂದು ಮಡಿಕೆಯಲ್ಲಿ ಉಪ್ಪನ್ನು ತುಂಬಿ ಅದರಲ್ಲಿ ಈ ಶ್ರಾವೆಯನ್ನಿರಿಸಿ ಉಸಿರಾಡದಂತೆ ಮುಚ್ಚಿ ಒಂದು ಮಾಡಿ ಒಣಗಿಸಿ ಕಾಡುಬೆರಣಿಯನ್ನು ಕೂಡಿಸಿ ಅದರಲ್ಲಿ ಈ ಮಡಕೆಯನ್ನು, ಮುಚ್ಚಿ ಪುಟಕೊಡಬೇಕು, ನಂತರ ತಣ್ಣಗಾಗುವ ವರೆವಿಗೂ ಬಿಟ್ಟು ತಣ್ಣಗಾದ ಮೇಲೆ ತೆಗೆದುಕೊಂಡು ಆ ಉಂಡೆಯನ್ನು ಅದರಲ್ಲಿ ಸೇರಿರುವ ರಸದಷ್ಟು ಗಂಧಕ ವನ್ನು ಸೇರಿಸಿ ಮತ್ತೆ ಅರೆಯಬೇಕು, ಒಂದು ಶ್ರಾವೆಯಲ್ಲಿ ಹಾಕಿ ಮೇಲೆ ಮುಚ್ಚಿ ಚನ್ನಾಗಿ ಉಸಿರಾಡದಂತೆ ಒಂದುಮಾಡಿ ಕಾಡುಬೆರಣಿಯ ಗಜಪುಟದಲ್ಲಿ ಪಕ್ವ ಮಾಡಬೇಕು, ಚನ್ನಾಗಿ ತಣ್ಣಗಾದ ಮೇಲೆ ಅದನ್ನು ತೆಗೆದು ಇರಿಸಿಕೊಳ್ಳಬೇಕು. ಇಲ್ಲಿಗೆ ರಸವು ಸಿದ್ಧವಾದ ಹಾಗಾಯಿತು. ಈ ರೀತಿ ಸಿದ್ಧವಾದ ರಸವನ್ನು ಎರಡು ಗುಲಗಂಜಿಯ ಪ್ರಮಾಣ ಎಂಟು ಮೆಣಸಿನ ಕಾಳಿನೊಡನಾಗಲಿ ಮೂರು ಹಿಪ್ಪಲಿಯ ಕೊನೆಯೊಡನಾಗಲಿ ತುಪ್ಪದೊಡನೆಯಾಗಲಿ ಜೇನುತುಪ್ಪದೊಡನೆ ಯಾಗಲಿ ಪ್ರಕುಪಿತವಾಗಿರುವ ದೋಷಗಳ ಸ್ವರೂಪ ಬಲಾಬಲಗಳನ್ನು ವಿಚಾರ ಮಾಡಿಕೊಂಡು ಕೊಡಬೇಕು, ಲೋಕನಾಥರಸಕ್ಕೆ ಹೇಳಿರುವಂತೆಯೇ ಇದಕ್ಕೂ ಪಥ್ಯವನ್ನು ನಡೆಸಬೇಕು, ಶ್ಲೇಷ್ಮ ಪ್ರಕೋಪ, ಗ್ರಹಣಿ ಎಂಬ ಭೇದಿ, ಕೆಮ್ಮು, ಉಬ್ಬಸ, ಕ್ಷಯರೋಗ. ಅರುಚಿ, ದೇಹವು ಕೃಶವಾಗುವುದು, ಬಲಹಾನಿ, ಇವು ಗಳನ್ನೆಲ್ಲಾ ಈ ರಸವು ಗುಣಪಡಿಸುತ್ತದೆ.

ಸೂತಾತ್ಪಾದಪ್ರಮಾಣೇನಹೇಮ್ನಃಪಿಷ್ಟಂಪ್ರಕಲ್ಪಯೇತ್ ॥ ೯೬ ॥
ತಯೋಸ್ಸ್ಯಾದ್ದ್ವಿಗುಣೋಗಂಧೋಮರ್ದಯೇತ್ಕಾಂಚನಾರಕೈಃ ॥
ಕೃತ್ವಾಗೋಳಂಕ್ಷಿಪೇನ್ಮೂಷಾಸಂಪುಟೇಮುದ್ರಯೇತ್ತತಃ ॥೯೭॥
ಪಚೇದ್ಭೂಧರಯಂತ್ರೇಣವಾಸರತ್ರಿತಯಂಬುಧಃ ॥
ತತಉದ್ಧೃತ್ಯತತ್ಸರ್ವಂದದ್ಯಾದ್ಗಂಧಂಚತತ್ಸಮಂ ॥ ೯೮ ॥
ಮರ್ದಯೇದಾರ್ದ್ರಕಳರಸ್ಯೈಶ್ಚಿತ್ರಕಸ್ವರಸೇನಚ ॥
ಸ್ಥೂಲಪೀತವರಾಟಾಂಶ್ಚಪೂರಯೇತ್ತೇನಯುಕ್ತಿತಃ ॥ ೯೯ ॥
ಏತಸ್ಮಾದೌಷಧಾತ್ಕುರ್ಯಾದಷ್ಟಮಾಂಶೇನಟಂಕಣಂ ॥
ಟಂಕಣಾರ್ಧಂವಿಷಂದತ್ವಾಪಿಷ್ಟ್ವಾಸೇಹುಂಡದುಗ್ಧಕೈಃ ॥ ೧೦೦ ॥

ಮುದ್ರಯೇತ್ತೇನಕಲ್ಕೇನವರಾಟಾನಾಂಮುಖಾನಿಚ ॥
ಭಾಂಡೇಚೂರ್ಣಪ್ರಲಿಪ್ತೇಚಧೃತ್ವಾಮುಗ್ರಾಂಪ್ರದಾಪಯೇತ್
॥ ೧೦೧ ॥
ಗರ್ತೇಹಸ್ತೋನ್ಮಿತೇಧೃತ್ವಾಪುಟೇದ್ಗಜಪುಟೇನಚ ॥
ಸ್ವಾಂಗಶೀತಂರಸಂಜ್ಞಾತ್ವಾಪ್ರದದ್ಯಾಲ್ಲೋಕನಾಥವತ್ ॥ ೧೦೨ ॥
ಪಥ್ಯಂಮೃಗಾಂಕವದ್ಜ್ಞೇಯಂತ್ರಿದಿನಂಲವಣಂತ್ಯಜೇತ್ ॥
ಯದಾಘರ್ಮೋಭವೇತ್ತಸ್ಯದದ್ಯಾಚ್ಛಿನ್ನಾಶೃತಂತದಾ ॥ ೧೦೩ ॥
ಮಧುಯುಕ್ತಂತಥಾಶ್ಲೇಷ್ಮಕೋಪೇದದ್ಯಾದ್ಗುಡಾದ್ರಕಂ ॥
ವಿರೇಕೇಭರ್ಜಿತಾಭಂಗಾಪ್ರದೇಯಾಂಧಿಸಂಯುತಾ ॥ ೧೦೪ ॥
ಜಯೇತ್ಕಾಸಂಕ್ಷಯಂಶ್ವಾಸಂಗ್ರಹಣೀಮರುಚಿಂತಥಾ ॥
ಅಗ್ನಿಂಚಕುರುತೇದೀಪ್ತಂಕಫವಾತಂನಿಯಚ್ಛತಿ ॥ ೧೦೫ ॥
ಹೇಮಗರ್ಭಃಪರೋಜ್ಞೇಯಃರಸಃಪೋಟಲಿಕಾಭಿಧಃ ॥

ಹೇಮಗರ್ಭಪೋಟಲೀ ರಸವನ್ನು ನಿರ್ಮಿಸುವ ಕ್ರಮವನ್ನು ಹೇಳುತ್ತಾರೆ-ಶುದ್ಧವಾದ ಪಾದರಸದ ನಾಲ್ಕನೆಯ ಒಂದು ಭಾಗದಷ್ಟು ಶುದ್ಧವಾದ ಬಂಗಾರವನ್ನು ಹಿಟ್ಟಿನಂತೆ ಸಣ್ಣಗೆ ಪುಡಿಮಾಡಿ ಇರಿಸಿಕೊಳ್ಳುವುದು, ರಸ ಮತ್ತು ಬಂಗಾರಗಳಿಗೆ ದ್ವಿಗುಣವಾಗಿ ಶುದ್ಧವಾದ ಗಂಧಕವನ್ನು ಸೇರಿಸಿಕೊಂಡು ಇವೆಲ್ಲವನ್ನೂ ಖಲ್ವದಲ್ಲಿ ಹಾಕಿ ಕಮಲಪಾಳದ ತೊಪ್ಪೆಯ ರಸದೊಡನೆ ಚನ್ನಾಗಿ ಅರದು ಗೋಲಿಯ ಹಾಗೆ ಒಂದು ಉಂಡೆಯನ್ನು ಮಾಡುವುದು, ಅದನ್ನೊಂದು ಮೂಸಯಲ್ಲಿರಿಸಿ ಮೇಲೆ ಮುಚ್ಚಿ ಸಂದಿಲ್ಲದಂತೆ ಉಸಿರಾಡದಂತೆ ಚೀಲಮಣ್ಣು ಮಾಡುವುದು, ಈ ರೀತಿ ಮಾಡಿದ ಮೂಸೆಯನ್ನು ರಸಶಾಸ್ತ್ರದಲ್ಲಿ ಹೇಳಿರುವ ಭೂಧರಯಂತ್ರದಲ್ಲಿರಿಸಿ ಮೂರು ದಿವಸ ಕಾಡುಬೆರಣಿಯನ್ನು ಉರಿಸಬೇಕು. ತಣ್ಣಗಾದ ಮೇಲೆ ತಗೆದು ಆ ಗೋಲಿಯನ್ನು ಪುನಃ ಖಲ್ವದಲ್ಲಿ ಹಾಕಿ ಅದರಷ್ಟೇ ಗಂಧಕವನ್ನು ಸೇರಿಸಿಕೊಂಡು ಹಸೀಸುಂಟಿಯ ರಸ, ಚಿತ್ರಮೂಲದ ರಸ ಇವುಗಳಿಂದ ಚನ್ನಾಗಿ ಅರಯಬೇಕು, ಅರದದ್ದನ್ನು ದಪ್ಪವಾದ ಹಳದೀ ಬಣ್ಣದ ಕವಡಗೆ ತುಂಬಬೇಕು. ಈ ರೀತಿ ತುಂಬಿ ಇದರ ಎಂಟನೆಯ ಒಂದು ಭಾಗ ಟಂಕಣಕ್ಷಾರವನ್ನೂ, ಟಂಕಣಕ್ಷಾರದ ಅರ್ಧದಷ್ಟು ವತ್ಸನಾಭಿಯನ್ನೂ ಸೇರಿಸಿ ಕಪಿಲೆಯ ಹಾಲಿನಿಂದ ಚನ್ನಾಗಿ ಅರದು ಅದರಿಂದ ಆ ಕವಡೆಯ ಮುಖವನ್ನು ಉಸಿರಾಡದಂತೆ ಮುಚ್ಚಬೇಕು, ಒಂದು ಮಡಕೆಯ ಒಳಭಾಗಕ್ಕೆಲ್ಲಾ ಸುಣ್ಣವನ್ನು ಬಳಿದು ಅದರಲ್ಲಿ ಈ ಕವಡೆಗಳನ್ನಿಟ್ಟು ಮೇಲೊಂದು ಮುಚ್ಚಳವನ್ನು ಮುಚ್ಚಿ ಉಸಿರಾಡದಂತೆ ಚೀಲಮಣ್ಣುಮಾಡಿ ಒಂದು ತೋಳುದ್ದ ಗುಂಡಿಯಲ್ಲಿರಿಸಿ ಮೇಲೆ ಕಾಡುಬೆರಣಿಯಿಂದ ಗಜಪುಟವನ್ನು ಕೊಡಬೇಕು ನಂತರ ಸ್ವಾಂಗಶೀತವಾದ ಮೇಲೆ

ತೆಗದಿರಿಸಿಕೊಳ್ಳಬೇಕು, ಇಲ್ಲಿಗೆ ಹೇಮಗರ್ಭಪೋಟಲೀರಸವು ಸಿದ್ಧವಾದ ಹಾಗಾಯಿತು. ಲೋಕನಾಥರಸವನ್ನು ಕೊಡುವಂತೆಯೇ ಇದನ್ನೂ ಸಮಸ್ತ ರೋಗಗಳಿಗೂ ಅನುಪಾನ ಭೇದದಿಂದ ಕೊಡುತ್ತ ಬರಬೇಕು, ಮೃಗಾಂಕ ಪೊಟಲೀರಸ ಪ್ರಯೋಗಕಾಲದಲ್ಲಿ ಯಾವ ರೀತಿ ಪಥ್ಯವನ್ನು ನಡೆಯಿಸು ತ್ತಾರೆಯೋ ಅದರಂತೆ ಪಥ್ಯ ನಡೆಯಿಸಬೇಕು. ಮೂರು ದಿವಸ ಮೊದಲು ಉಪ್ಪನ್ನು ವರ್ಜ್ಯ-ಮಾಡಿ ಸಪ್ಪೆಯನ್ನೇ ಉಣ್ಣಬೇಕು, ಈ ರಸವನ್ನು ಸೇವಿಸುವ ಕಾಲದಲ್ಲಿ ವಮನ ಪ್ರಾರಂಭವಾದರೆ ಅಥವಾ ವಮನವಾಗುವ ಲಕ್ಷಣಗಳು ತೋರಿದರೆ ಅಮೃತಬಳ್ಳಿಯ ಕಷಾಯವನ್ನು ಮಾಡಿ ಅದರೊಂದಿಗೆ ಜೇನುತುಪ್ಪ ವನ್ನು ಸೇರಿಸಿ ಕಡಿಯಲು ಕೊಡಬೇಕು, ಶ್ಲೇಷ್ಮಪ್ರಕೋಪವಾದಂತೆ ತೋರಿದರೆ ಹಸೀಮಂಟಿಯನ್ನು ಕೊಂಚ ಬೆಲ್ಲದೊಂದಿಗೆ ಕೂಡಬೇಕು, ಭೇದಿಯಾಗುವುದಕ್ಕೆ ಪ್ರಾರಂಭವಾದರೆ ಭಂಗಿಯಸೊಪ್ಪನ್ನು ಶುದ್ಧಿಪಡಿಸಿಕೊಂಡು ತುಪ್ಪದಲ್ಲಿ ಹುರಿದು ಚೂರ್ಣಮಾಡಿ ಮೊಸರಿನ ಜೊತೆಯಲ್ಲಿ ಕೊಡಬೇಕು, ಈ ರೀತಿಯಿಂದ ಸೇವಿಸುತ್ತ ಬಂದಲ್ಲಿ ಹಳೆಯಕೆಮ್ಮು, ಕ್ಷಯರೋಗ, ಉಬ್ಬಸ, ಗ್ರಹಣಿ ಎಂಬ ಭೇದಿ, ಅರುಚಿ, ಇವುಗಳನ್ನು ಗೆಲ್ಲುತ್ತದೆ, ಅಗ್ನಿವೃದ್ಧಿಯನ್ನುಂಟುಮಾಡಿ ಕಫ ಪ್ರಕೋಪ ವಾತಪ್ರಕೋಪಗಳಿಂದ ಉತ್ಪನ್ನಗಳಾದ ಸಮಸ್ತ ರೋಗಗಳನ್ನೂ ನಿವಾರಣವಾಡುತ್ತದೆ

ರಸಸ್ಯಭಾಗಾಶ್ಚತ್ವಾರಸ್ತಾವಂತಃಕನಕಸ್ಯಚ ॥ ೧೦೬ ॥
ತಯೋರ್ಶ್ಚಪಿಷ್ಟಿಕಾಂ ಕೃತ್ವಾಗಂಧೋದ್ವಾದಶಭಾಗಿಕಃ ॥
ಕುರ್ಯಾತ್ಕಜ್ಜಲಿಕಾಂತೇಷಾಂ ಮುಕ್ತಾಭಾಗಾಶ್ಚಷೋಡಶ ॥೧೦೭॥
ಚತುರ್ವಿಂಶಚ್ಚಶಂಖಸ್ಯಭಾಗೈಕಂಟಂಕಣಸ್ಯಚ ॥
ಏಕತ್ರಮರ್ದಯೇತ್ಸರ್ವಂ ಪಕ್ವನಿಂಬುಕಜೈರಸೈಃ ॥ ೧೦೮ ॥
ಕೃತ್ವಾತೇಷಾಂತತೋಗೋಳಂ ಮೂಷಾಸಂಪುಟಕೇನ್ಯಸೇತ್ ॥
ಮುದ್ರಾಂದತ್ವಾತತೋಹಸ್ತಮಾತ್ರೇಗರ್ತೇಚಗೋಮಯೈಃ
॥ ೧೦೯ ॥
ಪುಟೇದ್ಗಜಪುಟೇನೈವಸ್ವಾಂಗಶೀತಂಸಮುದ್ಧರೇತ್ ॥
ಪಿಷ್ಟ್ವಾತಂಜಾತಕಮರ್ಣನಂದದ್ಯಾದ್ಗವ್ಯಾಜ್ಯಸಂಯುತಂ।೧೧೦।
ಏಕೋನತ್ರಿಂಶದುನ್ಮಾನಮರಿಚೈಸ್ಸಹದೀಯತೇ ॥
ರಾಜತೇಪ್ಯನ್ನಯೋ ಮಾತ್ರಕಾಚಜೇವಾವಲೇಹಯೇತ್ ॥ ೧೧೧ ॥
ಲೋಕನಾಥಸಮಂಪಥ್ಯಂಕುರ್ಯಾಚ್ಚಸ್ವಸ್ಥಮಾನಸಃ ॥
ಕಾಸೇಶ್ವಾಸೇಕ್ಷಯೇವಾತೇಕಫೇಗ್ರಹಣಿಕಾಗದೇ ॥ ೧೧೨ ॥
ಅತೀಸಾರೇಪ್ರಯೋಕ್ತವ್ಯಾಪೋಟ್ಟಲೀಹೇಮಗರ್ಭಿತಾ ॥

ಇನ್ನೊಂದು ವಿಧದ ಹೇಮಗರ್ಭಪೋಟಲೀ ರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸ ನಾಲ್ಕು ಭಾಗ, ಅಷ್ಟೇ ಶುದ್ಧವಾದ ಭಂಗಾರದ ರವೆ, ಇವೆರಡನ್ನೂ ಮೊದಲು ಕೂಡಿಸಿ ಅರೆಯಬೇಕು, ನಂತರ ಹನ್ನೆರಡರಷ್ಟು ಗಂಧಕವನ್ನು ಸೇರಿಸಿ ಇವು ಮೂರನ್ನೂ ಅರದು ಕಪ್ಪಾದ ಕಾಡಿಗೆಯಂತಹ ಪುಡಿಯನ್ನು ಮಾಡಬೇಕು, ನಂತರ ಶುದ್ಧವಾದ ಮುತ್ತಿನಪುಡಿ ಹದಿನಾರು ಭಾಗ, ಶಂಖಭಸ್ಮ ಇಪ್ಪತ್ತನಾಲ್ಕು ಭಾಗ, ಟಂಕಣಕ್ಷಾರ ಒಂದು ಭಾಗ, ಇವೆಲ್ಲವನ್ನೂ ಸೇರಿಸಿ ನಿಂಬೇಹಣ್ಣಿನ ರಸದಲ್ಲಿ ಚನ್ನಾಗಿ ಅರೆದು ಒಂದು ದುಂಡಾದ ಗೋಲಿಯನ್ನು ಮಾಡಿ ಒಣಗಿಸಿ ಆ ಗೋಲಿಯನ್ನು ಮೂಸೆಯಲ್ಲಿರಿಸಿ ಮೇಲೊಂದು ಮೂಸೆಯನ್ನು ಮುಚ್ಚಿ ಉಸಿರಾಡದಂತ ಸೀಲುಮಣ್ಣುಮಾಡಿ ಒಂದು ಗಜದುದ್ದ ಗುಂಡಿ ತೆಗೆದು ಅದರಲ್ಲಿ ಆ ಮೂಸೆಯನ್ನಿರಿಸಿ ಮೇಲೆ ಕಾಡುಬೆರಣಿಯನ್ನು ಒಟ್ಟಿ ಗಜಪುಟಕ್ರಮದಲ್ಲಿ ಪಕ್ವಮಾಡಬೇಕು, ತಣ್ಣಗಾಗುವ ವರಿವಿಗೂ ಅಲ್ಲಿಯೇ ಬಿಟ್ಟಿದ್ದು ನಂತರ ತೆಗದುಕೊಂಡು ಮೂಸೆಯನ್ನೊಡದು ಗೋಳವನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಪುಡಿಮಾಡಬೇಕು, ಇಲ್ಲಿಗೆ ರಸವು ಸಿದ್ಧವಾದ ಹಾಗಾಯಿತು. ಇದರಲ್ಲಿ ನಾಲ್ಕು ಗುಲಗಂಜಿಯ ತೂಕವನ್ನು ಇಪ್ಪತ್ತೊಂಭತ್ತು ಮೆಣಸಿನಕಾಳಿನೊಂದಿಗೆ ಚನ್ನಾಗಿ ಪುಡಿಮಾಡಿ ರೋಗದ ಬಲಾಬಲವನ್ನು ನೋಡಿ ಸರಿಯಾದ ಪರಿಮಾಣದಲ್ಲಿ ಕೊಡಬೇಕು, ಯಾವುದಾದರೂ ದ್ರವದೊಡನೆ ಸೇರಿಸಿ ಕೊಡಬೇಕಾದಲ್ಲಿ ಬೆಳ್ಳಿಯ ಪಾತ್ರದಲ್ಲಿಯಾಗಲಿ ಮಣ್ಣಿನ ಪಾತ್ರದಲ್ಲಿಯಾಗಲಿ ಅಥವಾ ಗಾಜಿನ ಪಾತ್ರದಲ್ಲಿಯಾಗಲಿ ಸೇರಿಸಿ ಕೊಡಿಸಬೇಕು. ಲೋಕನಾಥರಸಕ್ಕೆ ಹೇಳಿದಂತೆಯೇ ಇದಕ್ಕೂ ಪಥ್ಯವನ್ನು ನಡೆಸಬೇಕು. ಕೆಮ್ಮು, ಉಬ್ಬಸ, ಕ್ಷಯರೋಗ, ವಾತರೋಗಗಳು, ಕಫರೋಗಗಳು, ಗ್ರಹಣಿ, ಅತಿಸಾರ, ಈ ರೋಗಗಳಲ್ಲೆಲ್ಲಾ ಕೊಡಬಹುದು.

ಶುದ್ಧಸೂತೋವಿಷಂಗಂಧಃಪ್ರತ್ಯೇಕಂಶಾಣಸಮ್ಮಿತಂ ॥ ೧೧೩ ॥
ಧೂರ್ತಬೀಜಂತ್ರಿಶಾಣಂಸ್ಯಾತ್ಸರ್ವೇಭ್ಯೋದ್ವಿಗುಣಾಭವೇತ್ ॥
ಹೇಮಾಹ್ವಾಕಾರಯೇದೇಷಾಂಸೂಕ್ಷ್ಮಂಚೂರ್ಣಂಪ್ರಯತ್ನತಃ ॥ ೧೧೪ ॥
ದೇಯಂಜಂಬೀರಮಜ್ಜಾಭಿರ್ಜೂರ್ಣಂಗುಂಜಾದ್ವಯೋನ್ಮಿತಂ ॥
ಆರ್ದ್ರಕಸ್ವರಸ್ಯೈವಾಪಿಜ್ವರಂಹಂತಿತ್ರಿದೋಷಜಂ ॥ ೧೧೫ ॥
ಐಕಾಹಿಕಂದ್ವ್ಯಾಹಿಕಂವಾತ್ರ್ಯಾಹಿಕಂವಾಚತುರ್ಥಕಂ ॥
ವಿಷಮಂಚಜ್ವರಂಹನ್ಯಾದ್ವಿಖ್ಯಾತೋಯಂಜ್ವರಾಂಕುಶಃ ॥ ೧೧೬ ॥

ಮಹಾಜ್ವರಾಂಕುಶರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸ, ವತ್ಸನಾಭಿ, ಗಂಧಕ, ಇವು ಮೂರೂ ಒಂದೊಂದು ತೂಕ, ಶುದ್ಧವಾದ ದತ್ತೂರೀ

ಬೀಜ ಮೂರು ತೂಕ, ಇವೆಲ್ಲವೂ ಕೂಡಿದರೆ ಎಷ್ಟಾಗುತ್ತದೋ ಅದರ ಎರಡರಷ್ಟು ಸ್ವರ್ಣಕ್ಷೀರಿ ಎಂಬ ಮೂಲಿಕೆ ಇವೆಲ್ಲವನ್ನೂ ಕೂಡಿಸಿ ಬಹಳ ಸಣ್ಣನಾದ ಪುಡಿಯಾಗುವಂತೆ ಮಾಡಿ ಇರಿಸಿಕೊಳ್ಳುವುದು, ಇದಕ್ಕೆ ಮಹಾಜ್ವರಾಂಕುಶರಸವೆಂದು ಹೆಸರು, ಈ ರಸವನ್ನು ನಿಂಬೆಯಹಣ್ಣಿನ ರಸದೊಡನೆಯಾಗಲಿ ಹಸೀ ಸುಂಟಿಯ ರಸದೊಡನೆಯಾಗಲಿ ದೋಷ ಬಲಾಬಲಗಳನ್ನು ನೋಡಿಕೊಂಡು ಕೊಡುವುದು, ಇದರಿಂದ ತ್ರಿದೋಷಜ ಜ್ವರಗಳು, ದಿನವಹಿ ಬರುವ ಜ್ವರ, ಎರಡು ದಿನಕ್ಕೊಮ್ಮೆ ಬರುವ ಜ್ವರ ಮೂರರ ಜ್ವರ, ನಾಲ್ಕರ ಜ್ವರ, ವಿಷಮಜ್ವರ, ಇವುಗಳೆಲ್ಲವೂ ನಿವಾರಣೆಯಾಗುತ್ತವೆ.

ದರದಂವತ್ಸನಾಭಂಚಮರಿಚಂಟಂಕಣಂಕಣಾಂ ॥
ಚೂರ್ಣಯೇತ್ಸಮಭಾಗೇನರಸೋಹ್ಯಾನಂದಭೈರವಃ ॥ ೧೧೭ ॥
ಗುಂಜೈಕಂವಾದ್ವಿಗುಂಜಂವಾಬಲಂಜ್ಞಾತ್ವಾಪ್ರಯೋಜಯೇತ್ ॥
ಮಧುನಾಲೇಹಯೇಚ್ಚಾನುಕುಟಜಸ್ಯಫಲಂತ್ವಚಂ ॥ ೧೧೮ ॥
ಚೂರ್ಣಿತಂಕರ್ಷಮಾತ್ರಂತುತ್ರಿದೋಷೋತ್ಥಾತಿಸಾರಜಿತ್ ॥
ದಧ್ಯನ್ನಂದಾಪಯೇತ್ಪಥ್ಯಂಗವಾಜ್ಯಂತಕ್ರಮೇವಚ ॥ ೧೧೯ ॥
ಪಿಪಾಸಾಯಾಂಜಲಂಶೀತಂವಿಜಯಾಚಹಿತಾನಿಶಿ ॥

ಆನಂದಭೈರವ ರಸವನ್ನು ಹೇಳುತ್ತಾನೆ—ಶುದ್ಧವಾದ ಇಂಗಲೀಕ ವತ್ಸನಾಭಿ ಮೆಣಸು, ಟಂಕಣಕ್ಷಾರ ಜೀಗೆ ಇವುಗಳೆಲ್ಲವನ್ನೂ ಸಮವಾದ ಪರಿಮಾಣದಲ್ಲಿ ಸೇರಿಸಿ ಚೆನ್ನಾಗಿ ಅರೆದು ಪುಡಿಮಾಡಬೇಕು, ವ್ಯಾಧಿಯ ಬಲಾಬಲಗಳನ್ನು ತಿಳಿದುಕೊಂಡು ಒಂದು ಗುಂಜಾಪ್ರಮಾಣವೂ ಎರಡು ಗುಲಗಂಜಿಯ ತೂಕವೂ ಕೊಡುತ್ತ ಬರಬೇಕು. ಅನುಪಾನವಾಗಿ ಕೊಡಸನ ಬೀಜವನ್ನೂ ಚಕ್ಕೆಯನ್ನೂ ಜೇನಿನಲ್ಲಿ ನೆಕ್ಕಿಸಬೇಕು. ಇದರ ಒಂದು ಕರ್ಷ ಪ್ರಮಾಣವು ತ್ರಿದೋಷಜನ್ಯವಾದ ಅತಿಸಾರವನ್ನು ಗುಣಪಡಿಸುತ್ತದೆ ಮೊಸರು ಅನ್ನ, ತುಪ್ಪಅನ್ನ, ಮಜ್ಜಿಗೆಅನ್ನ, ಇವುಗಳನ್ನು ಪಥ್ಯವಾಗಿ ಕೊಡಬೇಕು, ಬಾಯಾರಿಕೆಯಾದರೆ ತಣ್ಣೀರನ್ನು ಕೊಡಬಹುದು, ರಾತ್ರಿ ನಿದ್ರೆಹತ್ತುವುದಕ್ಕಾಗಿ ಶುದ್ಧವಾದ ಭಂಗಿಯಸೊಪ್ಪನ್ನು ಮಿತವಾದ ಪ್ರಮಾಣದಲ್ಲಿ ಕೊಡಬೇಕು.

ವಿಷಂಪಲಮಿತಂಸೂತಶ್ಶಾಣಿಕಶ್ಚೂರ್ಣಯೇದ್ವಯಂ ॥ ೧೨೦ ॥
ತಚ್ಚೂರ್ಣಂಸಂಪುಟೇಕ್ಷಿಪ್ತ್ವಾಕಾಚಲಿಪ್ತಶರಾವಯೋಃ ॥
ಮುದ್ರಾಂದತ್ವಾಚಸಂಶೋಷ್ಯತತಶ್ಚುಲ್ಯಾಂನಿವೇಶಯೇತ್ ॥ ೧೨೧ ॥
ವಹ್ನಿಂಶನೈಶ್ಶನೈಃಕುರ್ಯಾತ್ಪ್ರಹರದ್ವಯಸಂಖ್ಯಯಾ ॥

**ತತಉದ್ಘಾಟಯೇನ್ಮುದ್ರಾಮುಪರಿಸ್ಥಾಂಶರಾವಕಾತ್ ॥ ೧೨೨ ॥**
**ಸಂಲಗ್ನೋಯೋಭವೇತ್ಸೂತಸ್ತಂಗೃಹ್ಣೀಯಾತ್ ಶನೈಶ್ಶನೈಃ ॥**
**ವಾಯುಸ್ಪರ್ಶೋಯಥಾನಸ್ಯಾತ್ತಥಾಕುಪ್ಯಾಂನಿವೇಶಯೇತ್**
**॥ ೧೨೩ ॥**
**ಯಾವತ್ಸೂಚ್ಯಾಮುಖೇಲಗ್ನಂಕೂಪ್ಯಾನಿರ್ಯಾತಿಭೇಷಜಂ ॥**
**ತಾವನ್ಮಾತ್ರೋರಸೋದೇಯೋಮೂರ್ಛಿತೇಸನ್ನಿಪಾತಿನಿ ॥೧೨೪॥**
**ಕ್ಷುರೇಣಪ್ರಚ್ಛಿತೇಮೂರ್ಧ್ನಿತತ್ರಾಂಗುಲ್ಯಾಚಘರ್ಷಯೇತ್ ॥**
**ರಕ್ತಭೇಷಜಸಂಪರ್ಕಾನ್ಮೂರ್ಛಿತೋಪಿಹಿಜೀವತಿ ॥ ೧೨೫ ॥**
**ತಥೈವಸರ್ಪದಷ್ಟಸ್ತುಮೃತಾವಸ್ಥೋಪಿಜೀವತಿ ॥**
**ಯದಾತಾಪೋಭವೇತ್ತಸ್ಯ ಮಧುರಂತತ್ರದೀಯತೇ ॥ ೧೨೬ ॥**

ಲಘುಸೂಚಿಕಾಭರಣರಸವನ್ನು ಹೇಳುತ್ತಾನೆ— ವತ್ಸನಾಭಿ ಒಂದು ಪಲ ಪರಿಮಾಣ, ಶುದ್ಧವಾದ ಪಾದರಸ ಒಂದು ಶಾಣ ಪರಿಮಾಣ, ಇವೆರಡನ್ನೂ ಬಹಳ ನಯವಾಗಿ ಚೂರ್ಣವಾಗುವಂತೆ ಅರೆಯಬೇಕು ಈ ಚೂರ್ಣವನ್ನು ಒಂದು ಶರಾವೆಯಲ್ಲಿ ತುಂಬಿ ಮೇಲೊಂದು ಶರಾವೆಯನ್ನು ಮುಚ್ಚಿ ಉಸಿರಾಡದಂತೆ ಸಂದಿಗೆ ಸಂಪ್ರದಾಯಪ್ರಕಾರ ಜೇಡಮಣ್ಣನ್ನು ಮಾಡಬೇಕು, ಹೀಗೆ ಮಾಡಿದ ಶರಾವೆಯನ್ನು ಒಲೆಯ ಮೇಲೆ ಏರಿಸಿ ಎರಡು ಝಾಮ ಪರ್ಯಂತ ಉರಿಯನ್ನು ಹಾಕಬೇಕು, ನಂತರ ಇರಿದ ಮೇಲೆ ಮುಚ್ಚಳವನ್ನು ಬಿಚ್ಚಿ, ಮೇಲಿನ ಶರಾವೆಗೆ ಅಂಟಿಕೊಂಡಿರುವ ರಸವನ್ನು ಗಾಳಿ ತಾಗದಂತೆ ಕೆರದು ಶೀಸೆಗೆ ತುಂಬಿ ಭದ್ರ ಪಡಿಸಿ ಇರಿಸಿಕೊಳ್ಳಬೇಕು, ಇಲ್ಲಿಗೆ ಸೂಚಿಕಾಭರಣ ರಸವು ಸಿದ್ಧವಾದ ಹಾಗಾ ಯಿತು. ಸನ್ನಿಪಾತದಿಂದ ಮೂರ್ಛಿತನಾದವನಿಗೆ ತಲೆಯ ಮೇಲೆ ಗಾಯ ಮಾಡಿ ಸೂಜಿಯ ಮೊನೆಯಲ್ಲಿ ಈ ರಸವನ್ನು ತೆಗೆದುಕೊಂಡು ರಕ್ತಗತವಾಗು ವಂತೆ ಮಾಡಿ ಬೆರಳಿನಿಂದ ಚನ್ನಾಗಿ ತಿಕ್ಕಿದರೆ ಕೂಡಲೆ ಜ್ಞಾನಸಂಚಾರವಾಗುತ್ತದೆ. ಹಾವು ಕಡದು ಮೂರ್ಛೆ ಹೊಂದಿ ಪ್ರಾಣಹೋಗುವ ಸ್ಥಿತಿಯಲ್ಲಿರುವವನಿಗೂ ಇದೇ ರೀತಿ ಮಾಡಿದರ ಗುಣವಾಗುತ್ತದೆ, ಒಂದುವೇಳೆ ಈ ರಸಪ್ರಯೋಗದ ಪರಿಮಾಣವು ಹೆಚ್ಚಾಗಿ ರೋಗಿಗೆ ತಾಪವಾದಲ್ಲಿ ಸಿಹಿಯಾದ ಸಕ್ಕರೆ ಬೆಲ್ಲ ಮೊದಲಾದವುಗಳನ್ನು ಕೊಟ್ಟರೆ ವೇಗವು ಶಮನವಾಗುತ್ತದೆ.

**ಸೂತಭಸ್ಮ ಸಮಂಗಂಧಂಧಾತ್ರ್ಯಾದದ್ಯಾನ್ಮನಶ್ಶಿಲಾಂ ॥**
**ಮಾಕ್ಷಿಕಂಪಿಪ್ಪಲೀವ್ಯೋಷಂಪ್ರತ್ಯೇಕಂಶಿಲಯಾಸಮಂ ॥ ೧೨೭ ॥**
**ಚೂರ್ಣಯೇದ್ಭಾವಯೇತ್ತ್ರಿಕ್ತೈರ್ಮತ್ಸ್ಯಮಾಯೂರಸಂಭವೈಃ ॥**
**ಸಪ್ತಧಾಭಾವಯೇತ್ ಶುಷ್ಕಂದೇಯಂಗುಂಜಾದ್ವಯಂಹಿತಂ ೧೨೮**

ತಾಲಪರ್ಣೀಶ್ಶೃತಶ್ಚಾನುಪಂಚಕೋಲಶೃತೋಥವಾ ॥
ಜಲಬಂಧುರಸೋನಾಮುಸನ್ನಿಪಾತಂನಿಯಚ್ಛತಿ ॥ ೧೨೯ ॥
ಜಲಯೋಗಶ್ಚಕರ್ತವ್ಯಸ್ತೇನವೀರ್ಯಂಭವೇದ್ರಸೇ ॥

ಜಲಬಂಧು ರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸದ ಭಸ್ಮ ಒಂದು ತೂಕ, ಗಂಧಕ ಒಂದು ತೂಕ, ಜಾಪಾಳದ ಬೀಜ ಒಂದು ತೂಕ, ಗಂಧಕದ ನಾಲ್ಕನೆಯ ಒಂದು ಭಾಗ ಶುದ್ಧವಾದ ಮಣಿಶಿಲೆ, ಶುದ್ಧವಾದ ಸ್ವರ್ಣಮಾಕ್ಷಿಕಭಸ್ಮ, ಹಿಪ್ಪಲಿ, ವ್ಯೋಷವೆಂದರೆ ಶುಂಠಿ, ಹಿಪ್ಪಲಿ, ಮೆಣಸು, ಇವು ಪ್ರತಿಯೊಂದೂ ಮಣಿಶಿಲೆಯಷ್ಟು, ಇವುಗಳನ್ನೆಲ್ಲಾ ಕೂಡಿಸಿ ನುಣ್ಣಗೆ ಪುಡಿಯಾಗುವಂತೆ ಅರೆದು ಮತ್ಸ್ಯಪಿತ್ತ, ಮಯೂರಪಿತ್ತ, ಇವುಗಳಲ್ಲಿ ಪ್ರತ್ಯೇಕವಾಗಿ ಏಳುಸಾರಿ ಭಾವನೆಕೊಟ್ಟು ಒಣಗಿಸಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು ರೋಗಬಲಾಬಲಗಳನ್ನು ನೋಡಿಕೊಂಡು ಈ ಔಷಧವನ್ನು ಪ್ರಯೋಗಿಸಿದಲ್ಲಿ ಸಾಮಾನ್ಯ ಜ್ವರಗಳು ಸನ್ನಿಪಾತಗಳು ಇವುಗಳೆಲ್ಲವನ್ನೂ ಗೆಲ್ಲುತ್ತದೆ, ತಾಲಪರ್ಣಿ ಎಂಬದ ಸಪ್ಪಸಿಗೆ ಸೊಪ್ಪಿನಲ್ಲಿ ಒಂದು ಬಗೆಯ ಭೇದ. ಇದರ ರಸವನ್ನಾಗಲಿ, ಪಂಚಕೋಲವೆಂದರೆ ಪಿಪ್ಪಲಿ, ಹಿಪ್ಪಲಿಮೋಡಿ, ಚವ್ಯ, ಚಿತ್ರಮೂಲ, ಶುಂಠಿ, ಇವುಗಳಿಗೆ ಹೆಸರು, ಇವುಗಳ ಕಷಾಯವನ್ನಾಗಲಿ ಅನುಪಾನವಾಗಿ ಕೊಡಬೇಕು, ತಣ್ಣೀರನ್ನು ಪಾನಮಾಡುವುದು, ತಣ್ಣೀರಿನಿಂದ ಕೈಕಾಲು ಮತ್ತು ಎದೆ ಇವುಗಳನ್ನು ಒರಸುವದು ಇದನ್ನೂ ಮಾಡಬಹುದು, ತಾಲಪರ್ಣಿ ಎಂಬ ಪದಕ್ಕೆ ಮುಸಲೀಕಂದ ಎಂದರೆ ನೆಲತಾಳೆ ಗೆಡ್ಡೆ ಎಂದೂ ಕೆಲವರ ಅಭಿಪ್ರಾಯ.

ಶುದ್ಧಂಸೂತಂವಿಷಂಗಂಧಂಮರಿಚಂಟಂಕಣಂಕಣಾಂ ॥ ೧೩೦ ॥
ಮರ್ದಯೇದ್ಧೂರ್ತಜದ್ರಾವೈರ್ದಿನಮೇಕಂಚಶೋಷಯೇತ್ ॥
ಪಂಚವಕ್ತ್ರೋರಸೋನಾಮದ್ವಿಗುಂಜಸ್ಸನ್ನಿಪಾತಜಿತ್ ॥ ೧೩೧ ॥
ಅರ್ಕಮೂಲಕಷಾಯಂತುಸತ್ರ್ಯೂಷಮನುಪಾಯಯೇತ್ ॥
ಯುಕ್ತಂದಧ್ಯೋದನಂಪಥ್ಯಂಜಲಯೋಗಂಚಕಾರಯೇತ್ ।೧೩೨।
ರಸೇನಾನೇನಶಾಮ್ಯಂತಿಸಕ್ಷೌದ್ರೇಣಕಫೋದ್ಭವಾಃ ॥
ಮಧ್ವಾರ್ದ್ರಕರಸಂಚಾನುಪಿಬೇದಗ್ನಿವಿವೃದ್ಧಯೇ ॥ ೧೩೩ ॥
ಯಥೇಷ್ಟಂಘೃತಮಾಂಸಾಶೀಶಕ್ತೋಭವತಿಪಾವಕಃ ॥

ಪಂಚವಕ್ತ್ರರಸ—ಶುದ್ಧವಾದ ಪಾದರಸ, ಗಂಧಕ, ವತ್ಸನಾಭಿ, ಮೆಣಸು, ಟಂಕಣಕ್ಷಾರ, ಹಿಪ್ಪಲಿ ಇವುಗಳನ್ನೆಲ್ಲವನ್ನೂ ಸಮಪರಿಮಾಣದಲ್ಲಿ ಸೇರಿಸಿ

ದತ್ತೂರದ ಎಲೆಗಳ ರಸದೊಡನೆ ಖಲ್ವದಲ್ಲಿ ಒಂದು ದಿವಸ ಚನ್ನಾಗಿ ಅರೆಯ ಬೇಕು, ನಂತರ ಒಣಗಿಸಬೇಕು. ಇಲ್ಲಿಗೆ ಪಂಚವಕ್ತ್ರರಸವು ಸಿದ್ಧವಾದ ಹಾಗಾ ಯಿತು. ರೋಗಾನುಸಾರವಾಗಿ ಎರಡು ಗುಂಜಾ ಪರಿಮಾಣದವರಿಗೂ ಇದನ್ನು ಪ್ರಯೋಗಿಸಬಹುದು, ಇದರಿಂದ ಸಾಮಾನ್ಯ ಜ್ವರಗಳು ಸನ್ನಿಪಾತಜ್ವರಗಳು ಎಲ್ಲವೂ ಗುಣಹೊಂದುತ್ತವೆ ಎಕ್ಕದಬೇರಿನ ಕಷಾಯದೊಡನೆ ತ್ರ್ಯೂಷಣ ಚೂರ್ಣವನ್ನು ಸೇರಿಸಿ ಅನುಪಾನವಾಗಿ ಕೊಡತಕ್ಕದ್ದು, ಮೊಸರನ್ನವನ್ನು ಪಥ್ಯ ವಿಡಬಹುದು. ತಣ್ಣೀರನ್ನು ಉಪಯೋಗಿಸಬಹುದು, ಈ ಔಷಧವನ್ನು ಜೇನಿ ನೊಡನೆ ಕೊಡಬೇಕು, ಜಠರಾಗ್ನಿ ವೃದ್ಧಿಯಾಗುವಂತೆ ಹಸೀಸುಂಟಿಯ ರಸ ಮತ್ತು ಜೇನುತುಪ್ಪ ಸೇರಿಸಿ ಕುಡಿಸಬೇಕು, ಯಥೇಚ್ಛವಾಗಿ ತುಪ್ಪ, ಮಾಂಸ ಗಳು ಇವುಗಳನ್ನೆಲ್ಲಾ ತೆಗೆದುಕೊಳ್ಳಬಹುದು, ರೋಗವು ನಿವೃತ್ತಿಯಾಗುವು ದಲ್ಲದೆ ಜಠರಾಗ್ನಿಯೂ ವೃದ್ಧಿಯಾಗುತ್ತದೆ.

ರಸಂಗಂಧಕತುಲ್ಯಾಂಶಂಧತ್ತೂರಫಲಜದ್ರವೈಃ ॥ ೧೩೪ ॥
ಮರ್ದಯೇದ್ದಿನಮೇಕಂತುತತ್ತುಲ್ಯಂತ್ರಿಕಟುಕ್ಷಿಪೇತ್ ॥
ಉನ್ಮತ್ತಾಖ್ಯೋರಸೋನಾಮ್ನಾನಸ್ಯೇಸ್ಯಾತ್ಸನ್ನಿಪಾತಜಿತ್ ।೧೩೫।

ರಸ, ಗಂಧಕ, ಎರಡನ್ನು ಶುದ್ಧನಾದವುಗಳನ್ನು ಸಮಪ್ರಮಾಣದಲ್ಲಿ ಸೇರಿಸಿ ದತ್ತೂರಿ ರಸದಿಂದ ಒಂದು ದಿವಸ ಅರದು ಅದರ ಜೊತೆಗೆ ತ್ರಿಕಟು ಚೂರ್ಣವನ್ನು ಸೇರಿಸಿ ಇರಿಸಿಕೊಳ್ಳುವುದು, ಇದಕ್ಕೆ ಉನ್ಮತ್ತರಸವೆಂದು ಹೆಸರು. ಇದನ್ನು ಸನ್ನಿಪಾತಜ್ವರದಲ್ಲಿ ನಸ್ಯವಾಗಿ ಉಪಯೋಗಿಸಬೇಕು.

ನಿಸ್ತ್ವಗ್ಜೇಪಾಲಬೀಜಂಚದಶನಿಷ್ಕಂವಿಚೂರ್ಣಯೇತ್ ॥
ಮರಿಚಂಪಿಪ್ಪಲೀಂಸೂತಂಪ್ರತಿನಿಷ್ಕಂವಿಮಿಶ್ರಯೇತ್ ॥ ೧೩೬ ॥
ಭಾವ್ಯೋಜಂಬೀರಜೆ ದ್ರಾವೈ ರಸ್ಸಪ್ತಾಹಂಸಂಪ್ರಯತ್ನತಃ ॥
ರಸೋಯಮಂಜನೇವಸ್ತಃ ಸನ್ನಿಪಾತಂವಿನಾಶಯೇತ್ ॥ ೧೩೭ ॥

ಜಾಪಾಳದಬೀಜ ಹೊಟ್ಟು ತೆಗದು ಶುದ್ಧವಾದದ್ದು ಹತ್ತು ನಿಷ್ಕ, ಮೆಣಸು, ಹಿಪ್ಪಲಿ, ಪಾದರಸ ಪ್ರತಿಯೊಂದಗ ಒಂದೊಂದು ನಿಷ್ಕ ಪ್ರಮಾಣ, ಇವುಗಳನ್ನು ಚನ್ನಾಗಿ ಅರೆದು ಸೇರಿಸಿ ನಿಂಬೆಯಹಣ್ಣಿನ ರಸದಲ್ಲಿ ಏಳು ದಿವಸ ಭಾವನೆ ಕೊಡಬೇಕು, ಇಲ್ಲಿಗೆ ಔಷಧ ಸಿದ್ಧವಾದ ಹಾಗಾಯಿತು. ಇದನ್ನು ಅಂಜನ ವಾಗಿ ಉಪಯೋಗಿಸಿದರೆ ಸನ್ನಿಪಾತಜ್ವರ ಮೊದಲಾದವುಗಳು ಗುಣವಾಗುತ್ತವೆ.

ಸೂತಂಟಂಕಣಕಂತುಲ್ಯಂಮರಿಚಂಸೂತತುಲ್ಯಕಂ ॥
ಗಂಧಕಂಪಿಪ್ಪಲೀಂಶುಂಠೀಂದ್ವೌದ್ವೌಭಾಗೌವಿಚೂರ್ಣಯೇತ್
॥ ೧೩೮ ॥
ಸರ್ವತುಲ್ಯಂಕ್ಷಿಪೇದ್ದಂತಿಬೀಜಂನಿಸ್ತುಷಿತಂಭಿಷಕ್ ॥
ದ್ವಿಗುಂಜಂರೇಚನಂಸಿದ್ಧಂನಾರಾಚೋಯಂಮಹಾರಸಃ ॥ ೧೩೯ ॥
ಆಧ್ಮಾನಂಮಲವಿಷ್ಟಂಭಾನುದಾವರ್ತಂಚನಾಶಯೇತ್ ॥

ನಾರಾಚರಸವನ್ನು ಹೇಳುತ್ತಾನೆ—ಶುದ್ಧಿ ಮಾಡಿದ ಪಾದರಸ, ಟಂಕಣಕ್ಷಾರ, ಮೆಣಸು, ಇವು ಮೂರೂ ಪ್ರತ್ಯೇಕ ಒಂದೊಂದು ತೂಕ, ಗಂಧಕ ಶುದ್ಧವಾದದ್ದು, ಹಿಪ್ಪಲಿ, ಶುಂಠಿ, ಇವು ಪ್ರತಿಯೊಂದೂ ಹಿಂದೆ ಹೇಳಿದ ವಸ್ತುಗಳ ಎರಡರಷ್ಟು, ಇವುಗಳನ್ನು ಕೂಡಿಸಿ ನುಣ್ಣಗೆ ಪುಡಿಮಾಡಿಕೊಳ್ಳಬೇಕು, ಇದರ ಜೊತಗ ಇವೆಲ್ಲಾ ವಸ್ತುಗಳೂ ಎಷ್ಟಾಗುತ್ತವೋ ಅಷ್ಟು ಶುದ್ಧವಾದ ಮತ್ತು ಹೊಟ್ಟು ಕಳದ ಜಯಪಾಲದ ಬೀಜವನ್ನು ಸೇರಿಸಿ ಸೂಕ್ಷ್ಮವಾದ ಚೂರ್ಣಮಾಡಿ ಸೀಸೆಯಲ್ಲಿರಿಸಿಕೊಳ್ಳಬೇಕು, ಇಲ್ಲಿಗೆ ಔಷಧ ಸಿದ್ಧವಾದ ಹಾಗಾಯಿತು. ಕೆಲವರು ನಿಂಬೇಹುಳಿಯಲ್ಲಿ ಅರದು ಮಾತ್ರೆಮಾಡಿ ಇರಿಸಿಕೊಳ್ಳುತ್ತಾರೆ ಎರಡು ಗುಲ ಗಂಜಿಯ ಪರಿಮಾಣ ಈ ರಸವನ್ನು ಸೇವಿಸಿದರ ಚನ್ನಾಗಿ ವಿರೇಚನ ಅಂದರೆ ಭೇದಿಯಾಗುತ್ತದೆ. ಹೊಟ್ಟೆಯುಬ್ಬರ, ಮಲಬಂಧನ, ಮಲಬಂಧನದಿಂದ ಹುಟ್ಟಿ ತಕ್ಕ ಉದಾವರ್ತವೆಂಬ ವಾತರೋಗ ಇವುಗಳೆಲ್ಲವೂ ಇದರಿಂದ ಗುಣವಾಗುತ್ತವೆ.

ದರದಂಟಂಕಣಂಶುಂಠೀಪಿಪ್ಪಲೀಚೈಕಕಾರ್ಷಿಕಾಃ ॥ ೧೪೦ ॥
ಹೇಮಾಹ್ವಾಪಲಮಾತ್ರಾಸ್ಯಾದ್ದಂತೀಬೀಜಂಚತತ್ಸಮಂ ॥
ವಿಚೂರ್ಣ್ಯೈಕತ್ರಸರ್ವಾಣಿಗೋದುಗ್ಧೇನೈವಸಾಧಯೇತ್ ॥೧೪೧॥
ತ್ರಿಗುಂಜಂರೇಚನಂದದ್ಯಾದ್ವಿಷ್ಟಂಭಾಧ್ಮಾನರೋಗಿಷು ॥

ಇಚ್ಛಾಭೇದಿರಸವನ್ನು ಹೇಳುತ್ತಾನೆ—ಶುದ್ಧವಾದ ಇಂಗಲೀಕ, ಟಂಕಣ ಕ್ಷಾರ, ಶುಂಠಿ, ಹಿಪ್ಪಲಿ, ಇವು ಒಂದೊಂದೂ ಪ್ರತ್ಯೇಕ ಒಂದೊಂದು ಕರ್ಷ ಪ್ರಮಾಣ, ಹೇಮಕ್ಷೀರೀ ಎಂಬ ಮೂಲಿಕೆ ಒಂದು ಪಲ ಪ್ರಮಾಣ, ಶುದ್ಧವಾದ ಜಾಪಾಳದ ಬೀಜವೂ ಒಂದು ಪಲ, ಇವೆಲ್ಲವನ್ನೂ ಕೂಡಿಸಿ ನಯವಾದ ಚೂರ್ಣಮಾಡಿ ಹಸುವಿನ ಹಾಲಿನಲ್ಲಿ ಅರದು ಮೂರು ಗುಲಗಂಜಿಯ ತೂಕ ಮಾತ್ರೆಗಳನ್ನು ಮಾಡಿ ಇಡಬೇಕು, ಇಲ್ಲಿಗೆ ಇಚ್ಛಾಭೇದಿರಸಮಾತ್ರೆಯು ಸಿದ್ಧ ವಾದ ಹಾಗಾಯಿತು ಮಲಬಂಧ, ಹೊಟ್ಟೆಯುಬ್ಬರ, ಈ ರೋಗಿಗಳಿಗೆ ಈ ಮಾತ್ರೆಗಳನ್ನು ಕೊಟ್ಟಲ್ಲಿ ಅನುಕೂಲವಾಗುತ್ತದೆ.

ದ್ವೌಭಾಗೌಹೇಮಭೂತೇಶ್ಚಗಗನಂಚಾಪಿತತ್ಸಮಂ ॥ ೧೪೨ ॥
ಲೋಹಭಸ್ಮತ್ರಯೋಭಾಗಾಶ್ಚತ್ವಾರೋರಸಭಸ್ಮನಃ ॥
ವಂಗಭಸ್ಮತ್ರಿಭಾಗಂಸ್ಯಾತ್ಸರ್ವಮೇಕತ್ರಮರ್ದಯೇತ್ ॥ ೧೪೩ ॥
ಪ್ರವಾಳಂಮೌಕ್ತಿಕಂಚೈವರಸಸಾಮ್ಯೇನದಾಪಯೇತ್ ॥
ಭಾವನಾಗವ್ಯದುಗ್ಧೇನರಸೈರ್ಘೃಸ್ಪ್ರಾಟರೂಷಕೈಃ ॥ ೧೪೪ ॥
ಹರಿದ್ರಾವಾರಿಣಾಚೈವಮೋಚಕಂದರಸೇನಚ ॥
ಶತಪತ್ರರಸೇನಾಪಿಮಾಲತ್ಯಾಸ್ಸ್ವರಸೇನಚ ॥ ೧೪೫ ॥
ಪಶ್ಚಾನ್ಮೃಗಮದಶ್ಚಂದ್ರಸ್ತುಲಸೀರಸಭಾವಿತಃ ॥
ಕುಸುಮಾಕರಇತ್ಯೇಷವಸಂತಪದಪೂರ್ವಕಃ ॥ ೧೪೬ ॥
ಗುಂಜಾದ್ವಯಂದದೀತಾಸ್ಯಮಧುನಾಸರ್ವಮೇಹನುತ್ ॥
ಸಿತಾಚಂದನಸಂಯುಕ್ತಶ್ಚಾಮ್ಲಪಿತ್ತಾದಿರೋಗಜಿತ್ ॥ ೧೪೭ ॥

ವಸಂತಕುಸುಮಾಕರರಸವನ್ನು ಹೇಳುತ್ತಾನೆ—ಇದಕ್ಕೆ ವ್ಯಾಖ್ಯಾನವಿಲ್ಲ, ಪ್ರಕ್ಷಿಪ್ತ, ಸುವರ್ಣಭಸ್ಮ ಎರಡು ತೂಕ, ಅಭ್ರಕಭಸ್ಮ ಎರಡು ತೂಕ, ಶುದ್ಧವಾದ ಲೋಹಭಸ್ಮ ಮೂರು ತೂಕ, ಶುದ್ಧವಾದ ರಸಭಸ್ಮ ನಾಲ್ಕು ತೂಕ ಶುದ್ಧವಾದ ವಂಗಭಸ್ಮ ಮೂರು ತೂಕ, ಇವುಗಳನ್ನು ಒಂದುಗೂಡಿಸಿ ಖಲ್ವದಲ್ಲಿ ಚನ್ನಾಗಿ ಅರೆಯಬೇಕು, ಶುದ್ಧವಾದ ಹವಳಭಸ್ಮ, ಮುತ್ತಿನಭಸ್ಮ, ಇವುಗಳನ್ನು ರಸಭಸ್ಮದಷ್ಟು ಸೇರಿಸಬೇಕು, ಇವುಗಳನ್ನು ಆಡುಸೋಗೆ ಸೊಪ್ಪಿನ ರಸದಲ್ಲಿ [illegible] ಎರಡು ನಂತರ ಹಸುವಿನ ಹಾಲಿನಲ್ಲಿ ಭಾವನೆಕೊಡಬೇಕು, ನಂತರ ಅರಿಸಿನದ ರಸದಲ್ಲಿಯೂ ಬೂರಗದ ರಸದಲ್ಲಿಯೂ ಶತಪತ್ರವೆಂದರೆ ಸೇವಂತಿಗೆಸೊಪ್ಪಿನ ರಸದಲ್ಲಿಯೂ, ಜಾಜಿಸೊಪ್ಪಿನ ರಸದಲ್ಲಿಯೂ ಕ್ರಮವಾಗಿ ಅರೆಯಬೇಕು ನಂತರ ಕಸ್ತೂರಿ ಪಚ್ಚಕರ್ಪೂರಗಳನ್ನು ಕೂಡಿಸಿ ತುಳಸೀರಸದಲ್ಲಿ ಭಾವನೆಕೊಟ್ಟು ನಂತರ ಮಾತ್ರೆಗಳನ್ನು ಮಾಡಬೇಕು, ಇದಕ್ಕೆ ವಸಂತ ಕುಸುಮಾಕರರಸವೆಂದು ಹೆಸರು ಈ ರಸವನ್ನು ಜೇನುತುಪ್ಪದ ಅನುಪಾನದೊಳಗ ಎರಡು ಗುಲಗಂಜಿಯ ಪ್ರಮಾಣ ಸೇವಿಸಿದಲ್ಲಿ ಸಮಸ್ತ ವಿಧವಾದ ಮೇಹರೋಗಗಳನ್ನೂ ಗುಣಪಡಿಸುತ್ತದೆ. ಶ್ರೀಗಂಧ ಮತ್ತು ಕಲ್ಲುಸಕ್ಕರೆಯೊಡನೆ ಸೇವಿಸಿದರೆ ಅಮ್ಲಪಿತ್ತ ಮೊದಲಾದ ನಾನಾ ರೋಗಗಳನ್ನು ಗೆಲ್ಲಬಹುದು, ಮಾಲತೀ ಎಂದರೆ ಗುಲಾಬಿಗಿಡವೆಂದು ಕೆಲವರ ಅಭಿಪ್ರಾಯ.

ಸೂತಭಸ್ಮತ್ರಯೋಭಾಗಾಭಾಗೈಕಂಹೇಮಭಸ್ಮಕಂ ॥
ಮೃತತಾಮ್ರಸ್ಯಭಾಗೈಕಂಶಿಲಾಗಂಧಕತಾಲಕಂ ॥ ೧೪೮ ॥
ಪ್ರತಿಭಾಗದ್ವಯಂಶುದ್ಧಮೇಕೀಕೃತ್ಯವಿಚೂರ್ಣಯೇತ್ ॥

ವರಾಟಾನ್ಪೂರಯೇತ್ತೇನ ಭಾಗೀಕ್ಷೀರೇಣ ಟಂಕಣಂ ॥ ೧೪೯ ॥
ಪಿಷ್ಟ್ವಾ ತೇನ ಮುಖಂ ರುದ್ಧ್ವಾ ಮೃದ್ಭಾಂಡೇ ಸನ್ನಿರೋಧಯೇತ್ ॥
ಶುಷ್ಕಂ ಗಜಪುಟೇ ಪಕ್ತ್ವಾ ಚೂರ್ಣಯೇತ್ ಸ್ವಾಂಗಶೀತಲಂ ।೧೫೦।
ರಸೋ ರಾಜಮೃಗಾಂಕೋಯಂ ಚತುರ್ಗುಂಜಃ ಕ್ಷಯಾಪಹಃ ॥
ದಶಪಿಪ್ಪಲಿಕಾಕ್ಷೌದ್ರೈರೇಕೋನತ್ರಿಂಶದೂಷಣೈಃ ॥ ೧೫೧ ॥
ಸಘೃತಂ ದಾಪಯೇತ್ಪಥ್ಯಂ ಸ್ತ್ರೀಕೋಪಾಗ್ನಿಶ್ರಮಾಂಸ್ತ್ಯಜೇತ್ ॥
ಪಥ್ಯಂ ವಾ ಲಘುಮಾಂಸಾನಿ ರಾಜರೋಗಪ್ರಶಾಂತಯೇ ॥ ೧೫೨ ॥

ರಾಜಮೃಗಾಂಕರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸದ ಭಸ್ಮ ಮೂರು ತೂಕ, ಶುದ್ಧವಾದ ಬಂಗ ರಸಭಸ್ಮ ಒಂದು ಭಾಗ, ಶುದ್ಧವಾದ ಮಣಿಶಿಲೆ, ಗಂಧಕ, ಅರಿದಳ, ಇವು ಪ್ರತಿಯೊಂದೂ ಪ್ರತ್ಯೇಕ ಎರಡು ತೂಕ, ಇವುಗಳೆಲ್ಲವನ್ನೂ ಕೂಡಿಸಿ ಖಲ್ವದಲ್ಲಿ ಚನ್ನಾಗಿ ಅರೆಯಬೇಕು, ಅರೆದ ಪುಡಿಯನ್ನು ದೊಡ್ಡದಾದ ಕವಡೆಯೊಳಕೆ ತುಂಬಿ ಟಂಕಣಕ್ಷಾರವನ್ನು ಆಡಿನ ಹಾಲಿನಲ್ಲಿ ಚನ್ನಾಗಿ ಅರೆದು ಆ ಕವಡೆಯ ರಂಧ್ರಕ್ಕೆ ಚನ್ನಾಗಿ ಮೆತ್ತಿ ಉಸಿರಾಡದಂತೆ ಮಾಡಬೇಕು, ಆ ಕವಡೆಯನ್ನು ಮಣ್ಣಿನ ಭಾಂಡದಲ್ಲಿರಿಸಿ ಮೇಲೆ ಮುಚ್ಚಳವನ್ನು ಮುಚ್ಚಿ ಸಂಪ್ರದಾಯ ಪ್ರಕಾರ ಉಸಿರಾಡದಂತೆ ಚೀಲುಮಣ್ಣು ಮಾಡಿ ಗಜಪುಟಕ್ರಮದಲ್ಲಿ ಪಕ್ವಮಾಡಿ ಸ್ವಾಂಗಶೀತಲವಾದ ಮೇಲೆ ತೆಗದಿರಿಸಿಕೊಂಡು ಚನ್ನಾಗಿ ಚೂರ್ಣಮಾಡಿ ಸೀಸೆಯಲ್ಲಿ ಭದ್ರಪಡಿಸಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು, ಇದಕ್ಕೆ ರಾಜಮೃಗಾಂಕರಸವೆಂದು ಹೆಸರು. ನಾಲ್ಕು ಗುಲಗಂಜಿಯ ಪರಿಮಾಣ ಸೇವಿಸಿದಲ್ಲಿ ಸಮಸ್ತ ವಿಧವಾದ ಕ್ಷಯರೋಗವನ್ನೂ ಪರಿಹರಿಸುತ್ತದೆ, ಇದನ್ನು ಹತ್ತು ಹಿಪ್ಪಲಿ, ಜೇನುತುಪ್ಪ, ಇಪ್ಪತ್ತೊಂಬತ್ತು ಮೆಣಸು, ಇವುಗಳೊಡನೆ ಸೇವಿಸುವುದು, ತುಪ್ಪವನ್ನು ಪಥ್ಯದಲ್ಲಿ ಯಥೇಷ್ಟವಾಗಿ ಉಪಯೋಗಿಸಬೇಕ , ಸ್ತ್ರೀಸಂಗ, ಕೋಪ, ಬೆಂಕಿಕಾಯಿಸುವುದು, ಅತಿಯಾಗಿ ಶ್ರಮಪಡುವುದು, ಇವುಗಳನ್ನು ಈ ಔಷಧ ಸೇವನಕಾಲದಲ್ಲಿ ಬಿಡಬೇಕು, ಲಘುವಾದ ಮಾಂಸಗಳನ್ನು ಕ್ಷಯರೋಗನಿವೃತ್ತಿಗಾಗಿ ಸೇವಿಸಬೇಕು

ಶುದ್ಧಂ ಸೂತಂ ದ್ವಿಧಾ ಗಂಧಂ ಕುರ್ಯಾತ್ ಖಲ್ವೇನ ಕಜ್ಜಲೀಂ ॥
ತಯೋಸ್ತುಲ್ಯಂ ತೀಕ್ಷ್ಣಚೂರ್ಣಂ ಮರ್ದಯೇತ್ಕನ್ಯಕಾದ್ರವೈಃ ೧೫೩
ದ್ವಿಯಾಮಾಂತೇ ಕೃತಂ ಗೋಲಂ ತಾಮ್ರಪಾತ್ರೇ ವಿನಿಕ್ಷಿಪೇತ್ ॥
ಆಚ್ಛಾದ್ಯೈರಂಡಪತ್ರೇಣ ಯಾಮಾರ್ಧೇಽತ್ಯುಷ್ಣತಾ ಭವೇತ್ ।೧೫೪।
ಧಾನ್ಯರಾಶೌ ನ್ಯಸೇತ್ಪಶ್ಚಾದಹೋರಾತ್ರಾತ್ಸಮುದ್ಧರೇತ್ ॥
ಸಂಚೂರ್ಣ್ಯ ಗಾಲಯೇದ್ವಸ್ತ್ರೇ ಸತ್ಯಂ ವಾರಿತರಂ ಭವೇತ್ ॥ ೧೫೫ ॥

ಭಾವಯೇತ್ಕನ್ಯಕಾದ್ರಾವೈಃಸಪ್ತಧಾಭೃಂಗಜೈಸ್ತಥಾ ॥
ಕಾಕಮಾಚೀಕುರಂಟೋತ್ಥದ್ರವೈರ್ಮುಂಡ್ಯಾಃಪುನರ್ನವೈಃ।೧೫೬।
ಸಹದೇವ್ಯಮೃತಾನೀಲೀನಿರ್ಗುಂಡೀಚಿತ್ರಜೈಸ್ತಥಾ ॥
ಸಪ್ತಧಾತುಪೃಥಕ್ ದ್ರಾವೈರ್ಭಾವ್ಯಂಶೋಷ್ಯಂತಥಾತಪೇ ॥೧೫೭॥
ಸಿದ್ಧಯೋಗೋಹ್ಯಯಂಖ್ಯಾತಃಸಿದ್ಧಾನಾಂಚಮುಖಾಂಗತಃ ॥
ಅನುಭೂತೋಮಯಾಸತ್ಯಂಸರ್ವರೋಗಗಣಾಪಹಃ ॥ ೧೫೮ ॥
ಸ್ವರ್ಣಾದೀನ್ಮಾರಯೇದೇವಂಚೂರ್ಣೀಕೃತ್ಯತುಲೋಹವತ್ ॥
ತ್ರಿಫಲಾಮಧುಸಂಯುಕ್ತಃಸರ್ವರೋಗೇಷುಯೋಜಯೇತ್ ॥ ೧೫೯ ॥
ತ್ರಿಕಟುತ್ರಿಫಲೈಲಾಭಿರ್ಜಾತೀಫಲಲವಂಗಕೈಃ ॥
ನವಭಾಗೋನ್ಮಿತೈರೇತೈಸ್ಸಮಃಪೂರ್ವರಸೋಭವೇತ್ ॥ ೧೬೦ ॥
ಸಂಚೂರ್ಣ್ಯಾಲೋಡಯೇತ್ ಕ್ಷೌದ್ರೈರ್ಭಕ್ಷ್ಯಂನಿಷ್ಕದ್ವಯಂ ದ್ವಯಂ ॥
ಸ್ವಯಮಗ್ನಿರಸೋನಾಮ್ನಾಕ್ಷಯಕಾಸನಿಕೃಂತನಃ ॥ ೧೬೧ ॥

ಅಗ್ನಿರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸ ಒಂದು ಭಾಗ, ಶುದ್ಧ ಗಂಧಕ ಎರಡು ಭಾಗ, ಇವೆರಡನ್ನೂ ಕೂಡಿಸಿ ಚನ್ನಾಗಿ ಅರೆದು ಕಜ್ಜಲಿ ಎಂದರೆ ಕಾಡಿಗೆಯಂತಹ ಕಪ್ಪು ಹುಡಿಯನ್ನು ತಯಾರು ಮಾಡಬೇಕು, ಇವೆರಡೂ ಸೇರಿದರೆ ಎಷ್ಟಾಗುತ್ತದೆಯೋ ಅಷ್ಟು ಶುದ್ಧವಾದ ಉಕ್ಕಿನ ಪುಡಿಯನ್ನು ಇದರೊಡನೆ ಕೂಡಿಸಿ ಲೋಳಿಸರದ ರಸದಿಂದ ಅರೆಯಬೇಕು, ಎರಡು ಝಾಮು ಈ ರೀತಿಯಾಗಿ ಅರದು ಒಂದು ಗೋಲಿಯನ್ನು ಕಟ್ಟಿ ಅದನ್ನು ತಾಮ್ರದ ಪಾತ್ರೆಯಲ್ಲಿರಿಸಬೇಕು, ಮೇಲೆ ಹರಳೆಲೆಯನ್ನು ಮುಚ್ಚಬೇಕು, ಈ ರೀತಿ ಮುಚ್ಚಿದರೆ ಅರ್ಧ ಯಾಮದೊಳಗಾಗಿ ಆ ಗೋಲಿ ಅತ್ಯಂತ ಬಿಸಿಯಾಗುತ್ತದೆ, ನಂತರ ಅದನ್ನು ಒಂದು ಹಗಲು ಮತ್ತು ರಾತ್ರಿ ಸಹ ಧಾನ್ಯದ ರಾಶಿಯಲ್ಲಿರಿಸಿ ಧಾನ್ಯ ಪುಟಹಾಕಿ ನಂತರ ಹೊರಕ್ಕೆ ತೆಗೆಯಬೇಕು, ಈ ರೀತಿ ಮಾಡಿದ ಮೇಲೆ ಚನ್ನಾಗಿ ಆ ಗೋಲಿಯನ್ನು ಖಲ್ವದಲ್ಲಿ ಹಾಕಿಕೊಂಡು ಪುಡಿಮಾಡಿ ವಸ್ತ್ರಗಾಳಿತಮಾಡಿ ಇರಿಸಬೇಕು, ಇಷ್ಟಾದ ಮೇಲೆ ಆ ಪುಡಿಯನ್ನು ಏಳು ದಿವಸ ಲೋಳಿಸರದ ರಸದಲ್ಲಿಯೂ ಗರುಗದ ಸೊಪ್ಪಿನ ರಸದಲ್ಲಿಯೂ ಸಹದೇವಿಯಸೊಪ್ಪಿನ ರಸದಲ್ಲಿಯೂ ಅಮೃತಬಳ್ಳಿಯ ರಸದಲ್ಲಿಯೂ ನೀಲೀಸೊಪ್ಪಿನ ರಸದಲ್ಲಿಯೂ ಲಕ್ಕಿಯ ಸೊಪ್ಪಿನ ರಸದಲ್ಲಿಯೂ ಚಿತ್ರಮೂಲದ ರಸದಲ್ಲಿಯೂ ಗಣಿಕೇಸೊಪ್ಪಿನ ರಸದಲ್ಲಿಯೂ ಗೋರಂಟೀಸೊಪ್ಪಿನ ರಸದಲ್ಲಿಯೂ ಅನಂತನಗೊಂಡೇ ರಸದಲ್ಲಿಯೂ ಕೊಮ್ಮೇಬೇರಿನ ರಸದಲ್ಲಿಯೂ ಈ ರಸಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳುಸಾರಿ

ಭಾವನೆಮಾಡಿ ಒಣಗಿಸಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ತ್ರಿಫಲ ಚೂರ್ಣ ಮತ್ತು ಜೇನುತುಪ್ಪದೊಡನೆ ಈ ರಸವನ್ನು ಯುಕ್ತವಾದ ಪರಿಮಾಣದಲ್ಲಿ ಸಮಸ್ತ ರೋಗಗಳಿಗೂ ಕೊಡಬಹುದು, ತ್ರಿಕಟು, ತ್ರಿಫಲ, ಯಾಲಕ್ಕಿ, ಜಾಯಿಕಾಯಿ, ಲವಂಗ, ಇವುಗಳ ಚೂರ್ಣವನ್ನು ಮಾಡಿ ಮೇಲೆ ಹೇಳಿದ ರಸ ಒಂದು ತೂಕ, ಈ ಪುಡಿ ಒಂಭತ್ತರಷ್ಟು ಸೇರಿಸಿ ಜೇನಿನಲ್ಲಿ ಕಲಸಿ ಗುಳಿಗೆಗಳಾಗಿ ಮಾಡಿಕೊಂಡು ಎರಡು ನಿಷ್ಕ ಪ್ರಮಾಣ ಸೇವಿಸುತ್ತ ಬಂದರೆ ಕ್ಷಯರೋಗ ಮತ್ತು ಕ್ಷಯರೋಗದ ಕೆಮ್ಮು ಇವುಗಳೆಲ್ಲವೂ ಗುಣಹೊಂದುತ್ತವೆ, ಇದು ಅನುಭವಸಿದ್ಧವಾದ ವಿಷಯ

ಪಾರದಂಗಂಧಕಂಶುದ್ಧಂಮೃತಲೋಹಂಚಟಂಕಣಂ ॥
ರಾಸ್ನಾವಿಡಂಗತ್ರಿಫಲಾದೇವದಾರುಕಟುತ್ರಯಂ ॥ ೧೬೨ ॥
ಅಮೃತಾಪದ್ಮಕಂಕ್ಷೌದ್ರಂವಿಶ್ವಂತುಲ್ಯಾಂಶಚೂರ್ಣಿತಂ ॥
ತ್ರಿಗುಂಜಂಸರ್ವಕಾಸಾರ್ತಸ್ಸೇವಯೇದಮೃತಾರ್ಣವಂ ॥ ೧೬೩ ॥

ಅಮೃತಾರ್ಣವರಸ —ಇದು ಪ್ರಕ್ಷಿಪ್ತ, ಶುದ್ಧವಾದ ಪಾದರಸ, ಶುದ್ಧವಾದ ಗಂಧಕ, ಲೋಹಭಸ್ಮ, ಟಂಕಣಕ್ಷಾರ, ಸಣ್ಣರಾಸ್ನೆ, ವಾಯುವಿಡಂಗ. ತ್ರಿಫಲ, ದೇವದಾರುಚಕ್ಕೆ. ತ್ರಿಕಟು, ಅಮೃತಬಳ್ಳಿ, ಪದ್ಮಕಾಷ್ಠ, ಶುಂಠಿ ಇವು ಪ್ರತಿಯೊಂದನ್ನೂ ಸಮಪ್ರಮಾಣದಲ್ಲಿ ಸೇರಿಸಿ ನಯವಾದ ಚೂರ್ಣವಾಗಿಮಾಡಿ ಅದರೊಡನೆ ಜೇನುತುಪ್ಪವನ್ನು ಸೇರಿಸಿ ಕಲೆಸಿ ಗುಳಿಗೆಮಾಡಿ ಇರಿಸಿಕೊಂಡು ಸಮಸ್ತ ವಿಧವಾದ ಕೆಮ್ಮಿನಲ್ಲಿಯೂ ಮೂರು ಗುಲಗಂಜಿಯ ತೂಕ ಕೊಡುತ್ತ ಬರೋಣದರಿಂದ ಕೆಮ್ಮುಗಳು ಗುಣಹೊಂದುತ್ತವೆ

ಸೂತಾರ್ಧೋರ್ಗಂಧಕೋಮರ್ದ್ಯೋರ್ಯಾಮ್ಯಕಂಕನ್ಯಕಾದ್ರವೈಃ॥
ದ್ವಯೋಸ್ತುಲ್ಯಂತಾಮ್ರಪತ್ರಂಪೂರ್ವಕಲ್ಕೇನಲೇಪಯೇತ್ ೧೬೪
ದಿನೈಕಂಸ್ಥಾಲಿಕಾಯಂತ್ರೇಪಕ್ವಮಾದಾಯಚೂರ್ಣಯೇತ್ ॥
ಸೂರ್ಯಾವರ್ತೋರಸೋಹ್ಯೇಷದ್ವಿಗುಂಜಶ್ವಾಸಜಿದ್ಭವೇತ್ ॥೧೬೫॥

ಸೂರ್ಯಾವರ್ತರಸವನ್ನು ಹೇಳುತ್ತಾನೆ—ಒಂದು ಪಾಲು ರಸ, ಅರ್ಧ ಪಾಲು ಗಂಧಕ, ಇವೆರಡನ್ನೂ ಸೇರಿಸಿ ಲೋಳಿಸರದ ರಸದಲ್ಲಿ ಒಂದು ಝಾಮ ಪರಿಯಂತ ಅರೆಯಬೇಕು, ಮೇಲೆ ಹೇಳಿದ ರಸಗಂಧಕಗಳಷ್ಟು ತೂಕ ಶುದ್ಧವಾದ ತಾಮ್ರದ ರೇಕನ್ನು ಮಾಡಿಸಿ ಮೇಲಿನ ಕಲ್ಕವನ್ನು ತಗಡಿನ ಎರಡು ಮುಖಕ್ಕೂ ಚೆನ್ನಾಗಿ ಲೇಪಹಾಕಬೇಕು, ಆ ತಗಡನ್ನು ಒಂದು ಮಡಿಕೆಯಲ್ಲಿರಿಸಿ ಮೇಲೆ

ಮುಚ್ಚಿ ಸೀಲುಮಾಡಿ ಒಂದು ದಿವಸ ಚನ್ನಾಗಿ ಉರಿಸಬೇಕು, ಚನ್ನಾಗಿ ಪಕ್ವವಾದ ಮೇಲೆ ತೆಗೆದುಕೊಂಡು ಕಲಬತ್ತಿನಲ್ಲಿ ಹಾಕಿ ನುಣ್ಣಗೆಯ ಚೂರ್ಣಮಾಡಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು, ಈ ರಸ ಎರಡು ಗುಲಗಂಜಿಯ ಪ್ರಮಾಣವನ್ನು ಸೇವಿಸಿದಲ್ಲಿ ಶ್ವಾಸರೋಗವನ್ನು ಗೆಲ್ಲಬಹುದು.

ಶುದ್ಧಂಸೂತಂಮೃತಂಲೋಹಂತಾಪ್ಯಂಗಂಧಕತಾಲಕೇ ॥
ಪಥ್ಯಾಗ್ನಿಮಂಥಂನಿರ್ಗುಂಡೀಂತ್ರ್ಯೂಷಣಂಟಂಕಣಂವಿಷಂ।೧೬೬।
ತುಲ್ಯಾಂಶಂಮರ್ದಯೇತ್ ಖಲ್ವೇದಿನಂನಿರ್ಗುಂಡಿಕಾದ್ರವೈಃ ॥
ಮುಂಡೀದ್ರಾವೈರ್ದಿನೈಕಂತುದ್ವಿಗುಂಜಂವಟಿಕೀಕೃತಂ ॥ ೧೬೭ ॥
ಭಕ್ಷಯೇದ್ವಾತರೋಗಾರ್ತೋನಾಮ್ನಾಸ್ವಚ್ಛಂದಭೈರವಃ ॥
ರಾಸ್ನಾಮೃತಾದೇವದಾರುಶುಂಠೀವಾತಾರಿಜಂಶೃತಂ ॥ ೧೬೮ ॥
ಸಗುಗ್ಗುಲುಂಪಿಬೇತ್ ಕೋಷ್ಣಮನುಪಾನಂಸುಖಾವಹಂ ॥

ಸ್ವಚ್ಛಂದಭೈರವರಸ—ಶುದ್ಧವಾದ ಪಾದರಸ, ಲೋಹಭಸ್ಮ, ಸ್ವರ್ಣಮಾಕ್ಷಿಕ, ಗಂಧಕ, ಅರಿದಳ ಅಳಲೆಸುಕಾಯಿ, ನರುವಲತೊಪ್ಪು, ಲಕ್ಕಿಯ ಸೊಪ್ಪು, ಶುಂಠಿ ಹಿಪ್ಪಲಿ ಮೆಣಸು, ಟಂಕಣಕ್ಷಾರ, ವತ್ಸನಾಭಿ ಇವೆಲ್ಲವನ್ನೂ ಶುದ್ಧವಾದವುಗಳನ್ನು [illegible] ವಾದ ಪ್ರಮಾಣದಲ್ಲಿ ನಯವಾದ ಚೂರ್ಣಮಾಡಿಕೊಂಡು [illegible] ಲ್ಲಿ ಹಾಕಿ ಲಕ್ಕಿಯಸೊಪ್ಪಿನ ರಸದಲ್ಲಿ ಅರೆದು ಒಂದು ದಿವಸ ಬಿಡಬೇಕು, ಒಂದು ದಿವಸ ಅನಂತನಗೋಳಿಯ ರಸದಲ್ಲಿ ಅರೆದು ಬಿಡಬೇಕು, ನಂತರ ಎರಡು ಗುಲಗಂಜಿಯ ತೂಕಕ್ಕೆ ಒಂದರಂತೆ ಗುಳಿಗೆಯನ್ನು ಮಾಡಿಕೊಳ್ಳಬೇಕು ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು ಈ ರಸದ ಸೇವನೆಯಿಂದ ಸಮಸ್ತ ವಾತರೋಗಗಳೂ ಗುಣಹೊಂದುತ್ತವೆ. ಇದನ್ನು ಸೇವಿಸುವಾಗ್ಯೆ ಅನುಪಾನವಾಗಿ ಸಣ್ಣರಾಸ್ಮೆ, ಅಮೃತಬಳ್ಳಿ, ದೇವದಾರೀಚಕ್ಕೆ, ಶುಂಠಿ, ಹರಳು ಬೇರು ಇವುಗಳ ಕಷಾಯಮಾಡಿ ಶುದ್ಧವಾದ ಗುಗ್ಗುಳವನ್ನು ಸೇರಿಸಿ ಬಿಸಿಯಾಗಿ ಕುಡಿಯಬೇಕು

ದಗ್ಧ್ವಾಕಪರ್ದಕಂಪಿಷ್ಟ್ವಾತ್ರ್ಯೂಷಣಂಟಂಕಣಂವಿಷಂ ॥ ೧೬೯ ॥
ಗಂಧಕಂಶುದ್ಧಸೂತಂಚತುಲ್ಯಂಜಂಬೀರಜೈರ್ದ್ರವೈಃ ॥
ಮರ್ದಯೇದ್ಭಕ್ಷಯೇನ್ಮಾಷಂಮರಿಚಾಜ್ಯಂಲಿಹೇದನು ॥ ೧೭೦ ॥
ನಿಹಂತಿಗ್ರಹಣೀರೋಗಂಪಥ್ಯಂತಕ್ರೌದನಂಹಿತಂ ॥

ಹಂಸಪೋಟಲೀರಸ—ಕವಡೆಯನ್ನು ಶುದ್ಧಿಮಾಡಿಕೊಂಡು ಭಸ್ಮಮಾಡಿ ಚನ್ನಾಗಿ ಅರದು ಅವರ ಜೊತೆಗೆ ಅದರಷ್ಟೇ ತ್ರ್ಯೂಷಣಚೂರ್ಣ, ಟಂಕಣಕ್ಷಾರ, ವತ್ಸನಾಭಿ, ಶುದ್ಧವಾದ ಗಂಧಕ, ಶುದ್ಧವಾದ ಪಾದರಸ ಇವುಗಳನ್ನು ಸೇರಿಸಿ

ನಿಂಬೆಯಹಣ್ಣಿನ ರಸದಲ್ಲಿ ಅರೆಯಬೇಕು, ನಂತರ ಒಂದು ಮಾಷ ಪರಿಮಾಣ ಮಾತ್ರೆಗಳನ್ನು ಮಾಡಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಮೆಣಸಿನಕಾಳಿನ ಪುಡಿ ಮತ್ತು ತುಪ್ಪದಲ್ಲಿ ಒಂದು ಮಾತ್ರೆಯನ್ನು ಸೇವಿಸಿದರೆ ಅಸಾಧ್ಯವಾದ ಗ್ರಹಣೀರೋಗವನ್ನು ನಿವಾರಣಮಾಡುತ್ತದೆ, ಪಥ್ಯ ಮಜ್ಜಿಗೆ ಅನ್ನ.

ಮೃತಂತಾಮ್ರಮಜಾಕ್ಷೀರೈಃಪಾಚ್ಯಂತುಲ್ಯೈರ್ಗತದ್ರವಂ ॥೧೭೧॥
ತತ್ತಾಮ್ರಂಶುದ್ಧಸೂತಂಚಗಂಧಕಂಚಸಮಂಸಮಂ ॥
ನಿರ್ಗುಂಡೀಸ್ವರಸೈರ್ಮರ್ದ್ಯಂತದ್ಗೋಲಂಸಂಧಯೇದ್ದಿನಂ॥೧೭೨॥
ಯಾಮೈಕಂವಾಲುಕಾಯಂತ್ರೇಪಾಚ್ಯಂಭೋಜ್ಯಂದ್ವಿಗುಂಜಕಂ ॥
ಬೀಜಪೂರಕಮೂಲಂತುಸಜಲಂಚಾನುಪಾಯಯೇತ್ ॥ ೧೭೩ ॥
ರಸಸ್ತ್ರಿವಿಕ್ರಮೋನಾಮ್ನಾಮಾಸೈಕೇನಾಶ್ಮರೀಪ್ರಣುತ್ ॥

ತ್ರಿವಿಕ್ರಮರಸವನ್ನು ಹೇಳುತ್ತಾನೆ—ತಾಮ್ರದ ಭಸ್ಮವನ್ನು ಸಮತೂಕ ಆಡಿನಹಾಲಿನಲ್ಲಿ ಹಾಕಿ ಒಲೆಯ ಮೇಲಿರಿಸಿ ಹಾಲೆಲ್ಲಾ ಇಂಗುವ ಮಾವಿಗೂ ಕಾಯಿಸಬೇಕು, ನಂತರ ಆ ತಾಮ್ರಭಸ್ಮದ ಜೊತೆಗೆ ಶುದ್ಧವಾದ ಪಾದರಸ, ಗಂಧಕ, ಇವುಗಳನ್ನು ಮೂರೂ ಒಂದೇ ಪ್ರಮಾಣವಿರುವಂತೆ ಸೇರಿಸಿ ಲಕ್ಕಿಯ ಸೊಪ್ಪಿನ ರಸದಲ್ಲಿ ಚನ್ನಾಗಿ ಅರೆದು ಗೋಲಿಮಾಡಿ ಆ ಗೋಲಿಯನ್ನೊಂದು ಪಾತ್ರೆಯಲ್ಲಿರಿಸಿ ಸೀಲುಮಾಡಿ ಅದನ್ನು ವಾಲುಕಾಯಂತ್ರದಲ್ಲಿರಿಸಿ ಒಂದು ಝಾಮ ಪಕ್ವಮಾಡಿ ಸ್ವಾಂಗಶೀತವಾದ ಮೇಲೆ ತೆಗೆದುಕೊಂಡು ಅರೆದು ಸೂಕ್ಷ್ಮವಾದ ಚೂರ್ಣಮಾಡಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಸೇವಿಸತಕ್ಕ ಪರಿಮಾಣ ಎರಡು ಗುಲಗಂಜಿಯ ತೂಕ, ಅನುಪಾನವಾಗಿ ಮಾದಲದ ಬೇರಿನ ಕಷಾಯವನ್ನು ಕುಡಿಯಿಸಬೇಕು, ಇದರಿಂದ ಅಶ್ಮರಿ ಎಂಬ ಮೂತ್ರಮಾರ್ಗದಲ್ಲಿ ಕಲ್ಲುಬರುವ ರೋಗವು ಗುಣವಾಗುತ್ತದೆ.

ತಾಲಂತಾಸ್ಯಂಶಿಲಾಸೂತಂಶುದ್ಧಂಸೈಂಧವಟಂಕಣೇ ॥ ೧೭೪ ॥
ಸಮಾಂಶಂಚೂರ್ಣಯೇತ್ ಖಲ್ವೇಸೂತಾದ್ವಿಗುಣಗಂಧಕಂ ॥
ಗಂಧತುಲ್ಯಂಮೃತಂತಾಮ್ರಂಜಂಬೀರೈರ್ದಿನಪಂಚಕಂ ॥ ೧೭೫ ॥
ಮರ್ದ್ಯಂಷಡ್ಭಿಃಪುಟೈಃಪಾಚ್ಯಂಭೂಧರೇಸಂಪುಟೋದರೇ ॥
ಪುಟೇಪುಟೇದ್ರವೈರ್ಮರ್ದ್ಯಂಸರ್ವಮೇತತ್ತುಷಟ್ಪಲಂ ॥ ೧೭೬ ॥
ದ್ವಿಪಲಂಮಾರಿತಂತಾಮ್ರಂಲೋಹಭಸ್ಮಚತುಷ್ಪಲಂ ॥
ಜಂಬೀರಾಮ್ಲೇನತತ್ಸರ್ವಂದಿನಂಮರ್ದ್ಯಂಪುಟೇಲ್ಲಘು ॥ ೧೭೭ ॥

ತ್ರಿಂಶದಂಶಂವಿಷಂಚಾಸ್ಯಕ್ಷಿಪ್ತ್ವಾಸರ್ವಂವಿಚೂರ್ಣಯೇತ್ ॥
ಮಾಹಿಷಾಜ್ಯೇನಸಮ್ಮಿಶ್ರಂನಿಷ್ಕಾರ್ಧಂಭಕ್ಷಯೇತ್ಸದಾ ॥ ೧೭೮ ॥
ಮಧ್ವಾಜ್ಯೈರ್ಬಾಕುಚೀಚೂರ್ಣಂಕರ್ಷಮಾತ್ರಂಲಿಹೇದನು ॥
ಸರ್ವಕುಷ್ಠಾನಿಹಂತ್ಯಾಶುಮಹಾತಾಲೇಶ್ವರೋರಸಃ ॥ ೧೭೯ ॥

ಮಹಾತಾಲೇಶ್ವರರಸ—ಶುದ್ಧವಾದ ಬೆಳ್ಳಿ, ಸ್ವರ್ಣಮಾಕ್ಷಿಕ, ಮಣಿಶಿಲೆ, ಪಾದರಸ, ಸೈಂಧವಲವಣ, ಟಂಕಣಕ್ಷಾರ, ಇವುಗಳೆಲ್ಲವನ್ನೂ ಸಮಪರಿಮಾಣದಲ್ಲಿ ಕೂಡಿಸಿ ಅರೆಯಬೇಕು, ಪಾದರಸದ ಎರಡರಷ್ಟು ಗಂಧಕ, ಗಂಧಕದಷ್ಟೇ ತಾಮ್ರಭಸ್ಮ, ಇವುಗಳನ್ನೂ ಮೇಲಿನ ಚೂರ್ಣದ ಜೊತೆಗೆ ಸೇರಿಸಿ ನಿಂಬೇಹುಳಿಯನ್ನು ಹಾಕಿಕೊಂಡು ಐದು ದಿವಸ ಚನ್ನಾಗಿ ಅರದು ಒಂದು ಶ್ರಾವೆಯಲ್ಲಿ ಹಾಕಿ ಭೂಧರಯಂತ್ರಕ್ರಮದಲ್ಲಿ ಪುಟಹಾಕಬೇಕು, ಈ ರೀತಿಯಾಗಿ ಐದು ಪುಟವನ್ನು ಹಾಕಿ ತೆಗೆಯಬೇಕು, ಪ್ರತಿಯೊಂದು ಸಾರಿಯೂ ಮೊದಲು ಮಾಡಿದ ಕ್ರಮವನ್ನೇ ಅನುಸರಿಸಬೇಕು, ಅಂದರೆ ನಿಂಬೆಯಹಣ್ಣಿನ ರಸದಲ್ಲಿ ಐದು ದಿವಸ ಅರೆಯಬೇಕು, ಈ ರೀತಿ ಆರು ಸಾರಿ ಪುಟಹಾಕಿ ತೆಗೆದ ಮೇಲೆ ಆ ಚೂರ್ಣ ಆರು ಪಲದಷ್ಟಕ್ಕೆ ಎರಡು ಪಲ ಮೃತತಾಮ್ರ ನಾಲ್ಕುಪಲ ಲೋಹಭಸ್ಮ ಈ ರೀತಿ ಆರು ಪಲಗಳನ್ನು ಸೇರಿಸಿ ಮತ್ತೆ ನಿಂಬೆಯಹುಳಿಯಿಂದ ಒಂದು ದಿವಸ ಚನ್ನಾಗಿ ಅರದು ಶ್ರಾವಯಲ್ಲಿ ಹಾಕಿ ಉಸಿರಾಡದಂತೆ ಸೀಲುಮಣ್ಣುಮಾಡಿ ಲಘುಪುಟದಲ್ಲಿ ಪಕ್ವಮಾಡಬೇಕು, ನಂತರ ಈ ಒಟ್ಟು ಔಷಧದ ಮೂವತ್ತನೆಯ ಒಂದಂಶ ವತ್ಸನಾಭಿಯನ್ನು ಸೇರಿಸಿ ಚನ್ನಾಗಿ ಚೂರ್ಣಮಾಡಿ ಇರಿಸಿಕೊಂಡು ಅರ್ಧ ನಿಷ್ಕ ಪರಿಮಾಣದಷ್ಟು ಔಷಧಿಯನ್ನು ಎಮ್ಮೆಯತುಪ್ಪದಲ್ಲಿ ತಿನ್ನಿಸಿ ಅನುಪಾನವಾಗಿ ಬಾವಂಚೀಬೀಜದ ಚೂರ್ಣವನ್ನು ತುಪ್ಪ ಮತ್ತು ಜೇನುತುಪ್ಪದೊಡನೆ ಸೇರಿಸಿ ನೆಕ್ಕಿಸಬೇಕು, ಸಮಸ್ತ ವಿಧವಾದ ಕುಷ್ಠರೋಗವನ್ನೂ ಈ ರಸವು ಪರಿಹಾರಮಾಡುತ್ತದೆ.

ಭಸ್ಮಸೂತಸಮೋಗಂಧೋಮೃತಾಯಸ್ತಾಮ್ರಗುಗ್ಗುಲೂಃ ॥
ತ್ರಿಫಲಾಚಿತ್ರಮಹಾನಿಂಬಚಿತ್ರಕಶ್ಚಶಿಲಾಜತು ॥ ೧೮೦ ॥
ಇತ್ಯೇಷಾಂಚೂರ್ಣಿತಂಕುರ್ಯಾತ್ಪ್ರತ್ಯೇಕಂಶಾಣಷೋಡಶ ॥
ಚತುಃಷಷ್ಟಿಃಕರಂಜಸ್ಯಬೀಜಚೂರ್ಣಂಪ್ರಕಲ್ಪಯೇತ್ ॥ ೧೮೧ ॥
ಚತುಃಷಷ್ಟಿಸ್ತ್ರಿವೃತಂಚಾಭ್ರಂಮಧ್ವಾಜ್ಯಾಭ್ಯಾಂವಿಲೋಡಯೇತ್ ।
ಸ್ನಿಗ್ಧಭಾಂಡೇಧೃತಂಖಾದೇದ್ದ್ವಿನಿಷ್ಕಂಸರ್ವಕುಷ್ಠನುತ್ ॥ ೧೮೨ ॥
ರಸಃಕುಷ್ಠಕುಠಾರೋಯಂಗಲತ್ಕುಷ್ಠನಿವಾರಣಃ ॥

**ಕುಷ್ಠಕುಠಾರರಸ**—ರಸಭಸ್ಮ, ಶುದ್ಧವಾದ ಗಂಧಕ, ಲೋಹಭಸ್ಮ, ಶುದ್ಧವಾದ ಗುಗ್ಗುಳ, ತ್ರಿಫಲಚೂರ್ಣ, ಬೇವಿನಪಟ್ಟೆ, ಚಿತ್ರಮೂಲ, ಶುದ್ಧ ಶಿಲಾಜತು, ಇವು ಪ್ರತಿಯೊಂದೂ ಹದಿನಾರು ಶಾಣ ಪ್ರಮಾಣ ಸೇರಿಸಿ ಸಣ್ಣ ಚೂರ್ಣ ಮಾಡಬೇಕು, ಅರವತ್ತನಾಲ್ಕು ಶಾಣದ ತೂಕ ಒಳ್ಳೆಯದಾದ ಹೊಂಗೆಯ ಬೀಜವನ್ನು ಕುಟ್ಟಿ ಚಿಗಳಿಮಾಡಿಕೊಳ್ಳಬೇಕು, ಅಷ್ಟೇ ಅಭ್ರಕಭಸ್ಮವನ್ನೂ ಸೇರಿಸಿ ಇವುಗಳೆಲ್ಲವನ್ನೂ ಒಂದು ಪಾತ್ರೆಯಲ್ಲಿ ಹಾಕಿ ಹಸುವಿನ ತುಪ್ಪ ಮತ್ತು ಜೇನುತುಪ್ಪಗಳನ್ನು ಸಮಪರಿಮಾಣದಲ್ಲಿ ಸೇರಿಸಿ ಚನ್ನಾಗಿ ಕಲಸಿ ಜಿಡ್ಡು ತುಂಬಿರಿಸಿದ್ದ ಒಂದು ಹಳೆಯ ಮಡಕೆಯಲ್ಲಿ ಕೆಲವು ದಿವಸ ಹಾಕಿ ಇರಿಸಿದ್ದು ಪ್ರತಿ ದಿವಸವೂ ಇದರಲ್ಲಿ ಎರಡು ನಿಷ್ಕ ಪ್ರಮಾಣದಷ್ಟನ್ನು ತಿನ್ನುತ್ತ ಬಂದಲ್ಲಿ ಅಸಾಧ್ಯವಾದ ಗಲತ್‌ಕುಷ್ಠವೆನ್ನುವುದು ಸಹ ಗುಣವಾಗುತ್ತದೆ.

ಶುದ್ಧಂಸೂತಂದ್ವಿಧಾಗಂಧಂಮರ್ದ್ಯಂಕನ್ಯಾದ್ರವೈರ್ದಿನಂ ॥೧೮೩॥
ತದ್ಗೋಲಂಪೀತರೀಮಧ್ಯೇತಾಮ್ರಪಾತ್ರೇಣರೋಧಯೇತ್ ॥
ಸೂತಕಾದ್ದ್ವಿಗುಣೇನೈವಶುದ್ಧೇನಾಧೋಮುಖೇನಚ ॥ ೧೮೪ ॥
ಪಾರ್ಶ್ವೇಭಸ್ಮನಿಧಾಯಾಥಪಾತ್ರೋರ್ಧ್ವಂಗೋಮಯಂಜಲಂ ॥
ಕಿಂಚಿತ್ಕಿಂಚಿತ್ಪ್ರದಾತವ್ಯಂಚುಲ್ಯಾಂಯಾಮದ್ವಯಂಪಚೇತ್ ।೧೮೫।
ಚಂಡಾಗ್ನಿನಾತದುದ್ಧೃತ್ಯಸ್ವಾಂಗಶೀತಂವಿಚೂರ್ಣಯೇತ್ ॥
ಕಾಷ್ಠೋದುಂಬರಿಕಾವಹ್ನಿತ್ರಿಫಲಾರಾಜವೃಕ್ಷಕಂ ॥ ೧೮೬ ॥
ವಿಡಂಗಂಬಾಕುಚೀಬೀಜಂಕ್ವಾಥಯೇತ್ತೇನಭಾವಯೇತ್ ॥
ದಿನೈಕಮುದಯಾದಿತ್ಯೋರಸೋದೇಯೋದ್ವಿಗುಂಜಕಃ ॥೧೮೭॥
ವಿಚರ್ಚಿಕಾಂದದ್ರುಕುಷ್ಠಂವಾತರಕ್ತಂಚನಾಶಯೇತ್ ॥
ಅನುಪಾನಂಚಕರ್ತವ್ಯಂಬಾಕುಚೀಫಲಚೂರ್ಣಕಂ ॥ ೧೮೮ ॥
ಖದಿರಸ್ಯಕಷಾಯೇಣಸಮೇನಪರಿಪಾಚಿತಂ ॥
ತ್ರಿಶಾಣಂತದ್ಗವಾಂಕ್ಷೀರೈಃಕ್ವಾಥೈರ್ವಾತ್ರೈಫಲೈಃಪಿಬೇತ್ ॥೧೮೯॥
ತ್ರಿದಿನಾಂತೇಭವೇತ್ಸ್ಫೋಟಸ್ಸಪ್ತಾಹಾದ್ವಾಕಿಲಾಸಕೇ ॥
ನೀಲೀಂಗುಂಜಾಂಚಕಾಸೀಸಂಧತ್ತೂರಂಹಂಸಪಾದಿಕಾಂ ॥ ೧೯೦ ॥
ಸೂರ್ಯಭಕ್ತಾಂಚಚಾಂಗೇರೀಂಪಿಷ್ಟ್ವಾಮೂಲಾತ್ಪ್ರಲೇಪಯೇತ್ ॥
ಸ್ಫೋಟಸ್ಥಾನಪ್ರಶಾಂತ್ಯರ್ಥಂಸಪ್ತರಾತ್ರಂಪುನಃಪುನಃ ॥ ೧೯೧ ॥
ಶ್ವೇತಕುಷ್ಠಂನಿಹಂತ್ಯಾಶುಸಾಧ್ಯಾಸಾಧ್ಯಂನಸಂಶಯಃ ॥
ಅಪರಶ್ಶ್ವಿತ್ರಲೇಪೋಪಿಕಥ್ಯತೇತ್ರಭಿಷಗ್ವರೈಃ ॥ ೧೯೨ ॥
ಗುಂಜಾಫಲಾಗ್ನಿಚೂರ್ಣಂಚಲೇಪಿತಂಶ್ವೇತಕುಷ್ಠನುತ್ ॥
ಶಿಲಾಪಾಮಾರ್ಗಭಸ್ಮಾಪಿಲಿಪ್ತಂಶ್ವಿತ್ರಂವಿನಾಶಯೇತ್ ॥ ೧೯೩ ॥

ಉದಯಾದಿತ್ಯರಸ—ಶುದ್ಧವಾದ ಪಾದರಸ, ರಸದ ಎರಡರಷ್ಟು ಗಂಧಕ, ಇವೆರಡನ್ನೂ ಸೇರಿಸಿ ಲೋಳೆಸರದ ರಸದಲ್ಲಿ ಒಂದು ದಿವಸ ಚೆನ್ನಾಗಿ ಅರೆಯಬೇಕು, ಅರದು ಉಂಡೆಯಾಗಿ ಮಾಡಿ ಒಣಗಿಸಿ ಆ ಗೋಲವನ್ನು ಒಂದು ತಾಮ್ರದ ಪಾತ್ರೆಯಲ್ಲಿರಿಸಿ ಆ ಪಾತ್ರೆಯನ್ನು ಮಡಕೆಯಲ್ಲಿ ಬಾರಲುಹಾಕಿರಿಸಬೇಕು, ಆ ತಾಮ್ರಪಾತ್ರವು ಹಿಂದೆ ಹೇಳಿದ ರಸದ ಎರಡರಷ್ಟು ತೂಕವುಳ್ಳದ್ದಾಗಿಯೂ ಶುದ್ಧವಾದ ತಾಮ್ರದಲ್ಲಿ ಮಾಡಿದ್ದಾಗಿಯೂ ಇರಬೇಕು, ಈ ರೀತಿ ಮಾಡಿ ಮಡಿಕೆಯ ಬಾಯಿಗೊಂದು ತಾಮ್ರದ ಶ್ರಾವೆಯನ್ನು ಮುಚ್ಚಿ ಉಸರಾಡದಂತೆ ಸೀಲುಮಾಡಬೇಕು, ಮಡಕೆಯನ್ನು ಒಲೆಯಲ್ಲಿರಿಸಿ ಮಗ್ಗಲಿಗೆಲ್ಲಾ ಬೂದಿಯನ್ನು ಸೇರಿಸಿ ಎರಡು ಝಾಮ ಬೆಂಕಿಯನ್ನುರಿಸಬೇಕು, ಈ ಮಧ್ಯೆ ಮಡಿಕೆಯ ಮೇಲೆ ಮುಚ್ಚಿರುವ ತಾಮ್ರದ ಪಾತ್ರೆಯ ಮೇಲೆ ಕಾದಂತೆಲ್ಲಾ ಸಗಣಿನೀರನ್ನು ಸುರಿಯುತ್ತಲೇ ಇರಬೇಕು, ಉರಿಯನ್ನು ಬಲವಾಗಿಯೇ ಹಾಕುತ್ತಿರಬೇಕು, ಎರಡು ಝಾಮ ಕಳದ ಮೇಲೆ ಆರುವುದಕ್ಕೆ ಬಿಟ್ಟು ಚನ್ನಾಗಿ ಆರಿದ ಮೇಲೆ ನುಣ್ಣಗೆ ಪುಡಿಮಾಡಿ ಇರಿಸಿಕೊಳ್ಳಬೇಕು, ಕಾಡು ಅತ್ತಿಯಚಕ್ಕೆ, ಚಿತ್ರಮೂಲ, ತ್ರಿಫಲಚೂರ್ಣ, ಕರ್ಕ್ಕೇತೊಪ್ಪೆ, ವಾಯುವಿಡಂಗ, ಬಾವಂಚೀಬೀಜ, ಇವುಗಳನ್ನು ಸಮಪರಿಮಾಣದಲ್ಲಿ ಸೇರಿಸಿ ಚನ್ನಾಗಿ ಕಷಾಯಮಾಡಿ ಆ ಕಷಾಯದಲ್ಲಿ ಚೂರ್ಣಮಾಡಿ ಇರಿಸಿಕೊಂಡಿರುವ ರಸವನ್ನು ಒಂದು ದಿವಸ ಭಾವನೆಕೊಡಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಈ ಔಷಧವನ್ನು ಒಂದು ದಿವಸಕ್ಕೆ ಎರಡು ಗುಲಗಂಜಿಯ ಪ್ರಮಾಣ ಕೊಡತಕ್ಕದ್ದು, ಅನುಪಾನವಾಗಿ ಜಾಲಿಯಚಕ್ಕೆ ಮತ್ತು ಬಾವಂಚೀಬೀಜದ ಚೂರ್ಣ ಇವೆರಡನ್ನೂ ಸಮನಾಗಿ ನೇರಿಸಿ ಕಷಾಯಮಾಡಿ ಮೂರು ಶಾಣ ಪ್ರಮಾಣ ಆ ಕಷಾಯವನ್ನು ಹಸುವಿನ ಹಾಲಿನೊಡನಾಗಲಿ ತ್ರಿಫಲಾಕಷಾಯದೊಡನಾಗಲಿ ಸೇರಿಸಿ ಕುಡಿಯಬೇಕು, ಈ ರೀತಿ ಸೇವಿಸುತ್ತ ಬಂದಲ್ಲಿ ಬಿಳಿಯ ತೊನ್ನಿರುವ ಭಾಗದಲ್ಲಿ ಮೂರನೆಯ ದಿವಸವೋ ಏಳನೆಯ ದಿವಸವೋ ಗುಳ್ಳೆಗಳೇಳುತ್ತವೆ, ಈ ಗುಳ್ಳೆಗಳು ಶಾಂತವಾಗುವುದಕ್ಕಾಗಿ ವಜ್ರನೀಲೀಸೊಪ್ಪು, ಗುಲಗಂಜಿ, ಅನ್ನಬೇದಿ, ಉಮ್ಮತ್ತದ ಸೊಪ್ಪು, ಹಂಸಪಾದೀಸೊಪ್ಪು, ಸೂರ್ಯಕಾಂತೀಸೊಪ್ಪು, ಹುಳಚಿಕ್ಕನಸೊಪ್ಪು, ಇವುಗಳನ್ನು ಸಮೂಲವಾಗಿ ತಂದು ಅರದು ಏಳು ದಿವಸ ಲೇಪಹಾಕುತ್ತಿರಬೇಕು, ಇದರಿಂದ ಬಿಳಿಯತೊನ್ನು, ವಿಚರ್ಚಿಕಾ ಎಂಬ ತುರಿಗಜ್ಜಿ, ದದ್ರು ಎಂಬ ಕುಷ್ಠ, ವಾತರಕ್ತವೆಂಬ ಒಂದು ಬಗೆಯ ಚರ್ಮರೋಗ ಇವುಗಳು ಗುಣಹೊಂದುತ್ತವೆ, ಬಿಳಿತೊನ್ನಿಗೆ ಮೇಲಕ್ಕೆ ಹಾಕತಕ್ಕ ಒಂದೆರಡು ಬಗೆಯ ಉಪಾಯವಾದ ಲೇಪವನ್ನು ಹೇಳುತ್ತಾನೆ—ಗುಲಗಂಜಿ, ಚಿತ್ರಮೂಲ, ಇವುಗಳನ್ನು ಅರದಾಗಲೀ, ಮಣಿಶಿಲೆ, ಉತ್ತರಣೇಕಡ್ಡಿಯನ್ನು ಸುಟ್ಟ ಬೂದಿ, ಇವುಗಳನ್ನಾಗಲೀ ಅರದು ಲೇಪಿಸಿದರಾಗಲಿ ಬಿಳೀತೊನ್ನು ಗುಣವಾಗುವದುಂಟು.

ಶುದ್ಧಂಸೂತಂಚತುರ್ಗಂಧಂಪಲಂಯಾಮಂವಿಚೂರ್ಣಯೇತ್ ॥
ಮೃತತಾಮ್ರಾಭ್ರಲೋಹಾನಾಂದರದಸ್ಯಫಲಂಪಲಂ ॥ ೧೯೪ ॥
ಸುವರ್ಣಂರಜತಂಚೈವಪ್ರತ್ಯೇಕಂದಶನಿಷ್ಕಕಂ ॥
ಮಾಷೈಕಂಮೃತವಜ್ರಂಚತಾಲಂಶುದ್ಧಂಪಲದ್ವಯಂ ॥ ೧೯೫ ॥
ಜಂಬೀರೋನ್ಮತ್ತವಾಸಾಭಿಃಸ್ನುಹ್ಯರ್ಕವಿಷಮುಷ್ಟಿಭಿಃ ॥
ಮರ್ದ್ಯಂಹಯಾರಿಜೈರ್ದ್ರಾವೈಃಪ್ರತ್ಯೇಕೇನದಿನಂದಿನಂ ॥ ೧೯೬ ॥
ಏವಂಸಪ್ತದಿನಂಮರ್ದ್ಯಂತದ್ಗೋಲಂವಸ್ತ್ರವೇಷ್ಟಿತಂ ॥
ವಾಲುಕಾಯಂತ್ರಗಂಸ್ವೇದ್ಯಂತ್ರಿದಿನಂಲಘುವಹ್ನಿನಾ ॥ ೧೯೭ ॥
ಆದಾಯಚೂರ್ಣಯೇತ್ಶ್ಲಕ್ಷ್ಣಂಪಲೈಕಂಯೋಜಯೇದ್ವಿಷಂ ॥
ದ್ವಿಪಲಂಪಿಪ್ಪಲೀಚೂರ್ಣಂಮಿಶ್ರಂಸರ್ವೇಶ್ವರೋರಸಃ ॥ ೧೯೮ ॥
ದ್ವಿಗುಂಜೋಲಿಹ್ಯತೇಕ್ಷೌದ್ರೈಸ್ಸುಪ್ತಿಮಂಡಲಕುಷ್ಠನುತ್ ॥
ವಾಕುಚೀದೇವಕಾಂಡಂಚಕರ್ಷಮಾತ್ರಂಸುಚೂರ್ಣಯೇತ್೧೯೯
ಲಿಹೇದೇರಂಡತೈಲಾಕ್ತಮನುಪಾನಂಸುಖಾವಹಂ ॥

ಸರ್ವೇಶ್ವರರಸ—ಶುದ್ಧವಾದ ಪಾದರಸ ಒಂದು ತೂಕ, ಶುದ್ಧವಾದ ಗಂಧಕ ನಾಲ್ಕು ತೂಕ, ಇವೆರಡನ್ನೂ ಖಲ್ವದಲ್ಲಿ ಹಾಕಿಕೊಂಡು ಒಂದು ಜಾವ ಚನ್ನಾಗಿ ಅರೆಯಬೇಕು, ತಾಮ್ರಭಸ್ಮ, ಅಭ್ರಕಭಸ್ಮ, ಲೋಹಭಸ್ಮ, ಇಂಗಲೀಕ ಇವುಗಳನ್ನು ರಸದಷ್ಟು ಸೇರಿಸಿಕೊಳ್ಳಬೇಕು, ಸುವರ್ಣಭಸ್ಮ, ರಜತಭಸ್ಮ, ಇವೆರಡೂ ಹತ್ತು ಹತ್ತು ನಿಷ್ಕದಂತೆ ಸೇರಿಸಿಕೊಳ್ಳಬೇಕು, ವಜ್ರಭಸ್ಮ ಒಂದು ಮಾಷ ಪರಿಮಾಣ ಸೇರಿಸಿಕೊಳ್ಳಬೇಕು, ಶುದ್ಧವಾದ ಅರಿದಳವನ್ನು ಪಾದರಸದ ಎ ರಡರಷ್ಟು ಸೇರಿಸಬೇಕು, ಈ ರೀತಿ ಎಲ್ಲಾ ವಸ್ತುಗಳನ್ನೂ ಸೇರಿಸಿ ನುಣ್ಣಗೆ ಅರೆದು ಪುಡಿಮಾಡಿಕೊಂಡು ನಂತರ ನಿಂಬೇಹುಳಿ, ಉಮ್ಮತ್ತದಸೊಪ್ಪಿನ ರಸ, ಆಡುಸೋಗೆಸೊಪ್ಪಿನ ರಸ, ಮುಷ್ಟಿಬೀಜದ ಕಷಾಯ, ಕಣಿಗಲಗೆಡ್ಡೆಯ ರಸ, ಈ ದ್ರವದ್ರವ್ಯಗಳೊಡನೆ ಪ್ರತ್ಯೇಕ ಒಂದೊಂದು ದಿವಸ ಅರೆಯಬೇಕು, ಈ ರೀತಿ ಏಳ ದಿನ ಅರೆದು ನಂತರ ಅದನ್ನು ಒಂದು ಗೋಲಿಕಟ್ಟಿ ಅದನ್ನು ಬಟ್ಟೆಯಲ್ಲಿ ಸು ವಾಲುಕಾಯಂತ್ರದಲ್ಲಿರಿಸಿ ಮೂರು ದಿವಸ ಮಂದಾಗ್ನಿಯಿಂದ ಸ್ವೇದನ ಮಾಡಬೇಕು, ಸುಮಾರು ಬೆಂಕಿಯನ್ನು ಮೂರು ದಿವಸವೂ ನಿರಂತರವಾಗಿ ಉರಿಸಬೇಕು, ಆರಿದ ಮೇಲೆ ಕುಡಿಕೆ ತೆಗೆದುಕೊಂಡು ನುಣ್ಣಗೆ ಚೂರ್ಣಮಾಡಿ ಒಂದು ಪಲ ವತ್ಸನಾಭಿಯ ಚೂರ್ಣ, ಎರಡು ಪಲ ಹಿಪ್ಪಲಿಯ ಚೂರ್ಣ ಇವುಗಳನ್ನು ಮಿಶ್ರಮಾಡಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧನಾದ ಹಾಗಾಯಿತು. ಇದರ ಎರಡು ಗುಲಗಂಜಿಯ ಪ್ರಮಾಣದಷ್ಟನ್ನು ಜೇನಿನೊಡನೆ

ಸೇವಿಸುತ್ತ ಬರಬೇಕು. ಇದರಿಂದ ಸುಪ್ತಿಕುಷ್ಠ, ಮಂಡಲಕುಷ್ಠ ಮೊದಲಾದ ನಾನಾ ವಿಧಗಳಾದ ಕುಷ್ಠಗಳು ಗುಣಹೊಂದುತ್ತವೆ. ಇದಕ್ಕೆ ಅನುಪಾನವಾಗಿ ಬಾವಂಚಿಬೀಜ, ದೇವದಾರಿಚಕ್ಕೆ ಇವುಗಳನ್ನು ಸಮಪ್ರಮಾಣದಲ್ಲಿ ಸೇರಿಸಿ, ಸೂಕ್ಷ್ಮವಾದ ಚೂರ್ಣಮಾಡಿ ಒಂದು ಕರ್ಷ ಮಾತ್ರ ಹರಳೆಣ್ಣೆಯಲ್ಲಿ ನೆಕ್ಕಬೇಕು.

ಹೇಮಾಹ್ವಾಂಪಂಚಪಲಿಕಾಂಕ್ಷಿಪ್ತ್ವಾತಕ್ರಘಟೇಪಚೇತ್ ॥೨೦೦॥
ತಕ್ರೇಜೀರ್ಣೇಸಮುದ್ಧೃತ್ಯಪುನಃಕ್ಷೀರಘಟೇಪಚೇತ್ ॥
ಕ್ಷೀರೇಜೀರ್ಣೇಸಮುದ್ಧೃತ್ಯಕ್ಷಾಳಯಿತ್ವಾವಿಶೋಧಯೇತ್ ೨೦೧
ತಚ್ಚೂರ್ಣಂಪಂಚಪಲಿಕಂಮರಿಚಾನಾಂಪಲದ್ವಯಂ ॥
ಪಲೈಕಂಮೂರ್ಚ್ಛಿತಂಸೂತಂಏಕೀಕೃತ್ಯತುಭಕ್ಷಯೇತ್ ॥ ೨೦೨ ॥
ನಿಷ್ಕೈಕಂಸುಪ್ತಿಕುಷ್ಠಾರ್ತಃಸ್ವರ್ಣಕ್ಷೀರೀರಸೋಹ್ಯಯಂ ॥

ಸ್ವರ್ಣಕ್ಷೀರೀರಸವನ್ನು ಹೇಳುತ್ತಾನೆ—ಒಂದು ಮಡಿಕೆಯಲ್ಲಿ ಮಜ್ಜಿಗೆಯನ್ನು ಹಾಕಿ ಅದರಲ್ಲಿ ಐದು ಪಲದಷ್ಟು ಪ್ರಮಾಣ ಸ್ವರ್ಣಕ್ಷೀರೀ ಎಂಬ ಮೂಲಿಕೆಯನ್ನು ಹಾಕಿ ಕೆಳಗೆ ಉರಿಯನ್ನು ಹಾಕುತ್ತ ಮಜ್ಜಿಗೆ ಎಲ್ಲವೂ ಇಂಗುವ ಪರ್ಯಂತರ ಕಾಯಿಸಬೇಕು. ಮಜ್ಜಿಗೆ ಎಲ್ಲವೂ ಬತ್ತಿ ಹೋದ ಮೇಲೆ ತೆಗದುಕೊಂಡು ಅದನ್ನೇ ಹಾಲು ತುಂಬಿದ ಮಡಕೆಯಲ್ಲಿ ಹಾಕಿ ಹಾಲೆಲ್ಲಾ ಇಂಗುವವರಿವಿಗೂ ಕಾಯಿಸುತ್ತಿದ್ದು ನಂತರ ಮೂಲಿಕೆಯನ್ನು ಹೊರಕ್ಕೆ ತೆಗೆದುಕೊಂಡು ಚನ್ನಾಗಿ ತೊಳೆದು ಒಣಗಿಸಿ ಚೂರ್ಣಮಾಡಬೇಕು. ಈ ರೀತಿಯಾಗಿ ತಯಾರಾದ ಚೂರ್ಣ ಐದು ಪಲ, ಮೆಣಸಿನ ಚೂರ್ಣ ಎರಡು ಪಲ, ಒಂದು ಪಲ ಶುದ್ಧವಾಗಿರುವ ಮತ್ತು ಮೂರ್ಛನಸಂಸ್ಕಾರ ನಡೆದಿರುವ ಪಾದರಸ ಇವು ಮೂರನ್ನೂ ಸೇರಿಸಿ ಖಲ್ವದಲ್ಲಿ ಚನ್ನಾಗಿ ಅರೆದು ಪುಡಿಮಾಡಿ ಗಾಜಿನ ಕುಪ್ಪಿಗೆಯಲ್ಲಿ ಭದ್ರಪಡಿಸಿ ಇರಿಸಿಕೊಳ್ಳುವುದು, ಇಲ್ಲಿಗೆ ಔಷಧವು ಸಿದ್ಧವಾಯಿತು. ಈ ರಸ ಒಂದು ನಿಷ್ಕ ಪರಿಮಾಣವನ್ನು ಸೇವಿಸುತ್ತ ಬಂದಲ್ಲಿ ಸಮಸ್ತ ವಿಧವಾದ ಕುಷ್ಠರೋಗಗಳೂ ಪರಿಹಾರವಾಗುತ್ತವೆ.

ಭಸ್ಮಸೂತಂಮೃತಂಕಾಂತಂಮುಂಡಭಸ್ಮಶಿಲಾಜತು ॥ ೨೦೩ ॥
ಶುದ್ಧಂತಾಪ್ಯಂಶಿಲಾವ್ಯೋಮತ್ರಿಫಲಾಂಕೋಲಬೀಜಕಂ ॥
ಕಪಿತ್ಥಂರಜನೀಚೂರ್ಣಂಭೃಂಗರಾಜೇನಭಾವಯೇತ್ ॥ ೨೦೪ ॥
ತ್ರಿಂಶದ್ವಾರಂವಿಶೋಷ್ಯಾಥಮಧುಯುಕ್ತಂಲಿಹೇತ್ಸದಾ ॥
ನಿಷ್ಕಮಾತ್ರೋಹರೇನ್ಮೇಹಾನ್ಮೇಹಬದ್ಧೋರಸೋಮಹಾನ್೨೦೫
ಮಹಾನಿಂಬಸ್ಯಬೀಜಾನಿಪಿಷ್ಟ್ವಾಷಟ್‌ಸಮ್ಮಿತಾನಿಚ ॥

**ಪಲತಂಡುಲತೋಯೇನಘೃತನಿಷ್ಕದ್ವಯೇನಚ ॥ ೨೦೬ ॥**
**ಏಕೀಕೃತ್ಯಪಿಬೇಚ್ಚಾನುಹಂತಿಮೇಹಂಚಿರಂತನಂ ॥**

ಮೇಹಬದ್ಧರಸವನ್ನು ಹೇಳುತ್ತಾನೆ—ಶುದ್ಧವಾದ ರಸಭಸ್ಮ, ಕಾಂತಭಸ್ಮ, ಮುಂಡವೆಂಬ ಲೋಹಭಸ್ಮ (ಒಂದು ಬಗೆಯ ಕಬ್ಬಿಣ) ಶುದ್ಧವಾದ ಶಿಲಾಜತು, ಶುದ್ಧವಾದ ಸ್ವರ್ಣಮಾಕ್ಷಿಕ, ಶುದ್ಧವಾದ ಮಣಿಶಿಲೆ, ಶುದ್ಧವಾದ ಅಭ್ರಕ, ತ್ರಿಫಲಚೂರ್ಣ, ಅಂಕೋಲೇಬೀಜದ ಚೂರ್ಣ, ಬೇಲದ ಹಣ್ಣು, ಅರಿಸಿನ, ಇವೆಲ್ಲವನ್ನೂ ಸಮಪರಿಮಾಣದಲ್ಲಿ ಸೇರಿಸಿ ಚೂರ್ಣಮಾಡಿ ಗರುಗದ ಸೊಪ್ಪಿನ ರಸದಲ್ಲಿ ಭಾವನೆಯನ್ನು ಮೂವ್ವತ್ತು ಸಾರಿ ಕೊಡಬೇಕು, ನಂತರ ಚನ್ನಾಗಿ ಒಣಗಿಸಿ ಗಾಜಿನ ಸೀಸೆಯಲ್ಲಿ ಭದ್ರಪಡಿಸಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಇದರಲ್ಲಿ ಒಂದು ನಿಷ್ಕ ಪ್ರಮಾಣ ಔಷಧವನ್ನು ಜೇನುತುಪ್ಪದೊಡನೆ ಸೇವಿಸಿದರೆ ಸಮಸ್ತ ವಿಧವಾದ ಮೇಹರೋಗಗಳೂ ಗುಣ ವಾಗುತ್ತವೆ. ಇದಕ್ಕೆ ಮೇಹಬದ್ಧರಸವೆಂದು ಹೆಸರು ಹೆಬ್ಬೇವಿನ ಬೀಜ ಆರನ್ನು ಒಂದು ಪಲ ಅಕ್ಕಿ ತೊಳೆದ ನೀರಿನಲ್ಲಿ ಚನ್ನಾಗಿ ಅರೆದು ಅದರೊಂದಿಗೆ ಎರಡು ನಿಷ್ಕ ಹಸುವಿನ ತುಪ್ಪವನ್ನೂ ಸೇರಿಸಿ ಅನುಪಾನವಾಗಿ ಸೇವಿಸಬೇಕು, ಇದರಿಂದ ಮೇಹರೋಗವು ಬಹಳ ಕಾಲದ್ದಾಗಿದ್ದರೂ ಗುಣವಾಗುತ್ತದೆ.

**ಚತುಸ್ಸೂತಸ್ಯಗಂಧಾಷ್ಟೌರಜನೀತ್ರಿಫಲಾಶಿವಾ ॥ ೨೦೭ ॥**
**ಪ್ರತ್ಯೇಕಂಚದ್ವಿಭಾಗಂಸ್ಯಾತ್ರಿವೃಜ್ಜೈಪಾಲಚಿತ್ರಕಂ ॥**
**ಪ್ರತ್ಯೇಕಂಚತ್ರಿಭಾಗಂಸ್ಯಾತ್ರ್ಯೂಷಂದಂತೀಚಜೀರಕಂ ॥ ೨೦೮ ॥**
**ಪ್ರತ್ಯೇಕಮಷ್ಟಭಾಗಂಸ್ಯಾದೇಕೀಕೃತ್ಯವಿಚೂರ್ಣಯೇತ್ ॥**
**ಜಯಂತೀಸ್ನುಕ್ಪಯೋಭೃಂಗವಹ್ನಿವಾತಾರಿಪಲ್ಲಕೈಃ ॥ ೨೦೯ ॥**
**ಪ್ರತ್ಯೇಕೇನಕ್ರಮಾದ್ಭಾವ್ಯಂಸಪ್ತವಾರಂಪೃಥಕ್ಪೃಥಕ್ ॥**
**ಮಹಾವಹ್ನಿರಸೋನಾಮನಿಷ್ಕಮುಷ್ಣಜಲೈಃಪಿಬೇತ್ ॥ ೨೧೦ ॥**
**ವಿರೇಚನಂಭವೇತ್ತೇನತಕ್ರಭಕ್ತಂಸಸೈಂಧವಂ ॥**
**ದಿನಾಂತೇದಾಪಯೇತ್ಪಥ್ಯಂವರ್ಜಯೇತ್ಶೀತಲಂಜಲಂ ॥೨೧೧॥**
**ಸರ್ವೋದರಹರಃಪ್ರೋಕ್ತೋಮೂಢವಾತಹರಃಪರಃ ॥**

ಮಹಾವಹ್ನಿರಸ—ಶುದ್ಧವಾದ ರಸ ನಾಲ್ಕು ಭಾಗ, ಗಂಧಕ ಎಂಟು ಭಾಗ, ಅರಿಸಿನ, ತ್ರಿಫಲಚೂರ್ಣ, ಅಳಲೇಕಾಯಿ ಇವುಗಳು ಪ್ರತ್ಯೇಕ ಎರಡು ಭಾಗ, ತಿಗಡೆ, ಜಾಪಾಳದ ಬೀಜ, ಚಿತ್ರಮೂಲ, ಇವು ಪ್ರತ್ಯೇಕ ಮೂರು ಭಾಗ, ತ್ರ್ಯೂಷಣಚೂರ್ಣ, ಜಾಪಾಳದ ಬೀಜ, ಜೀರಿಗೆ ಇವು ಮೂರೂ ಪ್ರತ್ಯೇಕ

ಎಂಟು ಭಾಗ, ಈ ರೀತಿಯಾಗಿ ಇವೆಲ್ಲವನ್ನೂ ಕೂಡಿಸಿ ಚೂರ್ಣಮಾಡಿ ಆ ಚೂರ್ಣಕ್ಕೆ ಜಯಂತೀ ಎಂಬ ಸೊಪ್ಪಿನ ರಸ, ಕಳ್ಳಿಯ ಹಾಲು, ಗರುಗದ ಸೊಪ್ಪಿನ ರಸ, ಚಿತ್ರಮೂಲದ ಕಷಾಯ, ಹರಳೆಣ್ಣೆ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಾರಿ ಭಾವನೆ ಕೊಡಬೇಕು, ಇಷ್ಟು ಮಾಡಿದ ಮೇಲೆ ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು, ಇದಕ್ಕೆ ಮಹಾವಹ್ನಿರಸವೆಂಬದಾಗಿ ಹೆಸರು. ಇದನ್ನು ಒಂದು ನಿಷ್ಕ ಪರಿಮಾಣ ಬಿಸಿನೀರಿನೊಡನೆ ಸೇವಿಸಬೇಕು, ಚನ್ನಾಗಿ ಭೇದಿಯಾಗುತ್ತದೆ, ಸೈಂಧವಲವಣದೊಡನೆ ಮಜ್ಜಿಗೆ ಅನ್ನವನ್ನು ಭೋಜನ ಮಾಡಿಸಬೇಕು, ಅದೂ ಸಾಯಂಕಾಲದಲ್ಲಿ ಈ ಭೋಜನವನ್ನು ಕೊಡಿಸ ಬೇಕಾದದ್ದು, ತಣ್ಣೀರನ್ನು ಯಾವ ಕೆಲಸಕ್ಕೂ ಉಪಯೋಗಿಸಬಾರದು, ಇದರಿಂದ ಸಮಸ್ತ ವಿಧಗಳಾದ ಉದರರೋಗಗಳೂ, ಮೂಢವಾತವೂ ಸಹ ಗುಣಹೊಂದುತ್ತದೆ.

ಗಂಧಕಂತಾಲಕಂತಾಪ್ಯಂಮೃತತಾಮ್ರಂಮನಶ್ಶಿಲಾಂ ॥ ೨೧೨ ॥
ಶುದ್ಧಂಸೂತಂಚತುಲ್ಯಾಂಶಂಮರ್ದಯೇದ್ಭಾವಯೇದ್ದಿನಂ ॥
ಪಿಪ್ಪಲ್ಯಾಸ್ತುಕಷಾಯೇಣವಜ್ರೀಕ್ಷೀರೇಣಭಾವಯೇತ್ ॥ ೨೧೩ ॥
ನಿಷ್ಕಾರ್ಧಂಭಕ್ಷಯೇತ್ಕ್ಷೌದ್ರೈರ್ಗುಲ್ಮಂಪ್ಲೀಹಾದಿಕಂಜಯೇತ್ ॥
ರಸೋವಿದ್ಯಾಧರೋನಾಮಗೋಮೂತ್ರಂಚಪಿಬೇದನು ॥ ೨೧೪ ॥

ವಿದ್ಯಾಧರರಸ—ಶುದ್ಧವಾದ ಗಂಧಕ, ಶುದ್ಧವಾದ ತಾಳಕ, ಶುದ್ಧವಾದ ಸ್ವರ್ಣಮಾಕ್ಷಿಕ ತಾಮ್ರಭಸ್ಮ, ಶುದ್ಧವಾದ ಮಣಿಶಿಲೆ, ಶುದ್ಧವಾದ ಪಾದರಸ ಇವುಗಳು ಪ್ರತಿಯೊಂದನ್ನೂ ಸಮಪರಿಮಾಣದಲ್ಲಿ ಸೇರಿಸಿ ಚನ್ನಾಗಿ ಅರದು ಚೂರ್ಣವಾಗ ಮಾಡಬೇಕು, ನಂತರ ಆ ಚೂರ್ಣವನ್ನು ಹಿಪ್ಪಲಿಯ ಕಷಾಯದಲ್ಲಿ ಒಂದು ದಿವಸವೂ ವಜ್ರಿ ಎಂಬ ಒಂದು ಒಗೆಯ ಕಳ್ಳಿಯ ಹಾಲಿನಿಂದ ಒಂದು ದಿವಸವೂ ಭಾವನೆಕೊಡಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಈ ಔಷಧದಲ್ಲಿ ಅರ್ಧ ನಿಷ್ಕ ಪರಿಮಾಣ ಔಷಧವನ್ನು ಜೇನು ತುಪ್ಪದೊಂದಿಗೆ ಸೇವಿಸಿದಲ್ಲಿ ಗುಲ್ಮ, ಪ್ಲೀಹಾಭಿವೃದ್ಧಿ ಮೊದಲಾದ ಸಮಸ್ತ ಉದರರೋಗಗಳೂ ಗುಣವಾಗುತ್ತವೆ, ಇದಕ್ಕೆ ವಿದ್ಯಾಧರರಸವೆಂದು ಹೆಸರು. ಇದರ ಜೊತೆಯಲ್ಲಿ ಅನುಪಾನವಾಗಿ ಗೋಮೂತ್ರವನ್ನು ಕುಡಿಯಬೇಕು.

ಟಂಕಣಂಹಾರಿಣಂಶೃಂಗಂಸ್ವರ್ಣಂಶುಲ್ಬಂಮೃತಂಸಮಂ ॥
ದಿನೈಕಮಾರ್ದ್ರಕದ್ರಾವೈರ್ಮರ್ದ್ಯಂರುಧ್ವಾಪುಟೇಪಚೇತ್ ॥ ೨೧೫ ॥
ತ್ರಿನೇತ್ರಾಖ್ಯರಸಸ್ಯೈಕಂಮಾಷಂಮಧ್ವಾಜ್ಯಕೈರ್ಲಿಹೇತ್ ॥

ಸೈಂಧವಂಜೀರಕಂಹಿಂಗುಮಧ್ವಾಜ್ಯಾಭ್ಯಾಂಲಿಹೇದನು ॥ ೨೧೬ ॥
ಪಕ್ತಿಶೂಲಹರಃಖ್ಯಾತೋನಾಸನಾತ್ರಾನ್ನಸಂಶಯಃ ॥

ತ್ರಿನೇತ್ರರಸ—ಶುದ್ಧವಾದ ಟಂಕಣಕ್ಷಾರ, ಸಾರಗದ ಕೋಡು, ಶುದ್ಧ ವಾದ ಬಂಗಾರದ ಭಸ್ಮ, ಶುದ್ಧವಾದ ತಾಮ್ರಭಸ್ಮ, ರಸಭಸ್ಮ, ಇವೆಲ್ಲವನ್ನೂ ಸಮಪ್ರಮಾಣದಲ್ಲಿ ಸೇರಿಸಿ ಒಂದು ದಿವಸ ಹಸಿಶುಂಟಿಯ ರಸದಲ್ಲರದು ಗೋಲಿ ಕಟ್ಟಿ ಶರಾವೆಯಲ್ಲಿರಿಸಿ ಮೇಲೆ ಮುಚ್ಚಿ ಉಸಿರಾಡದಂತೆ ಸೀಲುಮಾಡಿ ಪುಟಹಾಕಿ ಪಕ್ವಮಾಡಬೇಕು, ತಣ್ಣಗಾದ ಮೇಲೆ ಹೊರಕ್ಕೆ ತೆಗದುಕೊಂಡು ಚೂರ್ಣಮಾಡಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು ಇದಕ್ಕೆ ತ್ರಿನೇತ್ರರಸವೆಂದು ಹೆಸರು. ಇದರಲ್ಲಿ ಒಂದು ಮಾಷ ಪರಿಮಾಣ ರಸವನ್ನು ಜೇನುತುಪ್ಪ ಮತ್ತು ತುಪ್ಪಗಳೊಡನೆ ಕಲೆಸಿ ಭಕ್ಷಿಸಬೇಕು, ಸೈಂಧವಲವಣ, ಜೀರಿಗೆಯ ಪುಡಿ, ಇಂಗಿನ ಪುಡಿ ಇವುಗಳನ್ನೂ ಸಮಪ್ರಮಾಣದಲ್ಲಿ ಸೇರಿಸಿ ತುಪ್ಪ ಮತ್ತು ಜೇನುತುಪ್ಪಗಳೊಡನೆಯೇ ಕಲಸಿ ಅನುಪಾನವಾಗಿ ಸೇವಿಸಬೇಕು, ಈ ರೀತಿ ಒಂದು ತಿಂಗಳು ಸೇವಿಸೋಣದರಿಂದ ಎಂತಹ ಅಜೀರ್ಣ ಶೂಲೆ ಯಾದರೂ ಗುಣಹೊಂದುತ್ತದೆ.

ಶುದ್ಧಂಸೂತಂದ್ವಿಧಾಗಂಧಂಯಾಮ್ಯಕಂಪುಥಕ್ಕಾಯೇದ್ದ್ವಥಂ೨೧೭
ದ್ವಯೋಸ್ತುಲ್ಯಂಶುದ್ಧತಾಮ್ರಂಸಂಪುಟೇತನ್ನಿರೋಧಯೇತ್ ॥
ಊರ್ಧ್ವಾಧೋಲವಣಂದತ್ವಾಮೃದ್ಭಾಂಡೇಧಾರಯೇದ್ಭಿಷಕ್ ॥ ೨೧೮ ॥
ತತೋಗಜಪುಟೇಪಕ್ತ್ವಾಸ್ವಾಂಗಶೀತಂಸಮುದ್ಧರೇತ್ ॥
ಸಂಪುಟಂಚೂರ್ಣಯೇತ್ಸೂಕ್ಷ್ಮಂಪರ್ಣಖಂಡೇದ್ವಿಗುಂಜಕಂ೨೧೯
ಭಕ್ಷಯೇತ್ಸರ್ವಶೂಲಾರ್ತೋಹಿಂಗುಶುಂಠೀಚಜೀರಕಂ ॥
ವಚಾಮರಿಚಜಂಚೂರ್ಣಂಕರ್ಷಮುಷ್ಣಜಲೈಃಪಿಬೇತ್ ॥ ೨೨೦ ॥
ಅಸಾಧ್ಯಂನಾಶಯೇತ್‌ಶೂಲಂರಸೋಯಂಗಜಕೇಸರೀ ॥

ಶೂಲಗಜಕೇಸರಿರಸ—ಶುದ್ಧವಾದ ಪಾದರಸ ಒಂದು ಭಾಗ, ಗಂಧಕ ಎರಡು ಭಾಗ, ಇವೆರಡನ್ನೂ ಸೇರಿಸಿ ಒಂದು ಯಾಮ ಪರ್ಯಂತರ ಚನ್ನಾಗಿ ಅರೆಯಬೇಕು, ಇವೆರಡರಷ್ಟು ಶುದ್ಧವಾದ ತಾಮ್ರದಲ್ಲಿ ಸಂಪುಟವೆಂದರೆ ಒಂದು ಡಬ್ಬಿಯನ್ನು ಮಾಡಿಸಬೇಕು, ಆ ಡಬ್ಬಿಯಲ್ಲಿ ಅರದಿರುವ ಈ ಔಷಧವನ್ನು ಹಾಕಿ ಮುಚ್ಚಿ ಉಸಿರಾಡದಂತೆ ಸೀಲುಮಾಡಬೇಕು, ಒಂದು ಮಡಿಕೆಗೆ ತಳದಲ್ಲಿ ಉಪ್ಪನ್ನು ಹಾಕಿ ಅದರ ಮೇಲೆ ಈ ತಾಮ್ರದ ಭರಣಿಯನ್ನಿರಿಸಿ ಮೇಲೆ ಮತ್ತಷ್ಟು ಉಪ್ಪನ್ನು ಸುರಿಯಬೇಕು, ನೆಲದಲ್ಲಿ ಗುಂಡಿಯನ್ನು ತೋಡಿ ಕಾಡುಬೆರಣಿಯನ್ನು

ಹಾಕಿ ಮೇಲೆ ಈ ಮಡಕೆಯನ್ನಿರಿಸಿ ಮುಚ್ಚಿ ಗಜಪುಟ ಕ್ರಮದಲ್ಲಿ ಪಕ್ವಮಾಡಿ ಚನ್ನಾಗಿ ತಣ್ಣಗಾದ ಮೇಲೆ ತೆಗೆದುಕೊಂಡು ತಾಮ್ರಸಂಪುಟ ಸಮೇತವಾಗಿ ಔಷಧವನ್ನು ಕಲಬತ್ತಿನಲ್ಲಿ ಹಾಕಿ ಚನ್ನಾಗಿ ಅರೆದು ಚೂರ್ಣಮಾಡಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು, ಈ ಔಷಧವನ್ನು ಎರಡು ಗುಲಗಂಜಿಯ ಪ್ರಮಾಣ ವೀಳ್ಯದೆಲೆಯಲ್ಲಿ ಕಟ್ಟಿ ಅಗಿದು ತಿನ್ನಬೇಕು, ಇಂಗು, ಶುಂಠಿ, ಜೀರಿಗೆ, ಬಜೆ, ಮೆಣಸಿನ ಕಾಳಿನ ಚೂರ್ಣ ಇವೆಲ್ಲವೂ ಕೂಡಿಸಿ ಒಂದು ಕರ್ಷ ಪ್ರಮಾಣವನ್ನು ಬಾಯಿನಲ್ಲಿ ಹಾಕಿಕೊಂಡು ಅನುಪಾನವಾಗಿ ಬಿಸಿನೀರನ್ನು ಕುಡಿಯಬೇಕು, ಇದರಿಂದ ಅಸಾಧ್ಯಗಳಾದ ಸಮಸ್ತ ಶೂಲಗಳೂ ಗುಣವಾಗುತ್ತವೆ.

ಶುದ್ಧಂಸೂತಂವಿಷಂಗಂಧಂಅಜಮೋದಾಂಫಲತ್ರಯಂ ॥ ೨೨೧ ॥
ಸರ್ಜಕ್ಷಾರಂಯವಕ್ಷಾರಂವಹ್ನಿಸೈಂಧವಜೀರಕಂ ॥
ಸೌವರ್ಚಲಂವಿಡಂಗಾನಿಸಾಮುದ್ರಂತ್ರ್ಯೂಷಣಂಸಮಂ ॥ ೨೨೨ ॥
ವಿಷಮುಷ್ಟಿಂಸರ್ವತುಲ್ಯಂಜಂಬೀರಾಮ್ಲೇನಮರ್ದಯೇತ್ ॥
ಮರಿಚಾಭಾಂವಟೀಂಖಾದೇದ್ವಹ್ನಿಮಾಂದ್ಯಪ್ರಶಾಂತಯೇ ॥೨೨೩॥

ಅಗ್ನಿತುಂಡಿವಟಿರಸ—ಶುದ್ಧವಾದ ಪಾದರಸ, ಶುದ್ಧವಾದ ವತ್ಸನಾಭಿ, ಶುದ್ಧ ಗಂಧಕ, ವೋಮಿನ ಕಾಳು, ತ್ರಿಫಲ, ಸರ್ಜಕ್ಷಾರ, ಯವಕ್ಷಾರ, ಚಿತ್ರಮೂಲ, ಸೈಂಧವಲವಣ, ಜೀರಿಗೆ, ಸೌವರ್ಚಲವಣ, ವಾಯುವಿಡಂಗ, ಉಪ್ಪು, ತ್ರ್ಯೂಷಣ, ಇವೆಲ್ಲವನ್ನೂ ಸಮಪರಿಮಾಣದಲ್ಲಿ ಕೂಡಿಸಿ ಇವೆಲ್ಲವೂ ಸೇರಿದರೆ ಎಷ್ಟಾಗುತ್ತದೋ ಅಷ್ಟು ಶುದ್ಧವಾದ ವಿಷಮುಷ್ಟಿ ಬೀಜವನ್ನು ಸೇರಿಸಿ ನಿಂಬೇಹುಳಿಯಿಂದ ಅರೆದು ಮೆಣಸಿನ ಕಾಳಿನ ಗಾತ್ರ ಮಾತ್ರೆಗಳನ್ನು ಮಾಡಿಕೊಂಡು ಸೇವಿಸುತ್ತಾ ಬಂದಲ್ಲಿ ಅಗ್ನಿಮಾಂದ್ಯವು ತೊಲಗಿ ಹೋಗುತ್ತದೆ.

ಶುದ್ಧಸೂತಂವಿಷಂಗಂಧಂಸಮಂಸರ್ವಂವಿಚೂರ್ಣಯೇತ್ ॥
ಮರಿಚಂಸರ್ವತುಲ್ಯಾಂಶಂಕಂಟಕಾರ್ಯಾಃಫಲದ್ರವೈಃ ॥ ೨೨೪ ॥
ಮರ್ದಯೇದ್ಭಾವಯೇತ್ಸರ್ವಮೇಕವಿಂಶತಿವಾರಕಂ ॥
ವಟೀಂಗುಂಜಾತ್ರಯಂಖಾದೇತ್ಸರ್ವಾಜೀರ್ಣಪ್ರಶಾಂತಯೇ ೨೨೫
ಅಜೀರ್ಣಕಂಟಕಸ್ಸೋಯಂರಸೋಹಂತಿವಿಸೂಚಿಕಾಂ ॥

ಅಜೀರ್ಣಕಂಟಕರಸವನ್ನು ಹೇಳುತ್ತಾನೆ—ಶುದ್ಧವಾದ ಪಾದರಸ, ವತ್ಸನಾಭಿ, ಗಂಧಕ ಇವು ಮೂರನ್ನೂ ಸಮಪರಿಮಾಣದಲ್ಲಿ ಸೇರಿಸಿ ಚನ್ನಾಗಿ ಚೂರ್ಣಮಾಡಬೇಕು, ಇವು ಮೂರೂ ಸೇರಿದಷ್ಟು ಮೆಣಸನ್ನು ಸಹ ಪುಡಿಮಾಡಿಕೊಂಡು ಇವೆರಡು ಚೂರ್ಣಗಳನ್ನೂ ಸೇರಿಸಿ ಗುಳ್ಳದ ಹಣ್ಣಿನ ರಸದಲ್ಲಿ ಚನ್ನಾಗಿ

ಅರೆಯುತ್ತ ಬರಬೇಕು, ಅದೇ ರಸದಲ್ಲಿಯೇ ಇಪ್ಪತ್ತೊಂದು ಬಾರಿ ಭಾವನೆ ಕೊಡಬೇಕು, ಗುಳಿಗೆಗಳನ್ನು ಮಾಡಿ ಇರಿಸಿಕೊಂಡು ಮೂರು ಗುಂಜಾ ಪ್ರಮಾಣ ಸೇವಿಸಿದರೆ ಸಮಸ್ತ ವಿಧವಾದ ಅಜೀರ್ಣವೂ ತೊಲಗುತ್ತದೆ, ಇದಕ್ಕೆ ಅಜೀರ್ಣ ಕಂಟಕರಸವೆಂದು ಹೆಸರು. ವಿಷೂಚಿರೋಗವೆಂದರೆ ಕಾಲರಾ ಎನ್ನಿಸಿಕೊಳ್ಳುವ ರೋಗ, ಈ ಮಾತ್ರೆಗಳನ್ನು ಸೇವಿಸೋಣದರಿಂದ ಅಂತಹ ವಿಷೂಚಿರೋಗವೂ ಕೂಡ ಪ್ರಶಾಂತವಾಗುತ್ತದೆ.

ಮೃತಂಸೂತಂಮೃತಂತಾಮ್ರಂಹಿಂಗುಪುಷ್ಕರಮೂಲಕಂ ॥ ೨೨೬ ॥
ಸೈಂಧವಂಗಂಧಕಂತಾಲಂಕಟುಕೀಂಚೂರ್ಣಯೇತ್ಸಮಂ ॥
ಪುನರ್ನವಾದೇವದಾಲೀನಿರ್ಗುಂಡೀತಂಡುಲೀಯಕೈಃ ॥ ೨೨೭ ॥
ತಿಕ್ತಕೋಶಾತಕೀದ್ರಾವೈರ್ದಿನೈಕಂಮರ್ದಯೇದ್ದೃಢಂ ॥
ಮಾಷಮಾತ್ರಂಲಿಹೇತ್‌ಕ್ಷೌದ್ರೈರಸಂಮಂಥಾನಭೈರವಂ ॥೨೨೮॥
ಕಫರೋಗಪ್ರಶಾಂತ್ಯರ್ಥಂನಿಂಬಕ್ವಾಥಂಪಿಬೇದನು ॥

ಮಂಥಾನಭೈರವರಸ—ರಸಭಸ್ಮ. ತಾಮ್ರಭಸ್ಮ, ಇಂಗು, ಪುಷ್ಕರಮೂಲ, ಸೈಂಧವಲವಣ, ಗಂಧಕ, ತಾಳಕ, ಕಟುರೋಹಿಣಿ ಇವಲ್ಲವನ್ನೂ ಸಮಪ್ರಮಾಣ ದಲ್ಲಿ ಕೂಡಿಸಿ ನುಣ್ಣಗೆ ಚೂರ್ಣಮಾಡಿ, ಕೊಮ್ಮೆಯಬೇರಿನ ರಸ, ದೇವದಾಲಿ ಎಂಬ ಮೂಲಿಕೆಯ ರಸ, ಲಕ್ಕಿಸೊಪ್ಪಿನ ರಸ, ಕಿರಕಸಾಲೆಸೊಪ್ಪಿನ ರಸ, ಕೈಸೋರೆ (ಕೈಹೀರೆ) ರಸ, ಇವುಗಳಿಂದ ಒಂದೊಂದು ದಿವಸ ಚನ್ನಾಗಿ ಅರೆದು ಗಾಳಿಯಾಡದಂತೆ ಸೀಸೆಯಲ್ಲಿ ಭದ್ರಪಡಿಸುವುದು, ಇದರಲ್ಲಿ ಒಂದು ಮಾಷ ಪ್ರಮಾಣ ರಸವನ್ನು ತೆಗೆದುಕೊಂಡು ಜೇನಿನೊಡನೆ ಸೇವಿಸೋಣದರಿಂದ ಸಮಸ್ತ ವಿಧಗಳಾದ ಕಫರೋಗಗಳೂ ಗುಣಹೊಂದುತ್ತವೆ, ಅನುಪಾನವಾಗಿ ಬೇವಿನಪಟ್ಟೆಯ ಕಷಾಯವನ್ನು ಕುಡಿಯಬೇಕು.

ಸೂತಹಾಟಕವಜ್ರಾಣಿತಾಮ್ರಂಲೋಹಂಚಮಾಕ್ಷಿಕಂ ॥ ೨೨೯ ॥
ತಾಲಂನೀಲಾಂಜನಂತುತ್ಥಮಹಿಫೇನಂಸಮಾಂಶಕಂ ॥
ಪಂಚಾನಾಂಲವಣಾನಾಂಚಭಾಗಮೇಕಂವಿಮರ್ದಯೇತ್ ॥೨೩೦॥
ವಜ್ರೀಕ್ಷೀರೈರ್ದಿನೈಕಂತುರುಧ್ವಾಧೋಭೂಧರೇಪಚೇತ್ ॥
ಮಾಷೈಕಮಾರ್ದ್ರಕದ್ರಾವೈರ್ಲೇಹಯೇದ್ವಾತನಾಶನಂ ॥ ೨೩೧ ॥
ಪಿಪ್ಪಲೀಮೂಲಜಕ್ವಾಥಂಸಕೃಷ್ಣಮನುಪಾಯಯೇತ್ ॥
ಸರ್ವಾನ್ವಾತವಿಕಾರಾಂಸ್ತುನಿಹಂತ್ಯಾಕ್ಷೇಪಕಾದಿಕಾನ್ ॥ ೨೩೨ ॥

ವಾತನಾಶನರಸ—ಶುದ್ಧವಾದ ಪಾದರಸ, ಶುದ್ಧವಾದ ಭಂಗಾರ, ಶುದ್ಧವಾದ ವಜ್ರ, ಶುದ್ಧವಾದ ತಾಮ್ರ, ಶುದ್ಧವಾದ ಲೋಹ, ಶುದ್ಧವಾದ ಸ್ವರ್ಣಮಾಕ್ಷಿಕ, ಶುದ್ಧವಾದ ತಾಳಕ, ಶುದ್ಧವಾದ ನೀಲಾಂಜನ, ಶುದ್ಧವಾದ ತುತ್ಥ, ಶುದ್ಧವಾದ ಅಸೀಸು. ಇವುಗಳನ್ನೆಲ್ಲಾ ಸಮಪ್ರಮಾಣದಲ್ಲಿ ಸೇರಿಸಿ ಅದರ ಜೊತೆಗೆ ಪಂಚಲವಣಗಳೂ ಸೇರಿದ್ದು ಒಂದು ಭಾಗ ಈ ರೀತಿ ಸೇರಿಸಿಕೊಂಡು ಕಲ್ವದಲ್ಲಿ ಹಾಕಿ ಪಜ್ರೀ ಎಂಬ ಒಂದು ಬಗೆಯ ಕಳ್ಳಿಯ ಹಾಲಿನಿಂದ ಒಂದು ದಿವಸ ಚನ್ನಾಗಿ ಅರೆದು ನಂತರ ಭೂಧರಯಂತ್ರ ಕ್ರಮದಿಂದ ಪಕ್ವಮಾಡಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಇದರಲ್ಲಿ ಒಂದು ಮಾಷ ಪರಿಮಾಣವನ್ನು ಹಸಿಸುಂಟಿಯ ರಸದಲ್ಲಿ ಸೇವಿಸಿ ಅನುಪಾನವಾಗಿ ಹಿಪ್ಪಲಿಯ ಬೇರಿನ ಕಷಾಯದೊಡನೆ ಹಿಪ್ಪಲಿಯ ಚೂರ್ಣವನ್ನು ಸೇರಿಸಿ ಕುಡಿಯಬೇಕು, ಇದರಿಂದ ಸಮಸ್ತ ವಿಧಗಳಾದ ವಾತರೋಗಗಳೂ ಶಮನಹೊಂದುತ್ತವೆ.

ಕನಕಸ್ಯಾಷ್ಟಶಾಣಾಸ್ಯುಸ್ಸೂತೋದ್ವಾದಶಭಿರ್ಮತಃ ॥
ಗಂಧೋಪಿದ್ವಾದಶಪ್ರೋಕ್ತಸ್ತಾಮ್ರಂಶಾಣದ್ವಯೋನ್ಮಿತಂ।೨೩೩।
ಅಭ್ರಕಂಸ್ಯಾಚ್ಚತುಶ್ಶಾಣಂಮಾಕ್ಷಿಕಂಚದ್ವಿಶಾಣಿಕಂ ॥
ವಂಗೋದ್ವಿಶಾಣಸ್ಸೌವೀರಂತ್ರಿಶಾಣಂಲೋಹಮಷ್ಟಕಂ ॥ ೨೩೪ ॥
ವಿಷಂತ್ರಿಶಾಣಿಕಂಕೃತ್ವಾಲಾಂಗಲೀಪಲಸಮ್ಮಿತಾ ॥
ಮರ್ದಯೇದ್ದಿನಮೇಕಂತುರಸ್ಯೆರಮ್ಲಫಲೋದ್ಭವ್ಯೆಃ ॥ ೨೩೫ ॥
ದದ್ಯಾನ್ಮೃದುಪುಟಂವಹ್ನೌತತಸ್ಸೂಕ್ಷ್ಮಂವಿಚೂರ್ಣಯೇತ್ ॥
ಮಾಷಮಾತ್ರೋರಸೋದೇಯಃಸನ್ನಿಪಾತೇಸುದಾರುಣೇ ॥೨೩೬॥
ಆರ್ದ್ರಕಸ್ವರಸೇನೈವರಸೋನಸ್ಯರಸೇನವಾ ॥
ಕಿಲಾಸಂಸರ್ವಕುಷ್ಠಾನಿವಿಸರ್ಪಂಚಭಗಂದರಂ ॥ ೨೩೭ ॥
ಜ್ವರಂಗರಮಜೀರ್ಣಂಚಜಯೇದ್ರೋಗಹರೋರಸಃ ॥

ಕನಕಸುಂದರರಸ—ಭಂಗಾರ ಎಂಟು ಶಾಣಗಳ ತೂಕ ಅಂದರೆ ಶುದ್ಧವಾದ ಭಂಗಾರದ ಭಸ್ಮ ಎಂಟು ಶಾಣ ತೂಕ, ಶುದ್ಧವಾದ ರಸಭಸ್ಮ ಹನ್ನೆರಡು ಶಾಣ ತೂಕ, ಶುದ್ಧವಾದ ಗಂಧಕವೂ ಅಷ್ಟೇ ತೂಕ, ಶುದ್ಧವಾದ ತಾಮ್ರಭಸ್ಮ ಎರಡು ಶಾಣ ತೂಕ, ಶುದ್ಧವಾದ ಅಭ್ರಕಭಸ್ಮ ನಾಲ್ಕು ಶಾಣ ತೂಕ, ಶುದ್ಧವಾದ ಮಾಕ್ಷಿಕಭಸ್ಮ ಎರಡು ಶಾಣ ತೂಕ, ಶುದ್ಧವಾದ ವಂಗಭಸ್ಮ ಎರಡು ಶಾಣ ತೂಕ, ಶುದ್ಧಿಮಾಡಿದ ಸೌವೀರ ಮೂರು ಶಾಣ ಪರಿಮಾಣ, ಶುದ್ಧವಾದ ಲೋಹಭಸ್ಮ ಎಂಟು ಶಾಣ ಪ್ರಮಾಣ, ಶುದ್ಧವಾದ ವತ್ಸನಾಭಿ ಮೂರು ಶಾಣ ಪ್ರಮಾಣ, ಲಾಂಗಲಿ ಎಂದರೆ ಅದೊಂದು ಉಪವಿಷ ಜಾತಿಗೆ ಸೇರಿದ ಮೂಲಿಕೆ, ಕೋಳಿ

ಕುಕ್ಕನಗೆಡ್ಡೆ ಎಂದು ಕರೆಯುತ್ತಾರೆ, ಶುದ್ಧವಾದ ಲಾಂಗಲಿ ಒಂದು ಪಲಪ್ರಮಾಣ ಇವೆಲ್ಲವನ್ನೂ ಸೇರಿಸಿ ಕಲ್ವದಲ್ಲಿ ಹಾಕಿ ಹುಳಿಯಾದ ಫಲಗಳು ಅಂದರೆ ನಿಂಬೆಯ ಹಣ್ಣು, ಹೆರಳೆಯಹಣ್ಣು, ಮಾದಲದಹಣ್ಣು ಇವುಗಳ ರಸದಲ್ಲಿ ಒಂದು ದಿವಸ ಅರೆದು ಗೋಲಿಯನ್ನು ಕಟ್ಟಿ ಬೆಂಕಿಯಲ್ಲಿ ಮೃದುವಾಗಿ ಅಂದರೆ ಸೂಕ್ಷ್ಮವಾಗಿ ಪುಟವನ್ನು ಹಾಕಬೇಕು, ತಣ್ಣಗಾದ ಮೇಲೆ ಹೊರಕ್ಕೆ ತೆಗೆದು ನಯವಾಗಿ ಅರೆದು ಭದ್ರಪಡಿಸಿ ಇಟ್ಟುಕೊಳ್ಳಬೇಕು, ಭಯಂಕರವಾದ ಸನ್ನಿಪಾತಜ್ವರದಲ್ಲಿ ಒಂದು ಮಾಷ ಪ್ರಮಾಣ ಈ ರಸವನ್ನು ಹಸಿಸುಂಟಿಯ ರಸದೊಡನಾಗಲಿ ಬೆಳ್ಳುಳ್ಳಿಯ ರಸದೊಡನಾಗಲಿ ಕೊಟ್ಟಲ್ಲಿ ಗುಣವಾಗುತ್ತದೆ, ಸಮಸ್ತ ವಿಧವಾದ ಕುಷ್ಠರೋಗಗಳು, ಜ್ವರ, ವಿಷ, ಅಜೀರ್ಣರೋಗ ಇವುಗಳನ್ನೆಲ್ಲಾ ತಪ್ಪದೆ ಗುಣಪಡಿಸುತ್ತದೆ.

ರಸೋಗಂಧಸ್ತ್ರಿಕರ್ಷಸ್ಸ್ಯಾತ್ಸ್ಕರ್ಯಾತ್ಕಜ್ಜಲಿಕಾಂತಯೋಃ ॥೨೩೮॥
ತಾಮ್ರತಾರಾರವಂಗಾಹಿಸಾರಾಶ್ಚೈಕೈಕಕಾರ್ಷಿಕಾಃ ॥
ಶಿಗ್ರುಜ್ವಾಲಾಮುಖೀಶುಂಠೀಬಿಲ್ವೈಭ್ಯಸ್ತುಂಡುಲೀಯಕಾನ್ । ೨೩೯ ।
ಪ್ರತ್ಯೇಕಂಸ್ವರಸೈಃಕುರ್ಯಾದ್ಯಾಮ್ಯೈಕೈಕಂವಿಮರ್ದಯೇತ್ ॥
ಕೃತ್ವಾಗೋಲಂವೃತಂವಸ್ತ್ರೇಲವಣಾಪೂರಿತೇನ್ಯಸೇತ್ ॥ ೨೪೦ ॥
ಕಾಚಭಾಂಡೇತತಸ್ಥಾಲ್ಯಾಂಕಾಚಕೂಪೀಂನಿವೇಶಯೇತ್ ॥
ವಾಲುಕಾಭಿಃಪ್ರಪೂರ್ಯಾಥವಹ್ನಿರ್ಯಾಮದ್ವಯಂಭವೇತ್ ॥ ೨೪೧ ॥
ತತಉದ್ಧೃತ್ಯತಂಗೋಲಂಚೂರ್ಣಯಿತ್ವಾವಿಮಿಶ್ರಯೇತ್ ॥
ಪ್ರಮಾಣಶ್ಚೂರ್ಣಕರ್ಷೇಣಶಾಣಮಾತ್ರವಿಷೇಣಚ ॥ ೨೪೨ ॥
ಕೃಷ್ಣಸರ್ಪಸ್ಯಗರಳೈರ್ದ್ವಿರ್ವೇಲಂಭಾವಯೇತ್ತಥಾ ॥
ತಗರಂಮುಸಲೀಮಾಂಸೀಹೇಮಾಹ್ವಾವೇತಸಃಕಣಾ ॥ ೨೪೩ ॥
ನೀಲಿನೀಪತ್ರಕಂಚೈಲಾಚಿತ್ರಕಶ್ಚ ಸುಶೀರಕಃ ॥
ಶತಪುಷ್ಪಾದೇವದಾಲೀಧತ್ತೂರಾಗಸ್ತ್ಯಮುಂಡಿಕಾಃ ॥ ೨೪೪ ॥
ಮಧೂಕಜಾತೀಮದಸರಸ್ತೈಲೇಷಾಂವಿಮರ್ದಯೇತ್ ॥
ಪ್ರತ್ಯೇಕಮೇಕವೇಲಂಚತತಸ್ಸಂಶೋಷ್ಯಧಾರಯೇತ್ ॥ ೨೪೫ ॥
ಬೀಜಪೂರಾರ್ದ್ರಕದ್ರಾವೈರ್ಮರಿಚೈಷ್ಷೋಡಶೋನ್ಮಿತೈಃ ॥
ರಸೋದ್ವಿಗುಂಜಾಪ್ರಮಿತಸ್ಸನ್ನಿಪಾತೇಷುದೀಯತೇ ॥ ೨೪೬ ॥
ಪ್ರಸಿದ್ಧೋಯಂರಸೋನಾಮ್ನಾಸನ್ನಿಪಾತಸ್ಯಭೈರವಃ ॥

ಸನ್ನಿಪಾತಭೈರವರಸ—ಶುದ್ಧವಾದ ಪಾದರಸ ಮೂರು ಕರ್ಷ ಪ್ರಮಾಣ, ಶುದ್ಧವಾದ ಗಂಧಕ ಮೂರು ಕರ್ಷ ಪ್ರಮಾಣ ಎರಡನ್ನೂ ಖಲಪತ್ರಿನಲ್ಲಿ ಹಾಕಿ ಅರದು ಕಾಡಿಗೆಯಂತಹ ಪುಡಿಯನ್ನು ಮಾಡಬೇಕು, ಶುದ್ಧವಾದ ತಾಮ್ರಭಸ್ಮ ಒಂದು ಕರ್ಷ, ಶುದ್ಧವಾದ ರಜತಭಸ್ಮ ಒಂದು ಕರ್ಷ, ಶುದ್ಧವಾದ ಪಿತ್ತಲಭಸ್ಮ ಒಂದು ಕರ್ಷ, ವಂಗಭಸ್ಮ ಒಂದು ಕರ್ಷ, ನಾಗಭಸ್ಮ ಒಂದು ಕರ್ಷ, ಲೋಹ ಭಸ್ಮ ಒಂದು ಕರ್ಷ, ಇವೆಲ್ಲವನ್ನೂ ಮೊದಲು ನಿರ್ಮಿಸಿರುವ ಕಜ್ಜಲಿಯ ಜೊತೆ ಯಲ್ಲಿ ಸೇರಿಸಿ ನುಗ್ಗೆಯ ತೊಪ್ಪೆಯ ರಸ, ಜಯಂತೀ ಸೊಪ್ಪಿನ ರಸ, ಶುಂಠಿಯ ರಸ, ಬಿಲ್ವದತೊಪ್ಪೆಯ ರಸ, ಕಿರುಕಸಾಲೇಸೊಪ್ಪಿನ ರಸ, ಈ ಮೂಲಿಕೆಗಳ ಪ್ರತಿಯೊಂದರ ರಸದಲ್ಲಿಯೂ ಒಂದೊಂದು ಯಾಮ ಪರ್ಯಂತರ ಚನ್ನಾಗಿ ಮರ್ದನಮಾಡಬೇಕು, ನಂತರ ಉಂಡೇಕಟ್ಟಿ ಒಣಗಿಸಿ ತುಂಬಾ ಬಟ್ಟೆಯನ್ನು ಸುತ್ತಿ ಒಂದು ಗಾಜಿನ ಪಾತ್ರೆಯಲ್ಲಿ ಕೆಳಗೆ ಮತ್ತೆ ಮೇಲೆ ಸಹ ಉಪ್ಪನ್ನು ಹಾಕಿ ಮಧ್ಯದಲ್ಲಿ ಈ ಗಂಟನ್ನಿರಿಸಿ ಆ ಗಾಜಿನ ಪಾತ್ರೆಯನ್ನು ಮರಳು ತುಂಬಿದ ಒಂದು ಮಡಕೆಯಲ್ಲಿರಿಸಿ ಆ ಮಡಕೆಯನ್ನು ಒಲೆಯ ಮೇಲಿರಿಸಿ ಒಲೆಯಲ್ಲಿ ಎರಡು ಯಾಮ ಬೆಂಕಿಯನ್ನು ಉರಿಸಬೇಕು, ನಂತರ ಆರಿದ ಮೇಲೆ ಅದರಲ್ಲಿ ಪಕ್ವವಾದ ಔಷಧಗಳ ಉಂಡೆಯನ್ನು ತೆಗೆದುಕೊಂಡು ನುಣ್ಣಗೆ ಅರೆದು ಅದರ ಜೊತೆಗೆ ಪ್ರವಾಣಚೂರ್ಣವೆಂದರೆ ಸುಣ್ಣದಹುಡಿ ಒಂದು ಕರ್ಷ ಪರಿಮಾಣ (ಪ್ರವಾಳ ಭಸ್ಮವೆಂದು ಕೆಲವರೂ, ಶುಕ್ತಿಭಸ್ಮವೆಂದು ಮತ್ತೆ ಕೆಲವರೂ, ಶಂಖಭಸ್ಮವೆಂದು ಇನ್ನು ಕೆಲವರೂ ಹೇಳುತ್ತಾರೆ.) ಒಂದು ಶಾಣ ಪ್ರಮಾಣ ವಿಷ, ಇವೆರಡನ್ನೂ ಸೇರಿಸಿ ಕೃಷ್ಣಸರ್ಪದ ವಿಷದ ಕೋಳವೆಯಿಂದ ತೆಗೆದ ವಿಷದ್ರವದೊಡನೆ ಎರಡು ಬಾರಿ ಭಾವನೆಕೊಟ್ಟು ನಂತರ ಗ್ರಂಥಿತಗರ, ಹಂದೀಗೆಡ್ಡೆ, ಜಟಾಮಾಂಸಿ, ಸ್ವರ್ಣಕ್ಷೀರಿ ಎಂಬ ಮೂಲಿಕೆ, ಹಬ್ಬೆಗಿಡ, ಹಿಪ್ಪಲಿ, ವಜ್ರನೀಲೀಗಿಡದ ಎಲೆ, ಯಾಲಕ್ಕಿ, ಚಿತ್ರಮೂಲ, ಬಿಳಿಯತುಳಸಿ, ಸಬಸಿಗೆ ಸೊಪ್ಪು, ದೇವದಾಲಿ, ದತ್ತೂರ, ಅಗಸೇಗಿಡ, ಅನಂತಸಗೊಂಡೆ, ಇಪ್ಪೆಯಹುವ್ವು, ಜಾಜೀಸೊಪ್ಪು, ಗಂಟುಗಾರೇಕಾಯಿ, ಇವುಗಳ ಸ್ವರಸ ಅಥವಾ ಕಷಾಯಗಳಲ್ಲಿ ಪ್ರತಿಯೊಂದ ರಲ್ಲಿಯೂ ಒಂದೊಂದು ದಿವಸ ಅರೆದು ನಂತರ ಚನ್ನಾಗಿ ಒಣಗಿಸಿ ಇರಿಸಿಕೊಳ್ಳ ಬೇಕು, ಇಲ್ಲಿಗೆ ಔಷಧವು ಸಿದ್ಧವಾಯಿತು. ಈ ರಸವಲ್ಲಿ ಎರಡು ಗುಲಗಂಜಿಯ ಪ್ರಮಾಣ ರಸವನ್ನು ಮಾದಲದಹಣ್ಣಿನ ರಸ, ಹಸೀಸುಂಟಿಯ ರಸ, ಇದರ ಜೊತೆಗೆ ಹದಿನಾರು ಮೆಣಸಿನ ಕಾಳಿನ ಹುಡಿಯನ್ನೂ ಸೇರಿಸಿ ಸನ್ನಿಪಾತಜ್ವರ ಮೊದಲಾದ ಭಯಂಕರ ರೋಗಗಳಲ್ಲಿ ಪ್ರಯೋಗಿಸಬಹುದು, ಇದೇ ಬಹಳ ನಂಬಿಕೆಯಾದ ಮತ್ತು ಸುಪ್ರಸಿದ್ಧವಾದ ಸನ್ನಿಪಾತಭೈರವರಸವೆನ್ನುವುದು.

ತಾರಮೌಕ್ತಿಕಹೇಮಾನಿಸಾತಶ್ಚೇಕೈಕಭಾಗಿಕಾಃ ॥ ೨೪೭ ॥
ದ್ವಿಭಾಗೋಗಂಧಕಸ್ಸೂತಸ್ತ್ರಿಭಾಗೋಮರ್ದಯೇದಿಮಾನ್ ॥
ಕಪಿತ್ಥಸ್ವರಸ್ಯೈರ್ಗಾಢಂಮೃಗಶೃಂಗೇತತಃಕ್ಷಿಪೇತ್ ॥ ೨೪೮ ॥
ಪುಟೇನ್ಮಧ್ಯಪುಟೇನೈವತತಉದ್ಧೃತ್ಯಮರ್ದಯೇತ್ ॥
ಬಲಾರಸ್ಯೈಸ್ಸಪ್ತವೇಲಮಪಾಮಾರ್ಗರಸ್ಯೈಸ್ತ್ರಿಧಾ ॥ ೨೪೯ ॥
ಲೋಧ್ರಪ್ರತಿವಿಷಾಮುಸ್ತಧಾತಕೀಂದ್ರಯವಾಮೃತಾಃ ॥
ಪ್ರತ್ಯೇಕಮೇಷಾಂಸ್ವರಸ್ಯೈರ್ಭಾವನಾಸ್ಯಾತ್ತ್ರಿಧಾತ್ರಿಧಾ ॥ ೨೫೦ ॥
ಮಾಷಮಾತ್ರೋರಸೋದೇಯೋಮಧುನಾಮರಿಚೈಸ್ತಥಾ ॥
ಹನ್ಯಾತ್ಸರ್ವಾನತೀಸಾರಾನ್ಗ್ರಹಣೀಂಸರ್ವಜಾಮಪಿ ॥ ೨೫೧ ॥
ಕಪಾಟೋಗ್ರಹಣೀರೋಗೇರಸೋಯಂವಹ್ನಿದೀಪನಃ ॥

ಗ್ರಹಣೀಕಪಾಟರಸ—ಶುದ್ಧವಾದ ರಜತಭಸ್ಮ, ಮೌಕ್ತಿಕಭಸ್ಮ, ಸುವರ್ಣ ಭಸ್ಮ, ಲೋಹಭಸ್ಮ, ಇವೆಲ್ಲವೂ ಸಮಪ್ರಮಾಣದಲ್ಲಿ ಸೇರಿಸಬೇಕು, ಎರಡು ಭಾಗ ಗಂಧಕ, ಶುದ್ಧವಾದ ಪಾದರಸ ಮೂರು ಭಾಗ, ಇವೆಲ್ಲವನ್ನೂ ಒಟ್ಟಾಗಿ ಕೂಡಿಸಿ ಕಲ್ವದಲ್ಲಿ ಹಾಕಿ ಬೇಲದಹಣ್ಣಿನ ರಸದೊಡನೆ ಚೆನ್ನಾಗಿ ಅರೆಯಬೇಕು, ಅರೆದದ್ದನ್ನು ಹುಲ್ಲೆಯ ಕೊಂಬಿನ ಪೊಳ್ಳಿಗೆ ತುಂಬಿ ಮೃದುವಾದ ಪುಟದಲ್ಲಿ ಪಕ್ವಮಾಡಬೇಕು, ಪುಟಹಾಕಿದ ಮೇಲೆ ತೆಗೆದುಕೊಂಡು ಮತ್ತೆ ಖಲಬತ್ತಿನಲ್ಲಿ ಹಾಕಿ ಕಲ್ಲಂಗಡಲೆಯ ರಸದೊಡನೆ ಏಳು ಸಾರಿಯೂ, ಉತ್ತರಣೆಯ ರಸದೊಡನೆ ಮೂರು ಸಾರಿಯೂ ಲೋಧ್ರದ ಚಕ್ಕೆ, ಅತಿಬಜೆ, ಭದ್ರಮುಸ್ತೆ, ಧಾತ್ರೀಕುಸುಮ, ಕೊಡಸದಚಕ್ಕೆ, ಅಮೃತಬಳ್ಳಿ, ಇವುಗಳ ರಸದೊಡನೆ ಪ್ರತ್ಯೇಕವಾಗಿ ಮೂರು ಮೂರು ಸಾರಿಯೂ ಭಾವನೆಕೊಡಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಇದರಲ್ಲಿ ಒಂದು ಮಾಷ ಪ್ರಮಾಣ ರಸವನ್ನು ಜೇನುತುಪ್ಪ ಮತ್ತು ಮೆಣಸಿನಕಾಳಿನ ಪುಡಿಯೊಂದಿಗೆ ಸೇವಿಸಿದಲ್ಲಿ ಸಮಸ್ತ ವಿಧವಾದ ಅತಿಸಾರ ಮತ್ತು ಗ್ರಹಣಿ ಎಂಬ ಭೇದಿ ಇವುಗಳೆಲ್ಲವೂ ಶಾಂತವಾಗುತ್ತವೆ, ಮತ್ತು ಅಗ್ನಿವೃದ್ಧಿಯೂ ಆಗುತ್ತದೆ.

ಮೃತಸೂತಾಭ್ರಕಂಗಂಧಂಯವಕ್ಷಾರಂಸಟಂಕಣಂ ॥ ೨೫೨ ॥
ಅಗ್ನಿಮಂಥಂವಚಾಂಕುರ್ಯಾತ್ಸೂತತುಲ್ಯಾನಿಮಾನ್ಸುಧೀಃ ॥
ತತೋಜಯಂತೀಜಂಬೀರಭೃಂಗದ್ರಾವೈರ್ವಿಮರ್ದಯೇತ್ ೨೫೩
ತ್ರಿವಾಸರಂತತೋಗೋಲಂಕೃತ್ವಾಸಂಶೋಷ್ಯಧಾರಯೇತ್ ॥
ಲೋಹಪಾತ್ರೇಶರಾವಂಚದತ್ವೋಪರಿವಿಮುದ್ರಯೇತ್ ॥ ೨೫೪ ॥
ಅಧೋವಹ್ನಿಂಶನೈಃಕುರ್ಯಾದ್ಯಾಮಾರ್ಧಂತತಉದ್ಧರೇತ್ ॥

**ರಸತುಲ್ಯಾಂಪ್ರತಿವಿಷಾಂದದ್ಯಾನ್ಮ್ಲೇಚರಸಂತಥಾ ॥ ೨೫೫ ॥**
**ಕಪಿತ್ಥವಿಜಯಾದ್ರಾವ್ರೈರ್ಭಾವಯೇತ್ಸಪ್ತಧಾಪೃಥಕ್ ॥**
**ಧಾತಕೀಂದ್ರಯವಾಮುಸ್ತಾಲೋಧ್ರಂಬಿಲ್ವಂಗುಡೂಚಿಕಾ॥ ೨೫೬॥**
**ಏತದ್ರಸೈರ್ಭಾವಯಿತ್ವಾವೇಲೈಕೈಕಂಚಶೋಷಯೇತ್ ॥**
**ರಸಂವಜ್ರಕಪಾಟಾಖ್ಯಂಶಾಣೈಕಂಮಧುನಾಲಿಹೇತ್ ॥ ೨೫೭ ॥**
**ವಹ್ನಿಂಶುಂಠೀಂವಿಡಂಬಿಲ್ವಂಲವಣಂಚೂರ್ಣಯೇತ್ಸಮಂ ॥**
**ಪಿಬೇದುಷ್ಣಾಂಬುನಾಚಾನುಸರ್ವಜಾಂಗ್ರಹಣೀಂಜಯೇತ್ ೨೫೮**

ಗ್ರಹಣೀವಜ್ರಕಪಾಟರಸ—ಶುದ್ಧವಾದ ರಸಭಸ್ಮ, ಶುದ್ಧವಾದ ಮತ್ತು ಸತ್ತುಹೋದ ಅಭ್ರಕ, ಶುದ್ಧವಾದ ಗಂಧಕ, ಶುದ್ಧವಾದ ಯವಕ್ಷಾರ, ಶುದ್ಧವಾದ ಟಂಕಣಕ್ಷಾರ, ನರುವಲತೊಪ್ಪೆ, ಬಜೆ, ಇವೆಲ್ಲವನ್ನೂ ಸಮಪ್ರಮಾಣದಲ್ಲಿ ಸೇರಿಸಿ ನಯವಾದ ಚೂರ್ಣವಾಗಿ ಮಾಡಿ ಖಲ್ವದಲ್ಲಿ ಹಾಕಿಕೊಂಡು ಜಯಂತಿ ಎಂಬ ಸೊಪ್ಪಿನ ರಸ, ನಿಂಬೆಯಹಣ್ಣಿನ ರಸ, ಗರುಗದಸೊಪ್ಪಿನ ರಸ, ಇವುಗಳಲ್ಲಿ ಅರೆಯಬೇಕು, ಮೂರು ದಿವಸ ಅರೆದು ನಂತರ ಗೋಲಿಯಂತೆ ಉಂಡೆಕಟ್ಟಿ ಚನ್ನಾಗಿ ಒಣಗಿಸಿ ಆ ಉಂಡೆಯನ್ನು ಕಬ್ಬಿಣದ ಪಾತ್ರೆಯಲ್ಲಿರಿಸಿ ಮೇಲೆ ಉಸಿರಾಡದಂತೆ ಮುಚ್ಚಿ ಒಲೆಯ ಮೇಲಿರಿಸಿ ಕೆಳಗೆ ಮೆಲ್ಲಗೆ ಅರ್ಧ ಯಾಮ ಪರ್ಯಂತರ ಉರಿಯನ್ನು ಹಾಕಬೇಕು, ನಂತರ ಹೊರಕ್ಕೆ ತೆಗೆದುಕೊಂಡು ಆದರಲ್ಲಿ ಸೇರಿರುವ ಪಾದರಸದಷ್ಟು ಅತಿಬಜೆಯನ್ನು ಮತ್ತು ಬೂರಗದ ಮೇಣವನ್ನು ಸಹ ಸೇರಿಸಿ ಅರದು ಚೂರ್ಣಮಾಡಿ ಆ ಚೂರ್ಣವನ್ನು ಬೇಲದ ಚಕ್ಕೆಯ ರಸ, ಸಿದ್ಧಪತ್ರೆಯ ಕಷಾಯ, ಇವು ಪ್ರತಿಯೊಂದರಲ್ಲಿಯೂ ಏಳೇಳು ಸಾರಿ ಭಾವನೆಕೊಟ್ಟು ನಂತರ ಧಾತ್ರೀಕುಸುಮದ ಕಷಾಯ, ಕೊಡಸದ ಬೀಜದ ಕಷಾಯ, ಭದ್ರಮುಸ್ತೆಯ ಕಷಾಯ, ಲೋಧ್ರದ ಚಕ್ಕೆಯ ಕಷಾಯ, ಬಿಲ್ವದಬೇರಿನ ಕಷಾಯ, ಅಮೃತಬಳ್ಳಿಯ ರಸ, ಇವು ಪ್ರತಿಯೊಂದರಲ್ಲಿಯೂ ಒಂದೊಂದು ಸಾರಿ ಭಾವನೆಕೊಟ್ಟು ಒಣಗಿಸಬೇಕು, ಇಲ್ಲಿಗೆ ಗ್ರಹಣೀ ಕಪಾಟರಸವೆಂಬ ಔಷಧವು ಸಿದ್ಧವಾದ ಹಾಗಾಯಿತು. ಇದರಲ್ಲಿ ಒಂದು ಶಾಣ ಪರಿಮಾಣ ರಸವನ್ನು ಜೇನುತುಪ್ಪದಲ್ಲಿ ಕಲಸಿ ನೆಕ್ಕಿ ಅನುಪಾನವಾಗಿ ಚಿತ್ರಮೂಲ, ಶುಂಠಿ, ಬಿಡಾಲವಣ, ಬಿಲ್ವದಬೇರು, ಸೈಂಧವಲವಣ, ಇವುಗಳನ್ನು ಸಮಪ್ರಮಾಣದಲ್ಲಿ ಸೇರಿಸಿ ಚೂರ್ಣಮಾಡಿ ಬಿಸಿನೀರಿನಲ್ಲಿ ಕುಡಿಯಬೇಕು, ಇದರಿಂದ ಸಮಸ್ತ ವಿಧವಾದ ಗ್ರಹಣೀರೋಗವೂ ನಿವಾರಣೆಯಾಗುತ್ತದೆ.

**ತಾರಂವಜ್ರಂಸುವರ್ಣಂಚತಾಮ್ರಂಸೂತಕಗಂಧಕಂ ॥**
**ಲೋಹಂಕ್ರಮವಿವೃದ್ಧಾನಿಕುರ್ಯಾದೇತಾನಿಮಾತ್ರಯಾ ॥೨೫೯॥**

ವಿಮರ್ದ್ಯ ಕನ್ಯಕಾದ್ರಾವೈರ್ನ್ಯಸೇತ್ಕಾಚಮಯೇಘಟೇ ॥
ವಿಮುದ್ರಾಂಪಿಠರೀಮಧ್ಯೇಧಾರಯೇತ್ಸೈಂಧವಾವೃತೇ ॥ ೨೬೦ ॥
ಪಿಠರೀಂಮುದ್ರಯೇತ್ಸಮ್ಯಕ್ತತಶ್ಚುಲ್ಯಾಂನಿವೇಶಯೇತ್ ॥
ವಹ್ನಿಂಶನೈಶ್ಶನೈಃಕುರ್ಯಾದ್ದಿನೈಕಂತತಉದ್ಧರೇತ್ ॥ ೨೬೧ ॥
ಸ್ವಾಂಗಶೀತಂಚಸಂಚೂರ್ಣ್ಯಭಾವಯೇದರ್ಕದುಗ್ಧಕೈಃ ॥
ಅಶ್ವಗಂಧಾಚಕಾಕೋಲೀವಾನರೀಮುಶಲೀಕ್ಷ್ಕಃ ॥ ೨೬೨ ॥
ತ್ರಿತ್ರಿವೇಲಂರಸೈರಾಸಾಂಶತಾವರ್ಯಾಶ್ಚಭಾವಯೇತ್ ॥
ಪದ್ಮಕಂದಕಸೇರೂಣಾಂರಸೈಃಕಾಶಸ್ಯಭಾವಯೇತ್ ॥ ೨೬೩ ॥
ಕಸ್ತೂರೀವ್ಯೋಷಕರ್ಪೂರಕಂಕೋಲೈಲಾಲವಂಗಕಂ ॥
ಪೂರ್ವಚೂರ್ಣಾದಷ್ಟಮಾಂಶಮೇತಚ್ಚೂರ್ಣಂವಿಮಿಶ್ರಯೇತ್ ॥ ೨೬೪ ॥
ಸರ್ವೈಸ್ಸಮಾಂಶರ್ಕರಾಂಚದತ್ವಾಶಾಣೋನ್ಮಿತಾಂಪಿಬೇತ್ ॥
ಗೋದುಗ್ಧದ್ವಿಪಲೀನ್ನೈವಮಧುರಾಹಾರಸೇವಕಃ ॥ ೨೬೫ ॥
ಅಸ್ಯಪ್ರಭಾವಾತ್ಸೌಂದರ್ಯಂಬಲಂತೇಜೋಭಿವರ್ಧತೇ ॥
ತರುಣೀರಮಯೇದ್ಬಹ್ವೀಃಶುಕ್ರಹಾನಿರ್ನಜಾಯತೇ ॥ ೨೬೬ ॥

ಮದನಕಾಮದೇವರಸ—ಬೆಳ್ಳಿಯಭಸ್ಮ, ವಜ್ರದಭಸ್ಮ, ಸುವರ್ಣಭಸ್ಮ, ತಾಮ್ರಭಸ್ಮ, ರಸಭಸ್ಮ, ಶುದ್ಧವಾದ ಗಂಧಕ, ಲೋಹಭಸ್ಮ, ಇವುಗಳನ್ನು ಕ್ರಮವಾಗಿ ಒಂದೊಂದು ಪಾಲು ಹೆಚ್ಚಿಸುವುದು ಅಂದರೆ ಬೆಳ್ಳಿಯಭಸ್ಮಒಂದು ತೊಲವಾದರೆ ವಜ್ರ ಎರಡು ತೊಲ ಬಂಗಾರ ಮೂರು ತೊಲ ಈ ಕ್ರಮದಿಂದ ಹೆಚ್ಚಿಸಿ ಎಲ್ಲವನ್ನೂ ಕೂಡಿಸಿಕೊಂಡು ಖಲ್ವದಲ್ಲಿ ಹಾಕಿ ಲೋಳಸರದ ರಸದಿಂದ ಚನ್ನಾಗಿ ಅರೆದು ಗಾಜಿನ ಕುಪ್ಪಿಗೆಗೆ ತುಂಬಿ ಚೀಲಮಾಡಿ ಬಾಯಿಗೂ ಬಿರಡೆಯನ್ನು ಹಾಕಿ ಒಂದು ಮಡಕೆಗೆ ಸೈಂಧವಲವಣದ ಪುಡಿಯನ್ನು ತುಂಬಿ ಅದರಲ್ಲಿ ಈ ಕುಪ್ಪಿಗೆಯನ್ನಿರಿಸಿ ಆ ಮಡಕೆಯನ್ನು ಒಲೆಯ ಮೇಲೆ ಏರಿಸಿ ಒಂದು ದಿವಸ ವೆಲ್ಲಾ ಕ್ರಮವಾಗಿ ಹೆಚ್ಚು ಹೆಚ್ಚು ಶಾಖ ತಗಲುವಂತೆ ಒಲೆಯನ್ನುರಿಸಿ ನಂತರ ಉರಿಯನ್ನು ನಿಲ್ಲಿಸಿ ಚನ್ನಾಗಿ ತಣ್ಣಗಾದ ಮೇಲೆ ತೆಗೆದುಕೊಂಡು ಕುಪ್ಪಿಗೆಯಲ್ಲಿ ಪಕ್ವವಾಗಿರುವ ಔಷಧವನ್ನು ಕಲ್ವದಲ್ಲಿ ಹಾಕಿ ನುಣ್ಣಗೆ ಅರೆದು ಯಕ್ಕದ ಹಾಲಿನಿಂದ, ಅಶ್ವಗಂಧಿಯ ಬೇರಿನ ರಸದಿಂದ, ಕಾಕೋಲೀ ಎಂಬ ಮೂಲಿಕೆಯ ರಸದಿಂದ, ತುರಚಿಯಬೇರಿನ ರಸದಿಂದ, ಹಂದೀಗೆಡ್ಡೆಯ ರಸದಿಂದ, ಕೊಳವಂಕನ ಬೇರಿನ ರಸದಿಂದ, ಈ ರಸಗಳಿಂದ ಪ್ರತ್ಯೇಕ ಮೂರು ಮೂರು ಸಾರಿಯೂ ಶತಾವರೀ ರಸದಿಂದ ಮೂರು ಸಾರಿಯೂ ಭಾವನೆಕೊಡಬೇಕು,

ನಂತರ ಕಮಲದಗೆಡ್ಡೆಯ ರಸ, ಭದ್ರಮುಸ್ತೆಯ ರಸ, ಕಾಶವೆಂಬ ಒಂದು ಬಗೆಯ ಹುಲ್ಲಿನ ರಸ, ಇವುಗಳಿಂದಲೂ ಪ್ರತ್ಯೇಕ ಮೂರು ಮೂರು ಬಾರಿ ಭಾವನೆಕೊಡಬೇಕು, ನಂತರ ಹಿಂದಿನ ಔಷಧದ ಎಂಟನೆಯ ಭಾಗದಷ್ಟು ಕಸ್ತೂರಿ, ತ್ರಿಕಟು, ಪಚ್ಚಕರ್ಪೂರ, ಬಾಲಮೆಣಸು, ಏಲಕ್ಕಿ, ಲವಂಗ, ಇವುಗಳ ಚೂರ್ಣವನ್ನೂ ಇದೆಲ್ಲವೂ ಸೇರಿ ಎಷ್ಟಾಗುತ್ತದೋ ಅಷ್ಟು ಸಕ್ಕರೆಯನ್ನೂ ಸೇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು. ಈ ರೀತಿಯಾಗಿ ಸಿದ್ಧವಾದ ಔಷಧವನ್ನು ಶರೀರಬಲವನ್ನು ಗಮನಿಸಿ ಒಂದು ಶಾಣ ಪ್ರಮಾಣ ಸೇವಿಸಿ ಎರಡು ಪಲ ಪರಿಮಾಣ ಹಸುವಿನ ಹಾಲನ್ನು ಕುಡಿದು ಮಧುರವಾದ ಆಹಾರವನ್ನೇ ಸೇವಿಸುತ್ತ ಬಂದಲ್ಲಿ ದೇಹದ ಸೌಂದರ್ಯ, ಶಕ್ತಿ, ತೇಜಸ್ಸು ಇವುಗಳು ಉತ್ತಮರೀತಿಯಿಂದ ವೃದ್ಧಿಯಾಗುತ್ತ ಬರುವುದಲ್ಲದೆ ಶುಕ್ರವೃದ್ಧಿಯಾಗಿ ಎಷ್ಟು ಜನ ಸ್ತ್ರೀಯರಲ್ಲಿ ಸುಖಪಟ್ಟಾಗ್ಯೂ ಶುಕ್ರವು ಕ್ಷಯಿಸುವುದಿಲ್ಲ.

ಸೂತೋವಜ್ರಮಹಿಮರ್ಕಾತ್ತಾರಂಹೇಮಾಸಿತಾಭ್ರಕಂ ॥
ರಸ್ಯೈಃಕರ್ಷಾಂಶಕಾನೇತಾನ್ಮರ್ದಯೇದಿರಿಮೇವಜ್ರೈಃ ॥ ೨೬೭ ॥
ಪ್ರವಾಳಚೂರ್ಣಂಗಂಧಂಚದ್ವಿದ್ವಿಕರ್ಷಂವಿಮಿಶ್ರಯೇತ್ ॥
ತತ್ಸೋಕ್ಷ್ಮಗಂಧಾಸ್ಯರಸ್ಯೈರ್ವಿಮರ್ದ್ಯಮೃಗಶೃಂಗಕೇ ॥ ೨೬೮ ॥
ಕ್ಷಿಪ್ತ್ವಾಮೃದುಪುಟೇಪಕ್ತ್ವಾಭಾವಯೇದ್ಧಾತಕೀರಸ್ಯೈಃ ॥
ಕಾಕೋಲೀಮಧುಕಂಮಾಂಸೀಬಲಾತ್ರಯಬಿಸೇಂಗುದೇ ॥ ೨೬೯ ॥
ದ್ರಾಕ್ಷಾಪಿಪ್ಪಲಿವಂದಾಕಂಪರಿವರ್ಣೀಚತುಷ್ಟಯಂ ॥
ಪರೂಷಕಂಕಸೇರುಶ್ಚಮಧೂಕಂವಾನರೀತಥಾ ॥ ೨೭೦ ॥
ಭಾವಯಿತ್ವಾರಸ್ಯೈರೇಷಾಂಶೋಷಯಿತ್ವಾವಿಚೂರ್ಣಯೇತ್ ॥
ಏಲಾತ್ವಕ್ಪತ್ರಕಂವಾಂಸೀಲವಂಗಾಗರುಕೇಸರಂ ॥ ೨೭೧ ॥
ಮುಸ್ತಂಮೃಗಮದಃಕೃಷ್ಣಾಜಲಂಚಂದ್ರಶ್ಚಮಿಶ್ರಯೇತ್ ॥
ಏತಚ್ಚೂರ್ಣೈಃಶ್ಯಾಣಮಿತೈಃರಸಂಕಂದರ್ಪಸುಂದರಂ ॥ ೨೭೨ ॥
ಖಾದೇಚ್ಛಾಣಮಿತಂರಾತ್ರೌಸಿತಾಧಾತ್ರೀವಿದಾರಿಕಾ ॥
ಏತಾಸಾಂಕರ್ಷಚೂರ್ಣೇನಸರ್ಪಿಷ್ಕರ್ಷೇಣಸಂಯುತಂ ॥ ೨೭೩ ॥
ತಸ್ಯಾನುದ್ವಿಪಲಂಕ್ಷೀರಂಪಿಬೇತ್ಸುಸ್ಥಿತಮಾನಸಃ ॥
ರಮಣೀರಮಯೇದ್ಬಹ್ವೀರ್ನಹಾನಿಂಕ್ವಾಪಿಗಚ್ಛತಿ ॥ ೨೭೪ ॥

ಕಂದರ್ಪಸುಂದರರಸವನ್ನು ಹೇಳುತ್ತಾನೆ—ಶುದ್ಧವಾದ ರಸಭಸ್ಮ, ವಜ್ರಭಸ್ಮ, ಸೀಸದ ಭಸ್ಮ, ಮುತ್ತಿನ ಭಸ್ಮ, ರಜತ ಭಸ್ಮ, ಭಂಗಾರದ ಭಸ್ಮ, ಕೃಷ್ಣಾಭ್ರಕ ಭಸ್ಮ, ಇವುಗಳನ್ನು ಪ್ರತ್ಯೇಕ ಒಂದೊಂದು ಕರ್ಷ ಪ್ರಮಾಣ ಸೇರಿಸಿ ಕಲ್ವದಲ್ಲಿ ಹಾಕಿ ಇರಿಮೇದವೆಂದರೆ ಒಂದು ಬಗೆಯ ದುರ್ವಾಸನೆಯು ಜ್ಞಾಲಿಯ ತೊಪ್ಪಿನ ಸ್ವರಸದಿಂದ ಚನ್ನಾಗಿ ಅರೆಯಬೇಕು, ನಂತರ ಪ್ರವಾಳ ಭಸ್ಮ, ಶುದ್ಧವಾದ ಗಂಧಕ, ಇವುಗಳನ್ನು ಪ್ರತ್ಯೇಕ ಎರಡೆರಡು ಕರ್ಷ ಪ್ರಮಾಣ ಇದರ ಜೊತೆಯಲ್ಲಿ ಸೇರಿಸಬೇಕು, ನಂತರ ಅಶ್ವಗಂಧಿಯ ಸ್ವರಸದಲ್ಲಿ ಚನ್ನಾಗಿ ಅರೆದು ಸಾರಗದ ಕೊಂಬಿನ ಪೊಳ್ಳಿನಲ್ಲಿ ಇದನ್ನೆಲ್ಲಾ ತುಂಬಿ ವೃದ್ಧಗ್ನಿಯಲ್ಲಿ ಆ ಕೊಂಬನ್ನಿಟ್ಟು ಪುಟಹಾಕಬೇಕು, ನಂತರ ಧಾತ್ರೀಕುಸುಮದ ರಸ, ಕಾಕೋಲಿ ಎಂಬ ಮೂಲಿಕೆಯ ರಸ, ಜ್ಯೇಷ್ಠಮಧುವಿನ ರಸ ಅಥವಾ ಕಷಾಯ, ಜಟಾಮಾಂಸಿಯ ರಸ, ಬಲಾತ್ರಯವೆಂದರೆ ಕಳ್ಳಂಗಡ್ಲೆಯ ಜಾತಿಗೆ ಸೇರಿದ ಬಲ, ಅತಿಬಲ, ನಾಗಬಲ, ಎಂಬ ಮೂರು ಜಾತಿಯ ಗಿಡಗಳ ರಸದಿಂದ, ತಾವರೆಯ ಗೆಡ್ಡೆಯ ರಸದಿಂದ, ಇಂಗಳದ ತೊಪ್ಪೆಯ ರಸ, ದ್ರಾಕ್ಷಿಯ ರಸ, ಅರಳಿಯ ಮರದಲ್ಲಿರುವ ಬದನಿಕೆಯ ರಸ, (ಅರಳಿಯ ಮರದ ಮೇಲೆ ಹುಟ್ಟತಕ್ಕ ಬಂದರಿಕೆಯ ಗಿಡವೆಂದು ಲೋಕದಲ್ಲಿ ಪ್ರಸಿದ್ಧಿ ಇದೆ.) ಅಷಾಡೀಬೇರಿನ ರಸ, ಪರ್ಣೀಚತುಷ್ಟಯವೆಂದರೆ ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಕಾಡು ಹೆಸರು, ಕಾಡು ಉದ್ದು, ಈ ನಾಲ್ಕರ ಪ್ರತ್ಯೇಕ ಸ್ವರಸ, ಪರೂಷಕವೆಂಬ ಸ್ವನಾವು ಪ್ರಸಿದ್ಧವಾದ ಮೂಲಿಕೆಯ ರಸ, ಸಿಂಗಾಡಿ ಎಂಬ ಗೆಡ್ಡೆಯ ರಸ, ಇಪ್ಪೆಯ ಹೂವಿನ ರಸ, ತುರಚಿಯ ಬೇರಿನ ರಸ, ಈ ರಸಗಳಿಂದ ಪ್ರತ್ಯೇಕ ಭಾವನೆಯನ್ನು ಕೊಟ್ಟು ಚನ್ನಾಗಿ ಒಣಗಿಸಿ ಚೂರ್ಣಮಾಡಿಕೊಂಡು ಅದರೊಂದಿಗೆ ಯಾಲಕ್ಕಿ, ಲವಂಗಪತ್ರೆ, ತಾಳೀಸಪತ್ರೆ, ಬಿದರುಪ್ಪು, ಲವಂಗ, ಅಗಿಲುಗಂಧ, ನಾಗಕೇಸರಿ, ಭದ್ರಮುಸ್ತೆ, ಕಸ್ತೂರಿ, ಹಿಪ್ಪಲಿ, ಲಾಮಂಚ, ಪಚ್ಚಕರ್ಪೂರ, ಈ ಪದಾರ್ಥಗಳ ಪ್ರತ್ಯೇಕ ಒಂದೊಂದು ಶಾಣ ಪರಿಮಾಣ ಚೂರ್ಣವನ್ನು ಸೇರಿಸಿ ಕೂಡಿಸಿ ಇರಿಸಿಕೊಳ್ಳಬೇಕು, ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು, ಇದಕ್ಕೆ ಕಂದರ್ಪಸುಂದರರಸವೆಂದು ಹೆಸರು. ಇದರಲ್ಲಿ ಒಂದು ಶಾಣ ಪ್ರಮಾಣವನ್ನು ತೆಗೆದುಕೊಂಡು ಅದರೊಟ್ಟಿಗೆ ಒಂದು ಕರ್ಷ ಪ್ರಮಾಣ ಸಕ್ಕರೆ, ಒಂದು ಕರ್ಷ ಪ್ರಮಾಣ ನೆಲ್ಲಿಕಾಯಿನ ಚೂರ್ಣ, ಒಂದು ಕರ್ಷ ಪ್ರಮಾಣ ಹಂದೀಗೆಡ್ಡೆಯ ಚೂರ್ಣ, ಇವು ಮೂರನ್ನೂ ಸೇರಿಸಿಕೊಂಡು ರಾತ್ರಿವೇಳೆಯಲ್ಲಿ ಸೇವಿಸಿ ಎರಡು ಪಲ್ಲ ಪರಿಮಾಣ ಹಾಲನ್ನು ಕುಡಿಯಬೇಕು, ಈ ರೀತಿಯಲ್ಲಿ ಪ್ರತಿನಿತ್ಯವೂ ಮಾಡೋಣದರಿಂದ ಶುಕ್ರವೃದ್ಧಿಯಾಗಿ ಅನೇಕ ಜನ ಸ್ತ್ರೀಯರನ್ನು ಸಂಭೋಗಿಸುವ ಶಕ್ತಿ ಬರುತ್ತದೆ, ಯಾವಾಗ್ಗ್ಯೂ ವೀರ್ಯಹಾನಿಯಾಗುವುದೇ ಇಲ್ಲ.

ಶುದ್ಧಂರಸೇಂದ್ರಂಭಾಗೈಕಂದ್ವಿಭಾಗಂಶುದ್ಧಗಂಧಕಂ ॥
ಕ್ಷಿಪೇತ್ ಕಜ್ಜಲಿಕಾಂಕುರ್ಯಾತ್ತತ್ರತೀಕ್ಷ್ಣಭವಂರಜಃ ॥ ೨೭೫ ॥
ಕ್ಷಿಪ್ತ್ವಾಕಜ್ಜಲಿಕಾತುಲ್ಯಂಪ್ರಹರೈಕಂವಿಮರ್ದಯೇತ್ ॥
ತತಃಕನ್ಯಾದ್ರವೈರ್ಘರ್ಮೇತ್ರಿದಿನಂಪರಿಮರ್ದಯೇತ್ ॥ ೨೭೬ ॥
ತತಸ್ಸಂಜಾಯತೇತಸ್ಯಸೋಷ್ಣೋಧೂಮೋದ್ಗಮೋಮಹಾನ್ ॥
ಅತ್ಯಂತಂಪಿಂಡಿತಂಕೃತ್ವಾತಾಮ್ರಪಾತ್ರೇನಿಧಾಪಯೇತ್ ॥೨೭೭॥
ಮಧ್ಯೇಧಾನ್ಯಕುಸೂಲಸ್ಯತ್ರಿದಿನಂಧಾರಯೇದ್ಬುಧಃ ॥
ಉದ್ಧೃತ್ಯತಸ್ಮಾತ್ ಖಲ್ವೇಚಕ್ಷಿಪ್ತ್ವಾಘರ್ಮೇನಿಧಾಯಚ ॥೨೭೮॥
ರಸೈಃಕುಠಾರಚ್ಛಿನ್ನಾಯಾಸ್ತ್ರೀವೇಲಂಪರಿಭಾವಯೇತ್ ॥
ಸಂಶೋಷ್ಯಘರ್ಮೇಕ್ವಾಥೈಶ್ಚಭಾವಯೇತ್ತ್ರಿಕಟೋಸ್ತ್ರಿಧಾ ॥೨೭೯॥
ಮುಸಾಮೃತಾಚಿತ್ರಕಾಣಾಂರಸೈರ್ಭಾವ್ಯಂಕ್ರಮಾತ್ತ್ರಿಧಾ ॥
ಲೋಹಪಾತ್ರೇತತಃಕ್ಷಿಪ್ತ್ವಾಭಾವಯೇತ್ತ್ರಿಫಲಾಜಲೈಃ ॥ ೨೮೦ ॥
ನಿರ್ಗುಂಡೀದಾಡಿಮತ್ವಗ್ಭಿರ್ಬಿಸಭೃಂಗಕುರಂಟಕೈಃ ॥
ಪಲಾಶಕದಳೀದ್ರಾವೈರ್ಬೀಜಕಸ್ಯಶೃತೇನಚ ॥ ೨೮೧ ॥
ನೀಲಿಕಾಲಂಬುಷಾದ್ರಾವೈರ್ಬಬ್ಬೂಲಫಲಿಕಾರಸೈಃ ॥
ಭಾವಯೇತ್ತ್ರಿತ್ರಿವೇಲಂಚತತೋನಾಗಬಲಾರಸೈಃ ॥ ೨೮೨ ॥
ಶತಾವರೀಗೋಕ್ಷುರುಭಿಃಪಾತಾಳಗರುಡೀದ್ರವೈಃ ॥
ತ್ರಿತ್ರಿವೇಲಂಯಥಾಲಾಭಂಭಾವಯೇದೇಭಿರೌಷಧೈಃ ॥ ೨೮೩ ॥
ತತಃಪ್ರಾತರ್ಲಿಹೇತ್ ಕ್ಷೌದ್ರಘೃತಾಭ್ಯಾಂಕೋಲಮಾತ್ರಕಂ ॥
ಪಲಮಾತ್ರಂನರಾಕ್ವಾಥಂಪಿಬೇದಸ್ಯಾನುಪಾನಕಂ ॥ ೨೮೪ ॥
ಮಾಸತ್ರಯಂಶೀಲಿತಂಸ್ಯಾದ್ವಲೀಪಲಿತನಾಶನಂ ॥
ಮಂದಾಗ್ನಿಂಶ್ವಾಸಕಾಸೌಚಪಾಂಡುತಾಂಕಫಮಾರುತೌ ॥ ೨೮೫ ॥
ಪಿಪ್ಪಲೀಮಧುಸಂಯುಕ್ತಂಹನ್ಯಾದೇತನ್ನಸಂಶಯಃ ॥
ವಾತಾಸ್ರಂಮೂತ್ರದೋಷಾಂಶ್ಚಗ್ರಹಣೀಂಗುದಜಾಂರುಜಂ ೨೮೬
ಅಂಡವೃದ್ಧಿಂಜಯೇದೇತತ್ ಛಿನ್ನಾಸತ್ವಮಧುಪ್ಲುತಂ ॥
ಬಲವರ್ಣಕರಂವೃಷ್ಯಮಾಯುಷ್ಯಂಪರಮಂಸ್ಮೃತಂ ॥ ೨೮೭ ॥
ಜಯೇತ್ಸರ್ವಾನ್ಮಯಾನ್ಕಾಲಾದಿದಂಲೋಹರಸಾಯನಂ ॥
ಕೂಷ್ಮಾಂಡಂತಿಲತೈಲಂಚಮಾಷಾನ್ನಂರಾಜಿಕಾಂತಥಾ ॥ ೨೮೮ ॥
ಮದ್ಯಮಮ್ಲರಸಂಚೈವತ್ಯಜೇಲ್ಲೋಹಸ್ಯಸೇವಕಃ ॥

ಲೋಹರಸಾಯನ—ಶುದ್ಧವಾದ ಪಾದರಸ ಒಂದು ಭಾಗ, ಶುದ್ಧವಾದ ಗಂಧಕ ಎರಡು ಭಾಗ, ಇವೆರಡನ್ನೂ ಕಲ್ವದಲ್ಲಿ ಹಾಕಿಕೊಂಡು ಚೆನ್ನಾಗಿ ಅರದು ಕಾಡಿಗೆಯಂತಹ ಪುಡಿಯನ್ನು ಮಾಡಬೇಕು, ಆ ಕಜ್ಜಲಿಯನ್ನು ಶುದ್ಧವಾದ ಉಕ್ಕಿನ ಪುಡಿಯನ್ನು ಅದರೊಂದಿಗೆ ಸೇರಿಸಿ ಒಂದು ಯಾಮ ಪರ್ಯಂತ ಚೆನ್ನಾಗಿ ಅರೆಯಬೇಕು, ನಂತರ ಕಲ್ವವನ್ನು ಬಿಸಿಲಿನಲ್ಲಿಟ್ಟುಕೊಂಡು ಲೋಳೆಸರದ ರಸ ವನ್ನು ಹಾಕಿಕೊಂಡು ಮೂರು ದಿವಸ ಚನ್ನಾಗಿ ಅರೆಯಬೇಕು, ಈ ರೀತಿಯಾಗಿ ಅರೆದರೆ ಮೂರು ದಿವಸವಾದ ಮೇಲೆ ಆ ಮಿಶ್ರಣದಲ್ಲಿ ಬಿಸಿಯಾದ ಹೊಗೆ ಹೊರಡುತ್ತದೆ, ಆ ಮೇಲೆ ಅದನ್ನು ಉಂಡೆಯಾಗಿ ಮಾಡಿ ತಾಮ್ರದ ಪಾತ್ರೆ ಯಲ್ಲಿರಿಸಿ ಮೇಲೆ ಮುಚ್ಚಿ ಧಾನ್ಯದ ಪಣತದಲ್ಲಿ ಮೂರು ದಿವಸ ಇಡಬೇಕು, ಮೂರು ದಿನವಾದ ಮೇಲೆ ಹೊರಕ್ಕೆ ತೆಗೆದುಕೊಂಡು ಬಿಸಿಲಿನಲ್ಲಿ ಕಲ್ವದಲ್ಲಿ ಹಾಕಿ ಇರಿಸಿ ಕುರಾರಭಿನ್ನಾ ಎಂಬ ಮೂಲಿಕೆಯ ರಸದಿಂದ ಮೂರು ಬಾರಿ ಭಾವನೆ ಕೊಡಬೇಕು, ನಂತರ ಒಣಗಿಸಿ ತ್ರಿಕಟು ಕಷಾಯದಿಂದ ಮೂರು ಬಾರಿಯೂ ಆಡುಸೋಗೆಯ ಸೊಪ್ಪಿನ ರಸ, ಅಮೃತಬಳ್ಳಿಯ ರಸ, ಚಿತ್ರಮೂಲದ ಬೇರಿನ ರಸ ಅಥವಾ ಕಷಾಯ ಇವುಗಳಿಂದ ಪ್ರತ್ಯೇಕ ಮೂರು ಮೂರು ಸಾರಿ ಭಾವನೆ ಕೊಟ್ಟು, ಒಣಗಿಸಿ ನಂತರ ಆ ಚೂರ್ಣವನ್ನು ಕಬ್ಬಿಣದ ಬಾಣಲೆಗೆ ಹಾಕಿ ತ್ರಿಫಲ ಕಷಾಯ, ಲಕ್ಕಿಸೊಪ್ಪಿನ ರಸ, ದಾಳಿಂಬರೆಸಿಪ್ಪೆಯ ಕಷಾಯ, ನಾಮರೀಗೆಡ್ಡೆಯ ರಸ, ಗಮಗದಸೊಪ್ಪಿನ ರಸ, ಗೋರಂಟಿಸೊಪ್ಪಿನ ರಸ, ಮುತ್ತುಗದ ಚಕ್ಕೆಯ ರಸ, ಬಾಳೇಗೆಡ್ಡೆಯ ರಸ, ಮಾದಳದಬೇರಿನ ಕಷಾಯ, ವಜ್ರಸೀಳೀಗಿಡದ ರಸ, ಗೊಂಡೇಗಿಡದ ರಸ, ಗೊಬ್ಬಳಿಯ ಚಕ್ಕೆಯ ರಸ, ಕಳ್ಳಂಗಡ್ಲೆಯ ರಸ, ಆಷಾಡೀ ಬೇರಿನ ರಸ, ನೆಗ್ಗಿಲಮುಳ್ಳಿನ ಕಷಾಯ, ಪಾತಾಳಗರುಡನ ಸೊಪ್ಪಿನ ರಸ, ಈ ರಸಗಳಿಂದ ಪ್ರತ್ಯೇಕ ಮೂರು ಮೂರು ಸಾರಿ ಭಾವನೆಕೊಡಬೇಕು, ಹಿಂದೆ ಹೇಳಿದ ಮೂಲಿಕೆಗಳ ಪೈಕಿ ಎಷ್ಟು ಶಿಕ್ಕಿದರೆ ಅಷ್ಟರಿಂದಲೇ ಕೊಟ್ಟುಕೊಳ್ಳ ಬಹುದು, ಈ ರೀತಿ ಭಾವನೆಕೊಡುವುದು ಮುಗಿದರೆ ಇಲ್ಲಿಗೆ ಔಷಧವು ಸಿದ್ಧವಾದ ಹಾಗಾಯಿತು, ಸಿದ್ಧವಾದ ಔಷಧದಲ್ಲಿ ಒಂದು ತೊಲ ಪ್ರಮಾಣ ಮಾತ್ರವನ್ನು ಜೇನುತುಪ್ಪ ಮತ್ತು ಹಸುವಿನ ತುಪ್ಪ ಇವುಗಳೊಂದಿಗೆ ಸೇವಿಸಿ ಒಂದು ಪಲ ತ್ರಿಫಲಾ ಕಷಾಯವನ್ನು ಅನುಪಾನವಾಗಿ ಸೇವಿಸುವುದು, ಈ ರೀತಿ ಮೂರು ತಿಂಗಳು ಸೇವಿಸಿದಲ್ಲಿ ಅಗ್ನಿಮಾಂದ್ಯ, ಉಬ್ಬಸ, ಕೆಮ್ಮು, ಪಾಂಡುರೋಗ, ಶ್ಲೇಷ್ಮ ರೋಗ, ವಾತರೋಗಗಳು, ಇವುಗಳನ್ನೆಲ್ಲಾ ಗುಣಪಡಿಸುತ್ತದೆ, ಹಿಪ್ಪಲೀಚೂರ್ಣ ಮತ್ತು ಜೇನುತುಪ್ಪಗಳೊಡನೆ ಸೇವಿಸುವುದರಿಂದ ವಾತರಕ್ತ, ಮೂತ್ರದೋಷ ಗಳು, ಗ್ರಹಣಿ ಎಂಬ ಭೇದಿ, ಮೂಲವ್ಯಾಧಿ, ವೃಷಣವಾತ, ಇವುಗಳನ್ನು ಗುಣ ಪಡಿಸುತ್ತದೆ, ಗುಡೂಚೀಸತ್ವ, ಜೇನುತುಪ್ಪ, ಇವುಗಳೊಡನೆ ಸೇವಿಸೋಣದರಿಂದ

ದೇಹದಲ್ಲಿ ಶಕ್ತಿಯನ್ನು ಹೆಚ್ಚಿಸುತ್ತದೆ, ಕಾಂತಿಯನ್ನೂ ವೃದ್ಧಿಪಡಿಸುತ್ತದೆ, ವೀರ್ಯ ವೃದ್ಧಿಯನ್ನೂ ಆಯುರ್ವೃದ್ಧಿಯನ್ನೂ ಉಂಟುಮಾಡುತ್ತದೆ, ಈ ಲೋಹರಸಾಯನವು ಸಮಸ್ತ ರೋಗಗಳನ್ನೂ ಗುಣಪಡಿಸುತ್ತದೆ, ಇದನ್ನು ಸೇವನಮಾಡತಕ್ಕ ಕಾಲದಲ್ಲಿ ಕುಂಬಳಕಾಯಿ, ಎಣ್ಣೆ, ಉದ್ದು ಸೇರಿದ ಪದಾರ್ಥಗಳು, ರಾಗಿ, ಮದ್ಯ, ಹುಳಿ ಇವುಗಳನ್ನು ಖಂಡಿತವಾಗಿ ಬಿಡಬೇಕು.

ಜೈಪಾಲಂರಹಿತಂತ್ವಗಂಕುರರಸಜಿಹ್ವಾಭಿರ್ಮಲೇವಾಹಿಷೇನಿಕ್ಷಿ
ಪ್ತಂತ್ರ್ಯಹಮುಷ್ಣತೋಯಮಿಳಿತಂಖಲ್ವೇಸವಾಸೋದ್ದಿತಂ ॥
ಲಿಪ್ತಂನೂತನಖರ್ಪರೇಷುವಿಗತಸ್ನೇಹಂರಜಸ್ಸನ್ನಿಭಂನಿಂಬೂ
ಕಾಂಬುವಿಭಾವಿತಂಚಬಹುಶಶ್ಶುದ್ಧಂಗುಣಾಢ್ಯಂಭವೇತ್
॥ ೨೮೯ ॥

ಜಾಪಾಳದ ಬೀಜವನ್ನು ಶೋಧನಮಾಡತಕ್ಕ ಕ್ರಮ—ಜಾಪಾಳದ ಬೀಜದ ಮೇಲಿನ ಹೊಟ್ಟನ್ನು ತೆಗದು ಎರಡು ಪಾಲಾಗಿ ಶೀಳಿ ಮಧ್ಯದಲ್ಲಿರುವ ಮೊಳಕೆ ಮತ್ತು ನಾಲಿಗೆಗಳನ್ನು ತೆಗೆದು ಎಮ್ಮೆಯ ಸಗಣಿಯಲ್ಲಿ ಮೂರು ದಿವಸ ನೆನೆ ಹಾಕಿ ನಂತರ ಈಚೆಗೆ ತೆಗೆದು ಬಿಸಿನೀರಿನಿಂದ ತೊಳೆದು ಖಲಬತ್ತಿನಲ್ಲಿ ಅರದು ಹೊಸ ಹಂಚಿಗೆ ಮೆತ್ತಿ ಅದರಲ್ಲಿರುವ ಜಿಡ್ಡನ್ನೆಲ್ಲಾ ಕಳೆದರೆ ಹುಡಿಯುಂತಾಗುತ್ತದೆ ಆ ಹುಡಿಯನ್ನು ನಿಂಬೇಹಣ್ಣಿನ ರಸದಲ್ಲಿ ಭಾವನೆಮಾಡಿ ಔಷಧಗಳಿಗೆ ಉಪಯೋಗಿಸಿದಲ್ಲಿ ಗುಣಯುಕ್ತವಾಗಿರುತ್ತದೆ.

ವಿಷಂತುಖಂಡಶಃಕೃತ್ವಾವಸ್ತ್ರಖಂಡೇನಬಂಧಯೇತ್ ॥
ಗೋಮೂತ್ರಮಧ್ಯೇನಿಕ್ಷಿಪ್ಯಸ್ಥಾಪಯೇದಾತಪೇತ್ರ್ಯಹಂ ॥ ೨೯೦ ॥
ಗೋಮೂತ್ರಂಚಪ್ರದಾತವ್ಯಂನೂತನಂಪ್ರತ್ಯಹಂಬುಧೈಃ ॥
ತ್ರ್ಯಹೇತೀತೇಸಮುದ್ಧೃತ್ಯಶೋಷಯೇನ್ಮೃದುಪೇಷಯೇತ್ ೨೯೧
ಶುದ್ಧ್ಯತ್ಯೇವಂವಿಷಂತಚ್ಚಯೋಗ್ಯಂಭವತಿಚಾರ್ತಿಜಿತ್ ॥
ಖಂಡೀಕೃತ್ಯವಿಷಂವಸ್ತ್ರಪರಿಬದ್ಧಂತುದೋಲಯಾ ॥ ೨೯೨ ॥
ಅಜಾಪಯಸಿಸಂಸ್ವಿನ್ನಂಯಾಮತಶ್ಶುದ್ಧಿಮಾಪ್ನುಯಾತ್ ॥
ಅಜಾದುಗ್ಧಾಭಾವತಸ್ತುಗವ್ಯಕ್ಷೀರೇಣಶೋಧಯೇತ್ ॥ ೨೯೩ ॥

ವತ್ಸನಾಭಿಯನ್ನು ಶೋಧನಮಾಡುವ ಕ್ರಮ—ವತ್ಸನಾಭಿಯನ್ನು ಅಡಿಕೆಯನ್ನು ಕತ್ತರಿಸುವಂತೆ ಕತ್ತರಿಸಿ ಬಟ್ಟೆಯಲ್ಲಿ ಕಟ್ಟಿ ಒಂದು ಮಡಿಕೆಯಲ್ಲಿ ಹಾಕಿ ಅದಕ್ಕೆ ಗೋಮೂತ್ರವನ್ನು ತುಂಬಿ ಬಿಸಲಿನಲ್ಲಿ ಮೂರು ದಿವಸ ಇರಿಸಬೇಕು, ಪ್ರತಿ ದಿವಸವೂ ಹಳೆಯ ಗೋಮೂತ್ರವನ್ನು ತೆಗೆದು ಹೊಸದಾಗಿ ಗೋಮೂತ್ರ

ವನ್ನು ಹಾಕುತ್ತಿರಬೇಕು, ಮೂರು ದಿವಸದ ಮೇಲೆ ಹೊರಕ್ಕೆ ತೆಗೆದು ಒಣಗಿಸಿ ಚೆನ್ನಾಗಿ ಅರೆಯಬೇಕು, ಇಷ್ಟು ಮಾಡಿದಲ್ಲಿ ವತ್ಸನಾಭಿಯು ಶುದ್ಧವಾದ ಹಾಗಾಯಿತು. ಇನ್ನೊಂದು ವಿಧ—ವತ್ಸನಾಭಿಯನ್ನು ಸಣ್ಣಗೆ ಕತ್ತರಿಸಿ ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಣ್ಣಿನ ಮಗೆಯಲ್ಲಿ ತೂಗಗಟ್ಟಿ ಆ ಮಗೆಯಲ್ಲಿ ಆಡಿನ ಹಾಲನ್ನು ಹಾಕಿ ಒಲೆಯ ಮೇಲಿಟ್ಟು ಉರಿಹಾಕಿ ಬೇಯಿಸಬೇಕು, ಆಡಿನ ಹಾಲು ಸಿಗದಿದ್ದಲ್ಲಿ ಹಸುವಿನ ಹಾಲಾದರೂ ಆಗಬಹುದು, ಈ ರೀತಿ ಮಾಡಿದಲ್ಲಿ ವತ್ಸನಾಭಿಯು ಶುದ್ಧವಾಗಿ ಔಷಧೋಪಯೋಗಿಯಾಗುತ್ತದೆ.

ಇಲ್ಲಿಗೆ
ಪಂಡಿತ ಗೋಪಾಲಚಾರ್ಯ ಶಿಷ್ಯ
ಪಟ್ನಗೆರೆ ಸೂರ್ಯನಾರಾಯಣಶಾಸ್ತ್ರಿಯಿಂದ
ಕರ್ನಾಟಕದಲ್ಲಿ ಅನುವಾದ ಮಾಡಲ್ಪಟ್ಟ
ಶಾಙ್ಗ೯ಧರಸಂಹಿತೆಯಲ್ಲಿ
ಮಧ್ಯಮಖಂಡ ಸಂಪೂರ್ಣ.



॥ ಶ್ರೀ ಗುರುಭ್ಯೋ ನಮಃ ॥

# ಶಾರ್ಙ್ಗಧರಸಂಹಿತಾ

## ತೃತೀಯಖಂಡ.

### ಪ್ರಥಮಾಧ್ಯಾಯ.



"ಅವಿಶುದ್ಧೇಶು ಶರೀರೇಷು ಯುಕ್ತೋ ರಾಸಾಯನೋ ವಿಧಿಃ । ವಾಜೀಕರೋ ವಾ ಮಲಿನೇ ವಸ್ತ್ರೇ ರಂಗ ಇವಾಫಲಃ॥" "ತಸ್ಮಾತ್ ಶರೀರಶುದ್ಧ್ಯರ್ಥಂ ಪಂಚಕರ್ಮಾಣಿ ಯೋಜಯೇತ್।" "ಸ್ನೇಹಸ್ವೇದಾವನಭ್ಯಸ್ಯ ಕುರ್ಯಾತ್ ಸಂಶೋಧನಂ ತು ಯಃ । ದಾರುಶುಷ್ಕಮಿವಾನಾಮೇ ಶರೀರಂ ತಸ್ಯ ಶೀರ್ಯತೇ ॥" ಇತ್ಯಾದಿ ಆಯುರ್ವೇದ ವೃದ್ಧೋಕ್ತಿಗಳ ಮೇರೆ ಪ್ರಥಮತಃ ಶರೀರಶೋಧನ ಮಾಡದೆ ಯಾವ ಔಷಧವನ್ನೂ ಪ್ರಯೋಗಿಸಿದರೂ ಅದು ಸಂಪೂರ್ಣ ಫಲಕಾರಿಯಾಗುವುದಿಲ್ಲ. ಆದ್ದರಿಂದ ಪ್ರಥಮತಃ ಶರೀರಶೋಧನವು ಆವಶ್ಯಕ, ಶರೀರಶೋಧನವೆಂದರೆ ಪಂಚಕರ್ಮ (ವಮನಂ, ರೇಚನಂ, ನಸ್ಯಂ, ನಿರೂಹ, ಮನುವಾಸನಂ, ಜ್ಞೇಯಂ ಪಂಚವಿಧಂ ಕರ್ಮ)ಗಳ ದ್ವಾರ ಶರೀರದಲ್ಲಿರುವ ಮಲವನ್ನು ಹೊರಕ್ಕೆ ಹೊರಡಿಸಿ ಶುದ್ಧಿಪಡಿಸುವುದು, ಅಂತಹ ಪಂಚಕರ್ಮಗಳಿಗೆ ಉಪಯುಕ್ತಗಳಾದ ಸ್ನೇಹಸ್ವರೂಪ, ಭೇದ, ಪರಿಮಾಣಗಳನ್ನು ಪ್ರಾರಂಭಿಸಿ ವಿಸ್ತಾರವಾಗಿ ಪಂಚಕರ್ಮಗಳನ್ನು ಉತ್ತರಖಂಡದಲ್ಲಿ ವಿವರಿಸುತ್ತಾನೆ.

**ಸ್ನೇಹಶ್ಚತುರ್ವಿಧಃ ಪ್ರೋಕ್ತೋ ಘೃತಂ ತೈಲಂ ತಥಾ ವಸಾ ॥**
**ಮಜ್ಜಾ ಚ—**

ಸ್ನೇಹವೆಂದರೆ ಜಿಡ್ಡಾದ ದ್ರವದ್ರವ್ಯ, ಅದು ನಾಲ್ಕು ವಿಧ—ಘೃತ ಅಂದರೆ ತುಪ್ಪ, ತೈಲ ಎಂದರೆ ಎಣ್ಣೆ, ವಸ ಎಂದರೆ ಮಾಂಸರಸ, ಮಜ್ಜ ಎಂದರೆ ಅಸ್ಥಿಗತವಾದ ಸ್ನೇಹರಸ, ಈ ರೀತಿಯಾಗಿ ನಾಲ್ಕು ಪ್ರಕಾರವಾದ ಸ್ನೇಹಗಳು.

**—ತಂ ಪಿಬೇನ್ಮರ್ತ್ಯಃ ಕಿಂಚಿದಭ್ಯುದಿತೇ ರವೌ ॥ ೧ ॥**

ಪೂರ್ವೋಕ್ತವಾದ ನಾಲ್ಕು ವಿಧವಾದ ಸ್ನೇಹಗಳನ್ನೂ ಸ್ವಲ್ಪಮಾತ್ರ ಸೂರ್ಯೋದಯವಾಗುತ್ತಿರುವಾಗ್ಯೆ ಅಂದರೆ ಪ್ರಾತಃಕಾಲದಲ್ಲಿ ಪಾನಮಾಡಬೇಕು,

"ಶೀತಕಾಲೇದಿವಾಸ್ನೇಹಮುಷ್ಣಕಾಲೇಪಿಬೇನ್ನಿಶಿ" ಎಂಬ ವೈದ್ಯಸಂಪ್ರದಾಯದಂತೆ ಶೀತಕಾಲದಲ್ಲಿ ಹಗಲುಹೊತ್ತು ಉಷ್ಣಕಾಲದಲ್ಲಿ ರಾತ್ರಿಹೊತ್ತು ಸ್ನೇಹಪಾನಮಾಡಬೇಕೆಂದು ತಾತ್ಪರ್ಯ.

**ಸ್ಥಾವರೋಜಂಗಮಶ್ಚೈವದ್ವಿಯೋನಿಸ್ನೇಹಉಚ್ಯತೇ ॥**

ಪಾನಯೋಗ್ಯವಾದ ಸ್ನೇಹದ ಉತ್ಪತ್ತಿಯು ಸ್ಥಾವರ ಪದಾರ್ಥಗಳಿಂದ (ಸಸ್ಯಜ) ಮತ್ತು ಜಂಗಮ (ಪ್ರಾಣಿಜ) ಪದಾರ್ಥಗಳಿಂದ ಎಂದು ಎರಡು ವಿಧ.

**ತಿಲತೈಲಂಸ್ಥಾವರೇಷುಜಂಗಮೇಷುಘೃತಂವರಂ ॥ ೨ ॥**

ಸ್ಥಾವರಸ್ನೇಹದಲ್ಲಿ ಎಳ್ಳೆಣ್ಣೆಯೂ ಜಂಗಮಸ್ನೇಹದಲ್ಲಿ ತುಪ್ಪವೂ ಉತ್ತಮವಾದವುಗಳು.

**ದ್ವಾಭ್ಯಾಂತ್ರಿಭಿಶ್ಚತುರ್ಭಿಸ್ತೈರ್ಯಮಕಸ್ತ್ರಿವೃತೋಮಹಾನ್ ॥**

ಔಷಧಾರ್ಥವಾಗಿ ನಿರ್ಮಾಣ ಮಾಡತಕ್ಕ ಸ್ನೇಹಗಳಲ್ಲಿ ಎರಡು ಬಗೆಯ ಸ್ನೇಹಗಳನ್ನು ಸೇರಿಸಿದರೆ ಯಮಕಸ್ನೇಹವೆಂಬದಾಗಿಯೂ ಮೂರು ಬಗೆಯ ಸ್ನೇಹಗಳನ್ನು ಸೇರಿಸಿದರೆ ತ್ರಿವೃತಸ್ನೇಹವೆಂಬದಾಗಿಯೂ ನಾಲ್ಕು ಬಗೆಯ ಸ್ನೇಹಗಳನ್ನೂ ಸೇರಿಸಿದರೆ ಮಹಾಸ್ನೇಹ ಎಂಬದಾಗಿಯೂ ಶಾಸ್ತ್ರೀಯ ಸಂಕೇತಿತವಾದ ಹೆಸರುಗಳು ಇರುವುವು.

**ಪಿಬೇತ್ರ್ಯಹಂಚತುರಹಂಪಂಚಾಹಂಷಡಹಂತಥಾ ॥ ೩ ॥**
**ಸಪ್ತರಾತ್ರಾತ್ಪರಂಸ್ನೇಹಸ್ಸಾತ್ಮೀಭವತಿಸೇವಿತಃ ॥**

ಮೃದು, ಮಧ್ಯ, ಕ್ರೂರ ಎಂಬ ಕೋಷ್ಠಭೇದದಿಂದ ಮೂರು ದಿವಸ, ನಾಲ್ಕು ದಿವಸ, ಐದು ದಿವಸ, ಆರು ದಿವಸ ಈ ರೀತಿಯಾಗಿ ಸ್ನೇಹಪಾನ ಮಾಡಿಸಬೇಕು, ಏಳು ದಿವಸಕ್ಕೆ ಮೇಲೆ ಸ್ನೇಹಪಾನ ಮಾಡಿಸಿದಲ್ಲಿ ಸ್ನೇಹವು ಸಾತ್ಮ್ಯವಾಗಿ ಅಂದರೆ ಶರೀರಕ್ಕೆ ಒಗ್ಗಿಹೋಗಿ ಯಾತಕ್ಕಾಗಿ ನಾವು ಸ್ನೇಹಪಾನಮಾಡಿಸುತ್ತೇವೆಯೋ ಆ ಕೆಲಸವನ್ನು ಮಾಡದೇನೇ ಹೋಗಿಬಿಡುತ್ತದೆ, "ಸಾತ್ಮೀಭೂತೋಹಿಕುರುತೇನಮಲಾನಾಮುದೀರಣಂ।"

**ದೋಷಕಾಲಾಗ್ನಿವಯಸಾಂಬಲಂದೃಷ್ಟ್ವಾಪ್ರಯೋಜಯೇತ್ ॥**
**ಹೀನಾಂಚಮಧ್ಯಮಾಂಜ್ಯೇಷ್ಠಾಂಮಾತ್ರಾಂಸ್ನೇಹಸ್ಯಬುದ್ಧಿಮಾನ್**

ವಾತಾದಿದೋಷಗಳು, ವಸಂತಾದಿ ಕಾಲಗಳು, ಮೃದುಮಧ್ಯಾದ್ಯಗ್ನಿಗಳು ಮತ್ತು ವಯಸ್ಸು ಇವುಗಳ ಬಲಾಬಲವನ್ನು ನೋಡಿಕೊಂಡು ಹೀನ, ಮಧ್ಯಮ, ಜ್ಯೇಷ್ಠ ಈ ರೀತಿಯಲ್ಲಿ ಮುಂದೆ ಹೇಳತಕ್ಕ ಪ್ರಮಾಣದಲ್ಲಿ ಸ್ನೇಹವನ್ನು ಪ್ರಯೋಗ ಮಾಡಬೇಕು.

ಅಮಾತ್ರಯಾತಥಾಕಾಲೇಮಿಥ್ಯಾಹಾರವಿಹಾರತಃ ॥ ೫ ॥
ಸ್ನೇಹಃಕರೋತಿಶೋಫಾರ್ಶಸ್ತಂದ್ರಾನಿದ್ರಾವಿಸಂಜ್ಞತಾಃ ॥

ಯಾವ ಪ್ರಮಾಣದಲ್ಲಿ ಯಾವ ಕಾಲದಲ್ಲಿ ಯಾವ ಆಹಾರವಿಹಾರಗಳನ್ನು ಉಪಯೋಗಿಸುತ್ತ ಸ್ನೇಹವನ್ನು ಉಪಯೋಗಿಸಬೇಕಾಗಿ ಶಾಸ್ತ್ರದಲ್ಲಿ ಉಕ್ತವಾಗಿದೆಯೋ ಅದಕ್ಕೆ ವಿರುದ್ಧವಾಗಿ ಸ್ನೇಹವನ್ನು ಉಪಯೋಗಿಸಿದಲ್ಲಿ ಶೋಭೆ, ಮೂಲವ್ಯಾಧಿ, ಆಕಳಿಕೆ, ನಿದ್ರೆ, ಮೂರ್ಛೆ, ಈ ರೋಗಗಳು ಹುಟ್ಟುತ್ತವೆ.

ದೇಯಾದೀಪ್ತಾಗ್ನಯೇಮಾತ್ರಾಸ್ನೇಹಸ್ಯಪಲಸಮ್ಮಿತಾ ॥ ೬ ॥
ಮಧ್ಯಮಾಯತ್ರಿಕರ್ಷಾಸ್ಯಾಜ್ಜಘನ್ಯಾಯದ್ವಿಕಾರ್ಷಿಕೀ ॥

ಉಪಯೋಗಿಸುವ ಸ್ನೇಹಪ್ರಮಾಣವನ್ನು ಹೇಳುತ್ತಾನೆ—ಅಗ್ನಿಪಾಟವ ಚನ್ನಾಗಿರುವವನಿಗೆ ಒಂದು ಪಲ ಪ್ರಮಾಣ ಸ್ನೇಹವನ್ನು ಕೊಡಬಹುದು, ಅಗ್ನಿಬಲ ಮಧ್ಯಮವಾಗಿದ್ದಲ್ಲಿ ಮೂರು ತೊಲ, ನಿಕೃಷ್ಟವಾಗಿದ್ದಲ್ಲಿ ಎರಡು ತೊಲ ಕೊಡಬಹುದು.

ಅಥವಾಸ್ನೇಹಮಾತ್ರಾಸ್ಯುಸ್ತಿಸ್ರೋನ್ಯಾಸ್ಸರ್ವಸಮ್ಮತಾಃ ॥ ೭ ॥
ಅಹೋರಾತ್ರೇಣಮಹತೀಜೀರ್ಯತ್ಯಹ್ನಿಶುಮಧ್ಯಮಾ ॥
ಜೀರ್ಯತ್ಯಲ್ಪಾದಿನಾರ್ಧೇನಸಾವಿಜ್ಞೇಯಾಸುಖಾವಹಾ ॥ ೮ ॥

ಮತ್ತೊಂದು ವಿಧವಾಗಿ ಸ್ನೇಹದ ಪರಿಮಾಣವನ್ನು ಹೇಳುತ್ತಾನೆ—ಉತ್ತಮ ಮಾತ್ರೆಯಿಂದ ಉಪಯುಕ್ತವಾದ ಸ್ನೇಹವು ಅಹೋರಾತ್ರಿಗಳಲ್ಲಿ ಅಂದರೆ ಎಂಟು ಯಾಮಗಳಲ್ಲಿ ಜೀರ್ಣವಾಗುತ್ತದೆ, ಮಧ್ಯಮ ಮಾತ್ರೆಯಿಂದ ಉಪಯುಕ್ತವಾದ ತೈಲವು ನಾಲ್ಕು ಯಾಮದಲ್ಲಿ ಜೀರ್ಣವಾಗುತ್ತದೆ, ಅಲ್ಪಮಾತ್ರೆಯಿಂದ ಉಪಯುಕ್ತವಾದ ಸ್ನೇಹವು ದಿನಾರ್ಧ ಎಂದರೆ ಹಗಲಿನ ಅರ್ಧವಾದ ಎರಡು ಯಾಮದಲ್ಲಿ ಜೀರ್ಣವಾಗುತ್ತದೆ, ಅಲ್ಪಮಾತ್ರೆಯಿಂದ ಸ್ನೇಹವನ್ನು ಉಪಯೋಗಿಸುವುದು ಸುಖವಾದದ್ದು.

ಅಲ್ಪಾಸ್ಯಾದ್ದೀಪನೀವೃಷ್ಯಾಸ್ವಲ್ಪದೋಷೇಷುಪೂಜಿತಾ ॥
ಮಧ್ಯಮಾಸ್ನೇಹನೀಜ್ಞೇಯಾಬೃಂಹಣೀಭ್ರಮಹಾರಿಣೀ ॥ ೯ ॥
ಜ್ಯೇಷ್ಠಾಕುಷ್ಠವಿಷೋನ್ಮಾದಗ್ರಹಾಪಸ್ಮಾರನಾಶನೀ ॥

ಪೂರ್ವೋಕ್ತವಾದ ಸ್ನೇಹಮಾತ್ರೆಗಳ ಗುಣವನ್ನು ಹೇಳುತ್ತಾನೆ—ಅಲ್ಪಮಾತ್ರೆಯಿಂದ ಸ್ನೇಹಪಾನವು ಅಗ್ನಿದೀಪನ, ಶುಕ್ರವರ್ಧಕ, ಅಲ್ಪವಾದ ದೋಷದಿಂದ ಉತ್ಪನ್ನವಾದ ರೋಗದ ವಿಷಯದಲ್ಲಿ ಪ್ರಶಸ್ತವಾಗಿದೆ, ಮಧ್ಯಮ

ಮಾತ್ರೆಯು ರೂಕ್ಷರಾದವರಿಗೆ ಸ್ನೇಹಾರ್ಥವಾಗಿ ಉಪಯೋಗಿಸತಕ್ಕದ್ದು, ಬೃಂಹಣೆ ಎಂದರೆ ಧಾತುವೃದ್ಧಿಕರ ಮತ್ತು ಶಿರೋಭ್ರಮಣೆಯನ್ನು ನಿವಾರಣೆಮಾಡುತ್ತದೆ, ಉತ್ತಮ ಮಾತ್ರೆಯು ಶುಷ್ಕ, ವಿಷರೋಗ, ಹುಚ್ಚು, ಗ್ರಹಶಂಕೆ, ಅಪಸ್ಮಾರ ರೋಗ, ಇವುಗಳನ್ನು ನಾಶಪಡಿಸುತ್ತದೆ.

ಕೇವಲಂಪೈತ್ತಿಕೇಸರ್ಪಿರ್ವಾತಿಕೇಲವಣಾನ್ವಿತಂ ॥ ೧೦ ॥
ಪೇಯಂಬಹುಕಫೇಚಾಪಿವ್ಯೋಷಕ್ಷಾರಸಮನ್ವಿತಂ ॥

ಪಿತ್ತಜನ್ಯವಾದ ವಿಕಾರಗಳಲ್ಲಿ ಕೇವಲ ತುಪ್ಪವನ್ನೂ ವಾತವಿಕಾರದಲ್ಲಿ ಸೈಂಧವಲವಣದಿಂದ ಯುಕ್ತವಾದ ತುಪ್ಪವನ್ನೂ ಕಫಜನ್ಯವಿಕಾರಗಳಲ್ಲಿ ತ್ರಿಕಟು ಮತ್ತು ಯವಕ್ಷಾರ ಇವುಗಳಿಂದ ಕೂಡಿದ ತುಪ್ಪವನ್ನು ಪಾನಮಾಡಿಸಬೇಕು.

ರೂಕ್ಷಕ್ಷತವಿಷಾರ್ತಾನಾಂವಾತಪಿತ್ತವಿಕಾರಿಣಾಂ ॥ ೧೧ ॥
ಹೀನಮೇಧಾಸ್ಮೃತೀನಾಂಚಸರ್ಪಿಷ್ಪಾನಂಪ್ರಶಸ್ಯತೇ ॥

ರೂಕ್ಷಸ್ವಭಾವದವರು, ಉರಃಕ್ಷತಾದಿಗಳಿಂದ ಕೂಡಿದವರು, ವಿಷವೇಗ ದಿಂದ ಯುಕ್ತರಾದವರು, ವಾತ, ಪಿತ್ತ, ಈ ಸಂಬಂಧವಾದ ವಿಕಾರಗಳುಳ್ಳವರು, ಬುದ್ಧಿ ಶಕ್ತಿ ಮತ್ತು ಜ್ಞಾಪಕಶಕ್ತಿ ಸಹ ಕಡಮೆಯಾದವರು ಇವರುಗಳಿಗೆ ತುಪ್ಪ ವನ್ನು ಕುಡಿಯುವುದು ಹಿತಕರ.

ಕ್ರಿಮಿಕೋಷ್ಠಾನಿಲಾವಿದ್ಧಾಃಪ್ರವೃದ್ಧಕಫಮೇದಸಃ ॥ ೧೨ ॥
ಪಿಬೇಯುಸ್ತೈಲಸಾತ್ಮ್ಯಾಯೇತೈಲಂದಾರ್ಢ್ಯಾರ್ಥಿನಸ್ತುಯೇ ॥

ಕೋಷ್ಠದಲ್ಲಿ ಕ್ರಿಮಿಹೆಚ್ಚಿರುವವರು, ವಾತವ್ಯಾಧಿಗಳಿಂದ ಪೀಡಿತರಾದವರು, ಕಫಪ್ರಕೋಪ ಉಳ್ಳವರು, ಮೇದೋವೃದ್ಧಿಯಿಂದ ಸ್ಥೂಲಕಾಯರಾದವರು, ತೈಲವು ಒಗ್ಗಿದವರು, ಶರೀರದಾರ್ಢ್ಯವನ್ನು ಅಪೇಕ್ಷಿಸತಕ್ಕವರು, ಇಂತವರು ತೈಲ ಪಾನ ಮಾಡಬೇಕು.

ವ್ಯಾಯಾಮಕರ್ಶಿತಾಶ್ಶುಷ್ಕರೇತೋರಕ್ತಾಮಹಾರುಜಃ ॥ ೧೩ ॥
ಮಹಾಗ್ನಿಮಾರುತಪ್ರಾಣಾವಸಾಯೋಗ್ಯಾನರಾಸ್ಮೃತಾಃ ॥

ಮಾಂಸರಸಪಾನಕ್ಕೆ ಯೋಗ್ಯರಾದವರನ್ನು ಹೇಳುತ್ತಾನೆ—ವ್ಯಾಯಾಮ ಮಾಡೋಣದರಿಂದ ಕೃಶರಾದವರು, ಶುಕ್ರ ಮತ್ತು ಶೋಣಿತ ರಕ್ತ ಇವುಗಳು ಶೋಷಿಸಿ ಹೋದವರು, ಮಹಾರೋಗ ಪೀಡಿತರಾದವರು, ತೀಕ್ಷ್ಣಾಗ್ನಿಗಳು, ವಾಯುವೃದ್ಧಿಯಾದವರು, ಕಾಯಶಕ್ತಿ ಚನ್ನಾಗಿರುವವರು, ಇಂತವರು ವಸಾ ಪಾನಮಾಡಲು ಅರ್ಹರಾದವರು.

ಕ್ರೂರಾಶಯಾಃಕ್ಲೇಶಸಹಾಃವಾತಾರ್ತಾದೀಪ್ತವಹ್ನಯಃ ॥ ೧೪ ॥
ಮಜ್ಜಾನಂಚಪಿಬೇಯುಸ್ತೇಸರ್ಪಿರ್ವಾಸರ್ವತೋಹಿತಂ ॥

ಅಸ್ಥಿರಸಪಾನ ಯೋಗ್ಯರನ್ನು ಹೇಳುತ್ತಾನೆ—ಕ್ರೂರವಾದ ಕೋಷ್ಠವುಳ್ಳವರು, ಕಷ್ಟವನ್ನು ಸಹಿಸತಕ್ಕವರು, ವಾತವ್ಯಾಧಿ ಪೀಡಿತರಾದವರು, ತೀಕ್ಷ್ಣವಾದ ಅಗ್ನಿಬಲವುಳ್ಳವರು, ಇಂತವರು ಮಜ್ಜಾಪಾನವನ್ನಾಗಲಿ ಅಥವಾ ಸರ್ವತ್ರ ಹಿತಕರವಾದ ಸರ್ಪಿಷ್ಪಾನವನ್ನಾಗಲಿ ಮಾಡಬಹುದು.

ಶೀತಕಾಲೇದಿವಾಸ್ನೇಹಮುಷ್ಣಕಾಲೇಪಿಬೇನ್ನಿಶಿ ॥ ೧೫ ॥
ವಾತಪಿತ್ತಾಧಿಕೇರಾತ್ರೌವಾತಶ್ಲೇಷ್ಮಾಧಿಕೇದಿವಾ ॥

ಶೀತಕಾಲದಲ್ಲಿ ಹಗಲು ಸ್ನೇಹಪಾನಮಾಡಬೇಕು, ಉಷ್ಣಕಾಲದಲ್ಲಿ ರಾತ್ರಿ ಸ್ನೇಹಪಾನ ಮಾಡಬೇಕು, ವಾತಮಿಶ್ರಿತವಾದ ಪಿತ್ತವು ಅಧಿಕವಾಗಿದ್ದಲ್ಲಿ ರಾತ್ರಿ ಕಾಲದಲ್ಲಿಯೂ, ವಾತಯುಕ್ತವಾದ ಶ್ಲೇಷ್ಮವು ಉಲ್ಬಣವಾಗಿದ್ದಲ್ಲಿ ಹಗಲಿನಲ್ಲಿಯೂ ಸ್ನೇಹಪಾನಮಾಡಬೇಕು.

ನಸ್ಯಾಭ್ಯಂಜನಗಂಡೂಷಮೂರ್ಧಕರ್ಣಾಕ್ಷಿತರ್ಪಣೇ ॥ ೧೬ ॥
ತೈಲಂಘೃತಂವಾಯುಂಜೀತದೃಷ್ಟ್ವಾದೋಷಬಲಾಬಲಂ ॥

ನಾಸಾದ್ವಾರದಿಂದ ಔಷಧವನ್ನು ತೆಗದುಕೊಳ್ಳುವುದು ನಸ್ಯವೆನ್ನಿಸುವುದು, ಅಭ್ಯಂಜನವೆಂದರೆ ಯಾವದಾದರೂ ತೈಲವನ್ನು ಶರೀರಕ್ಕೆಲ್ಲಾ ತಿಕ್ಕಿಕೊಂಡು ಬಿಸಿನೀರು ಹಾಕಿಕೊಳ್ಳುವುದು, ಗಂಡೂಷ ಎಂದರೆ ತೈಲದಿಂದ ಬಾಯಿ ಮುಕ್ಕುಳಿಸುವುದು, ಇವುಗಳಿಗೂ ಮತ್ತು ತಲೆಗೆ ತಿಕ್ಕಿಕೊಳ್ಳುವುದು, ಕಿವಿಗೆ ಹಾಕಿಕೊಳ್ಳುವುದು, ಕಣ್ಣಿಗೆ ಹಾಕಿಕೊಳ್ಳುವುದು, ಈ ಕೆಲಸಗಳಿಗೆಲ್ಲಾ ಶರೀರ ಬಲಾಬಲಗಳನ್ನು ಪರೀಕ್ಷಿಸಿಕೊಂಡು ತೈಲವನ್ನಾಗಲಿ ತುಪ್ಪವನ್ನಾಗಲಿ ಉಪಯೋಗಿಸಬೇಕು.

ಘೃತೇಕೋಷ್ಣಂಜಲಂಪೇಯಂತೈಲೇಯೂಷಃಪ್ರಶಸ್ಯತೇ ॥ ೧೭ ॥
ವಸಾಮಜ್ಜ್ನೋಃಪಿಬೇನ್ಮಂಡಮನುಪಾನಂಸುಖಾವಹಂ ॥

ಘೃತಪಾನಮಾಡತಕ್ಕವರು ಸುಖೋಷ್ಣವಾದ ಬಿಸಿನೀರನ್ನು ಅನುಪಾನವಾಗಿಯೂ, ತೈಲಪಾನಮಾಡತಕ್ಕವರು ಯೂಷವೆಂಬ ಒಂದು ಬಗೆಯ ಗಂಜಿಯನ್ನೂ ವಸ ಮತ್ತು ಮಜ್ಜ ಇವುಗಳನ್ನು ಪಾನಮಾಡತಕ್ಕವರು ಗಂಜಿಯನ್ನೂ ಅನುಪಾನವಾಗಿ ಉಪಯೋಗಿಸುವುದು ಸುಖಕರವು.

ಸ್ನೇಹದ್ವಿಷಶ್ಶಿಶೂನ್ವೃದ್ಧಾನ್ಸುಕುಮಾರಾನ್ಕೃಶಾನಪಿ ॥ ೧೮ ॥
ಉಷ್ಣಕಾಮಾನುಷ್ಣಕಾಲೇಸಹಭಕ್ತೇನಪಾಯಯೇತ್ ॥

ಸ್ನೇಹಶೀಲರದವರು, ಮಕ್ಕಳು, ಮುದುಕರು, ಸುಕುಮಾರರಾದವರು, ಕೃಶರಾದವರು, ಉಷ್ಣವನ್ನಪೇಕ್ಷಿಸುವವರು, ಇಂತವರುಗಳಿಗೆ ಉಷ್ಣಕಾಲದಲ್ಲಿ ಭೋಜನದ ಜೊತೆಯಲ್ಲಿಯೇ ಸ್ನೇಹವನ್ನು ಸೇವಿಸಬೇಕು.

ಸರ್ಪಿಷ್ಮತೀಬಹುತಿಲಾಯವಾಗೂಸ್ವಲ್ಪತಂಡುಲಾ ॥ ೧೯ ॥
ಸುಖೋಷ್ಣಾಸೇವ್ಯಮಾನಾತುಸದ್ಯಸ್ನೇಹನಕಾರಿಣೀ ॥
ಶರ್ಕರಾಚೂರ್ಣಸಂಭೃಷ್ಟೇದೋಹನಸ್ಥೇಘೃತೇತುಗಾಂ ॥ ೨೦ ॥
ದುಗ್ಧ್ವಾಕ್ಷೀರಂಪಿಬೇದುಷ್ಣಂಸದ್ಯಸ್ನೇಹನಮುಚ್ಯತೇ ॥

ಪ್ರತ್ಯಕ್ಷವಾಗಿ ಸ್ನೇಹವನ್ನು ಪಾನಮಾಡಲು ಶೇರದೆ ಇರುವವರಿಗಾಗಿ ಸ್ನೇಹನಾರ್ಥವಾಗಿ ಉಪಾಯಾಂತರವನ್ನು ಹೇಳುತ್ತಾನೆ—ಸ್ವಲ್ಪವಾಗಿ ಅಕ್ಕಿಯನ್ನೂ ಹೆಚ್ಚಾಗಿ ತುಪ್ಪ ಮತ್ತು ಯಳ್ಳು ಇವುಗಳನ್ನು ಸೇರಿಸಿ ಗಂಜಿಯನ್ನು ಮಾಡಿಕೊಂಡು ಸುಖೋಷ್ಣವಾಗಿ ಪಾನಮಾಡಿದಲ್ಲಿ ಸ್ನೇಹಪಾನಮಾಡಿದಷ್ಟು ಮಟ್ಟಿಗೆ ಕಾರ್ಯಕಾರಿಯಾಗುತ್ತದೆ, ಹಾಲು ಕರೆಯತಕ್ಕ ಪಾತ್ರೆಯಲ್ಲಿ ಸಕ್ಕರೆ ಮತ್ತು ತುಪ್ಪ ಇವುಗಳನ್ನು ಹಾಕಿ ಅದಕ್ಕೆ ಹಾಲನ್ನು ಕರದು ಧಾರೋಷ್ಣವಾಗಿ ಪಾನಮಾಡಿದಲ್ಲಿ ಅದೂನೂ ಸದ್ಯ ಸ್ನೇಹಕರವೇ ಆಗುತ್ತದೆ.

ಮಿಥ್ಯಾಚಾರಾದ್ಬಹುತ್ವಾದ್ವಾಯಸ್ಯಸ್ನೇಹೋನಜೀರ್ಯತಿ ॥ ೨೧ ॥
ವಿಷ್ಟಭ್ಯವಾಪಿಜೀರ್ಯೇತವಾರಿಣೋಷ್ಣೇನವಾಮಯೇತ್ ॥

ಸ್ನೇಹಪಾನಮಾಡತಕ್ಕವರು ಆಹಾರ ವಿಹಾರಾದಿಗಳಲ್ಲಿ ಯಾವ ಯಾವ ನಿಯಮವನ್ನು ಅನುಸರಿಸಬೇಕಾಗಿ ಉಕ್ತವಾಗಿದೆಯೋ ಅದಕ್ಕೆ ವಿರುದ್ಧವಾಗಿ ವರ್ತಿಸೋಣದರಿಂದಲೂ, ಪ್ರಮಾಣಕ್ಕಿಂತ ಹೆಚ್ಚಾಗಿ ಸ್ನೇಹಪಾನಮಾಡೋಣದರಿಂದಲೂ, ಯಾರಿಗೆ ಪಾನಮಾಡಿದ ಸ್ನೇಹವು ಜೀರ್ಣವಾಗುವುದಿಲ್ಲವೋ ಅಥವಾ ಕಷ್ಟದಿಂದ ಜೀರ್ಣವಾಗುತ್ತದೆಯೋ ಅಂತವರಿಗೆ ಬಿಸಿನೀರನ್ನು ಕುಡಿಸಿ ವಮನ ಮಾಡಿಸಬೇಕು.

ಸ್ನೇಹಸ್ಯಾಜ್ಜೀರ್ಣಶಂಕಾಯಾಂಪಿಬೇದುಷ್ಣೋದಕಂನರಃ ॥ ೨೨ ॥
ತೇನೋದ್ಗಾರೋಭವೇತ್ ಶುದ್ಧೋಭಕ್ತಂಪ್ರತಿರುಚಿಸ್ತಥಾ ॥

ಪಾನಮಾಡಿದ ಸ್ನೇಹವು ಜೀರ್ಣವಾಗುವದು ಸಂದೇಹವಾದಲ್ಲಿ ಬಿಸಿನೀರನ್ನು ಕುಡಿಯಬೇಕು, ಇದರಿಂದ ಸ್ನೇಹವು ಜೀರ್ಣವಾಗಿ ಶುದ್ಧವಾಗಿ ತೇಗು ಬಂದು ಅನ್ನದಲ್ಲಿ ಅಪೇಕ್ಷೆಯುಂಟಾಗುತ್ತದೆ.

ಸ್ನೇಹೇನಪೈತ್ತಿಕಸ್ಯಾಗ್ನಿರ್ಯದಾತೀಕ್ಷ್ಣತರೀಕೃತಃ ॥ ೨೩ ॥
ತದಾಸ್ಯೋದೀರಯೇತ್ತೃಷ್ಣಾಂವಿಷವನ್ಮಾಂತಸ್ಯವಾಮಯೇತ್ ॥
ಶೀತಂಜಲಂಪಾಯಯೇಚ್ಚ ಪಿಪಾಸಾತೇನಶಾಮ್ಯತಿ ॥ ೨೪ ॥

ಪಿತ್ತಪ್ರಕೃತಿಯುವನಿಗೆ ಸ್ನೇಹಪಾನಮಾಡಿನೋಣದರಿಂದ ಕೋಷ್ಠಗತವಾದ ಅಗ್ನಿಯು ಅತಿ ತೀಕ್ಷ್ಣವಾದಲ್ಲಿ ಬಾಯಾರಿಕೆಯನ್ನು ಉಂಟುಮಾಡುತ್ತದೆ, ಆಗ್ಯೆ ಉಷ್ಣಜಲಪಾನಮಾಡಿಸಿ ಸ್ನೇಹವನ್ನು ವಮನಮಾಡಿಸಬೇಕು, ನಂತರ ಶೀತೋದಕಪಾನಮಾಡಿಸಿದಲ್ಲಿ ಬಾಯಾರಿಕೆ ಶಮನವಾಗುತ್ತದೆ.

ಅಜೀರ್ಣೇವರ್ಜಯೇತ್ಸ್ನೇಹಮುದರೀತರುಣಜ್ವರಿ ॥
ದುರ್ಬಲೋರೋಚಕೀಸ್ಥೂಲೋಮೂರ್ಛಾರ್ತೋಮದಪೀಡಿತಃ ॥ ೨೫ ॥
ದತ್ತಬಸ್ತಿರ್ವಿರಿಕ್ತಶ್ಚವಾಂತಸ್ತೃಷ್ಣಾಶ್ರಮಾನ್ವಿತಃ ॥
ಅಕಾಲಪ್ರಸವಾನಾರೀದುರ್ದಿನೇಚವಿವರ್ಜಯೇತ್ ॥ ೨೬ ॥

ಸ್ನೇಹಪಾನವನ್ನು ಯಾರು ಮಾಡಬಾರದು ಎಂಬುವದನ್ನು ಹೇಳುತ್ತಾನೆ— ಅಜೀರ್ಣವುಳ್ಳವನು, ಉದರರೋಗವುಳ್ಳವನು ನವಜ್ವರಿತ, ಬಲಹೀನನಾದವನು, ಅರೋಚಕದಿಂದ ಕೂಡಿದವನು, ಸ್ಥೂಲಕಾಯನಾದವನು, ಮೂರ್ಛಾರೋಗ ಪೀಡಿತನಾದವನು, ಮದಾತ್ಯಯರೋಗ ಪೀಡಿತನಾದವನು, ಬಸ್ತಿಕರ್ಮ ಮಾಡಿಕೊಂಡವನು, ವಿರೇಚನ ಮಾಡಿಕೊಂಡವನು, ವಮನ ಮಾಡಿಕೊಂಡವನು, ಬಾಯಾರಿಕ, ಆಯಾಸ ಇವುಗಳಿಂದ ಕೂಡಿದವನು, ಗರ್ಭಸ್ರಾವ ಮತ್ತು ವಾತ ಇವುಗಳುಳ್ಳ ಸ್ತ್ರೀ ಇವರುಗಳು ಸ್ನೇಹಪಾನಮಾಡಬಾರದು, ಮತ್ತು ಮೋಡವಾಗಿ ಬಿಸಲೇ ಕಾಣದಿರುವಾಗಲೂ ಸ್ನೇಹಪಾನಮಾಡಬಾರದು.

ಸ್ವೇದ್ಯಸಂಶೋಧ್ಯಮದ್ಯಸ್ತ್ರೀವ್ಯಾಯಾಮಾಸಕ್ತಮಾನಸಾಃ ॥
ವೃದ್ಧಾಬಾಲಾಕೃಶಾರೂಕ್ಷಾಕ್ಷೀಣಾಸ್ರಾಃಕ್ಷೀಣರೇತಸಃ ॥ ೨೭ ॥
ವಾತಾರ್ತಾಸ್ತಿಮಿರಾರ್ತಾಯೇತೇಷಾಂಸ್ನೇಹನಮುತ್ತಮಂ ॥

ಯಾರು ಸ್ನೇಹಪಾನಮಾಡಬಹುದು ಎಂಬ ವಿಷಯವನ್ನು ಹೇಳುತ್ತಾನೆ— ಸ್ವೇದನಕ್ಕೆ ಯೋಗ್ಯರಾದವರು, ಸಂಶೋಧ್ಯ ಅಂದರೆ ವಮನ ವಿರೇಚನಗಳಿಗೆ ಯೋಗ್ಯರಾದವರು, ಮದ್ಯಪಾನ, ಸ್ತ್ರೀಸಂಗ, ವ್ಯಾಯಾಮ, ಇವುಗಳಲ್ಲಿ ಆಸಕ್ತರಾದವರು, ಮುದುಕರು, ಹುಡುಗರು, ಕೃಶರಾದವರು, ರೂಕ್ಷರಾದವರು, ರಕ್ತಕ್ಷೀಣವಾದವರು, ಶುಕ್ರಕ್ಷಯವುಳ್ಳವರು, ವಾತರೋಗಿಗಳು, ತಿಮಿರವೆಂಬ ನೇತ್ರರೋಗವುಳ್ಳವರು, ಇವರುಗಳಿಗೆ ಸ್ನೇಹಪಾನವು ಹಿತಕರ.

**ವಾತಾನುಲೋಮ್ಯಂದೀಪ್ತೋಗ್ನಿರ್ವರ್ಚಃಸ್ನಿಗ್ಧಮಸಂಹತಂ ॥೨೮॥**
**ಮೃದುಸ್ನಿಗ್ಧಾಂಗತಾಗ್ಲಾನಿಃಸ್ನೇಹೋದ್ವೇಗೋಥಲಾಘವಂ ॥**
**ವಿಮಲೇಂದ್ರಿಯತಾಸಮ್ಯಕ್ ಸ್ನಿಗ್ಧೇ—**

ಸ್ನೇಹಪಾನದಿಂದ ಚನ್ನಾಗಿ ಸ್ನಿಗ್ಧರಾದವರ ಲಕ್ಷಣ—ಅಧೋವಾಯು ಅನುಕೂಲವಾಗಿರುವುದು, ಜಠರಾಗ್ನಿ ಚನ್ನಾಗಿರುವುದು, ಮಲವು ಸ್ನೇಹಯುಕ್ತ ವಾಗಿ ಮೃದುವಾಗಿ ಪ್ರವೃತ್ತಿಯಾಗುವುದು, ಅವಯವಗಳು ಕೋಮಲವಾಗಿಯೂ ಸ್ನಿಗ್ಧವಾಗಿಯೂ ಇರುವುವು, ಅಗ್ಲಾನಿಃ ಅಂದರೆ ಬಳಲಿಕೆಯಿಲ್ಲದಿರುವುದು, ಶರೀರಲಾಘವ ಚಕ್ಷುರಾದಿ ಇಂದ್ರಿಯಗಳು ನಿರ್ಮಲವಾಗಿರುವದು, ಇವು ಸ್ನಿಗ್ಧಲಕ್ಷಣಗಳು.

**—ರೂಕ್ಷೇವಿಪರ್ಯಯಃ ॥ ೨೯ ॥**

ಪೂರ್ವೋಕ್ತ ಲಕ್ಷಣಗಳಿಗೆ ವ್ಯತಿರಿಕ್ತವಾದ ಲಕ್ಷಣಗಳು ಕಂಡಲ್ಲಿ ಚನ್ನಾಗಿ ಸ್ನಿಗ್ಧನಾಗಿಲ್ಲ, ರೂಕ್ಷನಾಗಿದ್ದಾನೆಂದು ತಿಳಿಯಬೇಕು.

**ಭಕ್ತದ್ವೇಷೋಮುಖಸ್ರಾವೋಗುದೇದಾಹಃಪ್ರವಾಹಿಕಾ ॥**
**ತಂದ್ರಾತಿಸಾರಃಪಾಂಡುತ್ವಂಭೃಶಂಸ್ನಿಗ್ಧಸ್ಯಲಕ್ಷಣಂ ॥ ೩೦ ॥**

ಅತಿ ಸ್ನಿಗ್ಧನಾದವನ ಲಕ್ಷಣಗಳು—ಅನ್ನದ್ವೇಷ, ಬಾಯಿನೀರು ಬರುವದು ಗುದದಲ್ಲಿ ಉರಿ, ಜಲರೂಪವಾಗಿ ಮಲಪ್ರವೃತ್ತಿ, ಆಕಳಿಕೆ, ಅತಿಸಾರ, ಮೈ ಕೈಯ್ಯೆಲ್ಲಾ ಬೆಳ್ಳಗಾಗುವದು, ಇವುಗಳು.

**ರೂಕ್ಷಸ್ಯಸ್ನೇಹನಂಸ್ನೇಹೈರತಿಸ್ನಿಗ್ಧಸ್ಯರೂಕ್ಷಣಂ ॥**

ಸ್ನೇಹದ ಹೀನಯೋಗ ಮಿಥ್ಯಾಯೋಗಗಳಿಂದ ರೂಕ್ಷನಾದವನಿಗೆ ಘೃತ ತೈಲ ರೂಪವಾದ ಸ್ನೇಹಗಳಿಂದ ಸ್ನೇಹನಮಾಡಿಸುವುದು, ಸ್ನೇಹಾತಿಯೋಗ ದಿಂದ ಅತಿ ಸ್ನಿಗ್ಧನಾದವನಿಗೆ ರೂಕ್ಷಪದಾರ್ಥಗಳಿಂದ ರೂಕ್ಷಮಾಡಿಸುವದು, ಈ ರೀತಿ ಯಾಗಿ ಮಾಡಿಸಬೇಕು.

**ಶ್ಯಾಮಾಕಚಣಕಾದ್ಯೈಶ್ಚತಕ್ರಪಿಣ್ಯಾಕಸಕ್ತುಭಿಃ ॥ ೩೧ ॥**

ರೂಕ್ಷಣದ್ರವ್ಯಗಳನ್ನು ಹೇಳುತ್ತಾನೆ—ಶ್ಯಾಮಾಕ ಅಂದರೆ ಸಾವೆ, ಕಡಲೆ, ಮಜ್ಜಿಗೆ, ಪಿಣ್ಯಾಕ ಅಂದರೆ ಎಳ್ಳಿನ ಕಲ್ಕ ಇವುಗಳಿಂದ ರೂಕ್ಷಣಮಾಡಬೇಕು.

**ದೀಪ್ತಾಗ್ನಿಶ್ಶುದ್ಧಕೋಷ್ಠಶ್ಚಪುಷ್ಟಧಾತುದೃಢೇಂದ್ರಿಯಃ ॥**
**ನಿರ್ಜರೋಬಲವರ್ಣಾಢ್ಯಸ್ನೇಹಸೇವೀಭವೇನ್ನರಃ ॥ ೩೨ ॥**

ಸ್ನೇಹಪಾನದಿಂದ ಅಗ್ನಿದೀಪ್ತಿ, ಕೋಷ್ಠಶುದ್ಧಿ, ಧಾತುಪುಷ್ಟಿ, ಇಂದ್ರಿಯ ದಾರ್ಢ್ಯ, ಜರಾರಾಹಿತ್ಯ, ಬಲ, ಕಾಂತಿ, ಇವುಗಳು ಉಂಟಾಗುತ್ತವೆ

**ಸ್ನೇಹೇವ್ಯಾಯಾಮಸಂಶೀತವೇಗಾಘಾತಪ್ರಜಾಗರಾನ್ ॥**
**ದಿವಾಸ್ವಪ್ನಮಭಿಷ್ಯಂದಿರೂಕ್ಷಾನ್ನಂಚವಿವರ್ಜಯೇತ್ ॥ ೩೩ ॥**

ಸ್ನೇಹಪಾನಮಾಡತಕ್ಕವರು ವ್ಯಾಯಾಮ, ಅತಿ ಶೀತಪದಾರ್ಥಗಳು, ವೇಗ ವನ್ನು ತಡೆಯುವದು ಅಂದರೆ ಮಲಮೂತ್ರ ರೇತಸ್ಸುಗಳ ವೇಗವನ್ನು ನಿಗ್ರಹಿಸು ವದು, ಜಾಗರಣೆ, ಹಗಲು ಮಲಗುವದು, ಅಭಿಷ್ಯಂದಿ ಅಂದರೆ ಶ್ಲೇಷ್ಮಪ್ರಕೋಪ ಮಾಡತಕ್ಕ ಪದಾರ್ಥಗಳು ಮತ್ತು ಶ್ಯಾಮಾಕಚಣಕಾದಿ ರೂಕ್ಷಾಹಾರಗಳು ಇವುಗಳನ್ನು ವರ್ಜ್ಯಮಾಡಬೇಕು.

ಇಲ್ಲಿಗೆ ಪ್ರಥಮಾಧ್ಯಾಯ ಸಂಪೂರ್ಣ.

---

## ದ್ವಿತೀಯಾಧ್ಯಾಯ.

**ಸ್ವೇದಶ್ಚತುರ್ವಿಧಃಪ್ರೋಕ್ತಸ್ತಾಪೋಷ್ಮಸ್ವೇದಸಂಜ್ಞಕೌ ॥**
**ಉಪನಾಹೋದ್ರವಸ್ವೇದಃಸರ್ವೇವಾತಾರ್ತಿಹಾರಿಣಃ ॥ ೧ ॥**
**ಸ್ವೇದೌತಾಪೋಷ್ಮಜೌಪ್ರಾಯಶ್ಲೇಷ್ಮಘ್ನೌಸಮುದೀರಿತೌ ॥**
**ಉಪನಾಹಸ್ತುವಾತಘ್ನಃಪಿತ್ತಸಂಗೇದ್ರವೋಹಿತಃ ॥ ೨ ॥**

ಚಿಕಿತ್ಸಾಶಾಸ್ತ್ರದಲ್ಲಿ ಪಂಚಕರ್ಮಗಳಿಗೆ ಅಗ್ರಸ್ಥಾನವನ್ನು ಕೊಟ್ಟಿರುವುದ ರಿಂದ ಪಂಚಕರ್ಮಗಳಲ್ಲಿಯೂ ಸ್ನೇಹಸ್ವೇದಗಳು ಅತಿ ಮುಖ್ಯವಾಗಿರುವುದರಿಂದ ಪ್ರಥಮತಃ ಸ್ನೇಹನಿರೂಪಣಮಾಡಿ ನಂತರ ಸ್ವೇದನಿರೂಪಣಮಾಡುತ್ತಾನೆ, ಸ್ವೇದವು ನಾಲ್ಕು ವಿಧ—ತಾಪ, ಊಷ್ಮ, ಉಪನಾಹ, ದ್ರವ ಎಂಬದಾಗಿ ಈ ಸ್ವೇದಕರ್ಮಗಳೆಲ್ಲಾ ವಾತಪ್ರಕೋಪವನ್ನು ಶಮನಮಾಡತಕ್ಕವುಗಳು, ನಾಲ್ಕು ವಿಧವಾದ ಸ್ನೇಹಗಳ ಮಧ್ಯದಲ್ಲಿ ತಾಪ ಮತ್ತು ಊಷ್ಮ ಎಂಬ ಎರಡು ವಿಧವಾದ ಸ್ವೇದಗಳು ಪ್ರಾಯಿಕವಾಗಿ ಶ್ಲೇಷ್ಮವಿಕಾರ ನಾಶಕವಾಗಿಯೇ ಉಕ್ತವಾಗಿವೆ, ಉಪನಾಹ ಎಂಬ ಸ್ವೇದವು ವಾತವಿಕಾರ ನಾಶಕವು, ದ್ರವಸ್ವೇದವು ವಾತ ಮತ್ತು ಶ್ಲೇಷ್ಮವಿಕಾರಗಳಿಗೆ ಪಿತ್ತಸಂಬಂಧವಿದ್ದಲ್ಲಿ ಹಿತಕರವಾದದ್ದು.

**ಮಹಾಬಲೇಮಹಾವ್ಯಾಧೌಶೀತೇಸ್ವೇದೋಮಹಾನ್ಸ್ಮೃತಃ ॥**
**ದುರ್ಬಲೇದುರ್ಬಲಸ್ವೇದಃಮಧ್ಯೇಮಧ್ಯತಮೋಮತಃ ॥ ೩ ॥**

ರೋಗಿಯು ಬಲಶಾಲಿಯಾಗಿರುವಾಗಲೂ, ವಾತಶ್ಲೇಷ್ಮ ಪ್ರಧಾನವಾದ ಮಹಾವ್ಯಾಧಿಗಳಲ್ಲಿಯೂ, ರೋಗಿಗೆ ಶೀತಬಾಧೆ ಹೆಚ್ಚಾಗಿರುವಾಗಲೂ ಮಹಾ ಸ್ವೇದವನ್ನು ಮಾಡಿಸಬೇಕು, ರೋಗಿಯು ದುರ್ಬಲನಾಗಿರುವಾಗ್ಯೆ ವಿಕಾರವು ಪಿತ್ತಪ್ರಧಾನವಾಗಿರುವಲ್ಲಿ ದುರ್ಬಲಸ್ವೇದವನ್ನು ಮಾಡಿಸಬೇಕು, ರೋಗಿಯು ಮಧ್ಯಮ ಬಲವುಳ್ಳವನಾಗಿರುವಾಗಲು ಮತ್ತು ವಾತವಿಕಾರದಲ್ಲಿಯೂ ಮಧ್ಯಮ ಸ್ವೇದವನ್ನು ಮಾಡಿಸಬೇಕು.

ಬಲಾಸರೂಕ್ಷಣಸ್ವೇದೋರೂಕ್ಷಸ್ನಿಗ್ಧಂಕಫಾ೯ಲೇ ॥
ಕಫಮೇದೋಽನ್ವಿತೇವಾತೇಕೋಷ್ಣಂಗೇಹಂರವೇಃಕರಾನ್ ॥ ೪ ॥
ನಿಯುದ್ಧಂಮಾರ್ಗಗಮನಂಗುರುಪ್ರಾವರಣಂಕ್ಷುಧಃ ॥
ಚಿಂತಾವ್ಯಾಯಾಮಭಾರಾಂಶ್ಚಸೇವೇತಾಮಯಮುಕ್ತಯೇ ॥ ೫ ॥

ಕಫಜನ್ಯವಿಕಾರಗಳಲ್ಲಿ ರೂಕ್ಷಗುಣವನ್ನು ಹುಟ್ಟಿಸತಕ್ಕಂಥಗಳಾದ ಮರಳು, ಒಟ್ಟೆ ಹಂಚು, ಬೆಂಕಿಸು ಕೆಂಡ, ಇವುಗಳಿಂದ ಸ್ವೇದನವ ಡಿಸಬೇಕು, ಕಫ ಮಿಶ್ರಿತವಾದ ವಾತವಿಕ ರದಲ್ಲಿ ರೂಕ್ಷ ಮತ್ತು ಸ್ನಿಗ್ಧವಾದ ಪದಾರ್ಥಗಳಿಂದ ಸ್ವೇದನವಾಡಿಸಬೇಕು, ಕಫ ಮೇದಸ್ಸು ಇವುಗಳಿಂದ ಪ್ರಕುಪಿತವಾದ ವಾತ ಜನ್ಯ ವಿಕಾರದಲ್ಲಿ ಸುಖೋಷ್ಣವಾದ ಮನೆಯಲ್ಲಿ ವಾಸಮಾಡುವುದು, ಬಿಸಿಲು ಕಾಯುವುದು, ಕುಸ್ತಿಮಾಡುವುದು, ದಾರಿ ನಡೆಯುವುದು, ಬಲವಾದ ಹೊದಿಕೆ ಹೊದಿಯುವುದು ಹಸಿವು, ಚಿಂತೆ, ವ್ಯಾಯಾಮ, ಇವುಗಳನ್ನು ಸಹಿಸುವದನ್ನು ರೂಢಿಮಾಡುವುದು, ಇವುಗಳಿಂದ ದೋಷಪ್ರಕೋಪವನ್ನು ಶಮನಪಡಿಸಿ ಕೊಳ್ಳಬೇಕು

ಯೇಷಾಂನಸ್ಯಂವಿಧಾತವ್ಯಂಬಸ್ತಿಶ್ಚಾಪಿಹಿದೇಹಿನಾಂ ॥
ಶೋಧನೀಯಾಶ್ಚಯೇಕೇಚಿತ್ಪೂರ್ವಂಸ್ವೇದ್ಯಾಶ್ಚತೇಮತಾಃ ॥ ೬ ॥

ಚಿಕಿತ್ಸೆಗೆ ಮೊದಲು, ಚಿಕಿತ್ಸೆಗೆ ಅನಂತರದಲ್ಲಿ, ಚಿಕಿತ್ಸೆಗೆ ಮೊದಲು ಮತ್ತು ಅನಂತರದಲ್ಲಿ ಸಹ ಈ ರೀತಿಯಾಗಿ ಸ್ವೇದನಕರ್ಮವು ಮೂರು ಪ್ರಕಾರವಾಗಿ ಮಾಡಲ್ಪಡುತ್ತದೆ, ಚಿಕಿತ್ಸೆಗೆ ಮೊದಲು ಸ್ವೇದನಮಾಡಿಸುವದು ಯಾವ ರೋಗಿ ಗಳನ್ನೆಂದು ಇಲ್ಲಿ ಹೇಳುತ್ತಾನೆ—ಯಾರಿಗೆ ನಸ್ಯಕರ್ಮ ಮಾಡಿಸಬೇಕೋ, ಯಾರಿಗೆ ವಸ್ತಿಕರ್ಮ ಮಾಡಿಸಬೇಕೋ, ಯಾರಿಗೆ ವಮನವಿರೇಕಾದಿಗಳಿಂದ ಶೋಧನಮಾಡಿಸಬೇಕೋ ಅವರುಗಳಿಗೆಲ್ಲಾ ಆಯಾ ಚಿಕಿತ್ಸೆಗೆ ಪೂರ್ವವೇ ಸ್ವೇದನಮಾಡಿಸಬೇಕು.

ಪಶ್ಚಾತ್ಸ್ವೇದ್ಯಾಗತೇಶಲ್ಯಾಮೂಢಗರ್ಭಗದೇತಥಾ ॥
ಕಾಲೇಪ್ರಜಾತಾಕಾಲೇವಾಪಶ್ಚಾತ್ಸ್ವೇದ್ಯಾನಿತಂಬಿನೀ ॥ ೭ ॥

ಚಿಕಿತ್ಸೆ ಆದನಂತರ ಯಾವ ರೋಗಿಗಳಿಗೆ ಸ್ವೇದನಮಾಡಿಸಬೇಕೆಂದರೆ— ಶರೀರಗತವಾದ ಶಲ್ಯವನ್ನು ಹೊರಕ್ಕೆ ತೆಗೆದ ಮೇಲೆ, ಮೂಢಗರ್ಭರೋಗದ ಚಿಕಿತ್ಸೆ ನಡದ ಮೇಲೆ ನವಮಾಸ ತುಂಬಿ ಅಥವಾ ತುಂಬುವುದಕ್ಕೆ ಪೂರ್ವವೇ ಜನನವಾದ ಮೇಲೆ ಸ್ವೇದನಕರ್ಮ ಮಾಡಿಸಬೇಕು.

ಸ್ವೇದ್ಯಾಃಪೂರ್ವಂತ್ರಯಃಪ್ಲೀಹಭಗಂದರ್ಯರ್ಶಸಸ್ತಥಾ ॥
ಅಶ್ಮರಶ್ಶಾತುರೋಜಂತುಸ್ಸಮಯೇಶಸ್ತ್ರಕರ್ಮಣಃ ॥ ೮ ॥

ಚಿಕಿತ್ಸೆಗೆ ಪೂರ್ವದಲ್ಲಿಯೂ ಅನಂತರದಲ್ಲಿಯೂ ಕೂಡ ಸ್ವೇಹನಮಾಡತಕ್ಕ ರೋಗಗಳನ್ನು ಹೇಳುತ್ತಾನೆ—ದೋಷತ್ರಯಜನ್ಯವಾದ ಪ್ಲೀಹ, ಭಗಂದರ, ಅರ್ಶಸ್ಸು, ಶುಕ್ರಾಶ್ಮರಿ ಈ ರೋಗಗಳ ಚಿಕಿತ್ಸೆಗೆ ಪೂರ್ವದಲ್ಲಿಯೂ ಚಿಕಿತ್ಸೆ ನಡದ ಮೇಲೆಯೂ ಸ್ವೇದನಮಾಡಬೇಕು, ಅಲ್ಲದೆ ಶಸ್ತ್ರಕ್ರಿಯೆ ನಡೆಯುವುದಕ್ಕೆ ಮೊದಲು ಮತ್ತು ಕೊನೆಯಲ್ಲಿಯೂ ಸ್ವೇಹನಮಾಡಬೇಕು.

ಸರ್ವಾನ್ ಸ್ವೇದಾನ್ ನಿವಾತೇಚಜೀರ್ಣಾಹಾರೇಚಕಾರಯೇತ್ ॥

ಹಿಂದೆ ಹೇಳಿದ ನಾಲ್ಕು ವಿಧವಾದ ಸ್ವೇದಗಳನ್ನೂ ಗಾಳಿ ಇಲ್ಲದ ಪ್ರದೇಶದಲ್ಲಿ ಆಹಾರಜೀರ್ಣವಾದ ಮೇಲೆ ಮಾಡಿಸಬೇಕು.

ಸ್ವೇದಾದ್ಧಾತುಸ್ಥಿತಾದೋಷಾಸ್ನೇಹಕ್ಲಿನ್ನಸ್ಯದೇಹಿನಃ ॥ ೯ ॥
ದ್ರವತ್ವಂಪ್ರಾಪ್ಯಕೋಷ್ಠಾಂತರ್ಗತ್ವಾಯಾಂತಿವಿರೇಕತಾಂ ॥

ಸ್ವೇದನಮಾಡಿಸುವುದರಿಂದ ಪ್ರಯೋಜನವೇನಂದರೆ—ಸ್ನೇಹಪಾನದಿಂದ ಧಾತುಗತವಾದ ದೋಷಗಳು ಮಾರ್ದವವನ್ನು ಹೊಂದಿ ಸ್ವೇದನದಿಂದ ದ್ರವರೂಪವಾಗಿ ಕೋಷ್ಠವನ್ನು ಹೊಂದಿ ಮಲದ್ವಾರದಿಂದ ವಿರೇಕರೂಪವಾಗಿ ಹೊರಬೀಳುತ್ತವೆ.

ಸ್ವಿದ್ಯಮಾನಶರೀರಸ್ಯಹೃದಯಂಶೀತಲೈಸ್ಸ್ಪೃಶೇತ್ ॥ ೧೦ ॥
ಸ್ನೇಹಾಭ್ಯಕ್ತಶರೀರಸ್ಯಶೀತೈರಾಚ್ಛಾದ್ಯಚಕ್ಷುಷೀ ॥

ಸ್ವೇದನಮಾಡಿಸತಕ್ಕವನ ಶರೀರಕ್ಕೆ ಮೊದಲು ತೈಲಾಭ್ಯಂಗಮಾಡಿಸಿ ಹೃದಯಕ್ಕೆ ಶೀತಲಗಳಾದ ಗಂಧ ಮೊದಲಾದವುಗಳನ್ನು ಲೇಪನಮಾಡಿಸಿ ಕಣ್ಣುಗಳನ್ನು ಕದಳೀಪತ್ರ ಪದ್ಮಪತ್ರಾದಿಗಳಿಂದ ಮುಚ್ಚಿ ನಂತರ ಸ್ವೇದನಮಾಡಿಸಬೇಕು.

ಅಜೀರ್ಣೇದುರ್ಬಲೋಮೇಹೀಕ್ಷತಕ್ಷೀಣಃಪಿಪಾಸಿತಃ ॥ ೧೧ ॥
ಅತಿಸಾರೀರಕ್ತಪಿತ್ತೀಪಾಂಡುರೋಗೀತಥೋದರೀ ॥

**ಮದಾರ್ತೋರ್ಗರ್ಭಿಣೀಚೈವನಹಿಸ್ವೇದ್ಯಾವಿಜಾನತಾ ॥ ೧೨ ॥**
**ಏತಾನಪಿಮೃದುಸ್ವೇದೈಃಸ್ವೇದಸಾಧ್ಯಾನುಪಾಚರೇತ್ ॥**

ಸ್ವೇದನಕ್ಕೆ ಅನರ್ಹರಾದವರನ್ನು ಹೇಳುತ್ತಾನೆ—ಅಜೀರ್ಣದಿಂದ ಪೀಡಿತನಾದವನು, ಬಲವಿಲ್ಲದವನು, ಮೇಹರೋಗಿ, ಯಾವದಾದರೂ ಗಾಯದಿಂದ ಕ್ಷೀಣನಾದವನು, ಬಾಯಾರಿಕೆಯುಳ್ಳವನು, ಅತಿಸಾರರೋಗದಿಂದ ಪೀಡಿತನಾದವನು, ರಕ್ತಪಿತ್ತರೋಗಿ, ಪಾಂಡುರೋಗಿ, ಉದರರೋಗಿ, ಮದದಿಂದ ಮತ್ತನಾದವನು, ಗರ್ಭಿಣಿ, ಇವರುಗಳನ್ನು ಸ್ವೇದನಮಾಡಿಸಬಾರದು, ಒಂದು ವೇಳೆ ಸ್ವೇದನಮಾಡಿಸಿಯೇ ಮಾಡಬೇಕಾದಲ್ಲಿ ಮೃದುವಾದ ಸ್ವೇದಗಳಿಂದ ಸ್ವೇದನ ಮಾಡಿಸಬೇಕು.

**ಮೃದುಸ್ವೇದೋತ್ರಯುಂಜೀತತಥಾಹೃನ್ಮುಷ್ಕದೃಷ್ಟಿಷು ॥ ೧೩ ॥**

ಕಣ್ಣು, ವೃಷಣ, ದೃಷ್ಟಿ ಇವುಗಳ ವಿಷಯದಲ್ಲಿ ಮಾತ್ರ ಸ್ವೇದನಮಾಡಿಸಬೇಕಾದ ಸಂದರ್ಭ ಒಂದರೆ ಮೃದುಸ್ವೇದವನ್ನೇ ಪ್ರಯೋಗಿಸಬೇಕು

**ಅತಿಸ್ವೇದಾತ್ಸಂಧಿಪೀಡಾದಾಹಸ್ತೃಷ್ಣಾಕ್ಲಮೋಭ್ರಮಃ ॥**
**ಪಿತ್ತಾಸೃಕ್ಪಿಟಕಾಕೋಪಸ್ತತ್ರಶೀತೈರುಪಾಚರೇತ್ ॥ ೧೪ ॥**

ಅತಿಯಾಗಿ ಸ್ವೇದನಮಾಡಿಸುವುದರಿಂದ ಕೀಲುಗಳಲ್ಲಿ ನೋವು, ಮೈಯುರಿ ಬಾಯಾರಿಕೆ, ಬಳಲಿಕೆ, ತಲೆತಿರುಗುವುದು, ರಕ್ತಪಿತ್ತ, ಮೈಯ್ಯಲ್ಲೆಲ್ಲಾ ಗುಳ್ಳೆಗಳೇಳುವುದು, ಈ ವಿಕಾರಗಳುಂಟಾಗುತ್ತವೆ, ಇವುಗಳನ್ನೆಲ್ಲಾ ಶೈತ್ಯೋಪಚಾರಗಳಿಂದ ಶಮನಪಡಿಸಬೇಕು.

**ತೇಷುತಾಪಾಭಿದಃಸ್ವೇದೋವಾಲುಕಾವಸ್ತ್ರಪಾಣಿಭಿಃ ॥**
**ಕಪಾಲಕಂದುಕಾಂಗಾರೈರ್ಯಥಾಯೋಗ್ಯಃಪ್ರಯುಜ್ಯತೇ ॥ ೧೫ ॥**

ಸ್ವೇದಗಳಲ್ಲಿ ಮೊದಲನೆಯದಾದ ತಾಪಸ್ವೇದವನ್ನು ವಿವರಿಸುತ್ತಾನೆ—ಕಾದ ಮರಳು, ಕಾದ ನಾರಿನಬಟ್ಟೆ, ಕೈಯನ್ನು ಕಾಯಿಸಿ ಅದರಿಂದ ಶಾಖ ಹಿಡಿಯುವದು, ಕಾದ ಹಂಚು, ಕಾಯಿಸಿದ ಅರಿತಿಯ ಚಂಡು, ಬೆಂಕಿ, ಇಷ್ಟು ಪದಾರ್ಥಗಳಿಂದ ವ್ಯಾಧಿಗೆ ಹೇಗೆ ಅನುಕೂಲವೋ ಹಾಗೆ ಶಾಖಕೊಡುವುದು ತಾಪಸ್ವೇದವೆನ್ನಿಸುವುದು.

**ಊಷ್ಮಸ್ವೇದಃಪ್ರಯೋಕ್ತವ್ಯೋಲೋಹಪಿಂಡೇಷ್ಟಕಾಶ್ಮಭಿಃ ॥**
**ಸುತಪ್ತೈರಮ್ಲಸಿಕ್ತೈಶ್ಚಕಾಯೇನಕ್ತಕವೇಷ್ಟಿತೇ ॥ ೧೬ ॥**

ಅಥವಾವಾತನಿರ್ನಾಶಿದ್ರವ್ಯಕ್ವಾಥರಸಾದಿಭಿಃ ॥
ಉಷ್ಣೈರ್ಘಟಂಪೂರಯಿತ್ವಾಪಾರ್ಶ್ವೇಚ್ಛಿದ್ರಂವಿಧಾಯಚ ॥ ೧೭ ॥
ವಿಮುದ್ರಾಸ್ಯಂತ್ರಿಖಂಡಾಂಚಧಾತುಜಾಂಕಾಷ್ಠಸಂಭವಾಂ ॥
ಷಡಂಗುಲಾಸ್ಯಾಂಗೋಪುಚ್ಛಾಂನಳೀಂಯುಂಜ್ಯಾದ್ದ್ವಿಹಸ್ತಿಕಾಂ ೧೮
ಸುಖೋಪವಿಷ್ಟಂಸ್ವಭ್ಯಕ್ತಂಗುರುಪ್ರಾವರಣಾವೃತಂ ॥
ಹಸ್ತಿತುಂಡಿಕಯಾನಾಡ್ಯಾಸ್ವೇದಯೇದ್ವಾತರೋಗಿಣಾಂ ॥ ೧೯ ॥
ಪುರುಷಾಯಾಮಮಾತ್ರಾಂವಾಭೂಮಿಮುತ್ಕೀರ್ಯಖಾದಿರೈಃ ॥
ಕಾಷ್ಠೈರ್ದಗ್ಧ್ವಾತಥಾಭ್ಯುಕ್ಷ್ಯಕ್ಷೀರಧಾನ್ಯಾಮ್ಲವಾರಿಭಿಃ ॥ ೨೦ ॥
ವಾತಘ್ನಪತ್ರೈರಾಚ್ಛಾದ್ಯಶಯಾನಂಸ್ವೇದಯೇನ್ನರಂ ॥
ಏವಂಮಾಷಾದಿಭಿಸ್ಸ್ವಿನ್ನೈಶ್ಶಯಾನಂಸ್ವೇದಮಾಚರೇತ್ ॥ ೨೧ ॥

ಊಷ್ಮಸ್ವೇದ ವಿಧಾನವನ್ನು ಹೇಳುತ್ತಾನೆ—ಕಬ್ಬಿಣ, ಇಟ್ಟಿಗೆ, ಕಲ್ಲು, ಇವುಗಳನ್ನು ಚನ್ನಾಗಿ ಕಾಯಿಸಿ ಕಾದದ್ದರ ಮೇಲೆ ಅಮ್ಲರಸಗಳನ್ನು ಚಲ್ಲಿ ಶರೀರದಲ್ಲಿ ಸ್ವೇದನಮಾಡಿಸತಕ್ಕ ಭಾಗಕ್ಕೆ ವಾತಹರಗಳಾದ ಎಲೆಗಳನ್ನು ಸುತ್ತಿ ಮೇಲೆ ಹೇಳಿದ ಕಬ್ಬಿಣ ಮೊದಲಾದವುಗಳನ್ನು ಆ ಭಾಗಕ್ಕೆ ತಗಲಿಸಿ ಸ್ವೇದನಮಾಡಿಸಬೇಕು, ಅಥವಾ ವಾತಹರ ದ್ರವ್ಯಗಳ ಕಷಾಯ ಅಥವಾ ಸ್ವರಸ ಇವುಗಳಿಂದ ಘಟವನ್ನು ಪೂರ್ಣಮಾಡಿ ಘಟದ ಬಾಯನ್ನು ಹಬೆಹೋಗದಂತೆ ಮುಚ್ಚಿ ಆ ಘಟದ ಒಂದು ಪಾರ್ಶ್ವದಲ್ಲಿ ರಂಧ್ರಮಾಡಿ ಆ ರಂಧ್ರಕ್ಕೆ ತಕ್ಕ ಹಾಗೆ ಯಾವದಾದರೂ ಲೋಹದಿಂದಲಾಗಲಿ ಮರದಿಂದಲಾಗಲಿ ಅಥವಾ ಬಿದಿರಿನಿಂದಲಾಗಲಿ ಎರಡು ಮೊಳದುದ್ದ ಮೂರು ಭಾಗವಾದ ಕೊಳವೆಯನ್ನು ಮಾಡಿಸಬೇಕು, ಆ ಕೊಳವೆಯು ಮುಖದ ಕಡೆಯಲ್ಲಿ ಆರು ಅಂಗುಲ ಅಗಲವಿರಬೇಕು, ಅಥವಾ ಗೋಪುಚ್ಛದಂತೆ ಮೂಲದವಡೆ ದಪ್ಪವಾಗಿ ಮುಖದ ಕಡೆಯಲ್ಲಿ ಸಣ್ಣನಾಗಿರಬೇಕು, ಇಂತಹ ನಳಿಕೆಯನ್ನು ಆ ಘಟದ ಮಗ್ಗಲಿನ ರಂಧ್ರಕ್ಕೆ ತಗಲಿಸಿ ಸುತ್ತಲೂ ಹಬೆಹೋಗದ ಹಾಗೆ ಮುಚ್ಚಬೇಕು, ಇಷ್ಟು ಆದಲ್ಲಿ ಸ್ವೇದನಯಂತ್ರವು ನಿರ್ಮಾಣವಾದ ಹಾಗಾಯಿತು. ಇನ್ನು ಮೇಲೆ ವಾತರೋಗಿಗೆ ತೈಲಾಭ್ಯಂಗ ಮಾಡಿಸಿ ದಪ್ಪವಾಗಿ ಹೊದ್ದಿಸಿ ಕಷಾಯ ತುಂಬಿದ ಘಟವನ್ನು ಒಲೆಯ ಮೇಲಿಟ್ಟು ಕಾಯಿಸುತ್ತ, ಕೊಳವೆಯ ಮೂಲಕ ಹೊರಡುವ ಹಬೆಯನ್ನು ಶರೀರದ ಯಾವ ಭಾಗದಲ್ಲಿ ವಾತಬಾಧೆಯಿದೆಯೋ ಆ ಭಾಗಕ್ಕೆ ಹಿಡಿದು ಸ್ವೇದನ ಮಾಡಿಸಬೇಕು, ಇದೊಂದು ವಿಧ. ಅಥವಾ ಪುರುಷರು ಮಲಗಿದರೆ ಮುಚ್ಚುವಷ್ಟು ನೆಲದಲ್ಲಿ ಗುಂಡಿಯನ್ನು ಮಾಡಿ ಕಗ್ಗಲಿಸೌದೆಯಿಂದ ಗುಂಡಿಯನ್ನು ಚನ್ನಾಗಿ ಸುಟ್ಟು ಹಾಲು ಧಾನ್ಯಾಮ್ಲ ನೀರು ಇವುಗಳನ್ನು ಗುಂಡಿಗೆಲ್ಲಾ ಚುಮು

ಕಿಸಿ ಹಬೆ ಏಳುತ್ತಿರುವಾಗ್ಯೆ ವಾತಹರಗಳಾದ ಎಲೆಗಳನ್ನು ಗುಂಡಿಯಲ್ಲಿ ಹರವಿ ಅದರ ಮೇಲೆ ರೋಗಿಯನ್ನು ಮಲಗಿಸಿ ಮೇಲೆ ಕಂಬಳಿಯನ್ನು ಹೊದ್ದಿಸಿ ಸ್ವೇದನಮಾಡಿಸುವದು, ಇದೇ ರೀತಿಯಿಂದಲೇ ಮೇಲೆ ಹೇಳಿದ ಗುಂಡಿಯನ್ನು ಮಾಷಾದಿವಾತಹರದ್ರವ್ಯಕಷಾಯಗಳಿಂದ ಸೇಚನಮಾಡಿ ಹೊರಡತಕ್ಕ ಹಬೆಯಿಂದ ಸ್ವೇದನಮಾಡಿಸುವುದು.

ಅಥೋಪನಾಹಸ್ವೇದಂಚಕುರ್ಯಾದ್ವಾತಹರೌಷಧೈಃ ॥
ಪ್ರದಿಹ್ಯದೇಹಂವಾತಾರ್ತಂಕ್ಷೀರಮಾಂಸರಸಾನ್ವಿತೈಃ ॥ ೨೨ ॥
ಅಮ್ಲಪಿಷ್ಟೈಸ್ಸಲವಣೈಸ್ಸುಖೋಷ್ಣೈಸ್ಸ್ನೇಹಸಂಯುತೈಃ ॥
ಉಪಗ್ರಾಮ್ಯಾನೂಪಮಾಂಸೈರ್ಜೀವನೀಯಗಣೇನಚ ॥ ೨೩ ॥
ದಧಿಸೌವೀರಕಕ್ಷೀರೈರ್ವೀರತರ್ವಾದಿನಾತಥಾ ॥
ಕುಲತ್ಥಮಾಷಗೋಧೂಮೈರತಸೀತಿಲಸರ್ಷಪೈಃ ॥ ೨೪ ॥
ಶತಪುಷ್ಪಾದೇವದಾರುಶೇಫಾಲೀಸ್ಥೂಲಜೀರಕೈಃ ॥
ಏರಂಡಮೂಲಬೀಜೈಶ್ಚರಾಸ್ನಾಮೂಲಕಶಿಗ್ರುಭಿಃ ॥ ೨೫ ॥
ಮಿಶಿಕೃಷ್ಣಾಕುಠೇರೈಶ್ಚಲವಣೈರಮ್ಲಸಂಯುತೈಃ ॥
ಪ್ರಸಾರಿಣ್ಯಶ್ವಗಂಧಾಭ್ಯಾಂಬಲಾಭಿರ್ದಶಮೂಲಕೈಃ ॥ ೨೬ ॥
ಗುಡೂಚೀವಾನರೀಬೀಜೈರ್ಯಥಾಲಾಭಂಸಮಾಹೃತೈಃ ॥
ಕ್ಷುಣ್ಣೈಸ್ಸಿನ್ನೈಶ್ಚವಸ್ತ್ರೇಣಬದ್ಧೈಸ್ಸಂಸ್ವೇದಯೇನ್ನರಂ ॥ ೨೭ ॥
ಮಹಾಶಾಲ್ವಣಸಂಜ್ಞೋಽಯಂಯೋಗಸ್ಸರ್ವಾನಿಲಾರ್ತಿನುತ್ ॥

ಉಪನಾಹಸ್ವೇದವನ್ನು ಹೇಳುತ್ತಾನೆ—ವಾಯುರೋಗದಿಂದ ಪೀಡಿತನಾದವನಿಗೆ ಹಾಲು ಮಾಂಸ ರಸ ಇವುಗಳೊಡನೆ ವಾತಗಳ ಔಷಧಗಳನ್ನು ಲವಣ ಮತ್ತು ಅಮ್ಲರಸ ಇವುಗಳನ್ನು ಸಹ ಕೂಡಿಸಿ ಚನ್ನಾಗಿ ಅರದು ರೋಗಕ್ಕೆ ಅವಶ್ಯಕವಾದ ಸ್ನೇಹವನ್ನೂ ಕೂಡಿಸಿ ಕುದಿಸಿ ಸುಖೋಷ್ಣವಾಗಿ ವಾತಬಾಧೆ ಇರುವ ಪ್ರದೇಶಕ್ಕೆ ಲೇಪಹಾಕುವುದು, ಇದೊಂದು ವಿಧವಾದ ಉಪನಾಹಸ್ವೇದ ಇನ್ನೊಂದು ಏನೆಂದರೆ—ಗ್ರಾಮ್ಯಪ್ರಾಣಿಗಳಾದ ಕುದುರೆ ಕತ್ತೆ ಮೊದಲಾದವುಗಳು ಅನೂಪ ಅಂದರೆ ಜಲಪ್ರಾಯ ದೇಶದಲ್ಲಿ ವಾಸಮಾಡತಕ್ಕ ಪ್ರಾಣಿಗಳು ಇವುಗಳ ಮಾಂಸರಸ, ಜೀವನೀಯಗಣೋಕ್ತ ಮೂಲಿಕೆಗಳು, ಮೊಸರು, ಕಾಂಜಿಕ ಅಂದರೆ ಅನ್ನದ ಹುಳಿನೀರು, ಹಾಲು, ಸುಶ್ರುತದಲ್ಲಿ ಹೇಳಿರುವ ವೀರತರ್ವಾದಿಗಣೋಕ್ತವಾದ ಮೂಲಿಕೆಗಳು, ಹುರಳಿ, ಉದ್ದು, ಗೋಧಿ, ಅಗಸೇಬೀಜ ಎಳ್ಳು, ಸಾಸವೆ, ಸದಾಪನಸೊಪ್ಪು, ದೇವದಾರಿ, ನಿರ್ಗುಂಡಿ, ಕಾಳುಜೀರಿಗೆ, ಹರಳುಬೀಜ ಮತ್ತು ಅದರ ಬೇರು, ಸಣ್ಣರಾಶ್ಮೆ, ಪುಷ್ಕರಮೂಲ, ನುಗ್ಗೆ, ಮಿಶಿ

ನಾಯಿತುಳಸಿ ಇವುಗಳು, ಸೈಂಧವಲವಣ, ಅಮ್ಲರಸ, ಪ್ರಸಾರಿಣಿ, ಅಶ್ವಗಂಧ, ಕಳ್ಳಂಗಡ್ಲೆ, ದಶಮೂಲ, ಅಮೃತಬಳ್ಳಿ, ನಸುಗುನ್ನಿಯ ಬೀಜ, ಹಿಂದೆ ಹೇಳಿದ ಪದಾರ್ಥಗಳಲ್ಲಿ ದೊರಕಿದಷ್ಟನ್ನು ತಂದು ಕುಟ್ಟಿ, ಬೇಯಿಸಿ ಬಿಸಿ ಇರುವಾಗಲೇ ಬಟ್ಟೆಯಲ್ಲಿ ಕಟ್ಟಿ ಶಾಖಕೊಡಬೇಕು, ಇದು ಮಹಾಶಾಲ್ವಣ ಎಂಬ ಸ್ವೇದನಾತ ವ್ಯಾಧಿಯಲ್ಲಿ ಅತ್ಯಂತ ಪ್ರಶಸ್ತವಾದದ್ದು.

ದ್ರವಸ್ವೇದಸ್ತುವಾತಘ್ನದ್ರವಕ್ವಾಥೇನಪೂರಿತಂ ॥ ೨೮ ॥
ಕಟಾಹಂಕೋಷ್ಣಕಂವಾಪಿಸೂಪವಿಶ್ಯಾವಗಾಹಯೇತ್ ॥

ದ್ರವಸ್ವೇದ ಪ್ರಕಾರವೆಂತೆಂದರೆ—ವಾತಹರದ್ರವ್ಯಗಳಿಂದ ಕಷಾಯ ಕಾಯಿಸಿ ಕಾದ ಕಷಾಯವನ್ನು ಕುಳಿತುಕೊಳ್ಳುವುದಕ್ಕೆ ಅನುಕೂಲವಾದ ಪಾತ್ರೆಗೆ ಬಿಸಿಯಾಗಿ ತುಂಬಿ ಅದರಲ್ಲಿ ಕುಳಿತುಕೊಂಡು ಮುಳುಗಿ ಸ್ನಾನಮಾಡುವುದು.

ನಾಭೇಃಷಡಂಗುಲಂಯಾವನ್ಮಗ್ನಃಕ್ವಾಥಸ್ಯಧಾರಯಾ ॥ ೨೯ ॥
ಕೋಷ್ಣಯಾಸ್ಕಂಧಯೋಸ್ಸಿಕ್ತಃತಿಷ್ಠೇತ್ಸ್ನಿಗ್ಧತನುರ್ನರಃ ॥
ಏವಂತೈಲೇನದುಗ್ಧೇನಸರ್ಪಿಷಾಸ್ವೇದಯೇನ್ನರಂ ॥ ೩೦ ॥

ಹೊಕ್ಕುಳಿನಿಂದ ಮೇಲಕ್ಕೆ ಆರು ಅಂಗುಲ ನೀರು ಬರುವ ವರಿಗೂ ಕಷಾಯದಲ್ಲಿ ಕುಳಿತುಕೊಂಡು ಮೈಗೆಲ್ಲಾ ಎಣ್ಣೆಯನ್ನು ಹಚ್ಚಿಕೊಂಡು ಕಷಾಯ ವನ್ನು ಸುಖೋಷ್ಣವಾಗಿ ಭುಜದ ಮೇಲೆ ಮತ್ತು ತಲೆಯ ಮೇಲೆ ಸಹ ಸುರಿದು ಕೊಳ್ಳುವುದು, ಇದರಂತೆಯೇ ತೈಲ, ಹಾಲು, ತುಪ್ಪ ಇವುಗಳಿಂದಲೂ ಸೌಕರ್ಯ ವಿದ್ದಂತೆ ಸ್ವೇದನಮಾಡಿಸತಕ್ಕದ್ದು.

ಏಕಾಂತರೋದ್ವ್ಯಂತರೋವಾಸ್ನೇಹಯುಕ್ತೋವಗಾಹನೇ ॥

ಈ ಸ್ವೇದನಕರ್ಮವನ್ನು ಮಧ್ಯೆ ಒಂದು ದಿವಸ ಬಿಟ್ಟು ದಿವಸ, ಎರಡು ದಿವಸ ಬಿಟ್ಟು ದಿವಸ, ಈ ರೀತಿಯಾಗಿ ಮಾಡಬಹುದು.

ಶಿರಾಮುಖೈರೋಮಕೂಪೈರ್ಧಮನೀಭಿಶ್ಚತರ್ಪಯೇತ್ ॥ ೩೧ ॥
ಶರೀರೇಬಲಮಾಧತ್ತೇಯುಕ್ತಃಸ್ನೇಹೋವಗಾಹನೇ ॥

ಅಭ್ಯಂಜನಸ್ನಾನಕ್ಕಾಗಿ ಮೈಗೆ ತಿಕ್ಕಿಕೊಂಡ ಸ್ನೇಹವು ಶರೀರಗತವಾದ ದೋಷಗಳನ್ನು ಸ್ಥಾನಾಂತರ ಪಡಿಸತಕ್ಕ "ಶಿರಾ" ಎಂಬ ನಾಡಿಗಳ ಮೂಲಕ ವಾಗಿಯೂ, ರೋಮಕೂಪಗಳ ಮೂಲಕವಾಗಿಯೂ ಅನ್ನರಸವನ್ನು ಶರೀರ ಕ್ಕೆಲ್ಲಾ ಹಂಚತಕ್ಕ "ಧಮನಿ"ಗಳೆಂಬ ನಾಡಿಗಳ ಮೂಲಕವಾಗಿಯೂ ಶರೀರ ಗತವಾಗಿ ಧಾತುಗಳನ್ನು ತೃಪ್ತಿಪಡಿಸುತ್ತ ಶರೀರಕ್ಕೆ ಬಲ ಮತ್ತು ಕಾಂತಿಗಳನ್ನು ಉಂಟುಮಾಡುತ್ತದೆ.

ಜಲಸಿಕ್ತಸ್ಯವರ್ಧಂತೇಯಥಾಮೂಲೇಂಕುರಾಸ್ತರೋಃ ॥ ೩೨ ॥
ತಥಾಧಾತುವಿವೃದ್ಧಿರ್ಹಿಸ್ನೇಹಸಿಕ್ತಸ್ಯಜಾಯತೇ ॥
ನಾತಃಪರತರಃಕಶ್ಚಿದುಪಾಯೋವಾತನಾಶನಃ ॥ ೩೩ ॥
ಶೀತಶೂಲಾದ್ಯುಪರಮೇಸ್ತಂಭಗೌರವನಿಗ್ರಹೇ ॥
ದೀಪ್ತೇಗ್ನೌಮಾರ್ದವೇಜಾತೇಸ್ವೇದನಾದ್ವಿರತಿರ್ಮತಾ ॥ ೩೪ ॥

ಮರದ ಬುಡಕ್ಕೆ ನೀರನ್ನು ಹಾಕಿದಲ್ಲಿ ಚಿಗರುಕಾಯಿಗಳಿಂದ ಹೇಗೆ ಗಿಡವು ಶೋಭಿಸುತ್ತದೆಯೋ ಹಾಗೆಯೇ ಶರೀರಕ್ಕೆ ತೈಲಾದಿಗಳನ್ನು ಉಪಯೋಗಿಸಿದಲ್ಲಿ ಧಾತುವೃದ್ಧಿಯಾಗಿ ಶರೀರವು ಕಾಂತಿ ಹೊಂದುತ್ತದೆ, ಸ್ನೇಹನಕ್ಕಿಂತಲೂ ವಾತ ನಾಶಕರವಾದ ಉಪಾಯವು ಮತ್ತೊಂದಿಲ್ಲ, ಶರೀರಗತವಾದ ಶೀತ ಮತ್ತು ಶೂಲೆ ಮೊದಲಾದ ವಾತವಿಕಾರಗಳು ಕಡಮೆಯಾದ ಮೇಲೆ ಶರೀರಸ್ತಂಭ ಅಂದರೆ ಕಾರ್ಯಾಕ್ಷಮತ್ವ, ಭಾರ, ಇವುಗಳಿಲ್ಲದಂತಾಗಿ ಅಗ್ನಿದೀಪ್ತಿ ಶರೀರಮಾರ್ದವ ಇವುಗಳು ಉಂಟಾದ ಮೇಲೆ ಸ್ನೇಹಕರ್ಮದ ಪ್ರಯೋಜನವಾಯಿತೆಂದು ತಿಳಿದು ಸ್ನೇಹಕರ್ಮವನ್ನು ನಿಲ್ಲಿಸಬೇಕು.

ಸಮ್ಯಕ್ಸ್ವಿನ್ನಂವಿಮೃದಿತಂಸ್ನಾತಮುಷ್ಣಾಂಬುಭಿಶ್ಶನೈಃ ॥
ಭೋಜಯೇಚ್ಛಾನಭಿಷ್ಯಂದಿವ್ಯಾಯಾಮಂನಚಕಾರಯೇತ್ ॥೩೫॥

ಚನ್ನಾಗಿ ಸ್ವೇದನಮಾಡಿದ ನಂತರದಲ್ಲಿ ಶರೀರವನ್ನು ಮರ್ದನಮಾಡಿ ಬಿಸಿನೀರಿನಿಂದ ಸ್ನಾನಮಾಡಿಸಬೇಕು, ಶ್ಲೇಷ್ಮವರ್ಧಕ ಪದಾರ್ಥಗಳನ್ನು ವಿನಹ ಸುಖವಾಗಿ ಭೋಜನಮಾಡಿಸಬೇಕು, ವ್ಯಾಯಾಮ ಮಾಡಿಸಬಾರದು.

ಇಲ್ಲಿಗೆ ದ್ವಿತೀಯಾಧ್ಯಾಯ ಸಂಪೂರ್ಣ

---

## ತೃತೀಯಾಧ್ಯಾಯ.

ಶರತ್ಕಾಲೇರಸಂತೇಚಪ್ರಾವೃಟ್ಕಾಲೇಚದೇಹಿನಾಂ ॥
ವಮನಂರೇಚನಂಚೈಪಕಾರಯೇತ್ಕುಶಲೋಭಿಷಕ್ ॥ ೧ ॥

ಸ್ನೇಹಸ್ವೇದ ಕರ್ಮಗಳಾದ ಮೇಲೆ ಬುದ್ಧಿಶಾಲಿಯಾದ ವೈದ್ಯನು ಶರದೃತು, ವಸಂತಋತು, ವರ್ಷಋತು, ಈ ಋತುಗಳಲ್ಲಿ ವಮನರೇಚನಾಖ್ಯ ಶೋಧನಕರ್ಮಗಳನ್ನು ಮಾಡಬೇಕು.

ಬಲವಂತಂಕಫವ್ಯಾಪ್ತಂಹೃಲ್ಲಾಸಾದಿನಿಪೀಡಿತಂ ॥
ತಥಾವಮನಸಾತ್ಮ್ಯಂಚಧೀರಚಿತ್ತಂಚವಾಮಯೇತ್ ॥ ೨ ॥

ವಮನವೇಗವನ್ನು ತಡೆಯುವಷ್ಟು ಬಲಿಷ್ಠನಾದವನು, ಕಫರೋಗದಿಂದ ಪೀಡಿತನಾದವನು, ಹೃಲ್ಲಾಸ ಅಂದರೆ ವಾಂತಿಬರುತ್ತಿರುವಂತೆ ತೋರುವವನು, ವಾಂತಿಮಾಡುವದು ಒಗ್ಗಿದವನು, ಧೈರ್ಯಶಾಲಿಯಾದವನು, ಇಂತವರನ್ನು ವಮನಮಾಡಿಸಬೇಕು.

ವಿಷದೋಷೇಸ್ತನ್ಯರೋಗೇಮಂದೇಗ್ನೌಶ್ಲೀಪದೇರ್ಬುದೇ ॥
ಹೃದ್ರೋಗಕುಷ್ಠವೀಸರ್ಪಮೇಹಾಜೀರ್ಣಭ್ರಮೇಷುಚ ॥ ೩ ॥
ವಿದಾರಿಕಾಪಚೀಕಾಸಶ್ವಾಸಪೀನಸವೃದ್ಧಿಷು ॥
ಅಪಸ್ಮಾರೇಜ್ವರೋನ್ಮಾದೇತಥಾರಕ್ತಾತಿಸಾರಿಷು ॥ ೪ ॥
ನಾಸಾತಾಲ್ವೋಷ್ಠಪಾಕೇಷುಕರ್ಣಸ್ರಾವೇದ್ವಿಜಿಹ್ವಕೇ ॥
ಗಲಶುಂಡ್ಯಾಮತೀಸಾರೇಪಿತ್ತಶ್ಲೇಷ್ಮಗದೇತಥಾ ॥ ೫ ॥
ಮೇದೋಗದೇರುಚೌಚೈವವಮನಂಕಾರಯೇದ್ಭಿಷಕ್ ॥

ಯಾವ ಯಾವ ರೋಗಗಳಲ್ಲಿ ವಮನಮಾಡಿಸಬೇಕೆಂದರೆ–ವಿಷದೋಷವು ಶರೀರಗತವಾಗಿರುವಾಗ, ಹೆಂಗಸರಿಗೆ ಸ್ತನ್ಯವು ದುಷ್ಟವಾಗಿರುವಾಗ್ಯೆ, ಅಗ್ನಿ ಮಾಂದ್ಯದಲ್ಲಿ, ಆನೆಕಾಲು ರೋಗದಲ್ಲಿ, ಬಾವು, ಹೃದಯರೋಗ, ಕುಷ್ಠ, ವಿಸರ್ಪ ಎಂಬ ಚರ್ಮರೋಗ, ಮೇಹರೋಗ, ಅಜೀರ್ಣ, ಬುದ್ಧಿಭ್ರಮಣೆ, ವಿದಾರಿಕಾ ಎಂಬ ರೋಗ, ಒಂದು ವಿಧವಾದ ಉದರಗ್ರಂಥಿ, ಕೆಮ್ಮು, ಉಬ್ಬಸ, ಪೀನಸ, ಅಂಡವೃದ್ಧಿ, ಅಪಸ್ಮಾರ, ಜ್ವರ, ಹುಚ್ಚು, ರಕ್ತಾತಿಸಾರ, ಮೂಗಿನಲ್ಲಿ ದವಡೆಯಲ್ಲಿ ತುಟಿಯಲ್ಲಿ ಸಹ ಬಕ್ಕೆಗಳೇಳುವವು, ಕಿವಿಯಲ್ಲಿ ಕೀವು ಸೋರುವುದು, ಜಿಹ್ವಾರೋಗ, ಗಳರೋಗ, ಅತಿಸಾರ, ಪಿತ್ತಸಮ್ಮಂಧವಾದ ರೋಗಗಳು, ಶ್ಲೇಷ್ಮರೋಗಗಳು, ಮೇದಸ್ಸು ಹೆಚ್ಚುವುದರಿಂದ ಬರುವ ರೋಗಗಳು, ಅರೋಚಕರೋಗ ಇವುಗಳಲ್ಲಿ ವಮನಮಾಡಿಸಬೇಕು.

ನವಾಮನೀಯಸ್ತಿಮಿರೀನಗುಲ್ಮೀನೋದರೀಕೃಶಃ ॥ ೬ ॥
ನಾತಿವೃದ್ಧೋಗರ್ಭಿಣೀಚನಸ್ಥೂಲೋನಕ್ಷುಧಾತುರಃ ॥
ಮದಾರ್ತೋಬಾಲಕೋರೂಕ್ಷಃಕ್ಷುಧಿತಶ್ಚನಿರೂಹಿತಃ ॥ ೭ ॥
ಉದಾವರ್ತ್ಯೂರ್ಧ್ವರಕ್ತೀಚದುಶ್ಛರ್ದಿಃಕೇವಲಾನಿಲೀ ॥
ಪಾಂಡುರೋಗೀಕ್ರಿಮಿವ್ಯಾಪ್ತಃಪಠನಾತ್ಸ್ವರಘಾತಕಃ ॥ ೮ ॥

ಯಾವ ಯಾವ ರೋಗವಿರತಕ್ಕವರನ್ನು ವಮನಮಾಡಿಸಬಾರದೆಂದರೆ— ತಿಮಿರವೆಂಬ ನೇತ್ರರೋಗವುಳ್ಳವನು, ಗುಲ್ಮರೋಗವುಳ್ಳವನು, ಉದರರೋಗವುಳ್ಳವನು, ಕೃಶನಾದವನು, ಅತ್ಯಂತ ಮುದುಕ, ಗರ್ಭಿಣಿಯಾದ ಹೆಂಗಸು,

ಸ್ಥೂಲಕಾಯನಾದವನು, ಹಸಿದವನು, ಪುತ್ರನಾದವನು, ಹುಡುಗ, ರೂಕ್ಷನಾದ ವನು ಅಂದರೆ ಪ್ರಥಮತಃ ಸ್ನೇಹಸ್ವೇದಾದಿಗಳನ್ನು ಮಾಡದಿದ್ದವನು, ಹಸಿವಿನಿಂದ ಆತುರನಾದವನು, ನಿರೂಹವಸ್ತಿಯನ್ನು ತೆಗೆದುಕೊಂಡವನು, ಉದಾವರ್ತವೆಂಬ ವಾತರೋಗವುಳ್ಳವನು, ಊರ್ಧ್ವಗತ ರಕ್ತಪಿತ್ತವುಳ್ಳವನು, ವಮನೌಷಧ ತಡೆಯದೆ ಇರುವವನ , ಕೇವಲ ವಾತರೋಗಿ, ಕ್ರಿಮಿರೋಗದಿಂದ ವ್ಯಾಪ್ತನಾದವನು, ಓದಿ ಕಂಠಧ್ವನಿ ಕುಗ್ಗಿದವನು, ಇವರುಗಳಿಗೆ ವಮನಮಾಡಿಸಬಾರದು.

ವಿಶೇಷ್ಯಜೀರ್ಣವ್ಯಥಿತಾವಾಮ್ಯಾಯೇವಿಷಪೀಡಿತಾಃ ॥
ಕಫವ್ಯಾಪ್ತಾಶ್ಚತೇವಾಮ್ಯಾಮಧುಕ್ವಾಥಸ್ಯಪಾನತಃ ॥ ೯ ॥
ಸುಕುಮಾರಂಕೃಶಂಬಾಲಂವೃದ್ಧಂಭೀರುಂಚವಾಮಯೇತ್ ॥
ಪೀತ್ವಾಯವಾಗೂಮಾಕಂಠಂಕ್ಷೀರತಕ್ರದಧೀನಿವಾ ॥ ೧೦ ॥
ಅಸಾತ್ಮ್ಯೈಃಶ್ಲೇಷ್ಮಲೈರ್ಭೋಜ್ಯೈರ್ದೋಷಾನುತ್ಕ್ಲಿಶ್ಯದೇಹಿನಃ
ಸ್ನಿಗ್ಧಸ್ವಿನ್ನಾಯವಮನಂದತ್ತಂಸಮ್ಯಕ್ಪ್ರವರ್ತತೇ ॥ ೧೧ ॥

ಹಿಂದೆ ವಮನಮಾಡಿಸಬಾರದವರನ್ನು ಹೇಳಿರುವದು ಸರಿಯಷ್ಟೆ. ಅಂತವರಿಗೇನೇ ಒಂದು ವೇಳೆ ಅವಶ್ಯವಾಗಿ ವಮನಮಾಡಿಸಿಯೇ ತೀರಬೇಕಾದ ಅಜೀರ್ಣಾದಿರೋಗಗಳು ಪ್ರಾಪ್ತವಾದಲ್ಲಿ ಮತ್ತು ವಿಷವೇಗದಿಂದ ವ್ಯಾಪ್ತರಾದಲ್ಲಿ ಮತ್ತು ಕಫವ್ಯಾಪ್ತರಾದಲ್ಲಿ ಅಂತವರಿಗೆ ಯಷ್ಟಿಮಧುಕಕ್ವಾಥವನ್ನು ಪಾನಮಾಡಿಸಿ ವಮನಮಾಡಿಸಬೇಕು, ವಮನಸಾಧ್ಯವಾದ ವಿಕಾರದಿಂದ ವ್ಯಾಪ್ತರಾದ, ಸುಕುಮಾರ, ಕೃಶ, ಬಾಲ, ವೃದ್ಧ, ಭೀತ, ಇಂತವರುಗಳಿಗೆ ಕಂಠಪೂರ್ತಿ ಗಂಜಿ, ಹಾಲು, ಮೊಸರು, ಮಜ್ಜಿಗೆ, ಇವುಗಳನ್ನು ಪಾನಮಾಡಿಸಿ ಪ್ರಕೃತಿ ವಿರುದ್ಧಗಳಾಗಿಯೂ ಶ್ಲೇಷ್ಮವರ್ಧಕಗಳಾಗಿಯೂ ಇರುವ ಭೋಜ್ಯಪದಾರ್ಥಗಳಿಂದ ದೋಷಗಳನ್ನು ಪ್ರಕೋಪಗೊಳಿಸಿ ಸ್ನೇಹಸ್ವೇದಾದಿಗಳನ್ನು ಪ್ರಯೋಗಿಸಿ ನಂತರ ವಮನಮಾಡಿಸಬೇಕು, ಈ ಕ್ರಮವನ್ನು ಅನುಸರಿಸಿದಲ್ಲಿ ಚನ್ನಾಗಿ ವಮನವಾಗುತ್ತದೆ.

ವಮನೇಷುಚಸರ್ವೇಷುಸೈಂಧವಂಮಧುವಾಹಿತಂ ॥

ವಮನಪ್ರಯೋಗದಲ್ಲಿ ಸರ್ವತ್ರ ಸೈಂಧವಲವಣ ಮತ್ತು ಜೇನುತುಪ್ಪ ಇವುಗಳು ಹಿತಕರವಾದವುಗಳು.

ಬೀಭತ್ಸಂವಮನಂದದ್ಯಾದ್ವಿಪರೀತಂವಿರೇಚನಂ ॥ ೧೨ ॥

ವಮನೌಷಧವು ಯಾವಾಗ್ಯೂ ಜುಗುಪ್ಸಾವಹವಾಗಿ ನೋಡಿದ ಕೂಡಲೇ ವಾಂತಿ ಬರುವಂತಿರಬೇಕು, ವಿರೇಚನೌಷಧವು ಮಾತ್ರ ಪೂರ್ವೋಕ್ತ ವಿರುದ್ಧವಾಗಿ ಸುಕುಮಾರವಾಗಿ ಮನಸ್ಸಿಗೆ ಹರ್ಷಪ್ರದವಾಗಿ ತಿನ್ನುವುದಕ್ಕೆ ಹಿತವಾಗಿರಬೇಕು.

ಕ್ವಾಥದ್ರವ್ಯಸ್ಯಕುಡವಂಶ್ರಪಯಿತ್ವಾಜಲಾಢಕೇ ॥
ಅರ್ಧಭಾಗಾವಶಿಷ್ಟಂಚವಮನೇಷ್ವವಚಾರಯೇತ್ ॥ ೧೩ ॥

ವಮನೋಪಯುಕ್ತವಾದ ಕಷಾಯವನ್ನು ನಿರ್ಮಾಣಮಾಡುವ ಕ್ರಮ ವೆಂತೆಂದರೆ—ಕಷಾಯಮಾಡತಕ್ಕ ದ್ರವ್ಯದಿಂದ ನಾಲ್ಕು ಪಲವನ್ನು ತೆಗದು ಕೊಂಡು ಅರುವತ್ತನಾಲ್ಕು ಪಲ ನೀರಿನಲ್ಲಿ ಹಾಕಿ ಕಷಾಯಮಾಡಿ ಅರ್ಧಕ್ಕೆ ಇಳಿಸಿ ಅದನ್ನು ವಮನಾರ್ಥವಾಗಿ ಉಪಯೋಗಿಸಬೇಕು.

ಕ್ವಾಥಪಾನೇನವಪ್ರಸ್ಥಾಜ್ಯೇಷ್ಠಾಮಾತ್ರಾಪ್ರಕೀರ್ತಿತಾ ॥
ಮಧ್ಯಮಾಷಣ್ಮಿತಾಪ್ರೋಕ್ತಾತ್ರಿಪ್ರಸ್ಥಾಚಕನೀಯಸೀ ॥ ೧೪ ॥

ವಮನಕ್ಕಾಗಿ ಕಷಾಯವನ್ನು ಪಾನಮಾಡಿಸಬೇಕಾದರೆ ಉತ್ತಮ ಮಾತ್ರೆ ಒಂಭತ್ತು ಪ್ರಸ್ಥ, ಮಧ್ಯ ಮಾತ್ರೆ ಆರು ಪ್ರಸ್ಥ, ಕನಿಷ್ಠ ಮಾತ್ರೆ ಮೂರು ಪ್ರಸ್ಥ, ಈ ರೀತಿ ಮಾಡಿಸತಕ್ಕದ್ದು.

ಕಲ್ಕಚೂರ್ಣಾವಲೇಹಾನಾಂತ್ರಿಪಲಂಶ್ರೇಷ್ಠಮಾತ್ರಯಾ ॥
ಮಧ್ಯಮಂದ್ವಿಪಲಂವಿದ್ಯಾತ್ಕನೀಯಃಪಲಸಮ್ಮಿತಾ ॥ ೧೫ ॥

ವಮನಕ್ಕಾಗಿ ಕಲ್ಕ, ಚೂರ್ಣ, ಲೇಹ, ಇವುಗಳನ್ನು ಕೊಡಬೇಕಾಗಿ ಸಂದರ್ಭ ಬಂದಲ್ಲಿ ಉತ್ತಮ ಮಾತ್ರೆ ಮೂರು ಪಲವೆಂದೂ, ಮಧ್ಯಮ ಮಾತ್ರೆ ಎರಡು ಪಲವೆಂದೂ, ಕನಿಷ್ಠ ಮಾತ್ರೆ ಒಂದು ಪಲವೆಂದೂ ತಿಳಿಯಬೇಕು.

ವಮನೇಚಾಷ್ಟವೇಗಾಸ್ಯುರಷ್ಟಾಪಿತ್ತಾಂತಮುತ್ತಮಾಃ ॥
ಷಡ್ವೇಗಾಮಧ್ಯಮಾವೇಗಾಶ್ಚತ್ವಾರಸ್ತ್ವವರೇಮತಾಃ ॥ ೧೬ ॥

ವಮನದಲ್ಲಿ ಉತ್ತಮವೇಗವೆಂದರೆ ಎಂಟು ಸಾರಿ ವಮನಮಾಡಿಕೊಳ್ಳುವದು, ಅಲ್ಲಿಗೆ ಪಿತ್ತವು ನಿಶ್ಶೇಷವಾಗಿ ಹೊರಬೀಳುತ್ತದೆ, ಮಧ್ಯಮವೆಂದರೆ ಆರು ಸಾರಿ ವಮನವಾಗುವವರೆಗೂ ನಿರೀಕ್ಷಿಸುವದು, ನಾಲ್ಕು ಸಾರಿ ಎನ್ನುವದು ಕನಿಷ್ಠಪಕ್ಷ ಎಂದು ತಾತ್ಪರ್ಯ.

ವಮನೇಚವಿರೇಕೇಚತಥಾಶೋಣಿತಮೋಕ್ಷಣೇ ॥
ಸಾರ್ಧತ್ರಯೋದಶಪಲಂಪ್ರಸ್ಥಮಾಹುರ್ಮನೀಷಿಣಃ ॥ ೧೭ ॥

ವಮನ, ವಿರೇಚನ, ರಕ್ತಮೋಕ್ಷಣ, ಇವುಗಳ ಪರಿಮಾಣವೆಷ್ಟೆಂದರೆ—ಹದಿಮೂರುವರೆ ಪಲ ಪರಿಮಾಣವುಳ್ಳ ಒಂದು ಪ್ರಸ್ಥದಷ್ಟು ಪದಾರ್ಥವು ವಮನಾದಿಗಳ ದ್ವಾರದಿಂದ ಹೊರಕ್ಕೆ ಬಿದ್ದರೆ ಸಾಕೆಂದು ತಾತ್ಪರ್ಯ.

ಕಫಂಕಟುಕತೀಕ್ಷ್ಣೋಷ್ಣೈಃಪಿತ್ತಂಸ್ವಾದುಹಿಮೈರ್ಜಯೇತ್ ॥
ಸುಸ್ವಾದುಲವಣಾಮ್ಲೋಷ್ಣೈಃಸಂಸೃಷ್ಟಂವಾಯುನಾಕಫಂ॥ ೧೮ ॥
ಕೃಷ್ಣಾರಾಠಫಲಂಸಿಂಧುಕಫೇಕೋಷ್ಣಜಲೈಃಪಿಬೇತ್ ॥
ಪಟೋಲವಾಸಾನಿಂಬೈಶ್ಚಪಿತ್ತೇಶೀತಜಲಂಪಿಬೇತ್ ॥ ೧೯ ॥
ಸಶ್ಲೇಷ್ಮವಾತಪೀಡಾಯಾಂಸಕ್ಷೀರಂಮದನಂಪಿಬೇತ್ ॥
ಅಜೀರ್ಣೇಕೋಷ್ಣಪಾನೀಯೈಸ್ಸಿಂಧುಪೀತ್ವಾವಮೇತ್ಸುಧೀಃ॥ ೨೦ ॥

ಕಫರೋಗದಲ್ಲಿ ಖಾರವಾದ ಮೆಣಸು ಮೊದಲಾದ ಪದಾರ್ಥಗಳನ್ನೂ ತೀಕ್ಷ್ಣಗಳಾದ ಸಾಸುವೆ ಮೊದಲಾದವುಗಳನ್ನೂ ಉಷ್ಣವೀರ್ಯಗಳಾದ ಇನ್ನೂ ಯಾವದಾದರೂ ಪದಾರ್ಥಗಳನ್ನು ಕೊಟ್ಟು ವಮನಮಾಡಿಸಬೇಕು, ಪಿತ್ತದಲ್ಲಿ ಸೀಯಾದ ಮತ್ತು ಶೀತವೀರ್ಯವಾದ ಪದಾರ್ಥಗಳನ್ನು ಕೊಟ್ಟು ವಮನಮಾಡಿಸಬೇಕು, ಕಫಮಿಶ್ರಿತವಾದ ವಾತರೋಗದಲ್ಲಿ ಮಧುರ, ಲವಣ, ಹುಳಿ, ಉಷ್ಣವೀರ್ಯವಾದ ಪದಾರ್ಥಗಳು ಇವುಗಳಿಂದ ವಮನಮಾಡಿಸಬೇಕು, ಕೇವಲ ಕಫಪ್ರಕೋಪದಲ್ಲಿ ಹಿಪ್ಪಲಿ, ಮದನಫಲ, ಇವುಗಳನ್ನು ಬಿಸಿನೀರಿನಲ್ಲಿ ಕಲ್ಕಮಾಡಿ ಅದರಿಂದ ವಮನಮಾಡಿಸಬೇಕು, ಪಿತ್ತಪ್ರಕೋಪದಲ್ಲಿ ಕೈಪಡವಲ, ಆಡುಸೋಗೆ ಸೊಪ್ಪು, ಬೇವಿನತೊಪ್ಪೆ ಇವುಗಳನ್ನು ತಣ್ಣೀರಿನಲ್ಲಿ ಕಲ್ಕಮಾಡಿ ಪಾನಮಾಡಿಸಿ ವಮನಮಾಡಿಸಬೇಕು. ಶ್ಲೇಷ್ಮಸಹಿತವಾದ ವಾತರೋಗದಲ್ಲಿ ಹಾಲಿನಲ್ಲಿ ಮದನಫಲವನ್ನು ಕಲ್ಕಮಾಡಿ ಪಾನಮಾಡಿಸಬೇಕು, ಅಜೀರ್ಣರೋಗದಲ್ಲಿ ಮಾತ್ರ ಬಿಸಿನೀರಿಗೆ ಸೈಂಧವಲವಣವನ್ನು ಹಾಕಿ ಕುಡಿಸಿ ವಮನಮಾಡಿಸಬೇಕು.

ವಮನಂಪಾಯಯಿತ್ವಾಚಜಾನುಮಾತ್ರಾಸನೇಸ್ಥಿತಂ ॥
ಕಂಡಮೋದಂಡನಾಳೇನಸ್ಪೃಶಂತಂಪಾಮಯೇದ್ಭಿಷಕ್ ॥ ೨೧ ॥
ಲಲಾಟಂವಮತಃಪುಂಸಃಪಾರ್ಶ್ವೇದ್ವೇಚಪ್ರದಾಪಯೇತ್ ॥

ವಮನೌಷಧವನ್ನು ಕುಡಿಸಿ ಮೊಳಕಾಲುಮಟ್ಟ ಎತ್ತರವಾದ ಆಸನ ಅಂದರೆ ಸ್ವಲ್ಪ ಹೆಚ್ಚು ಕಡಮೆ ಈಗಿನ ಸಣ್ಣಿಲು ಎಂಬ ಬಗೆಹದ ಆಸನದ ಮೇಲೆ ಕುಳ್ಳಿರಿಸಿ ಹರಳಿನ ಕೊಳವೆಯಿಂದ ಗಂಟಲಿನ ಒಳಭಾಗವನ್ನು ಪದೇ ಪದೇ ಮುಟ್ಟುತ್ತ ವಮನಮಾಡಿಸಬೇಕು, ವಮನಮಾಡುತ್ತಿರುವವನ ಹಣೆ ಮತ್ತು ಎರಡು ಪಾರ್ಶ್ವಗಳನ್ನು ಸಹ ಕೈಯಿಂದ ಮುಟ್ಟುತ್ತಿರಬೇಕು.

ಪ್ರಸೇಕೋಹೃದ್ಗ್ರಹಃಕೋಠಃಕಂಡೂದುರ್ಗಶ್ಛರ್ದಿತಾದ್ಭವೇತ್
॥ ೨೨ ॥

ವಮನೌಷಧ ಸೇವನೆಯಿಂದ ಚನ್ನಾಗಿ ವಮನವಾಗದೆ ಇರತಕ್ಕ ಮನುಷ್ಯನಿಗೆ ಬಾಯಲ್ಲಿ ಕಫಮಿಶ್ರವಾದ ಉಗುಳು ಬರುತ್ತಿರುವದು, ಎದೆಯಲ್ಲಿ ಪತ್ತುವದು, ಮೈಯ್ಯಲ್ಲಿ ಗಂದೆಗಳೇಳುವದು. ತುರಿಕಡತ, ಇವುಗಳು ಉಂಟಾಗುತ್ತವೆ.

**ಅತಿವಾಂತೇಭವೇತ್ತೃಷ್ಣಾಹಿಕ್ಕೋದ್ಗಾರೌವಿಸಂಜ್ಞತಾ ॥**
**ಜಿಹ್ವಾನಿಸ್ಸರಣಂಚಾಕ್ಷ್ಣೋರ್ವ್ಯಾವೃತ್ತಿರ್ಹನುಸಂಹತಿಃ ॥ ೨೩ ॥**
**ರಕ್ತಚ್ಛರ್ದಿಷ್ಠೀವನಂಚಕಂಡಪೀಡಾಚಜಾಯತೇ ॥**

ವಮನ ಹೆಚ್ಚಾದರೆ ಬಹಳ ಬಾಯಾರಿಕೆ, ಬಿಕ್ಕಳಿಕೆ, ತೇಗು, ಜ್ಞಾನತಪ್ಪುವದು, ನಾಲಿಗೆ ಒಳಕ್ಕೆ ಹೋಗದೆ ಬಾಯಿಂದ ಹೊರಗೆ ನಿಲ್ಲುವುದು, ಕಣ್ಣುಗುಡ್ಡೆ ಮೇಲಕ್ಕೆ ಸಿಕ್ಕಿಕೊಳ್ಳುವುದು, ದವಡೆಗಳು ಅಲ್ಲಾಡದಂತೆ ನಿಂತುಹೋಗುವುದು, ರಕ್ತವು ವಾಂತಿಯಾಗುವುದು. ಉಗುಳಿನ ಜೊತೆಯಲ್ಲಿ ರಕ್ತ ಹೊರಬೀಳುವುದು, ಗಂಟಲುನೋವು, ಇವುಗಳು ಉಂಟಾಗುತ್ತವೆ

ವಮನಸ್ಯಾತಿಯೋಗೇತುಮೃದುಕುರ್ಯಾದ್ವಿರೇಚನಂ ॥ ೨೪ ॥
ವಮನಾಂತಃಪ್ರವಿಷ್ಟಾಯಾಂಜಿಹ್ವಾಯಾಂಕವಲಗ್ರಹಃ ॥
ಸ್ನಿಗ್ಧಾಮ್ಲಲವಣೈರ್ಹೃದ್ಯೈರ್ಘೃತಕ್ಷೀರರಸೈರ್ಹಿತಃ ॥ ೨೫ ॥
ಫಲಾನ್ಯಮ್ಲಾನಿಖಾದೇಯುಸ್ತಸ್ಯಚಾನ್ಯೇಪ್ರತೋನರಾಃ ॥
ನಿಸ್ಸೃತಾಂತುತಿಲದ್ರಾಕ್ಷಾಕಲ್ಕಲಿಪ್ತಾಂಪ್ರವೇಶಯೇತ್ ॥ ೨೬ ॥
ವ್ಯಾವೃತ್ತೇಕ್ಷ್ಣೋರ್ಘೃತಾಭ್ಯಕ್ತೇಪೀಡಯೇಚ್ಚಶನೈಶ್ಶನೈಃ ॥
ಹನುಮೋಕ್ಷೇಸ್ಮೃತಃಸ್ವೇದೋನಸ್ಯಂಚಶ್ಲೇಷ್ಮವಾತಹೃತ್ ॥ ೨೭ ॥
ರಕ್ತಪಿತ್ತವಿಧಾನೇನರಕ್ತಚ್ಛರ್ದಿಮುಪಾಚರೇತ್ ॥
ಧಾತ್ರೀರಸಾಂಜನೋಶೀರಲಾಜಚಂದನವಾರಿಭಿಃ ॥ ೨೮ ॥
ಮಂಥಂಕೃತ್ವಾಪಾಯಯೇಚ್ಚಸಘೃತಕ್ಷೌದ್ರಶರ್ಕರಂ ॥
ಶಾಮ್ಯಂತ್ಯನೇನತೃಷ್ಣಾದ್ಯಾಃಪೀಡಾಶ್ಛರ್ದಿಸಮುದ್ಭವಾಃ ॥ ೨೯ ॥

ವಮನ ಹೆಚ್ಚಿಗೆ ಆಗುವುದರಿಂದ ಉಂಟಾಗತಕ್ಕ ವಿಕಾರಗಳಲ್ಲಿ ಪ್ರಥಮತಃ ವಮನ ಹೆಚ್ಚಾದಲ್ಲಿ ಮೃದುವಾದ ವಿರೇಚನ ದ್ರವ್ಯದಿಂದ ವಿರೇಚನ ಮಾಡಿಸಬೇಕು. ವಮನ ಹೆಚ್ಚಾಗಿ ನಾಲಿಗೆ ಒಳಕ್ಕೆ ಎಳೆದುಕೊಂಡರೆ ಹುಳಿ, ಉಪ್ಪು, ಸ್ನೇಹಗಳು ಇವುಗಳಿಂದ ಕೂಡಿರುವ ಮನಸ್ಸಿಗೆ ಹಿತಕರಗಳಾದ ಘೃತ, ಕ್ಷೀರ, ಮಾಂಸರಸ, ಇವುಗಳನ್ನು ಬಾಯಲ್ಲಿ ತುಂಬಿಕೊಂಡು ಕೆಲವು ಕಾಲ ನಿಲ್ಲಿಸಿಕೊಳ್ಳುವುದು, ಮತ್ತು ಅವನ ಎದುರಿನಲ್ಲಿ ಇತರರು ಹುಳಿಯಾದ ಹಣ್ಣುಗಳನ್ನು

ತಿನ್ನುವುದು, ಈ ರೀತಿಮಾಡಬೇಕು. ವಮನ ಹೆಚ್ಚಾಗಿ ನಾಲಿಗೆ ಹೊರಕ್ಕೆ ಹೊರಟುಕೊಂಡಿದ್ದಲ್ಲಿ ಎಳ್ಳು, ದ್ರಾಕ್ಷಿಹಣ್ಣು ಇವುಗಳನ್ನು ನೀರಿನಲ್ಲಿ ಅರದು ಕಲ್ಕಮಾಡಿ ನಾಲಿಗೆಗೆ ಸವರಿ ಒಳಕ್ಕೆ ನೂಕುವುದು, ವಮನ ಹೆಚ್ಚಾಗಿ ಕಣ್ಣುಗುಡ್ಡೆ ಮೇಲಕ್ಕೆ ಸಿಕ್ಕಿಕೊಂಡಿದ್ದಲ್ಲಿ ಕಣ್ಣಿಗೆ ತುಪ್ಪವನ್ನು ಹತ್ತಿಸಿ ಮೆಲ್ಲಗೆ ಅಮುಕಿ ಸರಿಮಾಡಬೇಕು, ದವಡೆಯ ಕೀಲು ವ್ಯತ್ಯಾಸವಾಗಿದ್ದಲ್ಲಿ ಶ್ಲೇಷ್ಮವಾತ ಪ್ರತಿಕೂಲಗಳಾದ ಸ್ವೇದ ಮತ್ತು ನಸ್ಯಗಳನ್ನು ಪ್ರಯೋಗಿಸಬೇಕು, ರಕ್ತ ವಮನ ವಾಗುತ್ತಿರುವಲ್ಲಿ ಊರ್ಧ್ವಗರಕ್ತಪಿತ್ತರೋಗಕ್ಕೆ ಉಕ್ತವಾದ ಚಿಕಿತ್ಸೆಯನ್ನು ಮಾಡ ಬೇಕು, ನೆಲ್ಲಿಚಟ್ಟುರಸಾಂಜನ (ಮರಅರಿಸಿನದ ಕಷಾಯದಿಂದ ಮಾಡಿದ ರಸ ಕ್ರಿಯೆ) ಲಾಮಂಚ, ಅರಳು, ಶ್ವೇತಚಂದನ, ಇವುಗಳ ಕಲ್ಕದಿಂದ ಮಂಥವನ್ನು ಮಾಡಿ, ತುಪ್ಪ, ಜೇನುತುಪ್ಪ, ಸಕ್ಕರೆ, ಇವುಗಳನ್ನು ಕೂಡಿಸಿ ಕುಡಿಸಬೇಕು, ಇದರಿಂದ ವಮನ ಹೆಚ್ಚಾಗೋಣದರಿಂದ ಉತ್ಪನ್ನವಾದ ವಿಕಾರಗಳೆಲ್ಲಾ ಶಮನವಾಗುತ್ತವೆ.

ಹೃತ್ಕಂಠಶಿರಸಾಂಶುದ್ಧಿರ್ದೀಪ್ತಾಗ್ನಿತ್ವಂಚಲಾಘವಂ ॥
ಕಫಪಿತ್ತವಿನಾಶಶ್ಚಸಮ್ಯಗ್ವಾಂತಸ್ಯಲಕ್ಷಣಂ ॥ ೩೦ ॥

ಎದೆಯಲ್ಲಿ ಪಿತ್ತವು ವತ್ತ್ಯಾಡದೆ ಶುದ್ಧವಾಗಿರುವದು ಕಂಠದಲ್ಲಿ ಶ್ಲೇಷ್ಮ ಬಾಧೆಯಿಲ್ಲದಿರುವದು, ಶಿರೋವೇದನಾದಿ ಬಾಧೆಯಿಲ್ಲದೆ ತಲೆ ಹಗುರವಾಗಿರು ವುದು, ಜಠರಾಗ್ನಿ ಪಟುವಾಗಿರುವುದು ಮೈ ಹಗುರವಾಗಿರುವುದು, ಕಫ ಮತ್ತು ಪಿತ್ತಗಳು ಉಲ್ಬಣವಾಗದೆ ಸಮವಾಗಿರುವದು, ಇವುಗಳು ಚನ್ನಾಗಿ ವಮನ ವಾದ್ದಕ್ಕೆ ಲಕ್ಷಣಗಳು.

ತತೋಽಪರಾಹ್ಣೇದೀಪ್ತಾಗ್ನಿಂಮುದ್ಗಷಷ್ಟಿಕಶಾಲಿಭಿಃ ॥
ಹೃದ್ಯೈಶ್ಚಜಾಂಗಲರಸೈಃಕೃತ್ವಾಯೂಷಂಚಭೋಜಯೇತ್ ೩೧

ಚನ್ನಾಗಿ ವಮನವಾದ ಮೇಲೆ ಅಗ್ನಿದೀಪ್ತಿ ಚನ್ನಾಗಿರುವಾಗ್ಯೆ ಅಪರಾಹ್ಣ ದಲ್ಲಿ ಹೆಸರುಬೇಳೆ, ಸಣ್ಣಕ್ಕಿ ಮನಸ್ಸಿಗೆ ಇಂಪಾದ ಜಾಂಗಲಿಮಾಂಸರಸ ಇವು ಗಳಿಂದ ಯೂಷವೆಂಬ ಒಂದು ಬಗೆಯ ಗಂಜಿಯನ್ನು ಮಾಡಿಸಿ ಭೋಜನ ಮಾಡಿಸಬೇಕು.

ತಂದ್ರಾನಿದ್ರಾಸ್ಯದೌರ್ಗಂಧ್ಯಂಕಂಡೂಶ್ಚಗ್ರಹಣೀವಿಷಂ ॥
ಸುವಾಂತಸ್ಯನಪೀಡಾಯೈಭವಂತ್ಯೇತೇಕದಾಚನ ॥ ೩೨ ॥

ಚನ್ನಾಗಿ ವಮನವಾದರೆ ತೂಕಡಿಕೆ, ನಿದ್ರೆ, ಬಾಯಿದುರ್ವಾಸನೆ, ಮೈ ನವೆ, ಅತಿಸಾರ, ವಿಷವೇಗ, ಇವುಗಳು ತೊಂದರೆಮಾಡದೆ ಸ್ವತಏವ ನಿವೃತ್ತಿ ಯಾಗುತ್ತವೆ.

ಅಜೀರ್ಣಂಶೀತಪಾನೀಯಂವ್ಯಾಯಾಮಂಮೈಥುನಂತಥಾ ॥
ಸ್ನೇಹಾಭ್ಯಂಗಂಪ್ರಕೋಪಂಚದಿನೈಕಂವರ್ಜಯೇತ್ಸುಧೀಃ ॥೩೩॥

ವಮನೌಷಧ ಸೇವನಮಾಡಿದವನಿಗೆ ಪಥ್ಯ, ಅಜೀರ್ಣವಾಗತಕ್ಕ ಪದಾರ್ಥಗಳು, ತಣ್ಣೀರು, ವ್ಯಾಯಾಮ, ಸ್ತ್ರೀಸಂಗ, ಅಭ್ಯಂಗಸ್ನಾನ, ಸಿಟ್ಟುಮಾಡಿಕೊಳ್ಳುವದು ಇವುಗಳನ್ನು ಒಂದು ದಿವಸದ ಮಟ್ಟಿಗೆ ಬಿಡಬೇಕು.

ಇಲ್ಲಿಗೆ ತೃತೀಯಾಧ್ಯಾಯು ಸಂಪೂರ್ಣ.

---

## ಚತುರ್ಥೋಧ್ಯಾಯಃ.

ಸ್ನಿಗ್ಧಸ್ವಿನ್ನಸ್ಯವಾಂತಸ್ಯದದ್ಯಾತ್ಸಮ್ಯಗ್ವಿರೇಚನಂ ॥

ಶಾಸ್ತ್ರಸಂಪ್ರದಾಯವನ್ನನುಸರಿಸಿ ಸ್ನೇಹಪಾನಸ್ವೇದನ ವಮನಾದಿಗಳನ್ನು ಮುಗಿಸಿದ ಮೇಲೆ ಚನ್ನಾಗಿ ವಿರೇಚನವಾಗುವ ಔಷಧವನ್ನು ಕೊಡಬೇಕು.

ಅವಾಂತಸ್ಯತ್ವಧಸ್ರಸ್ತೋಗ್ರಹಣೀಂಛಾದಯೇತ್ಕಫಃ ॥ ೧ ॥
ಮಂದಾಗ್ನಿಂಗೌರವಂಕುರ್ಯಾಜ್ಜನಯೇದ್ವಾಪ್ರವಾಹಿಕಾಂ ॥
ಅಥಪಾಚನೈರಾಮಂಬಲಾಸಂಚವಿಪಾಚಯೇತ್ ॥ ೨ ॥
ಸ್ನಿಗ್ಧಸ್ಯಸ್ನೇಹನೈಃಕಾರ್ಯಂಸ್ವೇದೈಸ್ವಿನ್ನಸ್ಯರೇಚನಂ ॥

ವಮನೌಷಧ ಪ್ರಯೋಗಮಾಡದೆ ವಿರೇಚನಮಾಡಿಸಿದಲ್ಲಿ ಸಂಭವಿಸುವ ದೋಷಗಳನ್ನು ಹೇಳುತ್ತಾನೆ—ವಮನಮಾಡಿಸದೇನೇ ವಿರೇಚನೌಷಧವನ್ನು ಕೊಟ್ಟಲ್ಲಿ ವಿರೇಚನೌಷಧ ಸ್ವಭಾವದಿಂದ ಅಧೋಮಾರ್ಗೋನ್ಮುಖವಾದ ಶ್ಲೇಷ್ಮವು ಪಾಚಕಾಗ್ನ್ಯಧಿಷ್ಠಾನಭೂತವಾದ ಗ್ರಹಣಿಯನ್ನು ಆಚ್ಛಾದನಮಾಡಿ ಅಗ್ನಿಮಾಂದ್ಯ, ಮೈಭಾರ ಇವುಗಳನ್ನು ಉಂಟುಮಾಡುತ್ತದೆ, ಅಥವಾ ಪ್ರವಾಹಿಕ ಎಂಬ ಅತಿಸಾರದಂತಹ ವ್ಯಾಧಿಯನ್ನು ಉಂಟುಮಾಡುತ್ತದೆ, ಮೇಲೆ ಹೇಳಿದಂತೆ ಕಫವು ಗ್ರಹಣಿಯನ್ನು ಆಚ್ಛಾದನಮಾಡಿ ಅಗ್ನಿಮಾಂದ್ಯವನ್ನು ಉಂಟುಮಾಡಿದಲ್ಲಿ ಪಾಚನೌಷಧಗಳಿಂದ ಆಪಕ್ವವಾದ ಆಹಾರವನ್ನು ಮತ್ತು ಶ್ಲೇಷ್ಮವನ್ನು ಪಚನ ಮಾಡಿಸಬೇಕು, ವಿರೇಚನೌಷಧಗಳನ್ನು ಕೊಡಬೇಕಾದರೆ ಮೊದಲು ಸ್ನೇಹಗಳಿಂದ ಸ್ನೇಹನಮಾಡಿಸಿ ನಂತರ ಸ್ವೇದನವನ್ನು ಮಾಡಿಸಿ ವಿರೇಚನವನ್ನು ಕೊಡಬೇಕು.

ಶರದ್ಯೃತೌವಸಂತೇಚದೇಯಂಶುದ್ಧೌವಿರೇಚನಂ ॥ ೩ ॥
ಅನ್ಯದಾತ್ಯಯಿಕೇಕಾರ್ಯೇಸ್ವೇದನಂಶೀಲಯೇದ್ಬುಧಃ ॥

ಶರೀರ ಶುದ್ಧ್ಯರ್ಥವಾಗಿ ವಿರೇಚನೌಷಧವನ್ನು ಕೊಡಬೇಕಾದರೆ ಶರದೃತು, ವಸಂತಋತು, ವರ್ಷಋತು, ಈ ಮೂರು ಋತುಗಳಲ್ಲಿ ಕೊಡಬೇಕು. ಮೇಲೆ ಹೇಳಿದ ಕಾಲಗಳಲ್ಲದೆ ಮತ್ತೆ ಯಾವಾಗಲಾದರೂ ವಿರೇಚನಮಾಡಿಸುವುದು ಅವಶ್ಯ ಬಂದಲ್ಲಿ ವಿರೇಚನಮಾಡಿಸಿ ನಂತರ ಸ್ವೇದನಮಾಡಿಸಬೇಕು.

ದೋಷಾಃಕದಾಚಿತ್ಕುಪ್ಯಂತಿಜಿತಾಲಂಘನಪಾಚನೈಃ ॥ ೪ ॥
ಯೇತುಸಂಶೋಧನೈಶ್ಶುದ್ಧಾನತೇಷಾಂಪುನರುದ್ಭವಃ ॥

ಉಪವಾಸ ಮತ್ತು ಪಾಚನೌಷಧ ಇವುಗಳಿಂದ ಶಮನವಾದ ದೋಷಗಳು ಕಾಲಾಂತರದಲ್ಲಿ ಸ್ವಪ್ರಕೋಪಕಾರಣಗಳು ಪದಗಿದಲ್ಲಿ ಕುಪಿತಗಳಾದಾವು ಆದರೆ ಸಂಶೋಧನ ಅಂದರೆ ವಮನವಿರೇಚನಗಳಿಂದ ಶುದ್ಧವಾದ ದೋಷಗಳು ಮತ್ತೆ ಪ್ರಕೋಪವನ್ನು ಹೊಂದುವುದಿಲ್ಲ.

ಪಿತ್ತೇವಿರೇಚನಂಯುಂಜ್ಯಾದಾಮೋದ್ಭೂತಗದೇತಥಾ ॥ ೫ ॥
ಉದರೇಚತಥಾಧ್ಮಾನೇಕೋಷ್ಠಶುದ್ಧ್ಯೈವಿಶೇಷತಃ ॥

ಪಿತ್ತಪ್ರಧಾನವಾದ ರೋಗದಲ್ಲಿ ಆಮೋದ್ಭೂತಗದೆ ಅಂದರೆ ಆಮವಾತ ರೋಗದಲ್ಲಿ ಉದರರೋಗಗಳು, ಆಧ್ಮಾನ ಎಂದರೆ ಹೊಟ್ಟೆಯುಬ್ಬರ ಈ ರೋಗಗಳಲ್ಲಿ ಮತ್ತು ಬದ್ಧಕೋಷ್ಠದಲ್ಲಿ ಕೋಷ್ಠಶುದ್ಧ್ಯರ್ಥವಾಗಿ ಸಹ ವಿರೇಚನೌಷಧವನ್ನು ಕುಡಿಸಬೇಕು.

ಬಾಲವೃದ್ಧಾವತಿಸ್ನಿಗ್ಧಃಕ್ಷತಕ್ಷೀಣೋಭಯಾನ್ವಿತಃ ॥ ೬ ॥
ಶ್ರಾಂತಸ್ತೃಷಾರ್ತಸ್ಥೂಲಶ್ಚಗರ್ಭಿಣೀಚನವಜ್ವರೀ ॥
ನವಪ್ರಸೂತಾನಾರೀಚಮಂದಾಗ್ನಿಶ್ಚಮದಾತ್ಯಯೀ ॥ ೭ ॥
ಶಲ್ಯಾರ್ದಿತಶ್ಚರೂಕ್ಷಶ್ಚನವಿರೇಚ್ಯಾವಿಜಾನತಾ ॥

ವಿರೇಚನಾನರ್ಹರನ್ನು ಹೇಳುತ್ತಾನೆ—ಹುಡುಗರು, ಮುದುಕರು, ಸ್ನೇಹ ಅತಿಯೋಗವುಳ್ಳವರು, ಉರಃಕ್ಷತಾ (ರಾಜಯಕ್ಷ್ಮಭೇದ)ದಿಗಳಿಂದ ಕ್ಷೀಣರಾದವನು, ಭೀತರಾದವರು, ಶ್ರಮಪಟ್ಟವರು, ಬಾಯಾರಿದವರು, ಸ್ಥೂಲಶರೀರಿಗಳು, ಗರ್ಭಿಣಿಯರು, ಹೊಸದಾಗಿ ಜ್ವರಬಂದವರು, ಹೊಸದಾಗಿ ಜನನವಾದ ಸ್ತ್ರೀಯರು, ಅಗ್ನಿಮಾಂದ್ಯವುಳ್ಳವರು, ಮದಾತ್ಯಯ ರೋಗಿಗಳು ಅಂದರೆ ಒಂದು ವಿಧವಾದ ಹುಚ್ಚರು, ಶಸ್ತ್ರಚಿಕಿತ್ಸೆಗೆ ಯೋಗ್ಯವಾದ ರೋಗವುಳ್ಳವರು, ರೂಕ್ಷರು ಅಂದರೆ ಸ್ನೇಹರಹಿತರಾದವರು, ಇಂತವರಿಗೆ ವಿರೇಚನೌಷಧಗಳನ್ನು ಕೊಡಬಾರದು.

ಜೀರ್ಣಜ್ವರೀಗರವ್ಯಾಪ್ತೋವಾತರಕ್ತೀಭಗಂದರೀ ॥ ೮ ॥
ಅರ್ಶಃಪಾಂಡೂದರಗ್ರಂಥಿಹೃದ್ರೋಗಾರುಚಿಪೀಡಿತಾಃ ॥
ಯೋನಿರೋಗಪ್ರಮೇಹಾರ್ತಾಗುಲ್ಮಪ್ಲೀಹವ್ರಣಾರ್ದಿತಾಃ ॥ ೯ ॥
ವಿದ್ರಧಿಚ್ಛರ್ದಿವಿಸ್ಫೋಟವಿಸೂಚೀಕುಷ್ಠಸಂಯುತಾಃ ॥
ಕರ್ಣನಾಸಾಶಿರೋವಕ್ತ್ರಗುದಮೇಢ್ರಾಮಯಾನ್ವಿತಾಃ ॥ ೧೦ ॥
ಪ್ಲೀಹಶೋಥಾಕ್ಷಿರೋಗಾರ್ತಾಃಕ್ರಿಮಿಕ್ಷೀಣಾನಿಲಾರ್ದಿತಾಃ ॥
ಶೂಲಿನೋಮೂತ್ರಘಾತಾರ್ತಾವಿರೇಕಾರ್ಹಾನರಾಮತಾಃ ॥೧೧॥

ಪುರಾಣಜ್ವರವುಳ್ಳವನು, ಕೃತ್ರಿಮವಿಷದಿಂದ ವ್ಯಾಪ್ತನಾದವನು, ವಾತರಕ್ತ ರೋಗಿ, ಭಗಂದರರೋಗಿ, ಮೂಲವ್ಯಾಧಿ ಇರುವವನು, ಪಾಂಡುರೋಗಿ, ಎಂಟು ವಿಧವಾದ ಉದರರೋಗವುಳ್ಳವರು, ಉದರಗ್ರಂಥಿವುಳ್ಳವರು, ಹೃದಯರೋಗ, ಅರುಚಿ, ಯೋನಿರೋಗ, ಮೇಹರೋಗ, ಗುಲ್ಮ, ಪ್ಲೀಹ ಅಂದರೆ ಜ್ವರಗೆಡ್ಡೆ, ವ್ರಣಗಳು, ವಿದ್ರಧಿ ಎಂದರೆ ಒಂದು ವಿಧವಾದ ಚರ್ಮರೋಗ, ವಾಂತಿ, ವೈಯ್ಯಲ್ಲಿ ಏಳುವ ಗುಳ್ಳೆಗಳು, ವಿಸೂಚಿ ಎಂಬ ಅತಿಸಾರಭೇದ, ಕುಷ್ಠರೋಗ, ಕರ್ಣರೋಗ, ನಾಸಿಕಾರೋಗ, ಶಿರೋರೋಗಗಳು, ಮುಖರೋಗ, ಗುದರೋಗ ಗಳು, ಶಿಶ್ನರೋಗಗಳು ಇವುಗಳಿಂದ ಪೀಡಿತರಾದವರು, ಪ್ಲೀಹ, ಶೋಥ, ನೇತ್ರ ರೋಗಗಳು, ಕ್ರಿಮಿರೋಗಗಳು, ಇವುಗಳಿಂದ ಪೀಡಿತರಾದವರು, ಕ್ಷೀಣರಾದ ವರು, ವಾತರೋಗಿಗಳು, ಶೂಲಪೀಡಿತರು, ಮೂತ್ರಾಘಾತಪೀಡಿತರು, ಇಂತ ವರು ವಿರೇಚನಯೋಗ್ಯರು.

ಬಹುಪಿತ್ತೋಮೃದುಃಕೋಷ್ಠೋಬಹುಶ್ಲೇಷ್ಮಾಚಮಧ್ಯಮಃ ॥
ಬಹುವಾತಃಕ್ರೂರಕೋಷ್ಠೋದುರ್ವಿರೇಚ್ಯಸ್ಸಕಥ್ಯತೇ ॥ ೧೨ ॥

ವಿರೇಚನೌಷಧ ಪ್ರಯೋಗ ಜ್ಞಾನಕ್ಕೋಸ್ಕರವಾಗಿ ಕೋಷ್ಠಸ್ವರೂಪವನ್ನು ಹೇಳುತ್ತಾನೆ—ಪಿತ್ತವು ಅಧಿಕವಾಗಿದ್ದರೆ ಮೃದುಕೋಷ್ಠವೆಂದು ಹೆಸರು, ಶ್ಲೇಷ್ಮ ಪ್ರಕೃತಿಯುವನು ಮಧ್ಯಮಕೋಷ್ಠನೆಂದು ಹೆಸರು, ಕೊಂಚ ಕಠಿಣವಿರೇಚನ ಬೇಕು, ವಾತಪ್ರಕೃತಿಯುವನು ಕ್ರೂರಕೋಷ್ಠನೆಂದು ಹೆಸರು, ಎಂತಹ ವಿರೇಚ ನೌಷಧವಾದರೂ ವಿರೇಚನವಾಗುವುದೇ ಕಷ್ಟ.

ಮೃದ್ವೀಮಾತ್ರಾಮೃದೌಕೋಷ್ಠೇಮಧ್ಯಕೋಷ್ಠೇಚಮಧ್ಯಮಾ ॥
ಕ್ರೂರೇತೀಕ್ಷ್ಣಾಮತಾದ್ರವ್ಯೈರ್ಮೃದುಮಧ್ಯಮತೀಕ್ಷ್ಣಕೈಃ ॥೧೩॥

ಮೃದುಕೋಷ್ಠದವನಿಗೆ ಮೃದುವಾದ ವಿರೇಚನದ್ರವ್ಯಗಳಿಂದ ನಿರ್ಮಿತ ವಾದ ವಿರೇಚನೌಷಧಗಳನ್ನು ಸ್ವಲ್ಪ ಮಾತ್ರೆಯಿಂದ ಕೊಡಬೇಕು, ಮಧ್ಯಮ

ಕೋಷ್ಠದವನಿಗೆ ಅಂದರೆ ಶ್ಲೇಷ್ಮಪ್ರಕೃತಿಯುವನಿಗೆ ಮಧ್ಯಮವಾದ ವಿರೇಚನ ದ್ರವ್ಯಗಳಿಂದ ಸಿದ್ಧವಾದ ಔಷಧವನ್ನು ಮಧ್ಯಮ ಪರಿಮಾಣದಿಂದ ಕೊಡಬೇಕು. ಕ್ರೂರಕೋಷ್ಠದವನಿಗೆ ಅಂದರೆ ವಾತಪ್ರಕೃತಿಯುವನಿಗೆ ತೀಕ್ಷ್ಣವಾದ ವಿರೇಚನ ದ್ರವ್ಯಗಳಿಂದ ಸಿದ್ಧವಾದ ಔಷಧವನ್ನು ಹೆಚ್ಚಿಗೆ ಪ್ರಮಾಣದಿಂದ ಕೊಡಬೇಕು.

ಮೃದುರ್ದ್ರಾಕ್ಷಾಪಯಶ್ಚಾಂಬುತೈಲೈರಪಿವಿರಿಚ್ಯತೇ ॥
ಮಧ್ಯಮಸ್ತ್ರಿವೃತಾತಿಕ್ತಾರಾಜವೃಕ್ಷೈರ್ವಿರಿಚ್ಯತೇ ॥ ೧೪ ॥
ಕ್ರೂರಸ್ನುಕ್ಪಯಸಾದೇಮಕ್ಷೀರೀದಂತೀಫಲಾದಿಭಿಃ ॥

ಮೃದುಕೋಷ್ಠದವರಿಗೆ ದ್ರಾಕ್ಷೇಹಣ್ಣು, ಹಾಲು, ಬಿಸಿನೀರು, ಹರಳೆಣ್ಣೆ, ಇವುಗಳಿಂದಲೇನೇ ವಿರೇಚನವಾಗುತ್ತದೆ, ಮೃದುವೂ ಅಲ್ಲ ಕ್ರೂರವೂ ಅಲ್ಲ. ಅಂತಹ ಮಧ್ಯಮಕೋಷ್ಠದವನಿಗೆ ತಿಗಡೆ, ಕಟುರೋಹಿಣಿ, ಬ್ಯಾಟಿಗಿಡ ಇವುಗಳಿಂದಲೇನೇ ಚನ್ನಾಗಿ ವಿರೇಚನವಾಗುತ್ತದೆ, ಕ್ರೂರಕೋಷ್ಠದವನಿಗೆ ಸ್ನುಹಿಕ್ಷೀರ, ಹೇಮಕ್ಷೀರ, ಜಯಪಾಲಬೀಜ ಇವುಗಳಿಂದ ವಿರೇಚನವಾಗುತ್ತದೆ.

ಮಾತ್ರೋತ್ತಮಾವಿರೇಕಸ್ಯತ್ರಿಂಶದ್ವೇಗೈಃಕಫಾಂತಗಾ ॥ ೧೫ ॥
ವೇಗೈರ್ವಿಂಶತಿಭಿರ್ಮಧ್ಯಾಹೀನೋಕ್ತಾದಶವೇಗಕೈಃ ॥

ವಿರೇಚನೌಷಧ ಪಾನಮಾಡಿದ ಮೇಲೆ ಮೂವತ್ತುಸಾರಿ ವಿರೇಚನವಾಗುವುದು ಕಫಾಂತವಾಗಿ ಉತ್ತಮವೇಗವೆಂಬದಾಗಿಯೂ, ಇಪ್ಪತ್ತುಸಾರಿ ಪಿತ್ತಾಂತವಾಗಿ ವಿರೇಚನವಾಗುವದು ಮಧ್ಯಮವೆಂಬದಾಗಿಯೂ, ಹತ್ತುಸಾರಿ ವಿರೇಚನವಾಗುವುದು ಹೀನವೇಗವೆಂಬದಾಗಿಯೂ ಹೆಸರು.

ದ್ವಿಪಲಂಶ್ರೇಷ್ಠಮಾಖ್ಯಾತಂಮಧ್ಯಮಂಚಪಲಂಭವೇತ್ ॥ ೧೬ ॥
ಪಲಾರ್ಧಂಚಕಷಾಯಾಣಾಂಕನೀಯಸ್ತುವಿರೇಚನಂ ॥
ಕಲ್ಕಮೋದಕಚೂರ್ಣಾನಾಂಕರ್ಷಂಮಧ್ವಾಜ್ಯಲೇಹತಃ ॥ ೧೭ ॥
ಕರ್ಷದ್ವಯಂಪಲಂವಾಪಿವಯೋರೋಗಾದ್ಯಪೇಕ್ಷಯಾ ॥

ವಿರೇಚನಕ್ಕಾಗಿ ಕಷಾಯಗಳನ್ನು ಉಪಯೋಗಿಸುವಲ್ಲಿ ಕ್ರೂರ ಕೋಷ್ಠದವರಿಗೆ ಎರಡು ಪಲ ಪ್ರಮಾಣ ಉತ್ತಮ ಮಾತ್ರೆ ಎಂಬದಾಗಿಯೂ ಮಧ್ಯಮಕೋಷ್ಠದವರಿಗೆ ಮಧ್ಯಮ ಮಾತ್ರೆ ಒಂದು ಪಲ ಪರಿಮಾಣವೆಂಬದಾಗಿಯೂ ಮೃದುಕೋಷ್ಠದವರಿಗೆ ಕನಿಷ್ಟಮಾತ್ರೆ ಅರ್ಧ ಪಲ ಪರಿಮಾಣ ಎಂಬದಾಗಿಯೂ ತಿಳಿಯಬೇಕು. ಕಲ್ಕಗಳು, ಮೋದಕ ಅಂದರೆ ಮಾತ್ರೆ ಚೂರ್ಣ ಇವುಗಳ ವಿಷಯದಲ್ಲಿ ಮಾತ್ರ ರೋಗಿಯ ವಯಸ್ಸು ಮತ್ತು ರೋಗ ಇವುಗಳ ಬಲಾಬಲಗಳನ್ನು ನೋಡಿಕೊಂಡು ಜೇನಿನ ಜೊತೆಯಲ್ಲಿ ಒಂದು ಕರ್ಷ, ಎರಡು ಕರ್ಷ, ಒಂದು ಪಲ, ಈ ರೀತಿಯಾಗಿ ಪ್ರಮಾಣವನ್ನು ಗೊತ್ತುಮಾಡಿಕೊಳ್ಳಬೇಕು.

ಪಿತ್ತೋತ್ತರೇತ್ರಿವೃಚ್ಚೂರ್ಣಂದ್ರಾಕ್ಷಾಕ್ವಾಥಾದಿಭಿಃಪಿಬೇತ್ ೧೮
ತ್ರಿಫಲಾಕ್ವಾಥಗೋಮೂತ್ರೈಃಪಿಬೇದ್ವ್ಯೋಷಂಕಫಾರ್ದಿತಃ ॥
ತ್ರಿವೃತ್ಸೈಂಧವಶುಂಠೀನಾಂಚೂರ್ಣಮಮ್ಲೈಃಪಿಬೇನ್ನರಃ ॥ ೧೯ ॥
ವಾತಾರ್ದಿತೋವಿರೇಕಾಯಜಾಂಗಲಾನಾಂರಸೇನವಾ ॥

ಕೆಲವು ವಿರೇಚನೌಷಧಗಳನ್ನು ಹೇಳುತ್ತಾನೆ—ಪಿತ್ತಪ್ರಧಾನವಾದ ಮೃದು ಕೋಷ್ಠದಲ್ಲಿ ತಿಗಡೆಯ ಚೂರ್ಣವನ್ನು ದ್ರಾಕ್ಷೀಹಣ್ಣಿನ ಕಷಾಯದೊಡನೆ ಸೇವಿಸಬೇಕು ಕಫರೋಗಿಯು ತ್ರಿಫಲಕಷಾಯ ಅಥವಾ ಗೋಮೂತ್ರಗಳೊಡನೆ ವ್ಯೋಷಂ ಅಂದರೆ ಶುಂಠಿ, ಹಿಪ್ಪಲಿ, ಮೆಣಸು, ಇವುಗಳ ಚೂರ್ಣವನ್ನು ಮತ್ತು ತಿಗಡೆಯ ಚೂರ್ಣವನ್ನು ಸಹ ವಿರೇಚನಾರ್ಥವಾಗಿ ಪಾನಮಾಡಬೇಕು, ವಾತ ರೋಗಪೀಡಿತನಾದವನು ವಿರೇಚನಾರ್ಥವಾಗಿ ತಿಗಡೆ, ಸೈಂಧವಲವಣ, ಶುಂಠಿ, ಇವುಗಳ ಚೂರ್ಣವನ್ನು ಆಮ್ಲರಸಗಳೊಡನೆಯೂ ಜಾಂಗಲಮೃಗಗಳ ಮಾಂಸ ರಸಗಳೊಡನೆಯೂ ಪಾನಮಾಡಬೇಕು.

ಏರಂಡತೈಲಂತ್ರಿಫಲಾಕ್ವಾಥೇನದ್ವಿಗುಣೇನಚ ॥ ೨೦ ॥
ಯುಕ್ತಂಪೀತಂಪಯೋಭಿರ್ವಾನಚಿರೇಣವಿರಿಚ್ಯತೇ ॥

ಹರಳೆಣ್ಣೆಯನ್ನು ದ್ವಿಗುಣ ತ್ರಿಫಲಕಷಾಯದೊಂದಿಗಾಗಲಿ ಹಾಲಿನೊಂದಿಗಾಗಲಿ ಪಾನಮಾಡಿದಲ್ಲಿ ಕೂಡಲೇ ವಿರೇಚನವಾಗುತ್ತದೆ

ತ್ರಿವೃತಾಕೌಟಜಂಬೀಜಂಪಿಪ್ಪಲೀವಿಶ್ವಭೇಷಜಂ ॥ ೨೧ ॥
ಸಮೃದ್ವೀಕಾರಸಕ್ಷೌದ್ರಂವರ್ಷಾಕಾಲೇವಿರೇಚನಂ ॥
ತ್ರಿವೃದ್ದುರಾಲಭಾಮುಸ್ತಾಶರ್ಕರೋದೀಚ್ಯಚಂದನಂ ॥ ೨೨ ॥
ದ್ರಾಕ್ಷಾಂಬುನಾಸಯಷ್ಟ್ಯಾಹ್ವಂಶೀತಲಂಚಘನಾತ್ಯಯೇ ॥
ಪಿಪ್ಪಲೀನಾಗರಂಸಿಂಧುಶ್ಯಾಮಾಚತ್ರಿವೃತಾಸಹ ॥ ೨೩ ॥
ಲಿಹೇತ್‌ಕ್ಷೌದ್ರೇಣಶಿಶಿರೇವಸಂತೇಚವಿರೇಚನಂ ॥
ತ್ರಿವೃತಾಶರ್ಕರಾತುಲ್ಯಾಗ್ರೀಷ್ಮಕಾಲೇವಿರೇಚನಂ ॥ ೨೪ ॥

ತಿಗಡೆ, ಕೊಡಸಿಗೆಬೀಜ, ಹಿಪ್ಪಲಿ, ಶುಂಠಿ, ದ್ರಾಕ್ಷೀಹಣ್ಣಿನ ರಸ, ಜೇನುತುಪ್ಪ, ಇವುಗಳನ್ನು ವರ್ಷಋತುವಿನಲ್ಲಿ ವಿರೇಚನಾರ್ಥವಾಗಿ ತೆಗದುಕೊಳ್ಳಬೇಕು, ತಿಗಡೆ, ತುರಚಿ, ಗೇಕಿನಗೆಡ್ಡೆ, ಸಕ್ಕರೆ, ಲಾಮಂಚ, ಶ್ವೇತಚಂದನ, ಜ್ಯೇಷ್ಠಮಧು, ಇವುಗಳ ಚೂರ್ಣವನ್ನು ದ್ರಾಕ್ಷಿಯ ಕಷಾಯದೊಡನೆ ಆರಿ ತಣ್ಣಗಾದ ಮೇಲೆ ವಿರೇಚನಾರ್ಥವಾಗಿ ಶರತ್ಕಾಲದಲ್ಲಿ ಪಾನಮಾಡಬೇಕು, ಶಿಶಿರ

ಋತುವಿನಲ್ಲಿ ಹಿಪ್ಪಲಿ, ಶುಂಠಿ, ಸೈಂಧವಲವಣ, ತಿಗಡೆ, ಕರೀಕೊಮ್ಮೆ ಬೇರು, ಇವುಗಳ ಚೂರ್ಣವನ್ನು ಜೇನುತುಪ್ಪದೊಡನೆ ಶಿಶಿರ, ವಸಂತಋತುಗಳಲ್ಲಿ ಭೇದಿಗೆ ತೆಗದುಕೊಳ್ಳಬೇಕು, ಗ್ರೀಷ್ಮಋತುವಿನಲ್ಲಿ ತಿಗಡೆಯ ಚೂರ್ಣಕ್ಕೆ ಸಮನಾಗಿ ಸಕ್ಕರೆ ಬೆರಸಿ ವಿರೇಚನೌಷಧವಾಗಿ ತೆಗದುಕೊಳ್ಳಬೇಕು.

ತ್ರಿವೃತಾಂದಂತೀಂಹಪುಷಾಂಸಪ್ತಲಾಂಕಟುರೋಹಿಣೀಂ ॥
ಸ್ವರ್ಣಕ್ಷೀರೀಂಚಸಂಚೂರ್ಣ್ಯಗೋಮೂತ್ರೇಭಾವಯೇತ್
ತ್ರ್ಯಹಂ ॥ ೨೫ ॥
ವಿಷಸರ್ವರ್ತುಕೋಯೋಗೋಸ್ನಿಗ್ಧಾನಾಂಮಲದೋಷಹಾ ॥

ತಿಗಡೆ, ಜಯಪಾಲ, ಹಪುಷಾ ಸ್ವನಾಮಪ್ರಸಿದ್ಧ ಬಜೆಯ ತರಹದ ಮೂಲಿಕೆ, ಸಪ್ತಲಾ, ಸ್ವನಾಮಖ್ಯಾತ, ಕಟುಕರೋಹಿಣಿ, ಸ್ವರ್ಣಕ್ಷೀರಿ, ಸ್ವಯಂ ಪ್ರಸಿದ್ಧ ಇವುಗಳ ಚೂರ್ಣವನ್ನು ಮೂರು ದಿವಸ ಗೋಮೂತ್ರದಲ್ಲಿ ನೆನೆಹಾಕಿ ತೆಗದು ಇಟ್ಟುಕೊಂಡಲ್ಲಿ ಎಲ್ಲಾ ಋತುವಿನಲ್ಲಿಯೂ ಉಪಯೋಗಿಸಲರ್ಹವಾದ ವಿರೇಚನೌಷಧವಾಗುತ್ತದೆ, ಸ್ನಿಗ್ಧರಾದವರು ಇದನ್ನು ತೆಗದುಕೊಳ್ಳಬಹುದು.

ಅಭಯಾಮರಿಚಂಶುಂಠಿವಿಡಂಗಾಮಲಕಾನಿಚ ॥ ೨೬ ॥
ಪಿಪ್ಪಲೀಪಿಪ್ಪಲೀಮೂಲಂತ್ವಕ್ಪತ್ರಂಮುಸ್ತಮೇವಚ ॥
ಏತಾನಿಸಮಭಾಗಾನಿದಂತೀಚದ್ವಿಗುಣಾಭವೇತ್ ॥ ೨೭ ॥
ತ್ರಿವೃದಷ್ಟಗುಣಾಜ್ಞೇಯಾಷಡ್ಗುಣಾಚಾತ್ರಶರ್ಕರಾ ॥
ಮಧುನಾಮೋದಕಾನ್ಕೃತ್ವಾಕರ್ಷಮಾತ್ರಪ್ರಮಾಣತಃ ॥ ೨೮ ॥
ಏಕೈಕಂಭಕ್ಷಯೇತ್ಪ್ರಾತಶ್ಶೀತಂಚಾನುಪಿಬೇಜ್ಜಲಂ ॥
ತಾವದ್ವಿರಿಚ್ಯತೇಜಂತುರ್ಯಾವದುಷ್ಣಂನಸೇವತೇ ॥ ೨೯ ॥
ಪಾನಾಹಾರವಿಹಾರೇಷುಭವೇನ್ನಿರ್ಯಂತ್ರಣಸ್ಸದಾ ॥
ವಿಷಮಜ್ವರಮಂದಾಗ್ನಿಪಾಂಡುಕಾಸಭಗಂದರಾನ್ ॥ ೩೦ ॥
ದುರ್ನಾಮಕುಷ್ಠಗುಲ್ಮಾರ್ಶೋಗಲಗಂಡಭ್ರಮೋದರಾನ್ ॥
ವಿದಾಹಪ್ಲೀಹಮೇಹಾಂಶ್ಚಯಕ್ಷ್ಮಾಣಂನಯನಾಮಯಾನ್ ।೩೧।
ವಾತರೋಗಾಸ್ತಥಾಧ್ಮಾನಂಮೂತ್ರಂಕೃಛ್ರಾಣಿಚಾಶ್ಮರೀಂ ॥
ಪೃಷ್ಠಪಾರ್ಶ್ವೋರುಜಘನಂಜಂಘೋದರರುಜಂಜಯೇತ್ ॥೩೨॥
ಸತತಂಶೀಲನಾದೇಷಾಂಪಲಿತಾನಿಪ್ರಣಾಶಯೇತ್ ॥
ಅಭಯಾಮೋದಕಾಹ್ಯೇತೇರಸಾಯನವರಾಸ್ಮೃತಾಃ ॥ ೩೩ ॥

ವಿರೇಚನೋಪಯೋಗಿ ಅಭಯಾ ಮೋದಕಗಳನ್ನು ಹೇಳುತ್ತಾನೆ—ಅಳಲೆ ಕಾಯಿ, ಮೆಣಸು, ಶುಂಠಿ, ವಾಯವಿಳಂಗ, ನೆಲ್ಲಿ, ಚಟ್ಟುಹಿಪ್ಪಲಿ, ಮೋಡಿ, ದಾಲ್ಚಿನಿ, ತಾಳಿಸಪತ್ರೆ, ಗೇಕಿನಗೆಡ್ಡೆ, ಇವುಗಳು ಪ್ರತಿಯೊಂದು ಒಂದೊಂದು ತೂಕ, ಜಾಪಾಳದ ಬೀಜ ಇವುಗಳ ಎರಡರಷ್ಟು, ಎಂಟರಷ್ಟು ತಿಗಡೆ, ಆರರಷ್ಟು ಹುಡಿಸಕ್ಕರೆ, ಇವುಗಳನ್ನು ಚನ್ನಾಗಿ ಚೂರ್ಣಮಾಡಿ ಜೇನುತುಪ್ಪದಲ್ಲಿ ಕಲಸಿ ಕರ್ಷಪ್ರಮಾಣ ಮಾತ್ರೆಗಳನ್ನು ಮಾಡಿ ಇಟ್ಟುಕೊಂಡು ಪ್ರತಿದಿವಸವೂ ಬೆಳಗ್ಯೆ ಒಂದು ಮಾತ್ರೆಯನ್ನು ಸೇವಿಸಿ ತಣ್ಣೀರನ್ನು ಸೇವಿಸಬೇಕು, ತಣ್ಣೀರನ್ನು ಸೇವಿಸಿ ದಂತೆಲ್ಲಾ ವಿರೇಚನವಾಗುತ್ತ ಹೋಗುತ್ತದೆ, ಬಿಸಿನೀರನ್ನು ಕುಡಿದ ಒಡನೆಯೇ ವಿರೇಚನ ನಿಲ್ಲುತ್ತದೆ, ಪಥ್ಯವೇನೂ ನಿಯಮವಿಲ್ಲ, ವಿಷಮಜ್ವರ, ಅಗ್ನಿಮಾಂದ್ಯ, ಪಾಂಡುರೋಗ, ಕೆಮ್ಮು, ಭಗಂದರ, ಕುಷ್ಠ, ಗುಲ್ಮ, ಮೂಲವ್ಯಾಧಿ, ಗಲಗಂಡ, ಬುದ್ಧಿಭ್ರಮಣ, ಉದರರೋಗ, ವಾತರೋಗಗಳು, ಹೊಟ್ಟೆಯುಬ್ಬರ, ಉರಿ ಮೂತ್ರ, ಅಶ್ಮರಿ ಎಂದರೆ ಮೂತ್ರದ್ವಾರದಲ್ಲಿ ಕಲ್ಲಿನಂತೆ ಸಿಕ್ಕಿಕೊಳ್ಳುವದು, ಬೆನ್ನುವಡತ, ಮಗ್ಗಲುವಡತ, ತೊಡೆವಡತ, ಸೊಂಟವಡತ, ಹೊಟ್ಟೆಯ ಉಪ ದ್ರವಗಳು, ಇವುಗಳೆಲ್ಲಾ ಈ ಮೋದಕದಿಂದ ಶಮನವಾಗುತ್ತವೆ, ಯಾವಾಗಲೂ ಈ ಮೋದಕಗಳನ್ನು ಸಾಧನೆ ಮಾಡುತ್ತ ಬಂದಲ್ಲಿ ಮುಪ್ಪು ಜಾಗ್ರತೆಯಾಗಿ ಬರುವದಿಲ್ಲ, ಈ ಅಭಯಾಮೋದಕಗಳು ರಸಾಯನಗಳೆಂದು ಪ್ರಸಿದ್ಧನಾಗಿವೆ.

ಪೀತ್ವಾವಿರೇಚನಂಶೀತಜಲೈಸ್ಸಂಸಿಚ್ಯಚಕ್ಷುಷೀ ॥
ಸುಗಂಧಿಕಿಂಚಿದಾಘ್ರಾಯತಾಂಬೂಲಂಶೀಲಯೇದ್ವರಂ ॥ ೩೪ ॥
ನಿವಾತಸ್ಥೋನವೇಗಾಂಶ್ಚಧಾರಯೇನ್ನಸ್ವಪೇತ್ತಥಾ ॥
ಶೀತಾಂಬುನಸ್ಪೃಶೇತ್ಕ್ವಾಪಿಕೋಷ್ಣನೀರಂಪಿಬೇನ್ಮುಹುಃ ॥೩೫॥

ವಿರೇಚನೌಷಧವನ್ನು ಕುಡಿದು ನಂತರ ತಣ್ಣೀರಿನಲ್ಲಿ ಕಣ್ಣುಗಳನ್ನು ಸವರ ಬೇಕು, ವಮನವಾದೀತಂಬ ಅನುಮಾನದಿಂದ ಯಾವದಾದರೂ ಸುಗಂಧವುಳ್ಳ ವಸ್ತುವನ್ನು ಮೂಸಿನೋಡಿ ತಾಂಬೂಲವನ್ನು ಹಾಕಿಕೊಳ್ಳಬೇಕು, ಗಾಳಿಯಲ್ಲಿರ ಬಾರದು, ಮಲಮೂತ್ರಗಳ ಪ್ರವೃತ್ತಿಯನ್ನು ತಡೆಯಬಾರದು, ವಿರೇಚನ ಪೂರೈಸುವ ವರಿಗೂ ಮಲಗಬಾರದು, ತಣ್ಣೀರನ್ನು ಕುಡಿಯಬಾರದು, ಪದೇಪದೇ ಬಿಸಿನೀರನ್ನು ಕುಡಿಯುತ್ತಿರಬೇಕು.

ಬಲಾಸೌಷಧಪಿತ್ತಾನಿವಾಯುರ್ವ್ಯಾಂತೇಯಥಾವ್ರಜೇತ್ ॥
ರೇಕಾತ್ತಥಾಮಲಂಪಿತ್ತಂಭೇಷಜಂಚಕಫೋವ್ರಜೇತ್ ॥ ೩೬ ॥

ವಮನವಾಗುವಾಗ್ಯೆ ಮೊದಲು ಶ್ಲೇಷ್ಮ, ನಂತರ ವಮನೌಷಧ, ಪಿತ್ತ, ವಾಯು, ಇವುಗಳು ಒಂದರಹಿಂದೊಂದು ವಮನವಾಗುವಂತೆ ವಿರೇಚನವಾಗು ವಾಗ್ಯೆ ಮಲ, ಪಿತ್ತ, ವಿರೇಚನೌಷಧ, ಶ್ಲೇಷ್ಮ ಇವುಗಳು ಕ್ರಮವಾಗಿ ಹೊರ ಬೀಳುತ್ತವೆ.

ದುರ್ವಿರಿಕ್ತಸ್ಯನಾಭೇಸ್ತುಸ್ತಬ್ಧತ್ವಂಕುಕ್ಷಿಶೂಲತಾ ॥
ಪುರೀಷವಾತಸಂಗಶ್ಚಕಂಡೂಮಂಡಲಗೌರವಃ ॥ ೩೭ ॥
ವಿದಾಹೋರುಚಿರಾಧ್ಮಾನಂಭ್ರಮಶ್ಛರ್ದಿಶ್ಚಜಾಯತೇ ॥

ಚನ್ನಾಗಿ ವಿರೇಚನವಾಗದೇ ಹೋದರೆ ನಾಭಿಸ್ಥಾನಗತವಾದ ಪಕ್ವಾಶಯವು ಸ್ತಬ್ಧವಾಗಿರುತ್ತದೆ, ಹೊಟ್ಟೆನೋವು, ಅಧೋವಾಯು, ಮಲ ಸಹ ಬಂದಾಗುವದು, ಮೈನವೆ, ಮೈಯ್ಯಲ್ಲೆಲ್ಲಾ ಗಂದೆಗಳೇಳುವುದು, ಮೈಭಾರ, ಮೈಯ್ಯುರಿ, ಅರುಚಿ, ಹೊಟ್ಟೆಯುಬ್ಬರ, ತಲೆತಿರುಗುವುದು, ವಮನ ಇವುಗಳು ಉಂಟಾಗುತ್ತವೆ

ತಂಪುನಃಪಾಚನೈಃಸ್ನೇಹೈಃಪಕ್ತ್ವಾಸಂಸ್ನೇಹ್ಯರೇಚಯೇತ್ ॥೩೮॥
ತೇನಾಸ್ಯೋಪದ್ರವಾಯಾಂತಿದೀಪ್ತಾಗ್ನಿರ್ಲಘುತಾಭವೇತ್ ॥

ವಿರೇಚನ ಸರಿಯಾಗದೆ ಪೂರ್ವೋಕ್ತವಾದ ಉಪದ್ರವಗಳು ಕಂಡುಬಂದಲ್ಲಿ ಪಾಚನೌಷಧಗಳನ್ನು ಕೊಟ್ಟು ಆಮಾವಸ್ಥೆಯಲ್ಲಿರುವ ದೋಷಗಳನ್ನು ಪಕ್ವವಾಗಮಾಡಿಸಿ ನಂತರ ಸ್ನೇಹಪಾನಮಾಡಿಸಿ ಚನ್ನಾಗಿ ಸ್ನಿಗ್ಧನಾದ ಮೇಲೆ ವಿರೇಚನೌಷಧವನ್ನು ಪುನಃ ಪಾನಮಾಡಿಸಿ ವಿರೇಚನಮಾಡಿಸಬೇಕು, ಈ ಕ್ರಮವನ್ನನುಸರಿಸಿದಲ್ಲಿ ಚನ್ನಾಗಿ ವಿರೇಚನವಾಗಿ ಉಪದ್ರವಗಳೆಲ್ಲಾ ಶಮನವಾಗುವುದಲ್ಲದೆ ಶರೀರಲಾಘವ, ಅಗ್ನಿದೀಪ್ತಿ ಇವುಗಳುಂಟಾಗುತ್ತವೆ.

ವಿರೇಕಸ್ಯಾತಿಯೋಗೇತುಮೂರ್ಛಾಭ್ರಂಶೋಗುದಸ್ಯಚ ॥ ೩೯ ॥
ಶೂಲಂಕಫಾತಿಯೋಗಸ್ಯಾನ್ಮಾಂಸಧಾವನಸನ್ನಿಭಂ ॥
ಮೇದೋನಿಭಂಜಲಾಭಾಸಂರಕ್ತಂವಾಪಿವಿರಿಚ್ಯತೇ ॥ ೪೦ ॥

ಅತಿಯಾಗಿ ವಿರೇಚನವಾದರೆ ಮೂರ್ಛೆ, ಗುದಭ್ರಂಶ ಅಂದರೆ ಆಸನಹೊರಬೀಳುವುದು, ಹೊಟ್ಟೆಶೂಲೆ, ಶ್ಲೇಷ್ಮವು ಅತಿಸಾರ ರೂಪವಾಗಿ ಹೋಗುವುದು, ಮಾಂಸವನ್ನು ತೊಳೆದ ನೀರಿನಂತೆಯೂ, ಕೊಬ್ಬಿನಂತೆಯೂ, ಶುದ್ಧ ನೀರಿನಂತೆಯೂ ಮಲಪ್ರವೃತ್ತಿಯಾಗುವುದಲ್ಲದೆ ರಕ್ತಭೇದಿ ಸಹ ಆಗುತ್ತದೆ.

ತಸ್ಯಶೀತಾಂಬುಭಿಸ್ಸಿಕ್ತ್ವಾಶರೀರಂತಂಡುಲಾಂಬುಭಿಃ ॥
ಮಧುಮಿಶ್ರೈಸ್ತಥಾಶೀತೈಃಕಾರಯೇದ್ವಮನಂಮೃದು ॥ ೪೧ ॥
ಸಹಕಾರತ್ವಚಃಕಲ್ಕೋದಧ್ನಾಸೌವೀರಕೇಣವಾ ॥
ಪಿಷ್ಟ್ವಾನಾಭಿಪ್ರಲೇಪೇನಹಂತ್ಯತೀಸಾರಮುಲ್ಬಣಂ ॥ ೪೨ ॥
ಅಜಾಕ್ಷೀರಂರಸಂವಾಪಿವ್ಯೈಷ್ಕಿರಂಹಾರಿಣಂತಥಾ ॥
ಶಾಲಿಭಿಷ್ಷಷ್ಟಿಕೈಸ್ಸ್ವಲ್ಪಂಮಸೂರೈರ್ವಾಪಿಭೋಜಯೇತ್ ॥ ೪೩ ॥
ಶೀತೈಸ್ಸಂಗ್ರಾಹಿಭಿರ್ದ್ರವ್ಯೈಃಕುರ್ಯಾತ್‌ಸಂಗ್ರಹಣಂಭಿಷಕ್ ॥

ಮಿತಿಮೀರಿ ವಿರೇಚನವಾಗಿ ಹಿಂದೆ ಹೇಳಿದ ಸಂಕಟಗಳು ಮತ್ತು ಉಪದ್ರವಗಳು ಕಂಡು ಬಂದಲ್ಲಿ ಮೈಮೇಲೆ ತಣ್ಣೀರನ್ನು ಸುರಿಯಬೇಕು, ಶೀತವೀರ್ಯವಾದ ಅಕ್ಕಿತೊಳದ ನೀರಿನ ಜೊತೆಯಲ್ಲಿ ಜೇನುತುಪ್ಪವನ್ನು ಕೂಡಿಸಿ ಕುಡಿಸಿ ಮೃದುವಾಗಿ ವಮನಮಾಡಿಸಬೇಕು, ಮಾವಿನ ಚಕ್ಕೆಯನ್ನು ಮೊಸರಿನಲ್ಲಿ ಆಗಲಿ ಅನ್ನದ ಹುಳಿನೀರಿನಲ್ಲಿಯಾಗಲಿ ಅರದು ನಾಭಿಗೆ ಲೇಪಹಾಕಿದಲ್ಲಿ ಭೇದಿ ನಿಲ್ಲುತ್ತದೆ, ಆಡಿನ ಹಾಲು, ಕೋಳಿಮೊಟ್ಟೆಯ ರಸ, ಜಿಂಕೆಯ ಮಾಂಸದ ರಸ, ಇವುಗಳನ್ನು ಕುಡಿಸಬೇಕು, ಅನ್ನ ಮತ್ತು ಮಸೂರ ಎಂಬ ಒಂದು ವಿಧವಾದ ತೊಗರಿಯ ಬೇಳೆ ಇವುಗಳಿಂದ ಸಿದ್ಧವಾದ ಆಹಾರವನ್ನು ಅಜೀರ್ಣವಾಗದಂತೆ ಲಘು ಪರಿಮಾಣದಲ್ಲಿ ಭೋಜನಮಾಡಿಸಬೇಕು, ಶೀತವೀರ್ಯಗಳಾಗಿಯೂ ಸಂಗ್ರಾಹಿ ಅಂದರೆ ಒಗರುರಸವುಳ್ಳ ಮಲಬಂಧಕಗಳಾದ ಪದಾರ್ಥಗಳಿಂದ ಮಲವನ್ನು ಬಂದಾಗುವಂತೆ ತಡೆಯಬೇಕು.

ಲಾಘವಂಮನಸಸ್ತುಷ್ಟಿರನುಲೋಮಂಗತೇನಿಲೇ ॥ ೪೪ ॥
ಸುವಿರಿಕ್ತಂನರಂಜ್ಞಾತ್ವಾಪಾಚನಂಪಾಯಯೇನ್ನಿಶಿ ॥

ಚನ್ನಾಗಿ ವಿರೇಚನವಾದರೆ ಶರೀರಲಾಘವ, ಮನಸ್ಸಿಗೆ ಹರ್ಷ ವಾಯು ಅಧೋಮುಖವಾಗಿ ನಡೆಯುತ್ತಿರುವುದು, ಈ ಸುಲಕ್ಷಣಗಳೆಲ್ಲಾ ಕಾಣುತ್ತವೆ, ಇದರಿಂದ ಚನ್ನಾಗಿ ವಿರೇಚನವಾಯಿತೆಂದು ಊಹಿಸಿ ಪಾಚನೌಷಧಗಳಿಂದ ಸಾಧಿತಗಳಾದ ಮಾಂಸರಸಗಳನ್ನು ರಾತ್ರಿ ಕುಡಿಯಲು ಕೊಡಬೇಕು

ಇಂದ್ರಿಯಾಣಾಂಬಲಂಬುದ್ಧೇಃಪ್ರಸಾದಂವಹ್ನಿದೀಪನಂ ॥ ೪೫ ॥
ಧಾತುಸ್ಥೈರ್ಯವಯಸ್ಥೈರ್ಯಂಭವೇದ್ರೇಚನಸೇವನಾತ್ ॥

ವಿರೇಚನೌಷಧವನ್ನು ಸೇವಿಸಿ ಚನ್ನಾಗಿ ವಿರೇಚನವಾದಲ್ಲಿ ಚಕ್ಷುರಾದಿ ಇಂದ್ರಿಯಗಳು ತಮ್ಮ ಕೆಲಸಗಳಲ್ಲಿ ಶಕ್ತಗಳಾಗುತ್ತವೆ, ಬುದ್ಧಿಯು ಪ್ರಸನ್ನವಾಗಿಯೂ ಜಠರಾಗ್ನಿಯು ಚನ್ನಾಗಿ ಪ್ರದೀಪ್ತವಾಗಿಯೂ ರಸಾದಿ ಧಾತುಗಳು ಸ್ಥಿರವಾಗಿಯೂ ಇರುತ್ತವೆ, ಮುಪ್ಪು ಜಾಗ್ರತೆ ಬರುವುದಿಲ್ಲ.

ಪ್ರವಾತಸೇವಾಶೀತಾಂಬುಸ್ನೇಹಾಭ್ಯಂಗಮಜೀರ್ಣತಾಂ ॥ ೪೬ ॥
ವ್ಯಾಯಾಮಂಮೈಥುನಂಚೈವನಸೇವೇತವಿರೇಚಿತಃ ॥

ವಿರೇಚನೌಷಧ ಸೇವನಮಾಡಿದವನು ಅನುವರ್ತಿಸಬೇಕಾದ ನಿಯಮಗಳೇನಂದರೆ—ಹೆಚ್ಚಿಗೆ ಗಾಳಿಯಲ್ಲಿರಬಾರದು, ತಣ್ಣೀರನ್ನು ಉಪಯೋಗಿಸಬಾರದು, ಅಭ್ಯಂಜನಸ್ನಾನ ಮಾಡಬಾರದು, ವ್ಯಾಯಾಮ ಮತ್ತು ಸ್ತ್ರೀಸಂಗಗಳನ್ನು ಕೆಲವು ದಿವಸ ಬಿಟ್ಟುಬಿಡಬೇಕು.

ಇಲ್ಲಿಗೆ ಚತುರ್ಥೋಽಧ್ಯಾಯ ಸಂಪೂರ್ಣ.

---

# ಐದನೆಯ ಅಧ್ಯಾಯ.

**ವಸ್ತಿರ್ದ್ವಿಧಾನುವಾಸಾಖ್ಯೋನಿರೂಹಶ್ಚತತಃಪರಂ ॥**
**ಬಸ್ತಿಭಿರ್ದೀಯತೇಯಸ್ಮಾತ್ತಸ್ಮಾದ್ವಸ್ತಿರಿತಿಸ್ಮೃತಃ ॥ ೧ ॥**

ಬಸ್ತಿ ಎಂದರೆ ಆಧುನಿಕ ವೈದ್ಯ ಪ್ರಪಂಚದಲ್ಲಿ ವ್ಯವಹಾರದಲ್ಲಿರುವ ಎನಿಮಾ ಎಂಬ ಉಪಕರಣಕ್ಕೆ ಸರಿಹೋಲುವ ಒಂದಾನೊಂದು ಉಪಕರಣದಿಂದ ಮಾಡತಕ್ಕ ಶರೀರಶೋಧನಕ್ಕೆ ಹೆಸರು. ಯಂತ್ರಸಾಮಗ್ರಿಗಳು ಕಡಮೆಯಾದ ಆಯುರ್ವೇದ ಕಾಲದಲ್ಲಿ ಮೃಗಾದಿಗಳ ಮೂತ್ರಕೋಶವನ್ನಾಗಲಿ ಅದಕ್ಕೆ ಸಮಾನವಾದ ಚರ್ಮದ ಚೀಲವನ್ನಾಗಲಿ ಮಾಡಿಕೊಂಡು ಈ ವಿಧವಾದ ಸಾಧನವನ್ನು ನಿರ್ಮಿಸಿ ಶರೀರಶೋಧನೆಗೆ ಉಪಯೋಗಿಸುತ್ತಿದ್ದುದರಿಂದ ಈ ಉಪಕರಣಕ್ಕೆ ಬಸ್ತಿ ಎಂಬ ಹೆಸರು ವ್ಯವಹಾರದಲ್ಲಿ ಬಂದಿರುತ್ತದೆ, ಈ ಬಸ್ತಿ ಎಂದರೆ ಇದರಿಂದ ಮಾಡತಕ್ಕ ಶರೀರಶೋಧನವು ಎರಡು ವಿಧ—ಅನುವಾಸನ, ನಿರೂಹ ಎಂಬದಾಗಿ.

**ಯಃಸ್ನೇಹೈರ್ದೀಯತೇಸಸ್ಯಾದನುವಾಸನನಾಮತಃ ॥**
**ಕಷಾಯಕ್ಷೀರತೈಲೈರ್ಯೋನಿರೂಹಸ್ಸನಿಗದ್ಯತೇ ॥ ೨ ॥**

ಯಾವದಾದರೂ ಸ್ನೇಹ ಎಂದರೆ ತೈಲಗಳಿಂದ ಮಾತ್ರವೆ ಕೊಡತಕ್ಕ ಬಸ್ತಿಗೆ ಅನುವಾಸನಬಸ್ತಿ ಎಂಬದಾಗಿ ಹೆಸರು,-ಮೂಲಿಕೆಗಳ ಕಷಾಯ ಹಾಲು ಮತ್ತು ತೈಲ ಇವುಗಳನ್ನು ಕೂಡಿಸಿ ಕೊಡತಕ್ಕದ್ದಕ್ಕೆ ನಿರೂಹಬಸ್ತಿ ಎಂದು ಹೆಸರು.

ತತ್ರಾನುವಾಸನಾಖ್ಯೋಹಿಬಸ್ತಿರ್ಯಸ್ಸೋತ್ರಕಥ್ಯತೇ ॥
ಪೂರ್ವಮೇವತತೋಬಸ್ತಿರ್ನಿರೂಹಾಖ್ಯೋಭವಿಷ್ಯತಿ ॥ ೩ ॥
ನಿರೂಹಾದುತ್ತರಂಚೈವಬಸ್ತಿಸ್ಸ್ಯಾದುತ್ತರಾಭಿಧಃ ॥

ಮೊದಲು ಅನುವಾಸನಬಸ್ತಿ ವಿಷಯವನ್ನೂ ನಂತರ ನಿರೂಹಬಸ್ತಿ ವಿಷಯವನ್ನೂ ನಿರೂಹಬಸ್ತಿಯ ನಂತರ ಉತ್ತರಬಸ್ತಿ ಎಂಬ ಬಸ್ತಿಯ ವಿಷಯವನ್ನೂ ಕ್ರಮವಾಗಿ ವಿವರಿಸುತ್ತಾನೆ

ಅನುವಾಸನಭೇದಶ್ಚಮಾತ್ರಾಬಸ್ತಿರುದೀರಿತಃ ॥ ೪ ॥
ಪಲದ್ವಯಂತಸ್ಯಮಾತ್ರಾತಸ್ಮಾದರ್ಧಾಪಿವಾಭವೇತ್ ॥

ಮೊದಲನೆಯದಾದ ಅನುವಾಸನಬಸ್ತಿಯಲ್ಲಿ ಮಾತ್ರಾಬಸ್ತಿ ಎಂಬ ಒಂದು ಭೇದ ಉಂಟು, ಅನುವಾಸನಬಸ್ತಿಯಲ್ಲಿ ಉಪಯೋಗಿಸತಕ್ಕ ಸ್ನೇಹದ ಮಾತ್ರೆ ಎಂದರೆ ಅಳತೆಯನ್ನು ಪ್ರಕರಣಾನುರೋಧೇನ ನಿಷ್ಕರ್ಷೆಮಾಡಿದಲ್ಲಿ ಅದಕ್ಕೇನೇ ಮಾತ್ರಾಬಸ್ತಿ ಎಂಬ ವ್ಯವಹಾರ, ಅಳತೆಯು ಎರಡು ಪಲ, ಒಂದು ಪಲ, ಈ ರೀತಿಯಾಗಿರತಕ್ಕದ್ದು.

ಅನುವಾಸ್ಯಸ್ತು ರೂಕ್ಷಸ್ಸ್ಯಾತ್ತೀಕ್ಷ್ಣಾಗ್ನಿಃ ಕೇವಲಾನಿಲೀ ॥ ೫ ॥

ಸ್ನೇಹಪಾನಾದಿಗಳಿಲ್ಲದೆ ರೂಕ್ಷನಾದವನು ಅತೀ ತೀಕ್ಷ್ಣವಾದ ಜಠರಾಗ್ನಿ ಉಳ್ಳವನು, ಕೇವಲ ವಾತರೋಗದವನು ಇವರಿಗೆ ಅನುವಾಸನ ಬಸ್ತಿಯನ್ನು ಕೊಡಬೇಕು.

ನಾನುವಾಸ್ಯಸ್ತು ಕುಷ್ಠೀ ಸ್ಯಾನ್ಮೇಹೀ ಸ್ಥೂಲಸ್ತಥೋದರೀ ॥
ನಾಸ್ಥಾಪ್ಯಾ ನಾನುವಾಸ್ಯಾಸ್ತೇ ಜೀರ್ಣೋನ್ಮಾದತೃಡರ್ದಿತಾಃ ॥ ೬ ॥
ಶೋಕಮೂರ್ಛಾಭಯಶ್ವಾಸಾರುಚಿಕಾಸಕ್ಷಯಾತುರಾಃ ॥

ಕುಷ್ಠರೋಗಿ, ಮೇಹರೋಗಿ, ಮೇದಸ್ಸು ಹೆಚ್ಚಿ ಸ್ಥೂಲನಾದವನು, ಉದರರೋಗಿ, ಇವರುಗಳಿಗೆ ಅನುವಾಸನಬಸ್ತಿಯನ್ನು ಕೊಡಬಾರದು, ಅಜೀರ್ಣ ಹುಚ್ಚು, ಬಾಯಾರಿಕೆ, ದುಃಖ, ಮೂರ್ಛೆ, ಅರುಚಿ, ಭಯ, ಉಬ್ಬಸ, ಕೆಮ್ಮು, ಕ್ಷಯರೋಗ, ಇವುಗಳುಳ್ಳವರಿಗೆ ಅನುವಾಸನಬಸ್ತಿ ಮತ್ತು ನಿರೂಹಬಸ್ತಿ ಎರಡನ್ನೂ ಕೊಡಬಾರದು.

ನೇತ್ರಂ ಕಾರ್ಯಂ ಸುವರ್ಣಾದಿಧಾತುಭಿರ್ವೃಕ್ಷವೇಣುಭಿಃ ॥ ೭ ॥
ನಲೈರ್ದಂತೈರ್ವಿಷಾಣಾಗ್ರೈರ್ಮಣಿಭಿರ್ವಾ ವಿಧೀಯತೇ ॥
ಏಕವರ್ಷಾತ್ತು ಷಡ್ವರ್ಷಂ ಯಾವನ್ಮಾನಂ ಷಡಂಗುಲಂ ॥ ೮ ॥
ತತೋ ದ್ವಾದಶಕಂ ಯಾವನ್ಮಾನಂ ಸ್ಯಾದಷ್ಟಸಮ್ಮಿತಂ ॥
ತತಃ ಪರಂ ದ್ವಾದಶಭಿರಂಗುಲೈರ್ನೇತ್ರದೀರ್ಘತಾ ॥ ೯ ॥
ಮುದ್ಗಛಿದ್ರಂ ಕಲಾಯಾಮುಂ ಛಿದ್ರಂ ಕೋಲಾಸ್ಥಿಸನ್ನಿಭಂ ॥
ಯಥಾಸಂಖ್ಯಂ ಭವೇನ್ನೇತ್ರಂ ಶ್ಲಕ್ಷ್ಣಂ ಗೋಪುಚ್ಛಸನ್ನಿಭಂ ॥ ೧೦ ॥
ಆತುರಾಂಗುಷ್ಠಮಾನೇನ ಮೂಲೇ ಸ್ಥೂಲಂ ವಿಧೀಯತೇ ॥
ಕನಿಷ್ಠಿಕಾಪರೀಣಾಹಮಗ್ರೇ ಚ ಗುಟಿಕಾಮುಖಂ ॥ ೧೧ ॥
ತನ್ಮೂಲೇ ಕರ್ಣಿಕೇ ದ್ವೇ ಚ ಕಾರ್ಯೇ ಭಾಗಾಚ್ಚತುರ್ಥಕಾತ್ ॥
ಯೋಜಯೇತ್ತತ್ರ ಬಸ್ತಿಂ ಚ ಬಂಧದ್ವಯವಿಧಾನತಃ ॥ ೧೨ ॥
ಮೃಗಾಜಸೂಕರಗವಾಂ ಮಹಿಷಸ್ಯಾಪಿ ವಾ ಭವೇತ್ ॥
ಮೂತ್ರಕೋಶಸ್ಯ ಬಸ್ತಿಸ್ತು ತದಲಾಭೇನ ಚರ್ಮಜಾ ॥ ೧೩ ॥
ಕಷಾಯರಕ್ತಸ್ಸುಮೃದುರ್ಬಸ್ತಿಸ್ನಿಗ್ಧೋ ದೃಢೋ ಹಿತಃ ॥
ವ್ರಣಬಸ್ತೇಸ್ತು ನೇತ್ರಂ ಸ್ಯಾತ್ ಶ್ಲಕ್ಷ್ಣಮಷ್ಟಾಂಗುಲೋನ್ಮಿತಂ ೧೪
ಮುದ್ಗಛಿದ್ರಂ ಗೃಧ್ರಪಕ್ಷನಳಿಕಾಪರಿಣಾಹಿ ಚ ॥

ಬಸ್ತಿಯನ್ನು ನಿರ್ಮಾಣಮಾಡಿಕೊಳ್ಳಲು ಆವಶ್ಯಕವಾದ ಸಾಮಗ್ರಿಗಳು ಮೊದಲನೆಯದ ಬಸ್ತಿನೇತ್ರ, ಅಂದರೆ ಗುದದ್ವಾರದಿಂದ ಪ್ರವೇಶಮಾಡಿಸತಕ್ಕ ಕೊಳವೆ, ಇದನ್ನು ಸುವರ್ಣರಜತಾದಿ ಧಾತುಗಳಿಂದಲಾಗಲಿ ಯಾವದಾದರೂ ಮರದಿಂದಲಾಗಲಿ ಬಿದಿರಿನಿಂದಲಾಗಲಿ ಟೊಳ್ಳಾಗಿರುವ ಯಾವದಾದರೂ ಹುಲ್ಲು ಗಣಕಿನಿಂದಲಾಗಲಿ, ದಂತದಿಂದಲಾಗಲಿ ಯಾವದಾದರೂ ಪ್ರಾಣಿಗಳ ಕೊಂಬಿನಿಂದಲಾಗಲಿ ಅನುಕೂಲವಿದ್ದಲ್ಲಿ ರತ್ನಗಳಿಂದಲಾಗಲಿ ಕಲ್ಲಿನಿಂದಲಾಗಲಿ ಮಾಡಿಸಬಹುದು, ಬಸ್ತಿಪ್ರಯೋಗ ಮಾಡತಕ್ಕವರ ವಯಸ್ಸಿನ ಮೇಲೆ ನೇತ್ರದ ಉದ್ದವನ್ನು ನಿಷ್ಕರ್ಷಿಸಿಕೊಳ್ಳಬೇಕು, ಆರು ವರುಷದ ವರಿಗೂ ಆರು ಅಂಗುಲ ನಂತರ ಹನ್ನೆರಡು ವರುಷದ ವರಿಗೂ ಎಂಟು ಅಂಗುಲ, ಅಲ್ಲಿಂದಾಚೆಗೆಲ್ಲಾ ಹನ್ನೆರಡು ಅಂಗುಲ, ಈ ರೀತಿ ಉದ್ದವಿರಬೇಕು, ಆರಂಗುಲದ ನೇತ್ರದ ಒಳಗಿರುವ ಟೊಳ್ಳು, ಹೆಸರು ಹಸಿಯದು ಹಿಡಿಯುವಷ್ಟಿರಬೇಕು, ಎಂಟಂಗುಲದರ ಟೊಳ್ಳು ಬಟಾಣಿ ಹಿಡಿಸುವಷ್ಟಿರಬೇಕು, ಹನ್ನೆರಡಂಗುಲದ್ದಕ್ಕೆ ಬೋರೇಬೀಜ ಹಿಡಿಸುವಷ್ಟು ಟೊಳ್ಳಿರಬೇಕು, ನೇತ್ರವು ಗೋಪುಚ್ಛದ ಹಾಗೆ ಬುಡದ ಕಡೆ ದಪ್ಪನಾಗಿಯೂ ಗುದಕ್ಕೆ ಪ್ರವೇಶವಾಗತಕ್ಕ ತುದಿಯ ಕಡೆ ಸಣ್ಣನಾಗಿಯೂ ಇರಬೇಕು, ಬಸ್ತಿಯನ್ನು ಪ್ರಯೋಗಿಸತಕ್ಕವನ ಅಂಗುಷ್ಠದ ಬೆರಳಿನಷ್ಟು ನೇತ್ರದ ಬುಡ ದಪ್ಪನಾಗಿಯೂ ಕಿರುಬೆರಳಿನಷ್ಟು ದಪ್ಪನಾಗಿ ನೇತ್ರದ ಮುಖವೂ ಇರಬೇಕು, ನೇತ್ರದ ತುದಿಯನ್ನು ಗುಳಿಗೆಯ ಹಾಗೆ ಗುಂಡಗೆ ಗುದಕ್ಕೆ ಅಪಾಯವಿಲ್ಲದಂತೆ ಮಾಡಿರಬೇಕು, ನೇತ್ರದ ಆಳತೆಯನ್ನು ನಾಲ್ಕು ಭಾಗ ಮಾಡಿ ಮುಖದ ಕಡೆಗೆ ಮೂರು ಭಾಗ ಬಿಟ್ಟು ಅಂದರೆ ಬಸ್ತಿಯನ್ನು ಸೇರಿಸತಕ್ಕ ಮೊದಲನೆಯ ಭಾಗದಲ್ಲಿ ಎರಡು ಕಿವಿಗಳನ್ನು ಮಾಡಿರಬೇಕು, ಈ ಕಿವಿಯ ವರಿಗೂ ಬಸ್ತಿಯ ಒಳಕೆ ನೇತ್ರವನ್ನು ತೂರಿಸಿ ಕಟ್ಟುಗಳನ್ನು ಹಾಕಬೇಕು, ಕಿವಿಗಳು ಇರುವದು ಒಂದು ವೇಳೆ ಕಟ್ಟು ಸಡಿಲವಾಗಿದ್ದರೂ ಬಸ್ತಿನೇತ್ರವು ಗುದದೊಳಕ್ಕೆ ನುಸಿಂಕೊಳ್ಳದಂತೆ ತಡೆಯುವುದಕ್ಕಾಗಿದೆ, ಇಷ್ಟಾದರೆ ಬಸ್ತಿನೇತ್ರವು ಸಿದ್ಧವಾದ ಹಾಗಯಿತು, ಇನ್ನು ಆಡು ಹುಲ್ಲೆ ಹಂದಿ ಮೊದಲಾದ ಪ್ರಾಣಿಗಳ ಮತ್ತು ಪಸುವಿನ ಮೂತ್ರಕೋಶವನ್ನು ಸಂಪಾದಿಸಿ ಆದಕ್ಕೆ ಕಷಾಯ ರಸಪ್ರಧಾನವಾದ ದ್ರವ್ಯ ಕಷಾಯಗಳಿಂದ ಹದಮಾಡಿಸಿ ಕೆಂಪು ಬಣ್ಣ ಕೊಟ್ಟು ಚನ್ನಾಗಿ ಜಿಡ್ಡನ್ನು ಹಚ್ಚಿಸಿ ಗಟ್ಟಿಯಾಗಿರುವಂತೆ ನೋಡಿಕೊಳ್ಳಬೇಕು, ಇದು ಗುದದ್ವಾರದಿಂದ ಶರೀರಶೋಧನಾರ್ಥವಾಗಿ ಉಪಯೋಗಿಸತಕ್ಕ ಬಸ್ತಿಯ ಸ್ವರೂಪವಾಯಿತು, ವ್ರಣಗಳ ಕಲ್ಮಷವನ್ನು ತೊಳೆಯಲು ಉಪಯೋಗಿಸುವ ಬಸ್ತಿಯ ನೇತ್ರವು ಎಂಟಂಗುಲ ಉದ್ದವಾಗಿರಬೇಕು, ರಂಧ್ರವು ಹೆಸರುಕಾಳು ಹಿಡಿಯುವಷ್ಟಿರಬೇಕು, ಹದ್ದಿನ ಗರಿಯ ಬುಡದಲ್ಲಿರುವ ಟೊಳ್ಳು ಕೊಳವೆಯಷ್ಟು ದಪ್ಪವಿದ್ದರೆ ಸಾಕು.

ಶರೀರೋಪಚಯಂವರ್ಣಂಬಲಮಾರೋಗ್ಯಮಾಯುಷಃ ॥ ೧೫ ॥
ಕುರುತೇಪರಿವೃದ್ಧಿಂಚಬಸ್ತಿಸ್ಸಮ್ಯಗುಪಾಸಿತಃ ॥

ಬಸ್ತಿವಿಧಿಯಲ್ಲಿ ಉಕ್ತವಾದ ಕ್ರಮದಿಂದ ಬಸ್ತಿಯನ್ನು ಸೇವಿಸುತ್ತ ಬಂದಲ್ಲಿ ಶರೀರದ ಅಭಿವೃದ್ಧಿಯನ್ನೂ ಕಾಂತಿಯನ್ನೂ ಶಕ್ತಿಯನ್ನೂ ಆರೋಗ್ಯವನ್ನೂ ಆಯುರ್ವೃದ್ಧಿಯನ್ನೂ ಉಂಟುಮಾಡುತ್ತದೆ.

ದಿವಾಶೀತೇವಸಂತೇಚಸ್ನೇಹಬಸ್ತಿಃಪ್ರದೀಯತೇ ॥ ೧೬ ॥
ಗ್ರೀಷ್ಮವರ್ಷಾಶರತ್ಕಾಲೇರಾತ್ರೌಸ್ಯಾದನುವಾಸನಂ ॥
ನಚಾತಿಸ್ನಿಗ್ಧಮಶನಂಭೋಜಯಿತ್ವಾನುವಾಸಯೇತ್ ॥ ೧೭ ॥
ಮದಂಮೂರ್ಛಾಂಚಜನಯೇದ್ವಿಧಾಸ್ನೇಹಃಪ್ರಯೋಜಿತಃ ॥
ರೂಕ್ಷಂಭುಕ್ತವತೋತ್ಯನ್ನಂಬಲಂವರ್ಣಂಚಹೀಯತೇ ॥ ೧೮ ॥

ಹೇಮಂತ, ಶಿಶಿರ, ವಸಂತ ಋತುಗಳಲ್ಲಿ ಹಗಲು ಹೊತ್ತಿನಲ್ಲಿ ಸ್ನೇಹಬಸ್ತಿಯನ್ನು ಕೊಡಬೇಕು, ಗ್ರೀಷ್ಮ, ವರ್ಷ, ಶರತ್, ಈ ಋತುಗಳಲ್ಲಿ ಅನುವಾಸನ ಬಸ್ತಿಯನ್ನು ರಾತ್ರಿವೇಳೆಯಲ್ಲಿ ಕೊಡಬೇಕು, ಅತಿಯಾಗಿ ಜಿಡ್ಡುಳ್ಳ ಭೋಜನ ಮಾಡಿ ಸ್ನೇಹಬಸ್ತಿಯನ್ನು ತೆಗದುಕೊಳ್ಳಬಾರದು, ಸ್ನೇಹಸಹಿತವಾದ ಭೋಜನವನ್ನೂ ಮಾಡಿ ಬಸ್ತಿಯಿಂದಲೂ ಸ್ನೇಹವನ್ನು ತೆಗದುಕೊಂಡಲ್ಲಿ ಎರಡು ವಿಧವಲ್ಲಿ ಸ್ನೇಹವು ಹೊಟ್ಟೆಗೆ ಸೇರಿದಂತಾಗಿ ಮತ್ತತೆ ಮತ್ತು ಮೂರ್ಛೆ ಇವುಗಳನ್ನು ಉಂಟುಮಾಡುತ್ತದೆ, ಸ್ನೇಹರಹಿತವಾಗಿ ಮತ್ತು ಅತಿಯಾಗಿ ಭೋಜನಮಾಡಿ ಬಸ್ತಿಯನ್ನು ತೆಗದುಕೊಂಡರೆ ಶರೀರದ ಬಲ ಮತ್ತು ಕಾಂತಿ ಇವುಗಳು ಹಾಳಾಗಿ ಹೋಗುತ್ತವೆ.

ಹೀನಮಾತ್ರಾವುಭೌಬಸ್ತೀನಾತಿಕಾರ್ಯಕರೌಸ್ಮೃತೌ ॥
ಅತಿಮಾತ್ರೌತಥಾನಾಹಕ್ಲಮಾತೀಸಾರಕಾರಕೌ ॥ ೧೯ ॥

ಹಿಂದೆ ಹೇಳಿದ ಎರಡು ವಿಧವಾದ ಬಸ್ತಿಗಳಿಗೂ ಉಕ್ತವಾದ ದ್ರವದ್ರವ್ಯಗಳನ್ನು ಸ್ವಲ್ಪ ಪರಿಮಾಣದಲ್ಲಿ ಅಂದರೆ ಕಡಮೆಯಾಗಿ ಉಪಯೋಗಿಸಿದಲ್ಲಿ ಅದರಿಂದ ಅಷ್ಟು ಪ್ರಯೋಜನವಾಗುವುದಿಲ್ಲ, ಹೆಚ್ಚಿಗೆ ಪರಿಮಾಣದಲ್ಲಿ ಉಪಯೋಗಿಸಿದರೆ ಹೊಟ್ಟೆಉಬ್ಬರ, ಬಳಲಿಕೆ, ಅತಿಸಾರ, ಇವುಗಳು ಉಂಟಾಗುತ್ತವೆ, ಆದ್ದರಿಂದ ಹೆಚ್ಚುಕಡಮೆಯಾಗಿ ಉಪಯೋಗಿಸಬೇಕಾರದು.

ಉತ್ತಮಸ್ಯಪಲೈಷ್ಷಡ್ಭಿರ್ಮಧ್ಯಮಸ್ಯಪಲೈಸ್ತ್ರಿಭಿಃ ॥
ಪಲಸ್ಯಾರ್ಧೇನಹೀನಸ್ಯಯುಕ್ತಾಮಾತ್ರಾನುವಾಸನೇ ॥ ೨೦ ॥

ಉತ್ತಮಬಲವುಳ್ಳ ಮನುಷ್ಯನಿಗೆ ಅನುವಾಸನಬಸ್ತಿಗಾಗಿ ಉಪಯೋಗಿಸುವ ದ್ರವದ್ರವ್ಯ ಪರಿಮಾಣವು ಆರು ಪಲ, ಮಧ್ಯಮಬಲವುಳ್ಳವನಿಗೆ ಮೂರುಪಲ, ಹೀನಬಲವುಳ್ಳವನಿಗೆ ಒಂದುವರೆಪಲ ಎಂದು ಗೊತ್ತುಮಾಡಿಕೊಳ್ಳಬೇಕು.

ಶತಾಹ್ವಾಸೈಂಧವಾಭ್ಯಾಂಚದೇಯಂಸ್ನೇಹೇಚಚೂರ್ಣಕಂ ॥
ತಸ್ಮಾತ್ರೋತ್ತಮಮಧ್ಯಾಂತಾಷಟ್ ಚತುರ್ದ್ವಯಮಾಷಕೈಃ ೨೧

ಸದಾಪ, ಸೈಂಧವಲವಣ ಇವುಗಳ ಚೂರ್ಣವನ್ನು ಬಸ್ತಿಗೆ ಉಪಯೋಗಿಸುವ ಸ್ನೇಹದ ಜೊತೆಗೆ ಸೇವಿಸಬೇಕು, ಉತ್ತಮ ಪರಿಮಾಣ ಆರು ಮಾಷ, ಮಧ್ಯಮ ಪರಿಮಾಣ ನಾಲ್ಕು ಮಾಷ, ಕನಿಷ್ಠ ಪರಿಮಾಣ ಎರಡು ಮಾಷ, ಈ ರೀತಿಯಾಗಿ ಗೊತ್ತುಮಾಡಿಕೊಳ್ಳಬೇಕು.

ವಿರೇಚನಾತ್ಸಪ್ತರಾತ್ರೇಗತೇಜಾತಬಲಾಯಚ ॥
ಭುಕ್ತಾನ್ನಾಯಾನುವಾಸ್ಯಾಯಬಸ್ತಿರ್ದೇಯೋನುವಾಸನಃ ॥೨೨॥
ಅಥಾನುವಾಸ್ಯಂಸ್ವಭ್ಯಕ್ತಂಉಷ್ಣಾಂಬುಸ್ವೇದಿತಂಶನೈಃ ॥
ಭೋಜಯಿತ್ವಾಯಥಾಶಾಸ್ತ್ರಂಕೃತಚಂಕ್ರಮಣಂತತಃ ॥ ೨೩ ॥
ಉತ್ಸೃಷ್ಟಾನಿಲವಿಣ್ಮೂತ್ರಂಯೋಜಯೇತ್‌ಸ್ನೇಹಬಸ್ತಿನಾ ॥
ಸುಪ್ತಸ್ಯವಾಮಪಾರ್ಶ್ವೇನವಾಮಜಂಘಾಪ್ರಸಾರಿಣಃ ॥ ೨೪ ॥
ಕುಂಚಿತಾಪರಜಂಘಸ್ಯನೇತ್ರಂಸ್ನಿಗ್ಧಗುದೇನ್ಯಸೇತ್ ॥
ಬಧ್ವಾವಸ್ತಿಮುಖಂಸೂತ್ರೈರ್ವಾಮಹಸ್ತೇನಧಾರಯೇತ್ ॥ ೨೫ ॥
ಪೀಡಯೇದ್ದಕ್ಷಿಣೇನೈವಮಧ್ಯವೇಗೇಸಧೀರಧೀಃ ॥
ಜೃಂಭಾಕಾಸಕ್ಷವಾದೀಂಶ್ಚಬಸ್ತಿಕಾಲೇನಕಾರಯೇತ್ ॥ ೨೬ ॥
ತ್ರಿಂಶನ್ಮಾತ್ರಾಮಿತಃಕಾಲಃಪ್ರೋಕ್ತೋಬಸ್ತೇಸ್ತುಪೀಡನೇ ॥
ತತಃಪ್ರಣಿಹಿತಸ್ನೇಹಉತ್ತಾನೋವಾಕ್‌ಶತಂಭವೇತ್ ॥ ೨೭ ॥
ಜಾನುಮಂಡಲಮಾವೇಷ್ಟ್ಯ ಕುರ್ಯಾತ್ ಛೋಟಿಕಯಾಯುತಂ ॥
ಏಕಾಮಾತ್ರಾಭವೇದೇಷಾಸರ್ವತ್ರೈಷವಿನಿಶ್ಚಯಃ ॥ ೨೮ ॥
ಪ್ರಸಾರಿತೈಸ್ಸರ್ವಗಾತ್ರೈರ್ಯಥಾವೀರ್ಯಂವಿಸರ್ಪತಿ ॥

ಬಸ್ತಿಪ್ರಯೋಗಕ್ರಮವೆಂತೆಂದರೆ—ವಿರೇಚನೌಷಧವನ್ನು ತೆಗದುಕೊಂಡು ಏಳು ದಿವಸ ಕಳದ ಮೇಲೆ ಶರೀರದಲ್ಲಿ ಚನ್ನಾಗಿ ಬಲವಿರುವಾಗ್ಯೆ ಉಕ್ತರೀತಿಯಲ್ಲಿ ಮಿತವಾಗಿ ಭೋಜನಮಾಡಿಸಿ ಅನುವಾಸನಬಸ್ತಿಯನ್ನು ಕೊಡಬೇಕು, ಬಸ್ತಿಯನ್ನು ಕೊಡುವ ಮೊದಲು ಚನ್ನಾಗಿ ತೈಲಾಭ್ಯಂಗಮಾಡಿಸಿ ಉಷ್ಣೋದಕ

ದಿಂದ ಸ್ವೇದನಮಾಡಿಸಿ ನಿಯಮಾನುಸಾರ ಭೋಜನಮಾಡಿಸಿ ಮಲಮೂತ್ರ ಅಪಾನವಾಯುಗಳು ಸಡಲುವಂತೆ ಕೊಂಚ ಸಂಚಾರವೂ ಮಾಡಿಸಿ ಮಲಮೂತ್ರ ಮತ್ತು ವಾಯುಗಳು ಸಡಲುವಂತಿದ್ದರೆ ಅದನ್ನೆಲ್ಲಾ ನಿವೃತ್ತಿಮಾಡಿಸಿ ಬಸ್ತಿ ಪ್ರಯೋಗವನ್ನು ಉಪಕ್ರಮಿಸಬೇಕು, ಪ್ರಥಮತಃ ಬಸ್ತಿಪ್ರಯೋಗವನ್ನು ಯಾರಿಗೆ ಮಾಡಬೇಕೋ ಪೂರ್ವೋಕ್ತ ಲಕ್ಷಣಯುಕ್ತನಾದ ಅಂತವನನ್ನು ಬಲ ಮಗ್ಗಲಾಗಿ ಮಲಗಿಸಿ ಬಲಗಾಲನ್ನು ನೀಡಿಕೊಳ್ಳುವಂತೆಯೂ ಬಸ್ತಿಯನ್ನು ಪ್ರಯೋಗಿಸಲನುಕೂಲವಾಗುವಂತೆ ಎಡಗಾಲನ್ನು ಮಡಿಸಿಕೊಂಡಿರುವಂತೆಯೂ ಮಾಡಬೇಕು, ನಂತರ ಗುದದ್ವಾರಕ್ಕೆ ಚನ್ನಾಗಿ ಎಣ್ಣೆಯನ್ನು ಹತ್ತಿಸಿ ಬಸ್ತಿನೇತ್ರ ವನ್ನು ಗುದದ್ವಾರದಿಂದ ಒಳಕ್ಕೆ ತೂರಿಸಿ ಬಸ್ತಿನೇತ್ರವೂ ಬಸ್ತಿಯೂ ಕೂಡಿರುವ ಪ್ರದೇಶದಲ್ಲಿ ಬಿಗಿದಿರುವ ಕಟ್ಟನ್ನು ಬಿಗಿಯಾಗಿ ಬಲಗೈಯಿಂದ ಹಿಡಿದುಕೊಂಡು ಎಡಗೈಯ್ಯಿಂದ ಬಸ್ತಿಯನ್ನು ಜೋರು ಮತ್ತು ನಿದಾನ ಈ ಎರಡೂ ಆಗದಂತೆ ಮಧ್ಯಮ ಸ್ಥಿತಿಯಲ್ಲಿ ಅಮುಕಬೇಕು, ವಸ್ತಿಯನ್ನು ತೆಗದುಕೊಳ್ಳುತಕ್ಕವನು ವಸ್ತಿಕರ್ಮ ನಡೆಯುವ ಕಾಲದಲ್ಲಿ ಆಕಳಿಸುವುದು, ಕೆಮ್ಮುವುದು, ಸೀನುವುದು ಇವುಗಳನ್ನು ಮಾಡಬಾರದು, ಬಸ್ತಿಯನ್ನು ಮೂವತ್ತು ಮಾತ್ರೆಯ ಕಾಲ ಅಮುಕಬೇಕು, ಸ್ನೇಹವೆಲ್ಲವೂ ಒಳಕ್ಕೆ ಹೋದ ಮೇಲೆ ಅಂಗತಂಕನಾಗಿ ಮಲಗಿ ಕೊಂಡು ನೂರುಮಾತ್ರೆಯ ಕಾಲ ಸುಮ್ಮನಿರಬೇಕು, ವಾಕ್‌ಶತಂ ಎಂದರೆ ನೂರುಮಾತ್ರೆ ಎಂದರ್ಥ, ಒಂದು ಮಾತ್ರೆ ಎಂದರೆ ಅಂಗೈನಿಂದ ಮೊಳಕಾಲನ್ನು ಒಂದು ಸಾರಿ ಸವರಿ ಒಂದು ಚುಟಿಕೆಯನ್ನು ಹೊಡೆದರ ಒಂದು ಮಾತ್ರೆ ಕಾಲ ವಾಗುತ್ತದೆ, ಬಸ್ತಿಯನ್ನು ತಗದುಕೊಂಡ ಮೇಲೆ ಮೇಲಕ್ಕೆ ಮುಖವನ್ನು ಮಾಡಿ ಕೊಂಡು ಕೈಕಾಲುಗಳನ್ನು ಚನ್ನಾಗಿ ನೀಡಿಕೊಂಡು ಮಲಗಿದಲ್ಲಿ ಬಸ್ತಿಯು ವೀರ್ಯ ವತ್ತರವಾಗಿ ಚನ್ನಾಗಿ ವ್ಯಾಪಿಸುತ್ತದೆ, ಈ ರೀತಿಯಾಗಿ ಮಲಗಿಕೊಂಡ ಮೇಲೆ ವೈದ್ಯನು ಬಸ್ತಿಯನ್ನು ತೆಗದುಕೊಂಡಿರುವವನ ಅಂಗೈ ಅಂಗಾಲುಗಳು ಮತ್ತು ಪೃಷ್ಠದ ಮೇಲೆ ಸಹ ಮೂರು ಸಾರಿ ಕಟ್ಟಬೇಕು, ಹಾಸಿಗೆಯ ಮೇಲೆ ಮಲಗಿರು ವವನು ಹಾಸಿಗೆಯ ಮೇಲೆಯೇ ಅಂಡನ್ನು ಎತ್ತಿ ಕುಕಬೇಕು, ಬಸ್ತಿಗ ಅಂಗ ವಾದ ಇಷ್ಟು ಕೆಲಸವೂ ನಡದ ಮೇಲೆ ಹಾಸಿಗೆಯ ಮೇಲಯೇ ಮಲಗಿಕೊಂಡು ಸುಖವಾಗಿ ನಿದ್ರಿಸಬೇಕು.

ಸಾನಿಲಃಸಪುರೀಷಶ್ಚಸ್ನೇಹಃಪ್ರತ್ಯೇತಿಯಸ್ಯನೃ ॥ ೨೯ ॥
ಉಪದ್ರವಂವಿನಾಶೀಘ್ರಂಸಸಮ್ಯಗನುವಾಸಿತಃ

ಬಸ್ತಿಪ್ರಯೋಗಮಾಡಿದ ಸ್ವಲ್ಪ ಕಾಲದೊಳಗಾಗಿಯೇ ಅಧೋವಾಯು ಮತ್ತು ಪುರೀಷ ಇವುಗಳಿಂದ ಸಹಿತವಾಗಿ ಗದದಲ್ಲಿ ಉರಿ ಮೊದಲಾದ ಉಪದ್ರವ ಗಳಿಲ್ಲದೆ ಬಸ್ತಿಯಿಂದ ಪ್ರಯೋಗಮಾಡಿದ ಸ್ನೇಹವು ಹೊರಕ್ಕೆ ಬಂದು ಬಿಟ್ಟರೆ ಅನುವಾಸನಬಸ್ತಿಕರ್ಮವು ಸರಿಯಾಗಿ ನಡೆಯಿತು ಎಂದು ತಿಳಿಯಬೇಕು.

ಜೀರ್ಣಾನ್ನಸ್ತ್ವಥಸಾಯಾಹ್ನೇಸ್ನೇಹೇಪ್ರತ್ಯಾಗತೇಪುನಃ ॥ ೩೦ ॥
ಲಘ್ವನ್ನಂಭೋಜಯೇತ್ಕಾಮಂದೀಪ್ತಾಗ್ನಿಸ್ತುನರೋಯದಿ ॥

ಬಸ್ತಿದ್ವಾರಾ ಒಳಕ್ಕೆ ಕೊಟ್ಟಿರುವ ತೈಲವು ಹಿಂದಿರಿಗಿ ಹೊರಟು ಬಂದ ಮೇಲೆ ಆಹಾರವು ಚನ್ನಾಗಿ ಜೀರ್ಣವಾಗಿ ಹಶಿವು ಚನ್ನಾಗಿ ಆಗಿರುವಲ್ಲಿ ಸಾಯಂ ಕಾಲದಲ್ಲಿ ಲಘುವಾದ ಆಹಾರವನ್ನು ಯಥೇಚ್ಛವಾಗಿ ಭೋಜನಮಾಡಿಸಬೇಕು.

ಅನುವಾಸಿತಾಯದಾತವ್ಯಮಿತರೇಹ್ನಿಸುಖೋದಕಂ ॥ ೩೧ ॥
ಧಾನ್ಯಶುಂಠೀಕಷಾಯಂವಾಸ್ನೇಹವ್ಯಾಪತ್ತಿನಾಶನಂ ॥

ಅನುವಾಸನಬಸ್ತಿಯನ್ನು ಕೊಟ್ಟ ಮಾರಣೆಯ ದಿವಸ ಅನುವಾಸಿತನಿಗೆ ಕುಡಿಯುವುದಕ್ಕೆ ಸುಖೋಷ್ಣವಾದ ಬಿಸಿನೀರನ್ನಾಗಲೀ ಅಥವಾ ಕೊತ್ತುಂಬರಿ ಬೀಜ, ಶುಂಠಿ ಇವುಗಳ ಸುಖೋಷ್ಣವಾದ ಕಷಾಯವನ್ನಾಗಲೀ ಪಾನಮಾಡಿಸಿ ದಲ್ಲಿ ಸ್ನೇಹಬಸ್ತಿಯಿಂದ ಸಂಭವಿಸಬಹುದಾದ ಕೆಡಕುಗಳು ನಿವಾರಣೆಯಾಗುತ್ತವೆ.

ಅನೇನವಿಧಿನಾಸಸ್ತ್ರಚಾಷ್ಟೌವಾನವವಾಪಿವಾ ॥ ೩೨ ॥
ವಿಧೇಯಾಬಸ್ತಯಸ್ತೇಷಾಮಂತರಾತುನಿರೂಹಣಾ ॥
ದತ್ತಸ್ತುಪ್ರಥಮೋಬಸ್ತಿಃಸ್ನೇಹಯೇದ್ಬಸ್ತಿವಂಕ್ಷಣೌ ॥ ೩೩ ॥
ಸಮ್ಯಗ್ದತ್ತೋದ್ವಿತೀಯಸ್ತುಮೂರ್ಧಸ್ಥಮನಿಲಂಜಯೇತ್ ॥
ಬಲಂವರ್ಣಂಚಜನಯೇತ್ತೃತೀಯಸ್ತುಪ್ರಯೋಜಿತಃ ॥ ೩೪ ॥
ಚತುರ್ಥಪಂಚಮೌದತ್ತೌಸ್ನೇಹಯೇತಾಂರಸಾಸೃಜೀ ॥
ಷಷ್ಠೋಮಾಂಸಂಸ್ನೇಹಯತಿಸಪ್ತಮೋಮೇದಏವಚ ॥ ೩೫ ॥
ಅಷ್ಟಮೋನವಮಶ್ಚಾಪಿಮಜ್ಜಾನಂಚಯಥಾಕ್ರಮಂ ॥
ಏವಂಶುಕ್ರಗತಾಣ್ದೋಷಾಣ್ದ್ವಿಗುಣಸ್ಸಾಧುಸಾಧಯೇತ್ ॥೩೬॥
ಅಷ್ಟಾದಶಾಷ್ಟಾದಶಕಾನ್ಬಸ್ತೀನಾಂಯೋನಿಷೇವತೇ ॥
ಸಕುಂಜರಬಲೋಶ್ವಸ್ಯಜವಂಜಯೇತ್ತುಲ್ಯೋಮರಪ್ರಭಃ ॥ ೩೭ ॥
ರೂಕ್ಷಾಯಬಹುವಾತಾಯಸ್ನೇಹಬಸ್ತಿರ್ದಿನೇದಿನೇ ॥
ದದ್ಯಾದ್ವೈದ್ಯಸ್ತಥಾನ್ಯೇಷಾಮಗ್ನ್ಯಾಬಾಧಾಮುಪಾಹರೇತ್ ॥ ೩೮ ॥
ಸ್ನೇಹೋಲ್ಪಮಾತ್ರೋರೂಕ್ಷಾಣಾಂದೀರ್ಘಕಾಲಮನತ್ಯಯಃ ॥
ತಥಾನಿರೂಹಸ್ನಿಗ್ಧಾನಾಮಲ್ಪಮಾತ್ರಃಪ್ರಶಸ್ಯತೇ ॥ ೩೯ ॥

ಈ ಹಿಂದೆ ಹೇಳಿದ ರೀತಿಯಿಂದ ಶ್ಲೇಷ್ಮ, ಪಿತ್ತ, ವಾತ ಎಂಬ ದೋಷಗಳನ್ನು ಅನುಸರಿಸಿ ಕ್ರಮವಾಗಿ ಏಳು ಎಂಟು ಒಂಭತ್ತು ಬಸ್ತಿಗಗನ್ನು ಕೊಡಬೇಕು, ಕ್ರಮವಾಗಿ ಇವುಗಳನ್ನೇ ಕೊಡದೆ ಮಧ್ಯೆ ಮಧ್ಯೆ ನಿರೂಹ (ಕಷಾಯ) ಬಸ್ತಿಯನ್ನೂ ಕೊಡುತ್ತಿರಬೇಕು. ಏಳೆಂಟುಒಂಭತ್ತು ಸಾರಿ ಬಸ್ತಿಯನ್ನು ಕೊಡಹೇಳುವುದರ ಪ್ರಯೋಜನವೇನೆಂದರೆ—ಮೊದಲನೆಯ ಸಾರಿ ಕೊಟ್ಟ ಬಸ್ತಿಯು ಮೂತ್ರಕೋಶ ಮತ್ತು ಮೂತ್ರಜನಕಾಂಗಗಳನ್ನು ಸ್ನೇಹಯುಕ್ತವನ್ನಾಗಿ ಮಾಡುತ್ತದೆ, ಎರಡನೆಯ ಸಾರಿ ಕೊಟ್ಟ ಬಸ್ತಿಯು ಶಿರೋಗತವಾದ ವಾತರೋಗಗಳನ್ನು ಗೆಲ್ಲುತ್ತದೆ, ಮೂರನೆಯ ಸಾರಿ ಕೊಟ್ಟ ಬಸ್ತಿಯು ಶರೀರಕ್ಕೆ ಬಲವನ್ನೂ ಕಾಂತಿಯನ್ನೂ ಕೊಡುತ್ತದೆ, ನಾಲ್ಕನೆಯ ಮತ್ತು ಐದನೆಯ ಸಾರಿ ಕೊಟ್ಟ ಬಸ್ತಿಗಳು ರಸಧಾತು ಮತ್ತು ರಕ್ತ ಇವುಗಳನ್ನು ಸ್ನಿಗ್ಧವನ್ನಾಗಿ ಮಾಡುತ್ತವೆ, ಆರನೆಯ ಸಾರಿ ಕೊಟ್ಟ ಬಸ್ತಿಯು ಮಾಂಸವನ್ನು ಸ್ನಿಗ್ಧವನ್ನಾಗಿ ಮಾಡುತ್ತದೆ, ಏಳನೆಯ ಸಾರಿ ಕೊಟ್ಟದ್ದು ಮೇದೋಧಾತುವಿಗೆ ಆಪ್ಯಾಯಕವಾಗುತ್ತದೆ, ಎಂಟನೆಯ ಮತ್ತು ಒಂಭತ್ತನೆಯ ಸಾರಿ ಕೊಟ್ಟ ಬಸ್ತಿಗಳು ಮಜ್ಜಧಾತುವನ್ನು ಸ್ನಿಗ್ಧವನ್ನಾಗಿ ಮಾಡುತ್ತವೆ, ಪೂರ್ವೋಕ್ತವಾದ ಬಸ್ತಿಗಳನ್ನು ಪೂರ್ವೋಕ್ತವಾದ ಕ್ರಮದಲ್ಲಿಯೇ ದ್ವಿಗುಣವಾಗಿ ಪ್ರಯೋಗಿಸಿದಲ್ಲಿ ಶುಕ್ರಗತವಾದ ದೋಷಗಳನ್ನು ಸಹ ನಿವಾರಣ ಮಾಡುತ್ತವೆ, ಅಲ್ಲದೆ ದ್ವಿಗುಣವಾಗಿ ಬಸ್ತಿಗಳನ್ನು ಕ್ರಮವಾಗಿ ಮನುಷ್ಯನು ಉಪಯೋಗಿಸುತ್ತ ಬಂದಲ್ಲಿ ಮನುಷ್ಯನು ಬಲದಲ್ಲಿ ಆನೆಗೆ ಸಮಾನನೂ ವೇಗದಲ್ಲಿ ಕುದುರೆಗೆ ಸಮಾನನೂ ಆಗುವುದಲ್ಲದೆ ದೇವತೆಗಳಿಗೆ ಸಮಾನವಾದ ಶರೀರಕಾಂತಿವುಳ್ಳವನಾಗುತ್ತಾನೆ, ರೂಕ್ಷನಾದ ವಾತಪ್ರಕೃತಿಯವನಿಗೆ ಪ್ರಮಾಣದಲ್ಲಿ ಅಲ್ಪವಾಗಿ ಸ್ನೇಹಬಸ್ತಿಯನ್ನು ದೀರ್ಘಕಾಲ ಕೊಡುತ್ತಿದ್ದರೂ ಅಪಾಯವೇನೂ ಇಲ್ಲ, ಹಾಗೆಯೇ ಸ್ನಿಗ್ಧನಾದವನಿಗೆ ಅಲ್ಪಪ್ರಮಾಣದಲ್ಲಿ ನಿರೂಹ (ಕಷಾಯ) ಬಸ್ತಿಯನ್ನು ಕೊಡುವುದೂ ಗುಣಕರವೇ ಆಗುತ್ತದೆ.

ಅಥವಾಯಸ್ಯತತ್ಕಾಲಂಸ್ನೇಹೋನಿರ್ಯಾತಿಕೇವಲಃ ॥
ತಸ್ಯಾನ್ಯೋಽಲ್ಪತರೋದೇಯೋನಹಿಸ್ನಿಹ್ಯತ್ಯತಿಷ್ಠತಿ ॥ ೪೦ ॥
ಅಶುದ್ಧಸ್ಯಮಲೋನ್ಮಿಶ್ರಃಸ್ನೇಹೋನೈತಿಯದಾಪುನಃ ॥
ತದಾಶೈಥಿಲ್ಯಮಾಧ್ಮಾನಂಶೂಲಂಶ್ವಾಸಶ್ಚಜಾಯತೇ ॥ ೪೧ ॥
ಪಕ್ವಾಶಯೇಗುರುತ್ವಂಚತತ್ರದದ್ಯಾನ್ನಿರೂಹಣಂ ॥
ತೀಕ್ಷ್ಣಂತೀಕ್ಷ್ಣೌಷಧೈರ್ಯುಕ್ತಾಫಲವರ್ತಿರ್ಹಿತಾತಥಾ ॥ ೪೨ ॥
ಯಥಾನುಲೋಮನಂವಾಯುರ್ಮಲಂಸ್ನೇಹಶ್ಚಜಾಯತೇ ॥
ತಥಾವಿರೇಚನಂದದ್ಯಾತ್ತೀಕ್ಷ್ಣಂನಸ್ಯಂಚಶಸ್ಯತೇ ॥ ೪೩ ॥
ಯಸ್ಯನೋಪದ್ರವಂಕುರ್ಯಾತ್ ಸ್ನೇಹಬಸ್ತಿರನಿಸ್ಸೃತಃ ॥
ಸರ್ವೋಽಲ್ಪೋವಾವೃತೋರೌಕ್ಷ್ಯಾದುಪೇಕ್ಷ್ಯಸ್ಸವಿಜಾನತಾ ॥ ೪೪ ॥

ಅನುವಾಸನ ಬಸ್ತಿಯನ್ನು ಕೊಟ್ಟ ಮೇಲೆ ಸ್ನೇಹವು ಒಳಗೆ ನಿಂತು ಕೆಲಸ ಪಡಿಸಿ ಮಲಾದಿಗಳನ್ನು ಹೊರಡಿಸದೆ ಕೂಡಲೇ ಹೊರಕ್ಕೆ ಬಂದು ಅಲ್ಪಪ್ರಮಾಣದಲ್ಲಿ ಮತ್ತೊಂದು ಸಾರಿ ಸ್ನೇಹಬಸ್ತಿಯನ್ನೇ ಕೊಡಬೇಕು, ಸ್ನೇಹಸ್ವೇದಾದಿಗಳಿಂದ ಸ್ನಿಗ್ಧನಾಗದವನಿಗೆ ಬಸ್ತಿಯನ್ನು ಪ್ರಯೋಗಿಸಿ ಪ್ರಯೋಗಿಸಿದ ಬಸ್ತಿಯು ಮಲಾದಿಗಳಿಂದ ಕೂಡಿ ಸಕಾಲದಲ್ಲಿ ಹೊರಬೀಳದೆ ಹೋದಲ್ಲಿ ಬಳಲಿಕೆ, ಹೊಟ್ಟೆಯುಬ್ಬರ, ಶೂಲೆ, ಊರ್ಧ್ವಶ್ವಾಸ ಮತ್ತು ಪಕ್ವಾಶಯದಲ್ಲಿ ಭಾರ ಇವುಗಳುಂಟಾಗುತ್ತವೆ, ಅಗ್ನಿ ತೀಕ್ಷ್ಣವಾದ ಔಷಧಗಳ ಕಷಾಯದಿಂದ ನಿರೂಹಬಸ್ತಿಯನ್ನು ಕೊಡಬೇಕು, ಅಥವಾ ತೀಕ್ಷ್ಣವಾದ ಔಷಧಿಗಳಿಂದ ಯುಕ್ತವಾದ ಫಲವರ್ತಿಯನ್ನಾದರೂ ಕೊಡಬೇಕು, ಅಥವಾ ಅಧೋವಾತ, ಅಂತರ್ಗತವಾದ ಮಲ, ಸ್ನೇಹ, ಇವುಗಳು ಹೊರಕ್ಕೆ ಬರುವಂತೆ ತೀಕ್ಷ್ಣವಾದ ನಸ್ಯವನ್ನಾಗಲಿ ಪ್ರಯೋಗಿಸಬೇಕು, ರೂಕ್ಷಶರೀರದವರಿಗೆ ನಿರೂಹಬಸ್ತಿಯನ್ನು ಕೊಟ್ಟು, ಬಸ್ತಿಯು ಹೊರಕ್ಕೆ ಬಾರದೆ ನಿಂತು ಅದರಿಂದ ಶರೀರಕ್ಕೆ ಹಿಂಸೆ ಏನೂ ಆಗದಿದ್ದಲ್ಲಿ ಅದಕ್ಕಾಗಿ ಮತ್ತೆ ಏನೂ ಮಾಡಬೇಕಾದ ಅವಶ್ಯಕವಿಲ್ಲ.

ಅನಾಯಾತಂತ್ವಹೋರಾತ್ರೇಸ್ನೇಹಂಸಂಶೋಧನೈರ್ಹರೇತ್ ॥
ಸ್ನೇಹಬಸ್ತಾವನಾಯಾತೇನಾನ್ಯಸ್ನೇಹೋವಿಧೀಯತೇ ॥ ೪೫ ॥

ಸ್ನೇಹಬಸ್ತಿಯನ್ನು ಪ್ರಯೋಗಿಸಿದ ಮೇಲೆ ಒಂದು ರಾತ್ರಿ ಮತ್ತು ಒಂದು ಹಗಲು ಸಹ ಸ್ನೇಹ ಬಸ್ತಿದ್ವಾರ ಒಳಹೊಕ್ಕ ಸ್ನೇಹವು ಹೊರಬೀಳದಿದ್ದಲ್ಲಿ ಶೋಧ (ವಿರೇಚ) ನೌಷಧಗಳನ್ನು ಕೊಟ್ಟು ಹೊರಕ್ಕೆ ಹೊರಡಿಸಬೇಕು, ಸ್ನೇಹಬಸ್ತಿಯು ಹೊರಬಿದ್ದ ಹೊರತು ಮತ್ತೆ ಸ್ನೇಹಪ್ರಯೋಗಮಾಡಲು ಅನುಮತಿಯಿಲ್ಲ.

ಗುಡೂಚ್ಯೇರಂಡಪೂತೀಕಭಾರ್ಗೀವೃಷಕರೋಹಿಷಂ ॥
ಶತಾವರೀಂಸಹಚರಂಕಾಕನಾಸಾಂಪಲೋನ್ಮಿತಾಂ ॥ ೪೬ ॥
ಯವಮಾಷಾತಸೀಕೋಲಕುಲತ್ಥಾನ್ಪ್ರಸೃತೋನ್ಮಿತಾನ್ ॥
ಚತುರ್ದ್ರೋಣೇಂಭಸಃಪಕ್ತ್ವಾದ್ರೋಣಶೇಷೇಣತೇನಚ ॥ ೪೭ ॥
ಪಚೇತ್ತೈಲಾಢಕಂಪೇಷ್ಯೈರ್ಜೀವನೀಯೈಃಪಲೋನ್ಮಿತೈಃ ॥
ಅನುವಾಸನಮೇತದ್ಧಿಸರ್ವವಾತವಿಕಾರನುತ್ ॥ ೪೮ ॥

ಅಮೃತವಳ್ಳಿ, ಹರಳುಬೇರು, ಹೊಂಗೆ, ಗಂಟುಭಾರಂಗಿ, ಆಡುಸೋಗೆ, ರೋಹಿಷ ಎಂಬ ಒಂದು ಬಗೆಯ ಹುಲ್ಲು, ಶತಾವರೀಬೇರು, ಗೊರಂಟಿ, ಕಾಕನಾಸಾ ಎಂಬ ಸ್ವನಾಮಪ್ರಸಿದ್ಧ, ಯವೆ, ಉದ್ದು, ಅಗಸೆ, ಬೋರೆ, ಹುರಳಿ,

ಇವುಗಳು ಪ್ರತಿಯೊಂದೂ ಎರಡೆರಡು ಪಲವನ್ನು ನಾಲ್ಕು ದ್ರೋಣ ನೀರಿನಲ್ಲಿ ಕಷಾಯಮಾಡಿ ಒಂದು ದ್ರೋಣಕ್ಕೆ ಇಳಿಸಿ ಒಂದು ಆಢಕ ಪರಿಮಾಣ ತೈಲವನ್ನು ಸೇರಿಸಿ ಒಂದೊಂದು ಪಲ ಜೀವನೀಯಗಣೋಕ್ತ ದ್ರವ್ಯಗಳ ಕಲ್ಕವನ್ನು ಸೇರಿಸಿ ತೈಲವನ್ನು ಪಕ್ವವಾಗಿ ಕಾಯಿಸಿ ಅನುವಾಸನ ಬಸ್ತಿಗೆ ಉಪಯೋಗಿಸಿದಲ್ಲಿ ಸಕಲ ವಿಧವಾದ ವಾತವ್ಯಾಧಿಗಳೂ ನಿವಾರಣವಾಗುವವು.

ಷಟ್ ಸಪ್ತತಿರ್ವ್ಯಾಪದಸ್ತು ಜಾಯಂತೇ ವಸ್ತಿಕರ್ಮಣಾ ॥
ದೂಷಿತಾತ್ಸಮುದಾಯೇನ ತಾಶ್ಚಿಕಿತ್ಸ್ಯಾಸ್ತು ಸುಶ್ರುತಾತ್ ॥ ೪೯ ॥

ಬಸ್ತಿಪ್ರಯೋಗಮಾಡೋಣದರಲ್ಲಿ ಬಸ್ತಿಗತವಾದ ದೋಷದಿಂದ ಮತ್ತು ಕಷಾಯತೈಲ ಇವುಗಳ ದೋಷದಿಂದ, ಸ್ನೇಹನಾಭ್ಯಭಾವದಿಂದ, ಈ ಕಾರಣಗಳಿಂದ ಎಪ್ಪತ್ತಾರು ರೋಗಗಳು ಹುಟ್ಟುತ್ತವೆ, ಸುಶ್ರುತದಲ್ಲಿ ಹೇಳಿರುವಂತೆ ಅವುಗಳಿಗೆ ಚಿಕಿತ್ಸೆ ಮಾಡಬೇಕು.

ಪಾನಾಹಾರವಿಹಾರಶ್ಚ ಪರಿಹಾರಶ್ಚ ಕೃತ್ಸ್ನಶಃ ॥
ಸ್ನೇಹಪಾನಸಮಾಃ ಕಾರ್ಯಾಃ ನಾತ್ರ ಕಾರ್ಯಾ ವಿಚಾರಣಾ ॥ ೫೦ ॥

ಸ್ನೇಹಪಾನ ವಿಷಯದಲ್ಲಿ ಯಾವ ಯಾವ ಪಾನ, ಆಹಾರ, ವಿಹಾರಗಳನ್ನು ಹೇಳಿರುತ್ತಾರೆಯೋ, ಯಾವದನ್ನು ತ್ಯಾಜ್ಯವೆಂದು ಹೇಳಿರುತ್ತಾರೆಯೋ ಬಸ್ತಿ ವಿಷಯದಲ್ಲಿಯೂ ಅದೇ ಪಾನಾಹಾರಾದಿ ನಿಯಮಗಳನ್ನನುಸರಿಸಿದರೆ ಸಾಕು. ಹೆಚ್ಚಿಗೆ ಏನೂ ವಿಚಾರ ಅವಶ್ಯಕವಿಲ್ಲ.

ಇಲ್ಲಿಗೆ ಐದನೆಯ ಅಧ್ಯಾಯ ಸಂಪೂರ್ಣ.

---

## ಆರನೆಯ ಅಧ್ಯಾಯ.

ನಿರೂಹಬಸ್ತಿರ್ಬಹುಧಾ ಭಿದ್ಯತೇ ಕಾರಣಾಂತರೈಃ ॥
ತೈರೇವ ತಸ್ಯ ನಾಮಾನಿ ಕೃತಾನಿ ಮುನಿಪುಂಗವೈಃ ॥ ೧ ॥
ನಿರೂಹಸ್ಯಾಪರಂ ನಾಮ ಪ್ರೋಕ್ತಮಾಸ್ಥಾಪನಂ ಬುಧೈಃ ॥
ಸ್ವಸ್ಥಾನಸ್ಥಾಪನಾದ್ದೋಷಧಾತೂನಾಂ ಸ್ಥಾಪನಂ ಮತಂ ॥ ೨ ॥

ನಿರೂಹಬಸ್ತಿ ಎಂದರೆ ಕಷಾಯಗಳು ಮತ್ತು ಸ್ನೇಹರಸಗಳು ಇವುಗಳನ್ನೆಲ್ಲಾ ಸೇರಿಸಿ ಬಸ್ತಿದ್ವಾರದಿಂದ ಪ್ರಯೋಗಿಸತಕ್ಕ ಬಸ್ತಿಗೆ ಹೆಸರು ಈ ನಿರೂಹಬಸ್ತಿಯು ಅನೇಕ ಕಾರಣಗಳಿಂದ ಅನೇಕ ವಿಧವಾಗಿ ಭಿನ್ನೈಸುತ್ತದೆ, ಯಾವ ಯಾವ ಕಾರಣಗಳಿಂದ ಅದು ಭಿನ್ನೈಸುತ್ತದೆಯೋ ಅದೇ ಕಾರಣ

ಗಳಿಂದಲೇ ಅದಕ್ಕೆ ಬೇರೆ ಬೇರೆ ಹೆಸರುಗಳನ್ನೂ ವ ಡಿದ್ದಾರೆ, ಈ ನಿರೂಹಬಸ್ತಿ ಗೇನೇ ದೋಷಗಳು ಮಿತಿಮೀರದಂತೆ ಸ್ವಸ್ವಸ್ಥಾನದಲ್ಲಿ ಸ್ವಸ್ವಪರಿಮಾಣದಲ್ಲಿ ನಿಲ್ಲಿಸುವುದರಿಂದ ಆಸ್ಥಾಪನಬಸ್ತಿ ಎಂದೂ ಹೆಸರುಂಟು.

ನಿರೂಹಸ್ಯಪ್ರಮಾಣಂತುಪ್ರಸ್ಥಂಪಾದೋತ್ತರಂಪರಂ ॥
ಮಧ್ಯಮಂಪ್ರಸ್ಥಮುದ್ದಿಷ್ಟಹೀನಂಚಕುಡವಾಸ್ತ್ರಯಃ ॥ ೩ ॥

ನಿರೂಹಬಸ್ತಿದ್ವಾರಾ ಉಪಯೋಗಿಸತಕ್ಕ ಪದ್ರವ್ಯಗಳು ಉತ್ತಮ ಪರಿ ಮಾಣ, ಒಂದೂಕಾಲು ಪ್ರಸ್ಥ ಅಂದರೆ ಎಂಭತ್ತು ತೊಲ ಮಧ್ಯಮ ಪರಿಮಾಣ, ಒಂದು ಪ್ರಸ್ಥ ಎಂದರೆ ಅರವತ್ತನಾಲ್ಕು ತೊಲ ಹೀನಪಮಾತ್ರೆ ಮೂರು ಕುಡವ ಅಂದರೆ ನಲವತ್ತೆಂಟು ತೊಲ ಎಂದು ತಿಳಿಯತಕ್ಕದ್ದು.

ಅತಿಸ್ನಿಗ್ಧೋತ್ಕ್ಲಿಷ್ಟದೋಷಕ್ಷತೋರಸ್ಕಃಕೃಶಸ್ತಥಾ ॥
ಆಧ್ಮಾನಚ್ಛರ್ದಿಹಿಕ್ಕಾರ್ಶಃಕಾಸಶ್ವಾಸಪ್ರಪೀಡಿತಃ ॥ ೪ ॥
ಗುದಶೋಥಾತಿಸಾರಾರ್ತೋವಿಷೂಚೀಕುಷ್ಠಸಂಯುತಃ ॥
ಗರ್ಭಿಣೀಮಧುಮೇಹೀಚನಾಸ್ಥಾಪ್ಯ ಜಲೋದರೀ ॥ ೫ ॥

ಅತಿ ಸ್ನಿಗ್ಧನಾದವನು, ವಮನವಾಗುವ ಹಿಂಪುಲ್ಲಿರುವವನು, ಉರಃಕ್ಷತ ವುಳ್ಳವನು, ಕೃಶನಾದವನು, ಊದಿಕೊಂಡಿರು ನು, ವಮನವಾದವನು, ಬಿಕ್ಕ ಳಿಕೆವುಳ್ಳವನು, ಮೂಲವ್ಯಾಧಿವುಳ್ಳವನು, ಕೆಮ್ಮು, ಉಬ್ಬಸ, ಇವುಗಳುಳ್ಳವನು, ಗುದದ್ವಾರದಲ್ಲಿ ಶೋಥೆ, ಅತಿಸಾರ ವಿಸೂಚಿ ಎಂದರೆ ಅಜೀರ್ಣ ಭೇದಿ ಇವುಗಳುಳ್ಳವನು, ಕುಷ್ಠರೋಗಿ, ಗರ್ಭಿಣಿ ರು, ಮಧುಮೇಹರೋಗವುಳ್ಳ ವರು, ಜಲೋದರವುಳ್ಳವರು, ಇವರುಗಳಿಗೆ ಹಬಸ್ತಿಯನ್ನು ಕೊಡಬಾರದು.

ವಾತವ್ಯಾಧಾವುದಾವರ್ತೇವಾತಾಸ ಷಮಜ್ವರೇ ॥
ಮೂರ್ಛಾತೃಷ್ಣೋದರಾನಾಹವ ಕೃಚ್ಛ್ರಾಶ್ಮರೀಷುಚ ॥ ೬ ॥
ವೃದ್ಧ್ಯಾಸೃಗ್ದರಮಂದಾಗ್ನಿಪ್ರಮೇ ನಿರೂಹಣಂ ॥
ಶೂಲೇಮ್ಲಪಿತ್ತೇಹೃದ್ರೋಗೇಯೋ ಯೋವ್ಯಾಧಿವದ್ಬುಧಃ ॥ ೭ ॥

ವಾತಜನ್ಯವಿಕಾರಗಳು— ಹೊಟ್ಟೆಯು , ವಾತರಕ್ತ, ವಿಷಮಜ್ವರ, ಮೂರ್ಛಾರೋಗ, ತೃಷ್ಣಾರೋಗ, ಜಲೋ ತಿರಿಕ್ತವಾದ ಸರ್ವ ವಿಧವಾದ ಉದರಗಳು, ಊದುವರೋಗ, ಮೂತ್ರಕೃ . ಅಶ್ಮರೀರೋಗ, ಸ್ತ್ರೀಯರ ಕುಸುಮರೋಗ, ಅಗ್ನಿಮಾಂದ್ಯ, ಪ್ರಮೇಹ, ಉದರಶೂಲೆ, ಆಮ್ಲಪಿತ್ತ, ಹೃದ್ರೋಗ, ಈ ವಿಪತ್ತುಗಳಲ್ಲಿ ನಿರೂಹಬಸ್ತಿಯನ್ನು ಉಪಯೋಗಿಸಬೇಕು.

ಉತ್ಸೃಷ್ಟಾನಿಲವಿಣ್ಮೂತ್ರಂ ಸ್ನಿಗ್ಧಸ್ವಿನ್ನಮಭೋಜಿತಂ ॥
ಮಧ್ಯಾಹ್ನೇ ಗೃಹಮಧ್ಯೇ ಚ ಯಥಾಯೋಗ್ಯಂ ನಿರೂಹಯೇತ್ ॥೮॥
ಸ್ನೇಹಬಸ್ತಿವಿಧಾನೇನ ಬುಧಃ ಕುರ್ಯಾನ್ನಿರೂಹಣಂ ॥
ಜಾತೇ ನಿರೂಹೇ ಚ ತತೋ ಭವೇದುತ್ಕಟಕಾಸನಃ ॥ ೯ ॥
ತಿಷ್ಠೇನ್ಮುಹೂರ್ತಮಾತ್ರಂ ತು ನಿರೂಹಾಗಮನೇಚ್ಛಯಾ ॥
ಅನಾಯಾತಂ ಮುಹೂರ್ತಂ ತು ನಿರೂಹಂ ಶೋಧನೈರ್ಹರೇತ್ ೧೦
ನಿರೂಹೈರೇವ ಮತಿಮಾನ್ ಕ್ಷಾರಮೂತ್ರಾಮ್ಲಸೈಂಧವೈಃ ॥

ನಿರೂಹಬಸ್ತಿಯನ್ನು ಕೊಡಬೇಕಾದರೆ ಮಲ, ಮೂತ್ರ, ಅಧೋವಾಯುಗಳನ್ನು ನಿವೃತ್ತಿಮಾಡಿಸಿ ಸ್ನೇಹಸ್ವೇದಗಳನ್ನೂ ಮಾಡಿಸಿ ಭೋಜನಕ್ಕೆ ಮೊದಲು ಮಧ್ಯಾನಕಾಲದಲ್ಲಿ ಬಿಸಲುಗಾಳಿಗಳ ಭಯವಿಲ್ಲದಂತೆ ಮನೆಯ ಮಧ್ಯದಲ್ಲಿ ಅನುವಾಸನಬಸ್ತಿಗೆ ಹೇಳಿರುವಂತೆಯೇ ಮಲಗಿಸಿ ನಿರೂಹಬಸ್ತಿಯನ್ನು ಕೊಡಬೇಕು, ನಿರೂಹಬಸ್ತಿಯನ್ನು ಕೊಟ್ಟಾದ ಮೇಲೆ ಒಂದು ಮುಹೂರ್ತ ಪರ್ಯಂತ ಕುಕ್ಕುರಗಾಲಲ್ಲಿ ಕುಳಿತಿರಬೇಕು, ಒಂದು ಮುಹೂರ್ತವಾದರೂ ನಿರೂಹಬಸ್ತಿಯು ಹಿಂದಕ್ಕೆ ಬಾರದೆ ಒಳಗೆ ನಿಂತಲ್ಲಿ ವಿರೇಚನೌಷಧಗಳಿಂದ ಅಥವಾ ನಿರೂಹಬಸ್ತಿಯಿಂದಲೇ ಆಗಲಿ ಯಾವದಾದರೂ ಕ್ಷಾರಗಳು. ಗೋಮೂತ್ರಾದಿಗಳು, ಹುಳಿಯಾದ ದ್ರವದ್ರವ್ಯಗಳು, ಸೈಂಧವಲವಣ ಮಿಶ್ರಿತವಾದ ದ್ರವದ್ರವ್ಯ ಇವುಗಳಿಂದ ಯುಕ್ತವಾದ ನಿರೂಹಬಸ್ತಿಯನ್ನಾದರೂ ಕೊಟ್ಟು ಮೊದಲು ಕೊಟ್ಟ ನಿರೂಹಬಸ್ತಿಯನ್ನು ಹೊರಕ್ಕೆ ಹೊರಡಿಸಬೇಕು.

ಯಸ್ಯ ಕ್ರಮೇಣ ಗಚ್ಛಂತಿ ವಿಟ್ ಪಿತ್ತ ಕಫವಾಯವಃ ॥ ೧೧ ॥
ಲಾಘವಂ ಚೋಪಜಾಯೇತ ಸುನಿರೂಹಂ ತಮಾದಿಶೇತ್ ॥

ನಿರೂಹಬಸ್ತಿಯನ್ನು ಕೊಟ್ಟ ಮೇಲೆ ಯಾವ ನಿರೂಹಿತನಿಗೆ ಮಲ, ಪಿತ್ತ, ಕಫ, ವಾಯು, ಇವುಗಳು ಕ್ರಮವಾಗಿ ಹೊರಬಿದ್ದು ಶರೀರದಲ್ಲಿ ಲಾಘವ ಉಂಟಾದಲ್ಲಿ ನಿರೂಹಬಸ್ತಿಯು ತನ್ನ ಕೆಲಸವನ್ನು ಮಾಡಿತೆಂದು ತಿಳಿಯಬೇಕು.

ಯಸ್ಯ ಸ್ಯಾದ್ಬಸ್ತಿರಲ್ಪಾಲ್ಪವೇಗೋ ಹೀನ ಮಲಾನಿಲಃ ॥ ೧೨ ॥
ಮೂರ್ಛಾರ್ತಿಜಾಡ್ಯಾರುಚಿಮಾನ್ ದುರ್ನಿರೂಹಂ ತಮಾದಿಶೇತ್ ॥

ನಿರೂಹಬಸ್ತಿಯನ್ನು ಕೊಟ್ಟ ಮೇಲೆ ನಿರೂಹಿತನಿಗೆ ಬಸ್ತಿಯು ಕ್ರಮವಾದ ವೇಗದಿಂದ ಹೊರಬೀಳದೆ ಮಲ ಮತ್ತು ಅಧೋವಾಯುಗಳಿಲ್ಲದ ಬಸ್ತಿಯೊಡನೆ ಪ್ರಯೋಗಿಸಿದ ಕಷಾಯ ಮಾತ್ರ ಕೊಂಚ ಕೊಂಚ ಹೊರಬಿದ್ದು ನಿರೂಹಿತನಿಗೆ ಮೂರ್ಛೆ ಜಡತ್ವ ಅರುಚಿ ಇವುಗಳಿದ್ದಲ್ಲಿ ನಿರೂಹಬಸ್ತಿಯು ಸರಿಯಾಗಲಿಲ್ಲವೆಂದು ತಿಳಿಯಬೇಕು.

ಅನೇನವಿಧಿನಾಯುಂಜ್ಯಾನ್ನಿರೂಹಂಬಸ್ತಿದಾನವಿತ್ ॥ ೧೩ ॥
ದ್ವಿತೀಯಂವಾತೃತೀಯಂವಾಚತುರ್ಥಂವಾಯಥೋಚಿತಂ ॥

ಬಸ್ತಿಯನ್ನು ಕೊಡುವ ವಿಷಯದಲ್ಲಿ ಚನ್ನಾಗಿ ರೂಢಿ ಇರುವ ವೈದ್ಯನು ಹಿಂದೆ ಹೇಳಿದ ಮೇರೆಗೆ ನಿರೂಹಬಸ್ತಿಯನ್ನು ಕೊಡಬೇಕು, ಅವಶ್ಯಕವಿದ್ದಲ್ಲಿ ದೋಷಾನುರೋಧೇನ ಎರಡು ಮೂರು ನಾಲ್ಕು ಸಾರಿಯಾದರೂ ಯಥೋಚಿತ ವಾಗಿ ಬಸ್ತಿಯನ್ನು ಕೊಡಬಹುದು.

ಪಿತ್ತಶ್ಲೇಷ್ಮಾನಿಲಾವಿಷ್ಟಂಕ್ಷೀರಯೂಷರಸೈಃಕ್ರಮಾತ್ ॥ ೧೪ ॥
ನಿರೂಹಂಭೋಜಯಿತ್ವಾಕುತತಸ್ತಮನುವಾಸಯೇತ್ ॥

ಪಿತ್ತಪ್ರಕೋಪದಲ್ಲಿ ಕ್ಷೀರ, ಶ್ಲೇಷ್ಮಪ್ರಕೋಪದಲ್ಲಿ ಯೂಷ, ವಾತಪ್ರಕೋಪ ದಲ್ಲಿ ಮಾಂಸರಸ, ಇವುಗಳಿಂದ ನಿರೂಹಬಸ್ತಿಯನ್ನು ಕೊಟ್ಟು ನಂತರ ಭೋಜನ ಮಾಡಿಸಿ ಆ ಮೇಲೆ ಅನುವಾಸನ ಬಸ್ತಿಯನ್ನು ಕೊಡಬೇಕು.

ಸುಕುಮಾರಸ್ಯವೃದ್ಧಸ್ಯಬಾಲಸ್ಯಚಮೃದುರ್ಹಿತಃ ॥ ೧೫ ॥
ಬಸ್ತಿಸ್ತೀಕ್ಷ್ಣಃಪ್ರಯುಕ್ತಸ್ತುತೇಷಾಂಹನ್ಯಾದ್ಬಲಾಯುಷೀ ॥

ಸುಕುಮಾರ ಅಂದರೆ ಮೃದುಪ್ರಕೃತಿಯವರಿಗೂ ಮುದುಕರಿಗೂ ಹುಡುಗ ರಿಗೂ ಮೃದುದ್ರವ್ಯಗಳಿಂದ ಕಷಾಯಮಾಡಿ ಬಸ್ತಿಗೆ ಪ್ರಯೋಗಿಸಬೇಕು, ಇಂತವರಿಗೆ ತೀಕ್ಷ್ಣವಾದ ಔಷಧಗಳಿಂದ ಸಿದ್ಧವಾದ ಬಸ್ತಿಯನ್ನು ಪ್ರಯೋಗಿಸಿ ದಲ್ಲಿ ಬಲ ಮತ್ತು ಆಯುಸ್ಸು ಇವುಗಳಿಗೆ ಹಾನಿಯುಂಟಾಗುತ್ತದೆ.

ದದ್ಯಾದುತ್ಕ್ಲೇಶನಂಪೂರ್ವಂಮಧ್ಯೆದೋಷಹರಂತತಃ ॥ ೧೬ ॥
ಪಶ್ಚಾತ್ಸಂಶಮನೀಯಂಚದದ್ಯಾದ್ಬಸ್ತಿಂವಿಚಕ್ಷಣಃ ॥

ಬಸ್ತಿಯನ್ನು ಕೊಡುವಾಗ್ಯೆ ಮೊದಲು ದೋಷಗಳು ಉದ್ರೇಕವಾಗುವಂತೆ ಬಸ್ತಿಯನ್ನು ಕೊಡಬೇಕು, ಎರಡನೆಯ ಸಾರಿ ಉದ್ರಿಕ್ತಗಳಾದ ದೋಷಗಳನ್ನು ಹೊರಗೆ ಹೊರಡಿಸತಕ್ಕ ಬಸ್ತಿಯನ್ನು ಕೊಟ್ಟು ಕೊನೆಯಲ್ಲಿ ದೋಷಗಳನ್ನು ಶಮವಾಡತಕ್ಕ ಬಸ್ತಿಯನ್ನು ಕೊಡಬೇಕು.

ಏರಂಡಬೀಜಂಮಧುಕಂಪಿಪ್ಪಲೀಸೈಂಧವಂವಚಾ ॥ ೧೭ ॥
ಹಪುಷಾಫಲಕಲ್ಕಂಚಬಸ್ತಿರುತ್ಕ್ಲೇಶನಃಸ್ಮೃತಃ ॥

ಹರಳುಬೀಜ, ಯಷ್ಟಿಮಧು, ಹಿಪ್ಪಲಿ, ಸೈಂಧವಲವಣ, ಬಜೆ, ಹಪುಷಾ ಅಂದರೆ ಸ್ವನಾಮಪ್ರಸಿದ್ಧ ಕಾಯಿಫಲ, ಇವುಗಳ ಕಲ್ಕದಿಂದ ಬಸ್ತಿಯನ್ನು ಕೊಡು ವುದು ಹಿಂದಿನ ಶ್ಲೋಕದಲ್ಲಿ ಹೇಳಿದ ಮೊದಲನೆಯದಾದ ಉತ್ಕ್ಲೇಶನಬಸ್ತಿ ಎನಿಸುತ್ತವೆ.

**ಶತಾಹ್ವಾಮಧುಕಂಬಿಲ್ವಂಕೌಟಜಂಫಲಮೇವಚ ॥ ೧೮ ॥**
**ಸಕಾಂಜಿಕಸ್ಸಗೋಮೂತ್ರೋಬಸ್ತಿರ್ದೋಷಹರೋಮತಃ ॥**

ಸದಾಪ, ಯಷ್ಟಿಮಧು, ಬಿಲ್ವದಬೇರು, ಕೊಡಶಿಗೆಕಾಯಿ, ಇವುಗಳನ್ನು ಅನ್ನದ ಹುಳಿನೀರಿನಲ್ಲಿ ಕಲ್ಕಮಾಡಿ ಗೋಮೂತ್ರ ಬೆರಸಿ ಬಸ್ತಿಗೆ ಪ್ರಯೋಗಿಸಿದಲ್ಲಿ ಹಿಂದೆ ಹೇಳಿದ ಎರಡನೆಯದಾದ ದೋಷಹರಬಸ್ತಿ ಎನ್ನಿಸುತ್ತದೆ.

**ಪ್ರಿಯಂಗುಮಧುಕಂಮುಸ್ತಂತಥೈವಚರಸಾಂಜನಂ ॥ ೧೯ ॥**
**ಸಕ್ಷೀರಶ್ಯಸ್ಯತೇಬಸ್ತಿರ್ದೋಷಾಣಾಂಶಮನಸ್ಸ್ಮೃತಃ ॥**

ಪ್ರಿಯಂಗು ಎಂದರೆ ಸ್ನಾನಾಮಪ್ರಸಿದ್ಧ, ಯಷ್ಟಿಮಧು, ಗೇಕಿನಗೆಡ್ಡೆ, ರಸಾಂಜನ ಇವುಗಳನ್ನು ಹಾಲಿನೊಡನೆ ಕಲ್ಕಮಾಡಿ ಬಸ್ತಿಗೆ ಪ್ರಯೋಗಿಸಿದಲ್ಲಿ ದೋಷಗಳನ್ನು ಶಮನಮಾಡುವುದರಿಂದ ಹಿಂದೆ ಹೇಳಿದ ದೋಷಶಮನಬಸ್ತಿ ಎನ್ನಿಸಿಕೊಳ್ಳುತ್ತದೆ.

**ಶೋಧನದ್ರವ್ಯನಿಃಕ್ವಾಥೈಸ್ತತ್ಕಲ್ಕೈಸ್ನೇಹಸೈಂಧವೈಃ ॥ ೨೦ ॥**
**ಯುಕ್ತಾಃಖಜೇನಮಥಿತಾಬಸ್ತಯಶ್ಶೋಧನಾಸ್ಸ್ಮೃತಾಃ ॥**

ಶೋಧನೀಯಗಣದಲ್ಲಿ ಹೇಳಿದ ದ್ರವ್ಯಗಳ ಕ್ವಾಥ, ಕಲ್ಕ, ತೈಲ, ಸೈಂಧವ ಲವಣ, ಇವುಗಳನ್ನೆಲ್ಲಾ ಕೂಡಿಸಿ ಚನ್ನಾಗಿ ಕಡದು ನಿರೂಹಬಸ್ತಿಗೆ ಉಪಯೋಗಿಸಿದರೆ ಚನ್ನಾಗಿ ಶೋಧನಮಾಡುತ್ತದೆ.

**ತ್ರಿಫಲಾಕ್ವಾಥಗೋಮೂತ್ರಕ್ಷೌದ್ರಕ್ಷಾರಸಮಾಯುತಾಃ ॥ ೨೧ ॥**
**ಉಷಕಾದಿಪ್ರತೀವಾಪಾಬಸ್ತಯೋಲೇಖನಾಸ್ಸ್ಮೃತಾಃ ॥**

ತ್ರಿಫಲಾಕಷಾಯ, ಗೋಮೂತ್ರ, ಜೇನುತುಪ್ಪ, ಯವಕ್ಷಾರ, ಮೊದಲಾದವುಗಳಿಂದ ಸುಶ್ರುತದಲ್ಲಿ ಹೇಳಿರುವ ಉಷಕಾದಿಗಣೋಕ್ತ ದ್ರವ್ಯಗಳ ಕಷಾಯದಿಂದಲೂ ಬಸ್ತಿಯನ್ನು ಕೊಟ್ಟರೆ ಅದು ಲೇಖನಬಸ್ತಿ (ಮೇದೋವೃದ್ಧಿಯಿಂದ ಸ್ಥೂಲರಾದವರನ್ನು ಕೃಶರಾಗುವಂತೆ ಮಾಡುವ ಉಪಾಯಕ್ಕೆ ಲೇಖನವೆಂದು ಹೆಸರು) ಎನ್ನಿಸುತ್ತದೆ.

**ಬೃಂಹಣದ್ರವ್ಯನಿಷ್ಕ್ವಾಥಾಃಕಲ್ಕೈರ್ಮಧುರಕೈರ್ಯುತಾಃ ॥ ೨೨ ॥**
**ಸರ್ಪಿರ್ಮಾಂಸರಸೋಪೇತಾಬಸ್ತಯೋಬೃಂಹಣಾಸ್ಸ್ಮೃತಾಃ ॥**

ಬೃಂಹಣದ್ರವ್ಯಗಳ ಕಷಾಯ, ಮಧುರವಸ್ತುಗಳ ಕಲ್ಕ, ತುಪ್ಪ, ಮಾಂಸರಸ, ಇವುಗಳನ್ನೆಲ್ಲಾ ಸೇರಿಸಿ ಬಸ್ತಿಯನ್ನು ಕೊಟ್ಟರೆ ಶರೀರಕ್ಕೆ ಪುಷ್ಟಿಯನ್ನು ಕೊಡುತ್ತದೆ.

ಬದರ್ಯೈರಾವತೀಶೇಲುಶಾಲ್ಮಲೀಧನ್ವನಾಗರಾಃ ॥ ೨೩ ॥
ಕ್ಷೀರಸಿದ್ಧಾಃಕ್ಷೌದ್ರಯುಕ್ತಾನಾವಸ್ಥಾಪಿಚ್ಛಿಲಸಂಜ್ಞಿತಾಃ ॥
ಅಜೋರಭ್ರೈಣರುಧಿರೈರ್ಯುಕ್ತಾದೇಯಾವಿಚಕ್ಷಣೈಃ ॥ ೨೪ ॥
ಮಾತ್ರಾಪಿಚ್ಛಿಲಬಸ್ತೀನಾಂಪಲೈರ್ದ್ವಾದಶಭಿರ್ಮತಾಃ ॥

ಬೋರೆಹಣ್ಣಿನ ತಿರಳು, ಕಳ್ಳಂಗಡ್ಲೆ, ಚಳ್ಳೆಹಣ್ಣು, ಬೂರಗದ ಮೇಣ, ಮರುಭೂಮಿಯಲ್ಲಿ ಹುಟ್ಟಿದ ಗೇಕಿನಗೆಡ್ಡೆ ಇವುಗಳನ್ನೆಲ್ಲಾ ಹಾಲಿನಲ್ಲಿ ಕಲ್ಕಮಾಡಿ ಜೇನುತುಪ್ಪ ಸೇರಿಸಿ, ಆಡುಕುರಿ ಜಿಂಕೆ ಇವುಗಳ ರಕ್ತವನ್ನೂ ಸಹ ಇದರೊಂದಿಗೆ ಸೇರಿಸಿ ಬಸ್ತಿಯನ್ನು ಕೊಟ್ಟಲ್ಲಿ ಪಿಚ್ಛಿಲ (ಜಿಗಟು) ಬಸ್ತಿ ಎನ್ನಿಸಿಕೊಳ್ಳುತ್ತದೆ, ಇದರ ಪ್ರಮಾಣ ಹನ್ನೆರಡು ಪಲ.

ದತ್ವಾದೌಸೈಂಧವಸ್ಯಾಕ್ಷಂಮಧುನಃಪ್ರಸೃತಿದ್ವಯಂ ॥ ೨೫ ॥
ವಿನಿರ್ಮಥ್ಯತತೋದದ್ಯಾತ್‌ಸ್ನೇಹಸ್ಯಪ್ರಸೃತಿತ್ರಯಂ ॥
ಏಕೀಭೂತೇತತಃಸ್ನೇಹೇಕಲ್ಕಸ್ಯಪ್ರಸೃತಿಂಕ್ಷಿಪೇತ್ ॥ ೨೬ ॥
ಸಂಮೂರ್ಛಿತೇಕಷಾಯಂತುಚತುಃಪ್ರಸೃತಿಸಮ್ಮಿತಂ ॥
ಕ್ಷಿಪ್ತ್ವಾವಿಮಥ್ಯದದ್ಯಾಚ್ಚನಿರೂಹಂಕುಶಲೋಭಿಷಕ್ ॥ ೨೭ ॥
ವಾತೇಚತುಷ್ಪಲಂಕ್ಷೌದ್ರಂದದ್ಯಾತ್‌ಸ್ನೇಹಸ್ಯಷಟ್ಪಲಂ ॥
ಪಿತ್ತೇಚತುಷ್ಪಲಂಕ್ಷೌದ್ರಂಸ್ನೇಹಂದದ್ಯಾತ್ಪಲತ್ರಯಂ ॥ ೨೮ ॥
ಕಫೇಚಷಟ್‌ಪಲಂಕ್ಷೌದ್ರಂಕ್ಷಿಪೇತ್‌ಸ್ನೇಹಂಚತುಷ್ಪಲಂ ॥

ಸೈಂಧವಲವಣ ಒಂದು ಅಕ್ಷಪ್ರಮಾಣ (ಒಂದು ತೊಲ), ಜೇನುತುಪ್ಪ ಎರಡು ಪ್ರಸೃತಿ (ಹದಿನಾರು ತೊಲ) ಇವೆರಡನ್ನೂ ಚನ್ನಾಗಿ ಕೂಡಿಕೊಳ್ಳುವಂತೆ ಕಡದು ಮೂರು ಪ್ರಸೃತಿ (ಇಪ್ಪತ್ತನಾಲ್ಕು ತೊಲ) ಸ್ನೇಹವನ್ನು ಕೂಡಿಸಬೇಕು, ಇವು ಮೂರೂ ಚನ್ನಾಗಿ ಕೂಡಿಕೊಳ್ಳುವಂತೆ ಕಡದು ಒಂದು ಪ್ರಸೃತಿ (ಎಂಟು ತೊಲ) ಕಲ್ಕವನ್ನೂ ನಾಲ್ಕು ಪ್ರಸೃತಿ (ಮೂವತ್ತೆರಡು ತೊಲ) ಕಷಾಯವನ್ನೂ ಕೂಡಿಸಿ ಚನ್ನಾಗಿ ಎಲ್ಲವೂ ಕೂಡಿಕೊಳ್ಳುವಂತೆ ಕಡದು ನಿರೂಹಬಸ್ತಿಯನ್ನು ಕೊಡಬೇಕು, ವಾತರೋಗದಲ್ಲಿ ನಾಲ್ಕು ಪಲ ಜೇನುತುಪ್ಪ, ಆರು ಪಲ ತೈಲ, ಪಿತ್ತರೋಗದಲ್ಲಿ ನಾಲ್ಕುಪಲ ಜೇನು ಮೂರುಪಲ ತೈಲ, ಕಫರೋಗದಲ್ಲಿ ಆರು ಪಲ ಜೇನು, ನಾಲ್ಕುಪಲ ತೈಲ ಈ ರೀತಿಯಾಗಿ ರೋಗಾನುಗುಣವಾಗಿ ತೈಲ ಮತ್ತು ಜೇನುತುಪ್ಪವನ್ನು ನಿರೂಹಬಸ್ತಿಗೆ ಸೇರಿಸಬೇಕು.

ಏರಂಡಕ್ವಾಥತುಲ್ಯಾಂಶಂಮಧುತೈಲಂಪಲಾಂಶರಂ ॥ ೨೯ ॥
ಶತಪುಷ್ಪಾಪಲಾರ್ಧೇನಸೈಂಧವಾರ್ಧೇನಸಂಯುತಂ ॥
ಮಧುತೈಲಕಸಂಜ್ಞೋಽಯಂಬಸ್ತಿಃಖಜವಿಲೋಡಿತಃ ॥ ೩೦ ॥
ಮೇದೋಗುಲ್ಮಕ್ರಿಮಿಪ್ಲೀಹಮಲೋದಾವರ್ತನಾಶನಃ ॥
ಬಲವರ್ಣಕರಶ್ಚೈವವೃಷ್ಯೋದೀಪನಬೃಂಹಣಃ ॥ ೩೧ ॥

ಹರಳುಬೇರಿನ ಕಷಾಯಮಾಡಿ ಜೇನುತುಪ್ಪ ಮತ್ತು ತೈಲ ಸಹ ಪಲ ಪ್ರಮಾಣ ಅದಕ್ಕೆ ಸೇರಿಸಿ ಸದಾಪಸೊಪ್ಪಿನ ರಸ ಸೈಂಧವಲವಣ ಇವುಗಳನ್ನು ಅದಕ್ಕೆ ಸೇರಿಸಿ ಕಡಗೋಲಿನಿಂದ ಚನ್ನಾಗಿ ಕಡದು ನಿರೂಹಬಸ್ತಿಯಾಗಿ ಉಪಯೋಗಿಸಿದರೆ ಮೇದೋದೋಷ, ಗುಲ್ಮರೋಗ, ಹೊಟ್ಟೆಯಲ್ಲಿ ಕ್ರಿಮಿಗಳು ಉತ್ಪನ್ನವಾಗುವುದು, ಪ್ಲೀಹಾಭಿವೃದ್ಧಿ, ಮಲಬಂಧ, ಉದಾವರ್ತ ಎಂಬ ಉದರರೋಗ, ಇವುಗಳು ನಿವಾರಣೆಯಾಗುವುದಲ್ಲದೆ ಶರೀರಕ್ಕೆ ಬಲ, ಕಾಂತಿ, ಪುಷ್ಟಿ, ಅಗ್ನಿವೃದ್ಧಿ, ವೀರ್ಯವೃದ್ಧಿ, ಇವುಗಳೆಲ್ಲವೂ ಉಂಟಾಗುತ್ತವೆ, ಈ ಬಸ್ತಿಗೆ ಮಧುತೈಲಕ ಎಂದು ಹೆಸರು.

ಕ್ಷೌದ್ರಾಜ್ಯಕ್ಷೀರತೈಲಾನಾಂಪ್ರಸೃತಂಪ್ರಸೃತಂಭವೇತ್ ॥
ಹಪುಷಾಸೈಂಧವಾಕ್ಷಾಂಶೋಬಸ್ತಿಸ್ಸ್ಯಾದ್ದೀಪನಃಪರಃ ॥ ೩೨ ॥

ಜೇನುತುಪ್ಪ, ತುಪ್ಪ, ಹಾಲು, ತೈಲ, ಇವು ಪ್ರತಿಯೊಂದೂ ಪ್ರಸೃತ ಎಂದರೆ ಎರಡು ಪಲ, ಹಪುಷಾ ಎಂಬ ಸ್ವನಾಮಪ್ರಸಿದ್ಧವಾದ ಮೂಲಿಕೆ ಮತ್ತು ಸೈಂಧವಲವಣ ಇವುಗಳು ಅಕ್ಷಪರಿಮಾಣ ಎಂದರೆ ಎರಡು ತೊಲ ಇವುಗಳನ್ನೆಲ್ಲಾ ಚನ್ನಾಗಿ ಕೂಡಿಸಿ ನಿರೂಹಬಸ್ತಿಯಾಗಿ ಉಪಯೋಗಿಸಿದಲ್ಲಿ ಅಗ್ನಿದೀಪನವಾಗುತ್ತದೆ.

ಏರಂಡಮೂಲನಿಕ್ವಾಥೋಮಧುತೈಲಂಸಸೈಂಧವಂ ॥
ಏಷಯುಕ್ತರಥೋಬಸ್ತಿಸ್ಸವಚಾಪಿಪ್ಪಲೀಫಲಃ ॥ ೩೩ ॥

ಹರಳುಬೇರಿನ ಕಷಾಯಕ್ಕೆ ಸೈಂಧವಲವಣ, ಜೇನುತುಪ್ಪ, ತೈಲ, ಇವುಗಳನ್ನು ಕೂಡಿಸಿ ಬಜೆ, ಹಿಪ್ಪಲಿ, ಗಂಟುಕಾರೇಕಾಯಿ ಇವುಗಳ ಚೂರ್ಣವನ್ನು ಕೂಡಿಸಿ ಚನ್ನಾಗಿ ಕಡಮ ನಿರೂಹಬಸ್ತಿಯಾಗಿ ಉಪಯೋಗಿಸಿಕೊಳ್ಳಬೇಕು, ಈ ಬಸ್ತಿಗೆ ಯುಕ್ತರಥ ಎಂದು ಹೆಸರು.

ಪಂಚಮೂಲಸ್ಯನಿಷ್ವಾಥಸ್ತೈಲಂಮಾಗಧಿಕಾಮಧು ॥
ಸಸೈಂಧವಸ್ಸಮಧುಕಸ್ಸಿದ್ಧಬಸ್ತಿರಿತಿಸ್ಮೃತಃ ॥ ೩೪ ॥

ಪಂಚಮೂಲ (ಬಿಲ್ವ, ಅಗ್ನಿಮಂಥ, ಸ್ಯೋನಾಕ, ಕಾಶ್ಮರಿ, ಪಾಟಲಿ) ಕಷಾಯ, ತಿಲತೈಲ, ಹಿಪ್ಪಲಿ, ಜೇನುತುಪ್ಪ, ಸೈಂಧವಲವಣ, ಮಧುಕ (ಯಷ್ಟಿ ಮಧುಸಾರವಾದ ರುಬಿಸೂಸ್ ಎಂಬ ವಸ್ತು) ಇವುಗಳನ್ನೆಲ್ಲಾ ಕೂಡಿಸಿ ನಿರೂಹ ಬಸ್ತಿಯಾಗಿ ಉಪಯೋಗಿಸಬಹುದು, ಇದಕ್ಕೆ ಸಿದ್ಧಬಸ್ತಿ ಎಂದು ಹೆಸರು.

ಸ್ನಾನಮುಷ್ಣೋದಕೈಃಕುರ್ಯಾತ್‌ದಿವಾಸ್ವಪ್ನಮಜೀರ್ಣತಾಂ ॥
ವರ್ಜಯೇದಪರಂಸರ್ವಮಾಚರೇತ್‌ಸ್ನೇಹಬಸ್ತಿವತ್ ॥ ೩೫ ॥

ನಿರೂಹಬಸ್ತಿಯನ್ನು ತೆಗದುಕೊಂಡವನು ಬಿಸಿನೀರಿನ ಸ್ನಾನಮಾಡಬೇಕು. ಹಗಲು ಮಲಗುವುದು, ಅಜೀರ್ಣವಾದ ಆಹಾರವನ್ನು ಸೇವಿಸುವುದು, ಇವುಗಳನ್ನು ಮಾಡಬಾರದು, ಉಳಿದದ್ದೆಲ್ಲಾ ಸ್ನೇಹಬಸ್ತಿ ನಿಯಮಗಳೇ ಇದಕ್ಕೂ ಅನ್ವಯಿಸುತ್ತವೆ

ಇಲ್ಲಿಗೆ ಆರನೆಯ ಅಧ್ಯಾಯವು ಸಂಪೂರ್ಣ.

---

## ಏಳನೆಯ ಅಧ್ಯಾಯವು.

ಅತಃಪರಂಪ್ರವಕ್ಷ್ಯಾಮಿಬಸ್ತಿಮುತ್ತರಸಂಜ್ಞಿತಾಂ ॥
ದ್ವಾದಶಾಂಗುಲಕಂನೇತ್ರಂಮಧ್ಯೇಚಕೃತಕರ್ಣಿಕಂ ॥ ೧ ॥
ಮಾಲತೀಪುಷ್ಪವೃಂತಾಭಂಛಿದ್ರಂಸರ್ಷಪಸನ್ನಿಭಂ ॥

ಉತ್ತರಬಸ್ತಿ ಎಂದರೆ ಮೂತ್ರದ್ವಾರದ ಮಾರ್ಗವಾಗಿ ಅಲ್ಲಿಗೆ ಸಂಬಂಧಿಸಿದ ರೋಗಗಳನ್ನು ನಿವಾರಣಮಾಡುವ ಉದ್ದಿಶ್ಯ ಕಷಾಯಸ್ನೇಹಾದ್ಯೌಷಧಗಳನ್ನು ಪ್ರಯೋಗಿಸುವ ಕ್ರಮಕ್ಕೆ ಹೆಸರು. ಉತ್ತರಬಸ್ತಿಗೆ ಉಪಯೋಗಿಸತಕ್ಕ ಬಸ್ತಿ ನೇತ್ರ (ಟ್ಯೂಬ್)ದ ಪ್ರಮಾಣ ಹನ್ನೆರಡಂಗುಲ, ಮಧ್ಯ ಎಂದರೆ ಆರು ಅಂಗುಲ ವಾದ ಮೇಲೆ ಎರಡು ಕಿವಿಗಳನ್ನು ಮಾಡಿರಬೇಕು, ಜಾಜಿಯ ಹುವ್ವಿನ ತೊಟ್ಟಿನಷ್ಟು ದಪ್ಪವಾಗಿ ಸಾಸುವೆಯಕಾಳು ಹೋಗಿ ಹೊರಡುವಷ್ಟು ಸಣ್ಣನಾದ ರಂಧ್ರವುಳ್ಳದ್ದಾಗಿರಬೇಕು

ಪಂಚವಿಂಶತಿವರ್ಷಾಣಾಮಧೋಃಮಾತ್ರಾದ್ವಿಕಾರ್ಷಿಕೀ ॥ ೨ ॥
ತದೂರ್ಧ್ವಂಪಲಮಾತ್ರಾಚಸ್ನೇಹಸ್ಯೋಕ್ತಾಭಿಷಗ್ವರೈಃ ॥

ಇಪ್ಪತ್ತೈದು ವರುಷಕ್ಕೆ ಹಿಂದಿನ ವಯಸ್ಸಿನವರಿಗೆಲ್ಲಾ ಎರಡು ಕರ್ಷ ಪ್ರಮಾಣ ಸ್ನೇಹದ್ರವ್ಯವನ್ನೂ ಆದಕ್ಕೆ ಮೇಲ್ಪಟ್ಟವರಿಗೆಲ್ಲಾ ಒಂದು ಪಲ ಪ್ರಮಾಣ ಸ್ನೇಹವನ್ನೂ ಉತ್ತರಬಸ್ತಿಗೆ ಉಪಯೋಗಿಸಬೇಕು.

ಅಥಾಸ್ಥಾಪನಶುದ್ಧಸ್ಯತೃಪ್ತಸ್ಯಸ್ನಾನಭೋಜನೈಃ ॥ ೩ ॥
ಸ್ಥಿತಸ್ಯಜಾನುಮಾತ್ರೇಚಪೀಠೇಶೇಫ್ನಿಷ್ಯಶಲಾಕಯಾ ॥
ಸ್ನಿಗ್ಧಯಾಮೇಢ್ರಮಾರ್ಗೇಚತತೋನೇತ್ರಂನಿಯೋಜಯೇತ್ ॥
ಶನೈಶ್ಶನೈರ್ಘೃತಾಭ್ಯಕ್ತಂಮೇಢ್ರರಂಧ್ರೇಂಗುಲಾನಿಷಟ್ ॥
ತತೋವಪೀಡಯೇದ್ಬಸ್ತಿಂಶನೈರ್ನೇತ್ರಂಚನಿರ್ಹರೇತ್ ॥ ೫ ॥
ತತಃಪ್ರತ್ಯಾಗತೇಸ್ನೇಹೇಸ್ನೇಹಬಸ್ತಿಕ್ರಮೋಹಿತಃ ॥

ಮೊದಲು ನಿರೂಹಬಸ್ತಿಯನ್ನು ಪ್ರಯೋಗಿಸಿ ಶರೀರವನ್ನು ಶೋಧನಮಾಡಿ ತೃಪ್ತಿಯಾಗುವಂತೆ ಸ್ನಾನ ಮತ್ತು ಭೋಜನಗಳನ್ನು ಮಾಡಿಸಿ ನಂತರ ಉತ್ತರ ಬಸ್ತಿ ಕೊಡತಕ್ಕವನನ್ನು ಮೊಳಕಾಲಿನಷ್ಟು ಎತ್ತರವಾದ ಪೀಠದ ಮೇಲೆ ಕುಳ್ಳಿರಿಸಿ ನುಣ್ಣಗಿರತಕ್ಕ ಸಲಾಕಿಗೆ ಮೇಲಕ್ಕೆ ಜಿಡ್ಡನ್ನು ಸವರಿ ಆದರಿಂದ ಶಿಶ್ನದೊಳಗೆ ಉತ್ತರಬಸ್ತಿಯನ್ನು ತೂರಿಸಲು ಅನುಕೂಲವಾದ ಮಾರ್ಗವನ್ನು ನಿದಾನವಾಗಿ ಹುಡುಕಿಕೊಂಡು ಆ ರಂಧ್ರದಲ್ಲಿ ಉತ್ತರಬಸ್ತಿ ನೇತ್ರಕ್ಕೆ ತುಪ್ಪವನ್ನು ಸವರಿ ಆರು ಅಂಗುಲ ಒಳಕ್ಕೆ ತೂರಿಸಿ ಹಿಡಿದುಕೊಂಡು ಬಸ್ತಿಯನ್ನು ಚನ್ನಾಗಿ ಅಮುಕಿ ದ್ರವದ್ರವ್ಯವೆಲ್ಲಾ ಒಳಕ್ಕೆ ಹೋದ ಮೇಲೆ ಬಸ್ತಿನೇತ್ರವನ್ನು ಮೆಲ್ಲಗೆ ಹಿಂದು ಬಿಡಬೇಕು, ಇದಾದ ಮೇಲೆ ಬಸ್ತಿಯಿಂದ ಒಳಕ್ಕೆ ಹೋದ ಸ್ನೇಹವು ಹೊರಕ್ಕೆ ಬಂದುಬಿಟ್ಟರೆ ಬಸ್ತಿಯು ಕ್ರಮವಾಗಿ ಸೇರವೇರಿತೆಂದು ತಿಳಿಯಬೇಕು

ಸ್ತ್ರೀಣಾಂಕನಿಷ್ಠಿಕಾಸ್ಥೂಲಂನೇತ್ರಂಕುರ್ಯಾದ್ದಶಾಂಗುಲಂ ॥ ೬ ॥
ಮುದ್ಗಪ್ರವೇಶಯೋಗ್ಯಂಚಯೋನ್ಯಂತಶ್ಚತುರಂಗುಲಂ ॥
ದ್ವ್ಯಂಗುಲಂಮೂತ್ರಮಾರ್ಗೇಚಸೂಕ್ಷ್ಮಂನೇತ್ರಂನಿಯೋಜಯೇತ್ ॥ ೭ ॥

ಹೆಂಗಸರಿಗೆ ಉತ್ತರಬಸ್ತಿಯನ್ನು ಕೊಡಲನುಕೂಲವಾದ ಬಸ್ತಿನೇತ್ರವು ಕಿರುಬೆರಳಿನಷ್ಟು ದಪ್ಪ, ಹತ್ತಂಗುಲ ಉದ್ದ, ಹೆಸರುಕಾಳು ಒಳಗೆ ಹೋಗಿಬರುವಷ್ಟು ರಂಧ್ರವುಳ್ಳದ್ದಾಗಿರಬೇಕು, ಬಸ್ತಿಪ್ರಯೋಗಕಾಲದಲ್ಲಿ ಬಸ್ತಿನೇತ್ರವನ್ನು ಯೋನಿಮಾರ್ಗದಲ್ಲಿ ನಾಲ್ಕು ಅಂಗುಲವೂ ಮೂತ್ರಮಾರ್ಗದಲ್ಲಿ ಎರಡಂಗುಲವೂ ಒಳಕ್ಕೆ ನೂಕಬೇಕು, ಮೂತ್ರಮಾರ್ಗದಲ್ಲಿ ಪ್ರವೇಶಮಾಡಿಸತಕ್ಕ ಬಸ್ತಿಯ ನೇತ್ರವು ಪುರುಷರಿಗೆ ಉಪಯೋಗಿಸುವ ಬಸ್ತಿನೇತ್ರದಷ್ಟೇ ಸೂಕ್ಷ್ಮವಾಗಿರಬೇಕು.

ಮೂತ್ರಕೃಚ್ಛ್ರವಿಕಾರೇಷುಬಾಲಾನಾಂತ್ವೇಕಮಂಗುಲಂ ॥
ಶನೈರ್ನಿಷ್ಕಂಪಮಾಧೇಯಂಸೂಕ್ಷ್ಮನೇತ್ರಂವಿಚಕ್ಷಣಃ ॥ ೮ ॥

ಮಕ್ಕಳಿಗೆ ಮೂತ್ರವು ಹೊರಡುವುದು ಕಷ್ಟವಾಗಿ ತೊಂದರೆಯಾದಲ್ಲಿ ಬಸ್ತಿಯನ್ನು ಕೊಡಬೇಕಾಗಿ ಬಂದರೆ ಸೂಕ್ಷ್ಮವಾದ ಬಸ್ತಿನೇತ್ರವನ್ನು ಮೆಲ್ಲಗೆ ಅಲ್ಲಾಡದಂತೆ ಒಂದಂಗುಲ ಮಾತ್ರ ಒಳಕ್ಕೆ ನೂಕಬೇಕು.

ಯೋನಿಮಾರ್ಗೇಷು ಸ್ನೇಹಮಾತ್ರಾ ದ್ವಿಪಾಲಿಕೀ ||
ಮೂತ್ರಮಾರ್ಗೇಪಲೋನ್ಮಾನಾ ಬಾಲಾನಾಂಚ ದ್ವಿಕಾರ್ಷಿಕೀ ||೯||

ಯೋನಿದ್ವಾರದಲ್ಲಿ ಪ್ರಯೋಗಿಸತಕ್ಕ ಬಸ್ತಿಗೆ ಸ್ನೇಹದ್ರವ್ಯ ಎರಡು ಸಲ, ಮೂತ್ರಮಾರ್ಗದಲ್ಲಿ ಪ್ರಯೋಗಿಸಲು ಒಂದು ಪಲ, ಮಕ್ಕಳಿಗೆ ಉತ್ತರಬಸ್ತಿಯನ್ನು ಕೊಡಲು ಎರಡು ಕರ್ಷ.

ಉತ್ತಾನಾಯೈ ಸ್ತ್ರಿಯೈ ಕುರ್ಯಾದೂರ್ಧ್ವಜಾನ್ವೈ ವಿಚಕ್ಷಣಃ ||
ಅಪ್ರತ್ಯಾಗಚ್ಛತಿ ಭಿಷಗ್ಬಸ್ತಾವುತ್ತರಸಂಜ್ಞಿತೇ ||೧೦||
ಭೂಯೋ ಬಸ್ತಿಂ ನಿದಧ್ಯಾಚ್ಚ ಸಂಯುಕ್ತೈಃ ಶೋಧನೈರ್ಗಣೈಃ ||
ಫಲವರ್ತಿಂ ನಿದಧ್ಯಾದ್ವಾ ಯೋನಿಮಾರ್ಗೇ ದೃಢಾಂ ಭಿಷಕ್ ||೧೧||
ಸೂತ್ರೈರ್ವಿನಿರ್ಮಿತಾಂ ಸ್ನಿಗ್ಧಾಂ ಶೋಧನದ್ರವ್ಯಸಂಯುತಾಂ ||
ದಹ್ಯಮಾನೇ ತಥಾ ಬಸ್ತೌ ದದ್ಯಾದ್ಬಸ್ತಿಂ ವಿಶಾರದಃ ||೧೨||
ಕ್ಷೀರವೃಕ್ಷಕಷಾಯೇಣ ಪಯಸಾ ಶೀತಲೇನ ವಾ ||
ಬಸ್ತಿಶ್ಶುಕ್ರರುಜಃ ಪುಂಸಾಂ ಸ್ತ್ರೀಣಾಮಾರ್ತವಜಾಂ ರುಜಂ ||೧೩||
ಹನ್ಯಾದುತ್ತರಬಸ್ತಿಸ್ತು ನೋಚಿತೋ ಮೇಹಿನಾಂ ಕ್ವಚಿತ್ ||

ಸ್ತ್ರೀಯರಿಗೆ ಉತ್ತರಬಸ್ತಿಯನ್ನು ಕೊಡುವಾಗ ಅಂಗತನಾಗಿ ಮಲಗಿಸಿ ಎರಡು ಮಂಡಿಗಳನ್ನೂ ಮಡಿಸಿ ಮೇಲಕ್ಕೆ ಎತ್ತಿಕೊಳ್ಳುವಂತೆ ಮಾಡಿ ಬುದ್ಧಿವಂತಿಕೆಯಿಂದ ಬಸ್ತಿಪ್ರಯೋಗಮಾಡಬೇಕು, ಉತ್ತರಬಸ್ತಿಯು ಸಕಾಲದಲ್ಲಿ ಹೊರಕ್ಕೆ ಬಾರದೆ ಹೋದರೆ ಶೋಧನೀಯಗಣೋಕ್ತ ದ್ರವ್ಯಗಳ ಕಷಾಯದಿಂದ ಪುನಶ್ಚ ಉತ್ತರಬಸ್ತಿಯನ್ನು ಕೊಡಬೇಕು, ಶೋಧನಗಣೋಕ್ತ ದ್ರವ್ಯಗಳಿಂದ ಯುಕ್ತವಾದ ಸೂತ್ರನಿರ್ಮಿತವಾದ ಸ್ನೇಹಯುಕ್ತವಾದ ದೃಢವಾದ ಫಲವರ್ತಿಯನ್ನಾದರೂ ಯೋನಿಮಾರ್ಗದಲ್ಲಿ ತೂರಿಸಬೇಕು, ಬಸ್ತಿಪ್ರಯೋಗ ಮಾಡಿದ ಮೇಲೆ ಉರಿಯಾದರೆ ಆಲ ಅತ್ತಿ ಮೊದಲಾದ ಕ್ಷೀರವೃಕ್ಷಗಳ ತಣ್ಣನೆಯ ಕಷಾಯದಿಂದಲಾಗಲೀ ಅಥವಾ ತಣ್ಣನೆಯ ಹಾಲಿನಿಂದಲಾಗಲೀ ಮತ್ತೆ ಬಸ್ತಿಯನ್ನೇ ಕೊಡಬೇಕು, ಉತ್ತರಬಸ್ತಿಯು ಪುರುಷರ ಶುಕ್ರದೋಷವನ್ನೂ ಸ್ತ್ರೀಯರ ರಜೋದೋಷವನ್ನೂ ಶಮನಮಾಡುತ್ತದೆ, ಆದರೆ ಮೇಹರೋಗಿಗಳಿಗೆ ಮಾತ್ರ ಉತ್ತರಬಸ್ತಿಯನ್ನು ಪ್ರಯೋಗಿಸಬಾರದು.

ಸಮ್ಯಗ್ದತ್ತಸ್ಯಲಿಂಗಾನಿವ್ಯಾಪದಃಕ್ರಮಏವಚ ॥ ೧೪ ॥
ಬಸ್ತೇರುತ್ತರಸಂಜ್ಞಸ್ಯಸಮಾನಂಸ್ನೇಹಬಸ್ತಿನಾ ॥

ಉತ್ತರಬಸ್ತಿ ಸರಿಯಾಗಿ ಕೊಡಲ್ಪಟ್ಟಿದ್ದಲ್ಲಿ ಚನ್ನಾಗಿ ಪ್ರಯೋಗಿಸಿದ ಸ್ನೇಹ ಬಸ್ತಿಯ ಗುಣಗಳೇ ಸಿಕ್ಕುತ್ತವೆ, ಸರಿಯಾಗದೆ ಇದ್ದಲ್ಲಿ ಸ್ನೇಹಬಸ್ತಿಗೆ ಯಾವ ವಿಪತ್ತುಗಳು ಹೇಳಲ್ಪಟ್ಟಿವೆಯೋ ಇದಕ್ಕೂ ಅದೇ ವಿಪತ್ತುಗಳು ಸಿದ್ಧವಾಗಿವೆ, ಬಸ್ತಿಪ್ರಯೋಗ ಕ್ರಮ ಕೂಡ ಹೇಳಿರುವುದು ವಿನಹ ಉಳಿದದ್ದೆಲ್ಲಾ ಸ್ನೇಹಬಸ್ತಿಯಂತೆಯೇ ಎಂದು ತಿಳಿಯಬೇಕು

ಘೃತಾಭ್ಯಕ್ತೇಗುದೇಕ್ಷೇಪ್ಯಾಶ್ಲಕ್ಷ್ಣಾಸ್ಯಾಂಗುಷ್ಠಸನ್ನಿಭಾ ॥ ೧೫ ॥
ಮಲಪ್ರವರ್ತಿನೀವರ್ತಿಃಫಲವರ್ತಿಶ್ಚಸಾಸ್ಮೃತಾ ॥

ಫಲವರ್ತಿ ಎಂದರೆ ರೋಗಿಯ ಅಂಗುಷ್ಟದ ಬೆರಳಿನಷ್ಟು ದಪ್ಪವಾಗಿ ಶೋಧನದ್ರವ್ಯಗಳಿಂದ ನಿರ್ಮಿತವಾಗಿ ಮಲಪ್ರವರ್ತಕವಾಗಿರತಕ್ಕ ವರ್ತಿಗೆ ಹೆಸರು, ಅಂತರ್ಗತವಾದ ಮಲವನ್ನು ಹೊರಡಿಸುವುದಕ್ಕಾಗಿ ಗುದದ್ವಾರಕ್ಕೆ ಎಣ್ಣೆಯನ್ನು ಹತ್ತಿಸಿ ಒಳಕ್ಕೆ ತೂರಿಸಬೇಕು.

ಇಲ್ಲಿಗೆ ಏಳನೆಯ ಅಧ್ಯಾಯ ಸಂಪೂರ್ಣ.

---

## ಎಂಟನೆಯ ಅಧ್ಯಾಯ.

ನಸ್ಯಂತತ್ಕಥ್ಯತೇಧೀರೈರ್ನಾಸಾಗ್ರಾಹ್ಯಂಯದೌಷಧಂ ॥
ನಾವನಂನಸ್ಯಕರ್ಮೇತಿತಸ್ಯನಾಮದ್ವಯಂಮತಂ ॥ ೧ ॥

ಮೂಗಿನಿಂದ ಪ್ರಯೋಗಿಸತಕ್ಕ ಔಷಧಕ್ಕೆ ನಸ್ಯವೆಂದು ಹೆಸರು, ನಾವನ—ನಸ್ಯಕರ್ಮ ಎಂಬದಾಗಿಯೂ ನಸ್ಯಕರ್ಮಕ್ಕೇನೇ ಎರಡು ಹೆಸರುಗಳು ಪರ್ಯಾಯಗಳು

ನಸ್ಯಭೇದೋದ್ವಿಧಾಪ್ರೋಕ್ತೋರೇಚನಃಸ್ನೇಹನಸ್ತಥಾ ॥
ರೇಚನಂಕರ್ಷಣಂಪ್ರೋಕ್ತಂಸ್ನೇಹನಂಬೃಹಣಂಮತಂ ॥ ೨ ॥

ನಸ್ಯವು ರೇಚನನಸ್ಯವೆಂತಲೂ ಸ್ನೇಹನನಸ್ಯವೆಂತಲೂ ಎರಡು ವಿಧ, ರೇಚನನಸ್ಯಕ್ಕೆನೇ ಕರ್ಷಣನಸ್ಯವೆಂಬದಾಗಿಯೂ, ಸ್ನೇಹನನಸ್ಯಕ್ಕೆನೇ ಬೃಂಹಣ ನಸ್ಯವೆಂತಲೂ ನಾಮಾಂತರಗಳುಂಟು.

ಕಫಪಿತ್ತಾನಿಲಧ್ವಂಸೇಪೂರ್ವಮಧ್ಯಾಪರಾಹ್ನಕೇ ॥
ದಿನೇತುಗೃಹ್ಯತೇನಸ್ಯಂರಾತ್ರಾವಪ್ಯುತ್ಕಟೇಗದೇ ॥ ೩ ॥

ಕಫ, ಪಿತ್ತ, ವಾಯು, ಇವುಗಳು ಪ್ರಕೋಪವಾಗಿರುವಾಗ್ಯೆ ಹಗಲುಹೊತ್ತು ಪೂರ್ವಾಹ್ನದಲ್ಲಿ ಕಫಶಾಂತ್ಯರ್ಥವಾಗಿ, ಮಧ್ಯಾಹ್ನದಲ್ಲಿ ಪಿತ್ತಶಾಂತ್ಯರ್ಥವಾಗಿ ಸಾಯಾಹ್ನದಲ್ಲಿ ವಾತಶಾಂತ್ಯರ್ಥವಾಗಿ ನಸ್ಯವನ್ನು ಪ್ರಯೋಗಿಸಬೇಕು. ರಾತ್ರಿಯಲ್ಲಿ ನಸ್ಯಪ್ರಯೋಗವು ಅವಶ್ಯಕವಾಗುವಷ್ಟು ರೋಗವು ಪ್ರಬಲವಾಗಿದ್ದಲ್ಲಿ ರಾತ್ರಿಯೂ ಪ್ರಯೋಗಿಸಬೇಕು.

ನಸ್ಯಂತ್ಯಜೇದ್ಭೋಜನಾಂತೇದುರ್ದಿನೇಚಾಪತರ್ಪಿತೇ ॥
ತಥಾನವಪ್ರತಿಶ್ಯಾಯಿಗರ್ಭಿಣೀಗರದೂಷಿತಃ ॥ ೪ ॥
ಅಜೀರ್ಣೇದತ್ತಬಸ್ತಿಶ್ಚಪೀತಸ್ನೇಹೋದಕಾಸವಃ ॥
ಕ್ರುದ್ಧಶ್ಶೋಕಾಭಿಭೂತಶ್ಚತೃಷಾರ್ತೋವೃದ್ಧಬಾಲಕೌ ॥ ೫ ॥
ವೇಗಾವರೋಧೀಸ್ನಾತಶ್ಚಸ್ನಾತುಕಾಮುಶ್ಚವರ್ಜಯೇತ್ ॥

ಭೋಜನಮಾಡಿದ ವಡನೆಯೇ, ಮೋಡಕಟ್ಟಿಕೊಂಡು ಸೂರ್ಯರಶ್ಮಿ ಕಾಣದಿರುವಾಗ್ಯೆ, ಧಾತುವರ್ಧಕಗಳಾದ ಆಹಾರಾದಿಗಳನ್ನು ತೆಗದುಕೊಳ್ಳದೆ ಅಪತರ್ಪಿತನಾಗಿರುವಾಗ್ಯೆ, ಹೊಸದಾಗಿ ನೆಗಡಿಯಾಗಿರುವಾಗ್ಯೆ, ಗರ್ಭವತಿಯಾಗಿರುವಾಗ್ಯೆ, ಕೃತ್ರಿಮ ವಿಷಪ್ರಯೋಗದೋಷವಿರುವಾಗ್ಯೆ, ಆಹಾರ ಜೀರ್ಣವಾಗದಿರುವಾಗ್ಯೆ, ಬಸ್ತಿಪ್ರಯೋಗವಾದ ಮೇಲೆ, ಸ್ನೇಹಪಾನಮಾಡಿದ ಮೇಲೆ, ಉದಕಪಾನಮಾಡಿದ ಮೇಲೆ, ಆಸವ, ಅರಿಷ್ಟಗಳನ್ನು ಪಾನಮಾಡಿದ ಮೇಲೆ, ಸಿಟ್ಟುಗೊಂಡಿರುವಾಗ್ಯೆ, ದುಃಖಿತನಾಗಿರುವಾಗ್ಯೆ, ಬಾಯಾರಿಕೆಯಾದಾಗ, ಇಂತಹ ಕಾಲಗಳಲ್ಲಿಯೂ ಮತ್ತು ಮುದುಕರು, ಹುಡುಗರು, ಮಲಮೂತ್ರಗಳ ವೇಗವನ್ನು ತಡದುಕೊಂಡಿರುವವರು, ಸ್ನಾನಮಾಡಿದವರು, ಸ್ನಾನಮಾಡುವವರು, ಇಂತವರು ಸಹ ನಸ್ಯಪ್ರಯೋಗಕ್ಕೆ ಅನರ್ಹರು.

ಅಷ್ಟವರ್ಷಸ್ಯಬಾಲಸ್ಯನಸ್ಯಕರ್ಮಸಮಾಚರೇತ್ ॥ ೬ ॥
ಅಶೀತಿವರ್ಷಾದೂರ್ಧ್ವಂಚನಾವನಂನ್ನೈವದೀಯತೇ ॥

ಎಂಟು ವರುಷ ತುಂಬಿದ ಮೇಲೆ ಹುಡುಗರಿಗೆ ನಸ್ಯಪ್ರಯೋಗಮಾಡಬಹುದು, ಎಂಬತ್ತು ವರುಷ ತುಂಬಿದ ಮೇಲೆ ಮುದುಕರಿಗೆ ನಸ್ಯಪ್ರಯೋಗ ಮಾಡಕೂಡದು.

ಅಥಸ್ಯೈರೇಚನಂನಸ್ಯಂಗ್ರಾಹ್ಯಂತೈಲೈಸ್ತುತೀಕ್ಷ್ಣಕೈಃ ॥ ೭ ॥
ತೀಕ್ಷ್ಣಭೇಷಜಸಿದ್ಧೈರ್ವಾಸ್ನೇಹೈಃಕ್ವಾಥೈರಸೈಸ್ತಥಾ ॥

ತೀಕ್ಷ್ಣವೀರ್ಯಗಳಾದ ಸಾಸುವೆಯೆಣ್ಣೆ ಮೊದಲಾದ ತೈಲಗಳಿಂದಲಾಗಲಿ, ಅಥವಾ ತೀಕ್ಷ್ಣವೀರ್ಯಗಳಾದ ಔಷಧದ್ರವ್ಯಗಳಿಂದ ಸಂಸ್ಕೃತಗಳಾದ ತೈಲಗಳಿಂದ ಲಾಗಲಿ, ತೀಕ್ಷ್ಣೌಷಧಗಳ ಕಷಾಯಗಳು, ಸ್ವರಸಗಳು, ಇವುಗಳಿಂದಲಾಗಲಿ ವಿರೇಚನನಸ್ಯವನ್ನು ಪ್ರಯೋಗಿಸಬೇಕು.

ನಾಸಿಕಾರಂಧ್ರಯೋರ್ಯೋಗಷ್ಟೌ ಷಟ್ ಚತ್ವಾರಶ್ಚ ಬಿಂದವಃ ॥ ೮ ॥
ಪ್ರತ್ಯೇಕಂ ರೇಚನೇ ಯೋಜ್ಯಾ ಮುಖ್ಯಮಧ್ಯಾಂತ್ಯಮಾತ್ರಯಾ ॥

ಪ್ರತಿಯೊಂದು ಮೂಗಿನ ರಂಧ್ರದಲ್ಲಿಯೂ ಉತ್ತಮ ಪರಿಮಾಣ ನಸ್ಯ ದ್ರವವನ್ನು ಪ್ರಯೋಗಿಸುವಲ್ಲಿ ಎಂಟು ಬಿಂದು, ಮಧ್ಯಮ ಪರಿಮಾಣವಾದರೆ ಆರು ಬಿಂದು, ಕನಿಷ್ಠಪರಿಮಾಣವಾದರೆ ನಾಲ್ಕು ಬಿಂದು, ಈ ರೀತಿಯಾಗಿ ನಸ್ಯ ದ್ರವವನ್ನು ಉಪಯೋಗಿಸಬೇಕು.

ನಸ್ಯಕರ್ಮಣಿ ದಾತವ್ಯಂ ಶಾಣೈಕಂ ತೀಕ್ಷ್ಣಮೌಷಧಂ ॥ ೯ ॥
ಹಿಂಗು ಸ್ಯಾದ್ಯವಮಾತ್ರಂ ತು ಮಾಷೈಕಂ ಸೈಂಧವಂ ಮತಂ ॥
ಕ್ಷೀರಂ ಚೈವಾಷ್ಟಶಾಣಂ ಸ್ಯಾತ್ಪಾನೀಯಂ ಚ ತ್ರಿಕಾರ್ಷಿಕಂ ॥ ೧೦ ॥
ಕಾರ್ಷಿಕಂ ಮಧುರಂ ದ್ರವ್ಯಂ ನಸ್ಯಕರ್ಮಣಿ ಯೋಜಯೇತ್ ॥

ನಸ್ಯಪ್ರಯೋಗದಲ್ಲಿ ತೀಕ್ಷ್ಣದ್ರವ್ಯಗಳನ್ನು ಒಂದೊಂದು ಶಾಣ ಅಂದರೆ ಅರ್ಧ ತೊಲ ಉಪಯೋಗಿಸಬೇಕು, ಹಿಂಗನ್ನು ಒಂದು ಗೋಧಿಯ ತೂಕ, ಸೈಂಧವಲವಣವನ್ನು ಒಂದು ಮಾಷ ಅಥವಾ ಆರು ಗುಲಗಂಜಿಯ ತೂಕ, ಹಾಲು ಎಂಟು ಶಾಣ ಅಂದರೆ ನಾಲ್ಕು ತೊಲ, ನೀರು ಮೂರು ಕರ್ಷ ಎಂದರೆ ಮೂರು ತೊಲ, ಮಧುರದ್ರವ್ಯ ಸೇರಿಸತಕ್ಕದಿದ್ದಲ್ಲಿ ಒಂದು ತೊಲ, ಈ ರೀತಿ ಸೇವಿಸಬೇಕು.

ಅವಪೀಡಪ್ರಧಮನೌ ದ್ವೌ ಭೇದಾವಪರೌ ಸ್ಮೃತೌ ॥ ೧೧ ॥
ಶಿರೋವಿರೇಚನಸ್ಯಾತ್ರ ತೌ ತು ದೇಯೌ ಯಥಾಕ್ರಮಂ ॥

ಶಿರೋಗತವಾದ ದೋಷಗಳನ್ನು ಹೊರಹೊರಡಿಸತಕ್ಕ ನಸ್ಯಪ್ರಯೋಗವು ಅವಪೀಡ, ಪ್ರಧಮನ, ಎಂಬದಾಗಿ ಎರಡು ವಿಧವಾಗಿದೆ, ಅವುಗಳನ್ನೂ ಕ್ರಮವಾಗಿ ಕೊಡಬೇಕು

ಕಲ್ಕೀಕೃತಾದೌಷಧಾದ್ಯಃ ಪೀಡಿತೋ ನಿಸ್ಸೃತೋ ರಸಃ ॥ ೧೨ ॥
ಸೋವಪೀಡಸ್ಸಮುದ್ದಿಷ್ಟಸ್ತೀಕ್ಷ್ಣದ್ರವ್ಯಸಮುದ್ಭವಃ ॥
ಷಡಂಗುಲಾದ್ವಿವಕ್ತ್ರಯಾ ನಾಡೀ ಚೂರ್ಣಂ ತಯಾ ಧಮೇತ್ ॥ ೧೩ ॥
ತೀಕ್ಷ್ಣಂ ಕೋಲಮಿತಂ ವಕ್ತ್ರವಾತೈಃ ಪ್ರಧಮನಂ ಹಿ ತತ್ ॥

ತೀಕ್ಷ್ಣದ್ರವ್ಯಗಳಾದ ಶುಂಠಿ ಮೊದಲಾದವುಗಳನ್ನು ನೀರು ಅಥವಾ ಹಾಲು ಹಾಕಿ ಅರದು ಕಲ್ಕವಮಾಡಿ ಬಟ್ಟೆಯಲ್ಲಿ ಹಾಕಿಕೊಂಡು ಎಷ್ಟು ಬೇಕೋ ಅಷ್ಟು ಮಾತ್ರ ಮೂಗಿನ ರಂಧ್ರದಲ್ಲಿ ಹಿಂಡುವುದು, ಇದಕ್ಕೆ ಅವಪೀಡನನಸ್ಯವೆಂಬ ಹೆಸರು, ಆರು ಅಂಗುಲ ಉದ್ದ ಎರಡು ಕಡೆಯೂ ರಂಧ್ರವಿರತಕ್ಕ ಕೊಳವಿಯಲ್ಲಿ ನಸ್ಯಕ್ಕೆ ಉಪಯೋಗಿಸತಕ್ಕ ತೀಕ್ಷ್ಣದ್ರವ್ಯಗಳ ಚೂರ್ಣ ಒಂದು ತೊಲ ಪ್ರಮಾಣ ಅಂದರೆ ಒಂದು ತೊಲದಷ್ಟು ತುಂಬಿ ರಂಧ್ರದಕಡೆ ಮೂಗಿನಲ್ಲಿಟ್ಟು ಇನ್ನೊಂದು ರಂಧ್ರದಲ್ಲಿ ಬಾಯನ್ನಿಟ್ಟುಕೊಂಡು ಮೂಗಿನೊಳಕ್ಕೆ ಊದುವುದು, ಇದಕ್ಕೆ ಪ್ರಧಮನನಸ್ಯವೆಂದು ಹೆಸರು.

ಊರ್ಧ್ವಜತ್ರುಗತೇರೋಗೇಕಫಜೇಸ್ವರಸಂಕ್ಷಯೇ ॥ ೧೪ ॥
ಅರೋಚಕೇಪ್ರತಿಶ್ಯಾಯೇಶಿರಶ್ಶೂಲೇಚಪೀನಸೇ ॥
ಶೋಫಾಪಸ್ಮಾರಕುಷ್ಠೇಷುನಸ್ಯಂವೈರೇಚನಂಹಿತಂ ॥ ೧೫ ॥

ಭುಜದಿಂದ ಮೇಲಕ್ಕೆ ಇರುವ ಅವಯವಗಳಿಗೆ ಸಂಬಂಧಿಸಿದ ರೋಗಗಳು, ಕಫರೋಗಗಳು, ಸ್ವರಕುಗ್ಗುವುದು, ಅರುಚಿ, ನೆಗಡಿ, ತಲೆಶೂಲೆ, ಪೀನಸಿ, ಶೋಫೆ, ಅಪಸ್ಮಾರ, ಕುಷ್ಠರೋಗ, ಇವುಗಳಲ್ಲಿ ವಿರೇಚನನಸ್ಯವನ್ನು ಹಿತಕರವಾಗಿ ಪ್ರಯೋಗಿಸಬೇಕು.

ಭೀರುಸ್ತ್ರೀಕೃಶಬಾಲಾನಾಂನಸ್ಯಂಸ್ನೇಹೇನಶಸ್ಯತೇ ॥

ಹೆಂಗಸರು, ಹೆದರಿಕೆ ಸ್ವಭಾವದವರು, ಕೃಶರಾದವರು, ಹುಡುಗರು, ಇಂತವರಿಗೆ ನಸ್ಯಪ್ರಯೋಗಮಾಡುವ ಅವಶ್ಯ ಬಿದ್ದಲ್ಲಿ ಔಷಧಗಳಿಂದ ಸಂಸ್ಕೃತಗಳಾದ ಸ್ನೇಹಗಳಿಂದಲೇ ಕೊಡಬೇಕು.

ಗಲರೋಗೇಸನ್ನಿಪಾತೇನಿದ್ರಾಯಾಂವಿಷಮಜ್ವರೇ ॥ ೧೬ ॥
ಮನೋವಿಕಾರೇಕ್ರಿಮಿಷುಯುಜ್ಯತೇಚಾವಪೀಡನಂ ॥

ಕಂಠರೋಗಗಳು, ಸನ್ನಿಪಾತಜ್ವರ, ನಿದ್ರಾರೋಗ, ವಿಷಮಜ್ವರ, ಇತರ ವಿಧವಾದ ಮನೋವಿಕಾರಗಳು, ಕ್ರಿಮಿರೋಗಗಳು, ಇವುಗಳಲ್ಲಿ ಅವಪೀಡನ ನಸ್ಯವು ಹಿತವಾದದ್ದು.

ಅತ್ಯಂತೋತ್ಕಟರೋಗೇಷುವಿಸಂಜ್ಞೇಷುಚದೀಯತೇ ॥ ೧೭ ॥
ಚೂರ್ಣಂಪ್ರಧಮನಂಧೀರೈಸ್ತದ್ಧಿತೀಕ್ಷ್ಣತರಂಯತಃ ॥

ಅತ್ಯುತ್ಕಟವಾದ ರೋಗಗಳು ಅಂದರೆ ಮನೋವಿಕಾರಗಳು ವಿಷಾದಿಗಳು ಜ್ಞಾನವಿಲ್ಲದಿರುವಾಗ್ಯೆ ಚೂರ್ಣರೂಪವಾದ ಪ್ರಧಮನನಸ್ಯವನ್ನು ಪ್ರಯೋಗಿಸಬೇಕು, ಈ ಪ್ರಧಮನನಸ್ಯವು ಅತಿ ತೀಕ್ಷ್ಣತರವಾದ್ದರಿಂದ ಇದರ ಪ್ರಯೋಗ ವಿಷಯದಲ್ಲಿ ಬುದ್ಧಿಶಾಲಿತನ ಅವಶ್ಯಕ.

ನಸ್ಯಂಸ್ಯಾದ್ಗುಡಶುಂಠೀಭ್ಯಾಂಪಿಪ್ಪಲ್ಯಾಸೈಂಧವೇನವಾ ॥ ೧೮ ॥
ಜಲಪಿಷ್ಟೇನತೇನಾಕ್ಷಿಕರ್ಣನಾಸಾಶಿರೋಗದಾಃ ॥
ಮನ್ಯಾಹನುಗಲೋದ್ಭೂತಾಃನಶ್ಯಂತಿಭುಜಪೃಷ್ಠಜಾಃ ॥ ೧೯ ॥

ಬೆಲ್ಲ ಮತ್ತು ಶುಂಠಿ ಇವುಗಳನ್ನು ನೀರಿನಿಂದ ಅರದು ಕಲ್ಕಮಾಡಿಕೊಂಡು ನಸ್ಯವಾಗಿ ಉಪಯೋಗಿಸುವುದು, ಹಿಪ್ಪಲಿ ಮತ್ತು ಸೈಂಧವಲವಣ ಇವುಗಳನ್ನು ನೀರಿನಿಂದ ಅರದು ಕಲ್ಕಮಾಡಿ ನಸ್ಯವಾಗಿ ಉಪಯೋಗಿಸುವುದು, ಇದರಿಂದ ಕಣ್ಣು, ಮೂಗು, ಕಿವಿ, ತಲೆ, ಇವುಗಳಲ್ಲಿ ಹುಟ್ಟಿರುವ ರೋಗಗಳು, ಮನ್ಯ, ದವಡೆ, ಗಂಟಲು, ಭುಜ, ಪೃಷ್ಠ ಇವುಗಳಲ್ಲಿ ಹುಟ್ಟುವ ಎಲ್ಲಾ ರೋಗಗಳೂ ನಾಶವಾಗುತ್ತವೆ.

ಮಧೂಕಸಾರಕೃಷ್ಣಾಭ್ಯಾಂವಚಾಮರಿಚಸೈಂಧವೈಃ ॥
ನಸ್ಯಂಕೋಷ್ಣಜಲೇಪಿಷ್ಟಂದದ್ಯಾತ್ಸಂಜ್ಞಾಪ್ರಬೋಧನಂ ॥ ೨೦ ॥
ಅಪಸ್ಮಾರೇತಥೋನ್ಮಾದೇಸನ್ನಿಪಾತೇಪತಂತ್ರಕೇ ॥

ಇಪ್ಪೆಯ ಥೇಗು, ಹಿಪ್ಪಲಿ, ಇವುಗಳನ್ನು ಸುಖೋಷ್ಣವಾದ ಬಿಸಿನೀರಿನಂದ ಅರದು ನಸ್ಯವಾಗಿ ಪ್ರಯೋಗಿಸುವುದು, ಬಜೆ, ಮೆಣಸು, ಸೈಂಧವಲವಣ ಇವುಗಳನ್ನೂ ಸುಖೋಷ್ಣವಾದ ಬಿಸಿನೀರಿನಿಂದ ದು ನಸ್ಯವಾಗಿ ಉಪಯೋಗಿಸುವುದು, ಈ ನಸ್ಯಗಳನ್ನು ಅಪಸ್ಮಾರ, ಉನ್ಮಾದ, ಸನ್ನಿಪಾತ ಇವುಗಳಲ್ಲಿ ಪ್ರಜ್ಞೆ ನಷ್ಟವಾಗಿ ಹೋಗಿರುವಾಗ್ಯೆ ಜ್ಞಾನಬರುವುದಕ್ಕಾಗಿ ಪ್ರಯೋಗಿಸಬಹುದು, ಅಪತಂತ್ರಕವೆಂಬ ವ್ಯಾಧಿಯಲ್ಲಿಯೂ ಉಪಯೋಗವಾಗುತ್ತದೆ.

ಸೈಂಧವಂಶ್ವೇತಮರಿಚಂಸರ್ಷಪಾಃಕುಷ್ಠಮೇವಚ ॥ ೨೧ ॥
ಬಸ್ತಮೂತ್ರೇಣಪಿಷ್ಟಾನಿನಸ್ಯಂತಂದ್ರಾನಿವಾರಣಂ ॥

ಸೈಂಧವಲವಣ, ಶ್ವೇತಮರಿಚ ಎಂದರೆ ನುಗ್ಗೇಬೀಜ, ಸಾಸುವೆ, ಚಂಗಲ ಕೋಷ್ಟ, ಇವುಗಳನ್ನು ಆಡಿನ ಗಂಜಲದಲ್ಲರದು ನಸ್ಯವಾಗಿ ಉಪಯೋಗಿಸಿದಲ್ಲಿ ತಂದ್ರಾ ಅಂದರೆ ತೂಕಡಿಸುವರೋಗ ಶಮನವಾಗುತ್ತದೆ.

ರೋಹೀತಮತ್ಸ್ಯಪಿತ್ತೇನಭಾವಿತಂಸೈಂಧವಂವಚಾ ॥ ೨೨ ॥
ಮರಿಚಂಪಿಪ್ಪಲೀಶುಂಠೀಕಂಕೋಲಂಲಶುನಂಪುರಂ ॥
ಕಟ್ಫಲಂಚೇತಿತಚ್ಚೂರ್ಣಂದೇಯಂಪ್ರಧಮನಂಬುಧೈಃ ॥ ೨೩ ॥

ರೋಹಿತವೆಂಬ ಮೀನಿನ ಪಿತ್ತದಲ್ಲಿ ಭಾವನೆಮಾಡಿವ ಸೈಂಧವಲವಣ, ಬಜೆ, ಮೆಣಸು, ಹಿಪ್ಪಲಿ, ಶುಂಠಿ, ಕಂಕೋಲ ಸ್ವನಾಮಪ್ರಸಿದ್ಧ ಬೆಳ್ಳುಳ್ಳಿ, ಪುರ ಎಂದರೆ ಗುಗ್ಗುಲ, ಕಾಯಿಫಲಚಕ್ಕೆ ಇವುಗಳ ಚೂರ್ಣಮಾಡಿ ಪ್ರಧಮನನಸ್ಯವಾಗಿ ಉಪಯೋಗಿಸಬಹುದು.

ಅಥಬೃಂಹಣನಸ್ಯಸ್ಯಕಲ್ಪಸಾಕಥ್ಯತೇಧುನಾ ॥
ಮರ್ಶಶ್ಚಪ್ರತಿಮರ್ಶಶ್ಚದ್ವಿಭೇದೌಸ್ನೇಹನೌಮತೌ ॥ ೨೪ ॥
ಮರ್ಶಸ್ಯತರ್ಪಣೇಮಾತ್ರಾಮುಖ್ಯಾಶಾಣೈಸ್ತುಸಾಷ್ಟಭಿಃ ॥
ಮಧ್ಯಮಾಚಚತುಶ್ಶಾಣೈಹೀನಾಶಾಣಮಿತಾಸ್ಮೃತಾ ॥ ೨೫ ॥
ಏಕೈಕಸ್ಮಿಂಸ್ತುಮಾತ್ರೇಯಂದೇಯಾನಾಸಾಪುಟೇಬುಧೈಃ ॥
ಮರ್ಶಸ್ಯದ್ವಿತ್ರಿವೇಳಂವಾವೀಕ್ಷ್ಯದೋಷಬಲಾಬಲಂ ॥ ೨೬ ॥
ಏಕಾಂತರಂದ್ವ್ಯಂತರಂವಾನಸ್ಯಂದದ್ಯಾದ್ವಿಚಕ್ಷಣಃ ॥
ತ್ರ್ಯಹಂಪಂಚಾಹಮಥವಾಸಪ್ತಾಹಂವಾಸುಯಂತ್ರಿತಂ ॥ ೨೭ ॥
ಮರ್ಶೇಶಿರೋವಿರೇಕೇಚವ್ಯಾಪದೋವಿವಿಧಾಸ್ಮೃತಾಃ ॥
ದೋಷೋತ್ಕ್ಲೇಶಾತ್‌ಕ್ಷಯಾಚ್ಚೈವವಿಜ್ಞೇಯಾಸ್ತಾಯಥಾಕ್ರಮಂ ॥ ೨೮ ॥
ದೋಷೋತ್ಕ್ಲೇಶನಿಮಿತ್ತಾಸುಯುಂಜ್ಯಾದ್ವಮನಶೋಧನಂ ॥
ಅಥಕ್ಷಯನಿಮಿತ್ತಾಸುಯಥಾಸ್ವಂಬೃಂಹಣಂಹಿತಂ ॥ ೨೯ ॥
ಶಿರೋನಾಸಾಕ್ಷಿರೋಗೇಷುಸೂರ್ಯಾವರ್ತಾರ್ಧಭೇದಕೇ ॥
ದಂತರೋಗೇಬಲೇಹೀನೇಮನ್ಯಾಬಾಹ್ವಂಸಜೆಗದೇ ॥ ೩೦ ॥
ಮುಖಶೋಷೇಕರ್ಣನಾದೇವಾತಪಿತ್ತಗದೇತಥಾ ॥
ಅಕಾಲಪಲಿತೇಚೈವಕೇಶಶ್ಮಶ್ರುಪ್ರಪಾತನೇ ॥ ೩೧ ॥
ಯುಜ್ಯತೇಬೃಂಹಣಂನಸ್ಯಂಸ್ನೇಹೈರ್ವಾಮಧುರದ್ರವ್ಯೈಃ ॥

ಈ ವರಿಗೂ ರೇಚನನಸ್ಯಗಳನ್ನು ನಿರೂಪಿಸಿ ಈ ಶ್ಲೋಕಗಳಲ್ಲಿ ಬೃಂಹಣ ನಸ್ಯ ಅದರ ಸ್ವರೂಪ ಸ್ವಭಾವಗಳು ಮತ್ತು ಪ್ರಯೋಗಕ್ರಮ ಇವುಗಳನ್ನು ಹೇಳುತ್ತಾರೆ—ಈ ಬೃಂಹಣನಸ್ಯವು ಮರ್ಶ ಮತ್ತು ಪ್ರತಿಮರ್ಶ ಎಂಬದಾಗಿ ಎರಡು ವಿಧ, ಮರ್ಶವೆಂಬ ತರ್ಪಣಕರವಾದ ನಸ್ಯಪ್ರಯೋಗದಲ್ಲಿ ಉತ್ತಮ ಪರಿಮಾಣ ಎಂಟು ಶಾಣ ಎಂದರೆ ನಾಲ್ಕು ತೊಲ, ಮಧ್ಯಮ ಪರಿಮಾಣವಾಗಿ ಉಪಯೋಗಿಸುವುದಾದರೆ ನಾಲ್ಕು ಶಾಣ ಅಥವಾ ಎರಡು ತೊಲ, ಕನಿಷ್ಠ ಪರಿಮಾಣವೆಂದರೆ ಅರ್ಧ ತೊಲ, ಈ ರೀತಿಯಾಗಿ ಪ್ರತಿಯೊಂದು ಮೂಗಿನ ಸೊಳ್ಳೆಯಲ್ಲಿ ಉಪಯೋಗಿಸಬೇಕು, ಕುಪಿತಗಳಾದ ದೋಷಗಳ ಪ್ರಬಲ ದುರ್ಬಲತ್ವವನ್ನು ಪರೀಕ್ಷಿಸಿಕೊಂಡು ಈ ಮರ್ಶ ಎಂಬ ನಸ್ಯವನ್ನು ಎರಡುಮೂರಾವರ್ತಿ ಸಹ ಪ್ರಯೋಗಿಸಬಹುದು, ಹೀಗೆಯೇ ಒಂದು ದಿವಸ ಎರಡು ದಿವಸ ಈ ರೀತಿಯಾಗಿ ಏಳು ದಿವಸದ ವರಿಗೂ ವ್ಯವಧಾನವಿಟ್ಟುಕೊಂಡು ದೋಷಾನುರೋಧೇನ ಈ ನಸ್ಯಪ್ರಯೋಗಮಾಡಲು ಅವಕಾಶವುಂಟು, ಹಿಂದೆ ಹೇಳಿದ ಬೃಂಹಣ

ಮತ್ತು ರೇಚನನಸ್ಯಗಳ ಪ್ರಯೋಗದಲ್ಲಿ ಅತಿಯೋಗ ಮಿಥ್ಯಾಯೋಗಾದಿಗಳಿಂದ ದೋಷಗಳು ಉದ್ರೇಕವಾಗುವುದು ಮತ್ತು ಕ್ಷಯಿಸುವುದು, ಇಂತಹ ಅಸಂಗತ ಗಳಾಗಿ ಅನೇಕ ವಿಪತ್ತುಗಳು ಸಂಭವಿಸುತ್ತವೆ, ಅವುಗಳ ಮಧ್ಯೆ ದೋಷೋದ್ರೇಕ ದಿಂದ ಉತ್ಪನ್ನಗಳಾದ ವಿಪತ್ತುಗಳನ್ನು ವಮನ ಮತ್ತು ಶೋಧನೌಷಧಗಳಿಂದ ನಿವಾರಣೆಮಾಡಿಕೊಳ್ಳಬೇಕು, ದೋಷಕ್ಷಯಜನ್ಯಗಳಾದ ವಿಪತ್ತುಗಳನ್ನು ಬೃಂಹ ಣೌಷಧಗಳಿಂದ ನಿವಾರಣಮಾಡಿಕೊಳ್ಳಬೇಕು, ಈ ಬೃಂಹಣನಸ್ಯವನ್ನು ಶಿರೋ ರೋಗಗಳು, ಮೂಗಿನ ರೋಗಗಳು, ನೇತ್ರರೋಗಗಳು, ಸೂರ್ಯಾವರ್ತ ಅರ್ಧ ಭೇದಕ ಎಂಬ ಅರತಲೆನೋವುಗಳು, ಹಲ್ಲಿನ ರೋಗಗಳು, ಬಲಹೀನತೆ, ಗಳರೋಗ, ಬಾಹುರೋಗ, ಭುಜದರೋಗ, ಮುಖಶೋಷವೆಂದರೆ ಮುಖ ಬತ್ತಿಹೋಗುವುದು, ಕಿವಿಯಲ್ಲಿ ಸದ್ದಾಗುತ್ತಿರುವುದು, ವಾತ ಪಿತ್ತರೋಗಗಳು, ಬಾಲ್ಯದಲ್ಲಿಯೇ ಕೂದಲು ನರೆತು ಬೆಳ್ಳಗಾಗುವುದು, ಕೂದಲು ಮೀಸೆ ಇವುಗಳು ಉದುರಿ ಹೋಗುವುದು, ಈ ರೋಗಗಳಲ್ಲಿ ಉಪಯೋಗಿಸಬಹುದು, ಮೇಲೆ ಹೇಳಿದ ರೋಗಗಳಲ್ಲಿ ಮಧುರರಸಪ್ರಧಾನ ದ್ರವದ್ರವ್ಯಯುಕ್ತವಾದ ಸ್ನೇಹನಸ್ಯ ವನ್ನಾದರೂ ಉಪಯೋಗಿಸಬಹುದು.

ಸಶರ್ಕರಂಪಯಃಪಿಷ್ಟಂಭೃಷ್ಟಮಾಜ್ಯೇನಕುಂಕುಮಂ ॥ ೩೨ ॥
ನಸ್ಯಪ್ರಯೋಗತೋಹನ್ಯಾದ್ವಾತರಕ್ತಭವಾರುಜಃ ॥
ಭ್ರೂಶಂಖಾಕ್ಷಿಶಿರಃಕರ್ಣಸೂರ್ಯಾವರ್ತಾರ್ಧಭೇದಕಾನ್ ॥ ೩೩ ॥

ಕುಂಕುಮಕೇಸರಿ ಮತ್ತು ಬಿಳಿಕಲ್ಲುಸಕ್ಕರೆ ಈ ಎರಡನ್ನೂ ಹಾಲಿನಿಂದರೆದು ತುಪ್ಪದಲ್ಲಿ ಹುರಿದು ನಸ್ಯವಾಗಿ ಉಪಯೋಗಿಸಿದಲ್ಲಿ ವಾತರಕ್ತ ಸಂಬಂಧ ವಿಕಾರ ಗಳು, ಹುಬ್ಬಿನನೋವು, ಕಣ್ಣಿನ ಮಗ್ಗುಲಿನಲ್ಲಿ ವಡತ, ಕಣ್ಣುವಡತ, ತಲೆವಡತ, ಕಿವಿಇರಿತ, ಅರತಲೆನೋವು, ಇವುಗಳೆಲ್ಲಾ ಸುಮ್ಮನಾಗುತ್ತವೆ.

ನಸ್ಯಂಸ್ಯಾದಣುತೈಲೇನತಥಾನಾರಾಯಣೇನವಾ ॥
ಮಾಷಾದಿನಾವಾಸರ್ಪಿರ್ಭಿಸ್ತತ್ತದ್ಭೇಷಜಸಾಧಿತೈಃ ॥ ೩೪ ॥

ಅಣುತೈಲ, ನಾರಾಯಣತೈಲ, ಮಾಷತೈಲ, ರೋಗನಾಶಕಗಳಾದ ಮೂಲಿಕೆಗಳಿಂದ ಸಂಸ್ಕಾರಹೊಂದಿದ ತುಪ್ಪ, ಇವುಗಳನ್ನು ನಸ್ಯವಾಗಿ ಉಪ ಯೋಗಿಸಿದಲ್ಲಿ ಹಿಂದಿನ ಶ್ಲೋಕದಲ್ಲಿ ಹೇಳಿದ ರೋಗಗಳೆಲ್ಲಾ ಶಮನವಾಗುತ್ತವೆ.

ತೈಲಂಕಫೇಸ್ಯಾದ್ವಾತೇಚಕೇವಲೇಪವನೇವಸಾಂ ॥
ದದ್ಯಾನ್ನಸ್ಯಂಸದಾಪಿತ್ತೇಸರ್ಪಿರ್ಮಜ್ಜಾನಮೇವಚ ॥ ೩೫ ॥

ಕಫಪ್ರಧಾನವಾದ ರೋಗದಲ್ಲಿ ದೋಷಾಂತರ ಸಂಸೃಷ್ಟವಾದ ವಾತರೋಗದಲ್ಲಿ ನಸ್ಯಕ್ಕೆ ತೈಲವನ್ನು ಉಪಯೋಗಿಸಬೇಕು, ಕೇವಲ ವಾತರೋಗದಲ್ಲಿ ಮಾಂಸಸ್ನೇಹವನ್ನು ನಸ್ಯಕ್ಕೆ ಉಪಯೋಗಿಸಬೇಕು, ಪಿತ್ತರೋಗದಲ್ಲಿ ತುಪ್ಪವನ್ನಾಗಲಿ ಮಜ್ಜ ಎಂಬ ಒಂದು ಬಗೆಯ ಸ್ನೇಹವನ್ನಾಗಲಿ ನಸ್ಯವಾಗಿ ಉಪಯೋಗಿಸಬಹುದು.

ಮಾಷಾತ್ಮಗುಪ್ತಾರಾಸ್ನಾಭಿರ್ಬಲಾಖುಬುಕರೋಹಿಷೈಃ ॥
ಕೃತೋಽಶ್ವಗಂಧಯಾಕ್ವಾಥೋಹಿಂಗುಸ್ಸೈಂಧವಸಂಯುತಃ ॥ ೩೬ ॥
ಕೋಷ್ಣೋನಸ್ಯಪ್ರಯೋಗೇನಪಕ್ಷಾಘಾತಂಸಕಂಪನಂ ॥
ಜಯೇದರ್ದಿತವಾತಂಚಮನ್ಯಾಸ್ತಂಭಾಪಬಾಹುಕೌ ॥ ೩೭ ॥

ಉದ್ದು, ತುರಚೆ, ಸಣ್ಣರಾಸ್ಮೆ, ಕಳ್ಳಂಗಡ್ಲೆ, ಹರಳುಬೇರು, ಗಂಧ, ತೃಣ (ವಾಸನೆಹುಲ್ಲು) ಹಿರೀಮದ್ದಿನ ಬೇರು, ಇವುಗಳ ಕಷಾಯಮಾಡಿ ಸೈಂಧವ ಲವಣ, ಇಂಗು, ಇವುಗಳನ್ನು ಸೇರಿಸಿ ಸುಖೋಷ್ಣವಾಗಿ ನಸ್ಯವಾಗಿ ಉಪಯೋಗಿಸಿದಲ್ಲಿ ಪಕ್ಷವಾಯು, ಅವಯವಗಳು ನಡುಗುತ್ತಿರುವುದು, ಅರ್ದಿತ, ಮನ್ಯಾಸ್ತಂಭ, ಅಪಬಾಹುಕಗಳೆಂಬ ವಾತರೋಗಗಳನ್ನೂ ನಿವಾರಣಮಾಡುತ್ತದೆ.

ಪ್ರತಿಮರ್ಶಸ್ಯಮಾತ್ರಾತುದ್ವಿದ್ವಿಬಿಂದುಮಿತಾಮತಾ ॥
ಪ್ರತ್ಯೇಕಶೋನಸ್ತಕಯೋಸ್ನೇಹೇನೇತಿವಿನಿಶ್ಚಿತಂ ॥ ೩೮ ॥
ಸ್ನೇಹೇಗ್ರಂಥಿದ್ವಯಂಯಾವನ್ನಿಮಗ್ನಾಚೋದ್ಧೃತಾತತಃ ॥
ತರ್ಜನೀಯಂಸ್ರವೇದ್ಬಿಂದುಸಾಮಾತ್ರಾಬಿಂದುಸಂಜ್ಞಿತಾ ॥ ೩೯ ॥
ಏವಂವಿಧೈರ್ಬಿಂದುಸಂಜ್ಞೈರಷ್ಟಭಿಶ್ಶಾಣಉಚ್ಯತೇ ॥
ಸದೇಯೋಮರ್ಶನಸ್ಯೇತುಪ್ರತಿಮರ್ಶೋದ್ವಿಬಿಂದುಕಃ ॥ ೪೦ ॥
ಸಮಯಾಃಪ್ರತಿಮರ್ಶಸ್ಯಬುಧೈಃಪ್ರೋಕ್ತಾಶ್ಚತುರ್ದಶ ॥
ಪ್ರಭಾತೇದಂತಕಾಷ್ಠಾಂತೇಗೃಹಾನ್ನಿರ್ಗಮನೇತಥಾ ॥ ೪೧ ॥
ವ್ಯಾಯಾಮಾಧ್ವವ್ಯವಾಯಾಂತೇವಿಣ್ಮೂತ್ರಾಂತೇಜನೇಕೃತೇ ॥
ಕವಲಾಂತೇಭೋಜನಾಂತೇದಿವಾಸುಪ್ತೋತ್ಥಿತೇತಥಾ ॥ ೪೨ ॥
ವಮನಾಂತೇತಥಾಸಾಯಂಪ್ರತಿಮರ್ಶಃಪ್ರಯುಜ್ಯತೇ ॥
ಈಷದುಚ್ಛಿಕ್ಕನಾತ್ ಸ್ನೇಹೋಯದಾವಕ್ತ್ರಂಪ್ರಪದ್ಯತೇ ॥ ೪೩ ॥
ನಸ್ಯೇನಿಷಿಕ್ತಂತಂವಿದ್ಯಾತ್ಪ್ರತಿಮರ್ಶಂಪ್ರಮಾಣತಃ ॥
ಉಚ್ಛಿಂಘನ್ನಪಿಬೇಚ್ಚೈತನ್ನಿಷ್ಠೀವೇನ್ಮುಖಮಾಗತಂ ॥ ೪೪ ॥
ಕ್ಷೀಣೇತೃಷ್ಣಾಸ್ಯಶೋಷಾರ್ತೇಬಾಲೇವೃದ್ಧೇಚಯುಜ್ಯತೇ ॥
ಪ್ರತಿಮರ್ಶೇನಶಾಮ್ಯಂತಿರೋಗಾಶ್ಚೈವೋರ್ಧ್ವಜತ್ರುಜಾಃ ॥ ೪೫ ॥
ವಲೀಪಲಿತನಾಶಶ್ಚಬಲಮಿಂದ್ರಿಯಜಂಭವೇತ್ ॥

ಪ್ರತಿಮರ್ಶವೆಂಬ ಬೃಂಹಣನಸ್ಯವನ್ನು ಪ್ರಯೋಗಿಸಬೇಕಾದರೆ ಒಂದೊಂದು ಮೂಗಿನ ರಂಧ್ರದಲ್ಲಿ ಎರಡೆರಡು ಬಿಂದುವನ್ನು ಬಿಡಬೇಕು, ಬಿಂದುವೆಂದರೆ ಸ್ನೇಹದ್ರವ್ಯದಲ್ಲಿ ಎರಡು ಗೆಣ್ಣುಗಳು ಮುಳುಗುವವರೆಗೂ ಬೆರಳನ್ನು ಎದ್ದಿ ಮೇಲಕ್ಕೆ ಎತ್ತಿದರೆ ಬೆರಳುತುದಿಯಿಂದ ತೊಟ್ಟು ತೊಟ್ಟಾಗಿ ಬೀಳುವುದಕ್ಕೆ ಬಿಂದು ಎಂದು ಹೆಸರು, ಇಂತಹ ಎಂಟು ಬಿಂದುಗಳಿಗೆ ಒಂದು ಶಾಣವೆಂದು ಹೆಸರು, ಮರ್ಶವೆಂಬ ಬೃಂಹಣನಸ್ಯದಲ್ಲಿ ಶಾಣಪರಿಮಾಣವನ್ನೂ ಪ್ರತಿಮರ್ಶ ವೆಂಬ ನಸ್ಯದಲ್ಲಿ ಎರಡು ಬಿಂದುವನ್ನೂ ಮೂಗಿನ ಸೊಳ್ಳೆಗೆ ಬಿಡಬೇಕು, ಈ ಪ್ರತಿಮರ್ಶನಸ್ಯವನ್ನು ಒಂದು ದಿವಸದಲ್ಲಿ ಹದಿನಾಲ್ಕು ಬಾರಿ ಉಪಯೋಗಿಸ ಬಹುದು, ಬೆಳಿಗ್ಗೆ ಹಲ್ಲುಜ್ಜಿಕೊಂಡ ಮೇಲೆ, ಮನೆಯನ್ನು ಬಿಟ್ಟು ಹೊರಕ್ಕೆ ಹೋಗುವಾಗ್ಯೆ, ವ್ಯಾಯಾಮ ಮಾಡಿದಮೇಲೆ, ದಾರಿನಡೆದ ಮೇಲೆ, ಸ್ತ್ರೀಸಂಗ ಮಾಡಿದ ಮೇಲೆ, ಮಲಮೂತ್ರ ವಿಸರ್ಜನೆ ಮಾಡಿದ ಮೇಲೆ, ಕಣ್ಣಿಗೆ ಅಂಜನ ವನ್ನು ಉಪಯೋಗಿಸಿದ ಮೇಲೆ, ಜಲಪಾನಮಾಡಿದ ಮೇಲೆ, ಭೋಜನಮಾಡಿದ ಮೇಲೆ, ಹಗಲು ಮಲಗಿ ಎದ್ದಮೇಲೆ, ವಮನವಾದ ಮೇಲೆ, ಸಾಯಂಕಾಲದಲ್ಲಿ ಈ ರೀತಿ ಹದಿನಾಲ್ಕು ವೇಳೆ ಪ್ರತಿಮರ್ಶ ನಸ್ಯವನ್ನುಪಯೋಗಿಸಬೇಕು, ಸ್ವಲ್ಪ ಮಾತ್ರ ಉಸಿರನ್ನು ಒಳಕ್ಕೆ ಎಳದರೆ ಮೂಗಿನಲ್ಲಿ ಬಿಟ್ಟ ನಸ್ಯಸ್ನೇಹವು ಬಾಯಿಗೆ ಬಂದು ಬಿಟ್ಟಲ್ಲಿ ಪ್ರತಿಮರ್ಶ ನಸ್ಯಪ್ರಮಾಣವು ಅಲ್ಲಿಗೆ ಸಮನಾಯಿತೆಂದರಿಯ ಬೇಕು, ಮತ್ತು ಬಾಯಿಗೆ ಬಂದ ಸ್ನೇಹವನ್ನು ನುಂಗದೆ ಉಗುಳಿಬಿಡಬೇಕು, ಕ್ಷೀಣರಾದವರು, ಮುಖಶೋಷಿಸಿದವರು, ಹುಡುಗರು, ಮುದುಕರು, ಇಂತವರಿಗೆ ಈ ನಸ್ಯವು ಒಳ್ಳೆಯದು, ಕುತ್ತಿಗೆಯ ಮೇಲಿನ ಅವಯುವಗಳಿಗೆ ಬರುವ ರೋಗ ಗಳೆಲ್ಲಾ ಈ ಪ್ರತಿಮರ್ಶನಸ್ಯದಿಂದ ಶಮನವಾಗುವುದಲ್ಲದೆ ಚರ್ಮ ಸುಕ್ಕುಹಿಡಿ ದಿರುವುದು, ಅಕಾಲದಲ್ಲಿ ಕೂದಲು ಬೆಳ್ಳಗಾಗಿರುವುದು, ಇಂದ್ರಿಯಗಳ ಬಲ ಕುಂದಿರುವುದು, ಇವುಗಳೆಲ್ಲಾ ಗುಣವಾಗುತ್ತವೆ.

ವಿಭೀತನಿಂಬಕಂಭಾರೀಶಿವಾಶೇಲುಶ್ಚಕಾಕಿನೀ ॥ ೪೬ ॥
ಪಿಕೈಕತೈಲನಸ್ಯೇನಪಲಿತಂನಶ್ಯತಿಧ್ರುವಂ ॥

ತಾರೇಪಪ್ಪು, ಬೇವಿನಪಪ್ಪು, ಶಿವನೆಪಪ್ಪು, ಅಳಲೇಕಾಯಿನ ಪಪ್ಪು, ಶೇಲು ಎಂಬ ಸ್ವನಾಮಪ್ರಸಿದ್ಧವಾದ ಗಿಡದಬೀಜ, ಕಾಕಿನಿ ಎಂದರೆ ಕಾಗೋಲೀ ಎಂಬ ದಶಮೂಲಾಂತರ್ಗತವಾದ ಮೂಲಿಕೆ ಇವುಗಳೊಂದೊಂದರ ತೈಲವನ್ನು ನಸ್ಯ ವಾಗಿ ಉಪಯೋಗಿಸಿದರೂ ಅಕಾಲದಲ್ಲಿ ತಲೆಗೂದಲು ನರತದ್ದು ಖಂಡಿತವಾಗಿ ಗುಣವಾಗುತ್ತದೆ.

ಅಥನಸ್ಯವಿಧಿಂವಕ್ಷ್ಯೇನಸ್ಯಗ್ರಹಣಹೇತವೇ ॥ ೪೭ ॥
ದೇಶೇವಾತರಜೋಮುಕ್ತೇಕೃತದಂತನಿಘರ್ಷಣಂ ॥
ವಿಶುದ್ಧಧೂಮಪಾನೇನಸ್ವಿನ್ನಭಾಲಗಲಂತಥಾ ॥ ೪೮ ॥
ಉತ್ತಾನಶಾಯಿನಂಕಿಂಚಿತ್ಪ್ರಲಂಬಶಿರಸಂನರಂ ॥
ಆಸ್ತೀರ್ಣಹಸ್ತಪಾದಂಚವಸ್ತ್ರಚ್ಛಾದಿತಲೋಚನಂ ॥ ೪೯ ॥
ಸಮುನ್ನಮಿತನಾಸಾಗ್ರಂವೈದ್ಯೋನಸ್ಯೇನಯೋಜಯೇತ್ ॥
ಕೋಷ್ಣಮಚ್ಛಿನ್ನಧಾರಂಚಹೇಮತಾರಾದಿಶುಕ್ತಿಭಿಃ ॥ ೫೦ ॥
ಶುಕ್ತ್ಯಾವಾಯುತ್ರಯುಕ್ತ್ಯಾವಾಪ್ಲೋತೈರ್ವಾನಸ್ಯಮಾಚರೇತ್ ॥
ನಸ್ಯೇಷ್ವಾಸಿಚ್ಯಮಾನೇಷುಶಿರೋನೈವಪ್ರಕಂಪಯೇತ್ ॥ ೫೦ ॥
ನಕುಪೇನ್ನಪ್ರಭಾಷೇತನೋಚ್ಛಿದೇನ್ನಹಸೇತ್ತಥಾ ॥
ಏತೈರ್ಹಿವಿಹಿತಸ್ನೇಹೋನೈವಾಂತಸ್ಸಂಪ್ರಪದ್ಯತೇ ॥ ೫೧ ॥
ತತಃಕಾಸಪ್ರತಿಶ್ಯಾಯಶಿರೋಕ್ಷಿಗದಸಂಭವಃ ॥
ಶೃಂಗಾಟಕಮಭಿಪ್ಲಾವ್ಯಸ್ಥಾಪಯೇನ್ನಗಿಲೇದ್ದ್ರವಂ ॥ ೫೨ ॥

ನಸ್ಯಪ್ರಯೋಗಕ್ರಮವೆಂತೆಂದರೆ—ಗಾಳಿ ಮತ್ತು ಧೂಳು ನುಗ್ಗದಂತಹ ಪ್ರದೇಶದಲ್ಲಿ ರೋಗಿಗೆ ದಂತಧಾವನಮಾಡಿಸಿ ಧೂಮಪಾನವಿಧಿಯಲ್ಲಿ ಹೇಳಿದ ಕ್ರಮದಂತೆ ಧೂಮಪಾನಮಾಡಿಸಿ ಹಣೆ ಮತ್ತು ಕೊರಳುಗಳನ್ನು ಸ್ವೇದನ ಮಾಡಿಸಿ ಊರ್ಧ್ವಮುಖವಾಗಿ ಮಲಗಿಸಿ ಕೊಂಚ ತಲೆ ಹಿಂದಕ್ಕೆ ಬಾಗುವ ಹಾಗೆ ಮಾಡಿ ಕೈಕಾಲುಗಳನ್ನು ಚನ್ನಾಗಿ ನೀಡಿಸಿ ಕಣ್ಣುಗಳನ್ನು ಬಟ್ಟೆಯಿಂದ ಮುಚ್ಚಿ ಮೂಗನ್ನು ಸ್ವಲ್ಪ ಮೇಲಕ್ಕೆ ಎತ್ತಿಕೊಂಡಿರುವಂತೆ ಮಾಡಿ ನಸ್ಯಪ್ರಯೋಗ ಮಾಡಬೇಕು, ನಸ್ಯರೂಪವಾಗಿ ಪ್ರಯೋಗಿಸುವ ದ್ರವದ್ರವ್ಯವನ್ನು ಕೊಂಚವಾಗಿ ಬೆಚ್ಚಗೆಮಾಡಿ ಭಂಗಾರ ಅಥವಾ ಬೆಳ್ಳಿಯಿಂದ ಕಪ್ಪೆಚಿಪ್ಪಿನ ಹಾಗೆ ಮಾಡಿಸಿ ಅನುಕೂಲವಿಲ್ಲದಿದ್ದಲ್ಲಿ ಕಪ್ಪೆಯಚಿಪ್ಪಿನಲ್ಲಿಯೇ ಹಾಕಿಕೊಂಡು ಸಣ್ಣ ಧಾರೆಯಾಗಿ ಮೂಗಿಗೆ ಬಿಡಬೇಕು, ಅನುಕೂಲವಾದ ಇನ್ನೂ ಯಾವದಾದರೂ ರೀತಿಯಿಂದ ಲಾದರೂ ಬಿಡಬಹುದು, ನಸ್ಯದ್ರವವು ಮೂಗಿಗೆ ಬೀಳುತ್ತಿರುವಾಗ್ಯೆ ತಲೆಯನ್ನು ಅಲ್ಲಾಡಿಸಬಾರದು, ಶಿಟ್ಟುಬರುವಂತೆ ಮಾಡಿಕೊಳ್ಳಬಾರದು, ಮಾತಾಡಬಾರದು, ಶೀನಬಾರದು, ನಗಬಾರದು, ಹಾಗೆ ಮಾಡಿದಲ್ಲಿ ನಸ್ಯವು ಚನ್ನಾಗಿ ವ್ಯಾಪಿಸಿ ಗುಣಕಾರಿಯಾಗದೆ ಕೆಮ್ಮು, ನೆಗಡಿ, ತಲೆನೋವು, ಕಣ್ಣುನೋವು ಇವುಗಳ ನ್ನೆಲ್ಲಾ ಹುಟ್ಟಿಸುತ್ತದೆ, ನಸ್ಯದ್ರವವನ್ನು ಎರಡು ಸೊಳ್ಳೆಗಳಲ್ಲಿಯೂ ಮೂಗಿನ ಮಧ್ಯದ ಎಲುವಿಗೆ ಚನ್ನಾಗಿ ಆಪ್ಯಾಯನವಾಗಿ ವ್ಯಾಪಿಸುವಂತೆ ಮೂಗಿನಲ್ಲಿಯೇ ನಿಲ್ಲಿಸಿಕೊಳ್ಳಬೇಕು, ನುಂಗಬಾರದು.

ಪಂಚಸಪ್ತದಶೈವಸ್ಯುರ್ಮಾತ್ರಾನಸ್ಯಸ್ಯಧಾರಣೇ ॥

ನಸ್ಯದ್ರವವನ್ನು ಐದು ಮಾತ್ರೆಯ ಕಾಲ, ಏಳು ಮಾತ್ರೆಯ ಕಾಲ ಅಥವಾ ಹತ್ತು ಮಾತ್ರೆಯ ಕಾಲ ದೋಷಾನುಗುಣವಾಗಿ ಮೂಗಿನಲ್ಲಿ ನಿಲ್ಲಿಸಿಕೊಳ್ಳಬೇಕು

ಉಪವಿಶ್ಯಾಥನಿಷ್ಠೀವೇನ್ನಾಸಾವಕ್ತ್ರಗತಂದ್ರವಂ ॥ ೩೪ ॥
ವಾಮದಕ್ಷಿಣಪಾರ್ಶ್ವಾಭ್ಯಾಂನಿಷ್ಠೀವೇತ್ಸಂಮುಖೇನಹಿ ॥
ನೀತೇನಸ್ಯೇಮನಸ್ತಾಪಂರಜಃಕ್ರೋಧಂಚಸಂತ್ಯಜೇತ್ ॥ ೩೫ ॥
ಶಯೀತನಿದ್ರಾಂತ್ಯಕ್ತ್ವಾಚಪ್ರೋಕ್ತಾನೋವಾಕ್‌ಶತಂನರಃ ॥
ತಥಾವೈರೇಚನಸ್ಯಾಂತೇಧೂಮೋವಾಕವಲೋಹಿತಃ ॥ ೩೬ ॥

ಹಿಂದೆ ಹೇಳಿದಷ್ಟು ಹೊತ್ತು ಮೂಗಿನಲ್ಲಿಟ್ಟುಕೊಂಡಿದ್ದು ನಂತರ ಎದ್ದು ಕುಳಿತುಕೊಂಡು ಮೂಗು ಬಾಯಿಗಳಲ್ಲಿರುವ ದ್ರವವನ್ನು ಉಗುಳಿ ಬಿಡಬೇಕು, ಉಗುಳಬೇಕಾದರೆ ಮೂಗಿನ ಎಡಸೊಳ್ಳೆಯನ್ನು ಮುಚ್ಚಿ ಬಲಸೊಳ್ಳೆಯಿಂದಲೂ ಬಲಸೊಳ್ಳೆಯನ್ನು ಮುಚ್ಚಿ ಎಡಸೊಳ್ಳೆಯಿಂದಲೂ ಹೊರಕ್ಕೆ ಹೊರಡಿಸಬೇಕು, ಸಂಮುಖವೆಂದರೆ ಎರಡರಿಂದಲೂ ಒಂದೇ ಬಾರಿ ಹೊರಡಿಸುವ ಪ್ರಯತ್ನ ಮಾಡಬಾರದು, ಹಾಗೆ ಮಾಡಿದರೆ ದ್ರವವು ಸ್ವಚ್ಛವಾಗಿ ಹೊರಹೊರಡುವದಿಲ್ಲ, ನಂತರ ಮನಸ್ಸಿಗೆ ಸಂತಾಪವನ್ನುಂಟುಮಾಡತಕ್ಕ ವಿಷಯಗಳನ್ನೂ ಧೂಳಿನಲ್ಲಿರುವುದನ್ನೂ ಸಿಟ್ಟನ್ನೂ ಸಹ ತ್ಯಜಿಸಿ ನಿದ್ರೆಮಾಡದೆ ಅಂಗತನಾಗಿ ವಾಕ್‌ಶತಂ ಅಂದರೆ ಒಂದುನೂರು ಗುರ್ವಕ್ಷರಗಳನ್ನು ಉಚ್ಚರಿಸುವಷ್ಟು ಕಾಲ ಮಲಗಿರಬೇಕು, ನಂತರ ಧೂಮವನ್ನಾಗಲೀ ಔಷಧಕಷಾಯ ಸಿದ್ಧವಾದ ಕವಲವನ್ನಾಗಲೀ ಬಾಯಿನಲ್ಲಿ ಧರಿಸಬೇಕು.

ನಸ್ಯೇತ್ರೀಣ್ಯುಪದಿಷ್ಟಾನಿಲಕ್ಷಣಾನಿಪ್ರಯೋಗತಃ ॥
ಶುದ್ಧಿಹೀನಾತಿಯೋಗಾನಿವಿಶೇಷಾತ್‌ಶಾಸ್ತ್ರಚಿಂತಕೈಃ ॥ ೩೭ ॥

ನಸ್ಯಪ್ರಯೋಗದಲ್ಲಿ ಶುದ್ಧಿ, ಹೀನಶುದ್ಧಿ, ಅತಿಶುದ್ಧಿ ಎಂಬದಾಗಿ ಮೂರು ವಿಧವೆಂದು ಶಾಸ್ತ್ರಜ್ಞರು ಹೇಳಿದ್ದಾರೆ.

ಲಾಘವಂಮನಸಶ್ಶುದ್ಧಿಸ್ರೋತಸಾಂವ್ಯಾಧಿಸಂಕ್ಷಯಃ ॥
ಚಿತ್ತೇಂದ್ರಿಯಪ್ರಸಾದಶ್ಚಶಿರಸಶ್ಶುದ್ಧಿಲಕ್ಷಣಂ ॥ ೩೮ ॥

ಹಿಂದಿನ ಶ್ಲೋಕದಲ್ಲಿ ಹೇಳಿದ ಶುದ್ಧಿಲಕ್ಷಣವೇನಂದರೆ—ಶರೀರಲಾಘವ, ಮನಸ್ಸು ಶುದ್ಧವಾಗಿರುವುದು, ರಸರಕ್ತಾದಿವಾಹಿನಿಗಳಾದ ನಾಡಿಗಳು ಶುದ್ಧವಾಗಿರುವುದು, ವ್ಯಾಧಿಗಳು ನಿವೃತ್ತಿಯಾಗಿರುವುದು, ಇಂದ್ರಿಯ ಮತ್ತು ಮನಸ್ಸಿಗೆ ಹರ್ಷವಿರುವುದು, ಇವುಗಳು ನಸ್ಯಪ್ರಯೋಗದಿಂದ ಶಿರಸ್ಸು ಶುದ್ಧವಾಗಿರುವುದಕ್ಕೆ ಲಕ್ಷಣಗಳು.

ಅಧೂಮಾರ್ಹಾಶ್ಚ ಖಲ್ವೇತೇಶ್ರಾಂತೋಭೀತಶ್ಚ ದುಖ್ಖಿತಃ ॥ ೩ ॥
ದತ್ತ ಬಸ್ತಿರ್ವಿರಿಕ್ತಶ್ಚ ರಾತ್ರೌಜಾಗರಿತಸ್ತಥಾ ॥
ಪಿಪಾಸಿತಶ್ಚ ದಾಹಾರ್ತಸ್ತಾಲುಶೋಷೀತಥೋದರೀ ॥ ೪ ॥
ಶಿರೋಭಿತಾಪೀತಿಮಿರೀಛರ್ದ್ಯಾಧ್ಮಾನಪ್ರಪೀಡಿತಃ ॥
ಕ್ಷತೋರಸ್ಕಃಪ್ರಮೇಹಾರ್ತಃಪಾಂಡುರೋಗೀಚಗರ್ಭಿಣೀ ॥ ೫ ॥
ರೂಕ್ಷಃಕ್ಷೀಣೋಭ್ಯವಹೃತಕ್ಷೀರಕ್ಷೌದ್ರಘೃತಾಸವಃ ॥
ಭುಕ್ತಾನ್ನ ದಧಿಮತ್ಸ್ಯಶ್ಚ ಬಾಲೋವೃದ್ಧಃಕೃಶಸ್ತಥಾ ॥ ೬ ॥

ಯಾರು ಹೊಗೆಯನ್ನು ಸೇದಬಾರದು ಎಂಬ ವಿಚಾರವನ್ನು ವಿಶದಪಡಿಸುತ್ತಾನೆ. ಯಾವುದಾದರೂ ಕಷ್ಟಕರವಾದ ಕೆಲಸಮಾಡಿ ಆಯಾಸಹೊಂದಿದವರು ಹೊಗೆಯನ್ನು ಸೇದಬಾರದು ಹೆಚ್ಚಾಗಿ ಹೆದರಿದವರೂ ಹೊಗೆಯನ್ನು ಸೇದಬಾರದು. ಅತಿಯಾಗಿ ದುಖ್ಖಿತರಾದವರೂ ಹೊಗೆಯನ್ನು ಸೇದಬಾರದು ಬಸ್ತಿಪ್ರಯೋಗವನ್ನು ಮಾಡಿಸಿಕೊಂಡವರು ಅಂದರೆ ಹಿಂದೆ ಬಸ್ತಿ ಪ್ರಕರಣದಲ್ಲಿ ಹೇಳಲ್ಪಟ್ಟ ನಿರೂಹ ಅನುವಾಸನ ಮೊದಲಾದ ಯಾವ ವಿಧವಾದ ಬಸ್ತಿಯನ್ನು ಉಪಯೋಗಿಸಿದವರೂ ಹೊಗೆಯನ್ನು ಸೇದಲಾಗದು. ವಿರೇಚನೌಷಧವನ್ನು ಸೇವಿಸಿದವರು ಅಂದರೆ ಬೇಧಿಗೆ ತೆಗೆದುಕೊಂಡವರೂ ಹೊಗೆಯನ್ನು ಸೇದಬಾರದು. ರಾತ್ರಿಯಲ್ಲಿ ಯಾವುದಾದರೂ ಕಾರಣದಿಂದ ಜಾಗರಣೆ ಮಾಡಿದವರೂ ಹೊಗೆ ಸೇದಬಾರದು. ಹೆಚ್ಚಿಗೆ ಬಾಯಾರಿಕೆ ಇರುವಾಗ್ಯೆ ಹೊಗೆ ಸೇದಬಾರದು. ಮೈಯ್ಯುರಿ ಇರುವವರು ದವಡೆ ಮುಖ ಇವು ಶೋಷಿಸಿ ಬತ್ತಿಹೋಗಿರುವವರೂ ಉದರರೋಗಿಗಳೂ, ಶಿರೋವೇದ ಇರುವವರೂ, ದೃಷ್ಟಿಮಾಂದ್ಯವಿರುವವರೂ, ವಮನವಾಗುತ್ತಿರುವವರು, ಹೊಟ್ಟೆಯುಬ್ಬರವಿರುವವರು, ಉರಃಕ್ಷತವೆಂದರೆ ಎದೆಯು ಯಾವುದಾದರೂ ಕಾರಣದಿಂದ ಕೆಟ್ಟುಹೋಗಿರುವವರು, ಮೇಹರೋಗಿಗಳು, ಪಾಂಡುರೋಗಿಗಳು, ಗರ್ಭಿಣಿಯಾದ ಹೆಂಗಸರು, ದೇಹಸ್ಥಿತಿಯುರೂಕ್ಷಾಹಾರದಿಂದರೂಕ್ಷವಾಗಿರತಕ್ಕವರು. ಕ್ಷಯಿಸಿಹೋದವರು, ಹಾಲು, ಜೇನು ತುಪ್ಪ, ಘೃತ, ಆಸವಾರಿಷ್ಟಗಳು ಇವುಗಳನ್ನು ಸೇವಿಸಿದವರು, ಊಟಮಾಡಿದವರು, ಮೊಸರನ್ನು ಉಪಯೋಗಿಸಿದವರು, ಮೀನನ್ನು ತಿನ್ನುವವರು, ಹುಡುಗರು, ಮುದುಕರು, ಬಡಕಲಾದವರು, ಇಂತವರುಗಳೆಲ್ಲಾ ಹೊಗೆಯನ್ನು ಸೇದಬಾರದು.

ಅಕಾಲೇಚಾತಿಪೀತಶ್ಚ ಧೂಮಃಕುರ್ಯಾದುಪದ್ರವಾನ್ ॥
ತತ್ರೇಷ್ಟಂಸರ್ಪಿಷಃಪಾನಂನಾವನಾಂಜನತರ್ಪಣಂ ॥ ೭ ॥

ಸರ್ಪಿರಿಕ್ಷುರಸಂದ್ರಾಕ್ಷಾಂಪಯೋವಾಶರ್ಕರಾಂಬುವಾ ॥
ಮಧುರಾಮ್ಲೌರಸೌವಾಪಿಶಮನಾಯಪ್ರದಾಪಯೇತ್ ॥ ೮ ॥

ಕಾಲವಲ್ಲದ ಕಾಲದಲ್ಲಿ ಧೂಮಪಾನ ಮಾಡುವುದರಿಂದ ಉಂಟಾಗುವ ದೋಷಗಳಿಗೆ ಪ್ರತೀಕಾರವನ್ನು ಹೇಳುತ್ತಾನೆ. ಕಾಲವಲ್ಲದಕಾಲದಲ್ಲಿ ಧೂಮಪಾನ ಮಾಡಿದರೂ ಅತಿಯಾಗಿ ಧೂಮಪಾನ ಮಾಡಿದರೂ ನಾನಾವಿಧಗಳಿಂದ ಉಪದ್ರವಗಳನ್ನು ಉಂಟುಮಾಡುತ್ತದೆ. ಅಂತಹ ಸಂದರ್ಭದಲ್ಲಿ ತುಪ್ಪವನ್ನು ಕುಡಿಯುವುದು, ನಸ್ಯಕರ್ಮವನ್ನಾಚರಿಸುವುದು, ಕಣ್ಣಿಗೆ ಅಂಜನವನ್ನು ಹಾಕಿಕೊಳ್ಳುವುದು, ತರ್ಪಣಕ್ರಿಯೆಯನ್ನು ಆಚರಿಸುವುದು ಅಂದರೆ ಧೂಮಪಾನವು ಹೆಚ್ಚಾಗುವುದರಿಂದ ಹುಟ್ಟಬಹುದಾದ ಉಪದ್ರವಗಳಾದ ಬಾಯಾರಿಕೆ ಮೈಯ್ಯುರಿ ಜ್ವರ ಮೊದಲಾದವುಗಳನ್ನು ಶಮನಮಾಡತಕ್ಕ ಸಂತರ್ಪಣಕ್ರಿಯೆಯನ್ನು ಅಂದರೆ ಶಮನೋಪಾಯವನ್ನು ಅನುಸರಿಸುವುದ ಅಲ್ಲದೆ ಈ ಕೆಳಗೆ ಹೇಳುವ ಯೋಗಗಳನ್ನೂ ಯಥೋಚಿತವಾಗಿ ಉಪಯೋಗಿಸಬಹುದು ಯಾವುವೆಂದರೆ.—ತುಪ್ಪ ಮತ್ತು ಕಬ್ಬಿನರಸವನ್ನು ಕುಡಿಯುವುದಕ್ಕೆ ಉಪಯೋಗಿಸುವುದು, ದ್ರಾಕ್ಷಿ ಮತ್ತು ಹಾಲು ಇವುಗಳನ್ನು ಸೇರಿಸಿ ಉಪಯೋಗಿಸುವುದು, ಸಕ್ಕರೆಕೂಡಿಸಿದನೀರು ಅಂದರೆ ಸಕ್ಕರೆಯ ಪಾನಕ, ಮಧುರರಸ ಮತ್ತು ಹುಳಿರಸ ಇವುಗಳನ್ನು ಕೊಡುವುದು, ಮತ್ತು ವಮನೌಷಧಗಳನ್ನು ಕೊಡುವುದು, ಈ ಕ್ರಮವನ್ನೆಲ್ಲಾ ಅನುಸರಿಸಬೇಕು

ಧೂಮಸ್ತುದ್ವಾದಶಾದ್ವರ್ಷಾದ್ಗ್ರಾಹ್ಯಶೀತಿಕಾನ್ನಚ ॥
ಕಾಸಶ್ವಾಸಪ್ರತಿಶ್ಯಾಯಾನ್ಮನ್ಯಾಹನುಶಿರೋರುಜಃ ॥ ೯ ॥
ವಾತಶ್ಲೇಷ್ಮವಿಕಾರಾಂಶ್ಚಹನ್ಯಾದ್ಧೂಮಸ್ಸುಯೋಜಿತಃ ॥
ಧೂಮಪ್ರಯೋಗಾತ್ಪುರುಷಃಪ್ರಸನ್ನೇಂದ್ರಿಯವಾಙ್ಮನಾಃ॥ ೧೦ ॥
ದೃಢಕೇಶದ್ವಿಜಶ್ಮಶ್ರುಃಸುಗಂಧಿವದನೋಭವೇತ್ ॥

ಧೂಮಪಾನವನ್ನು ಹನ್ನೆರಡನೆಯ ವರುಷ ಮೊದಲುಮಾಡಿಕೊಂಡು ಎಂಬತ್ತನೆಯ ವರುಷದ ವರೆವಿಗೂ ಮಾಡಿಸಬಹುದು, ಅನಂತರ ಮಾಡಿಸಬಾರದು, ಅಂದರೆ ಹನ್ನೆರಡುವರುಷ ವಯಸ್ಸಾಗುವ ಮೊದಲು ಎಂಬತ್ತುವರುಷ ತುಂಬಿದ ಮೇಲೆ ಧೂಮಪಾನರೂಪವಾದ ಚಿಕಿತ್ಸೆಯನ್ನು ಮಾಡಬಾರದೆಂದು ತಾತ್ಪರ್ಯ. ವಿಧಿಗೆ ಅನುಸಾರವಾಗಿ ಮಾಡಲ್ಪಟ್ಟ ಧೂಮಪಾನವು ಕೆಮ್ಮಲು ಉಬ್ಬಸ ನೆಗಡಿ ತಲೆಯಪಾರ್ಶ್ವದಲ್ಲಿ ಸಂಭವಿಸುವ ನೋವು ದವಡೆಯಲ್ಲಿ

ಉಂಟಾಗುವ ನೋವು ತಲೆಶೂಲೆ ಇನ್ನೂ ಅನೇಕಬಗೆಯ ವಾತಸಂಬಂಧದ ವಿಕಾರಗಳು ಮತ್ತು ಶ್ಲೇಷ್ಮ ವಿಕಾರಗಳು ಇವುಗಳನ್ನೆಲ್ಲಾ ನಿವಾರಣಮಾಡುತ್ತದೆ. ಅಲ್ಲದೆ ಇಂತಹ ಔಷಧರೂಪವಾದ ಹೊಗೆಯನ್ನು ಸೇದೋಣದರಿಂದ ಇಂದ್ರಿಯ ಗಳು ಪ್ರಸನ್ನವಾಗುತ್ತವೆ, ವಾಕ್‌ಶಕ್ತಿ ಉತ್ತಮಗೊಳ್ಳುತ್ತದೆ, ಮನಸ್ಸು ಹರ್ಷ ಗೊಳ್ಳುತ್ತದೆ, ಕೂದಲುಗಳು ಮತ್ತು ಹಲ್ಲುಗಳು ಮೀಸೆಯಕೂದಲು ಇವುಗಳೆಲ್ಲಾ ಬಲಗೊಳ್ಳುತ್ತವೆ, ಬಾಯಿನ ದುರ್ಗಂಧವೆಲ್ಲವೂ ನಿವೃತ್ತಿಯಾಗಿ ಸುವಾಸನೆ ಯುಂಟಾಗುತ್ತವೆ,

ಧೂಮನಾಡೀಭವೇತ್ತ್ರಿಖಂಡಾಚತ್ರಿಪರ್ವಿಕಾ ॥ ೧೧ ॥
ಕನಿಷ್ಠಿಕ ಪರೀಣಾಹಾರಾಜವೂಷಾಗವೂಂತರಾ ॥
ಧೂಮನಾಡೀಭವೇದ್ದೀರ್ಘಾಶಮನೇರೋಗಿಣೋಂಗುಲೈಃ ॥ ೧೨ ॥
ಚತ್ವಾರಿಂಶನ್ಮಿತೈಸ್ತದ್ವದ್ವಾತ್ರಿಂಶದ್ಭಿರ್ಮೃದೌಮತಾ ॥
ತೀಕ್ಷ್ಣೇಚತುರ್ವಿಂಶತಿಭಿಃಕಾಸಘ್ನೇಷೋಡಶೋನ್ಮಿತೈಃ ॥ ೧೩ ॥
ದಶಾಂಗುಲೈರ್ವಾಮನೀಯೇತಥಾಸ್ಯಾದ್ವ್ರಣನಾಡಿಕಾ ॥
ಕಲಾಯಮಂಡಲಸ್ಥೂಲಾಕುಲಿತ್ಥಾಗಮರಂಧ್ರಿಕಾ ॥ ೧೪ ॥

ಧೂಮಪಾನಮಾಡತಕ್ಕ ನಾಡಿ ಎಂದರೆ ನಳಿಗೆಯ ಸ್ವರೂಪ ಮತ್ತು ಪ್ರಮಾಣವನ್ನು ಹೇಳುತ್ತಾನೆ:—ಹೊಗೆಯನ್ನು ಸೇದತಕ್ಕ ನಳಿಗೆಯು ಅಂದರೆ ಶಮನಾರ್ಥವಾಗಿ ಧೂಮಪಾನ ಮಾಡತಕ್ಕ ಕೊಳವೆಯು ಯಾವ ರೋಗಿಗೆ ಶಮನ ಧೂಮಪಾನ ಮಾಡಿಸುತ್ತೇವೆಯೊ ಅವನ ಅಂಗುಲದಲ್ಲಿ ಇಪ್ಪತ್ತನಾಲ್ಕು ಅಂಗುಲ ಉದ್ದವಿರಬೇಕು, ಸಾಮಾನ್ಯವಾಗಿ ಹೊಗೆ ಸೇದತಕ್ಕ ಕೊಳವೆಯು ಕಿರು ಬೆರಳಿನಷ್ಟು ದಪ್ಪವಾಗಿಯೂ ಮೂರು ಗೆಣ್ಣುಳ್ಳದ್ದಾಗಿಯೂ ಗೆಣ್ಣಿಗೆ ಒಂದು ಕಡೆಯಲ್ಲಿ ಕಳಚುವುದಕ್ಕೆ ಬರುವಹಾಗೆ ಮೂರುಭಾಗ ಮಾಡಲ್ಪಟ್ಟದ್ದಾಗಿಯೂ ಹಲಸಂದೆಯಕಾಳು ಒಳಗೆ ಹೋಗುವಷ್ಟು ರಂಧ್ರಉಳ್ಳದ್ದಾಗಿಯೂ ಇರಬೇಕು. ಮೃದು ಧೂಮಪಾನಮಾಡತಕ್ಕ ಅಂದರೆ ಬೃಂಹಣ ಧೂಮಪಾನಕ್ಕೆ ಉಪ ಯೋಗಿಸುವ ನಳಿಗೆಯು ಉದ್ದವು ಮೂವತ್ತೆರಡು ಅಂಗುಲ ಪ್ರಮಾಣದ್ದಾಗಿರ ಬೇಕು. ತೀಕ್ಷ್ಣ ಧೂಮಪಾನ ಮಾಡಿಸತಕ್ಕದ್ದು ಅಂದರೆ ರೇಚನ ಸಂಜ್ಞಕವಾದ ಧೂಮಪಾನ ಮಾಡಿಸುವ ನಳಿಗೆಯು ಉದ್ದವು ಇಪ್ಪತ್ತನಾಲ್ಕು ಅಂಗುಲ ಪ್ರಮಾಣ ವಾಗಿ ಇರಬೇಕು ಕಾಸಹರ ಅಂದರೆ ಕೆಮ್ಮನ್ನು ನಿವಾರಿಸುವುದಕ್ಕಾಗಿ ಹೊಗೆ ಯನ್ನು ಸೇದುವ ನಳಿಗೆಯು ಹದಿನಾರು ಅಂಗುಲ ಅಳತೆಯುಳ್ಳದ್ದಾಗಿಯೂ ವಮನಾರ್ಥವಾಗಿ ಹೊಗೆಯನ್ನು ಸೇದುವ ನಳಿಗೆಯು ಹತ್ತು ಅಂಗುಲ ಮಾತ್ರ ಉದ್ದವಾಗಿಯೂ ಇರಬೇಕು. ವ್ರಣಗಳಿಗೆ ಹೊಗೆಯನ್ನು ಕೊಡತಕ್ಕ ವ್ರಣ

ಚಿಕಿತ್ಸೋಪಯೋಗಿಯಾದ ಧೂಮನಾಡಿಯು ಹತ್ತಂಗುಲ ಉದ್ದವಾಗಿಬಟಾಣಿಯ ಕಾಳಿನಷ್ಟು ದಪ್ಪವಾಗಿಯೂ, ಕುಳಿತ್ಥವೆಂದರೆ ಹುರಳಿಯಕಾಳು ಹೋಗುವಷ್ಟು ವಿಶಾಲವಾದ ರಂಧ್ರ ಉಳ್ಳದ್ದಾಗಿಯೂ ಇರಬೇಕು ಅಂದರೆ ಹುರಳಿಯಕಾಳಿನ ಆಕಾರದ ರಂಧ್ರ ಮಾಡಬೇಕೆಂಬ ತಾತ್ಪರ್ಯ.

ಅಥೇಷಿಕಾಂಪ್ರಲಿಂಪೇಚ್ಚ ಸುಕ್ಷ್ಮಕ್ಷ್ಣಾಂದ್ವಾದಶಾಂಗುಲಾಂ ॥
ಧೂಮದ್ರವ್ಯಸ್ಯಕಲ್ಕೇನಲೇಪಶ್ಚಾಷ್ಟಾಂಗುಲಸ್ಮೃತಃ ॥ ೧೫ ॥
ಕಲ್ಕಂಕರ್ಷಮಿತಂಲಿಪ್ತ್ವಾಛಾಯಾಶುಷ್ಕಂಚಕಾರಯೇತ್ ॥
ಈಷಿಕಾಮಪನೀಯಾಥಸ್ನೇಹಾಕ್ತಾಂವರ್ತಿಮಾದರಾತ್ ॥ ೧೬ ॥
ಅಂಗಾರೈರ್ದೀಪಿತಾಂಕೃತ್ವಾಧೃತ್ವಾನೇತ್ರಸ್ಯರಂಧ್ರಕೇ ॥
ವದನೇನಪಿಬೇದ್ಧೂಮಂವದನೇನೈವಸಂತ್ಯಜೇತ್ ॥ ೧೭ ॥
ನಾಸಿಕಾಭ್ಯಾಂತತಃಪೀತ್ವಾಮುಖೇನೈವವಮೇತ್ಸುಧೀಃ ॥
ಶರಾವಸಂಪುಟೇಕ್ಷಿಪ್ತ್ವಾಕಲ್ಕಮಂಗಾರದೀಪಿತಂ ॥ ೧೮ ॥
ಛಿದ್ರೇನೇತ್ರೇನಿವೇಶ್ಯಾಥವ್ರಣಂತೇನೈವಧೂಪಯೇತ್ ॥

ಧೂಮವರ್ತಿ ನಿರ್ಮಾಣಕ್ರಮವನ್ನು ಹೇಳುತ್ತಾನೆ:—ಹತ್ತಿಯನ್ನು ಚನ್ನಾಗಿ ಬಿಡಿಸಿ ಕಿರುಬೆರಳುಗಾತ್ರವಾಗಿಯೂ ಹನ್ನೆರಡಂಗುಲ ಉದ್ದವಾಗಿಯೂ ಇರುವ ಲಾಳದಕಡ್ಡಿಯನ್ನು ತೆಗೆದುಕೊಂಡು ಅದರ ಎಂಟು ಅಂಗುಲದುದ್ದಕ್ಕೆ ಆ ಹತ್ತಿಯನ್ನು ಸುತ್ತಿ ಬಿಗಿಯಾಗಿ ಬತ್ತಿಯನ್ನು ಮಾಡಬೇಕು, ನಂತರ ಧೂಮಪಾನ ಮಾಡಿಸಬೇಕಾದ ಔಷಧದ್ರವ್ಯಗಳನ್ನು ನೀರಿನಿಂದ ನುಣ್ಣಗೆಅರೆದು ಕಲ್ಕಮಾಡಿ ಒಂದುಕರ್ಷಪ್ರಮಾಣ ಕಲ್ಕವನ್ನು ಆ ಹತ್ತಿಯ ಬತ್ತಿಗೆ ಎಂಟಂಗುಲದುದ್ದಕ್ಕೂ ಚನ್ನಾಗಿ ಲೇಪಮಾಡಿ ನೆರಳಿನಲ್ಲಿ ಒಣಗಿಸಬೇಕು. ಚನ್ನಾಗಿ ಒಣಗಿದಮೇಲೆ ಬತ್ತಿಯ ಒಳಗಿರುವ ಕಡ್ಡಿಯನ್ನು ಹೊರಕ್ಕೆ ಹಿರಿದು ಬಿಸಾಡಬೇಕು, ಆ ಮೇಲೆ ಆ ಬತ್ತಿಯನ್ನು ಯಾವುದಾದರೂ ಸ್ನೇಹದಲ್ಲಿ ಅಂದರೆ ತುಪ್ಪದಲ್ಲಿಯೊ ಎಣ್ಣೆಯಲ್ಲಿಯೊ ಅದ್ದಿ ಧೂಮಪಾನ ಮಾಡತಕ್ಕ ನಳಿಗೆಯೊಳಕ್ಕೆ ಸೇರಿಸಿ ಬತ್ತಿಯನ್ನು ಬೆಂಕಿಯಿಂದ ಉರಿಸಿ ಬಾಯಿಯಿಂದ ಹೊಗೆಯನ್ನು ಒಳಕ್ಕೆ ಎಳೆದುಕೊಂಡು ಬಾಯಿನಿಂದಲೇ ಹೊಗೆಯನ್ನು ಹೊರಕ್ಕೆ ಉಗುಳಬೇಕು, ಎರಡನೆಯಸಾರಿ ಮೂಗಿನಿಂದ ಹೊಗೆಯನ್ನೆಳದುಕೊಂಡು ಬಾಯಿನಿಂದ ಉಗುಳಬೇಕು, ವ್ರಣಗಳಿಗೆ ಹೊಗೆಯನ್ನು ಹಾಕಬೇಕಾದರೆ ಮಣ್ಣಿನಶರಾವೆಯಲ್ಲಿ ಬೆಂಕಿಯ ಕೆಂಡವನ್ನು ತುಂಬಿ ಹೊಗೆ ಹಾಕಬೇಕಾದ ದ್ರವ್ಯಗಳ ಚೂರ್ಣವನ್ನು ಆ ಕೆಂಡದಮೇಲೆ ಹಾಕಿ ಮೇಲೆ ಒಂದು ಶರಾವೆಯನ್ನು ಮುಚ್ಚಿ ಮುಚ್ಚಿರುವ ಶರಾವೆಗೆ ಒಂದು ಸಣ್ಣ ರಂಧ್ರವನ್ನು ಮಾಡಿ ವ್ರಣಕ್ಕೆ ಹೊಗೆಕೊಡತಕ್ಕ ಹೊಗೆಯ ನಳಿಗೆಯನ್ನು ಆ

ರಂಧ್ರಕ್ಕೆ ಸರಿಯಾಗಿ ಇಟ್ಟು ಇನ್ನೊಂದು ಭಾಗದಲ್ಲಿ ಹೊರಡುವ ಹೊಗೆಯಿಂದ ವ್ರಣಕ್ಕೆ ಹೊಗೆ ಕೊಡಬೇಕು.

ಏಲಾದಿಕಲ್ಕಂಶಮನೇಸ್ನಿಗ್ಧಂಸರ್ಜರಸಂಮೃದೌ ॥ ೧೯ ॥
ರೇಚನೇತೀಕ್ಷ್ಣಕಲ್ಕಂಚಕಾಸಘ್ನಂಕ್ಷುದ್ರಿಕೋಷಣಂ ॥
ವಾಮನೇಸ್ನಾಯುಚರ್ಮಾದ್ಯಂದದ್ಯಾದ್ಧೂಮಸ್ಯಪಾನಕಂ ॥ ೨೦ ॥
ವ್ರಣೇನಿಂಬವಚಾದ್ಯಂಚಧೂಪನಂಸಂಪ್ರಶಸ್ಯತೇ ॥

ಧೂಮಪಾನ ಮಾಡಿಸತಕ್ಕ ನಾಡಿ ಮತ್ತು ವರ್ತಿಗಳನ್ನು ನಿರ್ಮಿಸತಕ್ಕ ಕ್ರಮವನ್ನು ಹೇಳಿ ಧೂಮಪಾನೋಪಯುಕ್ತಗಳಾದ ಕೆಲವು ವಸ್ತುಗಳನ್ನು ಹೇಳುತ್ತಾನೆ:—ಶಮನವೆಂಬ ಹೆಸರಿನ ಧೂಮಪಾನ ಮಾಡಿಸತಕ್ಕ ಬಗ್ಗೆ ಸುಶ್ರುತದಲ್ಲಿ ಹೇಳಲ್ಪಟ್ಟಿರುವ ಏಲಾದಿಗಣೋಕ್ತ ದ್ರವ್ಯಗಳ ಕಲ್ಕವು ಹಿತಕರವಾದದ್ದು. ಮೃದು ಧೂಮಪಾನ ಮಾಡಿಸುವುದಕ್ಕೆ ಅಂದರೆ ಬೃಂಹಣವೆಂಬ ಹೆಸರಿನ ಧೂಮಪಾನ ಮಾಡಿಸತಕ್ಕ ಬಗ್ಗೆ ಸ್ನೇಹಯುಕ್ತವಾದ ಸರ್ಜರಸವು ಹಿತಕರವು ರೇಚನ ಧೂಮವೇದರೆ ಶೋಧನವೆಂಬ ಹೆಸರಿನ ಧೂಮವನ್ನು ಪಾನಮಾಡಿಸುವುದಕ್ಕೆ ತೀಕ್ಷ್ಣದ್ರವ್ಯಗಳಿಂದ ಸಿದ್ಧವಾದ ಕಲ್ಕವು ಹಿತಕರವು ಕಾಸಘ್ನ ಧೂಮಪಾನ ಮಾಡಿಸತಕ್ಕ ಬಗ್ಗೆ ನೆಲಗುಳ್ಳ, ಶುಂಠಿ, ಹಿಪ್ಪಲಿ, ಮೆಣಸು ಇವುಗಳು ಹಿತಕರವಾದವುಗಳು. ವಮನಾರ್ಥವಾಗಿ ಧೂಮಪಾನ ಮಾಡಿಸಬೇಕಾದರೆ ಸತ್ತ ಪ್ರಾಣಿಗಳ ನರ. ಚರ್ಮ, ಒಣಮಾಂಸ ಇವುಗಳು ಪ್ರಶಸ್ತವಾದವು. ವ್ರಣಗಳಿಗೆ ಹೊಗೆಯನ್ನು ಹಾಕುವುದಾದರೆ ಬೇವಿನ ಚಕ್ಕೆ ಬಜೆ ಮೊದಲಾದವುಗಳು ಹಿತಕರವೆಂದು ತಿಳಿಯಬೇಕು.

ಅನ್ಯೇಪಿಧೂಮಾಗೇಹೇಷುಕರ್ತವ್ಯಾರೋಗಶಾಂತಯೇ ॥೨೧॥
ಮಯೂರಪಿಚ್ಛಂನಿಂಬಸ್ಯಪತ್ರಾಣಿಬೃಹತೀಫಲಂ ॥
ಮರಿಚಂಹಿಂಗುಮಾಂಸೀಚಬೀಜಂಕಾರ್ಪಾಸಸಂಭವಂ ॥೨೨॥
ಛಾಗರೋಮಾಹಿನಿರ್ಮೋಕಂವಿಷ್ಠಾಬೈಡಾಲಿಕೀತಥಾ ॥
ಗಜದಂತಶ್ಚತಚ್ಚೂರ್ಣಂಕಿಂಚಿತ್ಘೃತವಿಮಿಶ್ರಿತಂ ॥೨೩॥
ಗೇಹೇಷುಧೂಪನಂದತ್ತಂಸರ್ವಾನ್ಬಾಲಗ್ರಹಾನ್ಜಯೇತ್ ॥
ಪಿಶಾಚಾನ್ರಾಕ್ಷಸಾನ್ಜಿತ್ವಾಸರ್ವಜ್ವರಹರಂಭವೇತ್ ॥೨೪॥

ಇನ್ನೂ ಮನೆಯಲ್ಲಿ ಮಾಡತಕ್ಕ ರೋಗನಾಶಕಗಳಾದ ಹೊಗೆಯ ಪ್ರಯೋಗಗಳು ಅನೇಕಗಳಾಗಿ ಇವೆ. ಅವುಗಳನ್ನು ಕೊಂಚಮಾತ್ರ ವಿವರಿಸು

ತ್ತಾನೆ— ನವಿಲಿನಗರಿ, ಬೇವಿನ ಎಲೆಗಳು, ಗುಳ್ಳದಕಾಯಿ, ಮೆಣಸು, ಇಂಗು, ಜಟಾಮಾಂಸಿ, ಹೆತ್ತಿಯಬೀಜ, ಆಡಿನ ಕೂದಲು, ಹಾವಿನಪರೆ, ಬೆಕ್ಕಿನ ಪಾಯಿಖಾನೆ, ಆನೆಯ ದಂತದಪುಡಿ ಇವುಗಳಿಗೆ ಕೊಂಚ ತುಪ್ಪವನ್ನು ಕೂಡಿಸಿ ಮನೆಯಲ್ಲಿ ಹೊಗೆ ಹಾಕುವುದರಿಂದ ಸಮಸ್ತ ವಿಧಗಳಾದ ಬಾಲಗ್ರಹಗಳು ರಾಕ್ಷಸ ಪಿಶಾಚಾದಿ ಭೀತಿಗಳು ತೊಲಗಿ ಸಮಸ್ತ ವಿಧವಾದ ಜ್ವರಗಳೂ ತೊಲಗು ವವು.

**ಪರಿಹಾರಸ್ತು ಧೂಮೇಷು ಕಾರ್ಯೋ ರೇಚನನಸ್ಯವತ್ ॥**
**ನೇತ್ರಾಣಿ ಧಾತುಜಾನ್ಯಾಹುರ್ನಲವಂಶಾದಿಜಾನ್ಯಪಿ ॥೨೫॥**

ಧೂಮಪಾನ ಮಾಡಿದವರು ಬಿಡಬೇಕಾದ ಕೆಲಸಗಳು ಹಿಂದೆ ರೇಚನ ನಸ್ಯಕ್ಕೆ ಹೇಳಿದವುಗಳೇ ಆಗಿರುತ್ತವೆ. ಅಂದರೆ ಹೆಚ್ಚಿಗೆ ಗಾಳಿಯಲ್ಲಿ ಓಡಾಡು ವುದು, ಅಜೀರ್ಣವಾಗುವಂತೆ ಭೋಜನ ಮಾಡುವುದು ಮೊದಲಾದವುಗಳನ್ನು ಬಿಡಬೇಕು. ಧೂಮಪಾನ ಮಾಡಿಸತಕ್ಕ ನಳಿಗೆಗಳು ಲೋಹಗಳಿಂದ ಮಾಡ ಲ್ಪಟ್ಟವುಗಳಾಗಿಯೂ ಬಿದರು ಕೊಳವೆ ಲಾಳದ ಕೊಳವೆಗಳಾಗಿಯೂ ಇರಬಹುದು.

ಇಲ್ಲಿಗೆ ವೈದ್ಯರತ್ನ ಪಂಡಿತ ಗೋಪಾಲಾಚಾರ್ಯ ಶಿಷ್ಯ
ಪಟ್ಟಗೆರೆ ಸೂರ್ಯನಾರಾಯಣಶಾಸ್ತ್ರಿ ವಿರಚಿತ
ಶಾರ್ಙ್ಗಧರ ಸಂಹಿತಾ ಕರ್ನಾಟಕಾನುವಾದದಲ್ಲಿ ಉತ್ತರಖಂಡ
ನವಮಾಧ್ಯಾಯ ಸಮಾಪ್ತ.



## ದಶಮಾಧ್ಯಾಯು.

**ಚತುರ್ವಿಧಃ ಸ್ಯಾದ್ಗಂಡೂಷಃ ಸ್ನೈಹಿಕಶ್ಶಮನಸ್ತಥಾ ॥**
**ಶೋಧನೋ ರೋಪಣಶ್ಚೈವ ಕವಲಶ್ಚಾಪಿ ತದ್ವಿಧಃ ॥೧॥**
**ಸ್ನಿಗ್ಧೈಸ್ತು ಸ್ನೈಹಿಕೋ ವಾತೇ ಸ್ವಾದುಶೀತೈಃ ಪ್ರಸಾದನಃ ॥**
**ಪಿತ್ತೇ ಕಟ್ವಮ್ಲಲವಣೈರುಷ್ಣೈಃ ಸಂಶೋಧನಃ ಕಫೇ ॥೨॥**
**ಕಷಾಯತಿಕ್ತಮಧುರೈಃ ಕಟೂಷ್ಣೋ ರೋಪಣೋ ವ್ರಣೇ ॥**
**ಚತುಷ್ಪ್ರಕಾರೋ ಗಂಡೂಷ ಕವಲಶ್ಚಾಪಿ ಕೀರ್ತಿತಃ ॥೩॥**
**ಅಸಂಚಾರೀ ಮುಖೇ ಪೂರ್ಣೇ ಗಂಡೂಷಃ ಕವಲಶ್ಚರಃ ॥**
**ತತ್ರ ದ್ರವೇಣ ಗಂಡೂಷಃ ಕಲ್ಕೇನ ಕವಲಃ ಸ್ಮೃತಃ ॥೪॥**

**ಪದ್ಯಾದ್ದ್ರವೇಷು ಚೂರ್ಣಂ ಚ ಗಂಡೂಷೇ ಕೋಲಮಾತ್ರಕಂ ॥**
**ಕರ್ಷಪ್ರಮಾಣಃ ಕಲ್ಕಶ್ಚ ದೀಯತೇ ಕವಲೇ ಬುಧೈಃ ॥೫॥**

ಗಂಡೂಷಕವಳಾದಿಗಳ ಕ್ರಮವನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾನೆ— ಗಂಡೂಷಕವಳಗಳಂದರೆ ಔಷಧ ದ್ರವ್ಯಗಳ ಕಷಾಯಗಳನ್ನಾಗಲೀ ಕಲ್ಕಗಳನ್ನಾಗಲೀ ಬಾಯಿತುಂಬಾ ತುಂಬಿಕೊಂಡು ಬಾಯಿ ಮುಕ್ಕಳಿಸುವುದು, ಈ ವಿಧವಾದ ಚಿಕಿತ್ಸೆಯು ಕೂಡಾ ಊರ್ಧ್ವಜತ್ರುಗತಗಳಾದ ರೋಗಗಳ ನಿವಾರಣೆಯಲ್ಲಿ ಉಪಯೋಗಿಸಲ್ಪಡುತ್ತದೆ. ಗಂಡೂಷವೆಂಬುವುದು ನಾಲ್ಕು ವಿಧ ಸ್ನೇಹ ಗಂಡೂಷ ಅಂದರೆ ಯಾವುದಾದರೂ ಎಣ್ಣೆಯನ್ನು ಬಾಯಿನಲ್ಲಿ ತುಂಬಿ ಮುಕ್ಕಳಿಸುವುದು. ಶಮನ, ಶೋಧನ, ರೋಪಣ ಎಂಬದಾಗಿ ಇದೇ ರೀತಿಯಾದ ಹೆಸರುಗಳಿಂದಲೇ ಕವಳವೂ ನಾಲ್ಕು ವಿಧವಾಗಿರುತ್ತದೆ ಸ್ನೇಹಯುಕ್ತಗಳಾದ ಔಷಧ ದ್ರವ್ಯಗಳಿಂದ ಮಾಡಿಸಲ್ಪಟ್ಟ ಸ್ನೇಹ ಗಂಡೂಷ ಕವಳಗಳು ವಾತಪ್ರಕೋಪಜನ್ಯಗಳಾದ ದಂತಶೂಲ, ಕರ್ಣಶೂಲ, ಶಿರಶ್ಶೂಲಾದಿಗಳಲ್ಲಿ ಹಿತಕರಗಳಾದವುಗಳು. ಮಧುರ ರಸ ಪ್ರಧಾನಗಳಾಗಿಯೂ ಶೀತ ವೀರ್ಯಗಳಾಗಿಯೂ ಇರುವ ದ್ರವ್ಯಗಳಿಂದ ಯುಕ್ತವಾದ ದ್ರವದ್ರವ್ಯದಿಂದ ಮಾಡಿಸಲ್ಪಟ್ಟ ಗಂಡೂಷ ಕವಳಗಳು ಪಿತ್ತಪ್ರಕೋಪಜನ್ಯಗಳಾದ ಊರ್ಧ್ವಜತ್ರು ವಿಕಾರಗಳಲ್ಲಿ ಪ್ರಶಸ್ತವಾದವುಗಳು. ಬಿಸಿಯಾಗಿಯೂ ಕಾರ, ಹುಳಿ, ಉಪ್ಪು ಈ ರಸಗಳುಳ್ಳ ಔಷದ ದ್ರವ್ಯಗಳಿಂದ ಸಿದ್ಧಗಳಾದ ಗಂಡೂಷ ಮತ್ತು ಕವಳಗಳು ಕಫಪ್ರಕೋಪಜನ್ಯಗಳಾದ ವಿಕಾರಗಳಲ್ಲಿ ಪ್ರಶಸ್ತಗಳಾದವುಗಳು. ಇವುಗಳಿಗೆ ಸಂಶೋದನಗಳೆಂಬದಾಗಿ ಹೆಸರು. ಒಗರು, ಕಹಿ, ಸಿಹಿ ಈ ರಸಗಳಿಂದ ಕೂಡಿರುವ ಸ್ವಲ್ಪಮಾತ್ರ ಬಿಸಿಯಾದ ಗಂಡೂಷ ಧಾರಣವು ಬಾಯಲ್ಲಿರುವ ವ್ರಣಗಳನ್ನು ಆರುವ ಸ್ಥಿತಿಗ ತಂದು ಗುಣಪಡಿಸಲು ಹಿತಕರವಾದುದು. ಇದಕ್ಕೆ ವ್ರಣರೋಪಣವೆಂಬದಾಗಿಯೂ ಹೆಸರುಂಟು, ಮೇಲೆ ಹೇಳಿದಂತೆ ಗಂಡೂಷವೂ ಮತ್ತು ಕವಳವೂ ಪ್ರತ್ಯೇಕವಾಗಿ ನಾಲ್ಕು ವಿಧ ಗಂಡೂಷ ಮತ್ತು ಕವಳಗಳ ಪರಸ್ಪರ ಬೇದವೇನೆಂದರೆ—ಔಷಧ ಯುಕ್ತವಾದ ದ್ರವ ದ್ರವ್ಯವನ್ನು ಬಾಯಲ್ಲಿ ತುಂಬಿಕೊಂಡು ಅಲ್ಲಾಡಿಸದೆ ಕ್ಲಪ್ತಕಾಲ ಪರ್ಯಂತವಾಗಿಯೂ ಹಾಗೆಯೇ ನಿಲ್ಲಿಸಿಕೊಂಡರೆ ಗಂಡೂಷವೆಂಬದಾಗಿಯೂ, ತುಂಬಿಕೊಂಡ ದ್ರವ್ಯವನ್ನು ಪದೇಪದೇ ಬಾಯೊಳಗೆಲ್ಲಾ ಓಡಾಡಿಸುತ್ತಿದ್ದರೆ ಕವಳವೆಂಬದಾಗಿಯೂ ತಿಳಿದುಕೊಳ್ಳಬೇಕು. ಮತ್ತು ನೀರು ಮೊದಲಾದ ದ್ರವ್ಯದೊಡನೆ ಔಷದ ಚೂರ್ಣಗಳನ್ನು ಸೇರಿಸಿ ಮಾಡುವುದಕ್ಕೆ ಗಂಡೂಷವೆಂಬದಾಗಿಯೂ ಔಷದ ದ್ರವ್ಯಗಳೊಡನೆ ನೀರನ್ನು ಸೇರಿಸಿ ಚನ್ನಾಗಿ ಅರೆದು ಬಾಯಿನಲ್ಲಿ ತುಂಬಿಕೊಳ್ಳುವುದು ಕವಳವೆಂಬದಾಗಿಯೂ

ಹೇಳಿಸಿಕೊಳ್ಳುತ್ತವೆ. ಮತ್ತು ಗಂಡೂಷ ಮಾಡಬೇಕಾದರೆ ಕ್ಲೃಪ್ತಪರಿಮಿತವಾದ ದ್ರವದ್ರವ್ಯದಲ್ಲಿ ಒಂದು ತೊಲ್ಯಪರಿಮಾಣದಷ್ಟು ಔಷಧ ಚೂರ್ಣವನ್ನು ಸೇರಿಸಬೇಕು. ಕವಳ ಮಾಡಬೇಕಾದರೆ ಒಂದು ಕರ್ಷ ಪ್ರಮಾಣ ಔಷಧ ದ್ರವ್ಯವನ್ನು ದ್ರವಪದಾರ್ಥದೊಡದೆ ಸೇರಿಸಿ ಅರೆದು ಕಲ್ಕಮಾಡಬೇಕು.

ಧಾರ್ಯಂತೇಪಂಚವರ್ಷಾದ್ಧ್ವಂಗಂಡೂಷಕವಳಾದಯಃ ॥
ಗಂಡೂಷಾನ್ ಸುಸ್ಥಿತಃ ಕುರ್ಯಾತ್ ಸ್ವಿನ್ನಭಾಲಗಳಾದಿತಃ ॥ ೬ ॥
ಮನುಷ್ಯಸ್ತ್ರೀಂಸ್ತಥಾಪಂಚಸಪ್ತವಾದೋಷನಾಶನಾತ್ ॥
ಕಫಪೂರ್ಣಾಸ್ಯತಾಯಾವತ್ ಛೇದೋದೋಷಸ್ಯವಾಭವೇತ್ ॥೭॥
ನೇತ್ರಘ್ರಾಣಸ್ರುತಿರ್ಯಾವತ್ತಾವದ್ಗಂಡೂಷಧಾರಣಂ ॥

ಹಿಂದೆ ಹೇಳಲ್ಪಟ್ಟ ಗಂಡೂಷ ಮತ್ತು ಕವಳಗಳನ್ನು ಯಾವ ವಯಸ್ಸಿನಲ್ಲಿ ಮಾಡಬೇಕು ಎಂಬುವುದನ್ನು ತಿಳಿಸುತ್ತಾನೆ— ಗಂಡೂಷವನ್ನಾಗಲೀ ಕವಳವನ್ನಾಗಲೀ ಮಾಡಬೇಕಾದರೆ ಹುಟ್ಟಿದ ಐದನೇ ವರುಷದಿಂದ ಮಾಡಬೇಕು. ಹಣೆ ಮತ್ತು ಕಂಠಪ್ರದೇಶ ಇವುಗಳನ್ನು ಸ್ವೇದನ ಕರ್ಮದಿಂದ ಚನ್ನಾಗಿ ಬೆವರುವಂತೆ ಮಾಡಿಕೊಂಡು ಸ್ವಸ್ಥವಾಗಿ ಕುಳಿತುಕೊಂಡು ಗಂಡೂಷವನ್ನು ಬಾಯಲ್ಲಿ ಧಾರಣೆಮಾಡಬೇಕು. ದೋಷಗಳ ಬಲಾಬಲಗಳನ್ನು ನೋಡಿಕೊಂಡು ಮೂರುಸಾರಿ, ಐದುಸಾರಿ, ಏಳುಸಾರಿ ಈ ರೀತಿಯಾಗಿ ದೋಷಗಳು ಶಾಂತವಾಗುವ ವರೆವಿಗೂ ಧಾರಣ ಮಾಡಿಕೊಳ್ಳಬೇಕು. ಎಷ್ಟು ಹೊತ್ತು ಧಾರಣೆ ಮಾಡಬೇಕೆಂಪರೆ ಬಾಯಿತುಂಬಲೂ ಕಫ ತುಂಬಿಕೊಳ್ಳುವವರೆವಿಗೂ ಅಂದರೆ ತುಂಬಿಕೊಂಡಿರುವ ದ್ರವವೆಲ್ಲಾ ಕಫವಾಗಿ ಮಾರ್ಪಡುವವರೆವಿಗೂ ಅಥವಾ ದೋಷಗಳೆಲ್ಲವೂ ಕತ್ತರಿಸಿ ಹೋಗುವವರೆವಿಗೂ ಅಥವಾ ಕಣ್ಣು, ಮೂಗುಗಳಲ್ಲಿ ನೀರು ಸುರಿಯುವ ವರೆವಿಗೂ ಗಂಡೂಷಧಾರಣ ಮಾಡತಕ್ಕದ್ದು.

ತಿಲಕಲ್ಕೋದಕಂಕ್ಷೀರಂಸ್ನೇಹೋವಾಸ್ನೈಹಿಕೇಹಿತಃ ॥ ೮ ॥
ತಿಲಾನೀಲೋತ್ಪಲಂಸರ್ಪಿಃಶರ್ಕರಾಕ್ಷೀರಮೇವಚ ॥
ಸಕ್ಷೌದ್ರೋಹನುವಕ್ತ್ರಸ್ಥೋಗಂಡೂಷೋದಾಹನಾಶನಃ ॥ ೯ ॥
ವೈಶದ್ಯಂಜನಯತ್ಯಾಸ್ಯೇಸಂದಧಾತಿಮುಖವ್ರಣಾನ್ ॥
ದಾಹತೃಷ್ಣಾಪ್ರಶಮನಂಮಧುಗಂಡೂಷಧಾರಣಂ ॥ ೧೦ ॥
ವಿಷಕ್ಷಾರಾಗ್ನಿದಗ್ಧೇಚಸರ್ಪಿರ್ಧಾರ್ಯಂಪಯೋಥವಾ ॥
ತೈಲಸೈಂಧವಗಂಡೂಷೋದಂತಚಾಲೇಪ್ರಶಸ್ಯತೇ ॥ ೧೧ ॥

ಕೋಷಂಮುಖಸ್ಯವೈರಸ್ಯಂಗಂಡೂಷಃ ಕಾಂಜಿಕೋಜಯೇತ್ ॥
ಸಿಂಧುತ್ರಿಕಟುರಾಜೀಭಿರಾರ್ದ್ರಕೇಣಕಫೇಹಿತಃ ॥ ೧೨ ॥
ತ್ರಿಫಲಾಮಧುಗಂಡೂಷಃಕಫಾಸ್ರೃಕ್ಪಿತ್ತನಾಶನಃ ॥

ಗಂಡೂಷ ಮತ್ತು ಕವಳ ವಿಧಿಗಳಲ್ಲಿ ಉಪಯೋಗಕ್ಕೆ ಬರುವ ಕೆಲವು ಔಷಧಯೋಗಗಳನ್ನು ಹೇಳುತ್ತಾನೆ. ಸ್ನೇಹಗಂಡೂಷ ವಾತತಕ್ಕ ಸಂದರ್ಭದಲ್ಲಿ ಎಳ್ಳಿನಲ್ಲಿ ಕಲ್ಕಮಾಡಿ ನೀರಾಗಿ ಮಾಡಿಕೊಂಡು ಅದನ್ನಾಗಲೀ ಹಾಲನ್ನಾಗಲೀ ತೈಲವಾಗಲೀ ಉಪಯೋಗಮಾಡಿಕೊಳ್ಳಬಹುದು ಯಾವುದಾದರೂ ಔಷಧ ರೂಪವಾಗಿ ಕ್ಷಾರಗಳನ್ನು ಉಪಯೋಗಿಸೋಣದರಿಂದ ಅತಿ ಬಿಸಿಯಾದ ಆಹಾರವನ್ನು ಸೇವಿಸೋಣದರಿಂದ ಬಾಯಿ ಸುಟ್ಟುಹೋಗಿ ಬೊಬ್ಬೆಗಳೆದ್ದು ತೊಂದರೆಯಾಗುತ್ತಿರುವಲ್ಲಿ ಎಳ್ಳು, ನೀಲೋತ್ಪಲ ಕನ್ನೈದಿಲೆಪುಷ್ಪ, ತುಪ್ಪ, ಸಕ್ಕರೆ, ಹಾಲು ಇವುಗಳ ಜೊತೆಗೆ ಜೇನುತುಪ್ಪವನ್ನೂ ಬೆರಸಿ ಗಂಡೂಷಧಾರಣ ಮಾಡಿದರೆ ಹಿತಕರವಾಗಿಯೂ, ರೋಗನಿವರ್ತಕವಾಗಿಯೂ ಇರುತ್ತದೆ. ಜೇನುತುಪ್ಪ ಒಂದನ್ನೆ ಗಂಡೂಷವಾಗಿ ಧಾರಣಮಾಡಿದಲ್ಲಿ ಬಾಯಿ ಸ್ವಚ್ಛವಾಗುತ್ತದೆ. ಬಾಯಿಯಲ್ಲಿರುವ ವ್ರಣಗಳೆಲ್ಲವೂ ಮಾಯುತ್ತವೆ. ಬಾಯಿನ ಉರಿ, ಬಾಯಾರಿಕೆ, ಇವುಗಳು ಶಮನ ಹೊಂದುತ್ತನೆ. ವಿಷಗಳಿಂದಲಾಗಲೀ, ಕ್ಷಾರಗಳಿಂದಲಾಗಲೀ ಬೆಂಕಿಯಿಂದಲಾಗಲೀ ಬಾಯಿ ಸುಟ್ಟು ಹೋಗಿದ್ದಲ್ಲಿ ತುಪ್ಪವನ್ನಾಗಲೀ ಹಾಲನ್ನಾಗಲೀ ಗಂಡೂಷವಾ ಬಾಯಲ್ಲಿ ಧಾರಣ ಮಾಡಬೇಕು. ಹಲ್ಲುಗಳು ಅಲ್ಲಾಡುತ್ತಲಿದ್ದರೆ ತೈಲ ಮತ್ತು ಸೈಂದವ ಲವಣಗಳ ಗಂಡೂಷಧಾರಣ ಮಾಡೋಣದರಿಂದ ಹಲ್ಲು ಬಿಗಿಯಾಗುತ್ತದೆ ಬಾಯಿ ಒಣಗೋಣ, ಬಾಯಿ ರುಚಿ ತಪ್ಪಿಹೋಗೋಣ ಇವುಗಳಲ್ಲಿ ಕಾಂಜಿಕವೆಂದರೆ ಅನ್ನದ ಹುಳಿನೀರಿನ ಗಂಡೂಷಧಾರಣ ಮಾಡಬೇಕು ಸೈಂಧವ ಲವಣ, ತ್ರಿಕಟುವೆಂದರೆ ಶುಂಠಿ, ಹಿಪ್ಪಲಿ, ಮೆಣಸು, ಸಾಸವೆ, ಹಸಿಶುಂಠಿ, ಇವುಗಳೆಲ್ಲವನ್ನೂ ಒಟ್ಟಿಗೆ ಕೂಡಿಸಿ, ಯಾಗಲೀ ಒಂದೊಂದಾಗಿಯೇ ಆಗಲೀ ಮಾಡಿಸಿದ ಗಂಡೂಷ ಕವಳಗಳು ಕಫ ಪ್ರಕೋಪದಲ್ಲಿ ಹಿತಕರಗಳು. ತ್ರಿಫಲಚೂರ್ಣದೊಂದಿಗೆ ಜೇನುತುಪ್ಪವನ್ನು ಸೇರಿಸಿ ಮಾಡಲ್ಪಟ್ಟ ಗಂಡೂಷವು ಕಫವ್ಯಾಧಿರಕ್ತಪಿತ್ತವ್ಯಾಧಿ ಇವುಗಳನ್ನು ಖಂಡಿಸುತ್ತದೆ.

ದಾರ್ವೀಗುಡೂಚೀತ್ರಿಫಲಾದ್ರಾಕ್ಷಾಜಾತ್ಯಾಶ್ಚಪಲ್ಲವಾಃ ॥ ೧೩ ॥
ಯವಾಸತ್ವೇತಿತತ್ಕ್ವಾಥಃಷಷ್ಠಾಂಶಕ್ಷೌದ್ರಸಂಯುತಃ ॥
ಶೀತೋಮುಖೇಧೃತೋಹನ್ಯಾನ್ಮುಖಪಾಕಂತ್ರಿದೋಷಜಂ ॥ ೧೪ ॥

ಯಸ್ಯೌಷಧಸ್ಯಗಂಡೂಷಸ್ತಸ್ಯವೈಪ್ರತಿಸಾರಣಂ ॥
ಕವಲಶ್ಚಾಪಿತಸ್ಯೈವಜ್ಞೇಯೋತ್ರಕುಶಲೈರ್ನರೈಃ ॥ ೧೫ ॥
ಕೇಸರಂಮಾತುಲುಂಗಸ್ಯಸೈಂಧವೋಷಣಸಂಯುತಂ ॥
ಹನ್ಯಾತ್ಕವಲತೋಜಾಡ್ಯಮರುಚಿಂಕಫವಾತಜಾಂ ॥ ೧೬ ॥
ಕಲ್ಕೋವಲೇಹಶ್ಚೂರ್ಣಂಚತ್ರಿವಿಧಂಪ್ರತಿಸಾರಣಂ ॥
ಅಂಗುಲ್ಯಗ್ರಗೃಹೀತಂಚಯಥಾಸ್ವಂಮುಖರೋಗಿಣಾಂ ॥ ೧೭ ॥
ಕುಷ್ಠಂದಾರ್ವೀಸಮಂಗಾಚಪಾಠಾತಿಕ್ತಾಚಪೀತಿಕಾ ॥
ತೇಜನೀಮುಸ್ತಲೋಧ್ರೇಚಚೂರ್ಣಂಸ್ಯಾತ್ಪ್ರತಿಸಾರಣಂ ॥ ೧೮ ॥
ಇತ್ಯಸ್ಮಾತ್ತಿಂದಂತಪೀಡಾಂಶೋಥಂದಾಹಂಚನಾಶಯೇತ್ ॥

ಮುಖಪಾಕಹರವಾದ ಗಂಡೂಷ ಕವಳಗಳ ಯೋಗವನ್ನು ಹೇಳುತ್ತಾನೆ. ಮರಅರಸಿನ, ಅಮೃತಬಳ್ಳಿ, ತ್ರಿಫಲ ಅಂದರೆ ಅಳಲೇಕಾಯಿ, ತಾರೆಕಾಯಿ, ನೆಲ್ಲಿಕಾಯಿ, ದ್ರಾಕ್ಷಿ, ಜಾಜೀಎಲೆ, ತುರುಚಿ ಇವುಗಳನ್ನು ಸಮಭಾಗವಾಗಿ ಸೇರಿಸಿ ಕಷಾಯಮಾಡಿ ಕಷಾಯದ ಆರನೇ ಒಂದು ಭಾಗ ಜೇನನ್ನು ಬೆರಸಿ, ತಣ್ಣಗಿರುವಂತೆ ಬಾಯಿನಲ್ಲಿ ತುಂಬಿಕೊಂಡು ಗಂಡೂಷ ವಿಧಾನವನ್ನಾಗಲೀ ಕವಳ ವಿಧಾನವನ್ನಾಗಲೀ ಮಾಡಿದಲ್ಲಿ ಮುಖಪಾಕ, ಮುಖವ್ರಣಗಳು ತ್ರಿದೋಷಪ್ರಕೋಪ ಜನ್ಯಗಳಾದರೂ ನಿವೃತ್ತಿ ಹೊಂದುತ್ತವೆ. ಪ್ರತಿಸಾರಣವೆಂಬುವುದೂ ಒಂದು ಬಗೆಯ ಮುಖರೋಗಗಳ ಚಿಕಿತ್ಸೆ ಇದನ್ನು ಆಚರಿಸತಕ್ಕ ಕ್ರಮ ಹೇಗೆಂದರೆ ಮುಖರೋಗ ನಿವರ್ತಕಗಳಾದ ಗಂಡೂಷ ಮತ್ತು ಕವಳಗಳಿಗೆ ಹೇಳಿರುವ ಔಷಧಗಳನ್ನೆಲ್ಲಾ ಚೂರ್ಣಮಾಡಿ ಕೂಡಿಸಿ ಬಾಯಲ್ಲಿರುವ ವ್ರಣಗಳಿಗೆ ಹಾಕಿ ತಿಕ್ಕುವುದು. ಇದನ್ನೇನೆ ಪ್ರತಿಸಾರಣವೆಂದು ವೈದ್ಯರುಗಳು ಕರೆಯುತ್ತಾರೆ. ಗಂಡೂಷ ಕವಳ, ಪ್ರತಿಸಾರಣ ಇವುಗಳಿಗೆಲ್ಲಾ ಔಷಧಯೋಗಗಳು ಒಂದೇ ಮಾಡತಕ್ಕ ವಿಧಾನಗಳು ಮಾತ್ರ ಬೇರೆ ಬೇರೆ ಎಂದು ತಿಳಿಯಬೇಕು ಮಾದಳದ ಹಣ್ಣಿನ ಕುಸುಮ, ಸೈಂಧವಲವಣ, ಮೆಣಸಿನಕಾಳು ಇವುಗಳ ಕಲ್ಕವನ್ನು ಮಾಡಿ ಬಾಯಿನಲ್ಲಿ ತುಂಬಿಕೊಂಡು ಕವಳ ವಿಧಾನವನ್ನು ಆಚರಣೆ ಮಾಡಿದಲ್ಲಿ ಕಫ ಪ್ರಕೋಪ ಮತ್ತು ವಾತ ಪ್ರಕೋಪಗಳಿಂದ ಉತ್ಪನ್ನವಾದ ಮುಖಜಾಡ್ಯ, ಅರುಚಿ ಇವುಗಳು ಪರಿಹಾರವಾಗುತ್ತವೆ. ಪ್ರತಿಸಾರಣ ಮಾಡಬೇಕಾದರೆ ಹಿಂದೆ ಹೇಳಿದಂತೆ ಚೂರ್ಣಗಳನ್ನು ಕಲ್ಕವಾಗಿ ಮಾಡಿಕೊಂಡಾಗಲಿ, ಲೇಹ ರೂಪವಾಗಿ ಮಾಡಿಕೊಂಡಾಗಲೀ ಚೂರ್ಣರೂಪವಾಗಿಯೇ ಆಗಲೀ ಹೇಗಾದರೂ ಉಪಯೋಗಿಸಬಹುದು ಈ ರೀತಿಯಾಗಿ ಪ್ರತಿ ಸಾರಣೌಷಧವನ್ನು ಸಿದ್ಧಮಾಡಿಕೊಂಡು ತರ್ಜನಿ ಬೆರಳಿನ ತುದಿಯಲ್ಲಿ ತೆಗೆದುಕೊಂಡು ಬಾಯೊಳಗಿನ ರೋಗ

ಗಳಲ್ಲಿ ಹಚ್ಚಿಕೊಳ್ಳತಕ್ಕದ್ದು. ಪ್ರತಿಸಾರಣೋಪಯೋಗಿಯಾದ ಯೋಗವನ್ನು ಹೇಳುತ್ತಾನೆ— ಚಂಗಲಕೋಷ್ಠ, ಮರ ಅರಸಿನ, ಮಂಜಿಷ್ಠ, ಅಗಳುಶುಂಠಿ, ಕಟುರೋಹಿಣಿ, ಅರಸಿನ, ಕೇಜಿನಿ ಎಂಬ ಮೂಲಿಕೆ, ಭದ್ರಮುಸ್ತೆ, ಲೋಧ್ರ ಎಂದರೆ ಪತಂಗದ ಚಕ್ಕೆ ಇವುಗಳನ್ನು ಸಮಭಾಗ ಚೂರ್ಣಿಸಿ. ಪ್ರತಿಸಾರಣ ಮಾಡೋಣದರಿಂದ ಹಲ್ಲಿನಲ್ಲಿ ರಕ್ತ ಸೋರುವುದು, ಹಲ್ಲು ಇರಿತ, ವಸಡು ಉಬ್ಬುವುದು, ಉರಿ ಇವುಗಳೆಲ್ಲವೂ ಗುಣವಾಗುತ್ತವೆ.

**ಹೀನಯೋಗಾತ್ ಕಫೋತ್ ಕ್ಲೇಶೋರಸಾಜ್ಞಾನಾರುಚೀ ತಥಾ ॥೧೯॥**
**ಅತಿಯೋಗಾನ್ಮುಖೇಪಾಕಃ ಶೋಷಃ ತೃಷ್ಣಾ ಕ್ಲಮೋಭವೇತ್ ॥**

ಗಂಡೂಷಕವಳ ಪ್ರತಿಸಾರಣಗಳನ್ನು ಹೆಚ್ಚು ಕಡಿಮೆಯಾಗಿ ಉಪಯೋಗಿಸೋಣದಿಂದ ಉಂಟಾಗತಕ್ಕ ದುರ್ಗುಣಗಳನ್ನು ಹೇಳುತ್ತಾನೆ— ಈ ಕ್ರಿಯೆಗಳನ್ನು ನಡೆಸತಕ್ಕ ಕಾಲಪ್ರಮಾಣವಾಗಲೀ ಔಷಧ ಪ್ರಮಾಣವಾಗಲೀ ಕಡಮೆಯಾದಲ್ಲಿ ಕಫ ವೃದ್ಧಿಯಾಗಿ ಅದರಿಂದ ಮನಸ್ಸಿಗೆ ಕ್ಲೇಶವಾಗುವುದು ವಾಂತಿಯಾಗುವಹಾಗಾಗುವುದು. ಬಾಯಿಗೆ ಹಾಕಿಕೊಂಡ ಪದಾರ್ಥದ ರುಚಿ ಗೊತ್ತಾಗದಿರುವುದು, ಬಾಯಿ ರುಚಿ ಕಡುವುದು ಈ ವಿಕಾರಗಳಾಗುತ್ತವೆ. ಅಧಿಕವಾದಲ್ಲಿ ಬಾಯಲ್ಲಿ ವ್ರಣಗಳಾಗುವುದು, ಬಾಯಿ ಒಣಗುವುದು, ಬಾಯಾರಿಕೆ ಇವುಗಳು ಉಂಟಾಗುತ್ತವೆ.

**ವ್ಯಾಧೇರಪಚಯಸ್ತುಷ್ಟಿರ್ವೈಶದ್ಯಂವಕ್ತ್ರಲಾಘವಂ ॥**
**ಇಂದ್ರಿಯಾಣಾ ಪ್ರಸಾದಶ್ಚ ಗಂಡೂಷೇಶುದ್ಧಿಲಕ್ಷಣಂ ॥ ೨೦ ॥**

ಸಮ್ಯಗ್ಯೋಗವೆಂದರೆ ಗಂಡೂಷಾದಿಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸೋಣದರಿಂದ ಉಂಟಾಗುವ ಸುಗುಣಗಳನ್ನು ಹೇಳುತ್ತಾನೆ. ಮುಖರೋಗಗಳೆಲ್ಲಾ ಕ್ರಮೇಣ ವಾಸಿಯಾಗುವುದು. ಮನಸ್ಸಿಗೆ ಸಂತೋಷ ಉಂಟಾಗುವುದು, ಬಾಯಿ ಹುಗುರವಾಗುವುದು, ಕಿವಿ, ಮೂಗು, ಕಣ್ಣು ಮೊದಲಾದ ಇಂದ್ರಿಯಗಳು ಸ್ವಸ್ವಕಾರ್ಯ ವಿಷಯದಲ್ಲಿ ನಿರ್ಮಲಗಳಾಗುವುದು ಇವುಗಳು ಗಂಡೂಷಾದಿಗಳನ್ನು ಸರಿಯಾಗಿ ಆಚರಣೆ ಮಾಡಿದ್ದರ ಲಕ್ಷಣಗಳು.

ಇಲ್ಲಿಗೆ ದಶಮಾಧ್ಯಾಯ ಸಮಾಪ್ತಿ.



## ಏಕಾದಶಾಧ್ಯಾಯ.

**ಆಲೇಪಸ್ಯ ಚ ನಾಮಾನಿ ಲಿಪ್ತೋ ಲೇಪಶ್ಚ ಲೇಪನಂ ॥**
**ದೋಷಘ್ನೋ ವಿಷಹಾ ವರ್ಣ್ಯೋ ಮುಖಲೇಪಸ್ತ್ರಿಧಾ ಮತಃ ॥ ೧ ॥**
**ತ್ರಿಪ್ರಮಾಣಶ್ಚತುರ್ಭಾಗತ್ರಿಭಾಗಾರ್ಧಾಂಗುಲೋನ್ನತಃ ॥**
**ಆರ್ದ್ರೋ ವ್ಯಾಧಿಹರಸ್ಸ ಸ್ಯಾತ್ ಶುಷ್ಕೋ ದೂಷಯತಿ ಚ್ಛವಿಂ ॥ ೨ ॥**

ಲೇಪವೆಂದರೆ ರೋಗಶಾಂತ್ಯರ್ಥವಾಗಿ ರೋಗವಿರುವ ದೇಹದ ಮೇಲ್ಭಾಗದಲ್ಲಿ ಔಷಧ ದ್ರವ್ಯಗಳನ್ನು ಅರೆದು ಮೆತ್ತುವುದು. ಇದನ್ನೇ ಲೋಕದಲ್ಲಿ ಪಟ್ಟು ಹಾಕುವುದೆಂದು ವ್ಯವಹರಿಸುತ್ತಾರೆ. ಶಾಸ್ತ್ರದಲ್ಲಿ ಅಂದರೆ ವೈದ್ಯಶಾಸ್ತ್ರದಲ್ಲಿ ಲೇಪ, ಲಿಪ್ತ, ಲೇಪನ ಎಂಬದಾಗಿ ಇದಕ್ಕೆ ಹೆಸರು. ಈ ಲೇಪವು ಮೂರು ವಿಧ (1) ದೋಷಘ ಅಂದರೆ ದೋಷಗಳು ಪ್ರಕುಪಿತಗಳಾಗಿ ಶರೀರದ ಭಾಗದಲ್ಲಿ ಬಾಕು, ವಡತ, ಇಂಥ ಹಿಂಸೆಗಳಾಗುತ್ತಿದ್ದರೆ ಅವುಗಳನ್ನು ಶಮನಮಾಡುವುದು. (2) ವಿಷಹರ ಅಂದರೆ ಸ್ಥಾವರ, ಜಂಗಮಾದಿ-ಭೇದದಿಂದ ಲೋಕದಲ್ಲಿ ಪ್ರಸಿದ್ಧಗಳಾಗಿರುವ ವಿಷಗಳ ಸಂಪರ್ಕದಿಂದ ದೇಹಕ್ಕೆ ಉಂಟಾಗಿರುವ ಬಾಧೆಗಳನ್ನು ಪರಿಹರಿಸತಕ್ಕದ್ದು. (3) ವರ್ಣಕರವಾದ ಮುಖಲೇಪ ಅಂದರೆ ಸರೀರದ ಯಾವುದಾದರೂ ಭಾಗದ ಅಥವಾ ಮುಖದ ಬಣ್ಣವು ಕೆಟ್ಟುಹೋಗಿ ಅವಲಕ್ಷಣವಾಗಿದ್ದರೆ ಆ ಭಾಗಕ್ಕೆ ಔಷಧಗಳ ಪಟ್ಟನ್ನು ಹಾಕಿ ಸರಿಪಡಿಸತಕ್ಕ ಕ್ರಮ ಎಂಬ ರೀತಿಯಿಂದ ಮೂರು ವಿಧ ಇವುಗಳನ್ನು ಹಾಕತಕ್ಕ ದಪ್ಪವು ಕೂಡಾ ಮೂರು ವಿಧವಾಗಿಯೇ ಇದೆ. ಅಂದರೆ ದೋಷಹರವಾದ ಲೇಪವನ್ನು ಒಂದಂಗುಲ ದಪ್ಪವಾಗಿ ಶರೀರದಮೇಲೆ ಮೆತ್ತಬೇಕು. ವಿಷಹರವಾದ ಲೇಪವನ್ನು ಮುಕ್ಕಾಲಂಗುಲ ದಪ್ಪವಾಗಿ ಮೆತ್ತಬೇಕು. ವರ್ಣಪ್ರದವಾದ ಲೇಪವನ್ನು ಅರ್ಧ ಅಂಗುಲ ಪರಿಮಾಣ ದಪ್ಪವಾಗಿ ಮೆತ್ತಬೇಕು. ಇಷ್ಟೊಂದು ದಪ್ಪವಾಗಿ ಮೆತ್ತಲು ಕಾರಣವೇನೆಂದರೆ ಈ ಲೇಪಗಳೆಲ್ಲವೂ ಎಷ್ಟು ಹೊತ್ತು ಹಸಿಯವಾಗಿರುತ್ತವೋ ಅಷ್ಟು ಹೊತ್ತಿನ ವರೆವಿಗೆ ಮಾತ್ರವೆ ರೋಗನಿವೃತ್ತಿ ಮಾಡತಕ್ಕ ಶಕ್ತಿಯನ್ನು ಹೊಂದಿರುತ್ತವೆ. ಒಣಗಿದವೆಂದರೆ ಕೀರಿತು ಕೂಡಲೇ ಇವುಗಳನ್ನು ಉದುರಿಸಿ ತೆಗೆದುಹಾಕಿಬಿಡಬೇಕು ಇಲ್ಲವಾದರೆ ಆ ಭಾಗದ ಕಾಂತಿಯನ್ನೇ ಕೆಡಿಸಿ ಹಾಳು ಮಾಡಿ ಬಿಡುತ್ತವೆ.

### ದೋಷಘ್ನಲೇಪ.

**ಪುನರ್ನವಾಂ ದಾರು ಶುಂಠೀಂ ಸಿದ್ಧಾರ್ಥಂ ಶಿಗ್ರುಮೇವ ಚ ॥**
**ಪಿಷ್ಟ್ವಾ ಚೈವಾರನಾಳೇನ ಪ್ರಲೇಪಸ್ಸರ್ವಶೋಥಜಿತ್ ॥ ೩ ॥**

ದೋಷಹರವಾದ ಲೇಪವನ್ನು ಹೇಳುತ್ತಾನೆ:— ಕೊಮ್ಮೆಯ ಬೇರು, ದೇವದಾರಿಯಚಕ್ಕೆ, ಶುಂಠಿ, ಬಿಳಿಯ ಸಾಸುವೆಯ ಕಾಳು, ನುಗ್ಗೆಯ ಚಕ್ಕೆ ಇವುಗಳನ್ನು ಸಮಪರಿಮಾಣದಲ್ಲಿ ಸೇರಿಸಿ, ಕಾಂಜಿಕವೆಂಬ ಹುಳಿನೀರಿನಲ್ಲಿ ನುಣ್ಣಗೆ ಅರೆದು ದೋಷಪ್ರಕೋಪದಿಂದ ಬಾಕು ಬಂದಿರುವ ಭಾಗದಮೇಲೆ ಲೇಪಹಾಕಿದಲ್ಲಿ ಸಮಸ್ತ ವಿಧವಾದ ಬಾಕೂ ಶಮನಹೊಂದುತ್ತವೆ.

## ದಾಹಹರಲೇಪ.

**ವಿಭೀತಫಲಮಜ್ಜಾಯಾಲೇಪೋದಾಹಾರ್ತಿನಾಶನಃ ॥**

ಪಿತ್ತಪ್ರಕೋಪದ ದೆಶೆಯಿಂದ ಶರೀರದ ಯಾವ ಭಾಗದಲ್ಲಿಯಾದರೂ ಉರಿ ಬಂದಲ್ಲಿ ತಾರೇಕಾಯಿಯ ಒಳಗಿನ ಪಪ್ಪನ್ನು ತೆಗೆದು ಹಿಂದೆ ಹೇಳಿದಂತೆ ಹುಳಿ ನಿ ರಿನಿಂದ ಅರೆದು ಲೇಪಹಾಕಿದರೆ ಉರಿ ಶಮನವಾಗುತ್ತದೆ.

## ದಶಾಂಗಲೇಪ.

**ಶಿರೀಷಂಮಧುಯಷ್ಟೀಚತಗರಂರಕ್ತಚಂದನಂ ॥ ೪ ॥**
**ಏಲಾಮಾಂಸೀನಿಶಾಯುಗ್ಮಂಕುಷ್ಠಂವಾಲಕಮೇವಚ ॥**
**ಇತಿಸಂಚೂರ್ಣ್ಯಲೇಪೋಯಂಪಂಚಮಾಂಶಘೃತಪ್ಲುತಃ ॥ ೫ ॥**
**ಜಲೇನಕ್ರಿಯತೇಸುಜ್ಞೈರ್ದಶಾಂಗಇತಿಸಂಜ್ಞಿತಃ ॥**
**ವಿಸರ್ಪಾನ್ವಿಷವಿಸ್ಫೋಟಾನ್ ಶೋಥಾನ್ ದುಷ್ಟವ್ರಣಾನ್**
**ಜಯೇತ್ ॥ ೬ ॥**

ದಶಾಂಗಲೇಪವನ್ನು ಹೇಳುತ್ತಾನೆ:— ಬಾಗೆಯಚಕ್ಕೆ, ಜ್ಯೇಷ್ಠಮಧು, ಗ್ರಂಥಿತಗರ, ರಕ್ತಚಂದನ, ಯಾಲಕ್ಕಿ, ಜಟಾಮಾಂಸಿ, ಅರಸಿನ ಮರಅರಸಿನ, ಚಂಗಲಕೋಷ್ಟ, ಮುಡಿವಾಳ ಇವುಗಳನ್ನು ಚನ್ನಾಗಿ ಚೂರ್ಣಮಾಡಿ ಐದನೆಯ ಭಾಗದಷ್ಟು ತುಪ್ಪವನ್ನು ಸೇರಿಸಿ ಕಲಿಸಿ, ನೀರಿನಿಂದ ಲೇಪಹಾಕಿದಲ್ಲಿ ವಿಸರ್ಪ ಗಳೆಂಬ ಉರಿಬಕ್ಕೆಗಳು, ವಿಷಸಂಪರ್ಕದಿಂದ ಉತ್ಪನ್ನಗಳಾದ ಗುಳ್ಳೆಗಳು, ಬಾಕುಗಳು, ದುಷ್ಟ ವ್ರಣಗಳು ಇವುಗಳೆಲ್ಲವೂ ಗುಣಹೊಂದುತ್ತವೆ.

**ಅಜಾದುಗ್ಧತಿಲೈರ್ಲೇಪೋನವನೀತೇನಸಂಯುತಃ ॥**
**ಶೋಥವಾರುಷ್ಕರಂಹಂತಿಲೇಪೋವಾಕೃಷ್ಣಮೃತ್ತಿಕೈಃ ॥ ೭ ॥**

ವಿಷಘ್ನಲೇಪವನ್ನು ಹೇಳುತ್ತಾನೆ:— ಗೇರುಹರಳಿನ ವಿಷಸಂಪರ್ಕದಿಂದ ಶರೀರದಲ್ಲಿ ಬಾಕು ಬಂದರೆ ಆಡಿನಹಾಲು, ಎಳ್ಳು, ಬೆಣ್ಣೆ ಇವುಗಳನ್ನು ಕೂಡಿಸಿ ನುಣ್ಣಗೆ ಅರೆದು, ಲೇಪಹಾಕುವುದರಿಂದ ಶಮನವಾಗುತ್ತದೆ. ಅಥವಾ ಆ ಭಾಗಕ್ಕೆ ಕಪ್ಪುಮಣ್ಣನ್ನು ತಣ್ಣೀರಿನಲ್ಲಿ ಕಲೆಸಿ ಮೆತ್ತಿದರೂ ಶಮನವಾಗುತ್ತದೆ.

ಲಾಂಗಲ್ಯತಿವಿಷಾಲಾಬುಜಾಲನೀಮೂಲಬೀಜಕೈಃ ॥
ಲೇಪೋಧಾನ್ಯಾಂಬುಸಂಪಿಷ್ಟಃಕೀಟವಿಸ್ಫೋಟನಾಶನಃ ॥ ೮ ॥

ಕೀಟಘ್ನಲೇಪವನ್ನು ಹೇಳುತ್ತಾನೆ:— ಕೋಳಿಕುಟುಕನಗೆಡ್ಡೆ, ಅತಿಬಜೆ, ಕಹಿಸೋರೇಬೀಜ, ಕಹಿ ಹೀರೇಬೀಜ, ಮೂಲಂಗಿಬೀಜ ಇವುಗಳನ್ನು ಅನ್ನದ ಹುಳಿನೀರಿನಿಂದ ಚನ್ನಾಗಿ ಅರೆದು ಲೇಪಹಾಕಿದಲ್ಲಿ ವಿಷ ಕ್ರಿಮಿಗಳು ಕಚ್ಚೋಣದರಿಂದ ಉಂಟಾದ ಗುಳ್ಳೆಗಳು ಗುಣಹೊಂದುತ್ತವೆ.

ರಕ್ತಚಂದನಮಂಜಿಷ್ಠಾಲೋಧ್ರಕುಷ್ಠಪ್ರಿಯಂಗವಃ ॥
ವಟಾಂಕುರಾಮಸೂರಾಶ್ಚವ್ಯಂಗಘ್ನಾಮುಖಕಾಂತಿದಾಃ ॥ ೯ ॥
ಮಾತುಲುಂಗಜಟಾಸರ್ಪಿಃಶಿಲಾಗೋಶಕೃತೋರಸಃ ॥
ಮುಖಕಾಂತಿಕರೋಲೇಪಃಪಿಟಕಾವ್ಯಂಗಕಾಲಜಿತ್ ॥ ೧೦ ॥
ಲೋಧ್ರಧಾನ್ಯವಚಾಲೇಪಸ್ತಾರುಣ್ಯಪಿಟಕಾಪಹಃ ॥
ತದ್ವದ್ಗೋರೋಚನಾಯುಕ್ತಂಮರಿಚಂಮುಖಲೇಪನಂ ॥ ೧೧ ॥
ಸಿದ್ಧಾರ್ಥಕವಚಾಲೋಧ್ರಸೈಂಧವೈಶ್ಚಪ್ರಲೇಪನಂ ॥
ವ್ಯಂಗೇಷುಚಾರ್ಜುನತ್ವಗ್ವಾಮಂಜಿಷ್ಠಾವಾಸಮಾಕ್ಷಿಕಾ ॥ ೧೨ ॥
ಲೇಪಸ್ಸನವನೀತೋವಾಶ್ವೇತಾಶ್ವಖುರಜಾಮಷೀ ॥
ಅರ್ಕಕ್ಷೀರಹರಿದ್ರಾಭ್ಯಾಂಮರ್ದಯಿತ್ವಾವಿಲೇಪನಾತ್ ॥ ೧೩ ॥
ಮುಖಕಾರ್ಷ್ಣ್ಯಂಶಮಂಯಾತಿಚಿರಕಾಲೋದ್ಭವಂಧ್ರುವಂ ॥
ವಟಸ್ಯಪಾಂಡುಪತ್ರಾಣಿಮಾಲತೀರಕ್ತಚಂದನಂ ॥ ೧೪ ॥
ಕುಷ್ಠಂಕಾಲೀಯಕಂಲೋಧ್ರಮೇಭಿರ್ಲೇಪಂಪ್ರಯೋಜಯೇತ್ ॥
ತಾರುಣ್ಯಪಿಟಕಾವ್ಯಂಗನೀಲಿಕಾದಿವಿನಾಶನಂ ॥ ೧೫ ॥

ವರ್ಣಕಂಗಳಾದ ಲೇಪಗಳನ್ನು ಹೇಳುತ್ತಾನೆ:—ವರ್ಣ್ಯಕರಗಳು ಅಂದರೆ ಚರ್ಮಕ್ಕೆ ವರ್ಣವನ್ನೂ ಹೊಳಪನ್ನೂ ಉಂಟುಮಾಡತಕ್ಕವುಗಳು. ರಕ್ತಚಂದನ, ಮಂಜಿಷ್ಠ, ಪತಂಗದಚಕ್ಕೆ, ಚಂಗಲಕೋಷ್ಟ, ಪ್ರಿಯಂಗುಎಂಬ ಸ್ವನಾಮ ಪ್ರಸಿದ್ಧ

ವಾದ ಮೂಲಿಕೆ, ಆಲದ ಕುಡಿ, ಮಸೂರವೆಂಬ ಒಂದು ಬಗೆಯ ಧಾನ್ಯ ಇವುಗಳನ್ನು ಚೂರ್ಣವಾಡಿ ಅರೆದು ಲೇಪಹಾಕುವುದರಿಂದ ಮುಖದಮೇಲೆ ಹತ್ತುವ ಒಂದು ಬಗೆಯ ಬಂಗು ಎಂಬ ಚರ್ಮರೋಗವು ನಿವೃತ್ತಿಯಾಗುತ್ತದಲ್ಲದೆ ಮುಖಕ್ಕೆ ಕಾಂತಿಯುಹನ್ನೂ ಕೊಡುತ್ತದೆ. ಮಾದಳದ ಬೇರು ತುಪ್ಪ, ಮಣಿಸಿಲೆ, ಹಸುವಿನ ಸಗಣಿಯನ್ನು ಹಿಂಡಿದ ನೀರು, ಇವುಗಳನ್ನು ಚನ್ನಾಗಿ ಅರೆದು ಮುಖಕ್ಕೆ ಲೇಪಹಾಕುವುದರಿಂದ ಮುಖದಮೇಲೆ ಏಳುವ ಮೊಡವೆ ಬಕ್ಕೆಗಳು, ಬಂಗು, ಕಪ್ಪುಮಚ್ಚೆ ಇವುಗಳು ಮಾಯವಾಗಿ ಮುಖಕ್ಕೆ ಕಾಂತಿ ಬರುವುದು. ಪತಂಗದ ಚಕ್ಕೆ, ಕೊತ್ತಂಬರಿ ಬೀಜ, ಬಜೆ, ಇವುಗಳನ್ನು ನುಣ್ಣಗೆ ಅರೆದು ಲೇಪಿಸುವುದರಿಂದ ಮೊಡವೆಗಳೆಂಬ ಪ್ರಾಯದ ಬಕ್ಕೆಗಳು ಗುಣಹೊಂದುತ್ತವೆ. ಗೋರೋಚನವನ್ನು ಮೆಣಸಿನಕಾಳನ್ನು ಸಹ ಅರೆದು ಲೇಪಹಾಕಿದರೂ ಮಡಿಮೆಗಳು ವಾಸಿಯಾಗುತ್ತವೆ. ಸಾಸುವೆಯ ಕಾಳು, ಬಜೆ, ಪತಂಗದ ಚಕ್ಕೆ, ಸೈಂಧವ ಲವಣ ಇವುಗಳನ್ನು ಅರೆದು ಲೇಪಹಾಕಿದರೆ ಬಂಗುಹತ್ತಿರುವುದು ಗುಣಕ್ಕೆ ಬರುತ್ತದೆ ಇದೇರೀತಿ ಮತ್ತಿಯಮರದಚಕ್ಕೆಯನ್ನಾಗಲೀ ಅಥವಾ ಮಂಜಿಷ್ಟೆ ಮತ್ತು ಸ್ವರ್ಣಮಾಕ್ಷಿಕ ಇವುಗಳನ್ನು ಅರದು ಹಚ್ಚಿದರಾಗಲೀ ಬಂಗು ಹೋಗುತ್ತದೆ. ಬಿಳಿಯಕುದುರೆಯ ಕಾಲುಗೊರಸನ್ನು ಸುಟ್ಟು ಮಶಿಯನ್ನು ಮಾಡಿ ಬೆಣ್ಣೆಯಲ್ಲಿ ಕಲಿಸಿ ಹಚ್ಚಿಸಿದರೂ ಬಂಗು ಗುಣಹೊಂದುತ್ತದೆ. ಯಕ್ಕದ ಹಾಲು, ಮರಅರಸಿನ, ಇವೆರಡನ್ನೂ ಚನ್ನಾಗಿ ಅರೆದು ಮುಖಕ್ಕೆಲ್ಲಾ ಹಚ್ಚಿಕೊಂಡಲ್ಲಿ ಬಹಳ ಕಾಲದ್ದಾದರೂ ಮುಖದ ಕಪ್ಪುಬಣ್ಣವು ತಿರುಗಿ ಒಳ್ಳೆಯ ಬಣ್ಣ ಬರುತ್ತದೆ. ಆಲದ ಹಣ್ಣೆಲೆಗಳು, ಜಾಜಿಯಸೊಪ್ಪು, ಕೆಂಪುಗಂಧ, ಚಂಗಲಕೋಷ್ಟ, ಮರಅರಸಿನ ಪತಂಗದಚಕ್ಕೆ ಈ ಔಷಧಗಳಿಂದ ಲೇಪವನ್ನು ಮಾಡಿ ಉಪಯೋಗಿಸಿದಲ್ಲಿ ಪ್ರಾಯದ ಮೊಡವೆಯ ಬಕ್ಕೆಗಳು, ಬಂಗು, ಮುಖದ ಕಪ್ಪು, ಇವುಗಳೆಲ್ಲವೂ ಅಳಿಸಿಹೋಗುತ್ತವೆ. ಅಂದರೆ ಗುಣವಾಗುತ್ತವೆ.

**ಪುರಾಣಮಥಪಿಣ್ಯಾಕಂಪುರೀಷಂಕುಕ್ಕುಟಸ್ಯಚ ॥**
**ಮೂತ್ರಪಿಷ್ಟಃಪ್ರಲೇಪೋಯಂಶೀಘ್ರಂಹನ್ಯಾದರೂಂಷಿಕಾಂ ॥೧೭॥**
**ಖದಿರಾರಿಷ್ಟಜಂಬೂನಾಂತ್ವಗ್ಭಿರ್ವಾಮೂತ್ರಸಂಯುತೈಃ ॥**
**ಕುಟಜತ್ವಕ್ಸೈಂಧವಂಚಲೇಪೋಹನ್ಯಾದರೂಂಷಿಕಾಂ ॥೧೮॥**

ಅರುಂಷಿಕಾ ಎಂಬುವುದೊಂದುಬಗೆಯ ಬಕ್ಕೆಗಳು ಇವುಗಳಿಗೆ ಉಪಯುಕ್ತವಾದ ಲೇಪನವನ್ನು ಹೇಳುತ್ತಾನೆ:— ಹಳೆಯದಾದ ಎಳ್ಳಿನಹಿಂಡಿ, ಕೋಳಿಯ ಮಲ, ಇವುಗಳನ್ನು ಮೂತ್ರದಲ್ಲಿ ಅರೆದು ಲೇಪಹಾಕಿದಲ್ಲಿ ಅರುಂಷಿಕಾ ಎಂಬ

ಬಕ್ಕೆಗಳು ಗುಣಹೊಂದುತ್ತವೆ. ಜಾಲಿಯಚಕ್ಕೆ, ಬೇವಿನಚಕ್ಕೆ, ನೇರಲಚಕ್ಕೆ ಇವುಗಳನ್ನು ಮೂತ್ರದಲ್ಲಿ ಅರೆದು ಹಚ್ಚುವುದರಿಂದಲೂ ಕೊಡಸದಚಕ್ಕೆ ಸೈಂಧವ ಲವಣ ಇವುಗಳನ್ನು ಅರೆದು ಲೇಪಹಾಕೋಣದರಿಂದಲೂ ಅರುಂಷಿಕೆ ಎಂಬ ಬಕೆಗಳು ಗುಣವಾಗುತ್ತವೆ.

ಪ್ರಿಯಾಲಬೀಜಮಧುಕಕುಷ್ಠಮಾಷೈಸ್ಸಸೈಂಧವೈಃ ॥
ಕಾರ್ಯೋದಾರುಣಕೇಮೂರ್ಧ್ನಿಪ್ರಲೇಪೋಮಧು
ಸಂಯುತಃ ॥ ೧೮ ॥
ದುಗ್ಧೇನಖಾಖಸಂಬೀಜಂಪ್ರಲೇಪಾದ್ದಾರುಣಂಜಯೇತ್ ॥
ಆಮ್ರಬೀಜಸ್ಯಚೂರ್ಣಂತುಶಿವಾಚೂರ್ಣಸಮಂದ್ವಯಂ ॥ ೧೯ ॥
ದುಗ್ಧಪಿಷ್ಟಃಪ್ರಲೇಪೋಯಂದಾರುಣಂಹಂತಿದಾರುಣಂ ॥

ಸಾರಪಪ್ಪು, ಜ್ಯೇಷ್ಟಮಧು, ಚೆಂಗಲಕೋಷ್ಟ, ಸೈಂಧವಲವಣ, ಇವುಗಳನ್ನು ನುಣ್ಣಗೆ ಅರೆದು ಜೇನಿನಲ್ಲಿ ಕಲೆಸಿ ಲೇಪಹಾಕುವುದರಿಂದ ಪರಮದಾರುವಾಗಿದ್ದರೂ ಕಡಿಮೆಯಾಗುತ್ತದೆ. ಖಾಖಸಬೀಜವೆಂದರೆ ಗಸಗಸೆಯ ಬೀಜ, ಇದನ್ನು ಹಾಲಿನಲ್ಲಿ ಚನ್ನಾಗಿ ಅರೆದು, ನೆತ್ತಿಗೆ ಲೇಪಹಾಕಿದರೂ ದಾರುಣ ಪರಿಹರ. ಮಾವಿನಸಪ್ಪಿನಹುಡಿ, ಅಳಲೇಕಾಯಿಹುಡಿ ಇವುಗಳನ್ನು ಹಾಲಿನಲ್ಲಿ ಕಲೆಸಿ ಲೆ ಪಹಾಕೋಣದರಿಂದಲೂ ದಾರುಣ ಶಾಂತಿಯಾಗುತ್ತದೆ.

ರಸಸ್ತಿಕ್ತಪಟೋಲಸ್ಯಪತ್ರಾಣಾಂತದ್ವಿಲೇಪನಾತ್ ॥ ೨೦ ॥
ಇಂದ್ರಲುಪ್ತಂಶಮಂಯಾತಿತ್ರಿಭಿರೇವದಿನೈರ್ಧ್ರುವಂ ॥
ಇಂದ್ರಲುಪ್ತಾಪಹೋಲೇಪೋಮಧುನಾಬೃಹತೀರಸಃ ॥ ೨೧ ॥
ಗುಂಜಾಮೂಲಂಫಲಂವಾಪಿಭಲ್ಲಾತಕರಸೋಪಿವಾ ॥
ಗೋಕ್ಷುರಸ್ತಿಲಪುಷ್ಪಾಣಿತುಲ್ಯೇಚಮಧುಸರ್ಪಿಷೀ ॥ ೨೨ ॥
ಶಿರಃಪ್ರಲೇಪನಂತೇನಕೇಶಸಂವರ್ಧನಂಪರಂ ॥
ಹಸ್ತಿದಂತಮಷೀಂಕೃತ್ವಾಛಾಗೀದುಗ್ಧಂರಸಾಂಜನಂ ॥ ೨೩ ॥
ರೋಮಾಣ್ಯನೇನಜಾಯಂತೇಲೇಪಾತ್ಪಾಣಿತಲೇಷ್ವಪಿ ॥
ಯಷ್ಟೀಂದೀವರಮೃದ್ವೀಕಾತೈಲಾಜ ಕ್ಷೀರಲೇಪನೈಃ ॥ ೨೪ ॥
ಇಂದ್ರಲುಪ್ತಂಶಮಂಯಾತಿಕೇಶಾಸ್ಸ್ಯುಸ್ಸಘನಾದೃಢಾಃ ॥
ಚತುಷ್ಪದಾನಾಂತ್ವಗ್ರೋಮನಖಶೃಂಗಾಸ್ಥಿಭಸ್ಮಭಿಃ ॥ ೨೫ ॥
ತೈಲೇನಸಹಲೇಪೋಯಂರೋಮಸಂಜನನಃಪರಃ ॥

ಇಂದ್ರಲುಪ್ತವೆಂದರೆ ತಲೆಯಲ್ಲಿ ಕೂದಲು ಉದುರಿಹೋಗಿ ತಲೆಯು ತಾಮ್ರದ ಚೊಂಬಿನಂತಾಗುವುದು. ಇದನ್ನು ಪಟ್ಟೆತಲೆ ಎಂದು ಲೋಕದಲ್ಲಿ ವ್ಯವಹರಿಸುತ್ತಾರೆ. ಈ ರೋಗಕ್ಕೆ ಉಪಯೋಗಪಡುವ ಲೇಪಗಳನ್ನು ಹೇಳುತ್ತಾನೆ. ಕಹಿಪಡವಲದ ಎಲೆಯರಸವನ್ನು ತೆಗೆದು ಕೂದಲು ಉದುರಿಹೋದ ತಲೆಗೆ ಮೂರು ದಿವಸ ಲೇಪಹಾಕಿದರೆ ಆ ರೋಗವು ಶಾಂತವಾಗುತ್ತದೆ. ಹೆಗ್ಗುಳ್ಳದಕಾಯಿನ ರಸವನ್ನು ಜೇನಿನೊಡನೆ ಲೇಪಹಾಕಿದರೂ ಗುಲಗುಂಜಿಯಬೇರು, ಗುಲಗುಂಜಿ ಇವುಗಳನ್ನು ಅರೆದು ಲೇಪಹಾಕಿದರೂ, ಗೇರುಬೀಜದ ರಸವನ್ನು ಹತ್ತಿಸಿದರೂ, ನೆಗ್ಗಲುಮುಳ್ಳು, ಎಳ್ಳುಹೂವು ಇವುಗಳನ್ನು ಸಮಪ್ರಮಾಣದಲ್ಲಿ ಜೇನು ಮತ್ತು ತುಪ್ಪಗಳನ್ನು ಸೇರಿಸಿ, ಅದರಲ್ಲಿ ಅರೆದು ಹತ್ತಿಸಿದರೂ ಇಂದ್ರಲುಪ್ತರೋಗವು ಗುಣವಾಗಿ ತಲೆಯಲ್ಲಿ ಕೂದಲು ಹುಟ್ಟುತ್ತದೆ. ಆನೆಯ ದಂತವನ್ನು ಸುಟ್ಟು, ಕರಕುಮಾಡಿಕೊಂಡು ಅದರೊಟ್ಟಿಗೆ ಆಡಿನ ಹಾಲು, ರಸಾಂಜನ ಇವುಗಳನ್ನು ಸೇರಿಸಿ ಚನ್ನಾಗಿ ಅರೆದು ಹತ್ತಿಸಿದರೆ ಅಂಗೈಲಾದರೂ ಕೂದಲು ಹುಟ್ಟಬಹುದು. ಜ್ಯೇಷ್ಠಮಧು, ನೀಲೋತ್ಪಲಬೀಜ, ದ್ರಾಕ್ಷಿ, ಇವುಗಳನ್ನು ಎಳ್ಳಿನಎಣ್ಣೆ, ತುಪ್ಪ, ಹಾಲು ಇವುಗಳೊಡನೆ ಅರೆದು ಲೇಪಮಾಡಿದರೆ ಇಂದ್ರಲುಪ್ತರೋಗವು ಶಮನವಾಗುತ್ತದೆ. ಚತುಷ್ಪಾದಪ್ರಾಣಿಗಳ ಚರ್ಮ, ಕೂದಲು, ಉಗುರು, ಕೊಂಬು ಇವುಗಳನ್ನು ಸುಟ್ಟು ಬೂದಿಮಾಡಿ ಎಣ್ಣೆಯಲ್ಲಿ ಕಲಸಿ, ಲೇಪಹಾಕಿದರೆ ಕೂದಲು ಉದುರಿಹೋಗಿರುವ ಭಾಗದಲ್ಲಿ ಚನ್ನಾಗಿ ಕೂದಲು ಹುಟ್ಟುತ್ತದೆ.

ಇಂದ್ರವಾರುಣಿಕಾಬೀಜತೈಲೇನಾಭ್ಯಂಗಮಾಚರೇತ್ ॥ ೨೬ ॥
ಪ್ರತ್ಯಹಂತೇನಜಾಯಂತೇಕುಂತಲಾಭೃಂಗಸನ್ನಿಭಾಃ ॥
ಅಯೋರಜೋಭೃಂಗರಜಸ್ತ್ರಿಫಲಾಕೃಷ್ಣಮೃತ್ತಿಕಾ ॥ ೨೭ ॥
ಸ್ಥಿತಮಿಕ್ಷುರಸೇಮಾಸಂಲೇಪನಾತ್ಪಲಿತಂಜಯೇತ್ ॥
ಧಾತ್ರೀಫಲತ್ರಯಂಪಥ್ಯೇದ್ವೇಶಥ್ಯೇಕಂವಿಭೀತಕಂ ॥ ೨೮ ॥
ಪಂಚಾಮ್ರಮಜ್ಜಲೋಹಸ್ಯಕರ್ಷೈಕಂಚಪ್ರದೀಯತೇ ॥
ಪಿಷ್ಟ್ವಾಲೋಹಮಯೇಭಾಂಡೇಸ್ಥಾಪಯೇದುಷಿತಂನಿಶಿ ॥ ೨೯ ॥
ಲೇಪೋಯಂಹಂತಿನಚಿರಾದಕಾಲಪಲಿತಂಮಹತ್ ॥
ತ್ರಿಫಲಾನೀಲಿಕಾಪತ್ರಂಲೋಹಂಭೃಂಗರಜಸ್ಸಮಂ ॥ ೩೦ ॥
ಅವಿಮೂತ್ರೇಣಸಂಪಿಷ್ಟಂಲೇಪಾತ್ಕೃಷ್ಣೀಕರಂಸ್ಮೃತಂ॥
ತ್ರಿಫಲಾಲೋಹಚೂರ್ಣಂಚದಾಡಿಮತ್ವಗ್ಬಿಸಂತಥಾ ॥ ೩೧ ॥

ಪ್ರತ್ಯೇಕಂಪಂಚಪಲಿಕಂಚೂರ್ಣಂಕುರ್ಯಾದ್ವಿಚಕ್ಷಣಃ ॥
ಭೃಂಗರಾಜರಸಸ್ಯಾಪಿಪ್ರಸ್ಥಷಟ್ಕಂಪ್ರದಾಪಯೇತ್ ॥ ೩೨ ॥
ಕ್ಷಿಪ್ತ್ವಾಲೋಹಮಯೇಪಾತ್ರೇಭೂಮಿಮಧ್ಯೇನಿಧಾಪಯೇತ್ ॥
ಮಾಸಮೇಕಂತತಃಕುರ್ಯಾತ್ಛಾಗೀದುಗ್ಧೇನಲೇಪನಂ ॥ ೩೩ ॥
ಕೂರ್ಚೇಶಿರಸಿರಾತ್ರೌಚಸಂವೇಷ್ಟ್ಯೈರಂಡಪತ್ರಕೈಃ ॥
ಸ್ವಪೇತ್ಪ್ರಾತಸ್ತತಃಕುರ್ಯಾತ್ಸ್ನಾನಂತೇನಚಜಾಯತೇ॥ ೩೪ ॥
ಪಲಿತಸ್ಯವಿನಾಶಶ್ಚತ್ರಿಭಿರ್ಲೇಪೈರ್ನಸಂಶಯಃ ॥

ಅಕಾಲದಲ್ಲಿ ಅಂದರೆ ಚಿಕ್ಕತನದಲ್ಲಿಯೇ ಕೂದಲು ಬೆಳ್ಳಗಾಗುವುದಕ್ಕೆ ಪಲಿತವೆಂದುಹೆಸರು ಆ ರೀತಿ ಕೂದಲು ಅಕಾಲದಲ್ಲಿ ಬೆಳ್ಳಗಾದದ್ದನ್ನು ಪುನಃ ಕಪ್ಪಗಾಗುವಂತೆ ಮಾಡಲು ಉಪಯುಕ್ತಗಳಾದ ಕೆಲವು ಲೇಪಗಳನ್ನು ಹೇಳುತ್ತಾನೆ:— ಕಾಡು ಕವಡೇಕಾಯಿನ ಬೀಜದ ತೈಲದಿಂದ ಪ್ರತಿನಿತ್ಯವೂ ಕೆಲವು ದಿವಸಗಳು ಅಭ್ಯಂಗಮಾಡುತ್ತ ಬಂದರೆ ಕೂದಲುಗಳು ನರೆತಿದ್ದರೆ ಕಪ್ಪಾಗುತ್ತವೆ ಕಬ್ಬಿಣದಪುಡಿ, ಗರುಗದ ಸೊಪ್ಪಿನಪುಡಿ, ತ್ರಿಫಲ (ಅಳಲೆ, ತಾರೆ, ನೆಲ್ಲಿ) ಚೂರ್ಣ ಕಪ್ಪುಮಣ್ಣು ಇವುಗಳನ್ನು ಕಬ್ಬಿನರಸದಲ್ಲಿ ಒಂದು ತಿಂಗಳು ಕೊಳೆಹಾಕಿ, ನಂತರ ಅದನ್ನು ತೆಗೆದು ನರೆತ ಕೂದಲಿಗೆ ಹತ್ತಿಸಿದರೆ ಕೂದಲು ಕಪ್ಪಾಗುತ್ತದೆ ಮೂರು ನೆಲ್ಲಿಯಕಾಯಿ, ಎರಡು ಅಳಲೆಯಕಾಯಿ, ಒಂದು ತಾರೇಕಾಯಿ, ಮಾವಿನವೋಟೆಯೊಳಗಿನ ಪಪ್ಪು ಐದು. ಒಂದು ಕರ್ಷಪ್ರಮಾಣ ಕಬ್ಬಿಣದ ಪುಡಿ, ಇವುಗಳೆಲ್ಲವನ್ನೂ ಚನ್ನಾಗಿ ಅರೆದು ಒಂದು ಲೋಹದ ಪಾತ್ರೆಯಲ್ಲಿ ಒಂದೆರಡು ದಿವಸ ಇರಿಸಿದ್ದು ನಂತರ ನರೆತ ಕೂದಲಿಗೆ ಹಚ್ಚಿದರೆ ಅಕಾಲದಲ್ಲಿ ಉಂಟಾದ ನರೆಯು ಹೋಗುತ್ತದೆ ತ್ರಿಫಲಚೂರ್ಣ, ವಜ್ರನೀಲೀಗಿಡದ ಎಲೆ, ಕಬ್ಬಿಣದಪುಡಿ, ಗರುಗದ ಸೊಪ್ಪಿನ ಚೂರ್ಣ, ಇವುಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ಆಡಿನ ಗಂಜಲದಲ್ಲರೆದು ನರೆತ ಕೂದಲಿಗೆ ಲೇಪಹಾಕಿದರೆ ಕಪ್ಪಾಗುತ್ತದೆ. ತ್ರಿಫಲಚೂರ್ಣ, ಕಬ್ಬಿಣದಪುಡಿ, ದಾಳಿಂಬರೆಯ ತೊಪ್ಪೆ, ಕಮಲದ ದಂಟು ಪ್ರತಿಯೊಂದನ್ನೂ ಸಮ ಪ್ರಮಾಣದಲ್ಲಿ ಸೇರಿಸಿ, ಚೂರ್ಣಮಾಡಿ ಗರುಗದ ಸೊಪ್ಪಿನ ರಸವನ್ನು ಒಂದು ಕಬ್ಬಿಣದ ಪಾತ್ರೆಯಲ್ಲಿ ಹಾಕಿ ಅದರಲ್ಲಿ ಈ ಚೂರ್ಣವನ್ನು ಮುಳುಗಿಸಿ ಒಂದು ತಿಂಗಳು ನೆಲದಲ್ಲಿ ಹೂಳಿ ಇರಿಸಿದ್ದು ಒಂದು ತಿಂಗಳಾದ ಮೇಲೆ ಹೊರಕ್ಕೆ ತೆಗೆದು ಆಡಿನ ಹಾಲಿನಲ್ಲಿ ಕಲೆಸಿ ಕೂರ್ಚವೆಂದರೆ ಬ್ರಹ್ಮಿನಂತಹ ಸಾಧನದಿಂದ ಕೂದಲಿಗೆಲ್ಲಾ ರಾತ್ರಿ ಬಳಿದು ಹರಳೆಲೆಯನ್ನು ಕಟ್ಟಿಕೊಂಡು ಮಲಗಿದ್ದು ಬೆಳಿಗ್ಗೆ ಎದ್ದು ಸ್ನಾನಮಾಡಬೇಕು. ಈ ರೀತಿ ಮೂರು ಲೇಪಗಳಿಂದ ಅಕಾಲದಲ್ಲಿ ಉಂಟಾದ ನರೆಯು ಹೋಗಿ ಕೂದಲೆಲ್ಲಾ ಭ್ರಮರಗಳಂತೆ ಕಪ್ಪಾಗುತ್ತದೆ.

ಶಂಖಚೂರ್ಣಸ್ಯಭಾಗೌದ್ವೌಹರಿತಾಳಂಚಭಾಗಿಕಂ ॥ ೩೫ ॥
ಮನಶ್ಶಿಲಾಚಾರ್ಧಭಾಗಾಸ್ಸರ್ಜಿಕಾಚೈಕಭಾಗಿಕಾ ॥
ಲೇಪೋಯಂವಾರಿಪಿಷ್ಟಸ್ತುಕೇಶಾನುತ್ಪಾಟ್ಯದೀಯತೇ ॥ ೩೬ ॥
ಅನಯಾಲೇಪಯುಕ್ತ್ಯಾಚಸಪ್ತವೇಲಂಪ್ರಯುಕ್ತಯಾ ॥
ನಿರ್ಮೂಲಂಕೇಶಸ್ಥಾನಂಸ್ಯಾತ್ ಕ್ಷಪಣಸ್ಯಶಿರೋಯಥಾ ॥ ೩೭ ॥
ತಾಳಕಂಶಾಣಯುಗ್ಮಂಸ್ಯಾತ್ ಷಟ್ ಶಾಣಂಶಂಖಚೂರ್ಣಕಂ ॥
ದ್ವಿಶಾಣಿಕಂಪಲಾಶಸ್ಯಕ್ಷಾರಂದತ್ವಾಪ್ರಮರ್ದಯೇತ್ ॥ ೩೮ ॥
ಕದಳೀದಂಡತೋಯೇನರವಿಪತ್ರರಸೇನವಾ ॥
ಅಸ್ಯಾಪಿಸಪ್ತಭಿರ್ಲೇಪೈಃರೋಮ್ಣಾಂಶಾತನಮುತ್ತಮಂ ॥ ೩೯ ॥

ಕೂದಲನ್ನು ಉದುರಿಸತಕ್ಕ ಲೇಪನವನ್ನು ಹೇಳುತ್ತಾನೆ.— ಶಂಖದ ಚೂರ್ಣ ಎರಡುಭಾಗ ಅರಿದಳ ಒಂದು ಭಾಗ ಮಣಿಶಿಲೆ ಅರ್ಧಭಾಗ ಸರ್ಜ ಕ್ಷಾರ ಒಂದು ಭಾಗ ಇವೆಲ್ಲವನ್ನೂ ಸೇರಿಸಿ, ಚೂರ್ಣಮಾಡಿ ನೀರಿನಿಂದ ಅರದು ಕೂದಲಿರುವ ಭಾಗಕ್ಕೆ ಲೇಪಹಾಕಿದಲ್ಲಿ ಕೂದಲು ಉದುರುತ್ತದೆ. ಇದೇ ಲೇಪ ವನ್ನೇ ಬಿಡದಂತೆ ಕೂದಲು ಹುಟ್ಟಿದಾಗಲೆಲ್ಲಾ ಏಳು ಬಾರಿ ಹಾಕುತ್ತ ಬಂದರೆ ಆ ಪ್ರದೇಶದಲ್ಲಿ ಎಂದೆಂದಿಗೂ ಕೂದಲೇ ಹುಟ್ಟುವುದಿಲ್ಲ. ಅರಿದಳ ಎರಡು ಶಾಣಪ್ರಮಾಣ, ಶಂಖದ ಚೂರ್ಣ ಆರು ಶಾಣ, ಮುತ್ತುಗದ ಕ್ಷಾರ ಎರಡು ಶಾಣ ಅಳತೆಗಳನ್ನು ಸೇರಿಸಿ ಬಾಳೇದಿಂಡಿನ ರಸದಿಂದಲಾಗಲೀ, ಎಕ್ಕದೆಲೆಯ ರಸದಿಂದಲಾಗಲೀ ಚನ್ನಾಗಿ ಅರೆದು ಬಿಡದಂತೆ ಏಳು ಬಾರಿ ಲೇಪಿಸಿದಲ್ಲಿ ಕೂದ ಲೆಲ್ಲಾ ಉದುರಿಹೋಗುತ್ತವೆ. ಪುನಃ ಹುಟ್ಟುವುದಿಲ್ಲ. ಇದು ಕೂದಲನ್ನು ಉದುರಿಸತಕ್ಕ ಉತ್ತಮ ಯೋಗ

ಸುವರ್ಣಪುಷ್ಪೀಕಾಸೀಸಂವಿಡಂಗಾನಿಮನಶ್ಶಿಲಾ ॥
ರೋಚನಾಸ್ಯೆಂಧವಂಚೈವಲೇಪನಾಚ್ಛ್ವಿತ್ರನಾಶನಂ ॥ ೪೦ ॥
ವಾಯಸ್ಯೇಡಗಜಾಕುಷ್ಠಕೃಷ್ಣಾಭಿರ್ಗುಟಿಕಾಕೃತಾ ॥
ಬಸ್ತಮೂತ್ರೇಣಸಂಪಿಷ್ಟಾಪ್ರಲೇಪಾಚ್ಛ್ವಿತ್ರನಾಶಿನೀ ॥ ೪೧ ॥
ತಾಳಕಂಶಾಣಮಾತ್ರಂಸ್ಯಾತ್ ಚತುಶ್ಶಾಣಾಚಬಾಕುಚೀ ॥
ಗೋಮೂತ್ರಪಿಷ್ಟಂತಚ್ಚೂರ್ಣಂಲೇಪನಾತ್ ಶ್ವಿತ್ರನಾಶನಂ ॥೪೨॥
ವಾಕುಚೀವೇತಸೋಲಾಕ್ಷಾಕಾಕೋದುಂಬರಿಕಾಕಣಾ ॥
ರಸಾಂಜನಮಯಾಶ್ಚೂರ್ಣಂತಿಲಾಃಕೃಷ್ಣಾಸ್ತದೇಕತಃ ॥ ೪೩ ॥
ಚೂರ್ಣಯಿತ್ವಾಗವಾಂಪಿತ್ತೈಃಪಿಷ್ಟ್ವಾಚಗುಟಿಕಾಕೃತಾ ॥

ಅಸ್ಯಾಃಪ್ರಲೇಪಾತ್ ಶ್ವಿತ್ರಾಣಿಪ್ರಣಶ್ಯಂತ್ಯತಿವೇಗತಃ ॥ ೪೪ ॥

ಶ್ವಿತ್ರವೆಂದರೆ ಬಿಳಿಯತೊನ್ನು ಇದನ್ನು ನಾಶಮಾಡತಕ್ಕ ಕೆಲವು ಲೇಪಗಳನ್ನು ಹೇಳುತ್ತಾನೆ. ಸುವರ್ಣಪುಷ್ಪೀಎಂದರೆ ಲೋಕದಲ್ಲಿ ತಂಗಡಿ, ಆವರಿಕೆ ಎಂಬದಾಗಿ ಕರೆಯುವಗಿಡ, ಅನ್ನಭೇದಿ, ವಾಯುವಿಡಂಗ, ಮಣಿಶಿಲೆ, ಗೋರೋಜನ, ಸೈಂಧವಲವಣ ಇವುಗಳನ್ನು ಕೂಡಿಸಿ ಅರದು, ತೊನ್ನಿರುವಕಡೆಗೆ ಲೇಪ ಹಾಕಿದಲ್ಲಿ ಅದು ನಾಶವಾಗಿ ಹೋಗುತ್ತದೆ. ನೀರಿನಿಂದ ಅರದು ಲೇಪಹಾಕತಕ್ಕದ್ದು. ಗಣಿಕೆಯಸೊಪ್ಪು, ಚಗಚೆಯ ಬೀಜ, ಚಂಗಲಕೋಷ್ಟ, ಹಿಪ್ಪಲಿ, ಇವುಗಳನ್ನು ಸೇರಿಸಿ, ಆಡಿನಮೂತ್ರದಿಂದ ಅರೆದು ಬಿಳುಪು ಇರುವ ಕಡೆಗೆ ಲೇಪ ಹಾಕಿದರೆ ಗುಣಬರುವುದು. ಅರಿದಳ ಒಂದು ಶಾಣ, ಬಾವಂಚಿ ಬೀಜ ನಾಲ್ಕು ಶಾಣ ಇವುಗಳನ್ನು ಕೂಡಿಸಿ ಚೂರ್ಣಮಾಡಿ, ಹಸುವಿನ ಗಂಜಲದಲ್ಲರದು ಬಿಳುಪು ಇರುವ ಭಾಗಕ್ಕೆ ಮೆತ್ತಿದಲ್ಲಿ ಬಿಳುಪು ಹೋಗುತ್ತದೆ ಬಾವಂಚಿ ಬೀಜ ವೇತಸವೆಂಬ ಒಂದು ಬಗೆಯ ಗೊತ್ತಿಲ್ಲದ ಮರದಚಕ್ಕೆ, ಅರಗು, ಕಾಡುಅತ್ತಿ ಹಿಪ್ಪಲಿ, ರಸಾಂಜನ, ಕಬ್ಬಿಣದಪುಡಿ, ಕಪ್ಪುಎಳ್ಳು ಇವುಗಳೆಲ್ಲಾ ಒಂದೊಂದು ತೂಕ, ಇವುಗಳನ್ನು ಹಸುವಿನ ಪಿತ್ತ ಎಂದರೆ ಹಸುವಿನ ಪಿತ್ತಕೋಶವಲ್ಲಿರುವ ಒಂದು ಬಗೆಯ ದ್ರವ ಇದರೊಡನಾಗಲಿ ಅಥವಾ ಗೋಮೂತ್ರದೊಡನಾಗಲೀ ಅರೆದು ಗುಳಿಗೆಮಾಡಿ ಇರಿಸಿಕೊಂಡು ಬಿಳುಪು ಇರುವ ಪ್ರದೇಶದಲ್ಲಿ ಹತ್ತಿಸುತ್ತಬಂದಲ್ಲಿ ಬಹು ಜಾಗ್ರತೆಯಾಗಿ ಬಿಳುಪು ಗುಣವಾಗುತ್ತದೆ.

ಧಾತ್ರೀಸರ್ಜರಸಶ್ಚೈವಯವಕ್ಷಾರಶ್ಚಚೂರ್ಣಿತಃ ॥
ಸೌವೀರೇಣಪ್ರಲೇಪೋಽಯಂಪ್ರಯೋಜ್ಯಸ್ಸಿಧ್ಮನಾಶನೇ ॥ ೪೫ ॥
ದಾರ್ವೀಮೂಲಕಬೀಜಾನಿತಾಲಕಂಸುರದಾರುಚ ॥
ತಾಂಬೂಲಪತ್ರಂಸರ್ವಾಣಿಕಾರ್ಷಿಕಾಣಿಪೃಥಕ್ ಪೃಥಕ್ ॥ ೪೬ ॥
ಶಂಖಚೂರ್ಣಂಶಾಣಮಾತ್ರಂಸರ್ವಾಣ್ಯೇಕತ್ರಕಾರಯೇತ್ ॥
ಲೇಪೋಽಯಂವಾರಿಣಾಪಿಷ್ಟಸ್ಸಿಧ್ಮನಾಂನಾಶನಃಪರಃ ॥ ೪೭ ॥

ಸಿಧ್ಮ ಎಂದರೆ ಚಿಬ್ಬುಎಂಬದಾಗಿ ಲೋಕದಲ್ಲಿ ವ್ಯವಹರಿಸುವ ಒಂದು ಬಗೆಯ ಚರ್ಮರೋಗ ಇದನ್ನು ನಿವಾರಣಮಾಡತಕ್ಕ ಕೆಲವು ಯೋಗಗಳನ್ನು ಹೇಳುತ್ತಾನೆ:—ನೆಲ್ಲೀಕಾಯಿ, ರಾಳ, ಯವಕ್ಷಾರ, ಇವುಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ಸೌವ್ವೀರವೆಂದರೆ ಅನ್ನದ ಹುಳಿನೀರಿನಿಂದ ಅರೆದು ಚಿಬ್ಬುಹತ್ತಿರುವ ಭಾಗಕ್ಕೆ ಹತ್ತಿಸಿದರೆ ಚಿಬ್ಬು ನಾಶವಾಗಿ ಹೋಗುತ್ತದೆ. ಮರಅರಸಿನ, ಮೂಲಂಗಿ ಬೀಜ, ಅರಿದಳ, ದೇವದಾರಿಚಕ್ಕೆ, ವೀಳ್ಯದೆಲೆ ಇವು ಪ್ರತಿಯೊಂದು ಒಂದೊಂದು

ಕರ್ಷಪ್ರಮಾಣ ಶಂಖದ ಚೂರ್ಣ ಒಂದುಶಾಣಪ್ರಮಾಣ ಇವುಗಳೆಲ್ಲವನ್ನೂ ಕೂಡಿಸಿ ನೀರಿನಿಂದ ಅರೆದು ಚಿಬ್ಬು ಹತ್ತಿರುವ ಭಾಗಕ್ಕೆ ಲೇಪಹಾಕಿದರೆ ಗುಣ ವಾಗುತ್ತವೆ.

ಹರೀತಕೀಸೈಂಧವಂಚಗೈರಿಕಂಚರಸಾಂಜನಂ ॥
ಬಿಡಾಲಕೋಜಲೇಪಿಷ್ಟಃಸರ್ವನೇತ್ರಾಮಯಾಪಹಃ ॥ ೪೮ ॥
ರಸಾಂಜನಂವ್ಯೋಷಯುತಂಸಂಪಿಷ್ಟಂವಟಿಕೀಕೃತಂ ॥
ಕಂಡೂಪಾಕಾನ್ವಿತಾಂಹಂತಿಲೇಪಾದಂಜನನಾಮಿಕಾಂ ॥ ೪೯ ॥

ಅಳಲೇಕಾಯಿ, ಸೈಂಧವಲವಣ, ಗೈರಿಕವೆಂಬಧಾತು, ರಸಾಂಜನ, ಬಿಡಾಲ ಲವಣ ಇವುಗಳನ್ನು ನೀರಿನಲ್ಲಿ ಅರೆದು ಲೇಪಿಸಿದರೆ ಎಲ್ಲಾ ವಿಧವಾದ ನೇತ್ರರೋಗಗಳೂ ಪರಿಹಾರವಾಗುವುವು ರಸಾಂಜನ ಒಂದನ್ನೇ ವ್ಯೋಷವೆಂದರೆ ಶುಂಠಿ, ಮೆಣಸು, ಹಿಪ್ಪಲಿ ಇವುಗಳೊಡನೆ ಚನ್ನಾಗಿ ಅರೆದು ಗುಳಿಗೆಗಳನ್ನಾಗಿ ಮಾಡಿಟ್ಟು ಕೊಂಡು ಲೇಪಿಸಿದರೆ ನವೆ, ಉರಿ ಇವುಗಳಿಂದ ಕೂಡಿದ ಅಂಜನನಾಮಿಕಾ ಎಂಬ ನೇತ್ರ ರೋಗವು ನಾಶವಾಗುವುದು

ಪ್ರಪುನ್ನಾಟಸ್ಯಬೀಜಾನಿಬಾಕುಚೀಸರ್ಷಪಾಸ್ತಿಲಾಃ ॥
ಕುಷ್ಠಂನಿಶಾದ್ವಯಂಮುಸ್ತಂಪಿಷ್ಟ್ವಾತಕ್ರೇಣಚೈಕತಃ ॥ ೫೦ ॥
ಪ್ರಲೇಪಾದಸ್ಯನಶ್ಯಂತಿದದ್ರೂಕಂಡೂವಿಚರ್ಚಿಕಾಃ ॥
ಹೇಮಕ್ಷೀರೀವಿಡಂಗಾನಿದರದಂಗಂಧಕಸ್ತಥಾ ॥ ೫೧ ॥
ದದ್ರುಘ್ನಃಕುಷ್ಠಸಿಂದೂರೀಸರ್ವಾಣ್ಯೇಕತ್ರಮರ್ದಯೇತ್ ॥
ಧತ್ತೂರನಿಂಬಕಾಂಬೂಲೀಪತ್ರಾಣಾಂಸ್ವರಸೈಃಪೃಥಕ್ ॥ ೫೨ ॥
ಅಸ್ಯಪ್ರಲೇಪಮಾತ್ರೇಣಪಾಮಾದದ್ರೂವಿಚರ್ಚಿಕಾಃ ॥
ಕಂಡೂಶ್ಚರಸಕಶ್ಚೈವಪ್ರಶಮಂಯಾಂತಿವೇಗತಃ ॥ ೫೩ ॥
ದೂರ್ವಾಭಯಾಸೈಂಧವಂಚಚಕ್ರಮರ್ದಃಕುಠೇರಕಃ ॥
ಏಭಿಸ್ತಕ್ರಯುತೋಲೇಪಃಕಂಡೂದದ್ರೂವಿನಾಶನಃ ॥ ೫೪ ॥
ದೂರ್ವಾನಿಶಾಯುತೋಲೇಪಃಕಂಡೂಪಾಮಾವಿನಾಶನಃ ॥
ಕ್ರಿಮಿದದ್ರೂಹರಶ್ಚೈವಶೀತಪಿತ್ತಾಪಹಃಸ್ಮೃತಃ ॥ ೫೫ ॥
ಸಿದ್ಧಾರ್ಥರಜನೀಕುಷ್ಠಪ್ರಪುನ್ನಾಟತಿಲೈಸ್ಸಹ ॥
ಕಟುತೈಲೇನಸಂಮಿಶ್ರಂದದ್ರುಘ್ನಂಚಪ್ರಲೇಪನಂ ॥ ೫೬ ॥

ಶುರಿ, ಕಜ್ಜಿ, ನೆವೆ ಇವುಗಳನ್ನು ನಿವಾರಣಮಾಡತಕ್ಕ ಕೆಲವು ಲೇಪಗಳನ್ನು

ಹೇಳುತ್ತಾನೆ:— ಚಗಚೆಯ ಬೀಜ, ಬಾವಂಚಿ ಬೀಜ, ಸಾಸುವೆಕಾಳು, ಎಳ್ಳು, ಚಂಗಲಕೋಷ್ಟ, ಅರಸಿನ, ಮರಅರಸಿನ, ಭದ್ರಮುಸ್ತೆ ಇವುಗಳನ್ನು ಮಜ್ಜಿಗೆಯಿಂದ ಅರೆದು ಲೇಪಹಾಕಿದಲ್ಲಿ ತುರಿ, ಕಜ್ಜಿ, ನವೆ ಇವುಗಳು ಗುಣಹೊಂದುತ್ತವೆ. ಹೇಮಕ್ಷೀರಿ ಅಂದರೆ ಸ್ವರ್ಣಕ್ಷೀರಿ ಎಂಬ ಮೂಲಿಕೆ, ವಾಯುವಿಡಂಗ ಇಂಗಲೀಕ, ಗಂಧಕ, ಚಗಚೀಬಿಜ, ಚಂಗಲಕೋಷ್ಟ, ಚಂದ್ರ ಇವುಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ದತ್ತೂರೀಸೊಪ್ಪಿನರಸ, ಬೇವಿನಸೊಪ್ಪಿನರಸ, ವಿಳ್ಳೆದೆಲೆಯರಸ ಇವುಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಅರೆದು ಹಚ್ಚಿದರೆ ಕಜ್ಜಿ, ತುರಿ, ನವೆ ಇವುಗಳು ಗುಣವಾಗುತ್ತವೆ ಗರಿಕೆಯ ಹುಲ್ಲು, ಅಳಲೇಕಾಯಿ, ಸೈಂಧವಲವಣ, ಚಗಚೇಬೀಜ, ಕುರೇರಕ ಎಂದರೆ ಒಂದು ಬಗೆಯ ತುಲಸಿ ಇವುಗಳನ್ನು ಮಜ್ಜಿಗೆಯಲ್ಲಿ ಅರದು ಲೇಪಹಾಕಿದಲ್ಲಿ ಕಜ್ಜಿ, ತುರಿಗಳು ಪರಿಹಾರವಾಗುವವು. ಗರಿಕೆಯಹುಲ್ಲು, ಅರಸಿನ ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಲೇಪಹಾಕಿದರೆ ತುರಿ ನವೆ ಇವುಗಳು ಶಮನವಾಗುತ್ತವೆ. ವಾಯವಿಡಂಗ, ಚಗಚೇಬೀಜ ಇವುಗಳನ್ನು ನೀರಿನಲ್ಲಿ ಅರೆದು ಲೇಪಹಾಕಿದಲ್ಲಿ ಶೀತಪಿತ್ತವೆಂಬ ಒಂದು ಬಗೆಯ ಚರ್ಮರೋಗವು ಗುಣವಾಗುತ್ತದೆ. ಬಿಳೀಸಾಸುವೆ, ಅರಿಸಿನ, ಚಂಗಲಕೋಷ್ಟ, ಚಗಚೇಬೀಜ, ಎಳ್ಳು, ಇವುಗಳನ್ನು ಅರೆದು ಸಾಸುವೆ ಎಣ್ಣೆಯಲ್ಲಿ ಕಲೆಸಿ ಹಚ್ಚಿದಲ್ಲಿ ಕಜ್ಜಿ ತುರಿಗಳು ಗುಣವಾಗುತ್ತವೆ.

ರಾಸ್ನಾನೀಲೋತ್ಪಲಂದಾರುಚಂದನಂಮಧುಕಂಬಲಾ ॥
ಘೃತಕ್ಷೀರಯುತೋಲೇಪೋವಾತವೀಸರ್ಪನಾಶನಃ ॥ ೫೭ ॥
ಮೃಣಾಳಂಚಂದನಂಲೋಧ್ರಮುಶೀರಂಕಮಲೋತ್ಪಲಂ ॥
ಸಾರಿವಾಮಲಕೀಪಥ್ಯಾಲೇಪಃಪಿತ್ತವಿಸರ್ಪನುತ್ ॥ ೫೮ ॥
ತ್ರಿಫಲಾಪದ್ಮಕೋಶೀರಂಸಮಂಗಾಕರವೀರಕಂ ॥
ನಲಮೂಲಮನಂತಾಚಲೇಪಃಶ್ಲೇಷ್ಮವಿಸರ್ಪಹಾ ॥ ೫೯ ॥

ವಿಸರ್ಪವೆಂದರೆ ಒಂದು ಬಗೆಯ ಉರಿಬಕ್ಕೆ. ಇದನ್ನು ಕೆಂಜಿಗೆಎಂದೂ ವ್ಯವಹರಿಸುತ್ತಾರೆ. ಇದನ್ನು ಶಮನಮಾಡತಕ್ಕ ಲೇಪಗಳನ್ನು ಹೇಳುತ್ತಾನೆ:— ಸಣ್ಣರಾಸ್ನೆ, ಕನ್ನೈದಲೆಹೂವು, ದೇವದಾರಿಚಕ್ಕೆ, ಚಂದನ, ಜ್ಯೇಷ್ಟಮಧು, ಕಳ್ಳಂಗಡ್ಲೆ ಇವುಗಳನ್ನು ಹಾಲು ಮತ್ತು ತುಪ್ಪದಿಂದ ಅರೆದು ಲೇಪಹಾಕಿದಲ್ಲಿ ವಾತಪ್ರಕೋಪದಿಂದ ಹುಟ್ಟಿದ ವಿಸರ್ಪವೆಂಬ ಬಕ್ಕೆಯು ಗುಣಹೊಂದುತ್ತದೆ. ಕಮಲದ ದಂಟು ಚಂದನ ಲೋಧ್ರದಚಕ್ಕೆ, ಲಾವಂಚ, ತಾವರೆ ಹುವ್ವು, ನೀಲೀಬಣ್ಣದ ತಾವರೆಹುವ್ವು, ಸೊಗದೆಬೇರು, ನೆಲ್ಲಿಯಕಾಯಿ, ಅಳಲೆಯಕಾಯಿ ಇವುಗಳನ್ನು ನೀರಿನಲ್ಲಿ ಅರೆದು ಲೇಪಹಾಕಿದಲ್ಲಿ ಪಿತ್ತಪ್ರಕೋಪದಿಂದ ಹುಟ್ಟಿದ

ವಿಸರ್ಪದೆಬಕ್ಕೆಯು ಶಮನವಾಗುತ್ತದೆ. ತ್ರಿಫಲ, ಪದ್ಮಕಾಷ್ಟ, ಲಾಮಂಚ, ಸಮಂಗಾ ಎಂದರೆ ಮಂಜಿಷ್ಠೆ, ಕಣಿಗಲಬೇರು, ನಲ ಎಂಬ ಒಂದು ಬಗೆಯ ಹುಲ್ಲಿನಬೇರು, ತುರುಚಿಯಬೇರು ಇವುಗಳನ್ನು ನೀರಿನಿಂದ ಅರೆದು ಲೇಪಹಾಕಿದಲ್ಲಿ ಶ್ಲೇಷ್ಮವಿಸರ್ಪವು ಗುಣಹೊಂದುತ್ತದೆ.

ಮಾಂಸೀಸರ್ಜರಸೋಲೋಧ್ರಂಮಧುಕಂಸಹರೇಣುಕಂ ॥
ಮೂರ್ವಾನೀಲೋತ್ಪಲಂಪದ್ಮಂಶಿರೀಷಕುಸುಮೈಸ್ಸಹ ॥ ೬೦ ॥
ಪ್ರಲೇಪಃಪಿತ್ತವಾತಾಸ್ರೇಶತಧೌತಘೃತಪ್ಲುತಃ ॥
ಆಮಲಂಘೃತಭೃಷ್ಟಂತುಪಿಷ್ಟಂಕಾಂಜಿಕವಾರಿಭಿಃ ॥ ೬೧ ॥
ಜಯೇನ್ಮೂರ್ಧ್ನಿಪ್ರಲೇಪೇನರಕ್ತಂನಾಸಿಕಯಾಸ್ರುತಂ ॥

ವಾತರಕ್ತವೆಂಬ ಚರ್ಮರೋಗದಲ್ಲಿ ಉಪಯುಕ್ತವಾದ ಲೇಪನವನ್ನು ಹೇಳುತ್ತಾನೆ:—ಜಟಾಮಾಂಸಿ, ರಾಳ ಲೋಧ್ರದಚಕ್ಕೆ ಜ್ಯೇಷ್ಟಮಧು, ಹರೇಣುಕವೆಂಬ ಮೂಲಿಕೆ, ಕುರಟಗ, ನೈದಿಲೆಯ ಹುವ್ವು, ತಾವರೆಯ ಹುವ್ವು, ಬಾಗೇಹುವ್ವು ಇವುಗಳನ್ನು ಚನ್ನಾಗಿ ಅರೆದು ಶತಧೌತಘೃತದೊಡನೆ ಕಲೆಸಿ ಲೇಪಿಸಿದಲ್ಲಿ ಪಿತ್ತಪ್ರಕೋಪಜನ್ಯವಾದ ವಾತ ರಕ್ತವು ಶಮನವಾಗುತ್ತದೆ. ನೆಲ್ಲಿಯ ಚಟ್ಟನ್ನು ತುಪ್ಪದಿಂದ ಹುರಿದು ಅನ್ನದ ಹುಳಿನೀರಿನಿಂದ ಚನ್ನಾಗಿ ಅರೆದು ನೆತ್ತಿಗೆ ಹಚ್ಚಿಕೊಂಡಲ್ಲಿ ಮೂಗಿನಲ್ಲಿ ರಕ್ತಬೀಳುವುದು ಶಮನವಾಗುತ್ತದೆ

ಕುಷ್ಠಮೇರಂಡತೈಲೇನಲೇಪಾತ್ಕಾಂಜಿಕಪೇಷಿತಂ ॥ ೬೨ ॥
ಶಿರೋಽರ್ತಿಂವಾತಜಾಂಹನ್ಯಾತ್ಪಿಷ್ಟಂವಾಮುಚಕುಂದಜಂ ॥
ದೇವದಾರುನತಂಕುಷ್ಠಂನಲದಂವಿಶ್ವಭೇಷಜಂ ॥ ೬೩ ॥
ಸಕಾಂಜಿಕಸ್ನೇಹಯುಕ್ತೋಲೇಪೋವಾತಶಿರೋಽರ್ತಿನುತ್ ॥
ಚಂದನೋಶೀರಯಷ್ಟ್ಯಾಹ್ವಬಲಾವ್ಯಾಘ್ರನಖೋತ್ಪಲೈಃ ॥ ೬೪ ॥
ಕ್ಷೀರಪಿಷ್ಟೈಃಪ್ರಲೇಪಸ್ಸ್ಯಾತ್ ರಕ್ತಪಿತ್ತಶಿರೋಽರ್ತಿಜಿತ್ ॥
ಧಾತ್ರೀಕಸೇರುಹ್ರೀಬೇರಪದ್ಮಪದ್ಮಕಚಂದನೈಃ ॥ ೬೫ ॥
ದೂರ್ವೋಶೀರನಲಾನಾಂಚಮೂಲೈಃಕುರ್ಯಾತ್ಪ್ರಲೇಪನಂ ॥
ಶಿರೋಽರ್ತಿಂಪಿತ್ತಜಾಂಹನ್ಯಾದ್ರಕ್ತಪಿತ್ತರುಜಂತಥಾ ॥ ೬೬ ॥
ಹರೇಣುನತಶೈಲೇಯಮುಸ್ತೈಲಾಗುರುದಾರುಭಿಃ ॥
ಮಾಂಸೀರಾಸ್ನಾರುಬೂಕೈಶ್ಚ ಕೋಷ್ಣೋಲೇಪಃಕಫಾರ್ತಿನುತ್ ॥ ೬೭ ॥
ಶುಂಠೀಕುಷ್ಠಪ್ರಪುನ್ನಾಟದೇವಕಾಷ್ಠೈಸ್ಸರೋಹಿಷೈಃ ॥

**ಸುಖೋಷ್ಣೈರ್ಮೂತ್ರಪಿಷ್ಟೈಶ್ಚ ಲೇಪಃ ಶ್ಲೇಷ್ಮಶಿರೋರ್ತಿನುತ್ ॥ ೬೮ ॥**
**ಸಾರಿಬಾಕುಷ್ಠಮಧುಕವಚಾಕೃಷ್ಣೋತ್ಪಲೈಸ್ತಥಾ ॥**
**ಲೇಪಸ್ಸಕಾಂಜಿಕಸ್ನೇಹಃ ಸೂರ್ಯಾವರ್ತಾರ್ಧಭೇದಯೋಃ ॥ ೬೯ ॥**
**ವರೀನೀಲೋತ್ಪಲಂ ದೂರ್ವಾ ತಿಲಾಃ ಕೃಷ್ಣಾಃ ಪುನರ್ನವಾ ॥**
**ಶಂಖಕೇನಂತವಾತೇಚ ಲೇಪಃ ಸರ್ವಶಿರೋರ್ತಿಜಿತ್ ॥ ೭೦ ॥**

ಶಿರೋರೋಗಹರಗಳಾದ ಕೆಲವು ಲೇಪಗಳನ್ನು ಹೇಳುತ್ತಾನೆ:— ಚಂಗಲ ಕೋಷ್ಟವನ್ನು ಹರಳೆಣ್ಣೆ ಮತ್ತು ಅನ್ನದ ಹುಳಿನೀರು ಇವುಗಳಿಂದ ಅರದು ತಲೆಗೆ ಲೇಪಹಾಕಿದಲ್ಲಿ ವಾತಪ್ರಕೋಪದಿಂದ ಉತ್ಪನ್ನವಾದ ತಲೆನೋವು ಶಾಂತವಾಗುತ್ತದೆ. ಮುಚುಕುಂದ ಎಂಬುವುದೊಂದು ಬಗೆಯ ಹುವ್ವು ಕುಂದ ಪುಷ್ಪವೆಂದು ಹೇಳಿಕೊಳ್ಳುವುದರಲ್ಲಿಯೇ ಇದೊಂದು ವಿಧ ಈ ಪುಷ್ಪವನ್ನು ಕೂಡ ಹಿಂದೆ ಹೇಳಿದಂತೆ ಹರಳೆಣ್ಣೆ, ಅನ್ನದಹುಳಿನೀರುಗಳಿಂದ ಅರದು ತಲೆಗೆ ಲೇಪ ಹಾಕಿದರೂ ವಾಯುತಲೆನೋವು ಶಾಂತವಾಗುತ್ತದೆ. ದೇವದಾರೀಚಕ್ಕೆ, ಗಂಧಿ ತಗರ ಚಂಗಲಕೋಷ್ಟ, ಲಾಮಂಚ, ಶುಂಠಿ ಇವುಗಳನ್ನು ಹರಳೆಣ್ಣೆ ಅನ್ನದ ಹುಳಿನೀರು ಇವುಗಳಿಂದ ಅರೆದು ತಲೆಗೆ ಲೇಪಹಾಕಿದರೆ ವಾಯು ತಲೆಶೂಲೆ ಶಮನವಾಗುತ್ತದೆ. ರಕ್ತಚಂದನ, ಲಾಮಂಚ, ಜ್ಯೇಷ್ಠಮಧು, ಕಳ್ಳಂಗಡ್ಲೆ, ವ್ಯಾಘ್ರನಖವೆಂಬ ಸುಗಂಧ ದ್ರವ್ಯ, ಕನ್ನೈದಿಲೆ ಹುವ್ವು ಇವುಗಳನ್ನು ಹಾಲಿ ನಿಂದ ಅರದು ತಲೆಗೆ ಲೇಪಹಾಕಿದರೆ ರಕ್ತಪಿತ್ತಜನ್ಯವಾದ ಶಿರೋವೇದನೆಯು ಶಮನವಾಗುತ್ತದೆ. ನೆಲ್ಲಿಯಕಾಯಿ, ಕಸೇರು ಅಂದರೆ ಭದ್ರಮುಸ್ತೆ, ಲಾಮಂಚ ಕಮಲ, ಪದ್ಮಕಾಷ್ಠ, ರಕ್ತಚಂದನ, ಗರಿಕೆಯಹುಲ್ಲು, ಮುಡಿವಾಳ, ನಲ ಎಂಬ ಹುಲ್ಲಿನಬೇರು, ಇವುಗಳನ್ನು ಹಾಲಿನಿಂದಲಾಗಲಿ ನೀರಿನಿಂದಲಾಗಲೀ ಅರೆದು ತಲೆಗೆ ಲೇಪಹಾಕಿದಲ್ಲಿ ಪಿತ್ತದ ತಲೆನೋವು, ರಕ್ತಪಿತ್ತಪ್ರಕೋಪದಿಂದ ಹುಟ್ಟಿದ ತಲೆನೋವು ಇವುಗಳು ಗುಣವಾಗುತ್ತವೆ. ರೇಣುಕಬೀಜ, ಗ್ರಂಥಿತಗರ, ಕಲ್ಲು ಹುವ್ವು, ಭದ್ರಮುಸ್ತೆ, ಏಲಕ್ಕಿ, ಅಗಿಲು, ದೇವದಾರಿ, ಜಟಾಮಾಂಸಿ, ಸಣ್ಣ ರಾಸ್ನೆ, ಹರಳು ಬೇರು ಇವುಗಳನ್ನು ನೀರಿನಿಂದ ಚನ್ನಾಗಿ ಅರೆದು ಕುದಿಸಿ, ಬಿಸಿ ಯಾಗಿ ಲೇಪಿಸಿದರೆ ಕಫಪ್ರಕೋಪಜನ್ಯವಾದ ತಲೆನೋವು ಶಮನವಾಗುತ್ತದೆ. ಶುಂಠಿ, ಚಂಗಲಕೋಷ್ಟ, ಚಗಚೇಬೀಜ, ದೇವದಾರಿಚಕ್ಕೆ, ಸುವಾಸನೆಯ ಹುಲ್ಲು ಇವುಗಳನ್ನು ಗೋಮೂತ್ರದಲ್ಲಿ ಕುದಿಸಿ, ಸುಖೋಷ್ಣವಾಗಿ ಲೇಪಹಾಕಿ ಕೊಳ್ಳುವುದರಿಂದ ಶ್ಲೇಷ್ಮದ ತಲೆನೋವು ಶಾಂತವಾಗುತ್ತದೆ. ಸೊಗದೆಯ ಬೇರು ಚಂಗಲಕೋಷ್ಟ, ಜ್ಯೇಷ್ಟಮಧು, ಬಜೆ, ಕನ್ನೈದಿಲೆಹುವ್ವು, ಇವುಗಳನ್ನು ಅನ್ನದ

ಹುಳಿನೀರು, ಹರಳೆಣ್ಣೆ ಇವುಗಳಿಂದ ಅರದು ಹತ್ತಿಸಿದರೆ ಸೂರ್ಯಾವರ್ತ ಅರ್ಧಾವಬೇಧಗಳೆಂಬ ಅರೆತಲೆನೋವುಗಳು ಶಮನವಾಗುತ್ತವೆ. ಶತವಾರೀಬೇರು, ಕನ್ನೈದಿಲೆಹುವ್ವು, ಗರಿಕೇಹುಲ್ಲು, ಕಪ್ಪುಎಳ್ಳು, ಕೊಮ್ಮೆಯಬೇರು ಇವುಗಳನು ಅರದು ನೀರಿನಿಂದ ಲೇಪಿಸಿದಲ್ಲಿ ಶಂಖಕವೆಂಬ ವಾತವ್ಯಾಧಿ, ಅನಂತವಾತವೆಂಬ ವಾತವ್ಯಾಧಿ ಇವೇ ಮೊದಲಾಗಿ ನಾನಾವಿಧ ಕಾರಣಗಳಿಂದ ಉತ್ಪನ್ನಗಳಾದ ತಲೆನೋವುಗಳು ಶಮನವಾಗುತ್ತವೆ

ಅಥಲೇಪವಿಧಿಶ್ಚಾನ್ಯಃಪ್ರೋಚ್ಯತೇಸುಜ್ಞಸಂಮತಃ ॥
ದ್ವಾವತಸ್ಯಕಥಿತೌಭೇದೌಪ್ರಲೇಪಾಖ್ಯಪ್ರದೇಹಕೌ ॥ ೭೧ ॥
ಚರ್ಮಾರ್ದ್ರಂಮಾಹಿಷಂಯದ್ವತ್ಪ್ರೋನ್ನತಂಸಾಮಿತಿಸ್ತಯೋಃ॥
ಶೀತಸ್ತನುರ್ವಿಶೋಷೀಚಪ್ರಲೇಪಃಪರಿಕೀರ್ತಿತಃ ॥ ೭೨ ॥
ಆರ್ದ್ರೋಘನಸ್ತಥೋಷ್ಣಸ್ಸ್ಯಾತ್ಪ್ರದೇಹಶ್ಶ್ಲೇಷ್ಮವಾತಹಾ ॥
ರೋಮಾಭಿಮುಖಮಾದೇಯೌಪ್ರಲೇಪಾಖ್ಯಪ್ರದೇಹಕೌ ॥ ೭೩ ॥
ವೀರ್ಯಂಸಮ್ಯಗ್ವಿಶತ್ಯಾಶುರೋಮಕೂಪೈಶ್ಶಿರಾಮುಖೈಃ ॥
ನರಾತ್ರೌಲೇಪನಂಕುರ್ಯಾಚ್ಛುಷ್ಯಮಾಣಂನಧಾರಯೇತ್ ॥ ೭೪ ॥
ಶುಷ್ಯಮಾಣಮುಪೇಕ್ಷೇತಪ್ರದೇಹಾಂಪೀಡನಂಪ್ರತಿ ॥
ತಮಸಾಪಿಹಿತೋಹ್ಯೂಷ್ಮಾರೋಮಕೂಪಮುಖೇಸ್ಥಿತಃ ॥ ೭೫ ॥
ವಿನಾಲೇಪೇನನಿರ್ಯಾತಿರಾತ್ರೌನೋಲೇಪಯೇದತಃ ॥
ರಾತ್ರಾವಪಿಪ್ರಲೇಪಾದಿವಿಧಿಃಕಾರ್ಯೋವಿಚಕ್ಷಣೈಃ ॥ ೭೬ ॥
ಅಪಕ್ವಶೋಥೇಗಂಭೀರೇರಕ್ತಶ್ಲೇಷ್ಮಸಮುದ್ಭವೇ ॥

ಇನ್ನೊಂದು ವಿಧವಾದ ಲೇಪಹಾಕತಕ್ಕ ಕ್ರಮವನ್ನು ಹೇಳುತ್ತಾನೆ:— ಈ ಕ್ರಮವು ಮೊದಲು ಬಾತುಬಂದು ಕೀವಾಗಿ ಒಡೆದು ವ್ರಣವಾಗತಕ್ಕ ಸಂದರ್ಭದಲ್ಲಿ ಉಪಯೋಗಕ್ಕೆ ಬರುತ್ತದೆ. ಈ ಕ್ರಮವು ಎರಡು ವಿಧ ಪ್ರಲೇಪ-ಪ್ರದೇಹ ಎಂಬದಾಗಿ. ಈ ಲೇಪವನ್ನು ಚರ್ಮದ ಮೇಲುಭಾಗದಲ್ಲಿ ಮೆತ್ತಬೇಕಾದರೆ ನೀರಿನಲ್ಲಿ ನೆನೆದ ಎಮ್ಮೆಯ ಚರ್ಮದಷ್ಟು ದಪ್ಪವಾಗಿ ಮೆತ್ತಬೇಕು. ಮೇಲೆ ಹೇಳಿದ ಎರಡು ವಿಧವಾದ ಲೇಪಗಳಲ್ಲಿ ಮೊದಲನೆಯದಾದ ಪ್ರಲೇಪವೆನ್ನುವುದು ಯಾವಾಗ್ಯೂ ತಣ್ಣಗೆ ಇರತಕ್ಕದ್ದು ಅಂದರೆ ಲೇಪವನ್ನು ತಣ್ಣೀರಿನಲ್ಲಿ ತಯಾರಿಸಿ ತಣ್ಣಗಿರುವಂತೆಯೇ ವ್ರಣವಾಗಬಹುದಾದ ಶೋಥದ ಮೇಲೆ ಪ್ರದೇಹವೆಂಬ ಲೇಪಕ್ಕಿಂತಲೂ ತೆಳ್ಳಗೆ ಮೆತ್ತಬೇಕು. ಈ ರೀತಿಯಾದ ಲೇಪವು ವ್ರಣ ಶೋಥವನ್ನು ಕೀವಾಗದೆ ಶೋಷಿಸಿ ಹೋಗುವಂತೆ ಮಾಡುತ್ತದೆ. ಎರಡನೆಯದಾದ

ಪ್ರದೇಹವೆನ್ನುವ ಲೇಪವು ಬಿಸಿನೀರಿನಿಂದ ತಯಾರಿಸಿ ಕುದಿಸಿ ಹಾಕಲ್ಪಡತಕ್ಕದ್ದು. ಇದು ಮೊದಲನೆಯ ಲೇಪಕ್ಕಿಂತಲೂ ದಪ್ಪವಾಗಿರಬೇಕು. ಇದು ವ್ರಣಶೋಥವನ್ನು ಶೋಷಿಸುವುದಿಲ್ಲ. ಹಣ್ಣುಮಾಡಿ ಒಡೆಯುವ ಸ್ಥಿತಿಗೆ ತರುತ್ತದೆ. ವ್ರಣಶೋಥವು ಶ್ಲೇಷ್ಮ ಮತ್ತು ವಾತಗಳ ಪ್ರಕೋಪದಿಂದುಂಟಾಗಿದ್ದಲ್ಲಿ ಆ ದೋಷಗಳ ವೇಗವನ್ನು ಕಡಮೆಮಾಡುತ್ತದೆ. ಇಂತಹ ಲೇಪಗಳನ್ನು ಹಾಕಬೇಕಾದರೆ ಯಾವಾಗ್ಯೂ ಲೇಪಹಾಕತಕ್ಕ ಭಾಗದಲ್ಲಿರುವ ರೋಮಕೂಪಗಳಿಗೆ ಇದಿರುಮುಖವಾಗಿ ಹಾಕಬೇಕು. ಹೀಗೆ ಮಾಡೋಣದರಿಂದ ರೋಮಕೂಪಗಳ ಬುಡದಲ್ಲಿರುವ ನರಗಳ ರಂಧ್ರಮಾರ್ಗದಿಂದ ಲೇಪದಲ್ಲಿ ಸೇರಿಸತಕ್ಕ ಔಷಧಗಳ ಸತ್ವವು ದೇಹದ ಒಳಕ್ಕೆ ವ್ಯಾಪಿಸಲು ಅನುಕೂಲವಾಗುತ್ತದೆ ಲೇಪವನ್ನು ರಾತ್ರಿಹೊತ್ತು ಹಾಕಬಾರದು. ಒಣಗಿಹೋದ ಲೇಪವನ್ನು ಆ ಭಾಗದಲ್ಲಿ ಇರಿಸಬಾರದು. ಆದರೆ ವ್ರಣವನ್ನುಂಟುಮಾಡತಕ್ಕ ಶೋಥವು ಕೀವಾಗಿ ಒಡೆದುಹೋಗಬೇಕೆಂಬ ಉದ್ದೇಶ್ಯದಿಂದ ಹಾಕತಕ್ಕ ಪ್ರದೇಹವೆಂಬ ಲೇಪವನ್ನು ಒಣಗಿಹೋದಮೇಲೆಯೂ ಅಲ್ಲಿಯೇ ಬಿಟ್ಟರೂ ದೋಷವಿಲ್ಲ ಯಾಕೆಂದರೆ ಆ ಲೇಪವು ಒಣಗುತ್ತ ಬಂದಹಾಗೆಲ್ಲಾ ವ್ರಣಶೋಥವು ಬಿಗಿಯಾಗಿ ಒಡೆಯುವುದಕ್ಕೆ ಅನುಕೂಲವಾಗುತ್ತದೆ. ರಾತ್ರಿಹೊತ್ತಿನಲ್ಲಿ ಶೋಥಗತವಾದ ಉಷ್ಣಾಂಶವು ಲೇಪ ಹಾಕದಿದ್ದರೂ ರೋಮಕೂಪಗಳ ಮುಖದಲ್ಲಿದ್ದುಕೊಂಡು ರೋಮಕೂಪಗಳ ದ್ವಾರಾ ತನ್ನಂತೆಯೇ ಹೊರಬೀಳುವುದರಿಂದ ಲೇಪಹಾಕತಕ್ಕದ್ದು ಅವಶ್ಯಕವಿಲ್ಲ. ಆದರೆ ರಕ್ತ ಮತ್ತು ಶ್ಲೇಷ್ಮಗಳ ಪ್ರಕೋಪದಿಂದ ಉತ್ಪನ್ನವಾಗಿ ಗಂಭೀರವಾಗಿರುವ ಮತ್ತು ಅಪಕ್ವವಾದ ಶೋಥವು ಪಕ್ವಕ್ಕೆ ಬರುವುದಕ್ಕೆ ಬುದ್ಧಿವಂತಿಕೆಯಿಂದ ರಾತ್ರಿಹೊತ್ತಿನಲ್ಲಿಯೂ ಲೇಪವನ್ನು ಹಾಕಬಹುದು.

ಆದೌ ಶೋಥಹರೋಲೇಪೋದ್ವಿತೀಯೋ ರಕ್ತಮೋಚನಃ ॥ ೭೭ ॥
ತೃತೀಯಶ್ಶೋಷಣಾಹಸ್ಯಾಚ್ಚತುರ್ಥಃಪಾಟನಕ್ರಮಃ ॥
ಪಂಚಮಶ್ಶೋಧನೋಭೂಯಾತ್ ಷಷ್ಠೋರೋಪಣಇಷ್ಯತೇ ॥
ಸಪ್ತಮೋವರ್ಣಕರಣೋವ್ರಣಸ್ಯೈತೇಕ್ರಮಾಸ್ಮೃತಾಃ ॥ ೭೮ ॥

ವ್ರಣ ಚಿಕಿತ್ಸೆಯ ವಿಷಯದಲ್ಲಿ ವೈದ್ಯರು ಅನುಸರಿಸತಕ್ಕ ಕ್ರಮಗಳನ್ನು ಹೇಳುತ್ತಾನೆ:— ಪ್ರಾರಂಭದಲ್ಲಿ ವ್ರಣಶೋಥಗತವಾದ ಬಾಕು ಇಳಿದು ಹೋಗುವುದಕ್ಕಾಗಿ ಲೇಪಹಾಕತಕ್ಕದ್ದು. ಎರಡನೆಯ ಸಾರಿ ವ್ರಣಶೋಥಗತವಾದ ರಕ್ತವು ಅಲ್ಲಿಯೇ ನಿಂತು ಕೆಟ್ಟು ಕೀವಾಗದಂತೆ ಆ ಭಾಗದಲ್ಲಿರತಕ್ಕ ಕೆಟ್ಟ ರಕ್ತವನ್ನು ಹೊರಕ್ಕೆ ಹೊರಡಿಸುವುದು. ನಂತರ ವ್ರಣವು ಪಕ್ವವಾಗುವಹಾಗೆ

ಒತ್ತಡಗಳನ್ನು ಅಂದರೆ ಪೋಲ್ಟೀಸ್ ಮೊದಲಾದವುಗಳನ್ನು ಉಪಯೋಗಿಸುವುದು ನಾಲ್ಕನೆಯದು ಶಸ್ತ್ರ ಮೊದಲಾದ ಸಾಧನಗಳಿಂದ ಪಕ್ವವಾದ ವ್ರಣವನ್ನು ಒಡೆಯುವುದು. ಐದನೆಯದು ವ್ರಣವನ್ನು ಒಡೆದ ನಂತರ ಅದರಲ್ಲಿರುವ ಕಲ್ಮಲಗಳನ್ನೆಲ್ಲಾ ಹೊರಕ್ಕೆ ಹೊರಡಿಸಿ ಚೊಕ್ಕಟವಾಗಿ ತೊಳೆದು ಶುದ್ಧಿಪಡಿಸುವುದು. ಆರನೆಯದು ವ್ರಣವು ವಾಯುಪರ್ಂತ ಔಷಧಗಳನ್ನು ಹಾಕಿ ಇಲಾಜು ಮಾಡುವುದು. ಏಳನೆಯದು ವ್ರಣವು ಮಾದು ಹೋಗಿ ಆ ಭಾಗದಲ್ಲಿ ಕಲೆನಿಂತು ಅವಲಕ್ಷಣವಾಗಿ ಕಾಣುತ್ತ ಬಂದರೆ ಆ ಕಲೆಯೆಲ್ಲಾ ಹೋಗಿ ಆ ಭಾಗವು ಸಹ ದೇಹದ ಬಣ್ಣಕ್ಕೆ ಸರಿಯಾದ ವರ್ಣ ಬರುವಂತೆ ಲೇಪ ಮೊದಲಾದವುಗಳನ್ನು ಸರಿಪಡಿಸುವುದು. ಈ ರೀತಿಯಾದ ಕ್ರಮವನ್ನು ವ್ರಣಶೋಥಚಿಕಿತ್ಸೆಮಾಡ ವಾಗ್ಯೆ ವೈದ್ಯರು ಅನುಸರಿಸಬೇಕು.

ಬೀಜಪೂರಜಟಾಹಿಂಸ್ರಾದೇವದಾರುಮಹೌಷಧಂ ॥ ೭೯ ॥
ರಾಸ್ನಾಗ್ನಿಮಂಥೋಲೇಪೋಯಂವಾತಶೋಥವಿನಾಶನಃ ॥
ಮಧುಕಂಚಂದನಂಮೂರ್ವಾನಲಮೂಲಂಚಪದ್ಮಕಂ ॥ ೮೦ ॥
ಉಶೀರಂವಾಲಕಂಪದ್ಮಂಪಿತ್ತಶೋಥೇಪ್ರಲೇಪನಂ ॥
ಕೃಷ್ಣಾಪುರಾಣಪಿಣ್ಯಾಕಂಶಿಗ್ರುತ್ವಕ್ಸಿಕತಾಶಿವಾ ॥ ೮೧ ॥
ಮೂತ್ರಪಿಷ್ಟಸ್ಸುಖೋಷ್ಣೋಯಂಪ್ರದೇಹಃಶ್ಲೇಷ್ಮಶೋಥಹಾ ॥
ದ್ವೇನಿಶೇಚಂದನೇದ್ವೇಚಶಿವಾದೂರ್ವಾಪುನರ್ನವಾ ॥ ೮೨ ॥
ಉಶೀರಂಪದ್ಮಕಂಲೋಧ್ರಂಗೈರಿಕಂಚರಸಾಂಜನಂ ॥
ಆಗಂತುಜೇರಕ್ತಜೇಚಶೋಥೇಕುರ್ಯಾತ್ಪ್ರಲೇಪನಂ ॥ ೮೩ ॥
ಶಣಮೂಲಕಶಿಗ್ರೂಣಾಂಫಲಾನಿತಿಲಸರ್ಷಪಾಃ ॥
ಸವಚಃಕಿಣ್ವಮತಸೀಪ್ರದೇಹಃಪಾಚನಸ್ಮೃತಃ ॥ ೮೪ ॥
ದಂತೀಚಿತ್ರಕಮೂಲತ್ವಕ್ಸ್ನುಹ್ಯರ್ಕಪಯಸೀಗುಡಃ ॥
ಭಲ್ಲಾತಕಾಸ್ಥಿಕಾಸೀಸಂಸ್ಯೆಂಧವಂದಾರಣಸ್ಮೃತಃ ॥ ೮೫ ॥
ಚಿರಿಬಿಲ್ವೋಗ್ನಿಕೋದಂತೀಚಿತ್ರಕೋಹಯಮಾರಕಃ ॥
ಕಪೋತಕಂಕಗೃಧ್ರಾಣಾಂಮಲಂಲೇಪೇನದಾರಣಂ ॥ ೮೬ ॥
ಸ್ವರ್ಜಿಕಾಯಾವಶೂಕಾದ್ಯಾಃಕ್ಷಾರಾಲೇಪೇನದಾರಣಾಃ ॥
ಹೇಮಕ್ಷೀರ್ಯಸ್ತಥಾಲೇಪೋವ್ರಣೇಪರಮದಾರಣಃ ॥ ೮೭ ॥
ತಿಲಸ್ಯೆಂಧವಯಷ್ಟ್ಯಾಹ್ವನಿಂಬಪತ್ರನಿಶಾಯುಗ್ಮೈಃ ॥
ತ್ರಿವೃದ್ಘೃತಯುತೈಃಪಿಷ್ಟೈಃಪ್ರಲೇಪೋವ್ರಣಶೋಧನಃ ॥ ೮೮ ॥

ನಿಂಬಪತ್ರಘೃತಕ್ಷೌದ್ರದಾರ್ವೀಮಧುಕಸಂಯುತಃ ॥
ತಿಲೈಶ್ಚ ಸಹಸಂಯುಕ್ತೋ ಲೇಪಶ್ಶೋಧನರೋಪಣಃ ॥ ೮೯ ॥
ಕರಂಜಾರಿಷ್ಟನಿರ್ಗುಂಡೀಲೇಪೋಹನ್ಯಾದ್ವ್ರಣಕ್ರಿಮೀನ್ ॥
ಲಶುನಸ್ಯಾಥವಾಲೇಪೋಹಿಂಗುನಿಂಬಭವೋಥವಾ ॥ ೯೦ ॥
ನಿಂಬಪತ್ರಂತಿಲಾದಂತೀತ್ರಿವೃತ್ ಸೈಂಧವಮಾಕ್ಷಿಕಂ ॥
ದುಷ್ಟವ್ರಣಪ್ರಶಮನೋಲೇಪಶ್ಶೋಧನರೋಪಣಃ ॥ ೯೧ ॥

ವ್ರಣಶೋಥ ವಿಷಯದಲ್ಲಿ ವೈದ್ಯರು ಅನುಸರಿಸಬೇಕಾದ ಕ್ರಮವನ್ನು ಹೇಳಿ ಅದಕ್ಕೆ ಉಪಯುಕ್ತಗಳಾದ ಕೆಲವು ಯೋಗಗಳನ್ನು ಹೇಳುತ್ತಾನೆ:— ಮಾದಳದ ಬೇರು, ಜಟಾಮಾಂಸಿ, ದೇವದಾರಿಚಕ್ಕೆ, ಶುಂಠಿ, ಸಣ್ಣ ರಾಸ್ನೆ ನರುವಲಚಕೆ ಇವುಗಳನ್ನು ನೀರಿನಿಂದ ಅರದು ಲೇಪಹಾಕಿದಲ್ಲಿ ವಾಯುಪ್ರಕೋಪದಿಂದ ಉತ್ಪನ್ನವಾದ ಶೋಥವು ತಗ್ಗುತ್ತದೆ. ಜ್ಯೇಷ್ಠಮಧು, ಚಂದನ, ಕುರಟಿಗನ ಬೇರು, ನಲವೆಂಬ ಹುಲ್ಲಿನ ಬೇರು, ಪದ್ಮಕಾಷ್ಟ, ಲಾಮಂಚದಬೇರು, ಮುಡಿ ವಾಳದ ಬೇರು, ತಾವರೆಯ ಹುವ್ವು ಇವುಗಳನ್ನು ನೀರಿನಿಂದ ಅರೆದು ಲೇಪ ಹಾಕಿದರೆ ಪಿತ್ತಪ್ರಕೋಪದಿಂದ ಹುಟ್ಟಿದ ಶೋಥವು ತಗ್ಗುತ್ತದೆ. ಹಿಪ್ಪಲಿ, ಹಳೇ ಹಿಂಡಿ, ನುಗ್ಗೆಯಚಕ್ಕೆ, ಮರಳು, ಅಳಲೇಕಾಯಿ ಇವುಗಳನ್ನು ಗೋಮೂತ್ರದಿಂದ ಅರೆದು ಕುದಿಸಿ ಸುಖೋಷ್ಣವಾಗಿ ಲೇಪವನ್ನು ಹಾಕಿದಲ್ಲಿ ಶ್ಲೇಷ್ಮಪ್ರಕೋಪದಿಂದ ಹುಟ್ಟಿದ ಶೋಥವು ಗುಣವಾಗುತ್ತದೆ. ಅರಸಿನ, ಮರದರಸಿನ, ಶ್ರೀಗಂಧ, ರಕ್ತ ಚಂದನ, ಅಳಲೇಕಾಯಿ, ಗರಿಕೆಯಬೇರು, ಕೊಮ್ಮೆಯಬೇರು, ಲಾಮಂಚ, ಪದ್ಮಕಾಷ್ಟ, ಲೋಧ್ರದಚಕ್ಕೆ, ಕಾವಿಯಮಣ್ಣು ರಸಾಂಜನ ಇವುಗಳನ್ನು ಅರೆದು ಲೇಪಹಾಕುವುದರಿಂದ ಆಗಂತುಕ ಕಾರಣಗಳಿಂದಲೂ ಮತ್ತು ರಕ್ತಪ್ರಕೋಪ ದಿಂದಲೂ ಉತ್ಪನ್ನವಾದ ಶೋಥವು ತಗ್ಗುತ್ತದೆ. ಶಣಬಿನಕಾಯಿ, ಮೂಲಂಗಿ ಯಕಾಯಿ, ನುಗ್ಗೆಯಕಾಯಿ, ಎಳ್ಳು, ಸಾಸುವೆಯಕಾಳು, ಓಜೆ, ಅಗಸೆಯಬೀಜ ಇವುಗಳನ್ನು ಮದ್ಯದಿಂದ ಅರದು ಲೇಪಹಾಕಿದರೆ ಅಪಕ್ವವಾದ ಶೋಥವು ಪಕ್ವ ಸ್ಥಿತಿಗೆ ಬರುತ್ತದೆ ಜಾಪಾಳದ ಬೀಜ, ಚಿತ್ರಮೂಲದತೊಪ್ಪೆ, ಕಳ್ಳಿಯಹಾಲು ಯಕ್ಕದಹಾಲು, ಬೆಲ್ಲ, ಗೇರುಪಪ್ಪು, ಅನ್ನಭೇದಿ ಇವುಗಳನ್ನು ಅರದು ಲೇಪನ ಹಾಕಿದರೆ ಎಂತಹ ವ್ರಣವನ್ನಾದರೂ ಒಡೆಯುವಂತೆ ಮಾಡುತ್ತದೆ. ಹೊಂಗೆಯ ಯ ಬೀಜ, ಗೇರುಬೀಜ, ಜಾಪಾಳದ ಬೀಜ, ಚಿತ್ರಮೂಲ, ಕಣಿಗಲೆಯಬೇರು, ಇವುಗಳು ಪಾರಿವಾಳ ಹದ್ದು ಇವುಗಳ ಮಲ ಇವುಗಳನ್ನು ಅರದು ಶೋಥಕ್ಕೆ ಲೇಪಹಾಕಿದರೆ ಒಡೆಯುವಂತೆ ಮಾಡುತ್ತದೆ ಸರ್ಜಕ್ಷಾರ, ಯವಕ್ಷಾರ ಮೊದ ಲಾದ ಕ್ಷಾರಗಳನ್ನು ಲೇಪಹಾಕಿದರೂ ಪಕ್ವಗಳಾದ ಶೋಥಗಳು ಒಡೆಯುತ್ತವೆ

ಸ್ವರ್ಣಕ್ಷೀರಿ ಎಂಬ ಮೂಲಿಕೆಯನ್ನು ಅರೆದು ಪಕ್ವವಾದ ಶೋಥಕ್ಕೆ ಮೆತ್ತಿದರೂ ಒಡೆದುಹೋಗುತ್ತದೆ ಎಳ್ಳು, ಸೈಂಧವಲವಣ, ಜ್ಯೇಷ್ಠಮಧು, ಬೇವಿನಎಲೆ ಅರಿಸಿನ, ಮರಅರಿಸಿನ, ತಿಗಡೆ ಇವುಗಳೆಲ್ಲವನ್ನೂ ಚೂರ್ಣಮಾಡಿ ತುಪ್ಪದಲ್ಲಿ ಕಲೆಸಿ ಒಡೆದುಹೋದ ವ್ರಣಕ್ಕೆ ಹತ್ತಿಸಿದಲ್ಲಿ ವ್ರಣದೊಳಗಿರತಕ್ಕ ಕೆಟ್ಟಕೀವು, ಮೊದಲಾದ್ದೆಲ್ಲಾ ಹೋಗಿ ವ್ರಣವು ಶುದ್ಧವಾಗುತ್ತದೆ. ಬೇವಿನೆಲೆ, ತುಪ್ಪ, ಜೇನುತುಪ್ಪ, ಮರ ಅರಸಿನ, ಜ್ಯೇಷ್ಠಮಧು, ಎಳ್ಳುಕಾಳು ಇವುಗಳೆಲ್ಲವನ್ನೂ ಅರೆದು ವ್ರಣಕ್ಕೆ ಹಚ್ಚುತ್ತ ಬಂದರೆ ವ್ರಣವು ಶುದ್ಧವಾಗುವುದಲ್ಲದೆ ಮಾಯುತ್ತ ಲೂ ಬರುತ್ತದೆ. ಹೊಂಗೆಯ ಎಣ್ಣೆ, ಬೇವಿನೆಣ್ಣೆ, ಲಕ್ಕಿಯಸೊಪ್ಪು ಇವುಗಳನ್ನು ವ್ರಣಗಳಿಗೆ ಹುಳ ಬಿದ್ದಾಗ್ಯೆ ಹಚ್ಚುತ್ತ ಬಂದರೆ ಹುಳಗಳು ನಾಶವಾಗಿ ಹೋಗುತ್ತವೆ. ಬೆಳ್ಳುಳ್ಳಿಯನ್ನು ಅರೆದು ವ್ರಣಕ್ಕೆ ಹತ್ತಿಸುವುದು, ಬೇವಿನಸೊಪ್ಪು, ಹಿಂಗು ಇವುಗಳನ್ನು ಅರೆದು ವ್ರಣಕ್ಕೆ ಹತ್ತಿಸುವುದು. ಬೇವಿನೆಲೆ, ಎಳ್ಳುಕಾಳು, ಜಾಪಾಳದ ಬೀಜ, ತಿಗಡೆ, ಸೈಂಧವ ಲವಣ, ಜೇನುತುಪ್ಪ ಇವೆಲ್ಲವನ್ನೂ ಸೇರಿಸಿ ಚನ್ನಾಗಿ ಅರೆದು ಕೆಟ್ಟ ವ್ರಣಗಳಿಗೆ ಹಚ್ಚುತ್ತ ಬಂದಲ್ಲಿ ವ್ರಣಗಳು ಚನ್ನಾಗಿ ಆರಿ ಮಾಯುವ ಸ್ಥಿತಿಗೆ ಬರುತ್ತವೆ.

ಮದನಸ್ಯ ಫಲಂ ತಿಕ್ತಾಂ ಪಿಷ್ಟ್ವಾ ಕಾಂಜಿಕವಾರಿಣಾ ॥
ಕೋಷ್ಣಂ ಕುರ್ಯಾನ್ನಾಭಿಲೇಪಂ ಶೂಲಶಾಂತಿರ್ಭವೇತ್ತತಃ ॥೯೨॥

ಗಂಟುಗಾರೇಕಾಯಿ, ಕಟುಕರೋಹಿಣಿ ಇವೆರಡನ್ನೂ ಕಾಂಜಿಕವೆಂದರೆ ಅನ್ನದ ಹುಳಿನೀರಿನಿಂದ ಅರೆದು ಬಿಸಿಬಿಸಿಯಾಗಿ ಹೊಕ್ಕುಳಿಗೆ ಲೇಪಹಾಕಿದಲ್ಲಿ ಹೊಟ್ಟೆಶೂಲೆ ಶಾಂತವಾಗುತ್ತದೆ.

ಪಿಗ್ರುಶೇಫಾಲಿಕೈರಂಡಯವಗೋಧೂಮಮುದ್ಗಕೈಃ ॥
ಸುಖೋಷ್ಣೋ ಬಹಲೋ ಲೇಪಃ ಪ್ರಯೋಜ್ಯೋ ವಾತವಿದ್ರಧೌ ॥೯೩॥
ಪೈತ್ತಿಕೇ ಸರ್ಪಿಷಾ ಲಾಜಾಮಧುಕೈಶ್ಶರ್ಕರಾನ್ವಿತೈಃ ॥
ಪ್ರಲಿಂಪೇತ್ ಕ್ಷೀರಪಿಷ್ಟೈರ್ವಾ ಪಯಸ್ಯೋಶೀರಚಂದನೈಃ ॥ ೯೪ ॥
ಇಷ್ಟಿಕಾಸಿಕತಾಲೋಹಕಿಟ್ಟಂ ಗೋಶಕೃತಾ ಸಹ ॥
ಸುಖೋಷ್ಣಸ್ಯಾತ್ಪ್ರದೇಹೋಯಂ ಮೂತ್ರೈಃ ಸ್ಯಾತ್ ಶ್ಲೇಷ್ಮವಿದ್ರಧೌ ॥ ೯೫ ॥
ರಕ್ತಚಂದನಮಂಜಿಷ್ಠಾನಿಶಾಮಧುಕಗೈರಿಕೈಃ ॥
ಕ್ಷೀರೇಣಾವಿದ್ರಧೌ ಲೇಪೋ ರಕ್ತಾಗಂತುನಿಮಿತ್ತಜೇ ॥ ೯೬ ॥

ವಿದ್ರಧಿಗಳೆಂದರೆ ಬಾವುಗಳು ಇವುಗಳಿಗೆ ಉಪಯುಕ್ತಗಳಾದ ಲೇಪಗಳನ್ನು ಹೇಳುತ್ತಾನೆ—ನುಗ್ಗೆಯಚಕ್ಕೆ ಲಕ್ಕಿಯಸೊಪ್ಪು, ಹರಳುಬೇರು, ಯವೆ, ಗೋದುವೆ, ಉದ್ದು ಇವುಗಳನ್ನು ಚನ್ನಾಗಿ ಅರದು ಲೇಪಹಾಕಿದರೆ ವಾತಪ್ರಕೋಪದಿಂದ ಉತ್ಪನ್ನವಾದ ವಿದ್ರಧಿಯು ಶಮನವಾಗುತ್ತದೆ. ಭತ್ತದ ಅರಳು, ಜ್ಯೇಷ್ಠಮಧು, ಸಕ್ಕರೆ, ತುಪ್ಪ ಇವುಗಳನ್ನು ಚನ್ನಾಗಿ ಅರೆದು ಹಚ್ಚಿದರೂ ಪಯಸ್ಯಾ ಎಂದರೆ ಕ್ಷೀರವಿದಾರಿ ಎಂಬ ಒಂದು ಬಗೆಯ ಕಂದಿಯಗೆಡ್ಡೆ, ಮುತಿವಾಳ, ರಕ್ತಚಂದನ, ಇವುಗಳನ್ನು ಹಾಲಿನಲ್ಲಿ ಅರೆದು ಹತ್ತಿಸಿದರೂ ಪಿತ್ತಪ್ರಕೋಪದಿಂದ ಉತ್ಪನ್ನವಾದ ವಿದ್ರಧಿಯು ಶಮನವಾಗುತ್ತದೆ. ಇಟ್ಟಿಗೆ, ಮರಳು, ಕಬ್ಬಿಣದ ಕಿಟ್ಟ ಸಗಣಿ ಇವುಗಳನ್ನು ಸುಟ್ಟು ಮೂತ್ರ ಅಂದರೆ ಗೋಮೂತ್ರದೊಡನೆ ಕಾವು ಕೊಡುವುದು. ಲೇಪಹಾಕುವುದು ಇಂತಹ ಚಿಕಿತ್ಸೆಗಳನ್ನು ಮಾಡುವುದರಿಂದ ಶ್ಲೇಷ್ಮಪ್ರಕೋಪಜನ್ಯವಾದವಿದ್ರಧಿಯು ಶಮನವಾಗುತ್ತದೆ. ಚಂದನ, ಮಂಜಿಷ್ಠೆ ಅರಿಸಿನ, ಜ್ಯೇಷ್ಠಮಧು, ಕಾವಿಯ ಕಲ್ಲು ಇವುಗಳನ್ನು ಹಾಲಿನಿಂದ ಅರೆದು ಲೇಪಹಾಕಿದಲ್ಲಿ ರಕ್ತ ವಿದ್ರಧಿ ಮತ್ತು ಆಗಂತುಕ ಕಾರಣಗಳಿಂದ ಉತ್ಪನ್ನವಾದ ವಿದ್ರಧಿ ಸಹ ಶಮನವಾಗುತ್ತದೆ.

ನಿಚುಲಃಶಿಗ್ರುಬೀಜಾನಿದಶಮೂಲಮಥಾಪಿವಾ ॥
ಪ್ರದೇಹೋವಾತಗಂಡೇಷುಸುಖೋಷ್ಣಸ್ಸಂಪ್ರದೀಯತೇ ॥ ೯೭ ॥
ದೇವದಾರುವಿಶಾಲಾಚಕಫಗಂಡೇಪ್ರದೇಹಕಃ ॥
ಸರ್ಷಪಾರಿಷ್ಟಪತ್ರಾಣಿದಗ್ಧ್ವಾಭಲ್ಲಾತಕೈಸ್ಸಹ ॥೯೮ ॥
ಛಾಗಮೂತ್ರೇಣಸಂಪಿಷ್ಯಮಪಚೀಘ್ನಂಪ್ರಲೇಪನಂ ॥
ಸರ್ಷಪಾಃಶಿಗ್ರುಬೀಜಾನಿಶಣಬೀಜಾತಸೀಯವಾಃ ॥ ೯೯ ॥
ಮೂಲಕಸ್ಯಚಬೀಜಾನಿತಕ್ರೇಣಾಮ್ಲೇನಪೇಷಯೇತ್ ॥
ಗಂಡಮಾಲಾರ್ಬುದಂಗಂಡಂಲೇಪೇನಾನೇನಶಾಮ್ಯತಿ ॥ ೧೦೦ ॥

ಗಂಟಲಿನಲ್ಲಿ ಬರತಕ್ಕ ಗಂಟುಗಳಿಗೆ ಗಲಗಂಡಗಳೆಂದು ಹೆಸರು. ಇವುಗಳಿಗೆ ಉಪಯೋಗವಾಗತಕ್ಕ ಕೆಲವು ಲೇಪಗಳನ್ನು ಹೇಳುತ್ತಾನೆ— ನಿಚುಲವೆಂದರೆ ಒಂದು ಬಗೆಯ ಕಗ್ಗಲೀಗಿಡ, ಯಾವಾಗ್ಯೂ ಈ ಗಿಡವು ನೀರು ಹೆಚ್ಚಾಗಿ ಓಡಾಡುವ ಪ್ರದೇಶಗಳಲ್ಲಿಯೇ ಹುಟ್ಟುತ್ತದೆ. ಇದರ ಚಕ್ಕೆ, ನುಗ್ಗೆಯ ಬೀಜ, ಇವುಗಳನ್ನು ನೀರಿನಲ್ಲಿ ಅರೆದು ಕುದಿಸಿ ಸುಖೋಷ್ಣವಾಗಿ ಪಟ್ಟುಹಾಕೋಣರಿಂದಾಗಲಿ ಅಥವಾ ದಶಮೂಲವೆಂದು ವ್ಯವಹರಿಸುವ ಹತ್ತು ಮೂಲಿಕೆಗಳನ್ನು ಅರೆದು ಕುದಿಸಿ ಪಟ್ಟುಹಾಕೋಣದರಿಂದಲಾಗಲೀ ವಾತಪ್ರಕೋಪಜನ್ಯವಾದ ಗಲಗಂಡವು

ತಗ್ಗುತ್ತದೆ ದೇವದಾರಿಯುಚಕ್ಕೆ, ದ್ರಾಸಮಿಕ್ಕೆಗಿಡದ ಬೇರು ಇವುಗಳನ್ನು ಅರೆದು ಲೇಪಹಾಕುವುದರಿಂದ ಕಫಜನ್ಯವಾದ ಗಲಗಂಡವು ತಗ್ಗುತ್ತದೆ. ಸಾಸುವೆಯ ಕಾಳು, ಬೇವಿನಎಲೆ, ಗೇರುಬೀಜ ಇವುಗಳನ್ನು ಸುಟ್ಟು ಮಶಿಯಾಗಿಮಾಡಿ ಆಡಿನ ಮೂತ್ರದಲ್ಲಿ ಚನ್ನಾಗಿ ಅರೆದು ಲೇಪಹಾಕಿದಲ್ಲಿ ಅಪಚಿ ಎಂಬ ಒಂದು ಬಗೆಯ ಗಂಡಮಾಲೆಯ ಗಂಟು ಶಮನವಾಗುತ್ತದೆ. ಸಾಸುವೆಯಕಾಳು, ನುಗ್ಗೆಯಬೀಜ ಶಣಬಿನ ಬೀಜ ಅಗಸೆಯಬೀಜ ಯವೆಯಕಾಳುಗಳು ಮೂಲಂಗಿಯ ಬೀಜ ಇವುಗಳನ್ನು ಮಜ್ಜಿಗೆಯಿಂದಲಾಗಲೀ ಯಾವುದಾದರೂ ಹುಳಿಯಿಂದಲಾಗಲಿ ಚನ್ನಾಗಿ ಅರೆದು ಲೇಪಹಾಕುವುದರಿಂದ ಗಂಡಮಾಲೆ, ಅರ್ಬುದ, ಗಲಗಂಡ ಇವುಗಳೆಲ್ಲವೂ ಶಮನವಾಗುತ್ತವೆ.

ತಕ್ಷಯಿತ್ವಾಕ್ಷುರೇಣಾಂಗಂಕೇವಲಾನಿಲಪೀಡಿತಂ ॥
ತತ್ರಪ್ರದೇಹಂದದ್ಯಾಚ್ಚ ಪಿಷ್ಟಂಗುಂಜಾಫಲೈಃಕೃತಂ ॥ ೧೦೧ ॥
ಕೇನಾಪಬಾಹುಜಾಪೀಡಾವಿಶ್ವಾಚೀಗೃಧ್ರಸೀತಥಾ ॥
ಅನ್ಯಾಪಿವಾತಜಾಪೀಡಾಪ್ರಶಮಂಯಾತಿವೇಗತಃ ॥ ೧೦೨ ॥

ವಾತಪ್ರಕೋಪದಿಂದ ಅವಯವದ ಯಾವುದಾದರೂ ಭಾಗದಲ್ಲಿ ವೇದನೆ ಶಳತ ಮೊದಲಾದವು ಕಂಡಲ್ಲಿ ಆ ಭಾಗವನ್ನು ಕತ್ತಿಯಿಂದ ಗಾಯಮಾಡಿ ಗುಲಗುಂಜಿಯ ಬೀಜಗಳನ್ನು ಅರದು ಅಲ್ಲಿಗೆ ಪಟ್ಟನ್ನು ಹಾಕಬೇಕು ಹೀಗೆ ಮಾಡೋಣದರಿಂದ ಅಪಬಾಹುಕ, ವಿಶ್ವಾಚಿ, ಗೃಧ್ರಸಿ ಎಂಬನಾನಾ ವಿಧಗಳಾದ ವಾತಪ್ರಕೋಪಜನ್ಯಪೀಡೆಗಳು ಜಾಗ್ರತೆಯಾಗಿ ಗುಣವಾಗುತ್ತವೆ.

ಧತ್ತೂರೈರಂಡನಿರ್ಗುಂಡೀವರ್ಷಾಭೂಶಿಗ್ರುಸರ್ಷಪೈಃ ॥
ಪ್ರಲೇಪಃಶ್ಲೀಪದಂಹಂತಿಚಿರೋತ್ಥಮಪಿದಾರುಣಂ ॥ ೧೦೩ ॥

ಶ್ಲೀಪದವೆಂದರೆ ಕಾಲುಬಾತು ಹೋಗುವ ಒಂದು ಬಗೆಯ ರೋಗ ಆನೆಕಾಲು ಎಂಬದಾಗಿ ಕರೆಯುತ್ತಾರೆ. ಇದಕ್ಕೆ ದತ್ತೂರಿಸೊಪ್ಪು, ಹರಳು ಬೇರು ಲಕ್ಕಿ ಸೊಪ್ಪು, ಕೊಮ್ಮೆಯಬೇರು, ನುಗ್ಗೆಯತೊಪ್ಪೆ, ಸಾಸುವೆಯ ಕಾಳು ಇವುಗಳನ್ನು ಅರದು ಲೇಪಹಾಕಿದರೆ ಬಹಳ ದಿವಸದ್ದಾದರೂ ಭಯಂಕರವಾಗಿದ್ದರೂ ಗುಣವಾಗುತ್ತದೆ.

ಅಜಾಜೀಹಪುಷಾಕುಷ್ಠಮೇರಂಡಬದರಾನ್ವಿತಂ ॥
ಕಾಂಜಿಕೇನತುಸಂಪಿಷ್ಟಂಕುರಂಟಸ್ಯಾಂಪ್ರಲೇಪನಂ ॥ ೧೦೪ ॥

ಕುರಂಟವೆಂದರೆ ಅಂಡವೃದ್ಧಿ ತರಡು ಊದುವ ರೋಗ. ಈ ರೋಗಕ್ಕೆ ಉಪಯುಕ್ತವಾದ ಲೇಪವನ್ನು ಹೇಳುತ್ತಾನೆ. ಕಪ್ಪು ಜೀರಿಗೆ, ಹಬ್ಬಿಯಗಿಡ, ಚಂಗಲಕೋಷ್ಟ, ಹರಳುಬೇರು, ಬೋರೆಯ ಬೀಜ ಇವುಗಳನ್ನು ಅನ್ನದ ಹುಳಿ ನೀರಿನಲ್ಲಿ ಅರೆದು ಬಾತಿರುವ ತರಡಿಗೆ ಬಳಿದರೆ ಇಳಿದುಹೋಗುತ್ತದೆ

ಕರವೀರಸ್ಯಮೂಲೇನಪರಿಪಿಷ್ಟೇನವಾರಿಣಾ ॥
ಅಸಾಧ್ಯಾಪಿವ್ರಜತ್ಯಸ್ತಂಲಿಂಗೋತ್ಥಾರುಕ್ಪ್ರಲೇಪನಾತ್ ॥ ೧೦೫ ॥
ದಹೇತ್ಕಟಾಹೇತ್ರಿಫಲಾಂಸಾಮುಷೀಮಧುಸಂಯುತಾ ॥
ಉಪದಂಶೇಪ್ರಲೇಪೋಯಂಸದ್ಯೋರೋಪಯತಿವ್ರಣಾನ್॥೧೦೬॥
ರಸಾಂಜನಂಶಿರೀಷೇಣಪಥ್ಯಯಾಚಸಮನ್ವಿತಂ ॥
ಸಕ್ಷೌದ್ರಂಲೇಪನಂಯೋಜ್ಯಂಉಪದಂಶಗದಾಪಹಂ ॥ ೧೦೭ ॥

ಉಪದಂಶ ವ್ರಣಹರಗಳಾದ ಲೇಪಗಳನ್ನು ಹೇಳುತ್ತಾನೆ. ಕಣಿಗಲ ಬೇರನ್ನು ನೀರಿನಿಂದ ಅರದು ಲೇಪಹಾಕಿದರೆ ಅಸಾಧ್ಯವಾದ ಲಿಂಗರೋಗವೆಂದರೆ ಉಪದಂಶರೋಗವು ಕಡಮೆಯಾಗುತ್ತದೆ. ಒಂದು ಮಡಕೆಯಲ್ಲಿ ತ್ರಿಫಲವನ್ನು ಹಾಕಿ ಮಶಿಯಾಗುವಂತೆ ಸುಟ್ಟು ಬಿಡುವುದು. ಆ ಮಶಿಯನ್ನು ಜೇನುತುಪ್ಪದಲ್ಲಿ ಕಲಸಿ ಹಚ್ಚಿದಲ್ಲಿ ಉಪದಂಶ ವ್ರಣವು ಆರುತ್ತದೆ. ಮರ ಅರಸಿನವನ್ನು ರಸಕ್ರಿಯೆಯ ರೂಪದಲ್ಲಿ ತಯಾರಿಸಿ ಅದರೊಟ್ಟಿಗೆ ಬಾಗೇಚಕ್ಕೆ, ಅಳಲೇಕಾಯಿ ಇವುಗಳನ್ನು ಅರೆದು ಜೇನುತುಪ್ಪದಲ್ಲಿ ಕಲೆಸಿ ಉಪದಂಶ ವ್ರಣಕ್ಕೆ ಲೇಪ ಮಾಡಿದಲ್ಲಿ ವ್ರಣ ಮಾಯುತ್ತದೆ.

ಅಗ್ನಿದಗ್ಧೇತುಗಾಕ್ಷೀರೀಪ್ಲಕ್ಷಚಂದನಗೈರಿಕೈಃ ॥
ಸಾಮೃತೈಸ್ಸರ್ಪಿಷಾಸ್ನಿಗ್ಧೈರಾಲೇಪಂಕಾರಯೇದ್ಭಿಷಕ್ ॥ ೧೦೮ ॥
ತಿಂದುಕೀತ್ವಕ್ಕಷಾಯೈರ್ವಾಘೃತಮಿಶ್ರೈಃಪ್ರಲೇಪಯೇತ್ ॥
ಯವಾನ್ಧಗ್ಧ್ವಾಮಷೀಕಾರ್ಯಾತೈಲೇನಯುತಯಾತಯಾ೦೯
ದದ್ಯಾತ್ಸರ್ವಾಗ್ನಿದಗ್ಧೇಷುಪ್ರಲೇಪೋವ್ರಣರೋಪಣಃ ॥

ಬೆಂಕಿಯಿಂದ ಸುಟ್ಟಗಾಯಕ್ಕೆ ಲೇಪನವನ್ನು ಹೇಳುತ್ತಾನೆ. ಬಿದಿರುಪ್ಪು ಘಣಿಯಾಲದಚಕ್ಕೆ, ರಕ್ತಚಂದನ, ಕಾವಿ, ಅಮೃತಬಳ್ಳಿ ಇವುಗಳನ್ನು ಚನ್ನಾಗಿ ಅರೆದು ತುಪ್ಪದಲ್ಲಿ ಕಲೆಸಿ ಲೇಪಹಾಕಬೇಕು. ತಿಂದುಕವೃಕ್ಷದ ಚಕ್ಕೆಯ ಕಷಾಯಕ್ಕೆ ತುಪ್ಪವನ್ನು ಕೂಡಿಸಿ ಲೇಪಹಾಕಬೇಕು. ಯವೆಯ ಕಾಳುಗಳನ್ನು ಸುಟ್ಟು ಮಶಿಯನ್ನು ಮಾಡಿ ಎಣ್ಣೆಯಲ್ಲಿ ಕಲೆಸಿ ಲೇಪಹಾಕಬೇಕು. ಇವುಗಳಿಂದ ಸುಟ್ಟ ಗಾಯಗಳು ಮಾಯುತ್ತವೆ.

ಪಲಾಶೋದುಂಬರಫಲೈಸ್ತಿಲತೈಲಸಮನ್ವಿತೈಃ ॥ ೧೧೦ ॥
ಮಧುನಾಯೋನಿಮಾಲಿಂಪೇದ್ಗಾಢೀಕರಣಮುತ್ತಮಂ ॥
ಮಾಕಂದಫಲಸಂಯುಕ್ತಮಧುಕರ್ಪೂರಲೇಪನಾತ್ ॥ ೧೧೧ ॥
ಗತೇಪಿಯವ್ವನೇಸ್ತ್ರೀಣಾಂಯೋನಿರ್ಗಾಢಾತಿಜಾಯತೇ ॥

ಯೊನೀದೃಢೀಕರಣ ಲಿಂಗವೃದ್ಧಿಕರಣಗಳೆಂಬ ಪ್ರಕ್ರಿಯೆಗಳು ಕಾಮುಕರಿಗೆ ಉಪಯುಕ್ತಗಳಾಗಿ ಕಾಮಶಾಸ್ತ್ರದಲ್ಲಿ ಪ್ರಸಿದ್ಧಗಳಾಗಿವೆ ಆದಕ್ಕೆ ಉಪಯುಕ್ತಗಳಾದ ಕೆಲವು ಔಷಧಗಳನ್ನು ಔಷಧ ಪ್ರಕರಣವೆಂಬ ಮರ್ಯಾದೆಯಿಂದ ಸೂಚಿಸುತ್ತಾನೆ. ಮುತ್ತುಗದಕಾಯಿ, ಅತ್ತಿಯಕಾಯಿ ಇವುಗಳಿಗೆ ಎಳ್ಳಿನ ಎಣ್ಣೆಯನ್ನು ಸೇರಿಸಿ ಚನ್ನಾಗಿ ಅರೆದು ಯೋನಿಯ ಬಹಿರ್ಭಾಗಕ್ಕೆ ಲೇಪನಮಾಡೋಣದರಿಂದ ಯೋನಿಯು ದೃಢಪಡುತ್ತದೆ ಮಾವಿನಹಣ್ಣು, ಜೇನುತುಪ್ಪ, ಪಚ್ಚಕರ್ಪೂರ ಇವುಗಳನ್ನು. ಚನ್ನಾಗಿ ಮರ್ದಿಸಿ ಯೋನಿಗೆ ಲೇಪಹಾಕಿದಲ್ಲಿ ವಯಸ್ಸು ಹೋಗಿದ್ದರೂ ಕೂಡಾ ಯೋನಿಯು ಯುವತಿಯರ ಹಾಗೆದೃಢಪಡುತ್ತದೆ

ಮರಿಚಂಸೈಂಧವಂಕೃಷ್ಣಾತಗರಂಬೃಹತೀಫಲಂ ॥೧೧೨॥
ಅಪಾಮಾರ್ಗಸ್ತಿಲಾಃಕುಷ್ಠಂಯವಾಮಾಷಾಶ್ಚಸರ್ಷಪಾಃ ॥
ಅಶ್ವಗಂಧಾಚತಚ್ಚೂರ್ಣಂಮಧುನಾಸಹಯೋಜಯೇತ್ ॥೧೧೩॥
ಅಸ್ಯಸಂತತಲೇಪೇನಮರ್ದನಾಚ್ಚಪ್ರಜಾಯತೇ ॥
ಲಿಂಗವೃದ್ಧಿಸ್ತನೋತ್ಸೇಧಃಸಂಹತಿರ್ಭುಜಕರ್ಣಯೋಃ ॥ ೧೧೪ ॥
ಸಿತಾಶ್ವಗಂಧಾಸಿಂಧೂತ್ಥಭಾಗಕ್ಷೀರೈರ್ಘೃತಂಪಚೇತ್ ॥
ತಲ್ಲೇಪಾನ್ಮರ್ದನಾಲ್ಲಿಂಗವೃದ್ಧಿಸ್ಸಂಜಾಯತೇಪರಾ ॥ ೧೧೫ ॥
ಇಂದ್ರವಾರುಣಿಕಾಪತ್ರರಸೈಸ್ಸೂತಂವಿಮರ್ದಯೇತ್ ॥
ರಕ್ತಸ್ಯಕರವೀರಸ್ಯಕಾಷ್ಠೇನಚಮುಹುರ್ಮುಹುಃ ॥ ॥ ೧೧೬ ॥
ತಲ್ಲಿಪ್ತಲಿಂಗಸಂಯೋಗಾದ್ಯೋನಿದ್ರಾವೋಭಿಜಾಯತೇ ॥
ತಾಂಬೂಲಪತ್ರಚೂರ್ಣಂತುಚೂರ್ಣಂ.ಎಷ್ಟಶಿವಾಭವಂ॥ ೧೧೭ ॥
ವಾರಿಣಾಲೇಪನಂಕುರ್ಯಾದ್ಗಾತ್ರದೌರ್ಗಂಧನಾಶನಂ ॥
ಕುಲಿತ್ಥಸಕ್ತವಃಕುಷ್ಠಂಮಾಂಸೀಚಂದನಜಂರಜಃ ॥ ೧೧೮ ॥
ಸಕ್ತುವಚ್ಚಣಕಸ್ಯೈವತ್ವಕ್ಚೈವೈಕತ್ರಕಾರಯೇತ್ ॥
ಸ್ವೇದದೌರ್ಗಂಧ್ಯನಾಶಶ್ಚಜಾಯತೇಸ್ಯಾವಧೂಳನಾತ್ ॥ ೧೧೯ ॥
ವಚಾಪಾಶೌವರ್ಚಲಂಕುಷ್ಠಂರಜಃಸ್ಯಾಮರಿಚಾನಿಚ ॥
ಏತಲ್ಲೇಪಪ್ರಭಾವೇಣವಶೀಕರಣಮುತ್ತಮಂ ॥ ೧೨೦ ॥

ಕಾಮಶಾಸ್ತ್ರೋಪಯುಕ್ತಗಳಾದ ಲಿಂಗವರ್ಧಕ ಲೇಪಗಳು, ಸ್ತನವರ್ಧಕ ಲೇಪಗಳು, ಯೋನಿಸಂಕೋಚಕರಲೇಪಗಳು ಹೇಳಲ್ಪಡುತ್ತವೆ. ಮೆಣಸು, ಸೈಂಧವಲವಣ, ಹಿಪ್ಪಲಿ, ಗ್ರಂಥಿತಗರ, ಗುಳ್ಳದಕಾಯಿ, ಉತ್ತರಣೆಯ ಬೀಜ, ಎಳ್ಳು, ಚಂಗಲಕೋಷ್ಟ, ಯವೆ, ಉದ್ದಿನಕಾಳು, ಸಾಸುವೆಯಕಾಳು, ಹಿರೀಮದ್ದು ಇವುಗಳನ್ನು ಚೂರ್ಣಿಸಿ, ಜೇನುತುಪ್ಪದಿಂದ ಕಲೆಸಿ ಇದನ್ನು ಯಾವಾಗ್ಯೂ ಹತ್ತಿಸುವುದು, ತಿಕ್ಕುವುದು, ಈ ರೀತಿಯಾಗಿ ಮಾಡುತ್ತ ಬಂದಲ್ಲಿ ಲಿಂಗವು ವೃದ್ಧಿಯಾಗುತ್ತದೆ. ಸ್ತನಗಳು ವೃದ್ಧಿಯಾಗುತ್ತವೆ. ಬಿಳಿಯ ಹಿರೇ ಮದ್ದಿನ ಬೇರು, ಸೈಂಧವಲವಣ, ಆಡಿನಹಾಲು ಇವುಗಳನ್ನು ಸೇರಿಸಿ ಇವುಗಳ ಜೊತೆಯಲ್ಲಿ ತುಪ್ಪವನ್ನೂ ಸೇರಿಸಿ ಘೃತಪಾಕ ಕ್ರಮದಿಂದ ಪಕ್ವಮಾಡಿ ಲಿಂಗಕ್ಕೆ ಹಚ್ಚಿ ತಿಕ್ಕುತ್ತ ಬಂದಲ್ಲಿ ಉತ್ತಮವಾಗಿ ಲಿಂಗವು ವೃದ್ಧಿಯಾಗುತ್ತದೆ. ದಾಸಮಿಕ್ಕೆಕಾಯಿನರಸದ ಜೊತೆಯಲ್ಲಿ ಪಾದರಸವನ್ನು ಸೇರಿಸಿಕೊಂಡು ಕೆಂಪು ಕಣಿಗಲ ಕಡ್ಡಿಯಿಂದ ಚನ್ನಾಗಿ ತಿಕ್ಕಿ ಗೊಟಾಯಿಸಿಕೂಡುವಂತೆ ಮಾಡಿ ಅದನ್ನು ಲಿಂಗಕ್ಕೆ ಲೇಪಮಾಡಿಕೊಂಡು ಸ್ತ್ರೀ ಸಂಯೋಗ ಮಾಡುವುದರಿಂದ ಯೋನಿಯು ದ್ರವಿಸುತ್ತದೆ. ಅಂದರೆ ಸ್ತ್ರೀಯರಿಗೆ ಇಷ್ಟುಮಟ್ಟಿನ ಸಂತೋಷವಾಗುತ್ತದೆ. ವೀಳೆಯದೆಲೆ. ಚಂಗಲಕೋಷ್ಟ, ಅಳಲೆಕಾಯಿ ಇವುಗಳನ್ನು ಸಮವಾಗಿ ಕೂಡಿಸಿ ಚೂರ್ಣಮಾಡಿ ನೀರಿನಲ್ಲಿ ಕಲೆಸಿ ಶರೀರಕ್ಕೆ ಲೇಪಮಾಡಿದರೆ ಶರೀರದ ದುರ್ವಾಸನೆಯು ಹೋಗುತ್ತದೆ ಹುರುಳಿಯಹಿಟ್ಟು ಚಂಗಲಕೋಷ್ಟ, ಜಟಾಮಾಂಸಿ, ಗಂಧದಚಕ್ಕೆಯಚೂರ್ಣ, ಹಸಿಯ ಕಡಲೆಯಹಿಟ್ಟು ತಾಜಪತ್ರಿ ಇವೆಲ್ಲವನ್ನೂ ಕೂಡಿಸಿ ಚೂರ್ಣಮಾಡಿ ಈ ಚೂರ್ಣವನ್ನು ಮೈಗೆ ತಿಕ್ಕಿಕೊಳ್ಳುವುದರಿಂದ ಬೆವರಿನ ದುರ್ವಾಸನೆ ಹೋಗಿ ದೇಹಕ್ಕೆ ಕಾಂತಿ ಬರುತ್ತದೆ. ಬಜೆ, ಸೌವರ್ಚಲವಣ, ಚಂಗಲಕೋಷ್ಟ, ಅರಸಿನ, ಮರಅರಸಿನ, ಮೆಣಸಿನಕಾಳು ಇವುಗಳನ್ನು ಚನ್ನಾಗಿ ಚೂರ್ಣಮಾಡಿ ಶರೀರಕ್ಕೆ ಸವರಿಕೊಳ್ಳುತ್ತ ಬಂದಲ್ಲಿ ಇದೊಂದು ವಶೀಕರಣ ಪ್ರಯೋಗವಾಗಿದೆ.

ಅಭ್ಯಂಗಪರಿಷೇಕಶ್ಚಪಿಚುರ್ವಸ್ತಿರಿತಿಕ್ರಮಾತ್ ॥
ಮೂರ್ಧತೈಲಂಚತುರ್ಧಾಸ್ಯಾದ್ಬಲವಚ್ಚಯಥೋತ್ತರಂ ॥ ೧೨೧ ॥
ತ್ರಯೋಭ್ಯಂಗಾದಯಃಪೂರ್ವೇಪ್ರಸಿದ್ಧಾಸ್ಸರ್ವತಸ್ಮೃತಾಃ ॥

ಮೂರ್ಧತೈಲಪ್ರಕ್ರಿಯೆ ಅಂದರೆ ತೈಲವನ್ನು ತಲೆಗೆ ತಿಕ್ಕಿಕೊಂಡು ಅಭ್ಯಂಗ ಮಾಡಿಕೊಳ್ಳುವುದು. ವೈದ್ಯಶಾಸ್ತ್ರಸಮ್ಮತವಾದ ಈ ಕ್ರಮವನ್ನು ಹೇಳುತ್ತಾನೆ ಅಭ್ಯಂಗ ಪರಿಷೇಕ, ಪಿಚು, ಬಸ್ತಿ ಎಂಬದಾಗಿ ಇದು ನಾಲ್ಕು ವಿಧಗಳಾಗಿವೆ.

ಇವುಗಳಲ್ಲಿ ಉತ್ತರೋತ್ತರವಾದವುಗಳು ಕ್ರಮವಾಗಿ ಬಲವತ್ತರಗಳೆಂದು ತಿಳಿಯಬೇಕು. ಎಂದರೆ ಅಭ್ಯಂಗಕ್ಕಿಂತ ಪರಿಷೇಕವೂ, ಅದಕ್ಕಿಂತ ಪಿಚುವೂ, ಅದಕ್ಕಿಂತ ಬಸ್ತಿಯೂ ಬಲವತ್ತರವಾದುವೆಂದು ತಿಳಿಯಬೇಕು. ಅಭ್ಯಂಗವೆಂದರೆ ತೈಲಮರ್ದನವು, ಪರಿಷೇಕವೆಂದರೆ ತೈಲಸ್ನಾನವು, ಪಿಚುವೆಂದರೆ ತೈಲವಸ್ತ್ರ ಧಾರಣವು. ಬಸ್ತಿಕ್ರಮವು ಮುಂದೆ ಹೇಳಲ್ಪಡುವುದು.

ಶಿರೋಬಸ್ತಿವಿಧಿಶ್ಶಾಸ್ತ್ರಪ್ರೋಚ್ಯತೇಸುಜ್ಞಸಮ್ಮತಃ ॥ ೧೨೨ ॥
ಶಿರೋಬಸ್ತಿಶ್ಚರ್ಮಣಸ್ಸ್ಯಾತ್ ದ್ವಿಮುಖೋದ್ವಾದಶಾಂಗುಲಃ ॥
ಶಿರಃಪ್ರಮಾಣಂತಂಬದ್ಧ್ವಾಮಸ್ತಕೇಮಾಷಪಿಷ್ಟಕೈಃ ॥ ೧೨೩ ॥
ಸಂಧಿರೋಧಂವಿಧಾಯಾಶುಸ್ನೇಹೈಃಕೋಷ್ಣೈಃಪ್ರಪೂರಯೇತ್ ॥
ತಾವದ್ಧಾರ್ಯಸ್ತುಯಾವತ್ಸ್ಯಾನ್ನಾಸಾಕರ್ಣಮುಖಸ್ರುತಿಃ॥ ೧೨೪ ॥
ವೇದನೋಪಶಮೋವಾಪಿಮಾತ್ರಾಣಾಂವಾಸಹಸ್ರಕಂ ॥
ವಿನಾಭೋಜನಮೇವಾತ್ರಶಿರೋಬಸ್ತಿಃಪ್ರಶಸ್ಯತೇ ॥ ೧೨೫ ॥
ಪ್ರಯೋಜ್ಯಸ್ತುಶಿರೋಬಸ್ತಿಃಪಂಚಸಪ್ತಾಹಮೇವವಾ ॥
ವಿಮೋಚ್ಯಶಿರಸೋಬಸ್ತಿಂಗೃಹ್ಣೀಯಾಚ್ಚಸಮಂತತಃ ॥ ೧೨೬ ॥
ಊರ್ಧ್ವಕಾಯಂತತಃಕೋಷ್ಣನೀರೈಃಸ್ನಾನಂಚಕಾರಯೇತ್ ॥
ಅನೇನದುರ್ಜಯಾರೋಗಾವಾತಜಾಯಾಂತಿಸಂಕ್ಷಯಂ ॥ ೧೨೭ ॥
ಶಿರಃಕಂಪಾದಯಸ್ತೇನಸರ್ವಕಾಲೇಷುಯುಜ್ಯತೇ ॥

ತಿಳಿದವರು ಒಪ್ಪಿದಂತಹ ಶಿರೋಬಸ್ತಿ ಕ್ರಮವನ್ನು ಇಲ್ಲಿ ಹೇಳುತ್ತಾನೆ. ಚರ್ಮದ ಶಿರೋಬಸ್ತಿಯು ಹನ್ನೆರಡಂಗುಲಗಳ ಉದ್ದವಾಗಿ ಎರಡು ಮುಖಗಳುಳ್ಳದ್ದಾಗಿ ಇರಬೇಕು. ಅದರ ಕೆಳಭಾಗವು ತಲೆಯಷ್ಟು ವಿಸ್ತಾರವಾದುದಾಗಿರಬೇಕು ಮೇಲುಭಾಗವು ತೈಲವನ್ನು ಹಾಕಲು ಅನುಕೂಲವಾಗಿರಬೇಕು (ಕೆಲವರು ಬಸ್ತಿಯು ಹದಿನಾರಂಗುಲಗಳಿರಬೇಕೆನ್ನುತ್ತಾರೆ. ಆದರೂ ಅದರ ತಳಭಾಗದಲ್ಲಿ ಮೂರಂಗುಲವು ವಸ್ತ್ರಪಟ್ಟದಿಂದ ಬಿಗಿಯುವುದಕ್ಕೂ ಉದ್ದಿನ ಹಿಟ್ಟನ್ನು ಲೇಪಿಸುವುದಕ್ಕೂ ಕಳೆದು ಹೋಗುತ್ತದೆ. ಮೇಲುಭಾಗದಲ್ಲಿ ಕೊನೆಯ ಒಂದಂಗುಲದಷ್ಟಕ್ಕೆ ತೈಲವು ಇರುವುದಿಲ್ಲ. ಅಲ್ಲಿ ಬಸ್ತಿಯು ಬರಿದಾಗಿರುತ್ತದೆ. ಎಂದಮೇಲೆ ಬಸ್ತಿಯಲ್ಲಿ ತೈಲವಿರುವ ಸ್ಥಳವು ಮಾತ್ರ ದ್ವಾದಶಾಂಗುಲ ಸಮ್ಮಿತವು ಇದು ಗ್ರಂಥಕಾರರ ಅಭಿಮತವೆಂದು ಗ್ರಹಿಸಬಹುದಾಗಿದೆ.) ಆ ಬಸ್ತಿಯ ತಳ ಭಾಗವನ್ನು ತಲೆಗೆ ಸರಿಯಾಗಿ ಇಟ್ಟು ಉದ್ದಿನಹಿಟ್ಟಿನಿಂದ ಸಂದಿಯು ಎಲ್ಲಿಯೂ ಬಿಟ್ಟಿರದಂತೆ ಮಾಡಬೇಕು. ಅನಂತರವೇಗ ಎಂದರೆ ಹಿಟ್ಟು ಒದ್ದೆಯಾಗಿರುವಾಗಲೇ ಸುಖೋಷ್ಣವಾದ ತೈಲದಿಂದ ಬಸ್ತಿಯನ್ನು ತುಂಬಬೇಕು. ಈ ಬಸ್ತಿಯನ್ನು

ಎಷ್ಟುಹೊತ್ತು ಇಟ್ಟಿರಬೇಕೆಂಬ ವಿಷಯದಲ್ಲಿ ಖಂಡಿತವಾದ ಕಾಲನಿಯಮವಿಲ್ಲ. ಅಂದರೆ ಕಣ್ಣು, ಮೂಗು, ಕಿವಿಗಳಿಂದ ಮಲಗಳು ಹೊರಕ್ಕೆ ಹೊರಡುವ ವರೆವಿಗೂ ಇರಬೇಕೆಂದು ಒಂದು ಅಭಿಪ್ರಾಯ ಹೇಗೆಂದರೆ ತಲೆಯ ಮೇಲಿರುವ ತೈಲವು ಶಿರಸ್ಸಿನ ರೋಮಕೂಪಗಳ ದ್ವಾರಾ ಒಳಗೆ ವ್ಯಾಪಿಸಿ ಶಿರೋಗತಗಳಾದ ದೋಷಗಳನ್ನು ಕಣ್ಣು, ಕಿವಿ, ಮೂಗು ಮೊದಲಾದ ದ್ವಾರಗಳ ಮಾರ್ಗವಾಗಿ ಹೊರಕ್ಕೆ ಹೊರಡಿಸುವ ವರೆವಿಗೂ ತಲೆಯಮೇಲಿನ ಕಟ್ಟೆಯಲ್ಲಿ ತೈಲವಿರಬೇಕೆಂಬ ಭಾವ. ದೋಷಗಳ ಪ್ರಕೋಪದಿಂದ ಶಿರಸ್ಸಿನಲ್ಲಿ ಉಂಟಾಗಿರುವ ವೇದನೆಯು ಶಮನವಾಗುವ ವರೆವಿಗೂ ತಲೆಯಮೇಲೆ ತೈಲವಿರಬೇಕೆಂದು ಒಂದು ವಿಧವಾದ ಅಭಿಪ್ರಾಯ ಒಂದುಸಾವಿರ ಮಾತ್ರೆಗಳಷ್ಟು ಕಾಲವೆಂದು ಮತ್ತೊಂದು ಅಭಿ ಪ್ರಾಯ ಒಂದು ಮಾತ್ರೆಗಳ ಕಾಲವೆಂದರೆ ಕುಳಿತುಕೊಂಡು ಮೊಳಕಾಲಿನ ಮೇಲೆ ಒಂದುಸಾರಿ ಬಲಗಯ್ಯನ್ನು ಸವರಿ ಒಂದು ಬಾರಿ ಚಿಟಿಕೆಯನ್ನು ಹೊಡೆ ದರೆ ಅದನ್ನು ಒಂದುಮಾತ್ರೆಯೆಂದು ಹೇಳುತ್ತಾರೆ. ಇಂತಹ ಒಂದುಸಾವಿರ ಮಾತ್ರೆಗಳ ಕಾಲವಾದರೂ ಆಗಬಹುದೆಂಬ ಭಾವ ಈ ಶಿರೋವಸ್ತಿಯನ್ನು ಭೋಜನಕ್ಕೆ ಮೊದಲೇ ತೆಗೆದುಕೊಳ್ಳುವುದು ಉತ್ತಮ. ಈ ರೀತಿಯಾಗಿ ಐದಾರು ದಿವಸ ಶಿರೋವಸ್ತಿಯನ್ನು ತೆಗೆದುಕೊಳ್ಳಬೇಕು. ಶಿರೋವಸ್ತಿಕ್ರಮವು ಮುಗಿದಮೇಲೆ ತಲೆಗೆ ಸುತ್ತಿರುವ ಉದ್ದಿನಹಿಟ್ಟನ್ನು ತೆಗೆದು ಚರ್ಮದಟೊಪ್ಪಿಗೆ ಯನ್ನು ತೆಗೆದು ತಲೆಯ ಮೇಲಿರುವ ತೈಲವನ್ನು ಎಲ್ಲಾಕಡೆಯಲ್ಲಿ ಸಾಧ್ಯ ವಾದಷ್ಟು ಹಿಡಿದುಕೊಳ್ಳಬೇಕು. ನಂತರ ಸುಖೋಷ್ಣವಾದ ಬಿಸಿನೀರಿನಿಂದ ತಲೆ ಮತ್ತು ಶರೀರವನ್ನು ತೊಳೆದುಕೊಂಡು ಸ್ನಾನಮಾಡಬೇಕು ಈ ರೀತಿಯಾಗಿ ಶಿರೋವಸ್ತಿಕ್ರಮವನ್ನು ಅನುಸರಿಸುವುದರಿಂದ ಅಸಾಧ್ಯಗಳಾದ ನಾನಾವಿಧ ವಾತ ರೋಗಗಳು, ತಲೆನಡುಗುವುದು ಮೊದಲಾದ ವಿಕಾರಗಳು ಇವುಗಳೆಲ್ಲವೂ ತೊಲಗಿ ಹೋಗುತ್ತವೆ. ಈ ಶಿರೋವಸ್ತಿಯನ್ನು ಋತುನಿಯಮವಿಲ್ಲದೆ ಸರ್ವದಾ ಮಾಡಬಹುದು.

**ಸ್ವೇದಯೇತ್ ಕರ್ಣದೇಶಂತುಕಿಂಚಿನ್ನುಃಪಾರ್ಶ್ವಶಾಯಿನಃ ॥೧೨೮॥**
**ಮೂತ್ರಸ್ನೇಹೈರಸೈಃಕೋಷ್ಣೈಃತತಶ್ರೋತ್ರಂಪ್ರಪೂರಯೇತ್ ॥**
**ಕರ್ಣಂಚಪೂರಿತಂರಕ್ಷೇತ್ ಶತಂಪಂಚಶತಾನಿವಾ ॥ ೧೨೯ ॥**
**ಸಹಸ್ರಂವಾಪಿಮಾತ್ರಾಣಾಂಶ್ರೋತ್ರಕಂಠಶಿರೋಗದೇ ॥**
**ಸ್ವಜಾನುನಃಕರಾವರ್ತಂಕುರ್ಯಾತ್ ಛೋಟಿಕಯಾಯುತಂ**
**॥ ೧೩೦ ॥**
**ಏಷಾಮಾತ್ರಾಭವೇದೇಕಾಸರ್ವತ್ರೈವೇಷನಿಶ್ಚಯಃ ॥**

**ರಸಾದ್ಯೈಃಪೂರಣಂಕರ್ಣೇಭೋಜನಾತ್ಪ್ರಾಕ್ಪ್ರಶಸ್ಯತೇ ॥೧೩೧॥**
**ತೈಲಾದ್ಯೈಃಪೂರಣಂಕರ್ಣೇಭಾಸ್ಕರೇಸ್ತಮುಪಾಗತೇ**

ಕರ್ಣರೋಗಗಳಿಗೆ ಚಿಕಿತ್ಸೆಯನ್ನು ಮಾಡುವ ಪೂರ್ವದಲ್ಲಿ ಕರ್ಣಸ್ವೇದನ ಕ್ರಮವನ್ನು ಹೇಳುತ್ತಾನೆ ಕರ್ಣರೋಗಗಳು ಪ್ರಾಪ್ತವಾದ ಕಾಲದಲ್ಲಿ ಪ್ರಥಮತ ಕಿವಿಗೆ ಸ್ವೇದನವೆಂಬ ಕರ್ಮವನ್ನು ಮಾಡಬೇಕು. ಅದನ್ನು ಮಾಡುವ ರೀತಿಯು ಹೇಗೆಂದರೆ— ರೋಗಿಯನ್ನು ಯಾವ ಕಿವಿಗೆ ಸ್ವೇದನಕರ್ಮವನ್ನು ಮಾಡಿಸಬೇಕೋ ಆ ಕಿವಿ ಮೇಲಕ್ಕೆ ಬರುವಂತೆ ಮಗ್ಗಲಾಗಿ ಮಲಗಿಸಿ ಸುಖೋಷ್ಣಗಳಾದ ಮೂತ್ರ, ತೈಲ, ಸ್ವರಸಗಳು ಇವುಗಳಿಂದ ಕರ್ಣರಂಧ್ರವನ್ನು ತುಂಬಿಸಬೇಕು ಕಿವಿಗೆ ರಸವನ್ನು ತುಂಬಿಸಿದಮೇಲೆ ಒಂದು ನೂರು ಮಾತ್ರೆಯಷ್ಟು ಕಾಲವಾಗಲೀ, ಐದುನೂರು ಮಾತ್ರೆಯಷ್ಟು ಕಾಲವಾಗಲೀ ಒಂದು ಸಾವಿರ ಮಾತ್ರೆಯಷ್ಟು ಕಾಲವಾಗಲೀ ಅದನ್ನು ಧಾರಣೆ ಮಾಡಬೇಕು. ಅಂದರೆ ಕರ್ಣರೋಗಗಳಲ್ಲಿ ನೂರುಮಾತ್ರೆಯಷ್ಟುಕಾಲ ಕಂಠರೋಗಗಳಲ್ಲಿ ಐದುನೂರು ಮಾತ್ರೆಯಷ್ಟು ಕಾಲ, ಶಿರೋರೋಗಗಳಲ್ಲಿ ಒಂದುಸಾವಿರ ಮಾತ್ರೆಯಷ್ಟುಕಾಲ ಈ ರೀತಿ ವ್ಯವಸ್ಥೆಮಾಡಿಕೊಳ್ಳಬೇಕು. ಮಾತ್ರಾಕಾಲವೆಂದರೆ ತನ್ನ ಮೊಳಕಾಲಿನ ಮೇಲೆ ಕಯ್ಯನ್ನಾಡಿಸಿ ಚುಟಿಕೆಯನ್ನು ಹಾಕುವಷ್ಟು ಕಾಲಕ್ಕೆ ಹೆಸರು. ಯಾವುದಾದರೂ ಸ್ವರಸದಿಂದ ಕರ್ಣಪೂರಣಮಾಡಿಸುವುದಾದರೆ ಭೋಜನಕ್ಕೆ ಮೊದಲು ಮಾಡಿಸಬೇಕು.

**ಪೀತಾರ್ಕಪತ್ರಮಾಜ್ಯೇನಲಿಪ್ತಂವಹ್ನೌಪ್ರತಾಪಯೇತ್ ॥ ೧೩೨ ॥**
**ತದ್ರಸಃಶ್ರವಣೇಕ್ಷಿಪ್ತಃಕರ್ಣಶೂಲಹರಃಪರಃ ॥**
**ಕರ್ಣಶೂಲಾತುರೇಕೋಷ್ಣಂಬಸ್ತಮೂತ್ರಂಸಸೈಂಧವಂ ॥ ೧೩೩ ॥**
**ನಿಕ್ಷಿಪೇತ್ತೇನಶಾಮ್ಯಂತಿಶೂಲಪಾಕಾದಿಕಾರುಜಃ ॥**
**ಶೃಂಗಬೇರಂಚಮಧುಕಂಮಧುಸೈಂಧವಮಾಮಲಂ ॥ ೧೩೪ ॥**
**ತಿಲಪರ್ಣೀರಸಸ್ತೈಲಂಟಂಕಣಂನಿಂಬುಕದ್ರವಂ ॥**
**ಕದುಷ್ಣಂಕರ್ಣಯೋರ್ದೇಯಮೇತದ್ವಾವೇದನಾಪಹಂ ॥೧೩೫॥**
**ಕಪಿತ್ಥಮಾತುಲಂಗಾಮ್ಲಶೃಂಗವೇರರಸೈಶ್ಶುಭೈಃ ॥**
**ಸುಖೋಷ್ಣೈಃಪೂರಯೇತ್ಕರ್ಣಂಕರ್ಣಶೂಲೋಪಶಾಂತಯೇ ॥ ೧೩೬ ॥**
**ಅರ್ಕಾಂಕುರಾನಮ್ಲಪಿಷ್ಟಾನ್ತೈಲಾಕ್ತಾನ್ ಲವಣಾನ್ವಿತಾನ್ ॥**
**ಸನ್ನಿದಧ್ಯಾತ್ಸ್ನುಹೀಕಾಂಡೇಕೋರಿತೇತಚ್ಛದಾವೃತೇ ॥ ೧೩೭ ॥**

**ಪುಟಪಾಕಕ್ರಮಂಕೃತ್ವಾರಸೈಸ್ತಚ್ಛ್ರವಃಪೂರಯೇತ್ ॥**
**ಸುಖೋಷ್ಣೈಸ್ತೇನಶಾಮ್ಯಂತಿಕರ್ಣಪೀಡಾಸ್ಸುದಾರುಣಾಃ ॥ ೧೩೮ ॥**

ಕರ್ಣಪೂರಣವೆಂದರೆ ಕರ್ಣಶೂಲಾದಿರೋಗಗಲ್ಲಿ ಕಿವಿಗೆ ತುಂಬಿಸತಕ್ಕ ಸ್ವರಸಾದಿಯೋಗಗಳನ್ನು ಹೇಳುತ್ತಾನೆ ಹಣ್ಣಾಗಿ ಹಳದಿಯಬಣ್ಣಕ್ಕೆ ಬಂದ ಯಕ್ಕದ ಎಲೆಗಳಿಗೆ ತುಪ್ಪವನ್ನು ಸವರಿ ಬೆಂಕಿಯಲ್ಲಿ ಕಾಯಿಸಿ ಮೆತ್ತಗಾದಮೇಲೆ ಸುಖೋಷ್ಣವಾಗಿ ಅದರ ರಸವನ್ನು ಕಿವಿಗೆ ತುಂಬಿಸಿದರೆ ಕಿವಿಶೂಲೆಯು ಗುಣ ವಾಗುತ್ತದೆ ಆಡಿನ ಮೂತ್ರದ ಜೊತೆಗೆ ಸೈಂಧವಲವಣವನ್ನು ಬೆರಸಿ ಕಾಯಿಸಿ ಸುಖೋಷ್ಣವಾಗಿ ಕಿವಿಗೆ ತುಂಬಿಸಿದಲ್ಲಿ ಕರ್ಣಶೂಲೆ, ಕರ್ಣಪಾಕ, ಮೊದಲಾದವು ಗಳು ಶಮನವಾಗುತ್ತವೆ. ಹಸಿಶುಂಠಿ, ಜ್ಯೇಷ್ಠಮಧು, ಜೇನುತುಪ್ಪ, ಸೈಂಧವ ಲವಣ, ನೆಲ್ಲಿಯಕಾಯಿ, ತಿಲಪರ್ಣಿ ಇವುಗಳ ರಸದ ಜೊತೆಗೆ ಎಣ್ಣೆಯನ್ನು ಕೂಡಿಸಿ ಟಂಕಣಕ್ಷಾರವನ್ನು ಸೇರಿಸಿ ನಿಂಬೆಯಹಣ್ಣಿನರಸವನ್ನೂ ಸೇರಿಸಿ ಕಾಯಿಸಿ ಸುಖೋಷ್ಣವಾಗಿ ಕಿವಿಗೆ ತುಂಬಿಸಿದಲ್ಲಿ ಕರ್ಣಶೂಲೆ, ಕರ್ಣವೇದನೆ ಇವುಗಳು ಶಮನವಾಗುತ್ತವೆ. ಬೇಲದಕಾಯಿನ ರಸ, ಮಾದಳಹಣ್ಣಿನರಸ, ಅಮ್ಲವೇತಸ ರಸ, ಹಸಿಶುಂಠಿಯರಸ ಇವುಗಳನ್ನು ಕಾಯಿಸಿ ಸುಖೋಷ್ಣವಾಗಿ ಕಿವಿಗೆ ತುಂಬಿ ಸಿದರೆ ಕಿವಿಶೂಲೆ ಶಮನವಾಗುತ್ತದೆ. ಯಕ್ಕದ ಕುಡಿಯನ್ನು ಅನ್ನದ ಹುಳಿ ನೀರಿನಲ್ಲಾಗಲೀ ನಿಂಬೆಯಹುಳಿಯಲ್ಲಾಗಲೀ ಅರೆದು ಎಣ್ಣೆಯಲ್ಲಿ ಕಲೆಸಿ ಸೈಂಧವ ಲವಣವನ್ನು ಕೂಡಿಸಿ ಇದೆಲ್ಲವನ್ನೂ ಒಂದು ಕಳ್ಳಿಯಕೊನೆಯನ್ನು ಕೊರೆದು ಗುಣಿಮಾಡಿ ಅದರಲ್ಲಿ ತುಂಬಿ ಕಳ್ಳಿಯ ಎಲೆಯನ್ನೇ ಮುಚ್ಚಿ ಮೇಲಕ್ಕೆ ಮಣ್ಣನ್ನು ಹತ್ತಿಸಿ ಪುಟಪಾಕಕ್ರಮದಿಂದ ಬೆಂಬೂದಿಯಲ್ಲಿ ಬೇಯಿಸಿ ಅದನ್ನು ತೆಗೆದುಕೊಂಡು ಸುಖೋಷ್ಣವಾಗಿ ಆ ರಸವನ್ನು ಕಿವಿಗೆ ತುಂಬಿಸಿದಲ್ಲಿ ಭಯಂಕರ ವಾದ ಕರ್ಣವೇದನೆಯು ಕೂಡಾ ಶಾಂತವಾಗುತ್ತದೆ.

**ಮಹತಃಪಂಚಮೂಲಸ್ಯಕಾಂಡಾನ್ಯಷ್ಟಾಂಗುಲಾನಿಚ ॥**
**ಕ್ಷೌಮೇಣಾವೇಷ್ಟ್ಯಸಂಸಿಚ್ಯತೈಲೇನಾದೀಪಯೇತ್ತತಃ ॥ ೧೩೯ ॥**
**ಯತ್ತೈಲಂಚ್ಯವತೇತೇಭ್ಯಃಸುಖೋಷ್ಣಂತೇನಪೂರಯೇತ್ ॥**
**ಜ್ಞೇಯಂತದ್ದೀಪಿಕಾತೈಲಂಸದ್ಯೋಗೃಹ್ಣಾತಿವೇದನಾಂ॥ ೧೪೦ ॥**
**ಏವಂಸ್ಯಾದ್ದೀಪಿಕಾತೈಲಂಕುಷ್ಠೇದೇವತರೌತಥಾ ॥**

ಮಹಾಪಂಚಮೂಲವೆಂದು ಹಿಂದೆ ಅಲ್ಲಲ್ಲ ಹೇಳಲ್ಪಟ್ಟಿರುವ ಮೂಲಿಕೆಗಳ ಎಂಟು ಅಂಗುಲದ ಐದುಕಡ್ಡಿಗಳನ್ನು ತೆಗೆದುಕೊಂಡು ಅವುಗಳಿಗೆ ರೇಷ್ಮೆಯ ಬಟ್ಟೆಯನ್ನು ಸುತ್ತಿ ಎಣ್ಣೆಯಲ್ಲಿ ನೆನಸಿ ಅದನ್ನು ಹೊತ್ತಿಸಿ ಉರಿಸಬೇಕು.

ಉರಿಯುತ್ತಿರುವಾಗ್ಯೆ ಕೆಳಗೆ ಬೊಟ್ಟುಬೊಟ್ಟಾಗಿ ಬೀಳುವ ತೈಲವನ್ನು ಸಂಗ್ರಹಿಸಿ ಸುಖೋಷ್ಣವಾದ ಆ ತೈಲವನ್ನು ಕಿವಿಗೆ ತುಂಬಿಸಬೇಕು ಇದರಿಂದ ಕಿವಿಯಲ್ಲಿ ಉಂಟಾಗುವ ವೇದನೆಗಳೆಲ್ಲಾ ಶಮನವಾಗುತ್ತವೆ. ಇದಕ್ಕೆ ದೀಪಿಕಾತೈಲವೆಂದು ಹೆಸರು. ಇದೇ ರೀತಿಯಲ್ಲಿ ದೇವದಾರೀಚಕ್ಕೆಯಲ್ಲಿ ತಯಾರಿಸಿದ ದೀಪಿಕಾ ತೈಲವು ಕುಷ್ಠರೋಗದಲ್ಲಿ ಉಪಯುಕ್ತವಾಗಿದೆ.

**ತೈಲಂಸ್ಯೋನಾಕಮೂಲೇನಮಂದೇಗ್ನೌಪರಿಪಾಚಿತಂ ॥ ೧೪೧ ॥**
**ಹರೇದಾಶುತ್ರಿದೋಷೋತ್ಥಂಕರ್ಣಶೂಲಂಪ್ರಪೂರಣಾತ್॥**

ಸ್ಯೋನಾಕವೆಂಬ ಮರದಚಕ್ಕೆಯ ಕಲ್ಕ ಮತ್ತು ಕಷಾಯಗಳನ್ನು ಮಾಡಿ ಅದರೊಂದಿಗೆ ತೈಲವನ್ನು ಹಾಕಿ ತೈಲಪಾಕಕ್ರಮದಿಂದ ಪಕ್ವಮಾಡಿ ಕಿವಿಗೆ ತುಂಬಿಸಿದಲ್ಲಿ ತ್ರಿದೋಷಪ್ರಕೋಪದಿಂದ ಹುಟ್ಟಿದ ಕರ್ಣಶೂಲೆಯು ನಿವಾರಣೆ ಯಾಗುತ್ತದೆ.

**ಕಲ್ಕಕ್ವಾಥೇನಯಷ್ಟ್ಯಾಹ್ವಕಾಕೋಲೀಮಾಷಧಾನ್ಯಕೈಃ ॥ ೧೪೨ ॥**
**ಸೂಕರಸ್ಯವಸಾಂಪಕ್ತ್ವಾಕರ್ಣನಾದಾರ್ತಿನಾಶಿನೀಂ ॥**

ಜ್ಯೇಷ್ಠಮಧು, ಕಾಕೋಲಿ ಎಂಬ ಮೂಲಿಕೆ, ಉದ್ದಿನಕಾಳು, ಕೊತ್ತಂಬರಿ ಬೀಜ ಇವುಗಳ ಕಲ್ಕ ಮತ್ತು ಕಷಾಯಗಳನ್ನು ಹಂದಿಯ ಕೊಬ್ಬಿನೊಟ್ಟಿಗೆ ಕೂಡಿಸಿ ತೈಲಪಾಕಕ್ರಮದಿಂದ ಪಕ್ವಮಾಡಿ ಕಿವಿಗೆ ತುಂಬಿಸಿದಲ್ಲಿ ಕರ್ಣನಾದ ಅಂದರೆ ಕಿವಿಯಲ್ಲಿ ಶಬ್ದವಾಗುವುದು ನಿಂತುಹೋಗುತ್ತದೆ

## ಸ್ವರ್ಜಿಕಾತೈಲ.

**ಸ್ವರ್ಜಿಕಾಮೂಲಕಂಶುಷ್ಕಂಹಿಂಗುಕೃಷ್ಣಾಸಮನ್ವಿತಂ ॥ ೧೪೩ ॥**
**ಶತಪುಷ್ಪಾಚತೈಸ್ತೈಲಂಪಕ್ವಂಸೂಕ್ತಚತುರ್ಗುಣಂ ॥**
**ಪ್ರಣಾದಂಶೂಲಬಾಧಿರ್ಯಂಸ್ರಾವಂಕರ್ಣಸ್ಯನಾಶಯೇತ್॥೧೪೪॥**

ಸರ್ಜಕ್ಷಾರ, ಒಣಗಿದ ಮೂಲಂಗಿ, ಹಿಂಗು, ಹಿಪ್ಪಲಿ, ಸದಾಪನಸೊಪ್ಪು ಇವುಗಳ ಕಲ್ಕದೊಟ್ಟಿಗೆ ತೈಲವನ್ನು ಕೂಡಿಸಿ ತೈಲದ ನಾಲ್ಕರಷ್ಟು ಕಾಂಜಿಕವೆಂಬ ಅನ್ನದ ಹುಳಿನೀರನ್ನೂ ಸೇರಿಸಿ ತೈಲಪಾಕಕ್ರಮದಿಂದ ಪಕ್ವಮಾಡಿ ಕಿವಿಗೆ ತುಂಬಿಸುತ್ತಬಂದಲ್ಲಿ ಕರ್ಣನಾದ ಕರ್ಣಶೂಲ, ಕಿವಡು, ಕರ್ಣಸ್ರಾವ ಅಂದರೆ ಕಿವಿ ಸೋರುವುದು ಇವೆಲ್ಲಾ ನಾಶಹೊಂದುತ್ತವೆ

## ಅಪಾಮಾರ್ಗಕ್ಷಾರತೈಲ.

**ಅಪಾಮಾರ್ಗಕ್ಷಾರಜಲೇತತ್ಕ್ಷಾರಂಕಲ್ಕಿತಂಕ್ಷಿಪೇತ್ ॥**
**ತೇನಪಕ್ವಂಜಯೇತ್ತೈಲಂಬಾಧಿರ್ಯಂಕರ್ಣನಾದಕಂ ॥ ೧೪೫ ॥**

ಉತ್ತರಣೆ ಗಿಡದಿಂದ ಕ್ಷಾರವನ್ನು ತೆಗೆದುಕೊಂಡು ಅದರ ಕ್ಷಾರದ ನೀರಿನೊಂದಿಗೆ ಅದೇ ಕ್ಷಾರದ ಕಲ್ಕವನ್ನು ಸೇರಿಸಿ ತೈಲವನ್ನೂ ಸೇರಿಸಿ ತೈಲಪಾಕಕ್ರಮದಿಂದ ಪಕ್ವಮಾಡಿ ಅದರಿಂದ ಕಿವಿಯನ್ನು ತುಂಬಿಸಿದಲ್ಲಿ ಕಿವಡು ಮತ್ತು ಕರ್ಣನಾದ ಇವು ನಾಶಹೊಂದುತ್ತವೆ.

## ಶಂಬೂಕತೈಲ.

**ಶಂಬೂಕಸ್ಯತುಮಾಂಸೇನಪಚೇತ್ತೈಲಂತುಸಾರ್ಷಪಂ ॥**
**ತಸ್ಯಪೂರಣಮಾತ್ರೇಣಕರ್ಣನಾದಃಪ್ರಶಾಮ್ಯತಿ ॥ ೧೪೬ ॥**

ನೀರಿನೊಳಗಿರುವ ಕಪ್ಪೆಯಚಿಪ್ಪುಗಳು ಕೂಡಿಕೊಂಡಿರುವ ಕಾಲದಲ್ಲಿ ಒಡೆದು ಅದರೊಳಗಿರುವ ಮಾಂಸವನ್ನು ತೆಗೆದುಕೊಂಡು ಆಮಾಂಸದೊಂದಿಗೆ ಸಾಸುವೆಯ ಎಣ್ಣೆಯನ್ನು ಸೇರಿಸಿ ಪಕ್ವಮಾಡಿ ಆತೈಲದಿಂದ ಕಿವಿಯನ್ನು ತುಂಬಿಸಿದಲ್ಲಿ ಕರ್ಣನಾದಃ ರೋಗವು ನಿವಾರಣೆಯಾಗುತ್ತದೆ.

## ಕರ್ಣಸ್ರಾವದಲ್ಲಿ ಔಷಧಗಳು

**ಚೂರ್ಣಂಪಂಚಕಷಾಯಾಣಾಂಕಪಿತ್ಥರಸಮಿಶ್ರಿತಂ ॥**
**ಕರ್ಣಸ್ರಾವೇಪ್ರಶಂಸಂತಿಪೂರಣಂಮಧುನಾಸಹ ॥ ೧೪೭ ॥**
**ತಿಂದುಕಾನ್ಯಭಯಾಲೋಧ್ರಸಮಂಗಾಚಾಮಲಕ್ಯಪಿ ॥**
**ಜ್ಞೇಯಾಃಪಂಚಕಷಾಯಾಸ್ತುಕರ್ಮಣ್ಯಸ್ಮಿನ್ಭಿಷಗ್ವರೈಃ ॥೧೪೮॥**

ಮುಂದೆಹೇಳುವ ಪಂಚಕಷಾಯ ವಸ್ತುಗಳನ್ನು ಚನ್ನಾಗಿ ಚೂರ್ಣಮಾಡಿ ಆಚೂರ್ಣವನ್ನು ಕಿವಿಗೆತುಂಬಿಸಿ ಬೇಲದಕಾಯಿನ ರಸದೊಂದಿಗೆ ಜೇನುಬೆರಸಿ ಕಿವಿಗೆಹಾಕಿದಲ್ಲಿ ಎಂತಹಕರ್ಣಸ್ರಾವ ವಾದರೂ ನಿವಾರಣೆಯಾಗುತ್ತದೆ.

## ಸ್ವರ್ಜಿಕಾರಸಯೋಗ.

**ಸ್ವರ್ಜಿಕಾರಸಸಂಯುಕ್ತಂಬೀಜಪೂರರಸಂಕ್ಷಿಪೇತ್ ॥**
**ಕರ್ಣಸ್ರಾವರುಜಾದಾಹಾಃಪ್ರಣಶ್ಯಂತಿನಸಂಶಯಃ ॥ ೧೪೯**

ಸರ್ಜಕ್ಷಾರವನ್ನು ಕಿವಿಗೆತುಂಬಿಸಿ ಮಾದಳದ ಹಣ್ಣಿನ ರಸವನ್ನು ಕಿವಿಗೆ ಹಾಕಿದಲ್ಲಿ ಕರ್ಣಸ್ರಾವ, ಕಿವಿನೋವು, ಕಿವಿಯಉರಿ, ಇವುಗಳು ಶಮನಹೊಂದುತ್ತವೆ. ಅನುಮಾನವಿಲ್ಲ

**ಆಮ್ರಜಂಬೂಪ್ರವಾಳಾನಿಮಧುಕಸ್ಯವಟಸ್ಯಚ ॥**
**ಏಭಿಸ್ಸಂಸಾಧಿತಂತೈಲಂಪೂತಿಕರ್ಣೋಪಶಾಂತಿಕೃತ್ ॥ ೧೫೦॥**

ಮಾವಿನಚಿಗುರು, ನೇರಲಚಿಗುರು. ಇಪ್ಪೆಯಚಿಗುರು, ಆಲದಚಿಗುರು, ಇವುಗಳಕಲ್ಕದೊಂದಿಗೆ ತೈಲವನ್ನು ಸೇರಿಸಿ ಪಕ್ವಮಾಡಿ ಕಿವಿಗೆತುಂಬಿಸಿದಲ್ಲಿ ಕಿವಿಯಲ್ಲಿ ಕೀವುಸೋರುವುದು, ದುರ್ವಾಸನೆ, ಇವುಶಾಂತವಾಗುತ್ತವೆ.

### ಕಿವಿಯಲ್ಲಿ ಹುಳಬೀಳುವುದಕ್ಕೌಷಧ

**ಪೂರಣಂಹರಿತಾಳೇನಗವಾಂಮೂತ್ರಯುತೇನಚ ॥**
**ಅಥವಾಸಾರ್ಷಪಂತೈಲಂಕರ್ಣಕೀಟಹರಂಪರಂ ೧೫೧ ॥**

ಗೋಮೂತ್ರದೊಡನೆ ಅರಿದಳವನ್ನಾಗಲಿ, ಸಾಸುವೆಯಎಣ್ಣೆ ಒಂದನ್ನೇ ಆಗಲಿ, ಕಿವಿಗೆತುಂಬಿಸಿದಲ್ಲಿ ಕಿವಿಗೆಬಿದ್ದಿರುವ ಹುಳಗಳು ಸತ್ತುಹೋಗುತ್ತವೆ.

### ಶಿಗ್ರುಸ್ವರಸಾದಿಯೋಗ.

**ಸ್ವರಸಂಶಿಗ್ರುಮೂಲಸ್ಯಸೂರ್ಯಾವರ್ತರಸಂತಥಾ ॥**
**ತ್ರ್ಯೂಷಣಂಚೂರ್ಣಿತಂಚೈವಕಪಿಕಚ್ಛೂಜಟಾರಸಂ ॥ ೧೫೨ ॥**
**ಕೃತ್ವೈಕತ್ರಕ್ಷಿಪೇತ್ಕರ್ಣೇಕರ್ಣಕೀಟಹರಂಪರಂ ॥**

ನುಗ್ಗೆಯಬೇರಿನ ತೊಪ್ಪೆಯರಸ, ಸೂರ್ಯಕಾಂತಿಯ ಸೊಪ್ಪಿನರಸ, ತ್ರ್ಯೂಷಣಚೂರ್ಣ, ತುರಚೆಯಬೇರಿನರಸ, ಇವುಗಳನ್ನು ಒಟ್ಟಿಗೆಕೂಡಿಸಿ ಕಿವಿಯಲ್ಲಿ ಹಾಕಿದಲ್ಲಿ ಕಿವಿಸೇರಿದಹುಳಗಳು ಹೋಗುತ್ತವೆ.

ಇಲ್ಲಿಗೆ ಶಾರ್ಙ್ಗಧರಸಂಹಿತೆಯ ಉತ್ತರಖಂಡದಲ್ಲಿ
ಹನ್ನೊಂದನೆಯ ಅಧ್ಯಾಯ ಸಂಪೂರ್ಣ.

# ಹನ್ನೆರಡನೆಯಅಧ್ಯಾಯವು.

## ಶೋಣಿತಸ್ರಾವ ವಿಧಿ:-

**ಶೋಣಿತಂಸ್ರಾವಯೇಜ್ಜಂತೋರಾಮಯಂಪ್ರಸಮೀಕ್ಷ್ಯಚ ॥**
**ಪ್ರಸ್ಥಂಪ್ರಸ್ಥಾರ್ಧಕಂವಾಪಿಪ್ರಸ್ಥಾರ್ಧಾರ್ಧಮಥಾಪಿವಾ ॥ ೧ ॥**
**ಶರತ್ಕಾಲೇಸ್ವಭಾವೇನಕುರ್ಯಾದ್ರಕ್ತಸ್ರುತಿಂನರಃ ॥**
**ತ್ವಗ್ದೋಷಗ್ರಂಥಿಶೋಥಾದ್ಯಾನಶ್ಯೇರಕ್ತಸ್ರುತೇರ್ಯತಃ ॥ ೨ ॥**

ಶೋಣಿತಸ್ರಾವವಿಧಿ ಎಂದರೆ ಕೆಟ್ಟರಕ್ತವನ್ನು ಶರೀರದಿಂದ ಹೊರಕ್ಕೆ ಹೊರಡಿಸುವ ಕ್ರಮಕ್ಕೆ ಹೆಸರು. ಶರೀರದಲ್ಲಿ ರಕ್ತವುಕೆಟ್ಟು ದೇಹದಭಾಗಗಳಲ್ಲಿ ನಿಂತು ಚರ್ಮರೋಗಗಳು ಬಾವುಮುಂತಾದವುಗಳೆಲ್ಲಾ ಉಂಟಾಗುತ್ತವೆ ಅಂತಹ ಸಂದರ್ಭದಲ್ಲಿ ರೋಗನಿವೃತ್ತಿಗೋಸ್ಕರವಾಗಿ ಕೆಟ್ಟುಹೋಗಿ ದೇಹದಲ್ಲಿ ನಿಂತಿರುವ ರಕ್ತವನ್ನು ಹೊರಕ್ಕೆ ತೆಗೆಯುವುದು ಒಂದುಚಿಕಿತ್ಸೆಯನ್ನು ವೈದ್ಯನು ಅನುಸರಿಸಬಹುದು. ದೇಹದಿಂದ ಎಷ್ಟುರಕ್ತವನ್ನು ಹೊರಕ್ಕೆ ತೆಗೆಯುವುದರಿಂದ ರೋಗಿಗೆ ಅಪಾಯವಿಲ್ಲ. ಎಂದರೆ ರೋಗದ ಪ್ರಾಬಲ್ಯವನ್ನು ನೋಡಿಕೊಂಡು ಅದಕ್ಕೆ ಅನುಗುಣವಾಗಿ ವೈದ್ಯನು ಒಂದುಪ್ರಸ್ಥ, ಅರ್ಧಪ್ರಸ್ಥ, ಕಾಲುಪ್ರಸ್ಥ, ಈ ರೀತಿಯ ಕುಶಲತೆಯಿಂದ ಅಪಾಯವಾಗದಂತೆ ರಕ್ತಸ್ರಾವಮಾಡಿಸಬೇಕು. ಈ ರಕ್ತಸ್ರಾವರೂಪವಾದ ಚಿಕಿತ್ಸೆಯನ್ನು ಶರದೃತುವಿನಲ್ಲಿಯೇ ಮಾಡತಕ್ಕದ್ದು. ಇದರಿಂದ ತ್ವಗ್ದೋಷಗಳು, ಶರೀರದಲ್ಲಿ ಗ್ರಂಥಿಗಳು, ಶೋಥ, ಇವುಗಳೆಲ್ಲವೂ ಶಮನವಾಗುತ್ತವೆ.

**ಮಧುರಂವರ್ಣತೋರಕ್ತಮತೀತೋಷ್ಣಂತಥಾಗುರು ॥**
**ಶೋಣಿತಂಸ್ನಿಗ್ಧವಿಸ್ರಂಸ್ಯಾದ್ವಿದಾಹಶ್ಚಾಸ್ಯಪಿತ್ತವತ್ ॥ ೩ ॥**
**ವಿಸ್ರತಾದ್ರವತಾರಾಗಶ್ಚಲನಂವಿಲಯಸ್ತಥಾ ॥**
**ಭೂಮ್ಯಾದಿಪಂಚಭೂತಾನಾಮೇತೇರಕ್ತಗುಣಾಸ್ಮೃತಾಃ ॥ ೪ ॥**

ರಕ್ತದ ಸ್ವಭಾವಿಕಗಳಾದ ರಸ ವರ್ಣಗಳನ್ನು ಹೇಳುತ್ತಾನೆ. ರಕ್ತವು ಸ್ವಭಾವತಃ ಸಿಹಿಯಾದದ್ದು. ಅದರ ಸ್ವಭಾವಿಕವಾದ ವರ್ಣವು ತಾವರೆಯ ಹುವ್ವಿನಂತೆಯೂ, ಗುಲಗಂಜಿಯ ಬೀಜದಂತೆಯೂ ಕೆಂಪು ಸ್ಪರ್ಶಮಾಡಿದರೆ ಅಂದರೆ ಮುಟ್ಟಿನೋಡಿದಲ್ಲಿ ಅಷ್ಟುಬಿಸಿಯೂ ಇಲ್ಲ ಅಷ್ಟು ತಣ್ಣಗೂಅಲ್ಲ ಮಧ್ಯಸ್ಥಸ್ವಭಾವ ಗುರುಗುಣಉಳ್ಳದ್ದು ಸ್ವಲ್ಪಜಿಡ್ಡುಳ್ಳದ್ದು ಸ್ವಲ್ಪಮುಟ್ಟಿಗೆ ರಕ್ತದಗಂಧವು ದುರ್ಗಂಧವೇ ಅಂದರೆ ಆಮಗಂಧ ಪಿತ್ತದಲ್ಲಿ ವಿದಾಹಿಗುಣವು ಹೇಗೆ ಇದೆಯೋ ರಕ್ತದಲ್ಲಿ

ಯೂ ಹಾಗೆಯೇಇದೆ. ಅಂದರೆ ಉರಿಯನ್ನುಂಟುಮಾಡುವ ಸ್ವಭಾವವು ಪಿತ್ತ ದಂತೆ ರಕ್ತಕ್ಕೂಉಂಟು. ಈ ರೀತಿಯಾಗಿ ರಕ್ತದಲ್ಲಿರುವ ಗುಣಗಳಮಧ್ಯೆ ಆ ಗಂಧವು ಪೃಥಿವಿಯಗುಣ ದ್ರವವಾಗಿರುವಿಕೆಯು ನೀರಿನಗುಣ ಅದರಲ್ಲಿರತಕ್ಕ ವರ್ಣವು ತೇಜೋಗುಣ ಅದರಲ್ಲಿರತಕ್ಕ ಚಲಿಸತಕ್ಕ ಗುಣವು ವಾಯುವಿನ ಗುಣ ಅದರಲ್ಲಿರುವ ವಿಲಯನಗುಣ ಅಂದರೆ ಕರಗಿ ಇತರ ಪದಾರ್ಥದೊಂದಿಗೆ ಸೇರಿ ಹೋಗುವಗುಣವು ಆಕಾಶದಗುಣ ಈ ರೀತಿಯಾಗಿ ರಕ್ತದಲ್ಲಿ ಪೃಥಿವ್ಯಾದಿ ಪಂಚ ಭೂತಗಳ ಗುಣಗಳೂ ಇವೆ.

ರಕ್ತೇದುಷ್ಟೆವೇದನಾಸ್ಯಾತ್ಪಾಕೋದಾಹಶ್ಚಜಾಯತೇ ॥
ರಕ್ತಮಂಡಲತಾಕಂಡೂಃಶೋಥಶ್ಚಪಿಟಿಕೋದ್ಗಮಃ ॥ ೫ ॥
ವೃದ್ಧೇರಕ್ತಾಂಗನೇತ್ರತ್ವಂಶಿರಾಣಾಂಪೂರಣಂತಥಾ॥
ಗಾತ್ರಾಣಾಂಗೌರವಂನಿದ್ರಾಮದೋದಾಹಶ್ಚಜಾಯತೇ ॥ ೬ ॥
ಕ್ಷೀಣೇಮ್ಲಮಧುರಾಕಾಂಕ್ಷಾಮೂರ್ಛಾಚತ್ವಚಿರೂಕ್ಷತಾ ॥
ಶೈಥಿಲ್ಯಂಚಶಿರಾಣಾಂಸ್ಯಾದ್ವಾತಾದುನ್ಮಾರ್ಗಗಾಮಿತಾ ॥ ೭ ॥
ಅರುಣಂಫೇನಿಲಂರೂಕ್ಷಂಪರುಷಂತನುಶೀಘ್ರಗಂ ॥
ಆಸ್ಕಂದಿಸೂಚಿನಿಸ್ತೋದಂರಕ್ತಂಸ್ಯಾದ್ವಾತದೂಷಿತಂ ॥ ೮ ॥
ಪಿತ್ತೇನಪೀತಂಹರಿತಂನೀಲಂಶ್ಯಾವಂಚವಿಸ್ರಕಂ ॥
ಆಸ್ಕಂದ್ಯುಷ್ಣಂಮಕ್ಷಿಕಾಣಾಂಪಿಪೀಲಾನಾಮನಿಷ್ಟಕಂ ॥ ೯ ॥
ಶೀತಲಂಬಹಲಂಸ್ನಿಗ್ಧಂಗೈರಿಕೋದಕಸನ್ನಿಭಂ ॥
ಮಾಂಸಪೇಶೀಪ್ರಭಂಸ್ಕಂದಿಮಂದಗಂಕಫದೂಷಿತಂ ॥ ೧೦ ॥
ದ್ವಿದೋಷದುಷ್ಟಂಸಂಸೃಷ್ಟಂತ್ರಿದುಷ್ಟಂಪೂತಿಗಂಧಕಂ ॥
ಸರ್ವಲಕ್ಷಣಸಂಯುಕ್ತಂಕಾಂಜಿಕಾಭಂಚಜಾಯತೇ ॥ ೧೧ ॥
ವಿಷದುಷ್ಟಂಭವೇತ್ ಶ್ಯಾವಂನಾಸಿಕೋನ್ಮಾರ್ಗಗಂತಥಾ ॥
ವಿಸ್ರಂಕಾಂಜಿಕಸಂಕಾಶಂಸರ್ವಕುಷ್ಠಕರಂಬಹು ॥ ೧೨ ॥

ದುಷ್ಟರಕ್ತದ ಲಕ್ಷಣಗಳನ್ನು ಹೇಳುತ್ತಾನೆ ಶರೀರಗತವಾದರಕ್ತವು ವಾತಾದಿ ಪ್ರಕೋಪದಿಂದ ದುಷ್ಟವಾದಲ್ಲಿ ಮೈಯಲ್ಲೆಲ್ಲಾ ನೋವು ಉಂಟಾಗು ತ್ತದೆ ವ್ರಣಉಂಟಾಗುವುದು ಮೈಯೆಲ್ಲಾ ಉರಿಯಾಗುವುದು ಶರೀರದ ಮೇಲೆಲ್ಲಾ ರಕ್ತವರ್ಣದ ಮಂಡಲಗಳೇಳುವುದು ನವೆಯುಂಟಾಗುವುದು ಶರೀರ ದಲ್ಲಿ ಬಾಕುಬರುವುದು ಮೈಯಲ್ಲೆಲ್ಲಾ ಗುಳ್ಳೆಗಳೇಳುವುದು ಈ ಲಕ್ಷಣಗಳು ಆಗು ತವೆ ಶರೀರದಲ್ಲಿ ರಕ್ತವು ಅತಿಯಾಗಿ ವೃದ್ಧಿಯಾದಲ್ಲಿ ಮೈಯ್ಯಿ ಮತ್ತು ಕಣ್ಣು

ಇವುಗಳು ಕೆಂಪಗಾಗುವುದು. ರಕ್ತನಾಡಿಗಳಲ್ಲಿ ರಕ್ತವು ತುಂಬಿ ನಾಡಿಗಳು ಮೈಯಲ್ಲೆಲ್ಲಾ ಎದ್ದು ಕಾಣುತ್ತಿರುವುದು ಮೈಭಾರ ಅತಿನಿದ್ರೆ ಒಂದುಬಗೆಯ ಮತ್ತತೆ ಮೈಯುರಿ ಇವುಗಳುಂಟಾಗುತ್ತವೆ. ಶರೀರದಲ್ಲಿ ರಕ್ತವು ಕ್ಷಯಿಸಿದರೆ ಮನುಷ್ಯನಿಗೆ ಹುಳಿ ಮತ್ತು ಸಿಯ್ಯನಮೇಲೆ ಹೆಚ್ಚು ಅಪೇಕ್ಷೆ ಆಗಾಗ್ಯೆ ಮೂರ್ಛೆಯುಂಟಾಗುವುದು ದೇಹದಚರ್ಮ ಒರಟಾಗಿರುವುದು ನಾಡಿಗಳು ಸಡಿಲಬಿದ್ದು ಹೋಗುವುದು ಹೀಗಾಗುತ್ತದೆ. ವಾಯುಪ್ರಕೋಪದಿಂದ ರಕ್ತವು ದುಷ್ಟವಾದರೆ ರಕ್ತವು ಊರ್ಧ್ವಾಧೋಮಾರ್ಗಗಳಿಂದ ಹೊರಬೀಳುವುದು. ರಕ್ತವು ಅರುಣ ವರ್ಣವಾಗಿರುವುದು, ನೊರೆನೊರೆಯಾಗಿರುವುದು, ಜಿಡ್ಡಿಲ್ಲದಿರುವುದು, ಸ್ವಚ್ಛವಾಗಿರುವುದು, ಜಾಗ್ರತೆಯಾಗಿ ಓಡಾಡುವ ಸ್ವಭಾವವುಳ್ಳದ್ದಾಗಿರುವುದು, ಸೂಜಿಯಿಂದ ಚುಚ್ಚಿದಂತೆ ಶರೀರದಲ್ಲಿ ವೇದನೆಯನ್ನುಂಟುಮಾಡುವುದು, ಈ ಲಕ್ಷಣಗಳಿರುತ್ತವೆ ಪಿತ್ತಪ್ರಕೋಪದಿಂದ ರಕ್ತವು ದುಷ್ಟವಾದರೆ ರಕ್ತವು ಕೊಂಚ ಹಳದಿಯ ಬಣ್ಣವಾಗಿಯೂ, ಹಸರು, ನೀಲ, ಇಂತಹ ವರ್ಣಗಳುಳ್ಳದ್ದಾಗಿಯೂ, ಆಮ ಗಂಧ ಉಳ್ಳದ್ದಾಗಿಯೂ, ಚಲನರಹಿತವಾಗಿಯೂ, ಬಿಸಿಯಾಗಿಯೂ ಇರುತ್ತದೆ. ಪಿತ್ತಪ್ರಕೋಪದಿಂದ ದುಷ್ಟವಾದ ರಕ್ತವು ತಣ್ಣಗಿರುತ್ತದೆ. ಅತಿಯಾಗಿ ಜಿಡ್ಡಾಗಿರುತ್ತದೆ, ಕಾವಿಯಕಲ್ಲನ್ನು ತೊಳೆದ ನೀರಿನ ವರ್ಣವಿರುತ್ತದೆ, ಮಾಂಸದ ಗ್ರಂಥಿಯು ಹಾಗೆ ಗಟ್ಟಿಯಾಗಿರುತ್ತದೆ, ರಕ್ತವನ್ನು ಹೊರಕ್ಕೆಬಿಟ್ಟರೆ ಜಾಗ್ರತೆಯಾಗಿ ಓಡಾಡುವುದಿಲ್ಲ, ಮಂದವಾದ ಗತಿಯುಳ್ಳದ್ದಾಗಿರುತ್ತದೆ, ಎರಡೆರಡು ದೋಷಗಳ ಪ್ರಕೋಪದಿಂದ ದುಷ್ಟವಾದ ರಕ್ತದಲ್ಲಿ ಎರಡೆರಡು ದೋಷಗಳ ಲಕ್ಷಣಗಳೂ ಕಾಣುತ್ತಿರುತ್ತವೆ ತ್ರಿದೋಷಗಳ ಪ್ರಕೋಪವೂ ಉಂಟಾಗಿ ರಕ್ತವು ಕೆಟ್ಟಲ್ಲಿ ರಕ್ತದ ವರ್ಣವು ಕಾಂಜಿಕವೆಂಬ ಹುಳಿನೀರಿನ ವರ್ಣವುಳ್ಳದ್ದಾಗಿರುತ್ತದೆ. ವಿಷ ಸಂಪರ್ಕದಿಂದ ದುಷ್ಟವಾದ ರಕ್ತವು ಹಸರು ಮತ್ತು ಕಪ್ಪು ಈ ರೀತಿ ಮಿಶ್ರವರ್ಣವುಳ್ಳದ್ದಾಗಿರುತ್ತದೆ. ಮೂಗು, ಕಿವಿ, ಮೊದಲಾದ ಊರ್ಧ್ವಮಾರ್ಗಗಳಿಂದ ಹೊರಬೀಳುವ ಸ್ವಭಾವವುಳ್ಳದ್ದಾಗಿರುತ್ತದೆ, ಕಾಂಜಿಕ ದ್ರವದಹಾಗಿದ್ದುಕೊಂಡು ಸಮಸ್ತ ವಿಧವಾದ ಕುಷ್ಠರೋಗವನ್ನೂ ಹುಟ್ಟಿಸುತ್ತವೆ.

ಇಂದ್ರಗೋಪಪ್ರಭಂಜ್ಞೇಯಂಪ್ರಕೃತಿಸ್ಥಮಸಂಹತಂ ॥

ಯಾವ ವಿಧವಾದ ದೋಷಗಳಿಂದಲೂ, ದುಷ್ಟವಾಗದ ರಕ್ತವು ಇಂದ್ರಗೋಪದಹಾಗೆ ಅಚ್ಚ ಕೆಂಪಗೆ ಅತಿ ಗಟ್ಟಿಯಾಗದೆ ಇರುತ್ತದೆ.

ಶೋಫೇದಾಹೇಂಗಪಾಕೇಚರಕ್ತವರ್ಣೇಸೃಜಃಸ್ರುತೌ ॥ ೧೩ ॥
ವಾತರಕ್ತೇತಥಾಕುಷ್ಠೇಸಪೀಡೇದುರ್ಜಯೇನಿಲೇ ॥

ಪಾಣಿರೋಗೇಶ್ಲೀಪದೇಚವಿಷದುಷ್ಟೇಚಶೋಣಿತೇ ॥ ೧೪ ॥
ಗ್ರಂಥ್ಯರ್ಬುದಾಪಚೀಕ್ಷುದ್ರರೋಗರಕ್ತಾಧಿಮಂಥಿಷು ॥
ವಿದಾರೀಸ್ತನರೋಗೇಷುಗಾತ್ರಾಣಾಂಸಾದಗೌರವೇ ॥ ೧೫ ॥
ರಕ್ತಾಭಿಷ್ಯಂದತಂದ್ರಾಯಾಂಪೂತಿಘ್ರಾಣಾಸ್ಯದೇಹಕೇ ॥
ಯಕೃತ್ಪ್ಲೀಹವಿಸರ್ಪೇಷುವಿದ್ರಧೌಪಿಟಕೋದ್ಗಮೇ ॥ ೧೬ ॥
ಕರ್ಣೋಷ್ಠಘ್ರಾಣವಕ್ತ್ರಾಣಾಂಪಾಕೇದಾಹೇಶಿರೋರುಜಿ ॥
ಉಪದಂಶೇರಕ್ತಪಿತ್ತೇರಕ್ತಸ್ರಾವಃಪ್ರಶಸ್ಯತೇ ॥ ೧೭ ॥
ಏಷುರೋಗೇಷುಶೃಂಗೈರ್ವಾಜಲೌಕಾಲ ಬುಕೈರಪಿ ॥
ಅಥವಾಪಿಶಿರಾಮೋಕ್ಷೈಃಕುರ್ಯಾದ್ರಕ್ತಸ್ರುತಿಂನರಃ ॥ ೧೮ ॥

ಯಾವ ಯಾವ ರೋಗಗಳಲ್ಲಿ ದುಷ್ಟವಾದ ರಕ್ತವನ್ನು ಶರೀರದಿಂದಹೊರಡಿಸ ಬಹುದೆಂಬುದನ್ನು ಹೇಳುತ್ತಾನೆ:—ಶೋಧರೋಗದಲ್ಲಿ ಅಂದರೆ ವ್ರಣಶೋಥದಲ್ಲಿ, ದಾಹರೋಗದಲ್ಲಿ, ಅಂಗಪಾಕ ರೋಗದಲ್ಲಿ, ಕೇವಲ ರಕ್ತಪಿತ್ತ ರೋಗದಲ್ಲಿ ವಾತರಕ್ತ, ಕುಷ್ಟ, ವ್ಯಥೆ, ನೋವು, ಇವುಗಳಿಂದ ಕೂಡಿರುವ ಅಸಾಧ್ಯವಾದ ವಾತ ರೋಗದಲ್ಲಿ, ಕೋಳಿಗೆಬರತಕ್ಕ ರೋಗಗಳು ಶ್ಲೀಪದರೋಗ, ಅಂದರೆ ಬೋದುಗಾಲು ರೋಗದಲ್ಲಿ, ರಕ್ತವು ವಿಷದೋಷದಿಂದ ದುಷ್ಟವಾಗಿರುವಾಗ್ಯೆ ಗ್ರಂಥಿರೋಗ, ಅರ್ಬುದರೋಗ, (ಬಾವು) ಅಪಚೀ ಅಂದರೆ ಒಂದುವಿಧವಾದ ವ್ರಣರೋಗ ಕ್ಷುದ್ರರೋಗಗಳು, ಅಂದರೆ ಚರ್ಮರೋಗಗಳು, ರಕ್ತಾಧಿಮಂಥ ರೋಗ, ವಿದಾರಿಎಂಬರೋಗ, ಸ್ತನರೋಗಗಳು, ಅಂದರೆ ಅಲ್ಲಿ ಏಳತಕ್ಕವ್ರಣಗಳು, ಅಂಗಸಾದ, ಅಂಗಗೌರವ, ಅಂದರೆ ಮೈಭಾರ, ರಕ್ತಾಭಿಷ್ಯಂದ, ತಂದ್ರಾರೋಗ, ಮೂಗು, ಬಾಯಿ, ದೇಹ, ಇವುಗಳಲ್ಲಿ ದುರ್ವಾಸನೆ ಬರುವುದು, ಕರ್ಣಪಾಕ, ಓಷ್ಠಪಾಕ, ನಾಸಾಪಾಕ, ಮುಖಪಾಕ, ದಾಹ, ಶಿರೋರೋಗ, ಯಕೃದ್ರೋಗ, ಪ್ಲೀಹರೋಗ, ವಿಸರ್ಪರೋಗ, ವಿದ್ರಧಿರೋಗ, ಪಿಟಕಾರೋಗ, (ಚರ್ಮರೋಗಗಳು)ಉಪದಂಶ ಅಂದರೆ ಮೇಹದಿಂದ ಬರುವಹುಣ್ಣು ರಕ್ತಪಿತ್ತ ರೋಗ ಈ ರೋಗಗಳಲ್ಲಿ ಗೋಶೃಂಗಗಳಿಂದಲಾಗಲಿ ಜಿಗಳೆಗಳನ್ನು ಕಚ್ಚಿಸಿಯಾಗಲಿ ರಕ್ತಸ್ರಾವ ಮಾಡಿಸಬಹುದಾದ ನರಗಳನ್ನು ಹರಿದಾಗಲಿ ರಕ್ತಸ್ರಾವಮಾಡಿಸಬೇಕು. ಈ ಪ್ರಕ್ರಿಯೆಯು ಆಯುರ್ವೇದ ವೈದ್ಯರಿಗೆ ಅನುಭವ ವಿಲ್ಲದ್ದರಿಂದ ಅನುಭವಿಕ ವೈದ್ಯರ ಸಹಾಯದಿಂದ ತಿಳಿದುಕೊಂಡು ನಡೆಯಿಸಬೇಕಾದ್ದು.

ನಕುರ್ವೀತಸಿರಾಮೋಕ್ಷಂಕೃಶಸ್ಯಾತಿವ್ಯವಾಯಿನಃ ॥
ಕ್ಲೀಬಸ್ಯಭೀರೋರ್ಗರ್ಭಿಣ್ಯಾಃಸೂತಿಕಾಪಾಂಡುರೋಗಿಣಾಂ॥೧೯॥

ಪಂಚಕರ್ಮವಿಶುದ್ಧಸ್ಯಪೀತಸ್ನೇಹಸ್ಯಚಾರ್ಶಸಾಂ ॥
ಸರ್ವಾಂಗಶೋಥಯುಕ್ತಾನಾಮುದರಶ್ವಾಸಕಾಸಿನಾಂ ॥ ೨೦ ॥
ಛರ್ದ್ಯತೀಸಾರಯುಕ್ತಾನಾಮತಿಸ್ವಿನ್ನತನೋರಪಿ ॥
ಊನಷೋಡಶವರ್ಷಸ್ಯಗತಸಪ್ತತಿಕಸ್ಯಚ ॥ ೨೧ ॥
ಅಘಾತಸ್ರುತರಕ್ತಸ್ಯಶಿರಾಮೋಕ್ಷೋನಶಸ್ಯತೇ ॥
ಏಷಾಂಚಾತ್ಯಯಿಕೇರೋಗೇಜಲೌಕಾಭಿಸ್ತುನಿರ್ಹರೇತ್ ॥ ೨೨ ॥

ಶಿರಾಮೋಕ್ಷವೆಂದರೆ ನರಗಳನ್ನು ಹರಿದು ರಕ್ತಸ್ರಾವ ಮಾಡಿಸುವುದು ಈ ರೀತಿಯಾದ ಕ್ರಮದಿಂದ ಯಾರಿಗೆ ರಕ್ತಸ್ರಾವ ಮಾಡಿಸಬಾರದೆಂಬುವುದನ್ನು ತಿಳಿಸುತ್ತಾನೆ. ಕೃಷರಾದವರಿಗೆ ಅಂದರೆ ಬಡಕಲ ಶರೀರದವರಿಗೆ ಸ್ತ್ರೀ ಸಮಾಗಮವನ್ನು ಅತಿಯಾಗಿ ಮಾಡಿದವರಿಗೆ, ಷಂಡರಿಗೆ, ಪುಕ್ಕರಿಗೆ ಅಂದರೆ ಹೆದರಿಕೆಯು ಸ್ವಭಾವದವರಿಗೆ ಗರ್ಭಿಣೀಸ್ತ್ರೀಯರಿಗೆ, ಪ್ರಸುವಿಸಿದ ಹೆಂಗಸರಿಗೆ, ಪಾಂಡುರೋಗಿಗಳಿಗೆ, ವೈದ್ಯಶಾಸ್ತ್ರೋಕ್ತಗಳಾದ ಪಂಚಕರ್ಮಗಳನ್ನು ಅನುಸರಿಸಿ ಶುದ್ಧರಾದವರಿಗೆ ಸ್ನೇಹಪಾನಮಾಡಿದವರಿಗೆ, ಮೂಲವ್ಯಾಧಿರೋಗದವರಿಗೆ, ಸಮಸ್ತ ಅವಯವಗಳಲ್ಲಿಯೂ, ಶೋಥೆ ಬಂದವರಿಗೆ ಉದರರೋಗಿಗಳಿಗೆ, ಶ್ವಾಸರೋಗಿಗಳಿಗೆ ಕೆಮ್ಮುಇರುವವರಿಗೆ, ವಮನವಾಗುತ್ತಿರುವವರಿಗೆ, ಅತಿಸಾರರೋಗಿಗಳಿಗೆ, ಅತಿಯಾಗಿ ಬೆವರುವ ಸ್ವಭಾವದವರಿಗೆ, ಹದಿನಾರು ವರುಷಕ್ಕಿಂತ ಕೆಳಗಿನ ವಯಸ್ಸಿನವರಿಗೆ, ಎಪ್ಪತ್ತುವರುಷ ಕಳೆದವರಿಗೆ ಯಾವುದಾದರೂ ಪೆಟ್ಟುಬಿದ್ದು ಶರೀರದಿಂದ ಅತಿಯಾಗಿ ರಕ್ತ ಸ್ರಾವವಾದವರಿಗೆ, ಇಂತವರಿಗೆಲ್ಲಾ ನರವನ್ನುಹರಿದು ರಕ್ತಸ್ರಾವ ಮಾಡಿಸಲೇಬಾರದು. ಇಂತವರಿಗೂ ಕೂಡ ರಕ್ತಸ್ರಾವ ಮಾಡಿಸಲೇಬೇಕಾದ ಅನಿವಾರ್ಯ ರೋಗವಿದ್ದಲ್ಲಿ ಉಪಾಯವಾಗಿ ಜಿಗಳೆಗಳನ್ನು ಕಚ್ಚಿಸಿ ರಕ್ತಸ್ರಾವಮಾಡಿಸಬೇಕು.

ತಥಾಚವಿಷದುಷ್ಟಾನಾಂಶಿರಾಮೋಕ್ಷೋಪಿಶಸ್ಯತೇ ॥
ಗೋಶೃಂಗೇಣಜಲೌಕಾಭಿರಲಾಬುಭಿರಪಿತ್ರಿಧಾ ॥ ೨೩ ॥
ವಾತಪಿತ್ತಕಫೈರ್ದುಷ್ಟಂಶೋಣಿತಂಸ್ರಾವಯೇದ್ಬುಧಃ ॥
ದ್ವಿದೋಷಾಭ್ಯಾಂತುಸಂದುಷ್ಟಂತ್ರಿದೋಷೈರಪಿದೂಷಿತಂ ॥ ೨೪ ॥
ಶೋಣಿತಂಸ್ರಾವಯೇದ್ಯುಕ್ತ್ಯಾಶಿರಾಮೋಕ್ಷೈಃಪದೈರಪಿ ॥
ಗೃಹ್ಣಾತಿಶೋಣಿತಂಶೃಂಗಂದಶಾಂಗುಲಮಿತಂಬಲಾತ್ ॥ ೨೫ ॥
ಜಲೌಕಾಹಸ್ತಮಾತ್ರಂತುತುಂಬೀಚದ್ವಾದಶಾಂಗುಲಂ ॥
ಪದಮಂಗುಲಮಾತ್ರಸ್ಯಶಿರಾಸರ್ವಾಂಗಶೋಧಿನೀ ॥ ೨೬ ॥

ಶೀತೇನಿರನ್ನೇಮೂರ್ಛಾಯಾಂತಂದ್ರಾಭೀತಿಮದಶ್ರಮೈಃ ॥
ಯುತಾನಾಂಸಸ್ರವೇದ್ರಕ್ತಂತಥಾವಿಣ್ಮೂತ್ರಸಂಗಿನಾಂ ॥ ೨೭ ॥

ವಿಷಸಂಪರ್ಕದಿಂದ ರಕ್ತವು ದುಷ್ಟವಾಗಿದ್ದಲ್ಲಿ ರಕ್ತಮೋಕ್ಷ ಮಾಡಿಸುವ ಉಪಾಯಗಳೆಲ್ಲವನ್ನೂ ಮಾಡಿ ರಕ್ತವನ್ನು ಹೊರಪಡಿಸುವುದಲ್ಲದೆ ಸಿರಾಮೋಕ್ಷವೂ ಮಾಡಿಸಿ ರಕ್ತಸ್ರಾವ ಮಾಡಿಸಬಹುದು. ಬುದ್ಧಿಶಾಲಿಯಾದ ವೈದ್ಯನು ವಾತ, ಪಿತ್ತ, ಕಫ, ಇವುಗಳ ಪ್ರಕೋಪದಿಂದ ದುಷ್ಟವಾದ ರಕ್ತವನ್ನು ಕ್ರಮವಾಗಿ ಅಂದರೆ ವಾತಪ್ರಕೋಪದಿಂದ ಕೆಟ್ಟರಕ್ತವನ್ನು ಗೋಶೃಂಗವೆಂಬ ರಕ್ತಸ್ರಾವ ಸಾಧನ ದಿಂದಲೂ, ಪಿತ್ತಪ್ರಕೋಪದಿಂದ ಅಶುದ್ಧವಾದ ರಕ್ತವನ್ನು ಜಿಗಳೆಗಳ ಪ್ರಯೋಗದಿಂದಲೂ, ಶ್ಲೇಷ್ಮಪ್ರಕೋಪದಿಂದ ದೂಷಿತವಾದ ರಕ್ತವನ್ನು ಅಲಾಬು ಎಂಬ ರಕ್ತಸ್ರಾವ ಸಾಧನದಿಂದಲೂ, ಹೊರಹೊರಡಿಸಬೇಕು ಹೀಗೆಯೇ ಎರಡು ದೋಷಗಳ ಪ್ರಕೋಪದಿಂದಲೂ, ತ್ರಿದೋಷಸನ್ನಿಪಾತದಿಂದಲೂ ಕೆಟ್ಟ ರಕ್ತವನ್ನು ಬುದ್ಧಿಶಾಲಿಯಾದ ವೈದ್ಯನು ಸೂಕ್ತತೋರಿದ ಉಪಾಯಾಂತರ ಗಳಿಂದಲೂ, ಶಿರಾಮೋಕ್ಷ. ಗೋಶೃಂಗ, ಜಲೂಕಾ, ಅಲಾಬು, ಮೊದಲಾದ ಸಾಧನಗಳ ಸಹಾಯದಿಂದಲೂ, ಹೊರಹೊರಡಿಸಬೇಕು. ಗೋಶೃಂಗದಿಂದ ರಕ್ತಸ್ರಾವ ಮಾಡಿಸಿದಲ್ಲಿ ಹತ್ತು ಅಂಗುಲ ದೂರದಲ್ಲಿರುವ ರಕ್ತವು ಹೊರ ಬೀಳುತ್ತದೆ ಜಿಗಳೆಯು ದೇಹದಲ್ಲಿ ಒಂದು ಹಸ್ತಪ್ರಮಾಣ ದೂರದಲ್ಲಿರುವ ರಕ್ತವನ್ನು ಹೊರಗೆಡವುತ್ತದೆ ಅಂದರೆ ಹೀರಿಕೊಳ್ಳುತ್ತದೆ, ಅಲಾಬು ಎಂಬ ಸಾಧನವು ಹನ್ನೆರಡಂಗುಲ ದೂರದಿಂದ ರಕ್ತಸ್ರಾವಮಾಡಿಸುತ್ತದೆ, ನರವನ್ನು ಕತ್ತರಿಸಿ ರಕ್ತಸ್ರಾವ ಮಾಡಿಸುವುದಾದರೆ ಕೆಟ್ಟರಕ್ತವೆಲ್ಲವೂ ಹೊರಕ್ಕೆ ಬರುತ್ತದೆ. ಪದವೆಂಬ ರಕ್ತಸ್ರಾವ ಸಾಧನವು ದೇಹದಲ್ಲಿ ಒಂದು ಅಂಗುಲ ಪ್ರದೇಶದಿಂದ ಮಾತ್ರ ರಕ್ತವನ್ನು ಹೊರಡಿಸುತ್ತದೆ. ರಕ್ತವುಶೀತಕಾಲದಲ್ಲಿಯೂ, ಆಹಾರ ವಿಲ್ಲ ದಿರುವಾಗಲೂ, ಮೂರ್ಛಿತನಾಗಿರುವಾಗಲೂ, ತಂದ್ರಾರೋಗ ವಿರುವಾಗಲೂ, ಹೆದರಿದಾಗಲೂ, ಮದದ್ರವ್ಯವನ್ನು ಸೇವಿಸಿ ಮತ್ತನಾಗಿರುವಾಗಲೂ, ಆಯಾಸ ಪಟ್ಟಿರುವಾಗಲೂ, ಮಲಮೂತ್ರಗಳ ಪ್ರವೃತ್ತಿ ನಡೆಯದಿರುವಾಗಲೂ, ಸರಿಯಾಗಿ ಹೊರ ಹೊರಡುವುದಿಲ್ಲ.

ಅಪ್ರವರ್ತಿತರಕ್ತೇಚಕುಷ್ಠತ್ರಿಕಟುಸೈಂಧವೈಃ ॥
ಮರ್ದಯೇದ್ವ್ರಣರಕ್ತಂಚತೇನಸಮ್ಯಕ್‌ಪ್ರವರ್ತತೇ ॥ ೨೮ ॥

ಹಿಂದೆ ಹೇಳಿದ ಉಪಾಯಗಳಿಂದ ರಕ್ತಸ್ರಾವ ಮಾಡಿಸುವಾಗ್ಯೆ ಶೀತಾದಿ ಕಾಲವೈಷಮ್ಯ ಮೊದಲಾದ ದೋಷಗಳಿಂದ ರಕ್ತವು ಹೊರಕ್ಕೆ ಹೊರಡದೆ

ಹೋದರೆ ಘಾಯದ ಮುಖಭಾಗವನ್ನು ಚಂಗಲಕೋಷ್ಠ, ತ್ರಿಕಟು, ಸೈಂಧವ ಲವಣ, ಇವುಗಳ ಚೂರ್ಣವನ್ನು ಮಾಡಿ ಆದರಿಂದ ಚೆನ್ನಾಗಿ ತಿಕ್ಕಬೇಕು. ಆ ರೀತಿಯಾಗಿ ತಿಕ್ಕಿದಲ್ಲಿ ರಕ್ತವು ಚೆನ್ನಾಗಿ ಹೊರಕ್ಕೆ ಹೊರಡುತ್ತದೆ.

ತಸ್ಮಾನ್ನಶೀತೇನಾಪ್ಯುಷ್ಣೇನಸ್ವಿನ್ನೇನಾತಿತಾಪಿಕೇ ॥
ಪೀತ್ವಾಯವಾಗೂಂತೃಪ್ತಸ್ಯಸ್ರಾವಯೇತ್ ಶೋಣಿತಂಬುಧಃ
॥ ೨೯ ॥

ಬುದ್ಧಿವಂತನಾದ ವೈದ್ಯನು ಅತಿ ಶೀತಕಾಲದಲ್ಲಿ ಮತ್ತು ಅತ್ಯುಷ್ಣ ಕಾಲದಲ್ಲಿ ರಕ್ತಸ್ರಾವ ಮಾಡಿಸ ಬಾರದು. ಹಾಗೆಯೇ ಸ್ವೇದನಕರ್ಮ ಅಂದರೆ ಮೈ ಬೆವರಿಸಿಕೊಂಡವರಿಗೂ, ಅತಿಯಾಗಿ ಆಯಾಸಪಟ್ಟು ಬಳಲಿದವರಿಗೂ, ರಕ್ತ ಸ್ರಾವ ಮಾಡಿಸ ಬಾರದು. ರಕ್ತಸ್ರಾವ ಮಾಡಿಸ ತಕ್ಕವರಿಗೆ ಗಂಜಿ ಮೊದಲಾದ ದ್ರವರೂಪವಾದ ಆಹಾರವನ್ನು ಕೊಟ್ಟು ತೃಪ್ತಿಗೊಳಿಸಿ ನಂತರ ರಕ್ತಸ್ರಾವ ಮಾಡಿಸಬೇಕು.

ಅತಿಸ್ವಿನ್ನಸ್ಯೋಷ್ಣಕಾಲೇತಥೈವಾತಿಶಿರಾವ್ಯಧಾತ್ ॥
ಅತಿಪ್ರವರ್ತತೇರಕ್ತಂತತ್ರಕುರ್ಯಾತ್ಪ್ರತಿಕ್ರಿಯಾಂ ॥ ೩೦ ॥
ಅತಿಪ್ರವೃತ್ತೇರಕ್ತೇಚಲೋಧ್ರಸರ್ಜರಸಾಂಜನೈಃ ॥
ಯವಗೋಧೂಮಚೂರ್ಣೈರ್ವಾಧವಧನ್ವನಗೈರಿಕೈಃ ॥ ೩೧ ॥
ಸರ್ಪನಿರ್ಮೋಕಚೂರ್ಣೈರ್ವಾಭಸ್ಮನಾಕ್ಷೌಮವಸ್ತ್ರಯೋಃ ॥
ಮುಖಂವ್ರಣಸ್ಯಬಧ್ವಾಚಶೀತೈಶ್ಚೋಪಚರೇದ್ವ್ರಣಂ ॥ ೩೨ ॥
ವಿಧ್ಯೇದೂರ್ಧ್ವಂಶಿರಾಂತಾಂಚದಹೇತ್ ಕ್ಷಾರೇಣವಾಗ್ನಿನಾ ॥
ವ್ರಣಂಕಷಾಯಸ್ಸಂಧತ್ತೇರಕ್ತಂಸ್ಕಂದಯತೇಹಿಮಂ ॥ ೩೩ ॥
ವ್ರಣಾಸ್ಯಂಪಾಚಯೇತ್ ಕ್ಷಾರೋದಾಹಸ್ಸಂಕೋಚಯೇತ್
ಶಿರಾಂ ॥
ವಾಮಾಂಡಶೋಥೇದಕ್ಷಸ್ಯಕರಸ್ಯಾಂಗುಷ್ಠಮೂಲಜಾಂ ॥ ೩೪ ॥
ದಹೇತ್ ಶಿರಾಂವ್ಯತ್ಯಯೇತುವಾಮಾಂಗುಷ್ಠಶಿರಾಂದಹೇತ್ ॥
ಶಿರಾದಾಹಪ್ರಭಾವೇಣಮುಷ್ಕಶೋಥಃಪ್ರಶಾಮ್ಯತಿ ॥ ೩೫ ॥
ವಿಷೂಚ್ಯಾಂಪಾಣಿದಾಹೇನಜಾಯತೇಗ್ನೇಃಪ್ರದೀಪನಂ ॥
ಸಂಕುಚಂತಿಯತಸ್ತೇನರಸಶ್ಲೇಷ್ಮವಹಾಶ್ಶಿರಾಃ ॥ ೩೬ ॥
ಯದಾವೃದ್ಧಿರ್ಯಕೃತ್ ಪ್ಲೀಹ್ನೋಃಶಿಶೋಸ್ಸಂಜಾಯತೇಸ್ಸೃಜಃ ॥
ತದಾತತ್ ಸ್ಥಾನದಾಹೇನಸಂಕುಚಂತ್ಯಸೃಜಶ್ಶಿರಾಃ ॥ ೩೭ ॥
ರಕ್ತೇದುಷ್ಟೇವಶಿಷ್ಟೇಪಿವ್ಯಾಧಿರ್ನೈವಪ್ರಕುಪ್ಯತಿ ॥
ಅತಸ್ರಾವ್ಯಂಸಾವಶೇಷಂರಕ್ತಂನಾತಿಕ್ರಮೋಹಿತಃ ॥ ೩೮ ॥

ಆಂಧ್ಯಮಾಕ್ಷೇಪಕಂತೃಷ್ಣಾಂತಿಮಿರಂಶಿರಸೋರುಜಂ ॥
ಪಕ್ಷಾಘಾತಂಶ್ವಾಸಕಾಸೌಹಿಕ್ಕಾಂದಾಹಂಚಪಾಂಡುರಾಂ ॥ ೩೯ ॥
ಕುರುತೇತಿಸ್ರುತಂರಕ್ತಂಮರಣಂವಾಕರೋತಿಚ ॥
ದೇಹಸ್ಯೋತ್ಪತ್ತಿರಸೃಜಾದೇಹಸ್ತೇನೈವಧಾರ್ಯತೇ ॥ ೪೦ ॥
ವಿನಾತೇನವ್ರಜೇಜ್ಜೀವೋರಕ್ಷೇದ್ರಕ್ತಮತೋಬುಧಃ ॥

ರಕ್ತಸ್ರಾವ ಮಾಡಿಸುವಾಗ್ಯೆ ಅತಿಯಾಗಿ ರಕ್ತಸ್ರಾವವಾಗಿ ಅಪಾಯ ಸಂಭವಿಸುವ ಸಂದರ್ಭಗಳನ್ನು ಅವುಗಳಿಗೆ ಪ್ರತೀಕಾರಗಳನ್ನೂ ಹೇಳುತ್ತಾನೆ:— ಅತಿಯಾಗಿಬೆವರಿದವರಿಗೆ ಸಿರಾವೇಧಮಾಡಿದರೆ ರಕ್ತಸ್ರಾವವು ಮಿತಿಮೀರಿ ಆಗುತ್ತದೆ ಹಾಗೆಯೇ ಉಷ್ಣಕಾಲದಲ್ಲಿ ಸಿರಾವೇಧ ಮಾಡಿದರೂ ಅತಿಯಾಗಿ ರಕ್ತಸ್ರಾವವಾಗುತ್ತದೆ. ನರವನ್ನು ಹೆಚ್ಚಾಗಿ ಹರಿದರೂ ರಕ್ತಸ್ರಾವವು ಅತಿಯಾಗಿಯೇ ಆಗುತ್ತದೆ. ಈ ಕಾರಣಗಳಿಂದ ಅತಿಯಾಗಿ ರಕ್ತವು ಸ್ರಾವವಾಗಲಾರಂಭಿಸಿದರೆ ಆಗ್ಯೆ ಅದಕ್ಕೆ ಪ್ರತೀಕಾರಮಾಡಿ ರಕ್ತಸ್ರಾವವನ್ನು ತಡೆಯಬೇಕು. ರಕ್ತಸ್ರಾವವನ್ನು ನಿಲ್ಲಿಸಬಹುದಾದ ಕೆಲವು ಸಾಮಾನ್ಯ ಯೋಗಗಳನ್ನು ಹೇಳುತ್ತಾನೆ:—ಪತಂಗದಚಕ್ಕೆ, ರಾಳ, ರಸಾಂಜನ, ಯವೆ ಎಂಬ ಧಾನ್ಯ, ಗೋಧಿ, ಧವವೆಂಬ ಮರವ ತೊಗಟೆ ಧನ್ವನವೆಂಬ ಅಪ್ರಸಿದ್ಧ ಮೂಲಿಕೆ, ಕಾವಿಯ ಕಲ್ಲು, ಹಾವಿನ ಪರೆ, ರೇಷ್ಮೆ ಬಟ್ಟೆಯನ್ನು ಸುಟ್ಟ ಮಸಿ, ಇವುಗಳಲ್ಲಿ ಯಾವ ವಸ್ತು ಆ ಕಾಲದಲ್ಲಿ ಸಿಕ್ಕಿದರೂ ಸರಿಯೆ, ಅದನ್ನು ನುಣ್ಣಗೆ ಪುಡಿಮಾಡಿ ಆ ಪುಡಿಯಿಂದ ರಕ್ತಸ್ರಾವ ವಾಗುತ್ತಿರುವ ನರದ ಮುಖ ಭಾಗವನ್ನು ಬೆರಳಿನಿಂದ ಒತ್ತಿ ಹಿಡಿಯಬೇಕು. ವ್ರಣಕ್ಕೆ ಶೈತ್ಯೋಪಚಾರ ಮಾಡಬೇಕು, ಇಷ್ಟಕ್ಕೂ ರಕ್ತಸ್ರಾವ ಕಡಮೆ ಯಾಗದಿದ್ದಲ್ಲಿ ರಕ್ತಸ್ರಾವ ವಾಗುತ್ತಿರುವ ಭಾಗಕ್ಕಿಂತ ಹಿಂಭಾಗದಲ್ಲಿ ಅದೇ ನರವನ್ನು ಇನ್ನೊಂದು ಕಡೆಯಲ್ಲಿ ಕತ್ತರಿಸಿ ಅಲ್ಲಿ ರಕ್ತ ಹೊರಡುವಂತೆ ಮಾಡಿ ಇಲ್ಲಿ ರಕ್ತವನ್ನು ನಿಲ್ಲಿಸುವುದಕ್ಕೆ ಪ್ರಯತ್ನ ಪಡಬೇಕು. ಅಥವಾ ರಕ್ತಸ್ರಾವ ವಾಗುತ್ತಿರುವ ನರದ ಮುಖವನ್ನು ಕ್ಷಾರಗಳಿಂದಲಾಗಲಿ, ಬೆಂಕಿಯಿಂದಲಾಗಲಿ' ಸುಡಬೇಕು. ಹೀಗೆಮಾಡಿದರೂ ಸ್ರಾವವು ನಿಲ್ಲುತ್ತದೆ. ಹಿಂದೆ ಹೇಳಿದ ಉಪಾಯಗಳಲ್ಲಿ ಕಷಾಯ ಅಂದರೆ ಒಗರು ರಸವುಳ್ಳ ಚೂರ್ಣ ಗಳಿಂದ ವ್ರಣವನ್ನು ಒತ್ತಿ ಹಿಡಿದರೆ ಅದು ರಕ್ತಸ್ರಾವ ವಾಗತಕ್ಕ ದ್ವಾರವನ್ನು ಬಂದು ಮಾಡುತ್ತದೆ. ಶೀತೋಪಚಾರವು ರಕ್ತಸ್ರಾವವನ್ನು ಮಾತ್ರನಿಲ್ಲಿಸುತ್ತದೆ. ಕ್ಷಾರವನ್ನು ವ್ರಣಕ್ಕೆ ಹಾಕಿದರೆ ವ್ರಣಮುಖದಲ್ಲಿ ಪಾಕವನ್ನುಂಟುಮಾಡಿ ರಕ್ತಸ್ರಾವವನ್ನು ನಿಲ್ಲಿಸುತ್ತದೆ. ಸುಡೋಣವು ನರವನ್ನೇ ಒತ್ತಿಸಿ ಅದರಿಂದ ರಕ್ತಸ್ರಾವವನ್ನು ನಿಲ್ಲಿಸುತ್ತದೆ. ಹೀಗೆ ಯಾವದಾದರೂ ಉಪಾಯದಿಂದ ಅತಿಯಾಗಿ

ರಕ್ತಸ್ರಾವ ವಾಗುವುದನ್ನು ನಿಲ್ಲಿಸಬೇಕು ಇನ್ನೂ ಕೆಲವು ರೋಗಗಳಲ್ಲಿ ಅಗ್ನಿ ಚಿಕಿತ್ಸೆಯು ಫಲಕಾರಿಯಾಗುತ್ತದೆಂಬುದನ್ನು ಪ್ರಕರಣಾನುರೋಧದಿಂದ ತಿಳಿಸುತ್ತಾನೆ:- ಗಂಡಸಿಗೆ ಬಲಭಾಗದ ತೊಡಿನ ಬೀಜವು ಬಾತುಕೊಂಡರೆ ಪಡಿಸುವ ಸಂದರ್ಭದಲ್ಲಿ ಎಡಭಾಗದ ಕಾಲಿನ ಹೆಬ್ಬೆರಳಿನ ಬುಡದಲ್ಲಿರುವ ನರವನ್ನು ಕಾದ ಸಲಾಕಿಯಿಂದ ಸುಟ್ಟರೆ ಆ ವ್ಯಾಧಿಯು ಗುಣವಾಗುತ್ತದೆ. ಅಜೀರ್ಣದಿಂದ ಹುಟ್ಟತಕ್ಕ ವಿಷೂಚಿ ಮೊದಲಾದ ಬೇದಿಯಾಗತಕ್ಕ ಜಾಡ್ಯಗಳಲ್ಲಿ ಅಂಗೈಗೆ ಬರೆ ಕೊಟ್ಟಲ್ಲಿ ಜಠರಾಗ್ನಿಯು ವೃದ್ಧಿಯಾಗಿ ಆ ರೋಗವು ಶಮನವಾಗುತ್ತದೆ. ಮಕ್ಕಳಿಗೆ ಯಕೃತ್ ಮತ್ತು, ಪ್ಲೀಹಗಳು ದೊಡ್ಡವಾಗಿ ಅದರಿಂದ ಉಂಟಾಗತಕ್ಕ ಉದರ ರೋಗಗಳಿಗೆ ದೇಹದ ಹೊರಭಾಗದಲ್ಲಿ ಆಯಾ ಭಾಗದಲ್ಲಿಯೇ ಕಾದ ಸಲಾಕಿಗಳಿಂದ ಚಿಟಿಕೆ ಹಾಕಿದಲ್ಲಿ ಆ ರೋಗಗಳು ಶಾಂತವಾಗುತ್ತವೆ. ರಕ್ತಸ್ರಾವ ವಿಷಯದ ಕೆಲವು ನಿಯಮಗಳನ್ನು ಹೇಳುತ್ತಾನೆ:— ಅತಿಯಾಗಿ ರಕ್ತಸ್ರಾವ ಮಾಡಿಸಬಾರದು. ಕೊಂಚಮಾತ್ರ ಕೆಟ್ಟ ರಕ್ತವು ದೇಹದಲ್ಲಿ ಉಳಿದರೂ ರೋಗಶಾಂತಿ ಯೇನೋ ಆಗೇ ಆಗುತ್ತದೆ. ಅದರಿಂದ ಬಾಧೆಯಿಲ್ಲ. ದುಷ್ಟರಕ್ತವೆಲ್ಲವೂ ಹೊರಟುಹೋಗಲಿ ಎಂಬ ಅಭಿಪ್ರಾಯದಿಂದ ರಕ್ತಸ್ರಾವ ಮಾಡಿಸುವ ಸಂದರ್ಭದಲ್ಲಿ ಒಂದುವೇಳೆ ಮಿತಿಮೀರಿ ರಕ್ತಸ್ರಾವವಾದರೆ ಅದರಿಂದ ಅಂಧತ್ವ ಅಂದರೆ ಕುರುಡು, ಆಕ್ಷೇಪಕ ವೆಂಬ ವಾತರೋಗ, ತೃಷ್ಣಾರೋಗ, ತಿಮಿರ ರೋಗ, ಶಿರೋವೇದನೆ ಅಂದರೆ ತಲೆನೋವು, ಶೂಲೆ ಮೊದಲಾದವುಗಳು, ಪಾರ್ಶ್ವವಾಯು, ವುಬ್ಬಸ, ಕೆಮ್ಮು, ಬಿಕ್ಕಳಿಕೆ ವೈಯ್ಯಾರಿ, ಪಾಂಡುರೋಗ, ಕೊನೆಗೆ ಮರಣ ಇವುಗಳೆಲ್ಲವೂ ಸಂಭವಿಸಬಹುದು. ಮನುಷ್ಯ ದೇಹವು ಪ್ರಾರಂಭದಲ್ಲಿ ಹುಟ್ಟುವುದೂ ರಕ್ತದಿಂದ, ಅದು ಬದುಕಿರುವುದೂ ರಕ್ತದಿಂದಲೇ, ಅಂದರೆ ಪ್ರಾಣಧಾರಣೆಯು ರಕ್ತದಿಂದಲೆ: ಆದಹಾಗಾಯಿತು. ಅಂದಮೇಲೆ ಅಷ್ಟುಮುಖ್ಯವಾದ ರಕ್ತವು ಅತಿಯಾಗಿ ದೇಹದಿಂದ ಸ್ರಾವವಾಯಿತೆಂದರೆ ಮನುಷ್ಯನು ಸಾಯುವುದರಲ್ಲಿ ಆಶ್ಚರ್ಯವೇನೂ ಇಲ್ಲ ಆದ್ದರಿಂದ ಬುದ್ಧಿವಂತನಾದ ವೈದ್ಯನು ಹೇಗೂ ದೇಹದಿಂದ ಅತಿಯಾಗಿ ರಕ್ತ ಹೋಗಗೊಡಬಾರದು.

ಶೀತೋಪಚಾರೈಃ ಕುಪಿತೇಸ್ರುತರಕ್ತಸ್ಯಮಾರುತೇ ॥ ೪೧ ॥
ಕೋಷ್ಣೇನಸರ್ಪಿಷಾಶೋಥಂಸವ್ಯಥಂಪರಿಷೇಚಯೇತ್ ॥
ಕ್ಷೀಣಸ್ಯೈಣಶಶೋರಭ್ರಹರಿಣಚ್ಛಾಗಮಾಂಸಜಃ ॥ ೪೨ ॥
ರಸಃಸಮುಚಿತಃಪಾನೇಕ್ಷೀರಂವಾಷಷ್ಟಿಕಾಹಿತಾಃ ॥

ರಕ್ತಸ್ರಾವ ಮಾಡಿಸುವಾಗ್ಯೆ ರಕ್ತಸ್ರಾವವು ನಿಲ್ಲುವುದಕ್ಕಾಗಿ ಶೈತ್ಯೋಪಚಾರ ಮಾಡೋಣದರಿಂದ ಒಂದುವೇಳೆ ವಾತಪ್ರಕೋಪ ವಾದಲ್ಲಿ ಶೋಥದ

ಮೇಲೆ ಬಿಸಿಯಾದ ಅಂದರೆ ಸುಖೋಷ್ಣವಾದ ತುಪ್ಪವನ್ನು ಸುರಿಯಬೇಕು. ರಕ್ತಸ್ರಾವ ಮಾಡಿಸುವಾಗ್ಯೆ ಮಿತಿಮೀರಿ ರಕ್ತಸ್ರಾವವಾಗಿ ಅದರಿಂದ ಮನುಷ್ಯನು ಕ್ಷೀಣನಾದಲ್ಲಿ ಮೊಲ, ಕುರಿ, ಜಿಂಕೆ, ಆಡು, ಇವುಗಳ ಮಾಂಸದ ರಸವನ್ನು ಕುಡಿಯುವುದಕ್ಕೆ ಕೊಡುವುದಲ್ಲದೆ ಅರವತ್ತು ದಿವಸಗಳಿಗೆ ಬೆಳೆಯುವ ಭತ್ತದ ಅಕ್ಕಿಯ ಅನ್ನವನ್ನು ಮತ್ತು ಹಸುವಿನ ಹಾಲನ್ನು ಸಹ ಭೋಜನಕ್ಕೆ ಬಡಿಸಬೇಕು.

**ಪೀಡಾಶಾಂತಿರ್ಲಘುತ್ವಂಚವ್ಯಾಧೇರುದ್ರೇಕಸಂಕ್ಷಯಃ ॥ ೪೩ ॥**
**ಮನಸ್ಸ್ವಾಸ್ಥ್ಯಂಭವೇಚ್ಚಿಹ್ನಂಸಮ್ಯಗ್ವಿಸ್ರಾವಿತೇಸೃಜಿ ॥**

ರಕ್ತಸ್ರಾವವು ಚನ್ನಾಗಿ ಮಾಡಲ್ಪಟ್ಟಿರುವುದರ ಲಕ್ಷಣಗಳೇನೆಂದರೆ ವ್ಯಥೆ ಕಡಿಮೆ ಯಾಗುವುದು, ಶೋಥವಿರುವ ಭಾಗವು ಹಗುರವಾಗುವುದು, ವ್ಯಾಧಿಯ ವೇಗವು ಕಡಿಮೆಯಾಗಿ ಕಾಣುತ್ತಾ ಬಹುವುದು, ಮನಸ್ಸುಸ್ವಸ್ಥವಾಗಿರುವುದು.

**ವ್ಯಾಯಾಮಮೈಥುನಕ್ರೋಧಶೀತಸ್ನಾನಪ್ರವಾತಕಾನ್ ॥ ೪೪ ॥**
**ಏಕಾಶನಂದಿವಾಸ್ವಪ್ನಂಕ್ಷಾರಾಮ್ಲಕಟುಭೋಜನಂ ॥**
**ಶೋಕಂವಾದಮಜೀರ್ಣಂಚತ್ಯಜೇದಾಬಲದರ್ಶನಾತ್ ॥ ೪೫ ॥**

ರಕ್ತಸ್ರಾವ ಮಾಡಿಸಿಕೊಂಡು ಆದಮೇಲೆ ದೇಹದಲ್ಲಿ ಚನ್ನಾಗಿ ಶಕ್ತಿ ಕಾಣುವ ವರವಿಗೂ, ವ್ಯಾಯಾಮ ಮಾಡುವುದನ್ನು ಬಿಡಬೇಕು. ಸ್ತ್ರೀಸಂಗ ವನ್ನು ಬಿಡಬೇಕು ಹೆಚ್ಚು ಉಪ್ಪು, ಹುಳಿ, ಖಾರ, ಇವುಗಳನ್ನು ತಿನ್ನುವು ದನ್ನು ಬಿಡಬೇಕು. ಏಕಭುಕ್ತ ಮಾಡಬಾರದು, ಹಗಲು ಮಲಗಬಾರದು, ಅತಿಯಾಗಿ ಸಿಟ್ಟು ಮಾಡಬಾರದು, ತಣ್ಣೀರಿನಲ್ಲಿ ಸ್ನಾನ ಮಾಡಬಾರದು, ಹೆಚ್ಚಿಗೆ ಗಾಳಿಯಲ್ಲಿ ತಿರುಗಬಾರದು, ದುಃಖ ಪಡಬಾರದು, ಯಾರೊಡನೆಯೂ ಹೆಚ್ಚಿನ ವಾದವಿವಾದಗಳನ್ನು ಮಾಡಬಾರದು, ಅಜೀರ್ಣವಾಗುವಂತೆ ಭೋಜನ ಮಾಡುವುದನ್ನು ಬಿಟ್ಟು ಬಿಡಬೇಕು.

ಇಲ್ಲಿಗೆ ಹನ್ನೆರಡನೆಯ ಅಧ್ಯಾಯ ಸಂಪೂರ್ಣ.

---

## ತ್ರಯೋದಶಾಧ್ಯಾಯ.

ಮುಂದೆ ನೇತ್ರಪ್ರಸಾದನಕರ್ಮವನ್ನು ಹೇಳುತ್ತಾನೆ—

**ಸೇಕಆಶ್ಚ್ಯೋತನಂಪಿಂಡೀಬಿಡಾಲಸ್ತರ್ಪಣಂತಥಾ ॥**
**ಪುಟಪಾಕೋಂಜನಂಚೈಭಿಃಕಲ್ಪೈರ್ನೇತ್ರಮುಪಾಚರೇತ್ ॥ ೧ ॥**

ಹಿಂದಿನ ಅಧ್ಯಾಯಗಳಲ್ಲಿ ಸಾಮಾನ್ಯವಾಗಿ ಎಲ್ಲಾರೋಗಗಳಿಗೂ, ಸಾಮಾನ್ಯತಃ ಸಂಕ್ಷೇಪವಾಗಿ ಚಿಕಿತ್ಸೆಗಳನ್ನೆಲ್ಲಾ ಹೇಳಿರುತ್ತಾರೆ. ಈ ಕೊನೆಯ ಅಧ್ಯಾಯದಲ್ಲಿ ಮನುಷ್ಯ ಶರೀರದಲ್ಲಿ ಪ್ರಧಾನೇಂದ್ರಿಯವಾದ ನೇತ್ರೇಂದ್ರಿಯ ಚಿಕಿತ್ಸೆಯನ್ನು ಹೇಳುತ್ತಾನೆ:— ಸೇಕ, ಆಶ್ಚ್ಯೋತನ, ಪಿಂಡೀ, ಬಿಡಾಲ, ತರ್ಪಣ ಪುಟಪಾಕ, ಅಂಜನ ಎಂಬದಾಗಿ ನೇತ್ರರೋಗಗಳಿಗೆ ಏಳುವಿಧವಾಗಿ ಚಿಕಿತ್ಸೆಗಳಿವೆ. ಇವುಗಳ ಸ್ವರೂಪವನ್ನು ಮುಂದೆ ಹೇಳುತ್ತಾನೆ. ಈ ಚಿಕಿತ್ಸೆಗಳಿಂದ ರೋಗಯುಕ್ತಗಳಾದ ನೇತ್ರಗಳನ್ನು ಚಿಕಿತ್ಸಿಸಬೇಕು.

ಸೇಕಸ್ತುಸೂಕ್ಷ್ಮಧಾರಾಭಿಸ್ಸರ್ವಸ್ಮಿನ್ ನಯನೇಹಿತಃ ॥
ಮೀಲಿತಾಕ್ಷಸ್ಯಮರ್ತ್ಯಸ್ಯಪ್ರದೇಯಶ್ಚತುರಂಗುಲಾತ್ ॥ ೨ ॥
ಸಚಾಪಿಸ್ನೇಹನೋವಾತೇರಕ್ತೇಪಿತ್ತೇಚರೋಪಣಃ ॥
ಲೇಖನಶ್ಚಕಫೇಕಾರ್ಯಃತಸ್ಯಮಾತ್ರಾಧುನೋಚ್ಯತೇ ॥ ೩ ॥
ಷಡ್ವಾಕ್ಶತೈಃಸ್ನೇಹನೇಷುಚತುರ್ಭಿಶ್ಚೈವರೋಪಣೇ ॥
ವಾಕ್ಶತೈಶ್ಚತ್ರಿಭಿಃಕಾರ್ಯೋಸೇಕೋಲೇಖನಕರ್ಮಣಿ ॥ ೪ ॥
ಕಾರ್ಯಸ್ತುದಿವಸೇಸೇಕೋರಾತ್ರೌಚಾತ್ಯಯಿಕೇಗದೇ ॥

ರೋಗಿಯನ್ನು ಅಂಗಾತನಾಗಿ ಕಣ್ಣು ಮುಚ್ಚಿಕೊಂಡು ಮಲಗಿಕೊಳ್ಳುವಂತೆ ಹೇಳಿ ದ್ರವರೂಪವಾದ ಔಷಧವನ್ನು ಕಣ್ಣಿನಮೇಲೆ ನಾಲ್ಕು ಅಂಗುಲಎತ್ತರದಿಂದ ಸುರಿಯುವುದಕ್ಕೆ ಸೇಕವೆಂಬದಾಗಿ ಹೆಸರು ಇದು ಸಮಸ್ತ ವಿಧವಾದ ನೆತ್ರ ರೋಗಗಳಲ್ಲಿಯೂ, ಹಿತಕರವಾದದ್ದು. ಈ ಸೇಕವು ಮೂರು ವಿಧವಾಗಿರತ್ತದೆ ಸ್ನೇಹನ, ರೋಪಣ, ಲೇಖನ, ಎಂಬದಾಗಿ, ವಾತಪ್ರಕೋಪದಿಂದ ಉಂಟಾದ ನೇತ್ರರೋಗಗಳಲ್ಲಿ ಸ್ನೇಹನವೆಂಬ ಸೇಕವು ಹಿತಕರವಾದದ್ದು. ಈ ಸ್ನೇಹನವೆಂಬ ಸೇಕಕ್ಕೆ ಹಿತಕರವಾದ ದ್ರವದ್ರವ್ಯವನ್ನು ತುಪ್ಪ, ಮಾಂಸರಸ, ಕೊಬ್ಬು, ಅಸ್ಥಿಗಳಲ್ಲಿರತಕ್ಕ ಒಂದು ಬಗೆಯದ್ರವ, ಇವುಗಳಿಂದಲೂ, ಔಷಧಗಳಿಂದಲೂ, ಸಿದ್ಧಮಾಡಿಕೊಳ್ಳತಕ್ಕದ್ದು. ನೇತ್ರಗತವಾದ ರಕ್ತವು ಪ್ರಕೋಪವಾಗಿದ್ದರೂ, ಪಿತ್ತವು ಪ್ರಕೋಪವಾಗಿದ್ದರೂ, ರೋಪಣವೆಂಬ ಸೇಕಕ್ರಮವನ್ನು ಅನುಸರಿಸಬೇಕು. ಸೇಕಕ್ರಮಕ್ಕೆ ಉಪಯುಕ್ತಗಳಾದ ಔಷಧಗಳನ್ನು ಹೆಂಗಸರ ಎದೆಹಾಲು. ಜಾಗುಪ್ರದೇಶದಲ್ಲಿ ವಾಸಿಸುವ ಮೃಗಳ ಮಾಂಸರಸ, ಜೇನುತುಪ್ಪ, ಹಸುವಿನತುಪ್ಪ, ಕಹಿಯಾದ ಮೂಲಿಕೆಗಳ ರಸ, ಇವುಗಳಿಂದ ಮಾಡಿಕೊಳ್ಳಬೇಕು ನೇತ್ರ ಸ್ಥಾನಗತವಾದ ಕಫವು ಪ್ರಕೋಪಹೊಂದಿದಲ್ಲಿ ಲೇಖನವೆಂಬ ಸೇಕ ಪದ್ಧತಿಯಿಂದ ಚಿಕಿತ್ಸಿಸಬೇಕು. ಇದಕ್ಕೆ ಉಪಯುಕ್ತಗಳಾದ ಔಷಧಗಳನ್ನು ಕಬ್ಬಿಣದ ಪುಡಿ, ತಾಮ್ರದ ಪುಡಿ, ಶಂಖಚೂರ್ಣ, ಪ್ರವಾಳಚೂರ್ಣ, ಸೈಂಧವಲವಣ, ಸಮುದ್ರದ

ನೊರೆಯುಚೂರ್ಣ, ಅನ್ನಭೇದಿ, ಸ್ರೋತೋಂಜನ, ಮೊಸರಿನಕೆನೆ, ಇವುಗಳಿಂದ ಮಾಡಿಕೊಳ್ಳಬೇಕು. ಇಂತಹ ಚಿಕಿತ್ಸೆಗಳನ್ನು ಎಷ್ಟು ಹೊತ್ತುಮಾಡಬೇಕು ಅಂದರೆ ಈ ರೀತಿಯಲ್ಲಿ ಪ್ರಯೋಗಮಾಡಿದ ಔಷಧಿಯನ್ನು ಕಣ್ಣಿನಲ್ಲಿ ಎಷ್ಟು ಹೊತ್ತು ನಿಲ್ಲಿಸಿಕೊಳ್ಳಬೇಕು ಎಂಬ ವಿಷಯಗಳನ್ನು ಹೇಳುತ್ತಾನೆ. ಸ್ನೇಹವೆಂಬ ಸೇಕವನ್ನು ಆರು ನೂರು ವಾಕ್ಯಗಳ ಕಾಲಕಣ್ಣಿನಮೇಲೆ ನಿಲ್ಲಿಸಿಕೊಳ್ಳಬೇಕು. ಅಂದರೆ ಆರುನೂರುಅಕ್ಷರಗಳನ್ನು ಉಚ್ಚಾರಣೆ ಮಾಡುವಷ್ಟು ಕಾಲಕಣ್ಣಿನಮೇಲೆ ನಿಲ್ಲಿಸಿಕೊಳ್ಳಬೇಕೆಂದು ತಾತ್ಪರ್ಯ. ರೋಪಣವೆಂಬುವುದನ್ನು ನಾಲ್ಕು ನೂರು ಅಕ್ಷರಗಳನ್ನು ಉಚ್ಚರಿಸುವಷ್ಟು ಕಾಲವೂ, ಲೇಖನವೆಂಬುವುದನ್ನು ಮುನ್ನೂರು ಅಕ್ಷರಗಳನ್ನುಚ್ಚರಿಸುವಷ್ಟು ಕಾಲವೂ ಕಣ್ಣಿನಲ್ಲಿ ನಿಲ್ಲಿಸಿಕೊಳ್ಳಬೇಕು ಸೇಕವೆಂಬುವುದನ್ನು ಹಗಲು ಹೊತ್ತಿನಲ್ಲಿಯೇ ಮಾಡಬೇಕು. ಅಂತಹ ಅನಿವಾರ್ಯ ಸಂದರ್ಭಗಳಲ್ಲಿ ರಾತ್ರಿಹೊತ್ತಿನಲ್ಲಿಯೂ, ಮಾಡಬಹುದು.

ಏರಂಡತ್ವಕ್ಪತ್ರಮೂಲೈಃಶೃತಮಾಜಂಪಯೋಹಿತಂ ॥ ೫ ॥
ಸುಖೋಷ್ಣಂಸೇಚನಂನೇತ್ರೇವಾತಾಭಿಷ್ಯಂದನಾಶನಂ ॥
ಪರಿಷೇಕೋಹಿತೋನೇತ್ರೇಪಯಃಕೋಷ್ಣಂಸಸೈಂಧವಂ ॥ ೬ ॥
ರಜನೀದಾರುಸಿದ್ಧಂವಾಸೈಂಧವೇನಸಮನ್ವಿತಂ ॥
ವಾತಾಭಿಷ್ಯಂದಶಮನಂಹಿತಂನಾರುತಪರ್ಯಯೇ ॥ ೭ ॥
ಶುಷ್ಕಾಕ್ಷಿಪಾಕೇಚಹಿತಮಿದಂಸೇಚನಕಂಸದಾ ॥
ಸಾಬರಂಮಧುಕಂತುಲ್ಯಂಘೃತಭೃಷ್ಟಂಸುಚೂರ್ಣಿತಂ ॥ ೮ ॥
ಛಾಗಕ್ಷೀರೇಘೃತಂಸೇಕಾತ್ಪಿತ್ತರಕ್ತಾಭಿಘಾತಜಿತ್ ॥
ತ್ರಿಫಲಾಲೋಧ್ರಯಷ್ಟೀಭಿಃಶರ್ಕರಾಭದ್ರಮುಸ್ತಕೈಃ ॥ ೯ ॥
ಪಿಷ್ಟೈಃಶೀತಾಂಬುನಾಸೇಕೋರಕ್ತಾಭಿಷ್ಯಂದನಾಶನಃ ॥
ಲಾಕ್ಷಾಮಧುಕಮಂಜಿಷ್ಠಾಲೋಧ್ರಕಾಲಾನುಸಾರಿವಾಃ ॥ ೧೦ ॥
ಪುಂಡರೀಕಯುತಸ್ಸೇಕೋರಕ್ತಾಭಿಷ್ಯಂದನಾಶನಃ ॥
ಶ್ವೇತಲೋಧ್ರಂಘೃತೇಭೃಷ್ಟಂಚೂರ್ಣಿತಂಪಟುವಿಸ್ರುತಂ ॥ ೧೧ ॥
ಉಷ್ಣಾಂಬುನಾವಿಮೃದಿತಂಸೇಕಾತ್ಶೂಲಘ್ನಮಂಬಕೇ ॥

ಸೇಕವೆಂಬ ನೇತ್ರಚಿಕಿತ್ಸೆಗೆ ಉಪಯುಕ್ತಗಳಾದ ಯೋಗಗಳನ್ನು ಹೇಳುತ್ತಾನೆ, ಹರಳುಗಿಡದ ಸಿಪ್ಪೆ, ಎಲೆ, ಬೇರು ಇವುಗಳನ್ನು ಆಡಿನ ಹಾಲಿನಲ್ಲಿ ಹಾಕಿ ಕಷಾಯದಂತೆ ಕಾಯಿಸಿ ಸುಖೋಷ್ಣವಾಗಿ ಆರಿಸಿಕೊಂಡು ಕಣ್ಣಿಗೆ ಹಾಕಿಕೊಂಡಲ್ಲಿ ನೇತ್ರಾಭಿಷ್ಯಂದವೆನ್ನಿಸಿಕೊಳ್ಳುವ ವಾತಪ್ರಕೋಪಜನ್ಯವಾದ

ನೇತ್ರರೋಗವು ಪರಿಹಾರವಾಗುವುದು. ನೇತ್ರಾಭಿಸ್ಯಂದವೆಂದರೆ ಕಣ್ಣುನೋವು ಎಂದು ಪ್ರಸಿದ್ಧವಾಗಿರುವರೋಗ. ವಾತಾಭಿಷ್ಯಂದವೆಂಬ ನೇತ್ರರೋಗದಲ್ಲಿಯೂ ಮಾರುತಪರ್ಯಯ ವೆಂಬ ನೇತ್ರರೋಗದಲ್ಲಿಯೂ, ಶುಷ್ಕಾಕ್ಷಿಪಾಕವೆಂಬ ಕಣ್ಣು ಗಾಯವಾಗುವ ನೇತ್ರರೋಗದಲ್ಲಿಯೂ ಸಕ ಹಾಲಿಗೆ ಸ್ವಲ್ಪ ಸೈಂಧವ ಲವಣ ವನ್ನು ಹಾಕಿ ಕಾಯಿಸಿ ಕಣ್ಣಿಗೆ ಹಾಕುವುದು; ಹಾಲಿಗೆ ಅರಿಸಿನ, ದೇವದಾರಿಕಾಷ್ಠ, ಸೈಂಧವ ಲವಣ ಇವುಗಳನ್ನು ಹಾಕಿ ಕಾಯಿಸಿ ಸುಖೋಷ್ಣವಾಗಿ ಕಣ್ಣಿಗೆ ಹಾಕುವುದು ಹಿತಕರವು. ಪಿತ್ತಪ್ರಕೋಪಜನ್ಯವಾದ ನೇತ್ರಾಭಿಸ್ಯಂದ ರೋಗ ದಲ್ಲಿ ಲೋಧ್ರದಚಕ್ಕೆ, ಜ್ಯೇಷ್ಠಮಧು ಇವೆರಡನ್ನೂ ಸಮಭಾಗ ಕೂಡಿಸಿ ಚೂರ್ಣ ಮಾಡಿ ತುಪ್ಪದಲ್ಲಿ ಹುರಿದು, ಅದಕ್ಕೆ ಆಡಿನ ಹಾಲನ್ನು ಹಾಕಿಕೊಂಡು ಕಣ್ಣಿಗೆ ಹಿಂಡುವುದು ಹಿತಕರವಾದದ್ದು ರಕ್ತಪ್ರಕೋಪಜನ್ಯವಾದ ನೇತ್ರಾಭಿಸ್ಯಂದ ದಲ್ಲಿಯೂ ಈ ಚಿಕಿತ್ಸೆಯನ್ನು ಮಾಡಬಹುದು. ತ್ರಿಫಲ, ಲೋಧ್ರದಚಕ್ಕೆ, ಜ್ಯೇಷ್ಠಮಧು, ಸಕ್ಕರೆ, ಭದ್ರಮುಸ್ತೆ ಇವುಗಳನ್ನು ತಣ್ಣೀರಿನಲ್ಲಿ ಅರೆದು ಕಣ್ಣಿಗೆ ಹಿಂಡುವುದರಿಂದ ರಕ್ತಪ್ರಕೋಪಜನ್ಯವಾದ ಅಭಿಷ್ಯಂದವೆಂಬ ನೇತ್ರರೋಗವು ಶಾಂತವಾಗುತ್ತದೆ ಅರಗು, ಜ್ಯೇಷ್ಠಮಧು, ಮಂಜಿಷ್ಠೆ, ಲೋಧ್ರದಚಕ್ಕೆ, ಕಪ್ಪು ನೊಗದಯಬೇರು, ತಾವರೆಯ ಹುವ್ವು ಇವುಗಳನ್ನು ಅರೆದು ಕಣ್ಣಿಗೆ ಹಿಂಡಿದಲ್ಲಿ ರಕ್ತಪ್ರಕೋಪದಿಂದ ಹುಟ್ಟಿದ ನೇತ್ರಾಭಿಷ್ಯಂದವು ಶಮನವಾಗುತ್ತದೆ ಬಿಳೀಲೋಧ್ರದಚಕ್ಕೆಯನ್ನು ತುಪ್ಪದಲ್ಲಿ ಹುರಿದು ಸಣ್ಣಗೆ ಪುಡಿಮಾಡಿ ಬಟ್ಟೆಯಲ್ಲಿ ಶೋಧಿಸಿಕೊಂಡು ಬಿಸಿನೀರಿನಲ್ಲಿ ಕಲೆಸಿ ಕಣ್ಣಿಗೆ ಹಿಂಡಿದಲ್ಲಿ ಕಣ್ಣು ಶೂಲೆ ಗುಣ ವಾಗುತ್ತದೆ

ಅಥಾಶ್ಚ್ಯೋತನಕಂಕಾರ್ಯಂನಿಶಾಯಾಂನೈವಧಾಂಚನ ॥ ೧೨ ॥
ಉನ್ಮೀಲಿತೇಕ್ಷ್ಣದೃಙ್ಮಧ್ಯೇಬಿಂದುಭಿರ್ದ್ವ್ಯಂಗುಲಾದ್ಧಿತಂ ॥
ಬಿಂದವೋಷ್ಟಾಲೇಖನೇಷುಸ್ನೇಹನೇದಶಬಿಂದವಃ ॥ ೧೩ ॥
ರೋಪಣೇದ್ವಾದಶಪ್ರೋಕ್ತಾಸ್ತೇಶೀತೇಕೋಷ್ಣರೂಪಿಣಃ ॥
ಉಷ್ಣೇಚಶೀತರೂಪಾಸ್ಯುಃಸರ್ವತ್ರೈವೈಷನಿಶ್ಚಯಃ ॥ ೧೪ ॥
ವಾತೇತಿಕ್ತಂತಥಾಸ್ನಿಗ್ಧಂಪಿತ್ತೇಮಧುರಶೀತಲಂ ॥
ತಿಕ್ತೋಷ್ಣರೂಕ್ಷಂಚಕಫೇಕ್ರಮಾದಾಶ್ಚ್ಯೋತನಂಹಿತಂ ॥ ೧೫ ॥
ಆಶ್ಚ್ಯೋತನಾನಾಂಸರ್ವೇಷಾಂಮಾತ್ರಾಸ್ಯಾದ್ವಾಕ್ಶತಂಹಿತಾ ॥
ನಿಮೇಷೋನ್ಮೇಷಣಂಪುಂಸಾಮಂಗುಲ್ಯೋಶ್ಛೋಟಿಕಾಥವಾ॥೧೬॥
ಗುರ್ವಕ್ಷರೋಚ್ಚಾರಣಂವಾವಾಙ್ಮಾತ್ರೇಯಂಸ್ಮೃತಾಬುಧೈಃ ॥

ಹಿಂದೆ ಹೇಳಲ್ಪಟ್ಟ ನೇತ್ರಚಿಕಿತ್ಸೆಗಳಿಗೆ ಕಾಲವನ್ನು ನಿರ್ದೇಶಿಸುತ್ತಾನೆ. ಆಶ್ಚ್ಯೋತನಕವೆಂಬ ನೇತ್ರಪ್ರಸಾದನಕರ್ಮವನ್ನು ರಾತ್ರಿವೇಳೆಯಲ್ಲಿ ಮಾಡಲೇ ಬಾರದು. ದ್ರವವನ್ನು ಕಣ್ಣಿಗೆ ಹಾಕಬೇಕಾದರೆ ನೇತ್ರರೋಗಿಯನ್ನು ಅಂಗತನಕಾಗಿ ಮಲಗಿಸಿ ಕಣ್ಣನ್ನು ಚನ್ನಾಗಿ ಬಿಟ್ಟುಕೊಂಡಿರುವಂತೆ ಹೇಳಿ ಔಷಧ ದ್ರವವನ್ನು ಎರಡು ಅಂಗುಲ ಎತ್ತರದಿಂದ ಕಣ್ಣಿಗೆ ಹಾಕಬೇಕು ಲೇಖನಾರ್ಥವಾಗಿ ಔಷಧವನ್ನು ಕಣ್ಣಿಗೆ ಹಾಕುವುದಾದರೆ ಎಂಟು ತೊಟ್ಟುಗಳಷ್ಟನ್ನೂ ಸ್ನೇಹನ ವಾದರೆ ಹತ್ತು ತೊಟ್ಟುಗಳಷ್ಟನ್ನೂ ರೋಪಣೌಷಧವಾದಲ್ಲಿ ಹನ್ನೆರಡು ಹನಿ ಗಳನ್ನೂ ಹಾಕುವುದು ದೋಷಗಳು ಶೀತಬಾಧೆಯಿಂದುಂಟಾಗಿದ್ದಲ್ಲಿ ಔಷಧ ವನ್ನು ಸುಖೋಷ್ಣವಾಗುವಂತೆ ಬಿಸಿಮಾಡಿಯೂ ಉಷ್ಣದಿಂದ ದೋಷಪ್ರಕೋಪ ವಾಗಿ ಕಣ್ಣು ದೂಷಿತವಾಗಿದ್ದಲ್ಲಿ ಔಷಧವನ್ನು ತಣ್ಣಗಿರುವಂತೆಯೂ ಹಾಕಬೇಕು. ಇದು ಸಂಪ್ರದಾಯ ಮತ್ತು ವಾತಪ್ರಕೋಪದಿಂದ ಕಣ್ಣಿನ ಬಾಧೆಯು ಸಂಭವಿಸಿದ್ದರೆ ಕಹಿರಸವುಳ್ಳದ್ದಾಗಿ ಜಿಡ್ಡಿನಿಂದ ಕೂಡಿದ ಔಷಧದ್ರವವನ್ನು ಕಣ್ಣಿಗೆ ಹಾಕಬೇಕು ಪಿತ್ತಪ್ರಕೋಪದಿಂದಾಗಿರುವಲ್ಲಿ ಮಧುರರಸಯುಕ್ತವಾಗಿ ಯೂ, ತಣ್ಣಗೂ ಇರುವ ಔಷಧದ್ರವವನ್ನು ಕಣ್ಣಿಗೆ ಹಾಕಬೇಕು ಕಫಪ್ರಕೋಪ ದಿಂದ ನೇತ್ರಬಾಧೆಯಾಗಿರುವ ಪಕ್ಷದಲ್ಲಿ ಕಹಿರಸವುಳ್ಳ ಮತ್ತು ರೂಕ್ಷಗುಣವುಳ್ಳ ಬೆಚ್ಚನೆಯ ಔಷಧವನ್ನು ಕಣ್ಣಿಗೆ ಆಶ್ಚ್ಯೋತನವಾಗಿ ಉಪಯೋಗಿಸಬೇಕು ಎಲ್ಲಾ ವಿಧವಾದ ಆಶ್ಚ್ಯೋತನಗಳನ್ನೂ ಕಣ್ಣಿನಲ್ಲಿ ಎಷ್ಟು ಹೊತ್ತು ನಿಲ್ಲಿಸಿಕೊಳ್ಳ ಬೇಕೆಂದರೆ ಒಂದು ನೂರು ಮಾತ್ರಾಗಳಕಾಲ ನಿಲ್ಲಿಸಿಕೊಳ್ಳಬೇಕು ಒಂದು ಮಾತ್ರಾಕಾಲವೆಂದರೆ ಪುರುಷರು ಕಣ್ಣುಮುಚ್ಚಿತೆರೆಯುವಷ್ಟುಹೊತ್ತು ಅಥವಾ ಒಂದು ಚುಟಿಕೆ ಹೊಡೆಯುವಷ್ಟು ಹೊತ್ತು ಅಥವಾ ಒಂದು ದೀರ್ಘಾಕ್ಷರವನ್ನು ಉಚ್ಚಾರಮಾಡುವಷ್ಟು ಹೊತ್ತು ಇವುಗಳಿಗೆ ಮಾತ್ರಾಕಾಲವೆಂದು ಹೆಸರು.

**ಬಿಲ್ವಾದಿಪಂಚಮೂಲೇನಬೃಹತ್ಯೇರಂಡಶಿಗ್ರುಭಿಃ ॥ ೧೭ ॥**
**ಕ್ವಾಥಶ್ಚಾಶ್ಚ್ಯೋತನೇಕೋಷ್ಣೋವಾತಾಭಿಷ್ಯಂದನಾಶನಃ ॥**
**ಅಂಬುಪಿಷ್ಟೈರ್ನಿಂಬಪತ್ರೈಸ್ತ್ವಚಂಲೋಧ್ರಸ್ಯ ಲೇಪಯೇತ್ ॥ ೧೮ ॥**
**ಪ ತಾಪ್ಯವಹ್ನಿನಾಪಿಷ್ಟ್ಯಾತದ್ರಸೋನೇತ್ರಪೂರಣಾತ್ ॥**
**ವಾತೋತ್ಥಂರಕ್ತಪಿತ್ತೋತ್ಥಮಭಿಷ್ಯಂದಂವಿನಾಶಯೇತ್ ॥ ೧೯ ॥**
**ತ್ರಿಫಲಾಶ್ಚ್ಯೋತನಂನೇತ್ರೇಸರ್ವಾಭಿಷ್ಯಂದನಾಶನಂ ॥**
**ಸ್ತ್ರೀಸ್ತನ್ಯಾಶ್ಚ್ಯೋತನಂನೇತ್ರೇರಕ್ತಪಿತ್ತಾನಿಲಾರ್ತಿಜಿತ್ ॥ ೨೦ ॥**
**ಕ್ಷೀರಸರ್ಪಿರ್ಘೃತಂವಾಪಿವಾತರಕ್ತರುಜಂಜಯೇತ್ ॥**

ಆಶ್ಚ್ಯೋತನೋಪಯುಕ್ತಗಳಾದ ಕೆಲವು ಔಷಧಯೋಗಗಳನ್ನು ಹೇಳುತ್ತಾನೆ. ಬಿಲ್ವ, ಅಗ್ನಿಮಂಥ, ಸ್ಯೋನಾಕ, ಶಿವನೆ, ಪಾದರಿ, ಹೆಗ್ಗುಳ್ಳ, ಹರಳುಬೇರು, ನುಗ್ಗಿಚಕ್ಕೆ ಇವುಗಳ ಕಷಾಯಮಾಡಿ ಸುಖೋಷ್ಣವಾಗಿ ಕಣ್ಣಿಗೆ ಹಾಕುವುದರಿಂದ ವಾತಾಭಿಷ್ಯಂದವೆಂಬ ರೋಗವು ನಾಶವಾಗುತ್ತದೆ. ಬೇವಿನ ಎಲೆಯನ್ನು ನೀರು ಹಾಕಿಕೊಂಡು ಗಂಧದಂತೆ ಅರೆದು ಅದನ್ನು ಲೋಧ್ರದತೊಪ್ಪಿಗೆ ಸವರಬೇಕು. ಆ ಮೇಲೆ ಆ ಲೋಧ್ರದತೊಪ್ಪೆಯನ್ನು ಜೆಂಕಿಯಲ್ಲಿ ಕಾಯಿಸಿ ನೀರಿನೊಡನೆ ಚನ್ನಾಗಿ ಅರೆದು ಅದನ್ನು ಬಟ್ಟೆಗೆ ಹಾಕಿಕೊಂಡು ಕಣ್ಣಿಗೆ ಹಿಂಡಿದಲ್ಲಿ ವಾತ ಪ್ರಕೋಪದಿಂದ ಹುಟ್ಟಿದ ಮತ್ತು ರಕ್ತಪಿತ್ತದಿಂದ ಹುಟ್ಟಿದ ಅಭಿಷ್ಯಂದರೋಗವು ಶಮನವಾಗುತ್ತದೆ. ತ್ರಿಫಲಕಷಾಯವನ್ನು ಕಾಯಿಸಿ, ಕಣ್ಣಿಗೆ ಹಾಕುತ್ತಾ ಬಂದಲ್ಲಿ ಸಕಲ ವಿಧಗಳಾದ ಅಭಿಷ್ಯಂದರೋಗಗಳೂ ಶಮನವಾಗುತ್ತವೆ. ಹೆಂಗಸರ ಮೊಲೆಹಾಲನ್ನು ಕಣ್ಣಿಗೆ ಹಾಕುತ್ತ ಬಂದಲ್ಲಿ ರಕ್ತಪಿತ್ತ ಮತ್ತು ವಾಯು ಇವುಗಳಿಂದ ಉಂಟಾದ ವೇದನೆಯು ಶಮನವಾಗುತ್ತದೆ. ಸಾಮಾನ್ಯವಾದ ಹಾಲು, ತುಪ್ಪ, ಬೆಣ್ಣೆ ಇವುಗಳನ್ನು ಕಣ್ಣಿಗೆ ಹಾಕಿದರೂ ವಾಯು ಮತ್ತು ರಕ್ತಗಳ ಪ್ರಕೋಪದಿಂದ ಹುಟ್ಟಿದ ನೇತ್ರಬಾಧೆಗಳು ಶಮನವಾಗುತ್ತವೆ.

ಪಿಂಡೀಕವಲಿಕಾಪ್ರೋಕ್ತಾಬದ್ಧ್ಯತೇಪಟ್ಟವಸ್ತ್ರಕೈಃ ॥ ೨೧ ॥
ನೇತ್ರಾಭಿಷ್ಯಂದಯೋಗ್ಯಾಸಾವ್ರಣೇಷ್ವಪಿನಿಬಧ್ಯತೇ ॥
ಅಭಿಷ್ಯಂದೇಧಿಮಂಥೇಚಸಂಜಾತೇಶ್ಲೇಷ್ಮಸಂಭವೇ ॥ ೨೨ ॥
ಸ್ನಿಗ್ಧಸ್ವಿನ್ನೋತ್ತಮಾಂಗಸ್ಯಶಿರಸ್ತೀಕ್ಷ್ಣೈರ್ವಿರೇಚಯೇತ್ ॥
ಅಧಿಮಂಥೇಷುಸರ್ವೇಷುಲಲಾಟೇವ್ಯಧಯೇತ್ ಶಿರಾಂ ॥ ೨೩ ॥
ಅಶಾಂತೇಸರ್ವಥಾಮಂಥೇಭ್ರುವೋರುಪರಿದಾಹಯೇತ್ ॥
ಅಭಿಷ್ಯಂದೇಷುಸರ್ವೇಷುಬಧ್ನೀಯಾತ್ಪಿಂಡಿಕಾಂಬುಧಃ ॥ ೨೪ ॥

ಪಿಂಡೀ ಎಂಬ ನೇತ್ರಚಿಕಿತ್ಸಾಕ್ರಮವನ್ನು ಹೇಳುತ್ತಾನೆ. ಸಾಮಾನ್ಯವಾಗಿ ನಮ್ಮ ರೂಢಿಯಲ್ಲಿ ಪೋಲ್ಟೀಸ್ ಎನ್ನುವುದನ್ನು ಕಟ್ಟುವಹಾಗೆಯೇ ಇದರ ಕ್ರಮವಿರುತ್ತದೆ. ಇದಕ್ಕೆ ಕವಲಿಕಾ ಎಂಬ ಮತ್ತೊಂದು ಹೆಸರೂ ಉಂಟು. ಇದನ್ನು ಹಟ್ಟೆಯ ಒಟ್ಟೆಗಳಿಂದ ಕಟ್ಟತಕ್ಕದ್ದು. ಇದು ನೇತ್ರಾಭಿಷ್ಯಂದರೋಗದಲ್ಲಿಯೂ ವ್ರಣರೋಗಗಳಲ್ಲಿಯೂ ಉಪಯೋಗಕ್ಕೆ ಬರುತ್ತದೆ. ಶ್ಲೇಷ್ಮಪ್ರಕೋಪ ಜನ್ಯವಾದ ಅಭಿಷ್ಯಂದ ಮತ್ತು ಅಧಿಮಂಥಗಳೆಂಬ ನೇತ್ರರೋಗಗಳಲ್ಲಿ ಶಿರಸ್ಸಿಗೆ ಸ್ನೇಹ, ಸ್ವೇದನಗಳನ್ನು ಮಾಡಿ, ತೀಕ್ಷ್ಣಗಳಾದ ನಸ್ಯಗಳಿಂದ ಶಿರೋವಿರೇಚನ ಮಾಡಬೇಕು ಸಮಸ್ತಬಗೆಯ ನೇತ್ರಾಧಿಮಂಥರೋಗದಲ್ಲಿಯೂ, ಹಣೆಯ

ಮೇಲುಭಾಗದಲ್ಲಿ ಶಿರಾವ್ಯಧವಮಾಡಬೇಕು. ಅಂದರೆ ನರವನ್ನು ಕತ್ತರಿಸಬೇಕು. ಆದರಿಂದ ರೋಗವು ಗುಣವಾಗದ ಪಕ್ಷದಲ್ಲಿ ಹುಬ್ಬಿನ ಮೇಲ್ಭಾಗದಲ್ಲೇ ಸಣ್ಣ ಸೂಜಿಯನ್ನು ಕಾಯಿಸಿ ಸುಡಬೇಕು ಮತ್ತು ಅಭಿಷ್ಯಂದರೋಗವು ಶಾಂತ ವಾಗುವುದಕ್ಕಾಗಿ ಪಿಂಡಿಕಾಬಂಧನವನ್ನೂ ಮಾಡಬೇಕು. ಅಂದರೆ ಕಣ್ಣಿನಮೇಲೆ ಪೋಲ್ಟೀಸನ್ನು ಕಟ್ಟಬೇಕು.

ವಾತಾಭಿಷ್ಯಂದಶಾಂತ್ಯರ್ಥಂಸ್ನಿಗ್ಧೋಷ್ಣಾಪಿಂಡಿಕಾಭವೇತ್ ॥
ಏರಂಡಪತ್ರತ್ವಕ್‌ಮೂಲನಿರ್ಮಿತಾವಾತನಾಶಿನೀ ॥ ೨೫ ॥
ಪಿತ್ತಾಭಿಷ್ಯಂದನಾಶಾಯಧಾತ್ರೀಪಿಂಡೀಸುಖಾವಹಾ ॥
ಮಹಾನಿಂಬಫಲೋದ್ಭೂತಾಪಿಂಡೀವಾಪಿತ್ತನಾಶಿನೀ ॥ ೨೬ ॥
ಶಿಗ್ರುಪತ್ರಕೃತಾಪಿಂಡೀಶ್ಲೇಷ್ಮಾಭಿಷ್ಯಂದನಾಶಿನೀ ॥
ನಿಂಬಪತ್ರಕೃತಾಪಿಂಡೀಶ್ಲೇಷ್ಮಪಿತ್ತಹರಾಭವೇತ್ ॥ ೨೭ ॥
ತ್ರಿಫಲಾಪಿಂಡಿಕಾಪ್ರೋಕ್ತಾನಾಶನೇಶ್ಲೇಷ್ಮಪಿತ್ತಯೋಃ ॥
ಪಿಷ್ಟ್ವಾಕಾಂಜಿಕತೋಯೇನಘೃತಭ್ರಷ್ಟಾಚಪಿಂಡಿಕಾ ॥ ೨೮ ॥
ಲೋಧ್ರಸ್ಯಹರತಿಕ್ಷಿಪ್ರಮಭಿಷ್ಯಂದಮಸೃಗ್ಭವಂ ॥
ಶುಂಠೀನಿಂಬದಳೈಃಪಿಂಡೀಸುಖೋಷ್ಣಾಸ್ವಲ್ಪಸೈಂಧವಾ ॥ ೨೯ ॥
ಧಾರ್ಯಾಚಕ್ಷುಷಿಸಂಯೋಗಾತ್‌ಶೋಥಕಂಡೂವ್ಯಥಾಪಹಾ ॥

ಪಿಂಡಿಕಾ ಎಂಬ ಚಿಕಿತ್ಸೆಗೆ ಅನುಕೂಲಗಳಾದ ಕೆಲವು ಯೋಗಗಳನ್ನು ಹೇಳುತ್ತಾನೆ ವಾತಪ್ರಕೋಪದಿಂದ ಕಣ್ಣಿನಲ್ಲಿ ನೀರು ಸುರಿಯುವುದು, ಕಣ್ಣೊಡತ ಇವುಗಳು ಬಂದಲ್ಲಿ ಹರಳೆಲೆ, ಹರಳುಗಿಡದ ಮೇಲಿನಶಿಪ್ಪೆ, ಹರಳು ಗಿಡದ ಬೇರು ಇವುಗಳನ್ನು ಬೇಯಿಸಿ, ಚನ್ನಾಗಿ ಅರೆದು ಪೋಲ್ಟೀಸಿನಂತೆಮಾಡಿ ಅದರೊಟ್ಟಿಗೆ ಕೊಂಚ ಜಿಡ್ಡು ಸೇರಿಸಿ ಸುಖೋಷ್ಣವಾಗಿರುವಂತೆ ಕಣ್ಣಿನಮೇಲೆ ಕಟ್ಟಿದರೆ ಗುಣವಾಗುತ್ತವೆ. ಪಿತ್ತದಿಂದ ಕಣ್ಣಿನಲ್ಲಿ ನೀರು ಸುರಿಯುವುದು ಕಣ್ಣು ಕೆಂಪಾಗುವುದು ಹೀಗಾದಲ್ಲಿ ನೆಲ್ಲಿಯಒಣಕಾಯಿಗಳನ್ನು ನೀರುಹಾಕಿ ಚೆನ್ನಾಗಿ ಅರೆದು ಕಟ್ಟುವುದರಿಂದ ಗುಣವಾಗುತ್ತದೆ ಅಥವಾ ಬೇವಿನಬೀಜವನ್ನು ಅರೆದು ಕಣ್ಣಿಗೆ ಕಟ್ಟದರೂ ಪಿತ್ತಾಭಿಷ್ಯಂದವು ಸುಮ್ಮನಾಗುತ್ತದೆ. ಶ್ಲೇಷ್ಮಪ್ರಕೋಪ ದಿಂದ ಕಣ್ಣಿನಲ್ಲಿ ನೀರು ಸುರಿಯುತ್ತಿದ್ದರೆ ನುಗ್ಗೆಯ ಸೊಪ್ಪಿನಲ್ಲಿ ಪೋಲ್ಟೀಸಮಾಡಿ ಕಟ್ಟಿದರೆ ಗುಣವಾಗುತ್ತದೆ. ಶ್ಲೇಷ್ಮ ಮತ್ತು ಪಿತ್ತಗಳ ಪ್ರಕೋಪದಿಂದ ಕಣ್ಣು ನೀರುಸುರಿಯುವುದಾದರೆ ಬೇವಿನೆಲೆಯ ಪೋಲ್ಟೀಸಿನಿಂದ ಗುಣವಾಗುತ್ತದೆ. ಹಾಗು ತ್ರಿಫಲಗಳನ್ನು ಕೂಡಿಸಿ ಅವುಗಳಿಂದ ಕ್ರಮವಾಗಿ ಪೋಲ್ಟೀಸುಮಾಡಿ

ಕಟ್ಟಿದರೂ ಹಿಂದೆ ಹೇಳಿದ ನೇತ್ರಾಭಿಷ್ಯಂದವು ಗುಣವಾಗುತ್ತದೆ. ಲೋಧ್ರದ ಚಕ್ಕೆಯನ್ನು ತುಪ್ಪದಲ್ಲಿ ಹುರಿದು ಅನ್ನದ ಹುಳಿನೀರಿನಿಂದ ಅರೆದು ಪೋಲ್ಟೀಸು ಮಾಡಿ ಕಣ್ಣಿಗೆ ಕಟ್ಟಿದಲ್ಲಿ ರಕ್ತಪ್ರಕೋಪದಿಂದ ಹುಟ್ಟಿದ ನೇತ್ರಾಭಿಷ್ಯಂದ ರೋಗವು ಗುಣವಾಗುತ್ತದೆ. ಶುಂಠಿ, ಬೇವಿನಸೊಪ್ಪು ಇವುಗಳನ್ನು ಅರೆದು ಬೇಯಿಸಿ ಮಾಡಿದ ಪೋಲ್ಟೀಸಿನ ಜೊತೆಗೆ ಸ್ವಲ್ಪ ಸೈಂಧವಲವಣವನ್ನು ಸೇರಿಸಿ ಸುಖೋಷ್ಣವಾಗಿರುವಂತೆ ಕಣ್ಣಿಗೆ ಕಟ್ಟಿದಲ್ಲಿ ಕಣ್ಣಿನಬಾಕು, ಕಣ್ಣಿನನವೆ, ಕಣ್ಣಿನ ವಡತ ಇವುಗಳೆಲ್ಲವೂ ಗುಣವಾಗುತ್ತವೆ.

## ಅಥ ಬಿಡಾಲಕವಿಧಿಃ—

ಬಿಡಾಲಕೋಬಹಿರ್ಲೇಪೋನೇತ್ರೇಪಕ್ಷ್ಮವಿವರ್ಜಿತಃ ॥ ೩೦ ॥
ತಸ್ಯಮಾತ್ರಾಪರಿಜ್ಞೇಯಾಮುಖಲೇಪವಿಧಾನವತ್ ॥

ಬಿಡಾಲಕವೆಂದರೆ ಕಣ್ಣಿನ ಹೊರಭಾಗದಲ್ಲಿ ಕಣ್ಣುರೆಪ್ಪೆಯನ್ನು ಬಿಟ್ಟು ಹಾಕತಕ್ಕ ಪಟ್ಟಿಗೆ ಹೆಸರು. ಇದರ ಪ್ರಮಾಣವಿಧಾನಾದಿಗಳನ್ನು ಮುಖಲೇಪ ವಿಧಿಯಂತೆಯೇ ಅನುಸರಿಸಬೇಕು

## ಅಥ ಲೇಪಾಃ—

ಯಷ್ಟೀಗೈರಿಕಸಿಂಧೂತ್ಥದಾರ್ವೀತಾರ್ಕ್ಷ್ಯೈಃಸಮಾಂಶಕೈಃ ॥ ೩೧ ॥
ಜಲಪಿಷ್ಟೈರ್ಬಹಿರ್ಲೇಪಃಸರ್ವನೇತ್ರಾಮಯಾಪಹಃ ॥
ರಸಾಂಜನೇನವಾಲೇಪಃಪಥ್ಯಾವಿಶ್ವಜಲೈರಪಿ ॥ ೩೨ ॥
ಕುಮಾರಿಕಾಗ್ನಿಪತ್ರೈರ್ವಾದಾಡಿಮೀಪಲ್ಲವೈರಪಿ ॥
ವಚಾಹರಿದ್ರಾನಿಂಬೈರ್ವಾತಥಾನಾಗರಗೈರಿಕೈಃ ॥ ೩೩ ॥
ದಗ್ಧ್ವಾಸಸೈಂಧವಂಲೋಧ್ರಂಮಧೂಚ್ಛಿಷ್ಟಯುತೇಘೃತೇ ॥
ಪಿಷ್ಟಮಂಜನಲೇಪಾಭ್ಯಾಂಸದ್ಯೋನೇತ್ರರುಜಾಪಹಂ ॥ ೩೪ ॥
ಲೋಹಸ್ಯಪಾತ್ರೇಸಂಘೃಷ್ಟೋರಸೋನಿಂಬಫಲೋದ್ಭವಃ ॥
ಕಿಂಚಿದ್ಘನೋಬಹಿರ್ಲೇಪಾನ್ನೇತ್ರಬಾಧಾಂವ್ಯಪೋಹತಿ ॥ ೩೫ ॥
ಸಂಚೂರ್ಣ್ಯಮರಿಚಂಕೇಶರಾಜಸ್ವರಸಮರ್ದನಾತ್ ॥
ಲೇಪನಾದರ್ಮಣಾಂನಾಶಂಕರೋತ್ಯೇಷಪ್ರಯೋಗರಾಟ್ ॥ ೩೬ ॥
ಸ್ವಿನ್ನಾಂಭಿತ್ವಾವಿನಿಷ್ಪೀಡ್ಯಭಿನ್ನಾಮಂಜನನಾಮಿಕಾಂ ॥
ಶಿಲೈಲಾನತಸಿಂಧೂತ್ಥೈಃಸಕ್ಷೌದ್ರೈಃಪ್ರತಿಸಾರಯೇತ್ ॥ ೩೭ ॥

ನೇತ್ರವ್ಯಾಧಿಯಲ್ಲಿ ಉಪಯುಕ್ತಗಳಾದ ಕೆಲವು ಲೇಪಗಳನ್ನು ಹೇಳುತ್ತಾನೆ. ಜ್ಯೇಷ್ಠಮಧು, ಕಾವಿಯಕಲ್ಲು, ಸೈಂಧವಲವಣ, ಮರದರಸಿನ, ರಸಾಂಜನ ಇವುಗಳನ್ನು ನೀರಿನಿಂದ ಅರೆದು ಕಣ್ಣಿನ ಹೊರಭಾಗಕ್ಕೆ ಲೇಪ ಹಾಕುವುದರಿಂದ ಸಮಸ್ತವಿಧವಾದ ನೇತ್ರರೋಗಗಳೂ ಗುಣಹೊಂದುತ್ತವೆ ಹಿಂದೆ ಹೇಳಿದ ಪದಾರ್ಥಗಳೆಲ್ಲವೂ ಸಮಪ್ರಮಾಣದಲ್ಲಿ ಸೇರಿಸತಕ್ಕದ್ದು ರಸಾಂಜನ ಒಂದನ್ನೇ ನೀರಿನಿಂದ ಅರದು ಲೇಪಹಾಕಬಹುದು ಅಳಲೆಯ ಕಾಯಿ, ಶುಂಠಿ ಲಾಮಂಚ ಇವುಗಳನ್ನಾದರೂ ನೀರಿನಿಂದ ಅರದು ಲೇಪಹಾಕಬಹುದು. ಲೋಳೆಸರದಪಟ್ಟೆ, ಚಿತ್ರಮೂಲದ ಎಲೆ ಇವುಗಳನ್ನಾದರೂ ಲೇಪವಾಗಿ ಉಪಯೋಗಿಸಬಹುದು ದಾಳಿಂಬದ ಎಲೆಗಳನ್ನಾದರೂ ಲೇಪಹಾಕಬಹುದು ಬಜೆ, ಅರಸಿನ, ಬೇವಿನಎಲೆ ಇವುಗಳಿಂದಲಾದರೂ ಲೇಪಮಾಡಿಹಾಕಬಹುದು. ಶುಂಠಿ, ಕಾವಿಕಲ್ಲು ಇವುಗಳನ್ನಾದರೂ ಅರೆದು ಲೇಪವಾಗಿ ಹಾಕಬಹುದು. ಸೈಂಧವಲವಣ, ಲೋಧ್ರದಚಕ್ಕೆ ಇವುಗಳನ್ನು ಸುಟ್ಟು ಆ ಭೂದಿಯನ್ನು ಜೇನುಮೇಣ ಮತ್ತು ಹಸುವಿನತುಪ್ಪಗಳೊಂದಿಗೆ ಕಲಸಿ ಚನ್ನಾಗಿ ಅರೆದು ಕಣ್ಣಿಗೆ ಅಂಜನವಾಗಿಯಾಗಲಿ ಲೇಪವಾಗಿಯಾಗಲೀ ಉಪಯೋಗಿಸುವುದರಿಂದ ಸಮಸ್ತವಿಧವಾದ ನೇತ್ರರೋಗಗಳೂ ಗುಣವಾಗುವವು ಕಬ್ಬಿಣದ ಪಾತ್ರೆಗೆ ನಿಂಬೇಹುಳಿಯನ್ನು ಹಿಂಡಿ ಮತ್ತೊಂದು ಕಬ್ಬಿಣದಿಂದ ಚನ್ನಾಗಿ ತಿಕ್ಕಿದಲ್ಲಿ ಕಬ್ಬಿಣದ ಕಿಲುಬು ಬಿಟ್ಟುಕೊಂಡು ಗಟ್ಟಿಯಾಗುವುದು. ಇವನ್ನು ಕಣ್ಣಿನ ಮೇಲಕ್ಕೆ ಹತ್ತಿಸುವುದರಿಂದ ಸಮಸ್ತ ವಿಧವಾದ ನೇತ್ರಬಾಧೆಗಳೂ ಪರಿಹಾರವಾಗುತ್ತವೆ ಮೆಣಸಿನಕಾಳನ್ನು ಪುಡಿಮಾಡಿ ಅದರಜೊತೆಗೆ ಗರುಗದಸೊಪ್ಪಿನ ರಸವನ್ನು ಸೇರಿಸಿ ಚನ್ನಾಗಿ ಅರೆದು ಕಣ್ಣಿನಮೇಲೆ ಲೇಪಹಾಕುವುದರಿಂದ ನೇತ್ರಾರ್ಮ ಎಂಬ ನೇತ್ರರೋಗವು ಗುಣಹೊಂದುತ್ತವೆ. ನೇತ್ರಾರ್ಮ ಎಂದರೆ ಕಣ್ಣಿನೊಳಗೆ ಕೆಂಪು ನರಗಳು ಕಾಣುತ್ತಾ ತೊಂದರೆ ಕೊಡುವ ನೇತ್ರರೋಗ. ಅಂಜನನಾಮಿಕಾ ಎಂದರೆ ಕಣ್ಣುಗುಡ್ಡೆಯಮೇಲೆ ಜೋಳದ ಕಾಳಿನಷ್ಟುಗಾತ್ರ ತೋರುವ ಗುಳ್ಳೆಗೆ ಹೆಸರು ಇದೊಂದು ನೇತ್ರರೋಗ ಈ ರೋಗವು ಪ್ರಾಪ್ತವಾದರೆ ಮೊದಲು ಸ್ವೇದನ ಕರ್ಮವನ್ನು ಮಾಡಿ ನಂತರ ಆ ಗುಳ್ಳೆಯನ್ನು ಸೂಜಿಯಂತಹ ಶಸ್ತ್ರದಿಂದ ಚುಚ್ಚಿ ಒಡೆದು ಚನ್ನಾಗಿ ಒತ್ತಿ ಅದರೊಳಗಿರುವ ದ್ರವವೆಲ್ಲವನ್ನೂ ಹೊರಕ್ಕೆ ಹೊರಡಿಸಿದ ನಂತರ ಮಣಿಶಿಲೆ, ಯಾಲಕ್ಕಿ, ಗ್ರಂಥಿತಗರ, ಸೈಂಧವ ಲವಣ ಇವುಗಳನ್ನು ಚೂರ್ಣಮಾಡಿ, ಜೇನುತುಪ್ಪದಲ್ಲಿ ಕಲಸಿ ಕಣ್ಣಿಗೆ ಹಚ್ಚಬೇಕು ಇದಕ್ಕೇನೆ ಪ್ರತಿಸಾರಣವೆಂದು ಹೆಸರು.

## ತರ್ಪಣ

ಅಥತರ್ಪಣಕಂವಚ್ಮಿನೇತ್ರತೃಪ್ತಿಕರಂಪರಂ ॥
ಯದ್ರೂಕ್ಷಂಪರಿಶುಷ್ಕಂಚನೇತ್ರಂಕುಟಿಲಮಾವಿಲಂ ॥ ೩೮ ॥
ಶೀರ್ಣಪಕ್ಷ್ಮಶಿರೋತ್ಪಾತಕೃಚ್ಛ್ರೋನ್ಮೀಲನಸಂಯುತಂ ॥
ತಿಮಿರಾರ್ಜುನಶುಕ್ರಾದ್ಯೈರಭಿಷ್ಯಂದಾಧಿಮಂಥಕೈಃ ॥ ೩೯ ॥
ಶುಷ್ಕಾಕ್ಷಿಪಾಕಶೋಥಾಭ್ಯಾಂಯುಕ್ತಂವಾತವಿಪರ್ಯಯೈಃ ॥
ತನ್ನೇತ್ರಂತರ್ಪಣೇಯೋಜ್ಯಂನೇತ್ರರೋಗವಿಶಾರದೈಃ ॥ ೪೦ ॥
ದುರ್ದಿನಾತ್ಯುಷ್ಣಶೀತೇಷುಚಿಂತಾಯಾಸಭ್ರಮೇಷುಚ ॥
ಅಶಾಂತೋಪದ್ರವೇಚಾಕ್ಷ್ಣಿತರ್ಪಣಂನಪ್ರಶಸ್ಯತೇ ॥ ೪೧ ॥
ವಾತಾತಪರಜೋಹೀನೇದೇಶೇಚೋತ್ತಾನಶಾಯಿನಃ ॥
ಆಧಾರೌಮಾಷಚೂರ್ಣೇನಕ್ಲಿನ್ನೇನಪರಿಮಂಡಲೌ ॥ ೪೨ ॥
ಸಮೌದೃಢಾವಸಂಬಾಧೌಕರ್ತವ್ಯೌನೇತ್ರಕೋಶಯೋಃ ॥
ಪೂರಯೇದ್ಘೃತಮಂಡೇನವಿಲೀನೇನಸುಖೋದಕೈಃ ॥ ೪೩ ॥
ಅಥವಾಶತಧೌತೇನಸರ್ಪಿಷಾಕ್ಷೀರಜೇನವಾ ॥
ನಿಮಗ್ನಾನ್ಯಕ್ಷಿಪಕ್ಷ್ಮಾಣಿಯಾವತ್ಸ್ಯುಸ್ತಾವದೇವಹಿ ॥ ೪೪ ॥
ಪೂರಯೇನ್ಮೀಲಿತೇನೇತ್ರೇತತಉನ್ಮೀಲಯೇಚ್ಛನೈಃ ॥
ಧಾರಯೇದ್ವರ್ತ್ಮರೋಗೇಷುವಾಙ್ಮಾತ್ರಾಣಾಂಶತಂಬುಧಃ ॥೪೫॥
ಸ್ವಚ್ಛೇಕಫೇಸಂಧಿರೋಗೇಮಾತ್ರಾಪಂಚಶತಂಹಿತಂ ॥
ಶುಕ್ಲೇಚಷಟ್ಶತಂಕೃಷ್ಣರೋಗೇಸಪ್ತಶತಂಮತಂ ॥ ೪೬ ॥
ದೃಷ್ಟಿರೋಗೇಷ್ವಷ್ಟಶತಮಧಿಮಂಥೇಸಹಸ್ರಕಂ ॥
ಸಹಸ್ರಂವಾತರೋಗೇಷುಧಾರ್ಯಮೇವಂಹಿತರ್ಪಣಂ ॥ ೪೭ ॥
ಸ್ವಿನ್ನೇನಯವಪಿಷ್ಟೇನಸ್ನೇಹವೀರ್ಯೇರಿತಂತತಃ ॥
ಯಥಾಸ್ವಂಧೂಮಪಾನೇನಕಫಮಸ್ಯವಿಶೋಧಯೇತ್ ॥ ೪೮ ॥
ಏಕಾಹಂವಾತ್ರ್ಯಹಂವಾಪಿಪಂಚಾಹಂಚೇಷ್ಯತೇಪರಂ ॥
ತರ್ಪಣೇತೃಪ್ತಿಲಿಂಗಾನಿನೇತ್ರೇಷ್ವೇತಾನಿಭಾವಯೇತ್ ॥ ೪೯ ॥
ಸುಖಸ್ವಪ್ನಾವಬೋಧಂಚವೈಶದ್ಯಂವರ್ಣಪಾಟವಂ ॥
ನಿವೃತ್ತಿರ್ವ್ಯಾಧಿಶಾಂತಿಶ್ಚಕ್ರಿಯಾಲಾಘವಮೇವಚ ॥ ೫೦ ॥
ಅಥಸಾಶ್ರುಗುರುಸ್ನಿಗ್ಧಂನೇತ್ರಂಸ್ಯಾದತಿತರ್ಪಿತಂ ॥

**ರೂಕ್ಷಮುಸ್ರಾನಿಲಂರುಗ್ಣಂನೇತ್ರಂಸ್ಯಾದ್ಧೀನತರ್ಪಿತಂ ॥ ೫೧ ॥**
**ರೂಕ್ಷಸ್ನಿಗ್ಧೋಪಚಾರಾಭ್ಯಾಮೇತಯೋಸ್ಯಾತ್ಪ್ರತಿಕ್ರಿಯಂ ॥**

ತರ್ಪಣವೆಂಬ ನೇತ್ರಪ್ರಸಾದನಕರ್ಮವನ್ನು ಹೇಳುತ್ತಾನೆ. ತರ್ಪಣಕ ಎಂದರೆ ನೇತ್ರಗಳಿಗೆ ತೃಪ್ತಿಯನ್ನುಂಟುಮಾಡುವ ಚಿಕಿತ್ಸೆಗೆ ಹೆಸರು. ತರ್ಪಣ ವೆಂಬ ನೇತ್ರಚಿಕಿತ್ಸೆಯನ್ನು ಎಂತಹ ನೇತ್ರಗಳಿಗೆ ಮಾಡಬೇಕೆನ್ನುವುದನ್ನು ಪ್ರಥಮತಃ ವಿವರಿಸುತ್ತಾನೆ ಕಣ್ಣುಗಳು ರೂಕ್ಷವಾಗಿರುವುದು ಅಂದರ ಕಣ್ಣಿನೊಳಗೆ ಯಾವಾಗಲೂ ಇರಬೇಕಾದ ಒಂದು ವಿಧವಾದ ಜಿಡ್ಡಿನ ದ್ರವವು ಇಲ್ಲದೆ ಒಣಗಿಹೋಗಿರುವುದು, ಕಣ್ಣುಗಳು ಯಾವಾಗಲೂ ಕಲ್ಮಷಸುತ್ತಿಕೊಂಡು ವಕ್ರವಾಗಿರುವುದು, ರೆಪ್ಪೆಗಳು ಉದುರುತ್ತಿರುವುದು, ಕಣ್ಣಿನೊಳಗಿರುವ ನರಗಳು ಉಬ್ಬಿಕೊಂಡು ಕಣ್ಣುಕೆಂಪುಬಣ್ಣವಾಗಿ ಕೆಲವುವೇಳೆ ಅಸಾಧ್ಯವಾದ ನೋವಿರು ವುದು. ಕೆಲವು ವೇಳೆ ನೋವಿಲ್ಲದಿರುವುದು ತಿಮಿರವೆಂಬುವುದೊಂದು ಬಗೆಯ ನೇತ್ರರೋಗ. ಅಂದರೆ ಈ ರೋಗದಿಂದ ಕಣ್ಣುಕಾಣುವುದು ಮಂದವಾಗುತ್ತಾ ಬಂದು ಕ್ರಮೇಣ ಕಣ್ಣೇಹೋಗುತ್ತದೆ ಅರ್ಜುನವೆಂಬುವುದೊಂದು ಕಣ್ಣಿನ ಬಿಳಿಯ ಗುಡ್ಡೆಗೆ ಸಂಭವಿಸುವ ರೋಗ. ಈ ರೋಗದಲ್ಲಿ ಕಣ್ಣಿನ ಬಿಳೀಗುಡ್ಡೆಯ ಮೇಲೆ ರಕ್ತದ ಹನಿಯಂತಹ ಒಂದು ಕೆಂಪು ಗುರ್ತು ಕಾಣಿಸಿಕೊಳ್ಳುತ್ತದೆ ಶುಕ್ರವೆಂಬುವುದೊಂದು ಬಗೆಯ ನೇತ್ರರೋಗ, ಇದನ್ನೇ ಲೋಕದಲ್ಲಿ ಕಣ್ಣಿನಲ್ಲಿ ಹುವ್ವುಕುಳಿತಿರುವುದೆಂದು ಹೇಳುತ್ತಾರೆ. ಅಭಿಷ್ಯಂದವೆನ್ನುವುದೊಂದು ಬಗೆಯ ನೇತ್ರರೋಗ; ಇದು ಸಮಸ್ತವಿಧವಾದ ನೇತ್ರರೋಗಗಳನ್ನೂ ಹುಟ್ಟಿಸುತ್ತದೆ ಅಧಿಮಂಥವೆಂದರ ಅದೊಂದುಬಗೆಯ ಕಣ್ಣಿನಲ್ಲಿ ಬರುವ ಬಾಕು, ನೋವು ವ್ಯಥೆಗಳು ಬಹಳವಾಗಿರುತ್ತವೆ. ಶುಷ್ಕಾಕ್ಷಿಪಾಕವೆಂದರೆ ಕಣ್ಣಿನ ಭಾಗವೆಲ್ಲಾ ಒಣಗಿ ಬಕ್ಕೆಸೂಸುವುದು, ಶೋಭೆಯೂ ಮತ್ತೂ ಅದರೊಟ್ಟಿಗೆ ಕಣ್ಣಿನಲ್ಲಿ ಬಕ್ಕೆಗಳು ಸೂಸುವುದು ವಾತವಿಪರ್ಯಯವೆಂಬುವುದೊಂದು ಬಗೆಯ ವಾತ ರೋಗ ಇದರಿಂದ ಕಣ್ಣಿನಲ್ಲಿ ಬಾಕು, ಪತತ ಮೊದಲಾದ ವಾತವಿಕಾರಗಳೆಲ್ಲವೂ ಉಂಟಾಗುತ್ತಲಿರುವುದು. ಇಂತಹ ವಿಕಾರಗಳಿದ್ದಲ್ಲಿ ಆಗ್ಯೆ ತರ್ಪಣವೆಂಬ ನೇತ್ರಚಿಕಿತ್ಸಾಕ್ರಮವನ್ನು ಉಪಯೋಗಿಸತಕ್ಕದ್ದು ತರ್ಪಣವೆಂಬ ಚಿಕಿತ್ಸಾ ಕ್ರಮವನ್ನು ಯಾವಾಗ್ಯೆ ತ್ಯಜಿಸಬೇಕೆನ್ನುವುದನ್ನು ಹೇಳುತ್ತಾನೆ. ದುರ್ದಿನ ವೆಂದರೆ ಮೋಡ ಮುಸುಕಿಕೊಂಡಿರುವ ದಿವಸ, ಅತಿಯಾದ ಬಿಸಿಲಿರುವ ದಿವಸ. ಅತಿಯಾಗಿ ಶೀತವಿರುವ ದಿವಸ, ಮನುಷ್ಯನು ಅತಿಯಾಗಿ ಚಿಂತಾಯುಕ್ತ ನಾಗಿರುವಾಗ್ಯೆ, ಅತಿಯಾಗಿ ಆಯಾಸಪಟ್ಟಿರುವಾಗ್ಯೆ, ಬುದ್ಧಿಭ್ರಮೆ ಯಿರುವಾಗ್ಯೆ, ನೇತ್ರೋಪದ್ರವಗಳೆಲ್ಲವೂ ಶಾಂತಸ್ಥಿತಿಗೆ ಬಂದಿರುವಾಗ್ಯೆ, ಇಂತಹ

ಕಾಲಗಳಲ್ಲಿ ನೇತ್ರಪ್ರಸಾದನ ಕರ್ಮವನ್ನು ನಡೆಯಿಸಬಾರದು. ಇದನ್ನು ಮಾಡತಕ್ಕ ವಿಧಾನವನ್ನು ಹೇಳುತ್ತಾನೆ. ಬಿಸಿಲು, ಗಾಳಿ, ಧೂಳು ಇಲ್ಲದಿರುವ ಪ್ರದೇಶದಲ್ಲಿ ನೇತ್ರರೋಗಿಯನ್ನು ಮೇಲಕ್ಕೆ ಮುಖಮಾಡಿ ಮಲಗಿಸಿ, ಉದ್ದಿನ ಹಿಟ್ಟನ್ನು ಕಲಸಿಕೊಂಡು, ಕಣ್ಣಿನಗುಣಿಯುಸುತ್ತಲೂ ದುಂಡಗೆ ಗಟ್ಟಿಯಾಗಿ ಕಿತ್ತುಹೋಗದಂತೆ ಕಟ್ಟೆ ಕಟ್ಟಬೇಕು. ಇಂತಹ ಗಣಿಗಳು ಅರ್ಧ ಅಂಗುಲ ಆಳವಾಗಿಯೂ ಎರಡಂಗುಲ ಅಗಲವಾಗಿಯೂ ಇರಬೇಕು. ತುಪ್ಪವನ್ನು ಕಾಯಿಸಿ ಒಂದು ಪಾತ್ರೆಗೆ ಸುರಿದರೆ ಕಲ್ಮಷವೆಲ್ಲವೂ ತಳದಲ್ಲಿ ನಿಂತು ಮೇಲು ಭಾಗದಲ್ಲಿ ಕೆನೆಯು ನಿಲ್ಲುತ್ತದೆ ಆ ಕೆನೆಯನ್ನು ಸುಖೋಷ್ಣವಾದ ಬಿಸಿನೀರಿನಲ್ಲಿ ಕರಗಿಸಿ ಕಣ್ಣಿನಸುತ್ತಲೂ ಕಟ್ಟಲ್ಪಟ್ಟಿರುವ ಗುಣಿಯಲ್ಲಿ ತುಂಬಿಸಬೇಕು. ಅಥವಾ ಶತಧೌತಘೃತವೆಂಬ ಔಷಧೋಪಯುಕ್ತವಾದ ಘೃತವನ್ನಾಗಲೀ ಬಿಸಿ ನೀರಿನಲ್ಲಿ ಕರಗಿಸಿ ತುಂಬಿಸಬಹುದು ಅಥವಾ ಹಾಲನ್ನೇ ಕಡೆದು ಅದರಿಂದ ಸಿಕ್ಕುವ ಬೆಣ್ಣೆಯಿಂದ ತುಪ್ಪಮಾಡಿಯಾದರೂ ಉಪಯೋಗಿಸಿಕೊಳ್ಳಬಹುದು. ಎಷ್ಟುಮಟ್ಟಿಗ ತುಂಬಿಸಬೇಕೆಂಬ ಪ್ರಮಾಣವನ್ನು ಹೇಳುತ್ತಾನೆ ಕಣ್ಣಿನ ರೆಪ್ಪೆ ಮುಳುಗುವವರಿವಿಗೂ ತುಂಬಿಸತಕ್ಕದ್ದು. ತುಂಬಿಸತಕ್ಕ ಕಾಲದಲ್ಲಿ ಕಣ್ಣು ಮುಚ್ಚಿಕೊಂಡೇ ಇರಬೇಕು. ತುಂಬಿಸಿ ಆದಮೇಲೆ ಮೆಲ್ಲಗೆ ಕಣ್ಣನ್ನು ಬಿಡಬೇಕು ಯಾವ್ಯಾವ ರೋಗಗಳಲ್ಲಿ ಎಷ್ಟು ಎಷ್ಟು ಹೊತ್ತು ಈ ರೀತಿಮಾಡ ಬೇಕೆನ್ನುವುದನ್ನು ತಿಳಿಸುತ್ತಾನೆ. ರೆಪ್ಪೆಗೆ ಸಂಬಂಧಪಟ್ಟ ರೋಗಗಳಲ್ಲಿ ಹಿಂದೆ ಹೇಳಿರುವಂತೆ ಒಂದು ನೂರು ಮಾತ್ರೆಗಳ ಕಾಲ ಕಣ್ಣಿನಮೇಲೆ ಇರಿಸಿ ಕೊಂಡಿರಬೇಕು. ಕಫದೋಷವೇನೂ ಇಲ್ಲದೆ ನೇತ್ರಸಂಧಿಗಳಲ್ಲಿ ಮಾತ್ರವೇ ರೋಗಗಳಿರುವಾಗ್ಯೆ ಐದುನೂರು ಮಾತ್ರೆಗಳ ಕಾಲವೂ ಕಣ್ಣಿನ ಬಿಳಿಗುಡ್ಡೆಯಲ್ಲಿ ದೋಷವಿರುವುದಾದರೆ ಆರುನೂರು ಮಾತ್ರೆಗಳ ಕಾಲವೂ ಕರಿಯಗುಡ್ಡೆಯಲ್ಲಿ ದೋಷಗಳಿರುವಾಗ್ಯೆ ಏಳುನೂರು ಮಾತ್ರೆಗಳ ಕಾಲವೂ, ದೃಷ್ಟಿಗೋಳದಲ್ಲಿಯೇ ದೋಷವಿದ್ದಲ್ಲಿ ಎಂಟುನೂರು ಮಾತ್ರೆಗಳ ಕಾಲವೂ, ನೇತ್ರಾಧಿಮಂಥ ಮತ್ತು ಇತರ ವಿಧಗಳಾದ ವಾತರೋಗಗಳಲ್ಲಿ ಒಂದು ಸಾವಿರ ಮಾತ್ರೆಗಳ ಕಾಲವೂ ಮೇಲೆ ಹೇಳಿದ ತರ್ಪಣವನ್ನು ಕಣ್ಣಿನಮೇಲೆ ನಿಲ್ಲಿಸಿಕೊಳ್ಳಬೇಕು ಇಂತಹ ತರ್ಪಣ ಚಿಕಿತ್ಸೆಯಿಂದ ಹೊರಬಿದ್ದ ಕಫವನ್ನು ಹುರಿದ ಜವೇಗೋಧಿಹಿಟ್ಟಿನ ಶಾಖದಿಂದ ಧೂಮಪಾನದಿಂದ ಈ ರೀತಿಯಾದ ಯಾವುದಾದರೂ ಕ್ರಮದಿಂದ ಶೋಧಿಸಿ ತೆಗೆಯಬೇಕು. ಈ ತರ್ಪಣಚಿಕಿತ್ಸೆಯನ್ನು ಒಂದು ದಿವಸ, ಮೂರು ದಿವಸ, ಐದು ದಿವಸ ಈ ರೀತಿಯಾಗಿ ದೋಷಾನುರೋಧೇನ ನಡೆಯಿಸತಕ್ಕದ್ದು. ಈ ತರ್ಪಣ ಚಿಕಿತ್ಸೆಮಾಡಿದ ಮೇಲೆ ಕಣ್ಣಿಗೆ ಚಿಕಿತ್ಸೆಯಿಂದ ತೃಪ್ತಿಯಾಯಿತು ಎನ್ನುವುದನ್ನು ಮುಂದೆ ಹೇಳುವ ಚಿಹ್ನೆಗಳಿಂದ ಗುರ್ತಿಸಬೇಕು. ಸುಖವಾಗಿ

ನಿದ್ರೆ ಬರುವುದು, ಸುಖವಾಗಿ ಎಚ್ಚರಗೊಳ್ಳುವುದು, ಕಣ್ಣುಗಳು ಸ್ವಚ್ಛವಾಗಿರುವುದು, ಕಣ್ಣಿನ ಬಣ್ಣವು ಸರಿಯಾಗಿರುವುದು, ನೇತ್ರಪಾಟವ ಚನ್ನಾಗಿರುವುದು, ಕಣ್ಣಿನರೋಗಗಳು ಶಾಂತವಾಗಿರುವುದು, ಕಣ್ಣುಗಳು ತಮ್ಮ ಕೆಲಸವನ್ನು ಲವಲವಿಕೆಯಿಂದ ಮಾಡುತ್ತಿರುವುದು. ಇವುಗಳೆಲ್ಲಾ ತೃಪ್ತಿಯಾದದ್ದಕ್ಕೆ ಚಿಹ್ನೆಗಳು. ತರ್ಪಣ ಕ್ರಿಯೆಯು ಹೆಚ್ಚಾದರೆ ಕಣ್ಣಿನಲ್ಲಿ ಕಾಣಬರುವ ದುರ್ಲಕ್ಷಣಗಳನ್ನು ಹೇಳುತ್ತಾನೆ. ಕಣ್ಣಿನಲ್ಲಿ ಯಾವಾಗಲೂ ನೀರು ಸುರಿಯುತ್ತಿರುವುದು, ಕಣ್ಣು ಭಾರೈಸಿಕೊಂಡಿರುವುದು, ಕಣ್ಣಿನಲ್ಲಿ ಯಾವಾಗಲೂ ಜಿಡ್ಡು ಜಿನುಗುತ್ತಿರುವುದು ಇಂತಹ ದುರ್ಲಕ್ಷಣಗಳು ಕಾಣಬರುತ್ತಿರುತ್ತವೆ. ತರ್ಪಣ ಕ್ರಿಯೆಯು ಸಾಲದೆ ಹೋದಲ್ಲಿ ಕಾಣುವ ದುರ್ಲಕ್ಷಣಗಳು ಯಾವುವೆಂದರೆ ಕಣ್ಣುಗಳಲ್ಲಿ ಜಿಡ್ಡಿಲ್ಲದಿರುವುದು, ಕಣ್ಣಿನಲ್ಲಿ ನೀರು ತುಂಬಿಕೊಂಡಿರುವುದು, ಯಾವುದಾದರೂ ಒಂದು ಬಗೆಯ ನೇತ್ರವ್ಯಾಧಿ ಇದ್ದೇ ಇರುವುದು ಇಂತಹ ದುರ್ಲಕ್ಷಣಗಳು ಕಾಣುತ್ತಿರುತ್ತವೆ. ಇಂತಹ ಹೀನಯೋಗ, ಅತಿಯೋಗಗಳಿಂದ ಸಂಭವಿಸಿದ ದುರ್ಲಕ್ಷಣಗಳಿಗೆ ಕ್ರಮವಾಗಿ ಹೀನಯೋಗಕ್ಕೆ ಸ್ನಿಗ್ಧೋಪಚಾರಗಳನ್ನೂ ಅತಿಯೋಗಕ್ಕೆ ರೂಕ್ಷೋಪಚಾರಗಳನ್ನೂ ಮಾಡಿ ಸರಿಪಡಿಸಿಕೊಳ್ಳಬೇಕು

## ಪುಟಪಾಕ.

ಅಥಊರ್ಧ್ವಂಪ್ರವಕ್ಷ್ಯಾಮಿಪುಟಪಾಕಸ್ಯಸಾಧನಂ ॥ ೫೨ ॥
ದ್ವೌಬಿಲ್ವಮಾತ್ರೌಮಾಂಸಸ್ಯಪಿಂಡೌಸ್ನಿಗ್ಧೌಸುಪೇಷಿತೌ ॥
ದ್ರವ್ಯಾಣಾಂಬಿಲ್ವಮಾತ್ರಂತುದ್ರವಾಣಾಂಕುಡವೋಮತಃ ॥ ೫೩ ॥
ತದೇಕಸ್ಥಂಸಮಾಲೋಡ್ಯಪತ್ರೈಃಸುಪರಿವೇಷ್ಟಿತಂ ॥
ಪುಟಪಾಕೇನತತ್ ಪಕ್ತ್ವಾಗೃಹ್ಣೀಯಾತ್ತದ್ರಸಂಬುಧಃ ॥ ೫೪ ॥
ತರ್ಪಣೋಕ್ತವಿಧಾನೇನಯಥಾವದುಪಚಾರಯೇತ್ ॥
ದೃಷ್ಟಿಮಧ್ಯೇನಿಷೇಚ್ಯಸ್ಸ್ಯಾನ್ನಿತ್ಯಮುತ್ತಾನಶಾಯಿನಃ ॥ ೫೫ ॥
ಸ್ನೇಹನೋಲೇಖನಶ್ಚೈವರೋಪಣಶ್ಚೇತಿಸತ್ರಿಧಾ ॥
ಹಿತಃಸ್ನಿಗ್ಧೋತಿರೂಕ್ಷಸ್ಯಸ್ನಿಗ್ಧಸ್ಯಾತಿಹಿಲೇಖನಃ ॥ ೫೬ ॥
ದೃಷ್ಟೇರ್ಬಲಾರ್ಥಮಿತರಃಪಿತ್ತಾಸೃಗ್ವ್ರಣವಾತನುತ್ ॥
ಸರ್ಪಿರ್ಮಾಂಸವಸಾಮಜ್ಜಾಮೇದಃಸ್ವಾದ್ವೌಷಧೈಃಕೃತಃ ॥ ೫೭ ॥
ಸ್ನೇಹನಃಪುಟಪಾಕಸ್ತು ಧಾರ್ಯೋದ್ವೇವಾಕ್ ಶತೇದ್ವಶೋಃ ॥
ಜಾಂಗಲಾನಾಂಯಕೃನ್ಮಾಂಸೈರ್ಲೇಖನದ್ರವ್ಯಸಂಯುತೈಃ ॥ ೫೮ ॥
ಕೃಷ್ಣಲೋಹರಜಸ್ತಾಮ್ರಶಂಖವಿದ್ರುಮಸಿಂಧುಜೈಃ ॥

ಸಮುದ್ರಫೇನಕಾಸೀಸಸ್ರೋತೋಜದಧಿಮಸ್ತುಭಿಃ ॥ ೫೯ ॥
ಲೇಖನೋವಾಕ್ಶತಂಧಾರ್ಯಸ್ತಸ್ಯೈತಾವದ್ವಿಧಾರಣಂ ॥
ಸ್ತನ್ಯಜಾಂಗಲಮಧ್ವಾಜ್ಯತಿಕ್ತಕದ್ರವ್ಯಸಾಧಿತಃ ॥ ೬೦ ॥
ಲೇಖನಾತ್ರಿಗುಣೋಧಾರ್ಯಃಪುಟಪಾಕಸ್ತುರೋಪಣಃ ॥
ಪಿತರೇತ್ತರ್ಪಣೋಕ್ತಾಂತುಕ್ರಿಯಾಂವ್ಯಾಪತ್ತಿದರ್ಶನೇ ॥ ೬೧ ॥

ನೇತ್ರ ಚಿಕಿತ್ಸೆಯಲ್ಲಿ ಉಪಯೋಗವಾಗುವ ಪುಟಪಾಕವೆಂಬ ಕ್ರಿಯೆಯನ್ನು ಹೇಳುತ್ತಾನೆ. ಪುಟಪಾಕವೆಂದರೆ ಔಷಧೋಪಯುಕ್ತಗಳಾದ ಪದಾರ್ಥಗಳನ್ನು ಉಪಯುಕ್ತಗಳಾದ ದ್ರವದ್ರವ್ಯಗಳೊಂದಿಗೆ ಸೇರಿಸಿ ಅರೆದು ಉಂಡೆಮಾಡಿ ಹಸಿಯಾದ ಎಲೆಯಲ್ಲಿ ಸುತ್ತಿ ಕೆಂಡದಲ್ಲಿ ಹೂಳಿ ಬೇಯಿಸಿ ಬೆಂದಮೇಲೆ ಆ ಮುದ್ದೆಯನ್ನೊ ಅಥವಾ ಅದರಿಂದ ಹೊರಡಬಹುದಾದ ರಸವನ್ನೊ ಔಷಧಿಯಾಗಿ ಉಪಯೋಗಿಸತಕ್ಕ ಕ್ರಮಕ್ಕೆ ಹೆಸರು. ನೇತ್ರ ಚಿಕಿತ್ಸೆಯಲ್ಲಿ ಉಪಯೋಗಬೀಳುವ ಪುಟಪಾಕವನ್ನು ತಯಾರಿಸುವ ಕ್ರಮವೇನೆಂದರೆ ಒಂದೊಂದು ಪಲತೂಕ ಎರಡು ಉಂಡೆ ಮಾಂಸವನ್ನು ಸಂಗ್ರಹಿಸಿಕೊಳ್ಳಬೇಕು. ಕೊಬ್ಬಿನಿಂದ ಸಹಿತವಾದ ಆ ಮಾಂಸವನ್ನು ಚೆನ್ನಾಗಿ ಅರೆದುಕೊಳ್ಳತಕ್ಕದ್ದು; ಅದರ ಜೊತೆಗೆ ಔಷಧ ದ್ರವ್ಯಗಳನ್ನೇನಾದರೂ ಸೇರಿಸತಕ್ಕದ್ದಿದ್ದಲ್ಲಿ ಗಟ್ಟಿಪದಾರ್ಥಗಳಾದರೆ ಒಂದೊಂದೇ ಪಲದಷ್ಟನ್ನೂ ದ್ರವಪದಾರ್ಥಗಳಾದರೆ ಒಂದೊಂದು ಕುಡವ ಪರಿಮಾಣದಷ್ಟನ್ನೂ ಸೇರಿಸಿ ಅರೆದಿರುವ ಆ ಮಾಂಸದೊಂದಿಗೆ ಸೇರಿಸಿ ಕಲೆಸಿ ಉಂಡೆಮಾಡಿಕೊಂಡು ಆ ಉಂಡೆಗೆ ಹಸಿಯ ಎಲೆಯನ್ನು ಸುತ್ತಿ ಕೆಂಡದಲ್ಲಿ ಹೂಳಿ ಪಕ್ವವಾದ ಮೇಲೆ ಅದರ ರಸವನ್ನು ಸಂಗ್ರಹಿಸಿ ಹಿಂದೆ ತರ್ಪಣಕ್ರಮದಲ್ಲಿ ಹೇಳಿರುವಂತೆ ಕಣ್ಣಿನಸುತ್ತಲೂ ಹಿಟ್ಟಿನಕಟ್ಟೆಯನ್ನು ಕಟ್ಟಿ ಅಂಗತನಕನಾಗಿ ಮಲಗಿಸಿ ಆ ದ್ರವವನ್ನು ಕಣ್ಣಿನ ಮಧ್ಯಕ್ಕೆ ಸುರಿಯಬೇಕು. ಈ ಪುಟಪಾಕ ಕ್ರಮವು ಮೂರುವಿಧ ಸ್ನೇಹನ ಲೇಖನ, ರೋಪಣ ಎಂಬದಾಗಿ ನೇತ್ರಗಳು ಅತ್ಯಂತ ರೂಕ್ಷಗಳಾಗಿದ್ದರೆ ಸ್ನೇಹನವೆಂಬ ಪುಟಪಾಕಕ್ರಮದಿಂದ ಚಿಕಿತ್ಸೆಮಾಡುವುದು ಹಿತಕರವಾದದ್ದು. ಅತಿಸ್ನಿಗ್ಧಗಳಾಗಿದ್ದರೆ ಲೇಖನವೆಂಬ ಪುಟಪಾಕಕ್ರಮದಿಂದ ಮಾಡುವುದು ಹಿತಕರವಾದದ್ದು. ರೋಪಣವೆಂಬ ಪುಟಪಾಕಕ್ರಮವು ಕಣ್ಣಿಗೆ ಬಲವನ್ನುಂಟುಮಾಡುವುದಕ್ಕೂ ಮತ್ತು ದೃಷ್ಟಿಗತಗಳಾದ ಪಿತ್ತದೋಷ, ರಕ್ತದೋಷ, ವಾತದೋಷ, ವ್ರಣ ಇವುಗಳನ್ನು ನಿವಾರಣಮಾಡುವುದಕ್ಕೂ ಉಪಯೋಗವಾಗುತ್ತದೆ. ಸ್ನೇಹನ ಪುಟಪಾಕಕ್ಕೆ ಉಪಯುಕ್ತಗಳಾದ ದ್ರವ್ಯಗಳನ್ನು ಹೇಳುತ್ತಾನೆ. ತುಪ್ಪ, ಮಾಂಸ, ( ವಸ, ಮಜ್ಜ, ಮೇದಸ್ಸು ) ಮಾಂಸ,

ಸಂಬಂಧಗಳಾದ ಬೇರೆ ಬೇರೆ ಬಗೆಯ ಜಿಡ್ಡುಗಳು, ಮಧುರರಸಪ್ರಚುರವಾದ ಔಷಧಗಳು ಇವುಗಳ ಮಿಶ್ರಣದಿಂದ ಸಿದ್ಧವಾದ ದ್ರವವು ಸ್ನೇಹನಪುಟಪಾಕಕ್ಕೆ ಉಪಯುಕ್ತವಾಗುತ್ತದೆ. ಈ ಸ್ನೇಹನ ಪುಟಪಾಕವನ್ನು ಎರಡು ನೂರು ವಾಕ್ಪರಿಮಾಣಕಾಲ ಕಣ್ಣಿನಮೇಲೆ ನಿಲ್ಲಿಸಿಕೊಂಡಿರಬೇಕು. ಲೇಖನಪುಟಪಾಕಕ್ಕೆ ಉಪಯುಕ್ತಗಳಾದ ದ್ರವ್ಯಗಳನ್ನು ಹೇಳುತ್ತಾನೆ. ಜಾಂಗಲ ಮೃಗಗಳ ಯಕೃತ್ತು, ಮಾಂಸ ಲೇಖನದ್ರವ್ಯಗಳು ಕಬ್ಬಿಣದಪುಡಿ, ತಾಮ್ರದ ಸೂಕ್ಷ್ಮ ಚೂರ್ಣ, ಶಂಖದ ಚೂರ್ಣ, ಹವಳದ ಚೂರ್ಣ, ಸೈಂಧವಲವಣ, ಸಮುದ್ರದ ನೊರೆ, ಅನ್ನಭೇದಿ, ಸ್ರೋತೋಂಜನ, ಮೊಸರಿನ ಕೆನೆ ಇವುಗಳಿಂದ ಪುಟಪಾಕ ಕ್ರಮದಲ್ಲಿ ಸಂಗ್ರಹಿಸಲ್ಪಟ್ಟ ದ್ರವವು ಲೇಖನೋಪಯೋಗಿಗಳೆಂದು ತಿಳಿಯ ತಕ್ಕದ್ದು. ಈ ಲೇಖನ ಪುಟಪಾಕದ್ರವವನ್ನು ಕಣ್ಣಿನಮೇಲೆ ಒಂದುನೂರು ವಾಕ್ಪರಿಮಾಣ ಕಾಲಮಾತ್ರ ನಿಲ್ಲಿಸಿಕೊಳ್ಳಬೇಕು. ರೋಪಣಪುಟಪಾಕೋಪ ಯುಕ್ತ ದ್ರವ್ಯಗಳನ್ನು ಹೇಳುತ್ತಾನೆ. ಮೊಲೆಹಾಲು, ಜಾಂಗಲಮೃಗಗಳ ಮಾಂಸ, ಜೇನುತುಪ್ಪ, ತುಪ್ಪ, ಕಹಿರಸಯುಕ್ತಗಳಾದ ಔಷಧ ದ್ರವ್ಯಗಳು ಇವುಗಳಿಂದ ಪುಟಪಾಕಕ್ರಮದಿಂದ ಸಂಗೃಹೀತವಾದ ದ್ರವವು ರೋಪಣಪುಟಪಾಕಕ್ಕೆ ಉಪಯುಕ್ತವಾದದ್ದು. ಈ ರೋಪಣಪುಟಪಾಕವನ್ನು ಲೇಖನಪುಟಪಾಕದ ಮೂರರಷ್ಟುಕಾಲ ಕಣ್ಣಿನಮೇಲೆ ನಿಲ್ಲಿಸಿಕೊಳ್ಳಬೇಕು. ಇನ್ನು ಈ ಪುಟಪಾಕಗಳ ಹೆಚ್ಚುಕಡಮೆ ಯಿಂದ ಕಣ್ಣಿನಲ್ಲಿಯೇ ನಾದರೂ ತೊಂದರೆ ಕಂಡುಬಂದಲ್ಲಿ ತರ್ಪಣ ಕ್ರಿಯೆಯಿಂದುಂಟಾಗುವ ಅಪಾಯಗಳ ಚಿಕಿತ್ಸೆಯನ್ನೇ ಇಲ್ಲಿಯೂ ಅನುಸರಿಸ ಬೇಕು.

## ಅಂಜನ

ಅಥಸಂಪಕ್ವದೋಷಸ್ಯಪ್ರಾಪ್ತಮಂಜನಮಾಚರೇತ್ ॥
ಹೇಮಂತೇಶಿಶಿರೇಚೈವಮಧ್ಯಾಹ್ನೇಂಜನಮಿಷ್ಯತೇ ॥ ೬೨ ॥
ಪೂರ್ವಾಹ್ನೇಚಾಪರಾಹ್ನೇಚಗ್ರೀಷ್ಮೇಶರದಿಚೇಷ್ಯತೇ ॥
ವರ್ಷಾಸುನಾಭ್ರೇನಾತ್ಯುಷ್ಣೇವಸಂತೇಚಸದೈವಹಿ ॥ ೬೩ ॥
ಲೇಖನಂರೋಪಣಂಚೈವತಥಾಸ್ಯಾತ್ಸ್ನೇಹನಾಂಜನಂ ॥
ಲೇಖನಂಕ್ಷಾರತೀಕ್ಷ್ಣಾಮ್ಲರಸೈರಂಜನಮಿಷ್ಯತೇ ॥ ೬೪ ॥
ಕಷಾಯತಿಕ್ತರಸಯುಕ್ ಸ್ನೇಹಸಂರೋಪಣಂಮತಂ ॥
ಮಧುರಂಸ್ನೇಹಸಂಪನ್ನಮಂಜನಂತು ಪ್ರಸಾದನಂ ॥ ೬೫ ॥
ಗುಟಿಕಾರಸಚೂರ್ಣಾನಿತ್ರಿವಿಧಾನ್ಯಂಜನಾನಿಚ ॥

ಕುರ್ಯಾಚ್ಛಲಾಕಯಾಂಗುಲ್ಯಾಹೀನಾನಿಚಯಥೋತ್ತರಂ॥ ೬೬ ॥
ಶ್ರಾಂತೇಪ್ರರುದಿತೇಭೀತೇಪೀತಮಧ್ಯೇನವಜ್ವರೇ ॥
ಅಜೀರ್ಣೇವೇಗಘಾತೇಚನಾಂಜನಂಸಂಪ್ರಶಸ್ಯತೇ ॥ ೬೭ ॥
ಹರೇಣುಮಾತ್ರಾಂಕುರ್ವೀತವರ್ತಿಂತೀಕ್ಷ್ಣಾಂಜನೇಭಿಷಕ್ ॥
ಪ್ರಮಾಣಂಮಧ್ಯಮೇಧ್ಯರ್ಧಂದ್ವಿಗುಣಂತುಮೃದೌಭವೇತ್॥ ೬೮॥
ರಸಕ್ರಿಯಾತೂತ್ತಮಾಸ್ಯಾತ್ರಿ ವಿಡಂಗಮಿತಾಹಿತಾ ॥
ಮಧ್ಯಮಾದ್ವೇವಿಡಂಗಾಸ್ಯಾದ್ಧೀನಾತ್ವೇಕವಿಡಂಗಿಕಾ ॥ ೬೯ ॥
ವೈರೇಚನಿಃಚೂರ್ಣಂತುದ್ವಿಶಲಾಕಂವಿಧೀಯತೇ ॥
ಮೃದೌತುತ್ರಿಶಲಾಕಂಸ್ಯಾಚ್ಚತಸ್ರಃಸ್ನೈಹಿಕೇಂಜನೇ ॥ ೭೦ ॥
ಮುಖಯೋಃಕುಂಠಿತಾಶ್ಲಕ್ಷ್ಣಾಶಲಾಕಾಷ್ಟಾಂಗುಲೋನ್ಮಿತಾ ॥
ಅಶ್ಮಜಾಧಾತುಜಾವಾಸ್ಯಾತ್ಕಲಾಯಪರಿಮಂಡಲಾ ॥ ॥ ೭೧ ॥
ತಾಮ್ರಲೋಹಾಶ್ಮಸಂಜಾತಾಶಲಾಕಾಲೇಖನೇಮತಾ ॥
ಸುವರ್ಣರಜತೋದ್ಭೂತಾಶಲಾಕಾಸ್ನೇಹನೇಮತಾ ॥ ೭೨ ॥
ಅಂಗುಲೀವಮೃದುತ್ವೇನಕಥಿತಾರೋಪಣೇಬುಧೈಃ ॥
ಸಾಯಂಪ್ರಾತರ್ನಾಂಜನಂಸ್ಯಾತ್ತತ್ಸದಾನೈವಕಾರಯೇತ್॥ ೭೩ ॥
ನಾತಿಶೀತೋಷ್ಣವಾತಾಭ್ರವೇಲಾಯಾಂಸ ಪ್ರಶಸ್ಯತೇ ॥
ಕೃಷ್ಣಭಾಗಾದಧಃಕುರ್ಯಾದಪಾಂಗೇಯಾವದಂಜನಂ ॥ ೭೪ ॥

ಅಂಜನವಿಚಾರವನ್ನು ಹೇಳುತ್ತಾನೆ. ಅಂಜನವೆಂದರೆ ಕಣ್ಣಿಗೆ ಕಪ್ಪಿಟ್ಟು ಕೊಳ್ಳುವುದೆಂದು ಲೋಕದಲ್ಲಿ ರೂಢಿಯಲ್ಲಿರತಕ್ಕ ಚಿಕಿತ್ಸೆ. ಯಾವಾಗ್ಯೂ ಅಂಜನ ಚಿಕಿತ್ಸೆಯನ್ನು ಮಾಡಬೇಕಾದರೆ ನೇತ್ರದೋಷಗಳೆಲ್ಲಾ ಕ್ರಮವಾಗಿ ಪಕ್ವವಾಗಿರಬೇಕು. ಪಕ್ವವಾಗುವ ಮುಂಚಿತವಾಗಿ ಮಾಡಬಾರದು. ಹಿಮಂತಋತು ಮತ್ತು ಶಿಶಿರಋತುಗಳಲ್ಲಿ ಯಾವಾಗ್ಯೂ ಮಧ್ಯಾಹ್ನದವೇಳೆಯಲ್ಲಿಯೇ ಅಂಜನ ಚಿಕಿತ್ಸೆಯನ್ನು ನಡೆಸತಕ್ಕದ್ದು. ಗ್ರೀಷ್ಮ ಮತ್ತು ಶರದೃತುಗಳಲ್ಲಿ ಪೂರ್ವಾಹ್ಣ ಮತ್ತು ಅಪರಾಹ್ಣಗಳಲ್ಲಿ ಅಂದರೆ ಗ್ರೀಷ್ಮ ಋತುವಿನಲ್ಲಿ ಪೂರ್ವಾಹ್ಣದಲ್ಲಿ ಶರದೃತುವಿನಲ್ಲಿ ಅಪರಾಹ್ಣದಲ್ಲಿ ಅಂಜನ ಚಿಕಿತ್ಸೆಯನ್ನು ಮಾಡಬೇಕು. ವರ್ಷ ಋತುವಿನಲ್ಲಿಯೂ ಆಕಾಶದಲ್ಲಿ ಮೋಡಗಳಿಲ್ಲದಕಾಲದಲ್ಲಿಯೂ ಅತಿಯಾಗಿ ಉಷ್ಣವಲ್ಲದಕಾಲಗಳಲ್ಲಿಯೂ, ವಸಂತಕಾಲದಲ್ಲಿಯೂ ಕಾಲನಿಯಮವಿಲ್ಲದೆ ಯಾವ ಹೊತ್ತಿನಲ್ಲಿ ಬೇಕಾದರೂ ಅಂಜನ ಚಿಕಿತ್ಸೆಮಾಡಬಹುದು. ಇಲ್ಲಿ ಹೇಳಿರತಕ್ಕಕಾಲವನ್ನು ಜ್ಯೋತಿಶ್ಶಾಸ್ತ್ರದಂತೆ ನೋಡಬಾರದು. ವೈದ್ಯಶಾಸ್ತ್ರ

ದಲ್ಲಿ ಅಂದರೆ ಬಾಹಟಋತುಚರ್ಯಾಧ್ಯಾಯದಲ್ಲಿ ಹೇಳಿರುವಂತೆ ನೋಡಬೇಕು. ಅಂಜನಚಿಕಿತ್ಸೆಗೆ ಉಪಯೋಗಪಡುವ ಅಂಜನಗಳು ಮೂರುವಿಧ. ಲೇಖನಾಂಜನ ರೋಪಣಾಂಜನ, ಸ್ನೇಹನಾಂಜನವೆಂಬದಾಗಿ. ಲೇಖನಾಂಜನಕ್ಕೆ ಉಪಯೋಗ ಬೇಕಾಗುವ ವಸ್ತುಗಳು ಯಾವುವೆಂದರೆ ಕ್ಷಾರಗಳು, ತೀಕ್ಷ್ಣವಸ್ತುಗಳು ಅಂದರ ಮೆಣಸು ಮೊದಲಾದವುಗಳು, ಗುಳಿಗಳು ಇವುಗಳೆಲ್ಲವೂ ಲೇಖನಾಂಜನೋಪಯುಕ್ತಗಳು. ರೋಪಣಾಂಜನೋಪಯುಕ್ತವಸ್ತುಗಳು ಒಗರುರಸದ ಪದಾರ್ಥಗಳು ಕಹಿರಸವಸ್ತುಗಳು ಇವುಗಳೊಟ್ಟಿಗೆ ಜಿಡ್ಡನ್ನೂ ಕೂಡಿಸಿದರೆ ರೋಪಣಾಂಜನೋಪಯುಕ್ತವಸ್ತುಗಳಾಗುತ್ತವೆ ಪ್ರಸಾದನಾಂಜನವೆಂದರೆ ಮಧುರಸಯುಕ್ತ ವಸ್ತುವಿನೊಡನೆ ಜಿಡ್ಡುಗಳನ್ನು ಸೇರಿಸಿ ಉಪಯೋಗಿಸಿದಲ್ಲಿ ಪ್ರಸಾದನಾಂಜನವೆನ್ನಿಸುತ್ತದೆ. ಅಂಜನಕ್ಕೆ ಉಪಯೋಗಬೇಕಾಗುವ ವಸ್ತುಗಳನ್ನು ಗುಳಿಗೆಗಳಾಗಿ, ದ್ರವವಾಗಿ, ಚೂರ್ಣವಾಗಿ ಈ ರೀತಿ ಮೂರು ತರನಾಗಿ ಸಿದ್ಧಪಡಿಸಿ ಇರಿಸಿಕೊಳ್ಳಬಹುದು ಈ ಅಂಜನವನ್ನು ಕಣ್ಣಿಗೆ ಉಪಯೋಗಿಸುವಾಗ್ಯೆ ಅಂಜನಹಾಕತಕ್ಕ ಲೋಹದ ಕಡ್ಡಿಗಳಿಂದಲಾಗಲಿ ಅಥವಾ ಬೆರಳುಗಳಿಂದಲಾಗಲೀ ಸೌಕರ್ಯಕ್ಕೆ ಬೇಕಾದಂತೆ ಉಪಯೋಗಿಸಬಹುದು ಗುಳಿಗೆ ರಸಕ್ರಿಯೆ ಚೂರ್ಣ ಎಂಬ ಮೂರು ವಿಧವಾದ ಅಂಜನಗಳಲ್ಲಿ ಮೊದಲನೆಯದಕ್ಕಿಂತ ಎರಡನೆಯದು ಗುಣದಲ್ಲಿ ಕಡಮೆ. ಅದಕ್ಕಿಂತಲೂ ಮೂರನೆಯದು ಕಡಮೆ ಎಂದು ತಿಳಿಯಬೇಕು. ಆಯಾಸಗೊಂಡಿರುವಾಗ ಅಂಜನಹಾಕಬಾರದು; ಹಾಗೆಯೇ ಅಳುತ್ತಿರುವಾಗ ಹೆದರಿದಾಗ್ಯೆ, ಮದ್ಯಪಾನಮಾಡಿರುವಾಗ್ಯೆ, ಹೊಸದಾಗಿ ಜ್ವರಬಂದಿರುವಾಗ್ಯೆ, ದೇಹದಲ್ಲಿ ಅಜೀರ್ಣರೋಗವಿರುವಾಗ್ಯೆ, ಮಲಮೂತ್ರಗಳವೇಗವು ತಡೆದಿರುವಾಗ್ಯೆ ಅಂಜನವನ್ನು ಹಾಕಬಾರದು. ತೀಕ್ಷ್ಣವಾದ ಅಂಜನವನ್ನು ಕಣ್ಣಿಗೆ ಉಪಯೋಗಿಸುವಾಗ್ಯೆ ಒಂದು ಹರೇಣು ಪರಿಮಾಣದಷ್ಟು ಅಂಜನವರ್ತಿಯನ್ನು ಮಾಡಿ ಉಪಯೋಗಿಸಬೇಕು. ರೋಪಣಾಂಜನವನ್ನು ಪ್ರಯೋಗಿಸುವಾಗ ಒಂದೂವರೆಹರೇಣು ಪರಿಮಾಣವರ್ತಿಯನ್ನು ಮಾಡಿ ಉಪಯೋಗಿಸಬೇಕು ಮೃದ್ವಂಜನವನ್ನು ಉಪಯೋಗಿಸಬೇಕಾದಲ್ಲಿ ಎರಡು ಹರೇಣು ಪ್ರಮಾಣವರ್ತಿಯನ್ನು ಮಾಡಿಕೊಳ್ಳಬೇಕು ( ಹರೇಣು ಎಂಬ ಪರಿಮಾಣವನ್ನು ಶಾರ್ಙ್ಗಧರಕಾರರು ಹೇಳಿಲ್ಲ ತ್ರಸರೇಣು ಎಂದರೆ ಮೂವತ್ತು ಪರಮಾಣುಗಳ ಪರಿಮಾಣವೆಂದು ಮಾತ್ರ ಹೇಳಿರುತ್ತಾರೆ. ) ರಸಕ್ರಿಯಾರೂಪವಾದ ಅಂಜನದಲ್ಲಿ ಉತ್ತಮ ಪರಿಮಾಣವು ಮೂರು ವಿಡಂಗದಷ್ಟು ಮಧ್ಯಮಪರಿಮಾಣವು ಎರಡು ವಿಡಂಗದಷ್ಟು, ಕನಿಷ್ಠ ಪರಿಮಾಣವೆಂದರೆ ಒಂದು ವಿಡಂಗದಷ್ಟುಮಾತ್ರ ಚೂರ್ಣಾಂಜನವನ್ನು ಉಪಯೋಗಿಸಬೇಕಾದಲ್ಲಿ ವಿರೇಚನಾರ್ಥವಾಗಿ ಅಂದರೆ ನೇತ್ರಗತದೋಷಗಳನ್ನು ಹೊರಕ್ಕೆ ಹೊರಡಿಸುವದಕ್ಕಾಗಿ ದ್ವಿಶಲಾಕವೆಂದರೆ ಎರಡುಸಾರಿ ಶಲಾಕಿ

ಯಿಂದ ಅದ್ದಿ ಕಣ್ಣಿಗೆ ಹಾಕತಕ್ಕದ್ದು. ಮೃದುವಾದ ಚೂರ್ಣಾಂಜನವಾಗಿದ್ದರೆ ಮೂರು ಶಲಾಕೆಗಳಷ್ಟನ್ನು ಹಾಕಬೇಕು. ಸ್ನೇಹಮಿಶ್ರಿತವಾದ ಅಂಜನದಲ್ಲಿ ನಾಲ್ಕು ಶಲಾಕೆಗಳ ಪರಿಮಾಣ ಅಂಜನವನ್ನು ಕಣ್ಣಿಗೆ ಹಾಕಬೇಕು. ಈ ಅಂಜನಹಾಕತಕ್ಕ ಸಲಾಕೆಯು ಎರಡು ಕಡೆಯ ತುದಿಗಳಲ್ಲಿಯೂ ನುಣುಪಾಗಿಯೂ ಮೊಂಡವಾಗಿ ಅಂದರೆ ಕಣ್ಣುಗುಡ್ಡೆಗೆ ಪೆಟ್ಟಾಗದಂತಿರಬೇಕು ಮತ್ತು ಎಂಟು ಅಂಗುಲ ಉದ್ದವಾಗಿಯೂ ಇರಬೇಕು. ಶಲಾಕೆಯು ಕಲ್ಲಿನದಾಗಿಯಾಗಲಿ ಅಥವಾ ಲೋಹದ್ದಾಗಿಯಾಗಲೀ ಇರಬಹುದು ಬಟಾಣಿಯ ಕಾಳಿನ ಹಾಗೆ ಶಲಾಕೆಯ ಎರಡು ತುದಿಯೂ ಬಟುವಾಗಿ ಇರಬೇಕು. ಲೇಖನಾಂಜನವನ್ನು ಹಾಕುವ ಶಲಾಕೆಯು ತಾಮ್ರದ್ದಾಗಿಯಾಗಲೀ, ಲೋಹದ್ದಾಗಿಯಾಗಲೀ, ಕಲ್ಲಿನದಾಗಿಯಾಗಲೀ ಇರಬಹುದು. ಸ್ನೇಹನಾಂಜನವನ್ನು ಹಾಕಲು ಉಪಯೋಗಿಸುವ ಸಲಾಕೆಯು ಬಂಗಾರದ್ದಾಗಿಯಾಗಲೀ, ಬೆಳ್ಳಿಯದಾಗಿಯಾಗಲೀ ಇರಬೇಕು. ರೋಪಣಾಂಜನವನ್ನು ಹಾಕಲು ಉಪಯೋಗಿಸುವ ಶಲಾಕೆಯು ಕೈಬೆರಳಿನಷ್ಟು ಮೃದುವಾಗಿರಬೇಕು. ಅಂಜನವನ್ನು ಬೆಳಗಿನ ಹೊತ್ತಾಗಲೀ ಸಾಯಂಕಾಲದ ಹೊತ್ತಾಗಲೀ ಹಾಕಿಕೊಳ್ಳಬೇಕು. ವಿನಹ ಬೇರೆ ಕಾಲಗಳಲ್ಲಿ ಹಾಕಿಕೊಳ್ಳಬಾರದ . ಅತಿಯಾಗಿ ಶೀತವಾಗಿರುವ ಕಾಲದಲ್ಲಿ, ಅತ್ಯುಷ್ಣವಾಗಿರುವ ಕಾಲದಲ್ಲಿ, ಅತಿಯಾಗಿ ಗಾಳಿ ಬೀಸುತ್ತಿರುವಾಗ್ಯೆ, ಅತಿಯಾಗಿ ಮೋಡವಾಗಿರುವಾಗ್ಯೆ ಅಂಜನವನ್ನು ಹಾಕಿಕೊಳ್ಳಬಾರದು. ಯಾವಾಗ್ಯೂ ಕರಿಗುಡ್ಡೆಯ ಕೆಳಭಾಗದಲ್ಲಿ ಕಣ್ಣಿನೊಳಗೆ ಅಂಜನವನ್ನು ಹಾಕಿಕೊಳ್ಳಬೇಕು

## ಚಂದ್ರೋದಯವರ್ತಿ.

ಶಂಖನಾಭಿರ್ವಿಭೀತಸ್ಯಮಜ್ಜಾ ಪಥ್ಯಾಮನಶ್ಶಿಲಾ ॥
ಪಿಪ್ಪಲೀಮರಿಚಂಕುಷ್ಠಂವಚಾಚೇತಿಸಮಾಂಶಕಂ ॥ ೭೫ ॥
ಛಾಗಕ್ಷೀರೇಣಸಂಪಿಷ್ಯವರ್ತಿಂಕೃತ್ವಾಯವೋನ್ಮಿತಾಂ ॥
ಹರೇಣುಮಾತ್ರಾಂಸಂಘೃಷ್ಯಜಲೈಃಕುರ್ಯಾದಥಾಂಜನಂ॥ ೭೬ ॥
ತಿಮಿರಂಮಾಂಸವೃದ್ಧಿಂಚಕಾಚಂಪಟಲಮರ್ಬುದಂ ॥
ರಾತ್ರ್ಯಂಧ್ಯಂವಾರ್ಷಿಕಂಪುಷ್ಪಂವರ್ತಿಶ್ಚಂದ್ರೋದಯಾ
ಜಯೇತ್ ॥ ೭೭ ॥

ನೇತ್ರಚಿಕಿತ್ಸೋಪಯೋಗಿಗಳಾದ ಕೆಲವು ಔಷಧಗಳನ್ನು ಹೇಳುತ್ತಾನೆ. ಊಮುವ ಶಂಖದಮಧ್ಯದಲ್ಲಿ ನ ಭಿಯಂತೆ ಸುತ್ತಿಕೊಂಡಿರುವ ಭಾಗ, ತಾರೇ

ಕಾಯಿನ ಪೊಪ್ಪು, ಅಳಲೆಯಕಾಯಿ, ಮಣಿಶಿಲೆ, ಹಿಪ್ಪಲಿ, ಮೆಣಸು, ಚಂಗಲ ಕೋಷ್ಠ, ಬಜೆ ಇವೆಲ್ಲವನ್ನೂ ಸಮಾಂಶ ಸೇರಿಸಿಕೊಂಡು ಆಡಿನ ಹಾಲಿನಿಂದ ನುಣ್ಣಗೆ ಅರೆದು, ಬತ್ತಿಯಹಾಗೆ ಉದ್ದುದ್ದವಾಗಿ ಕುಡುಹುಗಳನ್ನು ಒಂದೊಂದು ಯವಪರಿಮಾಣದಷ್ಟು ಮಾಡಿ ಇರಿಸಿಕೊಳ್ಳತಕ್ಕದ್ದು. ಇದರಲ್ಲಿ ಒಂದು ಹರೇಣು ಪರಿಮಾಣವನ್ನು ನೀರಿನಿಂದ ತೇದು ಕಣ್ಣಿಗೆ ಅಂಜನವಾಗಿ ಹಾಕಿ ಕೊಂಡಲ್ಲಿ ಕಣ್ಣಿನ ಮಂಜು ಕಣ್ಣಿನೊಳಗೆ ದುರ್ಮಾಂಸ ಬೆಳೆಯುವುದು, ಗೀಜು ಹಾಯುವುದು, ಪರೆ ಬರುವುದ, ನೇತ್ರಾರ್ಬುದ, ರಾತ್ರಿ ಕಣ್ಣು ಕಾಣದೆಹೋಗು ವುದು, ಒಂದು ವರುಷದೊಳಗಾಗಿ ಕಣ್ಣಿನಲ್ಲಿ ಹುವ್ವು ಕಟ್ಟಿದ್ದಲ್ಲಿ ಅದು ಇವೆಲ್ಲ ವನ್ನೂ ಈ ಚಂದ್ರೋದಯವರ್ತಿಯು ಗೆಲುತ್ತದೆ.

## ಕರಂಜವರ್ತಿ

**ಪಲಾಶಪುಷ್ಪಸ್ವರಸ್ಯೈಃಬಹುಶಃಪರಿಭಾವಿತಾ ॥**
**ಕರಂಜಬೀಜವರ್ತಿಸ್ತುದೃಷ್ಟೇಃಪುಷ್ಪಂವಿನಾಶಯೇತ್ ॥ ೭೮ ॥**

ಕರಂಜವೆಂದರೆ ಹುಲಿಯುಗುರಿನಗಿಡವೆಂದು ವ್ಯವಹರಿಸತಕ್ಕಗಿಡ. ಅದರ ಬೀಜಗಳನ್ನು ತಂದು ಮುತ್ತುಗದ ಹುವ್ವಿನರಸದಲ್ಲಿ ಅನೇಕಬಾರಿ ಭಾವನೆಮಾಡಿ ಚನ್ನಾಗಿ ಅರೆದು ವರ್ತಿಯಾಗಿಮಾಡಿ ಕಣ್ಣಿಗೆ ನೀರಿನಲ್ಲಿ ಅರೆದು ಪ್ರಯೋಗಿಸುತ್ತ ಬಂದಲ್ಲಿ ಕಣ್ಣಿನಲ್ಲಿ ಕುಳಿತ ಹುವ್ವುಗುಣವಾಗುವುದು.

## ಸಮುದ್ರಫೇನಾದಿವರ್ತಿ.

**ಸಮುದ್ರಫೇನಸಿಂಧೂತ್ಥಶಂಖದಕ್ಷಾಂಡವಲ್ಕಲೈಃ ॥**
**ಶಿಗ್ರುಬೀಜಯುತೈರ್ವರ್ತಿಃಶುಕ್ರಾದೀಂಶ್ಛಸ್ತ್ರವಲ್ಲಿಖೇತ್ ॥ ೭೯ ॥**

ಲೇಖನವರ್ತಿಯನ್ನು ಹೇಳುತ್ತಾನೆ. ಸಮುದ್ರದನೊರೆ, ಸೈಂಧವಲವಣ, ಶಂಖದಚೂರ್ಣ, ಕೋಳಿಯಮೊಟ್ಟೆಯ ಮೇಲಿನಪೊರೆದು, ನುಗ್ಗೆಯಬೀಜ, ಇವುಗಳನ್ನು ನೀರಿನಲ್ಲಿ ನುಣ್ಣಗೆ ಅರೆದು ವರ್ತಿಯಾಗಿಮಾಡಿಕೊಂಡು ನೀರಿನಲ್ಲಿ ತೇದು ಕಣ್ಣಿಗೆ ಹಾಕುತ್ತ ಬಂದಲ್ಲಿ ಕಣ್ಣಿನಲ್ಲಿ ಕುಳಿತ ಹುವ್ವು ಮೊದಲಾದವು ಗಳನ್ನು ಶಸ್ತ್ರದಿಂದ ಕೊರೆದಂತೆ ಕೊರೆದು ತೆಗೆದುಹಾಕುತ್ತದೆ.

## ದಂತವರ್ತಿ.

**ದಂತೈರ್ದಂತಿವರಾಹೋಷ್ಟ್ರಗೋಹಯಾಜಖರೋದ್ಭವೈಃ ॥**

**ಶಂಖಮುಕ್ತಾಂಭೋಧಿಫೇನಯುತ್ತೈಸ್ಸರ್ವೈರ್ವಿಚೂರ್ಣಿತೈಃ**
**॥ ೮೦ ॥**
**ದಂತವರ್ತಿಃಕೃತಾಶ್ಲಕ್ಷ್ಣಶುಕ್ರಾಣಾಂನಾಶಿನೀಪರಾ ॥**

ಆನೆಯ ಹಲ್ಲು, ಹಂದಿಯಹಲ್ಲು, ಒಂಟೆಯಹಲ್ಲು, ಹಸುವಿನಹಲ್ಲು, ಕುದುರೆಯಹಲ್ಲು, ಕತ್ತೆಯಹಲ್ಲು ಶಂಖ. ಮುತ್ತು, ಸಮುದ್ರದನೊರೆ ಇವುಗಳನ್ನೆಲ್ಲಾ ಚನ್ನಾಗಿ ಚೂರ್ಣಮಾಡಿ, ವರೆದು ವರ್ತಿಯಾಗಿಮಾಡಿ ಇರಿಸಿಕೊಂಡು, ನೀರಿನಲ್ಲಿ ತೇದು ಕಣ್ಣಿಗೆ ಹಾಕುತ್ತಬಂದರೆ ಕಣ್ಣಿನಲ್ಲಿ ಹುವ್ವುಕುಳಿತಿರುವುದನ್ನು ನಿವಾರಣಮಾಡುತ್ತದೆ.

## ನೀಲೋತ್ಪಲವರ್ತಿ

**ನೀಲೋತ್ಪಲಂಶಿಗ್ರುಬೀಜಂನಾಗಕೇಸರಕಂತಥಾ ॥ ೮೧ ॥**
**ಏತತ್ಕಲ್ಕೈಃಕೃತಾವರ್ತಿರತಿನಿದ್ರಾಂನಿವಾರಯೇತ್ ॥**

ನೀಲವರ್ಣದ ತಾವರೆಹುವ್ವು, ನುಗ್ಗೆಯಬೀಜ, ನಾಗಕೇಸರಿ ಇವುಗಳನ್ನು ಸಮಾಂಶಕೂಡಿಸಿ ಚನ್ನಾಗಿ ಅರೆದು ವರ್ತಿಯಾಗಿಮಾಡಿ ಇರಿಸಿಕೊಳ್ಳಬೇಕು. ಇದನ್ನು ಅಂಜನವಾಗಿ ಉಪಯೋಗಿಸೋಣದರಿಂದ ಮನುಷ್ಯನ ಅರೆನಿದ್ರೆಯು ಮಿತವಾಗುತ್ತದೆ

## ಪುಷ್ಪಕವರ್ತಿ.

**ತಿಲಪುಷ್ಪಾಣ್ಯಶೀತಿಸ್ಸ್ಯುಃಷಷ್ಟಿಃಪಿಪ್ಪಲಿತಂಡೂಲಾಃ ॥ ೮೨ ॥**
**ಜಾತೀಕುಸುಮಪಂಚಾಶನ್ಮರಿಚಾನಿಚಷೋಡಶ ॥**
**ಸೂಕ್ಷ್ಮಂಪಿಷ್ಟ್ವಾಜಲೇವರ್ತಿಃಕೃತಾಕುಸುಮಿಕಾಭಿಧಾ ॥ ೮೩ ॥**
**ತಿಮಿರಾರ್ಜುನಶುಕ್ರಾಣಾಂನಾಶಿನೀಮಾಂಸವೃದ್ಧಿಹೃತ್ ॥**
**ಏತಸ್ಯಾಹ್ಯಂಜನೇಮಾತ್ರಾಪ್ರೋಕ್ತಾಸಾರ್ಧಹರೇಣುಕಾ ॥ ೮೪ ॥**

ಎಳ್ಳಿನ ಹುವ್ವುಗಳು ಎಂಬತ್ತು, ಹಿಪ್ಪಲಿಯ ಬೀಜಗಳು ಅರುವತ್ತು, ಜಾಜಿಯಹುವ್ವುಗಳು ಐವತ್ತು, ಹದಿನಾರು ಮೆಣಸಿನಕಾಳುಗಳು ಇವುಗಳೆಲ್ಲವನ್ನೂ ನೀರನ್ನು ಹಾಕಿಕೊಂಡು ನುಣ್ಣಗೆ ಅರೆದು ವರ್ತಿಯಾಗಿಮಾಡಿ ಇರಿಸಿಕೊಳ್ಳಬೇಕು. ಇದನ್ನು ಒಂದೂವರೆ ಹರೇಣುಪ್ರಮಾಣ ಅರೆದು ಕಣ್ಣಿಗೆಹಾಕಿದರೆ ಕಣ್ಣುಮಂಜು, ಅರ್ಜುನವೆಂಬ ನೇತ್ರರೋಗ, ಕಣ್ಣುಹುವ್ವು, ಕಣ್ಣಿನಲ್ಲಿ

ದುರ್ಮಾಂಸ ಬೆಳೆಯುವುದು ಇವುಗಳು ಗುಣವಾಗುವವು.

## ರಸಾಂಜನವರ್ತಿ.

**ರಸಾಂಜನಂಹರಿದ್ರೇದ್ವೇಮಾಲತೀನಿಂಬಪಲ್ಲವಾಃ ॥**
**ಗೋಶಕೃದ್ರಸಸಂಯುಕ್ತಾವರ್ತಿರ್ನಕ್ತಾಂಧ್ಯನಾಶಿನೀ ॥ ೮೫ ॥**

ರಸಾಂಜನವೆಂಬ ವಸ್ತು, ಅರಿಸಿನ, ಮರಅರಿಸಿನ ಜಾಜಿಯ ಚಿಗುರು, ಬೇವಿನ ಚಿಗುರು, ಇವುಗಳನ್ನು ಸಗಣಿಯನ್ನು ಹಿಂಡಿದನೀರಿನಲ್ಲಿ ಅರೆದು ವರ್ತಿಯಾಗಿ ಮಾಡಿ ಇರಿಸಿಕೊಂಡು ಕಣ್ಣಿಗೆ ಹಾಕುತ್ತಬಂದಲ್ಲಿ ರಾತ್ರಿಯಹೊತ್ತಿನಲ್ಲಿ ಕಣ್ಣುಮಂಜಾಗುವ ನಕ್ತಾಂಧ್ಯವೆಂಬ ನೇತ್ರರೋಗವು ಗುಣವಾಗುತ್ತದೆ

## ಧಾತ್ರ್ಯಾದಿವರ್ತಿ.

**ಧಾತ್ರ್ಯಕ್ಷಪಥ್ಯಾಬೀಜಾನಿಏಕದ್ವಿತ್ರಿಗುಣಾನಿಚ ॥**
**ಪಿಷ್ಟ್ವಾವರ್ತಿಂಜಲೈಃಕುರ್ಯಾದಂಜನಂದ್ವಿಹರೇಣುಕಂ ॥ ೮೬ ॥**
**ನೇತ್ರಸ್ರಾವಂಹರತ್ಯಾಶುವಾತರಕ್ತರುಜಂತಥಾ ॥**

ಒಂದುಪಾಲು ನೆಲ್ಲಿಯಬೀಜ, ಎರಡುಪಾಲು ತಾರೆಯಬೀಜ, ಮೂರುಪಾಲು ಅಳಲೇಕಾಯಿನ ಬೀಜ ಇವುಗಳನ್ನು ನೀರಿನಿಂದ ಸಣ್ಣನಾಗಿ ಅರೆದು ವರ್ತಿಯಾಗಿ ಮಾಡಿಕೊಂಡು ಎರಡು ಹರೇಣುಪ್ರಮಾಣ ಕಣ್ಣಿಗೆ ಅಂಜನಹಾಕುತ್ತ ಬಂದರೆ ಕಣ್ಣಿನಲ್ಲಿ ನೀರು ಸುರಿಯುತ್ತಿರುವುದು. ವಾತರಕ್ತವ್ಯಾಧಿ ಶಮನವಾಗುತ್ತವೆ.

## ರಸಕ್ರಿಯೆ-

**ತುತ್ಥಮಾಕ್ಷಿಕಸಿಂಧೂತ್ಥಂಸಿತಾಶಂಖಮನಶ್ಶಿಲಾಃ ॥ ೮೭ ॥**
**ಗೈರಿಕೋದಧಿಫೇನಂಚಮರಿಚಂಚೇತಿಚೂರ್ಣಯೇತ್ ॥**
**ಸಂಯೋಜ್ಯಮಧುನಾಕುರ್ಯಾದಂಜನಾರ್ಥಂರಸಕ್ರಿಯಾಂ ॥ ೮೮ ॥**

**ವರ್ತ್ಮರೋಗಾರ್ಮತಿಮಿರಕಾಚಶುಕ್ರಹರಾಂಪರಾಂ ॥**
**ವಟಕ್ಷೀರೇಣಸಂಯುಕ್ತೋಮುಖ್ಯಃಕರ್ಪೂರಜಃಕಣಃ ॥ ೮೯ ॥**
**ಕ್ಷಿಪ್ರಮಂಜನಕೋಹಂತಿಕುಸುಮಂಶುದ್ಧಿಮಾಸಿಕಂ ॥**

ಮೈಲ್‌ತುತ್ತ, ಸ್ವರ್ಣಮಾಸಿಕ, ಸೈಂಧವಲವಣ, ಕಲ್ಲುಸಕ್ಕರೆ, ಶಂಖನಪುಡಿ

ಮಣಿಶಿಲೆ, ಕಾವಿಕಲ್ಲು, ಸಮುದ್ರದನೊರೆ, ಮೆಣಸು, ಇವುಗಳನ್ನು ಸಮ ರಿ ಮಾಣದಲ್ಲಿ ಸೇರಿಸಿ ನುಣ್ಣನೆಯ ಚೂರ್ಣಮಾಡಿ ಜೇನುತುಪ್ಪದಲ್ಲಿ ಕಲೆಸಿ ಅಂಜನ ವಾಗಿ ಹಾಕಿದಲ್ಲಿ, ರೆಪ್ಪೆಗೆ ಸಂಭವಿಸುವ ರೋಗಗಳು, ಕಣ್ಣುಮಂಜು, ಗೀಜು ಹಾಯುವುದು. ಕಣ್ಣಿನಲ್ಲಿ ಹುವ್ವು ಕುಳಿತಿರುವುದು ಇವುಗಳೆಲ್ಲ ಗುಣವಾಗುತ್ತವೆ. ಆಲದ ಹಾಲಿನೊಡನೆ ಪಚ್ಚಕರ್ಪೂರವನ್ನು ಕಲೆಸಿ ಕಣ್ಣಿಗೆ ಅಂಜನಹಾಕಿದಲ್ಲಿ ಸದ್ಯದಲ್ಲಿ ಸಂಭವಿಸಿರುವ ಕಣ್ಣುಹುಪ್ವನ್ನು ಗುಣಪಡಿಸುತ್ತದೆ.

## ಅತಿನಿದ್ರಾಯಾಂಯೋಗಃ.

**ಕ್ಷೌದ್ರಾಶ್ವಲಾಲಾಸಂಘೃಷ್ಟೈರ್ಮರಿಚೈರ್ನೇತ್ರಮಂಜಯೇತ್ ॥ ೯೦ ॥**

**ಅತಿನಿದ್ರಾಶಮಂಯಾತಿತಮಸ್ಸ್ಯೋರ್ಯೋದಯಾದಿವ ॥**

ಅತಿನಿದ್ರೆ ಅಂದರೆ ನಿದ್ರೆಯು ಮನುಷ್ಯನಿಗೆ ಎಷ್ಟು ಅವಶ್ಯಕವೋ ಅಷ್ಟಕಿಂತ ಲೂ ಹೆಚ್ಚಾದಲ್ಲಿ, ಮೆಣಸಿನಕಾಳನ್ನು ಜೇನುತುಪ್ಪ, ಕುದುರೆಯ ಬಾಯಿನಿಂದ ಹೊರಡುವ ಜೊಲ್ಲು ಇವುಗಳಿಂದ ಅರೆದು ಕಣ್ಣಿಗೆ ಅಂಜನಹಾಕಿದಲ್ಲಿ ನಿದ್ರೆ ಕಡಮೆ ಯಾಗುತ್ತದೆ

## ಪ್ರಬೋಧನಾಂಜನ.

**ಜಾತೀಪುಷ್ಪಂಪ್ರವಾಳಂಚಮರಿಚಂಕಟುಕೀವಚಾ ॥ ೯೧ ॥**
**ಸೈಂಧವಂಬಸ್ತಮೂತ್ರೇಣಪಿಷ್ಟಂತಂದ್ರಾಘ್ನಮಂಜನಂ ॥**
**ಶಿರೀಷಬೀಜಗೋಮೂತ್ರಕೃಷ್ಣಾಮರಿಚಸೈಂಧವೈಃ ॥ ೯೨ ॥**
**ಅಂಜನಂಸ್ಯಾತ್ಪ್ರಬೋಧಾಯಸರಸೋನಶಿಲಾವಚೈಃ ॥**

ಜಾಜಿಯ ಹುವ್ವು, ಹವಳ, ಮೆಣಸಿನಕಾಳು, ಕಟುರೋಹಿಣಿ, ಬಜೆ, ಸೈಂಧವಲವಣ ಇವುಗಳನ್ನು ಆಡಿನ ಮೂತದಲ್ಲಿ ಅರೆದು ಅಂಜನವಾಗಿ ಉಪ ಯೋಗಿಸುವುದರಿಂದ ಆಕಳಿಕೆ, ಆಲಸ್ಯ ಇವು ಪರಿಹರ. ಬಾಗೆಯಬೀಜ ಹಿಪ್ಪಲಿ, ಮೆಣಸು, ಸೈಂಧವಲವಣ, ಬೆಳ್ಳುಳ್ಳಿ, ಮಣಿಶಿಲೆ, ಬಜೆ ಇವುಗಳನ್ನು ಗೋಮೂತ್ರದಲ್ಲಿ ಅರೆದು ಅಂಜನವಾಗಿ ಕಣ್ಣಿಗೆ ಹಾಕಿದರೆ ಎಚ್ಚರತಪ್ಪಿದವರಿಗೆ ಚನ್ನಾಗಿ ಎಚ್ಚರವಾಗುತ್ತದೆ.

## ದಾರ್ವ್ಯಾದಿರಸಕ್ರಿಯೆ

**ದಾರ್ವೀಪಟೋಲಂಮಧುಕಂಸನಿಂಬಂಪದ್ಮಕೋತ್ಪಲಂ ॥ ೯೩ ॥**

**ಪ್ರಪೌಂಡರೀಕಂಚೈತಾನಿಪಚೇತ್ತ್ರೋಯೇಚತುರ್ಗುಣೇ ॥**
**ವಿಪಾಚ್ಯಪಾದಶೇಷಂತುಶೃತಂನೀತ್ವಾಪುನಃಪಚೇತ್ ॥ ೯೪ ॥**
**ಶೀತೇತಸ್ಮಿರ್ನಮಧುಸಿತಾಂದದ್ಯಾತ್ಪಾದಾಂಶಿಕಾಂನರಃ ॥**
**ರಸಕ್ರಿಯೈಷಾದಾಹಾಶ್ರುರಕ್ತರಾಗರುಜೋಹರೇತ್ ॥ ೯೫ ॥**

ಮರಅರಶಿನ, ಕೈಪಡವಲ, ಜ್ಯೇಷ್ಠಮಧು, ಜೇವಿನಚಕ್ಕೆ, ಪದ್ಮಕಾಷ್ಠ, ತಾವರೆಯಹುವ್ವು ಬಿಳಯದು, ಕೆಂಪು ತಾವರೆಯಹುವ್ವು ಇವುಗಳನ್ನು ಸಮಾಂಶ ಸೇರಿಸಿ. ಚತುರ್ಗುಣನೀರಿನಲ್ಲಿ ಕಷಾಯುವಿಟ್ಟು, ನಾಲ್ಕರಲ್ಲೊಂದುಭಾಗ ಕಷಾಯ ನಿಲ್ಲಿಸಿ ಶೋಧಿಸಿಕೊಂಡು ಮತ್ತೆ ಆ ಕಷಾಯವನ್ನು ಗಟ್ಟಿಗೆ ಬರುವ ವರೆವಿಗೂ ಕಾಯಿಸುತ್ತ ಬಂದು ಇಳಿಸಿಕೊಂಡು ತಣ್ಣಗಾದ ಮೇಲೆ ಜೇನುತುಪ್ಪ ಮತ್ತು ಸಕ್ಕರೆಗಳನ್ನು ನಾಲ್ಕರಲ್ಲಿ ಒಂದು ಭಾಗದಷ್ಟು ಸೇರಿಸಿ ಚನ್ನಾಗಿ ಕೂಡಿಸಿ, ತೆಗೆದಿರಿಸಿಕೊಂಡು ಕಣ್ಣಿಗೆ ಅಂಜನವಾಗಿ ಹಚ್ಚುತ್ತ ಬಂದರೆ ಕಣ್ಣುರಿ ಕಣ್ಣಿನಲ್ಲಿ ನೀರು ಸೋರುವುದು, ಕಣ್ಣು ಕೆಂಪಾಗುವುದು, ಕಣ್ಣುನೋವು ಇವುಗಳನ್ನು ಶಮನಪಡಿಸುತ್ತದೆ.

## ರಸಾಂಜನಾದಿ ರಸಕ್ರಿಯೆ.

**ರಸಾಂಜನಂಸರ್ಜರಸೋಜಾತೀಪುಷ್ಪಂಮನಶ್ಶಿಲಾ ॥**
**ಸಮುದ್ರಫೇನೋಲವಣಂಗೈರಿಕಂಮರಿಚಾನಿಚ ॥ ೯೬ ॥**
**ಏತತ್ಸಮಾಂಶಂಮಧುನಾಪಿಷ್ಟ್ವಾಪ್ರಕ್ಲಿನ್ನವರ್ತ್ಮನಿ ॥**
**ಅಂಜನಂಕ್ಲೇದಕಂಡೂಘ್ನಂಪಕ್ಷ್ಮಣಾಂಚಪ್ರರೋಹಣಂ ॥**

ರಸಾಂಜನವೆಂಬವಸ್ತು, ( ಹಿಂದೆ ಅನೇಕಸಾರಿ ಇವರ ವಿವರಣೆಯನ್ನು ಕೊಟ್ಟಿದೆ. ) ಒಳ್ಳೆಯರಾಳ, ಜಾಜಿಯಹುವ್ವು, ಮಣಿಶಿಲೆ, ಸಮುದ್ರದ ನೊರೆ, ಸೈಂಧವಲವಣ, ಕಾವಿಕಲ್ಲು ಮೆಣಸಿನಕಾಳು ಇವುಗಳೆಲ್ಲವನ್ನೂ ಸಮ ಪ್ರಮಾಣದಲ್ಲಿ ಕೂಡಿಸಿ ಜೇನುತುಪ್ಪವನ್ನು ಹಾಕಿಕೊಂಡು ಅರೆದು ಕಣ್ಣಿಗೆ ಅಂಜನವನ್ನು ಹಾಕಿದಲ್ಲಿ ರೆಪ್ಪೆಯ ಕೂದಲು ಶಲತು ಉದುರಿಹೋಗುವಂತಹ ನೇತ್ರಜಾಡ್ಯವು ಪರಿಹರವಾಗಿ ಪುನಶ್ಚ ರೆಪ್ಪೆಯ ಕೂದಲು ಯಥಾಸ್ಥಿತಿಯಾಗಿ ಹುಟ್ಟುವವು.

## ಗುಡೂಚೀ ರಸಕ್ರಿಯೆ.

**ಗುಡೂಚೀಸ್ವರಸಃಕರ್ಷಃಕ್ಷೌದ್ರಸ್ಯಾನ್ಮಾಷಕೋನ್ಮಿತಂ ॥**

ಸೈಂಧವಂಕ್ಷೌದ್ರತುಲ್ಯಂಸ್ಯಾತ್ಸರ್ವಮೇಕತ್ರಮರ್ದಯೇತ್॥೯೮॥
ಅಂಜಯೇನ್ನಯನಂತೇನಪಿಲ್ಲಾರ್ಮತಿಮಿರಂಜಯೇತ್ ॥
ಕಾಚಂಕಂಡೂಂಲಿಂಗನಾಶಂಶುಕ್ಲಕೃಷ್ಣಗತಾನ್ಗದಾನ್ ॥ ೯೯ ॥

ಅಮೃತವಳ್ಳಿಯಸ್ವರಸ ಒಂದು ಕರ್ಷಪರಿಮಾಣದಷ್ಟು, ಒಂದು ಮಾಷ ಪ್ರಮಾಣ ಜೇನುತುಪ್ಪ, ಸೈಂಧವಲವಣ ಒಂದು ಮಾಷಪರಿಮಾಣ ಇವು ಮೂರನ್ನೂ ಒಂದುಕಡೆ ಸೇರಿಸಿ ಚನ್ನಾಗಿ ಅರೆದು ಅಂಜನವಾಗಿ ಮಾಡಿ ಕಣ್ಣಿಗೆ ಹಚ್ಚಿಕೊಂಡಲ್ಲಿ ಪಿಸರು ಕಟ್ಟಿಕೊಂಡು ರೆಪ್ಪೆ ಶಲತುಹೋಗುವುದು, ಕಣ್ಣು ಮಂಜು, ಗೀಜು ಹಾಯ್ದುಬರುವುದು, ಕಣ್ಣಿನ ನೆವೆ, ಲಿಂಗನಾಶವೆಂಬ ನೇತ್ರ ರೋಗ ಇವಲ್ಲದೆ ಇನ್ನೂ ಬಿಳೀಗುಡ್ಡೆ, ಕಪ್ಪುಗುಡ್ಡೆಗಳ ಮೇಲೆ ಬರುವ ರೋಗ ಗಳೆಲ್ಲವೂ ಗುಣವಾಗುತ್ತವೆ

## ಪುನರ್ನವಾರಸಕ್ರಿಯೆ.

ದುಗ್ಧೇನಕಂಡೂಂಕ್ಷೌದ್ರೇಣನೇತ್ರಸ್ರಾವಂಚಸರ್ಪಿಷಾ ॥
ಪುಷ್ಪಂತೈಲೇನತಿಮಿರಂಕಾಂಜಿಕೇನನಿಶಾಂಧತಾಂ ॥ ೧೦೦ ॥
ಪುನರ್ನವಾಜಯೇದಾಶುಭಾಸ್ಕರಸ್ತಿಮಿರಂಯಥಾ ॥

ಕೊಮ್ಮೆಯಬೇರನ್ನು ಮೊಲೆಹಾಲಿನಲ್ಲಿ ಅರೆದು ಕಣ್ಣಿಗೆ ಹಚ್ಚಿಸಿದರೆ ಕಣ್ಣಿನ ನೆವೆಯನ್ನೂ, ಜೇನುತುಪ್ಪದಲ್ಲಿ ಅರೆದು ಅಂಜನವಾಗಿ ಹತ್ತಿಸಿದಲ್ಲಿ ಕಣ್ಣಿನಲ್ಲಿ ನೀರುಸೋರುವಿಕೆಯನ್ನೂ ಹಸುವಿನತುಪ್ಪದೊಡನೆ ಅರೆದು ಹತ್ತಿಸಿದಲ್ಲಿ ಕಣ್ಣಿನಲ್ಲಿ ಕುಳಿತಿರುವ ಹೂವ್ವನ್ನೂ, ಎಣ್ಣೆಯಲ್ಲಿ ಅರೆದು ಕಣ್ಣಿಗೆ ಹತ್ತಿಸಿದರೆ ಕಣ್ಣು ಮಂಜನ್ನೂ ಹುಳಿನೀರಿನಲ್ಲಿ ಅರೆದು ಹತ್ತಿಸಿದಲ್ಲಿ ರಾತ್ರಿ ದೀಪದಬೆಳಕಿನಲ್ಲಿ ಕಣ್ಣು ಕಾಣದಿರುವಿಕೆಯನ್ನೂ ಪರಿಹರಿಸುತ್ತದೆ.

## ಬಬ್ಬೂಲಾದಿ ರಸಕ್ರಿಯೆ.

ಬಬ್ಬೂಲದಲನಿಃಕ್ವಾಥೋಲೇಹೀಭೂತಸ್ತದಂಜನಾತ್ ॥ ೧೦೧ ॥
ನೇತ್ರಸ್ರಾವಂಜಯತ್ಯೇಷಮಧುಯುಕ್ತೋನಸಂಶಯಃ ॥

## ಹಿಜ್ಜಲರಸಕ್ರಿಯೆ

ಹಿಜ್ಜಲಸ್ಯಫಲಂಘೃಷ್ಟ್ವಾಪಾನೀಯೇನಿತ್ಯಮಂಜನಂ ॥ ೧೦೨ ॥
ಚಕ್ಷುಸ್ರಾವೋಪಶಾಂತ್ಯರ್ಥಂಕಾರ್ಯ್ಯಮೇತನ್ಮಹೌಷಧಂ ॥

ಗೊಬ್ಬಳಿ ಎಲೆಗಳಿಗೆ ಚತುರ್ಗುಣ ನೀರನ್ನು ಹಾಕಿ ಕಷಾಯ ಕಾಯಿಸಿ ಕೊಂಡು ಶೋಧಿಸಿ ಪುನಶ್ಚ ಗಟ್ಟಿಯಾಗುವ ವರಿವಿಗೂ ಕಾಯಿಸಿ ಇಳಿಸಿಕೊಂಡು ಜೇನುತುಪ್ಪವನ್ನು ಕೂಡಿಸಿ ಕಣ್ಣಿಗೆ ಅಂಜನವಾಗಿ ಹಾಕುತ್ತ ಬಂದಲ್ಲಿ ಕಣ್ಣಿನಲ್ಲಿ ನೀರು ಸುರಿಯುವುದು ಗುಣವಾಗುತ್ತದೆ.

ಕಣಿಗಲದ ಹಣ್ಣುಗಾಯಿಗಳನ್ನು ನೀರಿನಲ್ಲಿ ಚನ್ನಾಗಿ ಅರದು ಕಣ್ಣಿಗೆ ಅಂಜನವನ್ನು ಹಾಕಿದರೆ ಕಣ್ಣಿನಲ್ಲಿ ನೀರು ಸುರಿಯುವುದು ನಿಲ್ಲುತ್ತದೆ ಒಜ್ಜಲ ವೆಂದರೆ ಕಣಿಗಲವೆಂದು ಕೆಲವರು ಇಂಗಳಾರವೆಂದು ಕೆಲವರು.

## ಕತಕರಸಕ್ರಿಯೆ

**ಕತಕಸ್ಯಫಲಂಘೃಷ್ಟ್ವಾಮಧುನಾನೇತ್ರಮಂಜಯೇತ್ ॥ ೧೧೩ ॥**
**ಈಷತ್ಕರ್ಪೂರರಸಹಿತಂಸ್ಮೃತಂನೇತ್ರಪ್ರಸಾದನಂ ॥**

ಚಿಲ್ಲದಬೀಜವನ್ನು ಜೇನಿನೊಡನೆ ಚನ್ನಾಗಿ ಅರದು ಸ್ವಲ್ಪ ಪಚ್ಚಕರ್ಪೂರ ವನ್ನು ಸೇರಿಸಿ ಕಣ್ಣಿಗೆ ಅಂಜನಹಾಕಿದಲ್ಲಿ ಕಣ್ಣಿನೊಳಗಿರುವ ಕಲ್ಮಷವೆಲ್ಲವೂ ನಿವೃತ್ತಿಯಾಗಿ ಕಣ್ಣು ಪರಿಶುದ್ಧವಾಗುತ್ತದೆ.

## ಶಿರೋತ್ಪಾತೇರಸಕ್ರಿಯೆ

**ಸರ್ಪಿಃಕ್ಷೌದ್ರಂಚಾಂಜನಂಸ್ಯಾತ್‌ಶಿರೋತ್ಪಾತಸ್ಯಶಾಂತಯೇ ॥ ೧೧೪ ॥**

ಕಣ್ಣಿನ ನರಗಳು ಪಡತ ಬಂದಲ್ಲಿ ಹಸುವಿನ ತುಪ್ಪವನ್ನಾಗಲೀ ಜೇನು ತುಪ್ಪವನ್ನಾಗಲೀ ಕಣ್ಣಿಗೆ ಅಂಜನವಾಗಿ ಹಾಕಿದರೆ ಶಾಂತವಾಗುತ್ತದೆ,

## ಕೃಷ್ಣಸರ್ಪವಸಾರಸಕ್ರಿಯೆ

**ಕೃಷ್ಣಸರ್ಪವಸಾಶಂಖಃಕತಕಾತ್ಫಲಮಂಜನಂ ॥**
**ರಸಕ್ರಿಯೇಯಂಮುಚಿರಾದಂಧಾನಾಂದರ್ಶನಪ್ರದಾ ॥ ೧೧೫ ॥**

ಕರಿಯನಾಗರಹಾವಿನ ಮಾಂಸರಸ, ಶಂಖಚೂರ್ಣ, ಚಿಲ್ಲದಬೀಜ ಇವು ಗಳನ್ನು ಅರೆದು ನಯವಾಗುವಂತೆಮಾಡಿ ಕಣ್ಣಿಗೆ ಹಾಕಿದರೆ ಕುರುಡರಾದವ ರಿಗೂ ಕ್ರಮೇಣ ಕಣ್ಣು ಕಾಣುತ್ತ ಬರುತ್ತದೆ,

## ಲೇಖನಾಂಜನ

**ದಕ್ಷಾಂಡತ್ವಕ್ ಶಿಲಾಕಾಚಶಂಖಚಂದನಸೈಂಧವೈಃ ॥**
**ದ್ರವ್ಯೈರಂಜನಯೋಗೋಯಂಪುಷ್ಪಾದಿವಿಲೇಖನಃ**
**॥ ೧೦೬ ॥**

ಕೋಳಿಯ ಮೊಟ್ಟೆಯ ಮೇಲಿನ ಪೊರೆ, ಮಣಿಶಿಲೆ, ಗಾಜಿನಚೂರು, ಚಂದನ, ಸೈಂಧವಲವಣ ಇವುಗಳನ್ನು ಸಮಪರಿಮಾಣದಲ್ಲಿ ಸೇರಿಸಿ ನಯವಾದ ಚೂರ್ಣಮಾಡಿ ಕಣ್ಣಿಗೆ ಚೂರ್ಣಾಂಜನವಾಗಿ ಹಾಕಿಕೊಂಡರೆ ಕಣ್ಣಿನಲ್ಲಿ ಕುಳಿತ ಹೂವು, ಪರೆ ಇವುಗಳನ್ನು ಚನ್ನಾಗಿ ಕೆರೆದು ಅರಗುವಮಾಡುತ್ತದೆ

## ಕಣಾರಸಕ್ರಿಯೆ

**ಕಣಾಭಾಗಯುಕ್ಪನ್ಮಧ್ಯೇಪಕ್ವಾತ್ವನೇತ್ರಯುಗೇಂಜಿತಾ ॥**
**ಅಚಿರಾದ್ಧಂತಿನಕ್ತಾಂಧ್ಯಂತದ್ವತ್ಸಕ್ಷೌದ್ರಮೂಷಣಂ ॥ ೧೦೭ ॥**

ಆಡಿನಹೊಟ್ಟೆಯ ಮಧ್ಯದಲ್ಲಿರುವ ಯಕೃತ್ ಎಂಬ ಅಂಗವನ್ನು ಹೊರಕ್ಕೆ ತೆಗೆದು ಅದರೊಳಗೆ ಹಿಪ್ಪಲಿಯನ್ನಿರಿಸಿ ಪಕ್ವಮಾಡಿ ಪಕ್ವವಾದಮೇಲೆ ತೆಗೆದು ಕೊಂಡು ಚನ್ನಾಗಿ ಅರೆದು ಕಣ್ಣಿಗೆ ಅಂಜನಹಾಕಿದರೆ ನಕ್ತಾಂಧ್ಯವೆಂಬ ಇರಳು ಗಣ್ಣು ಸರಿಯಾಗುತ್ತದೆ ಅದರಂತೆಯೇ ಮೆಣಸಿನಕಾಳನ್ನು ಪಕ್ವಮಾಡಿ ಜೇನುಸೇರಿಸಿ ಚನ್ನಾಗಿ ಅರದು ಅಂಜನವಾಗಿ ಹಾಕಿದರೂ ನಕ್ತಾಂಧ್ಯವು ನಿವಾ ರಣೆಯಾಗುತ್ತದೆ.

## ಚೂರ್ಣಾಂಜನ

**ಶಾಣಾರ್ಧಂಮರಿಚಂದ್ವಾಚಪಿಪ್ಪಲ್ಯರ್ಣವಫೇನಯೋಃ ॥**
**ಶಾಣಾರ್ಧಂಸೈಂಧವಂಶಾಣಾನವಸೌವೀರಕಾಂಜನಾತ್ ॥ ೧೦೮ ॥**
**ಪಿಷ್ಟಂಸುಸೂಕ್ಷ್ಮಂಚಿತ್ರಾಯಾಂಚೂರ್ಣಾಂಜನಮಿದಂಶುಭಂ ॥**
**ಕಂಡೂಕಾಚಕಫಾರ್ತಾನಾಂಮಲಾನಾಂಚವಿಶೋಧನಂ ॥ ೧೦೯ ॥**

ಅರ್ಧಶಾಣಪರಿಮಾಣ ಮೆಣಸಿನಕಾಳು, ಹಿಪ್ಪಲಿ ಒಂದುಶಾಣಪರಿಮಾಣ, ಸಮುದ್ರದನೊರೆ ಒಂದು ಶಾಣಪರಿಮಾಣ, ಅರ್ಧ ಶಾಣಪರಿಮಾಣ ಸೈಂಧವ ಲವಣ, ಒಂಭತ್ತು ಶಾಣ ಪರಿಮಾಣ ಸೌವೀರಾಂಜನ ಇವುಗಳನ್ನೆಲ್ಲಾ ಸೇರಿಸಿ ಚಿತ್ರಾನಕ್ಷತ್ರಯುಕ್ತವಾದ ದಿವಸದಲ್ಲಿ ನುಣ್ಣಗೆ ಅರೆದು ಇರಿಸಿಕೊಂಡು ಈ

ಅಂಜನವನ್ನು ಕಣ್ಣಿಗೆ ಹಾಕುತ್ತಾಬಂದಲ್ಲಿ ಕಣ್ಣಿನ ನವೆ, ಕಣ್ಣಿನಲ್ಲಿ ಗೀಜು ಹಾಯ್ದಿರುವುದು, ಶ್ಲೇಷ್ಮ ಪ್ರಕೋಪದಿಂದ ಹುಟ್ಟಿದ ನೇತ್ರಮಲಗಳು ಇವುಗಳೆಲ್ಲ ವೂ ನಿವೃತ್ತಿಯಾಗುವವು.

## ರೋಪಣಚೂರ್ಣಾಂಜನ.

ಶಿಲಾಯಾಂರಸಕಂಪಿಷ್ಟ್ವಾಸಮ್ಯಗಾಪ್ಲಾವ್ಯವಾರಿಣಾ ॥
ಗೃಹ್ಣೀಯಾತ್ತಜ್ಜಲಂಸರ್ವಂತ್ಯಜೇಚ್ಚೂರ್ಣಮಧೋಗತಂ॥೧೧೦॥
ಶುಷ್ಕಂಚತಜ್ಜಲಂಸರ್ವಂಸರ್ಪಟೀಸನ್ನಿಭಂಭವೇತ್ ॥
ವಿಚೂರ್ಣ್ಯಭಾವಯೇತ್ಸಮ್ಯಕ್ ತ್ರಿವೇಲಂತ್ರಿಫಲಾರಸೈಃ ॥ ೧೧೧ ॥
ಕರ್ಪೂರಸ್ಯರಜಸ್ತತ್ರದಶಮಾಂಶೇನನಿಕ್ಷಿಪೇತ್ ॥
ಅಂಜಯೇನ್ನಯನೇತೇನಸರ್ವದೋಷಹರಂಹಿತತ್ ॥ ೧೧೨ ॥
ಸರ್ವರೋಗಹರಂಚೂರ್ಣಂಚಕ್ಷುಷೋಸ್ಸುಖಕಾರಿಚ ॥

ರಸಕವೆಂದರೆ ಕಪರಿತುತ್ಥ ಅದನ್ನು ಕಲ್ಲಿನಮೇಲೆ ಚನ್ನಾಗಿ ಅರೆದು ನೀರಿಗೆ ಕದರುವುದು, ಕೊಂಚ ಹೊತ್ತಾದಮೇಲೆ ಆ ನೀರನ್ನೆಲ್ಲಾ ಬೇರೊಂದು ಪಾತ್ರೆಗೆ ಬಗ್ಗಿಸಿಕೊಂಡು ತಳದಲ್ಲಿರುವುದನ್ನೆಲ್ಲಾ ಬಿಸಾಡಿ ಆ ನೀರನ್ನು ಒತ್ತುವವರಿವಿಗೂ ಬಿಸಿಲಿನಲ್ಲಿಯೇ ಒಣಗಿಸುವುದು; ಒಣಗಿಹೋದಮೇಲೆ ತಳದಲ್ಲಿ ಕಾಗದದ ಹಾಳೆಯ ಹಾಗೆ ನಿಲ್ಲುವುದನ್ನು ಕೆರೆದು ತೆಗೆದುಕೊಂಡು ಪುಡಿಮಾಡಿ ಮೂರು ಸಾರಿ ತ್ರಿಫಲಾರಸದಲ್ಲಿ ಭಾವನೆಕೊಟ್ಟು ಒಣಗಿಸುವುದು. ನಂತರ ನಿಂತದ್ದನ್ನು ಚನ್ನಾಗಿ ಚೂರ್ಣಮಾಡಿ ಅದರ ಹತ್ತನೆಯಒಂದು ಭಾಗದಷ್ಟು ಪಚ್ಚಕರ್ಪೂರದ ಪುಡಿಯನ್ನು ಸೇರಿಸಿ ಇರಿಸಿಕೊಂಡು ಈ ಹುಡಿಯಿಂದ ಕಣ್ಣಿಗೆ ಅಂಜನಹಾಕುತ್ತಬಂದಲ್ಲಿ ಪ್ರಕೋಪಹೊಂದಿದ ನೇತ್ರಗತಗಳಾದ ತ್ರಿದೋಷಗಳನ್ನು ಪರಿಹರಿಸಿ ಸಮಸ್ತ ವಿಧವಾದ ನೇತ್ರರೋಗಗಳನ್ನೂ ಗುಣಪಡಿಸಿ ಕಣ್ಣುಗಳಿಗೆ ಸುಖವನ್ನು ಉಂಟುಮಾಡುತ್ತದೆ

## ಪ್ರಸಾದನಾಂಜನ

ಅಗ್ನಿತಪ್ತಂಹಿಸೌವೀರಂನಿಷಿಂಚೇತ್ ತ್ರಿಫಲಾರಸೈಃ ॥ ೧೧೩ ॥
ಸಪ್ತವೇಲಂತಥಾಸ್ತನ್ಯೈಃಸ್ತ್ರೀಣಾಂಸಿಕ್ತ್ವಾವಿಚೂರ್ಣಿತಂ ॥
ಅಂಜಯೇತ್ತೇನನಯನೇಪ್ರತ್ಯಹಂಚಕ್ಷುಷೋರ್ಹಿತಂ ॥ ೧೧೪ ॥
ಸರ್ವಾನಕ್ಷಿವಿಕಾರಾಂಸ್ತುಹನ್ಯಾದೇತನ್ನಸಂಶಯಃ ॥

ಸೌವೀರಾಂಜನವನ್ನು ಬೆಂಕಿಯಲ್ಲಿ ಕಾಯಿಸಿ ಏಳುಬಾರಿ ತ್ರಿಫಲಾರಸದಲ್ಲಿ

ಅದ್ದುವುದು. ಮತ್ತೆ ಏಳುಭಾರಿ ಕಾಯಿಸಿ ಹೆಂಗಸರ ಮೊಲೆಹಾಲಿನಲ್ಲಿ ಅದ್ದುವುದು ಈ ರೀತಿ ಸಂಸ್ಕಾರವಮಾಡಿ ನುಣ್ಣನೆಯಚೂರ್ಣವಮಾಡಿ ಇರಿಸಿಕೊಂಡು ಪ್ರತಿ ದಿವಸವೂ ಕಣ್ಣಿಗೆ ಅಂಜನಹಾಕುತ್ತಾ ಬಂದಲ್ಲಿ ಕಣ್ಣಿಗೆ ಬಹಳ ಹಿತಕರವಾಗಿರುವುದಲ್ಲದೆ ಸಮಸ್ತ ವಿಧಗಳಾದ ನೇತ್ರ ವಿಕಾರಗಳನ್ನೂ ಪರಿಹರಿಸುತ್ತದೆ. ಅನುಮಾನವಿಲ್ಲ.

## ದೃಷ್ಟಿಪ್ರಸಾದಿನೀನಾಗಶಲಾಕಾ

**ತ್ರಿಫಲಾಭೃಂಗಶುಂಠೀನಾಂರಸೈಸ್ತದ್ವಚ್ಚ ಸರ್ಪಿಷಾ ॥ ೧೧೫ ॥**
**ಗೋಮೂತ್ರಮಧ್ವಜಾಕ್ಷೀರೈಃಸಿಕ್ತಂನಾಗಃಪ್ರತಾಪಿತಃ ॥**
**ತಚ್ಛಲಾಕಾಹರತ್ಯೇವಸರ್ವಾನ್ನೇತ್ರಭವಾನ್ ಗದಾನ್ ॥ ೧೧೬ ॥**

ಕಣ್ಣಿಗೆ ಅಂಜನಹಾಕಿಸುವುದಕ್ಕಾಗಿ ಶಲಾಕೆಯನ್ನು ಮಾಡಿಸುವ ಕ್ರಮ— ಕಪ್ಪುಶೀಸವನ್ನು ಕಾಯಿಸಿ ತ್ರಿಫಲಾಕಷಾಯ, ಗುರುಗದರಸ, ಶುಂಠೀರಸ, ತುಪ್ಪ ಗೋಮೂತ್ರ, ಜೇನುತುಪ್ಪ, ಆಡಿನಹಾಲು, ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಎಷ್ಟಷ್ಟುಸಾರಿಸಾಧ್ಯವೋ ಅಷ್ಟಷ್ಟು ಸಾರಿ ಅದ್ದಿ ನಂತರ ಆ ಸೀಸದಲ್ಲಿ ಒಂದು ಸಲಾಕೆಯನ್ನು ಮಾಡಿಸಿ ಇರಿಸಿಕೊಳ್ಳುವುದು. ಇಂತಹ ಸಲಾಕೆಯನ್ನು ಕಣ್ಣಿಗೆ ತಗಲಿಸುತ್ತಿದ್ದರೆ ಸಮಸ್ತ ನೇತ್ರರೋಗಗಳೂ ಗುಣಹೊಂದುತ್ತವೆ. ಇದರಿಂದ ಅಂಜನಹಾಕುವುದು ಅತ್ಯುತ್ತಮ.

## ಪ್ರತ್ಯಂಜನವಿಧಾನ

**ಗತದೋಷಮುಪೇತಾಶ್ರುಸಂಪಶ್ಯನ್ ಸಮ್ಯಗಂಭಸಿ ॥**
**ಪ್ರಕ್ಷಾಲ್ಯಾಕ್ಷಿಯಥಾದೋಷಂಕಾರ್ಯಂಪ್ರತ್ಯಂಜನಂತತಃ॥೧೧೭॥**
**ನವಾನಿರ್ಗತದೋಷೇಕ್ಷ್ಣಿಧಾವನಂಸಂಪ್ರಯೋಜಯೇತ್ ॥**
**ಪ್ರತ್ಯಂಜನಂತೀಕ್ಷ್ಣತಪ್ತೇನೇತ್ರೇಚೂರ್ಣಂಪ್ರಸಾದನಂ ॥ ೧೧೮ ॥**

ಕಣ್ಣಿಗೆ ತೀಕ್ಷ್ಣವಾದ ಅಂಜನವನ್ನು ಪ್ರಯೋಗಿಸಿದಮೇಲೆ ಕಣ್ಣಿನದೋಷಗಳು ನಿವೃತ್ತಿಯಾಗಿ ಕಣ್ಣಿನಲ್ಲಿ ನೀರು ಸುರಿಯುವುದು ನಿಂತಮೇಲೆ ಕಣ್ಣನ್ನು ನೀರಿನಿಂದ ಚನ್ನಾಗಿ ತೊಳೆದು ಪ್ರಸಾದನಚೂರ್ಣಗಳನ್ನು ಅಂದರೆ ಮೃದುವಾಗಿ ಸೌಮ್ಯವಾಗಿರುವ ಚೂರ್ಣಾಂಜನವನ್ನು ಹಾಕಬೇಕು. ನೇತ್ರಗತದೋಷಗಳು ನಿವೃತ್ತಿಯಾಗದಿದ್ದಲ್ಲಿ ಕಣ್ಣನ್ನು ತೊಳೆಯಬಾರದು.

## ನಯನಾಮೃತಾಂಜನ

**ಶುದ್ಧೇನಾಗೇದ್ರುತೇಶುದ್ಧಂತುಲ್ಯಂಸೂತಂವಿನಿಕ್ಷಿಪೇತ್ ॥**

ಕೃಷ್ಣಾಂಜನಂತಯೋಸ್ತುಲ್ಯಂಸರ್ವಮೇಕತ್ರಚೂರ್ಣಯೇತ್ ॥ ೧೧೯ ॥
ದಶಮಾಂಶೇನಕರ್ಪೂರಂತಸ್ಮಿನ್ ಚೂರ್ಣೇಪ್ರದಾಪಯೇತ್ ॥
ಏತತ್ ಕೃತಾಂಜನಂನೇತ್ರಗದಜಿನ್ನಯನಾಮೃತಂ ॥ ೧೨೦ ॥

ಶುದ್ಧವಾದ ಶೀಸವನ್ನು ಕರಗಿಸಿ ಕರಗಿದ್ದರಲ್ಲಿ ಅದರಷ್ಟೇಪರಿಮಾಣ ಶುದ್ಧವಾದ ಪಾದರಸವನ್ನು ಹಾಕಬೇಕು. ಇವೆರಡರಷ್ಟು ರಸಾಂಜನವೆಂಬ ಕಪ್ಪು ಅಂಜನವನ್ನು ಅವುಗಳೊಟ್ಟಿಗೆ ಸೇರಿಸಿ ಇವೆಲ್ಲವನ್ನೂ ಮೃದುವಾದ ನುಣ್ಣನೆಯ ಚೂರ್ಣವಾಗಿ ಮಾಡಿ, ಅದರ ಹತ್ತರಲ್ಲಿ ಒಂದುಭಾಗ ಪಚ್ಚಕರ್ಪೂರವನ್ನು ಸೇರಿಸಿ ಇರಿಸಿಕೊಳ್ಳಬೇಕು. ಇದಕ್ಕೆ ನಯನಾಮೃತವೆಂಬದಾಗಿ ಹೆಸರು. ಸಮಸ್ತ ವಿಧವಾದ ನೇತ್ರರೋಗಗಳನ್ನೂ ಇದರಿಂದ ಪರಿಹಾರಮಾಡಿಕೊಳ್ಳಬಹುದು.

ಸರ್ಪವಿಷಸಂಜೀವನಾಂಜನ

ಜಯಪಾಲಭವಾಂಮಜ್ಜಾಂಭಾವಯೇನ್ನಿಂಬುಕದ್ರವೈಃ ॥
ಏಕವಿಂಶತಿವೇಲಂತುತತೋವರ್ತಿಂಪ್ರಕಲ್ಪಯೇತ್ ॥ ೧೨೧ ॥
ಮನುಷ್ಯಲಾಲಯಾಘೃಷ್ಟ್ವಾತತೋನೇತ್ರೇತಯಾಂಜಯೇತ್ ॥
ಸರ್ಪದಷ್ಟವಿಷಂಜಿತ್ವಾಸಂಜೀವಯತಿಮಾನವಂ ॥ ೧೨೨ ॥

ಜಾಪಾಳದ ಬೀಜದನಡುವೆ ಇರುವ ನಾಲಿಗೆಯಂತಹ ವಸ್ತುವನ್ನು ಸಂಗ್ರಹಿಸಿ ಇಪ್ಪತ್ತೊಂದುಬಾರಿ ಬೇವಿನಸೊಪ್ಪಿನರಸದಲ್ಲಿ ಭಾವನೆಕೊಟ್ಟು ನಂತರ ಚನ್ನಾಗಿ ಅರೆದು ಬತ್ತಿಯಂತೆಮಾಡಿ ಇರಿಸಿಕೊಂಡು ಅದನ್ನು ಮನುಷ್ಯರ ಉಗುಳಿನಲ್ಲಿ ತೇಯ್ದು ಸರ್ಪಕಡಿದವರ ಕಣ್ಣಿಗೆ ಅಂಜನವಾಗಿ ಹಾಕಿದರೆ ಸರ್ಪವಿಷವು ಶಾಂತವಾಗಿ ಮನುಷ್ಯನು ಬದುಕಿಕೊಳ್ಳುತ್ತಾನೆ.

ಭುಕ್ತ್ವಾಪಾಣಿತಲಂಘೃಷ್ಟ್ವಾಚಕ್ಷುಷೋರ್ದೀಯತೇಯದಿ ॥
ಜಾತಾರೋಗಾವಿನಶ್ಯಂತಿತಿಮಿರಾಣಿತಥೈವಚ ॥ ೧೨೩ ॥
ಶೀತಾಂಬುಪೂರಿತಮುಖಃಪ್ರತಿವಾಸರಂಯಃ
ಕಾಲತ್ರಯೇಣನಯನದ್ವಿತಯಂಜಲೇನ ॥
ಆಸಿಂಚತಿಧ್ರುವಮಸೌನಕದಾಚಿದಕ್ಷಿ
ರೋಗವ್ಯಥಾವಿಧುರತಾಂಭಜತೇಮನುಷ್ಯಃ ॥ ೧೨೪ ॥

ಮನುಷ್ಯನುಪ್ರತಿದಿನವೂ ಭೋಜನಮಾಡಿದಮೇಲೆ ಕೈತೊಳೆದುಕೊಂಡು

ತನ್ನ ಎರಡೂ ಕೈಗಳನ್ನೂ ಉಜ್ಜಿಕೊಂಡು ನಂತರ ಕಣ್ಣುಗಳನ್ನು ಸವರಿಕೊಳ್ಳುವ ಪರಿಪಾಠವನ್ನಿಟ್ಟುಕೊಂಡಲ್ಲಿ ಪ್ರಾಪ್ತವಾದ ನೇತ್ರರೋಗಗಳೆಲ್ಲವೂ ನಿವಾರಣೆಯಾಗುವುದಲ್ಲದೆ ಯಾವಾಗ್ಯೂ ಕಣ್ಣುಗಳು ಮಂಜಾಗುವುದಿಲ್ಲ.

ಪ್ರತಿದಿವಸವೂ ಕಾಲತ್ರಯದಲ್ಲಿಯೂ ಮನುಷ್ಯನು ಬಾಯಲ್ಲಿ ತಣ್ಣೀರು ತುಂಬಿಕೊಂಡು ಕಣ್ಣಿಗೆ ತಣ್ಣೀರುಹಾಕಿತೊಳೆಯುತ್ತಾ ಬಂದಲ್ಲಿ ನೇತ್ರರೋಗಗಳು ಅವನನ್ನು ಭಾದಿಸಲಾರವು. ಬಾಯಲ್ಲಿ ನೀರು ತುಂಬಿಕೊಂಡಿರುವಾಗಲೇ ಕಣ್ಣು ತೊಳೆಯಬೇಕು

ಆಯುರ್ವೇದಸಮುದ್ರಸ್ಯಗೂಢಾರ್ಥಮಣಿಸಂಚಯಂ ॥
ಚಿನ್ವಾತ್ವಾಕೈಶ್ಚಿದ್ಬುಧೈಸ್ತೈಸ್ತುಕೃತಾವಿವಿಧಸಂಹಿತಾಃ ॥ ೧೨೫ ॥
ಕಿಂಚಿದರ್ಥತತೋನೀತ್ವಾಕೃತೇಯಂಸಂಹಿತಾಮಯಾ ॥
ಕೃಪಾಕಟಾಕ್ಷನಿಕ್ಷೇಪಮಸ್ಯಾಂಕುರ್ವಂತುಸಾಧವಃ ॥ ೧೨೬ ॥

ಶಾರ್ಙ್ಗಧರಾಚಾರ್ಯರು ಗ್ರಂಥ ಸಮಾಪ್ತಿಸಮಯದಲ್ಲಿ ತಮ್ಮ ಗ್ರಂಥ ರಚನೆಯ ವಿಷಯವನ್ನು ಹೇಳಿಕೊಳ್ಳುತ್ತಾರೆ. ಅನೇಕಜನ್ಮಮಹನೀಯರುಗಳು ಆಯುರ್ವೇದವೆಂಬ ಸಮುದ್ರದ ತಳದಲ್ಲಿ ಅಡಗಿಕೊಂಡು ಗೋಪ್ಯವಾಗಿರುವ ಔಷಧಯೋಗಗಳೆಂಬ ರತ್ನಗಳನ್ನು ಆರಿಸಿಕೊಂಡು ಲೋಕೋಪಕಾರಕ್ಕಾಗಿ ಅನೇಕ ಸಂಹಿತೆಗಳನ್ನು ಮಾಡಿರುತ್ತಾರೆ. ಹಾಗೆ ಅವರುಗಳು ಆರಿಸಿಕೊಂಡು ಮಾಡಿರುವ ಸಂಹಿತೆಗಳನ್ನು ಪರಿಶೋಧಿಸಿ, ಅವುಗಳಲ್ಲಿಯೂ ಉತ್ತಮೋತ್ತಮುಗಳಾದ ಯೋಗಗಳನ್ನು ಆರಿಸಿಕೊಂಡು ಈ ಶಾರ್ಙ್ಗಧರಸಂಹಿತೆಯನ್ನು ನಾನು ರಚಿಸಿರುವುದರಿಂದ ಸತ್ಪುರುಷರುಗಳಾದ ಪಂಡಿತರುಗಳು ಕೃಪೆಯಿಟ್ಟು ಇದನ್ನು ಪರಾಂಬರಿಸಬೇಕು.

ವಿವಿಧಗದಾರ್ತಿದರಿದ್ರನಾಶನಂಯಾ
ಹರಿರಮಣೀವಕರೋತಿಯೋಗರತ್ನೈಃ ॥
ವಿಲಸತುಶಾರ್ಙ್ಗಧರಸ್ಯಸಂಹಿತಾ
ಕವಿಹೃದಯೇಷುಸರೋಜನಿರ್ಮಲೇಷು ॥ ೧೨೭ ॥

ತನ್ನಲ್ಲಿರತಕ್ಕಯೋಗ ಅಂದರೆ ಔಷಧಯೋಗಗಳೆಂಬ ರತ್ನಗಳಿಂದ ನಾನಾವಿಧಗಳಾದ ರೋಗಗಳಬಾಧೆಗಳೆಂಬ ದರಿದ್ರವನ್ನು ಶಾರ್ಙ್ಗಧರಸಂಹಿತೆಯು ಲಕ್ಷ್ಮೀದೇವಿಯಹಾಗೆ ಮಾಡುತ್ತದೆ ಆದ್ದರಿಂದ ಈ ಶಾರ್ಙ್ಗಧರಸ್ಸಂಹಿತೆಯು

ಕಮಲದಂತೆ ನಿಷ್ಕಲ್ಮಷವಾದ ವಿದ್ವಾಂಸರ ಹೃದಯದಲ್ಲಿ ವಿರಾಜಿಸುತ್ತಿರಲಿ.

ಅಲ್ಪಾಯುಷಾಮಲ್ಪಧಿಯಾಮಿದಾನೀಂ
ಕೃತಂಸಮಸ್ತಶ್ರುತಿಪಾಠಶಕ್ತ್ಯಾ ॥
ತದತ್ರಯುಕ್ತಂಪ್ರತಿಬೀಜಮಾತ್ರ
ಮಭಸ್ಯತಾಮಾತ್ಮಹಿತಂಪ್ರಯತ್ನಾತ್ ॥ ೧೨೭ ॥

ಬುದ್ಧಿಶಕ್ತಿಯಲ್ಲಿಯೂ ಆಯುಸ್ಸಿನಲ್ಲಿಯೂ ಅಲ್ಪರಾದಂತ ಅಂದರೆ ಮಹಾ ಸಂಹಿತೆಗಳನ್ನು ಓದಿ ವಿಷಯಗಳನ್ನು ಸಂಗ್ರಹಿಸಲಾರದ ಮನುಷ್ಯರ ಹಿತಕ್ಕಾಗಿ ಸಮಸ್ತ ಆಯುರ್ವೇದಾಗಮವನ್ನು ಪಠನಮಾಡಿ ಈ ಸಂಹಿತೆಯು ಸಂಗ್ರಹ ರೂಪವಾಗಿ ರಚಿತವಾಗಿರುವುದರಿಂದ ಪ್ರತಿಯೊಬ್ಬರೂ ತಮ್ಮ ತಮ್ಮ ಸೌಖ್ಯ ಕ್ಕೋಸ್ಕರ ಈ ಸಂಹಿತೆಯನ್ನು ಪ್ರಯತ್ನಪಟ್ಟು ಅಭ್ಯಾಸಮಾಡಬೇಕು.

ಇಲ್ಲಿಗೆ ವೈದ್ಯರತ್ನ ಪಂಡಿತ ಗೋಪಾಲಾಚಾರ್ಯ ಶಿಷ್ಯ
ಆಯುರ್ವೇದ ಭೂಷಣ ಪಂಡಿತ ಪಟ್ಟಗೆರೆ ಸೂರ್ಯನಾರಾಯಣಶಾಸ್ತ್ರಿ
ವಿರಚಿತವಾದ ಶಾರ್ಙ್ಗಧರಸಂಹಿತಯ ಕರ್ನಾಟಕ ಭಾಷಾನುವಾದದಲ್ಲಿ
ತೃತೀಯ ಖಂಡ ಸಮಾಪ್ತ.



— ಶಾರ್ಙ್ಗಧರಸಂಹಿತಾ ಸಮಾಪ್ತಾ —





# RIG-VEDA SAMHITA

# ಋಗ್ವೇದಸಂಹಿತಾ

ಭಾಗ—೨೨.

ಏಳನೆಯ ಅಷ್ಟಕದಲ್ಲಿ ೬-೮ ನೇ ಅಧ್ಯಾಯಗಳು

ಎಂಟನೆಯ ಅಷ್ಟಕದಲ್ಲಿ ೧ ನೇ ಅಧ್ಯಾಯವು

ಅನುವಾದಕ

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.

ಶ್ರೀ ವಿನಾಯಕ ಪ್ರೆಸ್

ಮೈಸೂರು.